ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಕರ್ನಾಟಕ ರೈತ ಚಳವಳಿ-ಸತ್ಯಾಗ್ರಹಗಳು

(ಸಹಸ್ರಮಾನ ಸಂಪುಟ -೬)

## ರೈತ ಪ್ರತಿಭಟನೆಯ ಆಧುನಿಕ ಮಾದರಿಗಳು ; ಸಾಂತ್ವನ ಪ್ರಕ್ರಿಯೆಗಳು









ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಕರ್ನಾಟಕ ರೈತ ಚಳವಳಿ–ಸತ್ಯಾಗ್ರಹಗಳು

## ಸಹಸ್ರಮಾನ ಸಂಪುಟ – ೬

ರೈತ ಪ್ರತಿಭಟನೆಯ ಆಧುನಿಕ ಮಾದರಿಗಳು; ಸಾಂತ್ವನ ಪ್ರಕ್ರಿಯೆಗಳು

ಡಾ: ಎಂ.ಜಿ. ನಾಗರಾಜ್

ಪ್ರಕಟಣೆ
ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ,
ವಿಧಾನಸೌಧ, ಬೆಂಗಳೂರು – ೫೬೦ ೦೦೧

**KARNATAKA RAITHA CHALUVALI-SATYAGRAHAGALU, Volume-VI** (Eminent parliament series) in the background of MRA, Legislative Assembly and Council proceedings and pertained references till about 2010 AD first quarter dealing with historical Evolution of Raitha movements and their effects on the society and Solutions - written by **Dr: M.G. Nagaraj** M.Sc., M.Ed., M.A., D.Litt., principal (Rtd). Rajajinagar, Bangalore-10. Ph: 080-23106004

**Published by :**
Library Committee,
Karnataka Vidhana Mandala,
Vidhana Soudha, Bangalore-560 001.

ಕರ್ನಾಟಕ ರೈತ ಚಳವಳಿ-ಸತ್ಯಾಗ್ರಹಗಳು
ಸಂಪುಟ-6
ಲೇಖಕರು: ಡಾ: ಎಂ.ಜಿ. ನಾಗರಾಜ್



First Impression: 2010
Pages : 434+LXVI+
Price : Rs. 30/-
Copies : 2000

ಮೊದಲ ಮುದ್ರಣ : 2010
ಪ್ರತಿಗಳು : 2000
ಬೆಲೆ : ರೂ. 30/-
ಪುಟಗಳು : 434+LXVI+

ಮುಖಪುಟ ವಿನ್ಯಾಸ: ಕೃಷ್ಣ ರಾಯಚೂರ್
ಮುದ್ರಣ: ಸರ್ಕಾರಿ ಮುದ್ರಣಾಲಯ, ಬೆಂಗಳೂರು

ಪ್ರಕಟಣೆ
ಗ್ರಂಥಾಲಯ ಸಮಿತಿ, ಕರ್ನಾಟಕ ವಿಧಾನ ಮಂಡಲ
ಬೆಂಗಳೂರು - ೫೬೦ ೦೦೧

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
## 2009–2010

ಅಧ್ಯಕ್ಷರು

**ಶ್ರೀ ವೀರಣ್ಣ ಮತ್ತಿಕಟ್ಟಿ**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

**ಶ್ರೀ ಕೆ.ಜಿ. ಬೋಪಯ್ಯ**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ಶ್ರೀ ಎಂ. ನಾರಾಯಣಸ್ವಾಮಿ**

ವಿಧಾನಸಭಾ ಸದಸ್ಯರು

**ಶ್ರೀ ಹೆಚ್.ಎಸ್. ಪ್ರಕಾಶ್**

ವಿಧಾನಸಭಾ ಸದಸ್ಯರು

**ಶ್ರೀ ಜಿ. ಸೋಮಶೇಖರ ರೆಡ್ಡಿ**

ವಿಧಾನಸಭಾ ಸದಸ್ಯರು

**ಶ್ರೀ ಸುರೇಶ್‌ಗೌಡ**

ವಿಧಾನಸಭಾ ಸದಸ್ಯರು

**. ಶ್ರೀ ಸಾ.ರಾ. ಮಹೇಶ್**

ವಿಧಾನಸಭಾ ಸದಸ್ಯರು

**ಶ್ರೀ ಮುಖ್ಯಮಂತ್ರಿ ಚಂದ್ರು**

ವಿಧಾನ ಪರಿಷತ್ ಸದಸ್ಯರು

**ಡಾ॥ ಶ್ರೀನಾಥ್**

ವಿಧಾನ ಪರಿಷತ್ ಸದಸ್ಯರು

**ಪ್ರೊ॥ ಪಿ.ವಿ. ಕೃಷ್ಣಭಟ್ಟ**

ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

### ಕರ್ನಾಟಕ ವಿಧಾನ ಮಂಡಲ

ಹೆಚ್.ಎಂ. ಭಾರತೇಶ್ ಪ್ರಧಾನ ಕಾರ್ಯದರ್ಶಿ

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಬಿ. ಪಾಟೀಲ್ | ಕಾರ್ಯದರ್ಶಿ |
| ಟಿ.ಎನ್. ಧ್ರುವಕುಮಾರ್ | ಅಪರ ಕಾರ್ಯದರ್ಶಿ |
| ಎಂ. ಮಂಜುನಾಥ | ಜಂಟಿ ಕಾರ್ಯದರ್ಶಿ |
| ಎಂ. ಗುರುರಾಜ | ಉಪ ಕಾರ್ಯದರ್ಶಿ |
| ಅನಸೂಯ ಎನ್.ದೇವಗಿರಿ | ಮುಖ್ಯ ಗ್ರಂಥಪಾಲಕಿ (ಪ್ರ) |
| ಎಂ. ಮೋಹನ್ | ಶಾಖಾಧಿಕಾರಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ವಿ. ಶ್ರೀಶ್ | ಕಾರ್ಯದರ್ಶಿ |
| ಟಿ. ಕೃಷ್ಣೇಗೌಡ | ಅಪರ ಕಾರ್ಯದರ್ಶಿ |

### ಸಂಪಾದಕರು

ಡಾ. ಮಲ್ಲಿಕಾರ್ಜುನ ಎಂ.ಸಿ.

# ಮುನ್ನುಡಿ

**3 ಮೇ 2010**

ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ|| ರಾಮಮನೋಹರ ಲೋಹಿಯಾ, ಡಾ|| ಬಿ.ಆರ್. ಅಂಬೇಡ್ಕರ್, ಡಾ|| ಶಾಂಪ್ರಸಾದ್ ಮುಖರ್ಜಿ, ಡಾ|| ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಯು ಈಗಾಗಲೇ ಪ್ರಕಟಿಸುತ್ತಿದೆ. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸುತ್ತಿದೆ. ನಮ್ಮ ನಾಡಿನ ಪ್ರಗತಿಪರ ಚಿಂತಕರು, ರಾಜಕೀಯ ಮುತ್ಸದ್ದಿಗಳ ಆಶಯಗಳನ್ನು ದಾಖಲಿಸಿ ಈ ಮೂಲಕ ಅವರ ಜೀವನ ಚಿತ್ರಣವನ್ನು ಪುಸ್ತಕ ರೂಪದಲ್ಲಿ ತರುತ್ತಿದೆ.

ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ ಶ್ರೀ ಕೆ.ಸಿ. ರೆಡ್ಡಿ, ಶ್ರೀ ಡಿ. ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ॥ ಲಂಕಾ ಸುಂದರಂ, ಸರದಾರ ಶರಣಗೌಡ ಇನಾಂದಾರ್, ಕೆ.ಹೆಚ್. ರಂಗನಾಥ್ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

**ಡಾ. ಎಂ.ಜಿ. ನಾಗರಾಜ್** ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟು ಮಾಲಿಕೆಯಲ್ಲಿ–ಕರ್ನಾಟಕ ರೈತ ಚಳವಳಿ–ಸತ್ಯಾಗ್ರಹಗಳು **ಮಾಲಿಕೆಯ ರೈತ ಪ್ರತಿಭಟನೆಯ ಆಧುನಿಕ ಮಾದರಿಗಳು; ಸಾಂತ್ವನ ಪ್ರಕ್ರಿಯೆಗಳು ಸಂಪುಟ–೬** ಬಗೆಗಿನ ಈ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಇಲ್ಲಿಯ ದಾಖಲಿತ ಸದನದ ಭಾಷಣಗಳು ಹಾಗೂ ಪರಾಮರ್ಶನ ಕೃತಿಯ ಆಧಾರಗಳೂ ಸೇರಿ ಸಾಮಾಜಿಕ ಸಾಂಸ್ಕೃತಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತವೆ. ಈ ನಾಡಿನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಆಶಯಗಳನ್ನು ಬಿಂಬಿಸುತ್ತವೆ.

ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೆ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

ವೀರಣ್ಣ ಮತ್ತಿಕಟ್ಟಿ
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

ಕೆ.ಜಿ. ಬೋಪಯ್ಯ
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ನುಡಿ

ನಮ್ಮ ನಾಡಿನ ಪರಂಪರೆ ಬೇಸಾಯದ್ದು. ಅಂತೇ ಮಣ್ಣಿನೊಡನೆಯ ಬಾಳುವೆ ಮಾಡಿಬಂದವರು ರೈತರು. ಆ ಕಾಯಕದಲ್ಲಿ ಮುದಕಂಡವರು ನಮ್ಮ ರೈತರು. ಈ ಕಾರಣವೆ ಮಣ್ಣಿನ ವಾಸನೆ ಅವರ ಕಾಯಕದ ಸಹಜ ಸೌರಭ. ಮಣ್ಣಿನ ಹಾಡು ಅವರ ಸಹಜ ಜನಪದ ಧ್ವನಿ.

ಹೀಗೆ ಕೃಷಿಯನ್ನು ತಮ್ಮ ಬದುಕಿನ ಸಂಗಾತಿಯಾಗಿ ಕಂಡವರು ರೈತರು. ಹೊಟ್ಟೆಯ ತುತ್ತಿಗಾಗಿ, ಸೂರಿನ ನೆಳಲಿಗಾಗಿ, ನೆಮ್ಮದಿಯ ನಿದ್ದೆಗಾಗಿ ಅವರು ಅದನ್ನೇ ನೆಚ್ಚಿಕೊಂಡು ಸಹಸ್ರಾರು ವರ್ಷಗಳಿಂದ ಸಾಗಿ ಬಂದಿದ್ದಾರೆ. ಆ ಬಾಳಿನಲ್ಲಿ ಹೆರವರ ಹೊಟ್ಟೆ ತುಂಬಿಸಿದ್ದಾರೆ. ನಾಡಿಗೆ ತುತ್ತು ಕೊಡಲು ದುಡಿದಿದ್ದಾರೆ. ಹೀಗೆ ಸಾಗಿ ಬರುವಲ್ಲಿ ತನ್ನ ಬದುಕಿನ ಕಷ್ಟನಿಷ್ಠುರಗಳನ್ನು ಸಹಿಸಿಕೊಂಡು ತ್ಯಾಗದ ನಿಸ್ಸೀಮ ಜೀವಿಯಾಗಿಯೂ ಕಾಣಿಸಿಕೊಂಡಿದ್ದಾರೆ. ರೈತ ಬದುಕು ಕೇವಲ ಗಂಡಿಗೇ ಸೀಮಿತವಾಗದೆ ಹೆಣ್ಣು ಅದರ ಸಮಸಮ ಪಾಲುದಾರಳಾಗಿ ರೈತ ಮಹಿಳೆ ಎನಿಸಿ ಬಂದವಳಾಗಿದ್ದಾಳೆ. ಕೃಷಿಯನ್ನು ಅವಳೇ ಮೊತ್ತ ಮೊದಲಿಗೆ ಕಂಡು ಹಿಡಿದಿದ್ದರೂ, ಗಂಡಿಗೆ ಸಿಕ್ಕ ಪ್ರಚಾರ ಅವಳಿಗೆ ಸಿಗಲಿಲ್ಲ. ವಿಶೇಷತಃ ದಲಿತ ವರ್ಗವೂ ಶತಶತಮಾನಗಳಿಂದ ಬೇಸಾಯದ ಮಕ್ಕಳಾಗಿ ಬಂದಿದೆ.

ಕೃಷಿಯ ಪ್ರಾಚೀನತೆ ಎಷ್ಟೇ ಸಹಸ್ರಮಾನಗಳಿಂದ ಬಂದಿರಲಿ ಅದರ ವಿಕಸನ ಆಧುನಿಕ ದಿನಗಳವರೆಗೂ ವಿಸ್ತರಿಸಿಕೊಂಡು ಬಂದಿದೆ. ಈ ಹಾದಿಯಲ್ಲಿ ರೈತರ ನೋವು ನಲಿವುಗಳಿಗೆ ಎಷ್ಟೋ ಮೈಲಿಗಲ್ಲುಗಳು ನಿಂತಿವೆ. ಮೊದಲಿಗೆ ರೈತ ತನ್ನ ನೋವನ್ನು, ಪ್ರಾರ್ಥಿಸಿ ಹೇಳಿಕೊಂಡ; ಮನವಿ ಮಾಡಿ ನುಡಿದ; ಆಗ್ರಹಿಸಿದ; ದೂರು ದುಮ್ಮಾನಗಳ ಮೂಲಕ ದನಿ ಆಡಿದ. ಇವೆಲ್ಲ ಸಾತ್ವಿಕ ಬಗೆ ಎನಿಸಿದುವು. ಅದಕ್ಕೆ ಸಂಬಂಧಪಟ್ಟ ಆಡಳಿತ ಅಥವಾ ಯಜಮಾನ ಸ್ಪಂದಿಸದಿದ್ದಾಗ, ಸಾತ್ವಿಕ ರೋಷ ತೋರಲಾರಂಭಿಸಿದ. ಅವನ ಶೋಷಣೆ ಹೆಚ್ಚಾದಾಗಲೂ, ಸಂಘಟನೆಯ ಬಲವಿಲ್ಲದಿದ್ದಾಗ ಅಸಹಾಯಕನಾಗಿ ಶೋಷಣೆ, ನೋವು, ಅವಮಾನ, ಅತ್ಯಾಚಾರ, ದೌರ್ಜನ್ಯ, ಸಿಟ್ಟು, ಹತಾಶೆ, ಹಿಂಸೆ, ದಬ್ಬಾಳಿಕೆ ಎಲ್ಲವನ್ನು ತಡೆದುಕೊಳ್ಳುತ್ತ ಬಂದ. ಅದುಮಿಟ್ಟ ಅವೆಲ್ಲವೂ ಸಮಯ ಪಕ್ವವಾದಾಗ, ಸಂಘಟನಾ ಪ್ರಜ್ಞೆ

ಜಾಗೃತವಾದಾಗ ಸ್ಫೋಟಿಸಿದುವು. ಆದರೂ ಅವನು ತನ್ನ ಸಾಂಸ್ಕೃತಿಕ ಜಾಯಮಾನದ ಗೆರೆಯನ್ನು ಎಷ್ಟೆಲ್ಲ ಪಕ್ಷ ಪಂಥ ಸಿದ್ಧಾಂತಗಳ ಪ್ರಭಾವದಲ್ಲಿಯೂ ದಾಟಲಿಲ್ಲ.

ಆರಂಭದ ದಿನಗಳಲ್ಲಿ ದೂರು ದುಮ್ಮಾನವಿದ್ದರೆ, ನಂತರ, ಮೆರವಣಿಗೆ, ಧರಣಿ, ಸತ್ಯಾಗ್ರಹ, ಪ್ರದರ್ಶನ-ಈ ಮೇರೆಗೆ ಸಾಗಿ ಹಿಂಸೆ ತಾಳಲಾರದಾಗ ಉಗ್ರವಾಗಿ ಪ್ರತಿಭಟಿಸತೊಡಗಿದ ರೈತ, ತನ್ನ ಸಂಘಟನಾ ಬಲದ ಶಕ್ತಿ ಕಂಡುಕೊಂಡ, ತನ್ನ ಬೇಡಿಕೆಗಳನ್ನು ಹಕ್ಕೊತ್ತಾಯವೆಂದ. ಇಂದು ಅದರ ಫಲವಾಗಿ ವಿದೇಶೀಯ ಬಹುರಾಷ್ಟ್ರೀಯ ಕಂಪೆನಿಗಳ ಹುನ್ನಾರಗಳು ಅವನ ಸಂಘಟನೆಯ ಶಕ್ತಿಯ ಮುಂದೆ ಪೇಲವಗೊಳ್ಳುತ್ತಿವೆ.

ಈ ದಿಸೆಯಲ್ಲಿ ನಮ್ಮ ಉಭಯ ಸದನಗಳ ಶಾಸಕರ ಚಿಂತಕರ – ಚಿಂತನ ಕ್ರಮ, ಚರ್ಚೆ, ಕಾಳಜಿ, ಅಧ್ಯಯನ ತನ್ಮಯತೆ ಹಾಗು ಅನ್ಯಾಯವೆನಿಸಿದಾಗ ಪ್ರತಿಭಟನೆ, ಅವರನ್ನು ಕೇವಲ ರಾಜಕಾರಣಿಗಳನ್ನಷ್ಟೆ ಆಗಿಸದೆ, ಈ ನಾಡಿನ ರೈತ ಬದುಕಿನ ಆಗು ಹೋಗಿನ ಬಗ್ಗೆ ತಮ್ಮ ನಿಷ್ಠೆಯನ್ನು ಸಾಕಷ್ಟು ಪ್ರದರ್ಶಿಸಿರುವ ಮಾನವೀಯ ಪ್ರಜ್ಞೆಯ ವ್ಯಕ್ತಿಗಳನ್ನಾಗಿಯೂ ತೋರಿವೆ. ಆದರೆ ಅಧಿಕಾರ ವರ್ಗವನ್ನು ಸಾಕಷ್ಟು ದೂರಿದರೂ ಅವರಲ್ಲಿಯೂ ಮಾನವೀಯತೆ, ರೈತ ಕಾಳಜಿ ಇಲ್ಲವೆನ್ನುವಂತಿಲ್ಲ. ಅಧಿಕಾರಿ ವರ್ಗದಲ್ಲಿ ಈ ಸಂಖ್ಯೆ ಜಾಸ್ತಿಯಾದಂತೆ ಸಮಸ್ಯೆಗಳೂ ಪರಿಹಾರಗೊಳ್ಳುತ್ತ ನಡೆದಿವೆ. ಶಾಸಕರು ಬಹುತೇಕ ರೈತ ಪ್ರತಿನಿಧಿಗಳಾಗಿ ಕಾಲಕ್ರಮೇಣ ಆಯ್ಕೆಗೊಂಡು ಬಂದಕಾರಣ ರೈತರ ಬಗೆಗಿನ ಅವರ ಆಸಕ್ತಿ ಅರ್ಥಪೂರ್ಣ. ಅಂತಾಗಿ ಉಭಯ ಸದನಗಳಲ್ಲಿ ಅವರೆಲ್ಲರ ಚಿಂತನೆ ಚರ್ಚೆಗಳ ಸಾರವನ್ನೂ ಇಲ್ಲಿ ಸಾಧ್ಯವಾದಷ್ಟು ನೀಡಿದೆ. ಕಾರಣ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಪ್ರತ್ಯಕ್ಷ ದರ್ಶನ ಮಾಡಿ ಅಂದರೆ ಕ್ಷೇತ್ರಕಾರ್ಯಮಾಡಿ ವಸ್ತುಸ್ಥಿತಿಯನ್ನು ಮುಂದಿಡುವ ಅವರ ಮಾತುಗಳಿಗೆ ಅಷ್ಟೇ ಮೌಲ್ಯವಿದೆ. ಇದಲ್ಲದೆ ಆಯಾ ಅಧ್ಯಾಯಗಳಲ್ಲಿ ಮಂಡಿತ ವಿಷಯಗಳ ಮೇಲೆ 'ಮಂಥನ' ಭಾಗದಲ್ಲಿ ಲೇಖಕ ವಿಶ್ಲೇಷಣೆ ಮಾಡಿದೆ.

ಸಾಮಾನ್ಯವಾಗಿ ಸ್ಥಳೀಯವಾಗಿ, ಪ್ರಾದೇಶಿಕವಾಗಿ ನಡೆಯುವ ರೈತಾಪಿ ಪ್ರತಿಭಟನೆಗಳು, ಹೋರಾಟಗಳು, ಅನೇಕ ಸಂದರ್ಭಗಳಲ್ಲಿ ಅವು ಪ್ರಸಿದ್ಧಿಗೊಳ್ಳದಿರಬಹುದು. ಅಂಥ ಸಂದರ್ಭಗಳ ಪ್ರತ್ಯಕ್ಷ ಸಾಕ್ಷಿಗಳಾಗಿಯೋ, ಘಟನಾವಳಿಗಳ ಮುಖವಾಣಿಯೋ ಆಗಿ ಚರ್ಚೆ, ಪರಿಹಾರಗಳಿಗೆ ಕಾರಣರಾದವರು,

ಕಾರಣವಾಗಬೇಕಾದವರು ನಮ್ಮ ಮಾನ್ಯ ಶಾಸಕ ವರ್ಗವೇ ಆಗಿದೆ. ಇಂಥ ಹೋರಾಟಗಳ ಬಗ್ಗೆ, ಲೇಖನಗಳಾಗಲಿ, ಕೃತಿಗಳಾಗಲಿ ಕ್ವಚಿತ್ತಾಗಿ ಒಂದೆರಡು ಕಡೆ ಕಾಣಿಸಿಕೊಂಡಿವೆಯಷ್ಟೆ. ಈ ಬಗ್ಗೆ ರಾಜ್ಯ ಹಾಗೂ ಜಿಲ್ಲಾ ತಾಲ್ಲೂಕು ಮಟ್ಟದ ಸಾಹಿತ್ಯ ಅಥವಾ ಸಾಹಿತ್ಯೇತರ ಸಮ್ಮೇಳನಗಳು ತರುವ ಸ್ಮರಣ ಸಂಚಿಕೆಗಳಲ್ಲಿ ಆಯಾ ಪ್ರದೇಶದ ರೈತ ಸಮಸ್ಯೆಗಳು, ಹೋರಾಟಗಳನ್ನು ದಾಖಲಿಸಬೇಕಿದೆ. ಅಲ್ಲದೆ ರೈತರ ಸಮಸ್ಯೆಗಳ ಪರಿಹಾರಕ್ಕಾಗಿ ಹೋರಾಡುವ ಸಮಂಜಸ ಸಮರ್ಥ ಹೋರಾಟಗಾರರಿಗೆ ಪ್ರಶಸ್ತಿ, ಸನ್ಮಾನಗಳು ಒದಗಬೇಕಾದ ಅಗತ್ಯವೂ ಇದೆ. ಇಂದು 2010ನೇ ಇಸವಿ ವೇಳೆಯಲ್ಲಿ ಈ ಅಂಶಗಳಿಗೆ ಸಾಕಷ್ಟು ಸ್ಪಂದನೆ ಒದಗುತ್ತಿದೆ. ಸುದ್ದಿ ಮಾಧ್ಯಮಗಳು ಪ್ರತ್ಯೇಕ ವಾರಪುಟಗಳನ್ನು ಮೀಸಲಾಗಿಟ್ಟು ಪಕ್ವವಾದ ಕೃಷಿ ಹೋರಾಟ ವಿಶ್ಲೇಷಣೆಯ ಲೇಖನಗಳನ್ನು, ಕೃಷಿ ಮಾಹಿತಿಗಳನ್ನು ಕೃಷಿ ಸಂಶೋಧನೆಗಳನ್ನು ಪ್ರಕಟಿಸುತ್ತಿವೆ, ಪ್ರಸಾರ ಮಾಡುತ್ತಿವೆ. ಕಳೆದ ಹತ್ತು ವರ್ಷಗಳಲ್ಲಿ ಕಾಣಬಂದಿರುವ ಪ್ರಗತಿ ಇದು. ಕೃತಿ ಬರೆದ ನಂತರ 10 ವರ್ಷಗಳ ಅವಧಿಯಲ್ಲಿ ಪೂರ್ಣವಾಗಿ ವಿವಿಧ ಸಂಪುಟಗಳಲ್ಲಿ ಇವೆಲ್ಲ ಮಾಹಿತಿಗಳೊಡನೆ ಪ್ರಕಟಗೊಳ್ಳುತ್ತ ಬರುತ್ತಿವೆ. ಅದಕ್ಕೆ ಅನುಗುಣವಾಗಿ ಪೂರಕ ಅಂಶಗಳನ್ನು, ಬೆಳವಣಿಗೆಗಳನ್ನು ಆಯಾ ಸಂಪುಟಗಳಲ್ಲಿ ಅಡಕ ಮಾಡಿದೆ. ಅಲ್ಲದೆ ಈ ಕೃತಿ ಮಾಲಿಕೆಯ ಕೊನೆಯ ಸಂಪುಟದಲ್ಲಿ ಸಾರಾಂಶವಾಗಿ ಅವನ್ನೆಲ್ಲ ದಾಖಲಿಸಲಾಗಿದೆ.

ಕರ್ನಾಟಕ ಸಂಬಂಧ ಪ್ರಮುಖ ರೈತ ಚಳುವಳಿ ಹಾಗು ಒಟ್ಟಾರೆ ರೈತ ಸತ್ಯಾಗ್ರಹ ಕುರಿತು ಬರೆಯಲು ನನಗೆ ವಿಧಾನಸಭಾ ಸಚಿವಾಲಯದ ಗ್ರಂಥಾಲಯ ಸಮಿತಿಯ ಶಾಸಕವರೇಣ್ಯದಿರಂದ ಕರೆ ಬಂದಾಗ ನನಗೆ ಬಹಳ ಸಂತೋಷವೇ ಆಗಿತ್ತು. ಹೆಚ್ಚು ಕಡಿಮೆ ನನ್ನ ಸೇವಾ ಕ್ಷೇತ್ರದ ನೆಲೆಗಳೆಲ್ಲ ಗ್ರಾಮೀಣ ಪ್ರದೇಶವೇ ಆಗಿದ್ದುದರಿಂದ ಅಲ್ಲಿನ ರೈತರ ದಿನನಿತ್ಯದ ಹೊಲ, ಗದ್ದೆ, ತೋಟಗಳ ದುಡಿಮೆ, ಸಂಕಷ್ಟಗಳೆಲ್ಲ ನನ್ನ ಕಣ್ಣಳತೆಯಲ್ಲಿಯೆ; ಮನೆಯ ಬದಿಗೇ ಇದ್ದುವು ಹೀಗಾಗಿ ಈ ಬರಹದ ಕಾರ್ಯ ನನ್ನ ಒಲವಿನದಾಗಿತ್ತು.

ಈ ಕೃತಿಯಲ್ಲಿ ಭಾರತೀಯ ರೈತ ಹೋರಾಟಗಳ ಹಿನ್ನೆಲೆಯನ್ನು ನೀಡಿದೆ. ಕರ್ನಾಟಕದ ರೈತ ಹೋರಾಟಗಳಿಗೆ ಒದಗಿಸಿದ ಪ್ರೇರಕ ಶಕ್ತಿಯನ್ನು ಗುರುತಿಸುವ, ಹಾಗು ರೈತ ಚಳುವಳಿಯನ್ನು ಅರ್ಥೈಸಿಕೊಳ್ಳುವ ದೃಷ್ಟಿಯಿಂದ ಅದನ್ನು ನೀಡಲಾಗಿದೆ. ಸ್ವಾತಂತ್ರ್ಯ ಪೂರ್ವ, ಸ್ವಾತಂತ್ರ್ಯೋತ್ತರ, ಕರ್ನಾಟಕ ಏಕೀಕರಣಪೂರ್ವ-

ಏಕೀಕರಣೋತ್ತರ ಚಳುವಳಿ, ಸಹಸ್ರಮಾನ ಪೂರಕ ವಿವಿಧ ರೈತ ಚಳುವಳಿಗಳ ಮಾದರಿಗಳಲ್ಲಿ ಹಾಗು ರೈತ ಚಳುವಳಿಗಳ ಆಧುನಿಕ ಮಜಲುಗಳಲ್ಲಿ ವಿಕಸನ ಕಾಣುವುದರಿಂದ ಹಾಗೆಯೇ ವಿಭಾಗಿಸಿ ಬರೆಯಲಾಗಿದೆ; ವಿಧಾನಸಭೆ ಹಾಗೂ ವಿಧಾನಪರಿಷತ್ತಿನ ನಡವಳಿಕೆಗಳ ಹಿನ್ನೆಲೆ ಸಹಿತ ತೌಲನಿಕ ಅಧ್ಯಯನ ಮಾಡಿ ಬರೆಯಲಾಗಿದೆ. ಇದಕ್ಕೆ ಅನುಗುಣವಾಗಿ 'ಮಂಥನ' ಭಾಗಗಳಲ್ಲಿ ತೌಲನಿಕ ವಿಮರ್ಶೆ ಮಾಡಿ ಆಕರ ಮಾಹಿತಿಗಳಿಂದ ಪುಷ್ಟೀಕರಿಸಿದೆ. ಮಂಥನ ಭಾಗ ಒಂದು ವಿವೇಚನಾತ್ಮಕ ಪೋಷಕ ಚಿಂತನವಾಗಿದೆ.

31.12.2000ರಲ್ಲಿಯೆ ಕೃತಿಯನ್ನು ಗ್ರಂಥಾಲಯ ಉಪಸಮಿತಿಗೆ ಸಲ್ಲಿಸಲಾಯಿತು. ಆದರೆ ಬರಹದ ವ್ಯಾಪಕ ಮಾಹಿತಿಯನ್ನು ಗಮನಿಸಲಾಗಿ 2003ರ ವರೆಗಿನ ಮಾಹಿತಿಯನ್ನು ಸೇರಿಸಬೇಕೆಂದು ಅಂದಿನ ಉಪಸಮಿತಿಯ ಅಭಿಪ್ರಾಯವಾಗಿತ್ತು. ಕೊನೆಗೆ ಗ್ರಂಥಾಲಯ ಉಪಸಮಿತಿಯು 2006ರ ಜನವರಿ 30ರ ಪತ್ರದಲ್ಲಿ ಅಧೀನ ಕಾರ್ಯದರ್ಶಿಯವರ (ಪತ್ರ ಸಂಖ್ಯೆ ಆರ್‌ಆರ್:656:ಗರುಪ:99.00) ಮೂಲಕ 2005ರ ವರೆಗಿನ ರೈತ ಚಳುವಳಿಗಳ ಬಗ್ಗೆ ನಡೆದಿರುವ ಚರ್ಚೆಗಳ ವಿಷಯವನ್ನೂ ಅಳವಡಿಸಲು ಸೂಚಿಸಿತು. ಹೀಗಾಗಿ 2005ರ ವರೆಗಿನ ಲಭ್ಯ ಮಾಹಿತಿಗಳನ್ನು ಸಾಧ್ಯವಾದಷ್ಟನ್ನು ಸೇರಿಸಿ ವಿವಿಧ ಕಾಲಾವಧಿಗಳ ಒಟ್ಟು ಆರು ಪ್ರತ್ಯೇಕ ಸಂಪುಟಗಳಾಗಿ ಮೇಲ್ಸೂಚಿಸಿದಂತೆ ವಿಂಗಡಿಸಿ ಬರೆಯಬೇಕಾಯಿತು. ಈಗ 2005ರ ನಂತರದ ಚಳವಳಿಯ ವಿಷಯಗಳನ್ನು ಸಾಧ್ಯವಾದಷ್ಟು ಅಡಕಗೊಳಿಸಿದೆ.

ಮಾರ್ಚಿ 2006ರಲ್ಲಿ **'ಪ್ರಾಚೀನ ಕರ್ನಾಟಕ ಮತ್ತು ಏಕೀಕರಣ ಪೂರ್ವ ರೈತ ಚಳುವಳಿಗಳು'** ಎಂಬ ಶೀರ್ಷಿಕೆಯಡಿ ಸುವರ್ಣ ಕರ್ನಾಟಕ ರೈತ ಚಳವಳಿ ಸಂಪುಟ 1ನ್ನು ಮೊದಲ ಪುಸ್ತಕವಾಗಿ ಹೊರತರಲಾಯಿತು. ಆ ಕೃತಿಯಲ್ಲಿ ರೈತ ಚಳವಳಿಗಳ ಸಾಂಸ್ಕೃತಿಕ ಪರಂಪರೆಯ ಮಜಲುಗಳು, ಸ್ವಾತಂತ್ರ್ಯಪೂರ್ವ, ಸ್ವಾತಂತ್ರ್ಯೋತ್ತರ ಕಾಲದ ರಾಜ್ಯ ರೈತ ಚಳವಳಿಗಳನ್ನು ವಿವರಿಸಲಾಗಿದೆ. ಮೈಸೂರು ಒಡೆಯರ ಕಾಲದ ಚಳವಳಿಗಳ ಮಾದರಿ ಮತ್ತು ಪ್ರಜಾಪ್ರತಿನಿಧಿ ಸಭಾಧಿವೇಶನಗಳ ಚರ್ಚೆಗಳ ಸಹಿತವಾಗಿ 1933 ರ ವರೆಗಿನ ಕಾಲದ ಚಳವಳಿ ವಿಷಯಗಳು ಅದರಲ್ಲಿವೆ. ಈ ಸಂದರ್ಭದಲ್ಲಿ ಸಾಂಸ್ಕೃತಿಕ ಶಿಸ್ತಿನ ಅರ್ವಿನ್ ನಾಲಾ ರೈತರ ಚಳವಳಿ ಹಾಗೂ ತಾತ್ವಿಕ ವಿಸ್ತಾರದ ಕಾಗೋಡು ರೈತ ಸತ್ಯಾಗ್ರಹಗಳೂ ಪ್ರಮುಖವಾಗಿ

ನಮ್ಮ ಗಮನ ಸೆಳೆಯುತ್ತವೆ. ಉಭಯ ಸದನಗಳಲ್ಲಿ ರೈತ ಹೋರಾಟಗಳ ಕುರಿತ ಮಾನ್ಯ ಶಾಸಕರ ಚಿಂತನೆ ನಿಲುವಳಿ ಮಂಡನೆ, ಚರ್ಚೆ, ಪ್ರತಿಕ್ರಿಯೆ, ಸಮಸ್ಯಾ ಪರಿಹಾರ. ಫಲಿತ ಪರಿಣಾಮ, ಹಿನ್ನೆಲೆ ಇವೆಲ್ಲವನ್ನೂ ಲಕ್ಷ್ಯಕ್ಕೆ ತೆಗೆದುಕೊಂಡು ಅವುಗಳ ಐತಿಹಾಸಿಕ ವಿಕಸನವನ್ನು ಗಮನಿಸಿರುವ ಬಹುಶಃ ಮೊದಲ ಬಗೆಯ ಕೃತಿ ಅದಾಗಿದೆ. (ಪುಟ 1 ರಿಂದ 160).

2006ರಲ್ಲಿ ಹೀಗೆಯೇ '**ಏಕೀಕರಣೋತ್ತರ–ಸಹಸ್ರಮಾನ ಪೂರ್ವ ರೈತ ಚಳುವಳಿಗಳು**' ಎಂಬ ಶೀರ್ಷಿಕೆಯಡಿ ರೈತ ಚಳವಳಿ ಸಂಪುಟ 2ನ್ನೂ ಎರಡನೆಯ ಪುಸ್ತಕವಾಗಿ ಹೊರತರಲಾಯಿತು. ಈ ಕೃತಿಯಲ್ಲಿ ಕರ್ನಾಟಕ ಪ್ರಾಂತ ರೈತ ಸಂಘದ ಹೋರಾಟಗಳು, ಭೂ ಸುಧಾರಣಾ ವಿಧೇಯಕ, ವಿಶೇಷತಃ ಕರ್ನಾಟಕದ ರೈತ ಚಳವಳಿಗಳಿಗೆ ವಿಸ್ತೃತ ತಾರ್ಕಿಕ ಆಯಾಮಗಳನ್ನು ಒದಗಿಸಿಕೊಟ್ಟ ಮಧುಗಿರಿ ಗ್ರಾಮೀಣ ಕಬ್ಬು ಬೆಳೆಗಾರರ ಪ್ರತಿಭಟನೆ, ವರುಣಾನಾಲಾ ಚಳವಳಿ, ನರಗುಂದ–ನವಲುಗುಂದ–ಮಲಪ್ರಭಾ ರೈತ ಚಳವಳಿ. ವರಲಕ್ಷ್ಮಿ ಹತ್ತಿ, ನಿಪ್ಪಾಣಿ ಹೊಗೆಸೊಪ್ಪು ಸಂಬಂಧದ ಹಾಗೂ ಮಂಡ್ಯದ ಗೆಜ್ಜಲಗೆರೆ ರೈತ ಸತ್ಯಾಗ್ರಹ ಮತ್ತು ಗೋಲಿಬಾರ್, ಬೆಳೆ ಬೆಲೆ ಕುಸಿತ, ಗ್ಯಾಟ್ ಒಪ್ಪಂದ–ಡಂಕೆಲ್ ಪ್ರಸ್ತಾವನೆ, ದಲಿತ ರೈತರ ಹೋರಾಟ, ಬಾಗೂರು–ನವಿಲೆ ಸುರಂಗ ವಿಷಯಿಕ ಸತ್ಯಾಗ್ರಹ ದಕ್ಷಿಣ ಕನ್ನಡ ಜಿಲ್ಲೆಯ ರೈತ ಚಳವಳಿ, ವಿದ್ಯುತ್ ದರ ಏರಿಕೆ ವಿರುದ್ಧ ರೈತ ಹೋರಾಟದ ಬಗ್ಗೆ ಉಭಯ ಸದನಗಳಲ್ಲಿನ ಚರ್ಚೆಗಳ ವಿವರವಿದೆ. ಚಳವಳಿಗಳ ವೈವಿಧ್ಯತೆ, ಅವಕ್ಕೆ ಒದಗಿದ ಪತ್ರಿಕಾ ಪ್ರಾಮುಖ್ಯ, ಪರಿಹಾರ, ಫಲಿತ ಪರಿಣಾಮ ಈ ಬಗೆಗೆಲ್ಲ ಕುರಿತು ವಿವರಿಸಿ ವಿಶ್ಲೇಷಣೆಗಳನ್ನು 'ಮಂಥನ'ದ ಮೂಲಕ ಕೊಡಲಾಗಿದೆ (ಪುಟ 161 ರಿಂದ 484).

2006ರ ಆಗಸ್ಟ್‌ನಲ್ಲಿ '**ಸಹಸ್ರಮಾನ ಪೂರಕ ವಿವಿಧ ರೈತ ಚಳುವಳಿಗಳು**' ಎಂಬ ಶೀರ್ಷಿಕೆಯಡಿ ಸುವರ್ಣ ಕರ್ನಾಟಕ ರೈತ ಚಳವಳಿ ಮಾಲಿಕೆಯ ಸಂಪುಟ 3ನ್ನು ಹೊರತರಲಾಯಿತು. ಆ ಸಂಪುಟದಲ್ಲಿ ರೈತ ಚಳವಳಿಯ ಹಿನ್ನೋಟ ಮುನ್ನೋಟಗಳು, ರೈತ ಚಳವಳಿಯ ಹಾಡುಗಳ ವಿಶ್ಲೇಷಣೆ, ಭೂಸುಧಾರಣೆ, ಬೆಳೆಹಾನಿ, ರೈತರ ಮೇಲೆ ಗೋಲಿಬಾರ್, ಲಾಠಿಪ್ರಹಾರ, ಬಾಗೂರು ನವಿಲೆ ಪ್ರದೇಶದ ರೈತರ ಸಮಸ್ಯೆಗಳು, ಬೆಳೆ ಬೆಲೆ ಕುಸಿತದ ಕಾರಣ ಬೆಳೆಗಾರರ ಪ್ರತಿಭಟನೆ, ಕಾಲ್ನಡಿಗೆ ಜಾಥಾ, ವಿಶೇಷತಃ ರೈತರ ಸರಣಿ ಆತ್ಮಹತ್ಯೆ, ಪರಿಹಾರಗಳು, ಸುದ್ದಿ

ಮಾಧ್ಯಮದ ಸಂವೇದನೆಗಳು ಇತ್ಯಾದಿ ಕುರಿತೆಲ್ಲ ವಿವರವಾಗಿ ವಿವೇಚಿಸಲಾಗಿದೆ. ಉಭಯ ಸದನಗಳಲ್ಲಿ ಈ ಬಗೆಗೆಲ್ಲ ನಡೆದ ಚರ್ಚೆ, ಧರಣಿ ಒದಗಿದ ಪರಿಹಾರ ಕುರಿತು ವಿಷಯಗಳ ಮಂಡನೆ ಆಗಿದೆ. ಅಲ್ಲಿ ರೈತರ ಸರಣಿ ಆತ್ಮಹತ್ಯೆಯ ಕುರಿತು, ನಮ್ಮ ಸಾರ್ವಜನಿಕರು, ಧಾರ್ಮಿಕ–ಸಾಂಸ್ಕೃತಿಕ ವಲಯದ ಮುಂದಾಳುಗಳು, ಬುದ್ಧಿಜೀವಿಗಳು, ಸುದ್ದಿ ಮಾಧ್ಯಮಗಳು ಮತ್ತು ಶಾಸಕರು ತೋರಿರುವ ಸಂವೇದನೆಯು ಮಾನವೀಯ ಪರಿಹಾರಗಳ ಪಾಲುದಾರಿಕೆಯಾಗಿ ಕಾಣುತ್ತದೆ. ಬಾಗೂರು–ನವಿಲೆ ಸುರಂಗದ ಸಂಬಂಧದ ಅಂತರ್ಜಲ ಕುಸಿತದ ಕಾರಣ ಆದ ರೈತ ಪ್ರತಿಭಟನೆ, ನಡೆದ ದೌರ್ಜನ್ಯದ ಕುರಿತಾದ ಸದನ ಚರ್ಚೆಯಂತೂ ನಮ್ಮ ಶಾಸಕರ ಮನುಜ ಹೃದಯ ಮಿಡಿದ ಕಾಳಜಿಯ ಶೃಂಗದ್ಯೋತಕವೆನಿಸುವಂತಿದೆ. ಈ ಎಲ್ಲ ಸಂದರ್ಭಗಳ ಕುರಿತು ವಿವರಿಸಿ. ವಿಶ್ಲೇಷಣೆಗಳನ್ನು ವಿಭಾಗೀಯ 'ಮಂಥನ'ದ ಮೂಲಕ ನೀಡಲಾಗಿದೆ. (ಪು. 485–843).

2006ರ ನಂತರ **'ರೈತ ಚಳವಳಿಯ ಆಧುನಿಕ ಮಜಲುಗಳು ಮತ್ತು ರೈತರ ವಿವಿಧ ಸಮಸ್ಯೆಗಳು'** ಎಂಬ ಶೀರ್ಷಿಕೆಯಡಿ ಸದ್ಯ ಸುವರ್ಣ **ಕರ್ನಾಟಕ ರೈತ ಚಳವಳಿಗಳು–ಸತ್ಯಾಗ್ರಹಗಳು** ಕೃತಿ ಮಾಲಿಕೆಯ ನಾಲ್ಕನೆಯ ಸಂಪುಟವನ್ನು ಹೊರತರಲಾಗುತ್ತಿದೆ. ಈ ಸಂಪುಟದಲ್ಲಿ ಅಂತಾರಾಷ್ಟ್ರೀಯ ಆಸಕ್ತಿಯಾದ ವಿಶ್ವವ್ಯಾಪಾರ ಸಂಘಟನೆ ಮತ್ತು ರೈತ ಪ್ರತಿಕ್ರಿಯೆಗಳು, ಜಾಗತಿಕ ತಾಪಮಾನ, ಕುಲಾಂತರಿ ಬೆಳೆಗಳು (ಬಿಟಿ ಹತ್ತಿ ಮತ್ತು ಬದನೆ) ಮತ್ತು ರೈತ ಪ್ರತಿಭಟನೆ, ನೀರಾ ಚಳವಳಿ ಹಾಗೂ ತತ್ಸಂಬಂಧಿ ಸದನದ ಚರ್ಚೆಗಳು, ರೈತರ ಜಲ ಮತ್ತು ಆರ್ಥಿಕ ಸಮಸ್ಯೆಗಳು. ಬೆಳೆಹಾನಿ–ಬೆಲೆ ಕುಸಿತದ ಸಮಸ್ಯೆಗಳು ಕುರಿತಂತೆ ಮಾಹಿತಿಗಳನ್ನು ವಿಶ್ಲೇಷಿಸಿ ಬರೆಯುಲಾಗಿದೆ. ಸಕ್ಕರೆ ಕಾರ್ಖಾನೆಗಳ ಕಬ್ಬಿನ ಹಣ ಬಾಕಿ, ಕೊಬ್ಬರಿ ಮಾರುಕಟ್ಟೆ, ಬರ ಪರಿಸ್ಥಿತಿ–ಹರಿಹಾರ, ವಿದ್ಯುತ್ ಅಭಾವ, ಬೆಳೆವಿಮೆ ಇತ್ಯಾದಿ ವಿಷಯಗಳನ್ನು ರೈತಾಪಿ ಬದುಕಿನ ಹಿನ್ನೆಲೆಯಲ್ಲಿ ವಿಶ್ಲೇಷಿಸಿ, ಸದನದ ಚರ್ಚೆಗಳ ಆಧಾರಗಳೊಡನೆ ಇಲ್ಲಿ ಮಂಡಿಸಲಾಗಿದೆ. ವಿದ್ಯುತ್ ಸಂಕಷ್ಟಗಳು, ಬೆಳೆಹಾನಿ ಸಮಸ್ಯೆಗಳು, ಆರ್ಥಿಕ ಸಮಸ್ಯೆಗಳು ಚಳವಳಿಗೆ ಪ್ರೇರಕವಾಗುವ ಸಂದರ್ಭಗಳ ಬಗ್ಗೆಯೂ ಇಲ್ಲಿ ಸೂಚಿಸಲಾಗಿದೆ.

**ಕಾವೇರಿ : ಜಲವಿವಾದ–ಐತೀರ್ಪು–ಚಳವಳಿ,** ಎಂಬ ಶೀರ್ಷಿಕೆಯ ಕೃತಿಯನ್ನು ಸದ್ಯ ಸುವರ್ಣ **'ಕರ್ನಾಟಕ ರೈತ ಚಳುವಳಿಗಳು–ಸತ್ಯಾಗ್ರಹಗಳು'** ಕೃತಿ ಮಾಲಿಕೆಯ 5ನೆಯ ಸಂಪುಟವಾಗಿ ಎರಡು ಭಾಗಗಳನ್ನೊಳಗೊಂಡು ಪ್ರಕಟವಾಗುತ್ತಿದೆ. ಈ ಸಂಪುಟದಲ್ಲಿ ಕಾವೇರಿ ನದಿಯ ಐತಿಹಾಸಿಕ ಅಸ್ತಿತ್ವವನ್ನು ಭೂವಿಜ್ಞಾನ, ಪುರಾಣ, ಜಾನಪದ, ಶಾಸನ ಸಾಹಿತ್ಯ, ವಚನೋಕ್ತಿಗಳಲ್ಲದೆ ಮೊದಲು ಕಾವೇರಿಗೆ ಕಟ್ಟಿದ್ದ ಅಣೆಕಟ್ಟುಗಳ ವಿವರಗಳೊಡನೆ ವಿಶದಪಡಿಸಲಾಗಿದೆ. ಕನ್ನಂಬಾಡಿ–ಕೃಷ್ಣರಾಜಸಾಗರ ಅಣೆಕಟ್ಟು ಕಟ್ಟುವ ಸಂದರ್ಭದಲ್ಲಿ ತಮಿಳುನಾಡಿನಿಂದ ಒದಗಿದ ಅಡ್ಡಿ ಆತಂಕಗಳು ಹಾಗೂ ಹೇರಿದ ಅನ್ಯಾಯದ ಒಪ್ಪಂದಗಳು; ರಾಜ್ಯ ಪುನರ್ವಿಂಗಡನೆಯ ನಂತರ ಒದಗಿದ ಕಾವೇರಿ ಸಮಸ್ಯೆಗಳು, ಕಾವೇರಿ ಜಲವಿವಾದಗಳು ಆ ಸಂಬಂಧ ನಡೆದ 1991 ರ ಕಾವೇರಿ ಚಳವಳಿ; ಕಾವೇರಿ ಜಲವಿವಾದದ ಐತೀರ್ಪು ಪ್ರಕಟಣೆ, ತತ್ಫಲವಾಗಿ ಕಾವೇರಿದ ಕಾವೇರಿ ಚಳವಳಿ; ಶಾಸನ ಸಭೆ, ಸಂಸತ್ತಿನಲ್ಲಿ ಕಾವೇರಿ ಸಂಬಂಧದ ಕಾವೇರಿದ ಚರ್ಚೆಗಳು; ಕಾವೇರಿ ಐತೀರ್ಪು ಕರ್ನಾಟಕಕ್ಕೆ ಸರಿಯಾದ ನ್ಯಾಯ ಒದಗಿಸದ ಕಾರಣ ನಡೆದ ತಿಂಗಳಾನುಕಾಲ ಎಲ್ಲ ವಲಯದ ಜನತೆಯ ರೈತಪರ ಪ್ರತಿಭಟನೆಗಳು, ರೈತರೊಬ್ಬರು ತೀರ್ಪಿನ ಅನ್ಯಾಯದ ಕಾರಣ ಕಾವೇರಿಗೆ ಹಾರಿ ಮಾಡಿದ ಆತ್ಮಬಲಿದಾನ, ಕಾವೇರಿ ವಿವಾದ ಸಂಬಂಧದ ವಿಚಾರ ಸಂಕಿರಣಗಳು, ಪ್ರತಿಕ್ರಿಯೆಗಳು ಕುರಿತೆಲ್ಲ ಈ ಸಂಪುಟದಲ್ಲಿ ವಿದಿತಗೊಳಿಸಿದೆ; ಚಳವಳಿಯ ರಭಸವನ್ನು ಪ್ರತ್ಯಕ್ಷ ಅನುಭವಿಸಿ ವಿವರಿಸಲಾಗಿದೆ. ತದನಂತರ ತತ್ಸಂಬಂಧಿಯಾಗಿ ತಮಿಳುನಾಡು ಹೊಗೇನಕಲ್ ಯೋಜನೆಯನ್ನು ವಿವಾದವಾಗಿ ಮಾರ್ಪಡಿಸಿ ಕೊಡು–ಕೊಳ್ಳು ಸೌಹಾರ್ದಕ್ಕೆ ಸ್ಪಂದಿಸದೆ ಹೋಗಿರುವುದನ್ನೂ ತಿಳಿಸಲಾಗಿದೆ. ಉಭಯರಾಜ್ಯಗಳ ವಿನಿಮಯ ತಿಳುವಳಿಕೆ ರಾಜಕೀಯವನ್ನು ದಾಟಿ ಬೆಳೆದಾಗಲೇ ವಿವಾದ ಕೊನೆಗೊಳ್ಳುವ ಆಶಯವನ್ನು ಮಂಡಿಸಲಾಗಿದೆ.

**ಕರ್ನಾಟಕ ರೈತ ಚಳುವಳಿಗಳು–ಸತ್ಯಾಗ್ರಹಗಳು,** ಕೃತಿ ಮಾಲಿಕೆಯ ಕೊನೆಯ ಸಂಪುಟವಾಗಿ **ರೈತ ಪ್ರತಿಭಟನೆಯ ಆಧುನಿಕ ಮಾದರಿಗಳು;** ಸಾಂತ್ವನ ಪ್ರಕ್ರಿಯೆಗಳು ಎಂಬ ಶೀರ್ಷಿಕೆಯಡಿಯಲ್ಲಿ 6ನೆಯ ಸಂಪುಟವು ಪ್ರಕಟವಾಗುತ್ತಿದೆ. ಈ ಸಂಪುಟದಲ್ಲಿ ಜಲವಿವಾದಗಳು, ಸಕ್ಕರೆ ಕಾರ್ಖಾನೆ ಬಯಸಿ ಸತ್ಯಾಗ್ರಹ, ನೀರಾಚಳವಳಿ ಮುಂದುವರಿದು ಪೊಲೀಸ್ ದೌರ್ಜನ್ಯ, ವಿದ್ಯುತ್ ಸಂಬಂಧದ ಬೇಡಿಕೆಗಳು,

ಪ್ರತಿಭಟನೆಗಳು, ಗೋಲಿಬಾರ್ ಸಂದರ್ಭಗಳು, ಬಿತ್ತನೆ ಬೀಜದ ಅಭಾವ ವಿರುದ್ಧ ಪ್ರತಿಭಟನೆಗಳು, ವಿಶ್ವವಾಣಿಜ್ಯ ಸಂಘಟನೆಯ ಮೇಳದಲ್ಲಿ ರೈತ ಸಂಘಟನೆಗಳ ಪ್ರತಿಭಟನೆ, ಜಿ–8 ಶೃಂಗಸಭೆ, ವಾಣಿಜ್ಯ ಹಾಗೂ ವ್ಯವಸಾಯೋತ್ಪನ್ನ ಬೆಳೆಗಳ ಬೆಲೆ ಕುಸಿತ, ರೈತರ ಆತ್ಮಹತ್ಯೆ ಹಾಗೂ ಆ ಕುರಿತು ಸರ್ಕಾರದ ಸಾಂತ್ವನ ಮುಖಿ ಸಂವಾದ ಕಾರ್ಯಕ್ರಮ, ಭೂಸ್ವಾಧೀನ ಪ್ರಕ್ರಿಯೆಗಳು, ಬಿತ್ತನೆ ಬೀಜಗಳ ಅಭಾವ, ನಾಲಾ ಕಳಪೆ ಕಾಮಗಾರಿ, ಕಾಡು ಪ್ರಾಣಿಗಳ ಹಾವಳಿ–ಬೆಳೆ ಹಾನಿ ಲಾಠಿ ಪ್ರಹಾರ ಇತ್ಯಾದಿ ಕುರಿತಂತೆ ನಡೆದ ವೈವಿಧ್ಯಮಯ ಪ್ರತಿಭಟನೆಗಳು–ಹೆದ್ದಾರಿ ರಸ್ತೆ ತಡೆ, ಪಾದಯಾತ್ರೆ, ಉಪವಾಸ ಸತ್ಯಾಗ್ರಹ, ಸ್ವಾಭಿಮಾನ ಪಾದಯಾತ್ರೆ, ವಿಧಾನ ಸೌಧಕ್ಕೆ ಮುತ್ತಿಗೆ, ಏಕಾಂಗಿಯಾಗಿ ಹಾಗೂ ಆಡಳಿತ ಕಛೇರಿ ಆವರಣದಲ್ಲಿ ವಿಷಪ್ರಾಶನ ಆತ್ಮಹತ್ಯಾ ಪ್ರಯತ್ನ ಈ ಬಗೆಗೆಲ್ಲ ಪ್ರಕಟಗೊಂಡ ಕೃಷಿ ವಲಯಾಸಕ್ತರ ಪ್ರತಿಕ್ರಿಯೆಗಳು, ಸಲಹೆಗಳನ್ನು ಇಲ್ಲಿ ಸೂಚಿಸಲಾಗಿದೆ. ಈ ದಿಸೆಯಲ್ಲಿ ಸಾಂತ್ವನ ಸ್ವರೂಪಗಳಾಗಿ, ರೈತರ ಸಾಲದ ಮೇಲಿನ ಬಡ್ಡಿ ಮನ್ನಾ, ರೈತ ಸಂಪರ್ಕ ಕೇಂದ್ರಗಳು, ಜಲಸಂವರ್ಧಿನಿ ಯೋಜನೆಗಳು, ಕರ್ನಾಟಕದ ಮತೀಯ ಕೃಷಿ ನೀತಿ ಪ್ರಕಟಣೆ, ಸರ್ಕಾರ ಹಾಗೂ ಸರ್ಕಾರೇತರ ಮತೀಯ ಸಂಸ್ಥೆಗಳಿಂದ ಕೃಷಿಮೇಳ, ವಿಚಾರ ಸಂಕಿರಣ ವ್ಯವಸ್ಥೆ, ಕೃಷಿ ಋಷಿ ಪರಿವಾರ, ಮಠೀಯ ಕೃಷಿ ಜಯಂತಿ ಆಚರಣೆ, ಸೌರಶಕ್ತಿ ಬಳಕೆಯ ಸೌರ ವಿದ್ಯುತ್ ಯೋಜನೆ, ಅಮೃತ ಭೂಮಿ ಅಂತಾರಾಷ್ಟ್ರೀಯ ಬೀಜ ಜಾತ್ರೆ, 'ನೇಗಿಲಯೋಗಿ' ಗೀತೆ, ಸಾಮರಸ್ಯ ಗ್ರಾಮ ಯೋಜನೆ, ಕೈತೋಟ ಬೀಜದ ಹಬ್ಬ, ಸಕ್ಕರೆ ಗಡ್ಡೆ ಬೆಳೆಯುವಿಕೆ, ಮಹಾತ್ಮ ಗಾಂಧಿ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ, ಅರುಣೋದಯ, ರೈತತೀರ್ಪು, ಇತ್ಯಾದಿ ಕಾರ್ಯಕ್ರಮಗಳ ಕುರಿತು ವಿವರಿಸಲಾಗಿದೆ. ರೈತ ಚಳವಳಿಯ ಒಟ್ಟಾರೆ ನೋಟದಲ್ಲಿ ಕೃಷಿ ಹಾಗೂ ಚಳವಳಿಯ ವಿಕಾಸದ ಆಧುನಿಕ ಮಜಲಿನವರೆಗೆ, ಆಶಯಗಳನ್ನು, ರೈತ ಹಿತರಕ್ಷಣೆಯನ್ನು ಪರಿಭಾವಿಸಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಅನುಗುಣ ಕಾವ್ಯ ಸಿಂಚನವನ್ನು ಮಾಡಿದೆ. ಮೊದಲು ಬರೆದು ಕಳೆದ ಸುಮಾರು ಹತ್ತು ವರುಷಗಳ ಅವಧಿಯಲ್ಲಿ ಆಗಿರುವ ರೈತ ಸಂಬಂಧದ ಹೋರಾಟಗಳನ್ನು ಬದಲಾವಣೆಗಳನ್ನು ಸದನ ಚರ್ಚೆಗಳನ್ನು ಸಾಂದರ್ಭಿಕವಾಗಿ ಅಡಕಗೊಳಿಸಲಾಗಿದೆ.

ಮೊದಲ ಮೂರು ಸಂಪುಟಗಳ ಪ್ರಕಟಣೆಯ ಸಂದರ್ಭದಲ್ಲಿ ಕಾಳಜಿ ತೋರಿ ಪ್ರಕಟಿಸಲು ಅನುವಾದ ಅಂದಿನ ಮಾನ್ಯ ವಿಧಾನ ಪರಿಷತ್ ಸಭಾಪತಿಗಳು,

ವಿಧಾನ ಸಭಾಧ್ಯಕ್ಷರಾದ ಶ್ರೀ ಕೃಷ್ಣ, ಹಾಗೂ ವಿಧಾನ ಮಂಡಲ ಗ್ರಂಥಾಲಯ ಸಮಿತಿಯ ಅಧ್ಯಕ್ಷರೂ ಆಗಿದ್ದ ಶ್ರೀ ವಿ.ಆರ್. ಸುದರ್ಶನ್, ಅವರುಗಳಿಗೆ ನನ್ನ ಕೃತಜ್ಞತೆಗಳು, ಸದ್ಯ ಉಳಿದ ಸಂಪುಟಗಳ ಪ್ರಕಟಣೆಯ ಬಗ್ಗೆ ಅನುವು ಮಾಡಿಕೊಟ್ಟಿರುವ ವಿಧಾನ ಪರಿಷತ್ ಅಧ್ಯಕ್ಷರೂ ಗ್ರಂಥಾಲಯ ಸಮಿತಿಯ ಅಧ್ಯಕ್ಷರು ಆದ ಮಾನ್ಯ ಶ್ರೀ ವೀರಣ್ಣ ಮತ್ತಿಕಟ್ಟಿ, ವಿಧಾನ ಸಭಾಧ್ಯಕ್ಷರಾದ ಮಾನ್ಯ ಶ್ರೀ ಕೆ.ಜಿ. ಬೋಪಯ್ಯ ಅವರಿಗೆ ನಾನು ಆಭಾರಿ.

ರೈತ ಚಳವಳಿ ಕುರಿತ ನನ್ನ ಬರಹಕ್ಕೆ ತುಂಬ ಉತ್ತೇಜನ ನೀಡಿದ 2000 ದ ಇಸವಿಯಲ್ಲಿ ಗ್ರಂಥಾಲಯ ಉಪಸಮಿತಿಯ ಅಧ್ಯಕ್ಷರಾಗಿದ್ದ ಮಾನ್ಯ ಶ್ರೀ ಬಿ.ಬಿ. ಶಿವಪ್ಪ, ಸಮಿತಿ ಸದಸ್ಯರಾಗಿದ್ದ ಸರ್ವಶ್ರೀ ಜಿ. ಮಧುಸೂದನ್ ಎಂ. ರಂಗನಾಥ್, ಎಂ. ಸಂಪಂಗಿ, ಸಿರಾಜ್ ಷೇಕ್ ಸಾಹೇಬ್, ಪಾ.ಪಾಟೀಲ್, ಡಾ. ವಿ.ಎಸ್. ಆಚಾರ್ಯ (ಈಗ ಮಾನ್ಯ ಗೃಹ ಸಚಿವರು) ದಿ|| ಡಾ. ಎಚ್.ಎಲ್. ನಾಗೇಗೌಡರನ್ನು ಈ ಸಂದರ್ಭದಲ್ಲಿ ನೆನೆಯುವೆ.

ಉಪ ಸಮಿತಿಯ ಮಾನ್ಯ ಅಧ್ಯಕ್ಷರಾದ ಶ್ರೀ ಎಂ. ನಾರಾಯಣಸ್ವಾಮಿ ಆದಿಯಾಗಿ ಶ್ರೀ 'ಮುಖ್ಯಮಂತ್ರಿ' ಚಂದ್ರು, ಡಾ. ಚಂದ್ರಶೇಖರ ಕಂಬಾರ, ಶ್ರೀ ಜಿ.ಎಸ್. ಗಡ್ಡದೇವರ ಮಠ ಹಾಗೂ ಇಂದಿನ ಸಮಿತಿಯ ಉಳಿದ ಎಲ್ಲಾ ಮಾನ್ಯ ಶಾಸಕ ಸದಸ್ಯರಿಗೆ ನಾನು ಋಣಿ.

ಕರ್ನಾಟಕದ ವಿಧಾನ ಸಭಾ ಸಚಿವಾಲಯದ ಕಾರ್ಯದರ್ಶಿಗಳಾದ ಶ್ರೀ ಎಸ್.ಬಿ. ಪಾಟೀಲ, ಉಪಕಾರ್ಯದರ್ಶಿಗಳಾದ ಶ್ರೀ ಎಂ. ಗುರುರಾಜ್, ಹಾಗೂ ಹಿಂದಿನ ಗ್ರಂಥಾಲಯ ಉಪಸಮಿತಿಗೆ ಕೃತಿಯ ವೈಶಿಷ್ಟ್ಯವನ್ನು ತಿಳಿಸಿ ಹಿಂದಿನ ಸಂಪುಟಗಳ ಪ್ರಕಟಣೆಗೆ ನೆರವಾದ ಅಧೀನ ಕಾರ್ಯದರ್ಶಿ ಶ್ರೀ ಎಚ್.ಎಸ್. ಜಗನ್ನಾಥ್ ಅವರಿಗೆ, ಸರ್ಕಾರಿ ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖಾ ನಿರ್ದೇಶಕರಾದ ಶ್ರೀ ಎಂ. ರವಿಶಂಕರ್ ಅವರಿಗೆ ವಿಧಾನ ಸಭಾ ಸಚಿವಾಲಯದ ಮುಖ್ಯ ಗ್ರಂಥಪಾಲಕಿಯವರಾದ ಶ್ರೀಮತಿ ಅನಸೂಯ ಎನ್. ದೇವಗಿರಿ ಹಾಗೂ ಶ್ರೀ ವಿ. ಮಂಜುನಾಥ್, ವಿಧಾನ ಮಂಡಲದ ಗ್ರಂಥಾಲಯ ಸಿಬ್ಬಂದಿ ವರ್ಗದವರಿಗೆ, ಶ್ರೀ ಮಹದೇವ, ಶ್ರೀ ನಂಜುಂಡಸ್ವಾಮಿ ಡಿ.ಟಿ.ಪಿ. ಸಿಬ್ಬಂದಿ ವರ್ಗದ ಬಿ.ಎಂ. ರವಿಕುಮಾರ್, ಶ್ರೀ ಬಿ. ನಾಗರಾಜ್ ಹಾಗೂ ಮೊದಲ ಮೂರು ಸಂಪುಟಗಳಿಗೆ ಅಕ್ಷರ ಜೋಡಣೆ ಮಾಡಿದ ಡಿಟಿಪಿ ವಿಭಾಗದ ಶ್ರೀ ಶಿವಕುಮಾರ್ ಅವರಿಗೆ ನನ್ನ ಕೃತಜ್ಞತೆಗಳು.

ಸಂಸದೀಯ ಪಟು ಕೃತಿ ಮಾಲಿಕೆಯ ಸಂಪಾದಕರಾಗಿ ಬಹಳ ಕಾಳಜಿಯಿಂದ ಕೃತಿಯ ಕರಡನ್ನು ಪರಿಶೀಲಿಸಿ ಸಮಿತಿಯ ಸಮ್ಮತಿಗೆ ಮುಂದಿಟ್ಟ ಕೃಷಿ ಭೂಹೋರಾಟ ಕಥನಗಳ ಕೃತಿಕಾರ ಡಾ॥ ಕೂಡ್ಲಿಗೆರೆ ಮಲ್ಲಿಕಾರ್ಜುನ ಅವರಿಗೆ, ಈ ಹಿಂದೆ ನನ್ನ ಕೃತಿಯ ಮೊದಲ ಮೂರು ಸಂಪುಟಗಳ ಸಂಪಾದಕರಾಗಿದ್ದ ಶ್ರೀ ಎಲ್.ಎನ್. ಮುಕುಂದರಾಜ್. ಅವರಿಗೆ ನನ್ನ ಅಭಿಮಾನಗಳಿವೆ.

2000 ಇಸವಿಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಪ್ರೊ॥ ಎನ್. ಬಸವಾರಾಧ್ಯ ಅವರು ಮೊದಲಿಗೆ ಈ ಬರೆಹದ ಕಾರ್ಯಕ್ಕೆ ತೊಡಗಿಸುವಲ್ಲಿ ನೆರವಾದುದಕ್ಕೆ ಅವರಿಗೆ ನಾನು ಆಭಾರಿ.

ನನ್ನ ಬರೆಹದಲ್ಲಿ ವಿಮರ್ಶಾತ್ಮಕ ಸಲಹೆಗಳನ್ನು ನೀಡುತ್ತಿದ್ದ ಮಾತೋಶ್ರೀ ದಿ॥ ಗೌರಮ್ಮ ಗಂಗಾಧರಯ್ಯ ಅವರನ್ನು ಸ್ಮರಿಸಿ ಮತ್ತು ಬರೆಯುವಲ್ಲಿ ನೆರವಾದ ಶ್ರೀಮತಿ ಸುಲೋಚನಾ ನಾಗರಾಜ್, ಶ್ರೀಮತಿ ಪದ್ಮಾ ವಿರೂಪಾಕ್ಷಯ್ಯ, ಶ್ರೀ ಎಂ. ಶಾಮಲದೇವಿ ಡಾ.ಎಂ.ಜಿ.ಚಂದ್ರಕಾಂತ್ ಅವರಿಗೆಲ್ಲ ನನ್ನ ಅಭಿಮಾನಗಳು.

ರಾಜಾಜಿನಗರ, ಬೆಂಗಳೂರು **ಡಾ. ಎಂ.ಜಿ. ನಾಗರಾಜ್**
30.4.2010
ವಿಕೃತಿ ಸಂವತ್ಸರ
ಚೈತ್ರ ಶುದ್ಧ (ಅಧಿಕ ವೈ॥)
ಪಾಡ್ಯ ಅನುರಾಧ ನಕ್ಷತ್ರ ಶುಕ್ರವಾರ

# ಪರಿವಿಡಿ



## ವಿಷಯ ಸೂಚಿ

### ಸಂಪುಟ–೬

### ರೈತ ಪ್ರತಿಭಟನೆಯ ಆಧುನಿಕ ಮಾದರಿಗಳು; ಸಾಂತ್ವನ ಪ್ರಕ್ರಿಯೆಗಳು

### (ಪೂರಕ) ಅಧ್ಯಾಯ ೧೯: ರೈತ ಪ್ರತಿಭಟನೆಯ ಆಧುನಿಕ ಮಾದರಿಗಳು

**ಅಧ್ಯಾಯ ೨೨ : ರೈತ ಚಳವಳಿ ಪೂರಕ ವಿಷಯಗಳು; ಈಚಿನ ಬೆಳವಣಿಗೆಗಳು**

**ಅಧ್ಯಾಯ: ೨೩ : ರೈತ ಚಳವಳಿಯ ಒಟ್ಟಾರೆ ನೋಟ**

## ಪೂರಕ ಅಧ್ಯಾಯ 19

# ರೈತ ಪ್ರತಿಭಟನೆಯ ಆಧುನಿಕ ಮಾದರಿಗಳು ಮತ್ತು ಸಾಂತ್ವನ ಪ್ರಕ್ರಿಯೆಗಳು

**ವಿಷಯ 1:** ಬಿಜಾಪುರ ಜಿಲ್ಲೆಯ ಆಲಮಟ್ಟಿ ಡ್ಯಾಂ ಎತ್ತರಿಸುವಿಕೆ; ಸುಪ್ರೀಂ ಕೋರ್ಟ್ ತೀರ್ಪು, ಕಾಯ್ದಿರಿಸಿರುವಿಕೆ ವಿರುದ್ಧ ಕರಸೇವೆ ವಿಷಯ

21.3.2000 ದ ವಿಧಾನ ಸಭೆಯ ಅಧಿವೇಶನದಲ್ಲಿ[*1] **ಶ್ರೀ ಪಿ.ಜಿ.ಆರ್.ಸಿಂಧ್ಯ** ಅವರು ಮಾತನಾಡಿ: ರಾಜ್ಯದ ಮುಖ್ಯ ನೀರಾವರಿ ಯೋಜನೆ ಆದ ಆಲಮಟ್ಟಿ ವಿಚಾರದಲ್ಲಿ ಕೇಂದ್ರದ ಗಮನ ಸೆಳೆಯಲು ಎಲ್ಲ ವಲಯದ ಜನರು ಶ್ರೀ ವೈಜನಾಥ್ ಪಾಟೀಲ್ ಅವರ ನೇತೃತ್ವದಲ್ಲಿ ಮಾಡಹೊರಟಿರುವ ಕರಸೇವೆ, ಸುಪ್ರೀಂ ಕೋರ್ಟಿನ ತೀರ್ಮಾನ ಕಾಯ್ದಿಟ್ಟಿರುವ ಕಾರಣ ಆಲಮಟ್ಟಿ ಬಗ್ಗೆ ಬಂದಿಲ್ಲದಿರುವುದು, ಈ ಸಂಬಂಧ ಕಾನೂನು ಪಂಡಿತರನ್ನು ಕರೆಸಿ ಸಭಾಧ್ಯಕ್ಷರ ಕೊಠಡಿಯಲ್ಲಿ ಇತಿಮಿತಿಯೊಳಗೆ ಚರ್ಚಿಸಬೇಕಿರುವ ಬಗ್ಗೆ ಹೇಳಿದರು.

**ಶ್ರೀ ಮಲ್ಲಿಕಾರ್ಜುನ ಖರ್ಗೆ** ಅವರು, ಬಿಜಾಪುರದಲ್ಲಿ ಸತ್ಯಾಗ್ರಹ ನಡೆದು, ಬಂದ್‌ಗೆ ಮಠಾಧಿಪತಿಗಳು, ಸ್ಥಳೀಯ ಮುಖಂಡರೂ ಕರೆಕೊಟ್ಟಿರುವುದು ಸರ್ಕಾರದ ಗಮನಕ್ಕೆ ಬಂದು ಅದನ್ನು ಕಾಲ್‌ಆಫ್ ಮಾಡಲು ಮನವಿ ಮಾಡಿದೆ. ಕಾರಣ ಸುಪ್ರೀಂಕೋರ್ಟ್ ತೀರ್ಮಾನ ತಿಳಿದು ಮುಂದುವರಿಯಬೇಕಿದೆ ಎಂದರು. ಶ್ರೀ ಪಿ.ಜಿ.ಆರ್.ಸಿಂಧ್ಯಾ ಮುಂದುವರಿದು, ಸುಪ್ರೀಂ ಕೋರ್ಟ್ ವಿಚಾರ ಒಂದು ಭಾಗ, ರಾಜ್ಯದ ರೈತರ, ರಾಜ್ಯದ ಹಿತಾಸಕ್ತಿ ಕಾಪಾಡುವುದು ಒಂದು ಭಾಗ. ಜನತೆ ಕರಸೇವೆ ಮಾಡುವ ಬಗ್ಗೆ ನಮ್ಮದೂ ಸಹಾನುಭೂತಿ ಇದೆ. ಈ ವಿಷಯದ ಪ್ರಸ್ತಾಪ ಇಲ್ಲಿ ಮಾಡದಿದ್ದರೆ ಹೇಗೆ? ಎಂದು ಪ್ರಶ್ನಿಸಿದರು. ಎಲ್ಲಾ ಪಕ್ಷದ ಕಾರ್ಯಕರ್ತರು ಹೋರಾಟದ ಪರವಾಗಿ ಸಿಪಿಐ (ಎಂ) ಪಾರ್ಟಿ ವಿನಾ ಉಳಿದವರು ನಿಂತಿದ್ದಾರೆ. ಸರ್ಕಾರದ ಧೋರಣೆ ತಿಳಿಯಲು ಚರ್ಚೆಗೆ ಇಲ್ಲಿ ಅವಕಾಶವಾಗಬೇಕು ಎಂದರು.

**ಶ್ರೀ ಜಗದೀಶ್ ಶೆಟ್ಟರ್** ಅವರು, ಬಿಜಾಪುರ ಜಿಲ್ಲೆಯಲ್ಲಿ ಸತ್ಯಾಗ್ರಹ ಮುಂದುವರಿದಿದೆ. ಕರಸೇವೆಗೆ ಹೋರಾಟಗಾರರು ಸಿದ್ಧರಾಗುತ್ತಿದ್ದಾರೆ. ಇಂಥ

---

*1. ವಿಧಾನಸಭೆಯ ನಡವಳಿಕೆಗಳು., ಸಂಪುಟ.1, ಭಾಗ.II, (21.3.2000), ಪು. 933–38

ಸಂದರ್ಭವಾಗಿರುವಲ್ಲಿ ಚರ್ಚೆಗೆ ಅವಕಾಶ ನೀಡಬೇಕು, ಸರ್ಕಾರ ಚಳುವಳಿಗಾರರನ್ನು ಕರೆಸಿ ಮಾತನಾಡಬೇಕು, ಸರ್ವಪಕ್ಷಗಳ ಸಭೆ ಕರೆದು ನಿರ್ಣಯ ಕೈಗೊಳ್ಳಬೇಕು ಎಂದರು.

**ಶ್ರೀ ಎಸ್.ಎಸ್.ಪಾಟೀಲ**ರು ಆಲಮಟ್ಟಿಯಲ್ಲಿ ನಡೆದಿರುವ ಕೆಲಸದ ಬಗ್ಗೆ ತಿಳಿಯಲು ಸಾರ್ವಜನಿಕ ಉದ್ದಿಮೆಗಳ ಸಮಿತಿಯ ಮಾನ್ಯ ವಸಂತ ಸಾಲಿಯಾನ ಅಧ್ಯಕ್ಷತೆಯ ಸಮಿತಿಯ ಸದಸ್ಯನಾಗಿ ನಾನೂ ಹೋಗಿದ್ದೆ; ಕೆಲಸ ಚೆನ್ನಾಗಿ ಆಗಿರುವುದು ಕಂಡೆ ಎಂದರು.

24.3.2000ದ ವಿಧಾನಸಭಾಧಿವೇಶನದಲ್ಲಿ*2 ಶ್ರೀ ಪಿ.ಜಿ.ಆರ್.ಸಿಂಧ್ಯಾ ಅವರು: ಆಲಮಟ್ಟಿಯಲ್ಲಿ ಕರಸೇವೆ ನಡೆಯುತ್ತಿರುವಲ್ಲಿ ಮಾನ್ಯ ಮುಖ್ಯಮಂತ್ರಿಗಳು ಜಿಲ್ಲಾ ಉಸ್ತುವಾರಿ ಸಚಿವರನ್ನು ಅಲ್ಲಿಗೆ ಕಳುಹಿಸಿದ್ದು, ಅವರು ಧರಣಿ ಕುಳಿತವರೊಂದಿಗೆ ಮಾತನಾಡಿದ್ದು, 524 ಮೀಟರ್ ಎತ್ತರಕ್ಕೆ ಡ್ಯಾಮ್ ಅನ್ನು ನಿಲ್ಲಿಸಿ ನೀರನ್ನು ಸಂಗ್ರಹಿಸಿ ಬಳಸಿಕೊಳ್ಳಲು ಬೇಡಿಕೆಯನ್ನು ನಮ್ಮಲ್ಲಿ ಬಂದ ಎಲ್ಲ ಸರ್ಕಾರಗಳು, ಪ್ರತಿಪಾದಿಸುತ್ತ ಬಂದದ್ದು, ಕರಸೇವೆಯನ್ನು ರಾಜ್ಯದ ಹಿತ ದೃಷ್ಟಿಯಿಂದ ಜನ ಮಾಡುತ್ತಿರುವುದು, ಕರಸೇವೆ ವಿಷಯದಲ್ಲಿ ಸರ್ಕಾರದ ನಿಲುವು ಏನು? ಎಂದೆಲ್ಲ ವಿಷಯಗಳ ಬಗ್ಗೆ ಪ್ರಸ್ತಾಪಿಸಿದರು. **ಶ್ರೀ ಜಗದೀಶ್ ಶೆಟ್ಟರ್** ಅವರು, ಆಲಮಟ್ಟಿ ವಿಷಯದಲ್ಲಿ ಕರ್ಣಾಟಕ ರಾಜ್ಯದ ಆ ಭಾಗದ ರೈತರಿಗೆ ಅನ್ಯಾಯವಾಗಬಾರದು, ಸರಿಯಾದ ದಿಕ್ಕಿನಲ್ಲಿ ಸರ್ಕಾರದ ನಿರ್ಣಯಗಳು ಆಗಬೇಕು ಎಂದು ಒತ್ತಡ ತರಲು ಕರಸೇವೆಯಂಥ ಹೋರಾಟ ನಡೆದಿದೆ. ಸುಪ್ರೀಂ ಕೋರ್ಟ್ ತೀರ್ಪು ಕಾಯ್ದಿರಿಸಿರುವ ಸಂದರ್ಭದಲ್ಲಿ ಈ ತಿಂಗಳ 26ನೇ ತಾರೀಖು ಮಠಾಧೀಶರು, ಜನನಾಯಕರು, ರಾಜಕೀಯ ಮುಖಂಡರು, ನಾಗರೀಕರು, ರೈತರು ಕರಸೇವೆ ಮಾಡಲು ಹೊರಟ್ಟಿದ್ದಾರೆ. ಡ್ಯಾಂ ಅನ್ನು 524 ಮೀಟರ್ ಎತ್ತರಕ್ಕೆ ಏರಿಸುವ ಬಗ್ಗೆ ಎಲ್ಲಾ ರಾಜಕೀಯ ಪಕ್ಷಗಳ ಸಹಮತ ಇರುವ ಬಗ್ಗೆ, ಹೋರಾಟದ ಬಗ್ಗೆ ಕಳಕಳಿ, ಬೆಂಬಲ ಇದೆ ಎಂದು ಹೋರಾಟಗಾರರಿಗೆ ಕನ್‌ವಿನ್ಸ್ ಮಾಡಬೇಕಿದೆ. ತೀರ್ಪು ಬರುವಂಥ ಸಂದರ್ಭದಲ್ಲಿ ಸರಿಯಾದ ದಿಕ್ಕಿನಲ್ಲಿ ನಾವು ಸಾಗುವ ಬಗ್ಗೆ, ಹೋರಾಟಗಾರರಿಗೆ ಶಾಂತರೀತಿಯ ವಾತಾವರಣ ನಿರ್ಮಾಣ ಮಾಡಲು ಸಹಾಯವಾಗುವ ರೀತಿಯಲ್ಲಿ ಸರ್ಕಾರದ ನಿಲುವಿನ ಪ್ರಕಟನೆ ಮಾನ್ಯ

---

*2. ವಿಧಾನಸಭೆಯ ನಡವಳಿಕೆಗಳು., ಸಂಪುಟ.2, ಭಾಗ.I (24.3.2000), ಪು. 435–38

ಮುಖ್ಯಮಂತ್ರಿಗಳಿಂದ ಬರಲಿ, ಅಹಿತಕರ ಘಟನೆಗಳಿಗೆ ಅವಕಾಶವಾಗದಿರಲಿ, ಎಂದೆಲ್ಲ ನುಡಿದರು.

ಮಾನ್ಯ ಮುಖ್ಯಮಂತ್ರಿ **ಶ್ರೀ ಎಸ್.ಎಂ.ಕೃಷ್ಣ** ಅವರು, ರಾಜ್ಯದ ಮೂಲಭೂತ ಹಿತಾಸಕ್ತಿ ಬಗ್ಗೆ ಪ್ರಸ್ತಾಪವಾಗಿರುವುದು, ಕೃಷ್ಣ ಆಗಲಿ, ಕಾವೇರಿ ಆಗಲಿ ಪಕ್ಷಾತೀತ ನಿರ್ಣಯವನ್ನು ಸದನ ಅಂಗೀಕರಿಸಿರುವುದು, ದಕ್ಕಬೇಕಾದ ನ್ಯಾಯಬದ್ಧ ನೀರಿನ ಪ್ರಮಾಣವನ್ನು ದೊರಕಿಸಿಕೊಳ್ಳಲು ಸರ್ಕಾರ ಮಾಡಿರುವ ಎಲ್ಲಾ ಪ್ರಯತ್ನ, ಕೃಷ್ಣಾ ಮೇಲ್ದಂಡೆ ಯೋಜನೆ ಬಗ್ಗೆ ಸುಪ್ರೀಂ ಕೋರ್ಟಿನಲ್ಲಿ ನಡೆದಿರುವ ವಾದ ವಿವಾದಗಳು, ಆಂಧ್ರವು ಸಲ್ಲಿಸಿರುವ ಒರಿಜಿನ್ ಸ್ಯೂಟ್ ಮೇಲಿನ ವಾದವಿವಾದಗಳು, ರಾಜ್ಯಾಂಗದ ಚೌಕಟ್ಟಿನಲ್ಲಿ ಕೆಲಸ ಮಾಡಬೇಕಿರುವುದು, ಕನ್ನಡನಾಡಿನ ಜನರಿಗೆ ಎಲ್ಲಿ ಅನ್ಯಾಯವಾದೀತು, ಎಂಬ ಗಾಬರಿ ಜನರಲ್ಲಿ ಬಂದಿರುವುದು, ಆದರೆ ಏಕ ಪಕ್ಷೀಯವಾಗಿ ನಿರ್ಧಾರ ತಳೆದು ಕಾನೂನು ಉಲ್ಲಂಘಿಸಿ, ಕನ್ನಡ ನಾಡಿನ ಹಿತಾಸಕ್ತಿಯನ್ನು ಕಾಪಾಡಲು ಧಕ್ಕೆಯಾಗುವುದು, ಕರಸೇವೆ ಮಾಡಬೇಕೆನ್ನುವವರ ಮನ ಒಲಿಸುವ ಪ್ರಯತ್ನ ಮಾಡಿರುವುದು, ವಿರೋಧ ಪಕ್ಷದ ನಾಯಕರನ್ನು ಬಿಜಾಪುರಕ್ಕೆ ಕರೆದುಕೊಂಡು ಹೋಗಲು ಸಾಧ್ಯವಾಗದೆ ಹೋದ ಸಂದರ್ಭ ಉಂಟಾದುದು, ಬಿಜಾಪುರದಲ್ಲಿ ಕರಸೇವೆ ಮಾಡಬೇಕು ಎನ್ನುವವರ ಪ್ರಾಮಾಣಿಕತೆಯಲ್ಲಿ ಸಂಪೂರ್ಣ ವಿಶ್ವಾಸವಿರುವುದು ಕುರಿತೆಲ್ಲ ಹೇಳಿ ಸುಪ್ರೀಂ ಕೋರ್ಟಿನ ತೀರ್ಮಾನ ಬರುವವರೆವಿಗೆ ಇಂಥ ಯಾವುದೇ ಕೆಲಸವನ್ನು ಹಮ್ಮಿಕೊಳ್ಳಬಾರದೆಂದು, ಕರಸೇವೆಯನ್ನು ಕೈ ಬಿಡಬೇಕೆಂದು ಪಬ್ಲಿಕ್ ಅಪೀಲ್ ಮಾಡುವುದರ ಮೂಲಕ ಪ್ರಾರ್ಥನೆ ಮಾಡುತ್ತೇನೆ ಎಂದರು.

**ವಿಷಯ 2:** ರೈತರ ಸಮಸ್ಯೆಗಳು; ವಿರೋಧ ಪಕ್ಷದವರ ಧರಣಿ

1.3.2001ರ ವಿಧಾನ ಸಭಾಧಿವೇಶನದಲ್ಲಿ*3 **ಶ್ರೀ ಎನ್.ಸಂಪಂಗಿ** ಅವರು, ನಮ್ಮ ರೈತರು ಹಾಲು ಉತ್ಪಾದನೆ ಮಾಡಿ ಪ್ರಯೋಜನ ವಿಲ್ಲದಂತಾಗಿದೆ ಎಂದರು; **ಶ್ರೀ ಕೆ.ಎಂ.ಕೃಷ್ಣಮೂರ್ತಿ** ಅವರು ನೀಲಗಿರಿ ಬಟರ್‌ಮಿಲ್ಕ್ ಚಿಂತನೆ ಮಾಡಬೇಕಾಗಿದೆ ಎಂದರು. **ಶ್ರೀ ಜಗದೀಶ್ ಶೆಟ್ಟರ್** ಅವರು ರೈತರ ತೊಂದರೆ, ಆತ್ಮಹತ್ಯೆ ಕುರಿತು ಚರ್ಚೆ ಆಗಬೇಕು. ಮೆಕ್ಕೆಜೋಳ, ನವಲುಗುಂದ, ನರಗುಂದ, ಚಿತ್ರದುರ್ಗ ಜಿಲ್ಲೆಗಳಲ್ಲಿ

---

*3. ವಿಧಾನಸಭಾ ನಡವಳಿಕೆಗಳು., ಸಂಪುಟ 1. (1.3.2001), ಪು.114-132

ಲಕ್ಷಾಂತರ ಟನ್ ಬೀದಿಗೆ ಬಿದ್ದಿದೆ. ರೈತರಿಗೆ ಅನ್ಯಾಯವಾಗುತ್ತಿದೆ; ಆತ್ಮಹತ್ಯೆಗೆಳೆಸಿದ್ದಾರೆ ಎಂದರು. ರೈತರ ಉತ್ಪನ್ನಗಳ ಬೆಲೆ ಕುಸಿತವಾಗಿ, ರಾಜ್ಯದ ಎಲ್ಲ ಕಡೆಗಳಿಂದಲೂ ರೈತರು ಬಂದು ಧರಣಿ ಮಾಡಿ ರಾಜ್ಯ ಸರ್ಕಾರದ ವಿರುದ್ಧ ಆಕ್ರೋಶ ತೋಡಿ ಕೊಂಡಿದ್ದಾರೆ. ರೈತರ ಬಗ್ಗೆ ಇಂಥ ಸಂದರ್ಭದಲ್ಲಿ ಚರ್ಚೆಗೆ ಅವಕಾಶವಾಗಬೇಕು. ಅದು ಆಗದಿದ್ದ ಕಾರಣ ಧರಣಿ ಸದನದಲ್ಲಿ ಆಯಿತು. ಮುಖ್ಯಮಂತ್ರಿಯವರು ಮತ್ತು ಕಾನೂನು ಸಚಿವರು ಆ ಸಂಬಂಧ ಸರಿಯಾದ ರೀತಿಯಲ್ಲಿ ಮಾತನಾಡಿದ್ದರೆ ಆ ಘಟನಾವಳಿ ನಡೆಯುತ್ತಿರಲಿಲ್ಲ ಎಂದರು. ಈ ಬಗ್ಗೆ ಸರ್ಕಾರದ ಹೇಳಿಕೆ ಬರಲಿ ಎಂದೂ ಒತ್ತಾಯಿಸಿದರು.

ಶ್ರೀ **ಸಿ.ಬೈರೇಗೌಡರು** ಮಾತನಾಡುತ್ತ : ರಾಜ್ಯದಲ್ಲಿರುವ 70 ಭಾಗ ರೈತರ ಸಮಸ್ಯೆಗಳ ಬಗ್ಗೆ ಕಳೆದ ಅಧಿವೇಶನದಲ್ಲೂ ಚರ್ಚೆ ಮಾಡಿದ್ದೇವೆ. ಅವರ ಪರಿಸ್ಥಿತಿ ಇನ್ನು ಉತ್ತಮಗೊಂಡಿಲ್ಲ. ಸಮಸ್ಯೆ ಇನ್ನೂ ಭೀಕರವಾಗುತ್ತಿದೆ. ಅದಾಗಿ ರೈತರ ಸಮಸ್ಯೆಗಳ ಬಗ್ಗೆ ಮುಖ್ಯವಾಗಿ ಚರ್ಚೆ ಆಗಬೇಕಾಗಿದೆ. ಧರಣಿ ಮಾಡುವಲ್ಲಿ ಸಮಸ್ಯೆಗೆ ಪ್ರಾಮುಖ್ಯತೆ ಬರುವಂತೆ ಇರಬೇಕು. ಸರ್ಕಾರಕ್ಕೆ ವಿಪಕ್ಷದವರು ಸಲಹೆ ಕೊಟ್ಟು, ಹಾಗೆಯೇ ನಡೆಯಬೇಕೆಂದು ಒತ್ತಾಯ ಮಾಡಿದಾಗ ಸರ್ಕಾರ ಹಿಂದೇಟು ಹಾಕಿದರೆ, ಒಪ್ಪದಿದ್ದರೆ ಆ ಸಂದರ್ಭದಲ್ಲಿ ಪ್ರತಿಭಟಿಸಿ ಹೊರಕ್ಕೆ ಹೋಗುವ ಬಗ್ಗೆ ಹೇಳಬೇಕು. ಸರ್ಕಾರ ಜಗ್ಗಲಿಲ್ಲವೆಂದರೆ ಕೊನೆಯದಾಗಿ ಬಾವಿಯಲ್ಲಿ ಬಂದು ಧರಣಿ ಮಾಡುವುದು ಪದ್ಧತಿ. ಆದರೆ ಆಡಳಿತ ಪಕ್ಷದ ಸದಸ್ಯರೇ ಬಾವಿಗೆ ಬಂದು ಏಕೆ ಧರಣಿ ಮಾಡಿದರು ಎಂಬುದು ಸ್ಪಷ್ಟವಿಲ್ಲ. ಅಂತು ರಾಜ್ಯ ಸರ್ಕಾರದ ವಿರುದ್ಧ ಆಡಳಿತ ಪಕ್ಷದ ಸದಸ್ಯರೇ ಪ್ರತಿಭಟನೆ ಮಾಡುವಂಥ ಮಟ್ಟಕ್ಕೆ ರಾಜ್ಯದ ರೈತರ ಪರಿಸ್ಥಿತಿ ತಲುಪಿದೆ. ದಿಢೀರಾಗಿ ಬಂದು ಬಾವಿಗೆ ಬೀಳುವುದು ಆಡಳಿತ ಪಕ್ಷದ ಲಕ್ಷಣವಲ್ಲ. ಸದನದಲ್ಲಿ ಮಧುರ ವಾತಾವರಣ ನಿರ್ಮಿಸಿ ಚರ್ಚೆಗೆ ಅವಕಾಶ ಮಾಡುವುದು ಅದರ ಕರ್ತವ್ಯ ಎಂದರು.

ಶ್ರೀ **ಬಿ.ಆರ್.ಯಾವಗಲ್** ಅವರು ಮಾತನಾಡುತ್ತ : ನಮ್ಮಲ್ಲಿಯ ಪ್ರತಿಯೊಬ್ಬರದಕ್ಕಿಂತ ಮೀರಿದ ಸಮಸ್ಯೆ ರೈತರ ಸಮಸ್ಯೆಯಾಗಿದೆ. ಅದನ್ನು ಪ್ರಾತಿನಿಧ್ಯ ಮಾಡಲಿಕ್ಕೆ, ಮಹತ್ವದ್ದಾದ ಕಾರಣ ನಾವೆಲ್ಲಾ ಧರಣಿ ಮಾಡಿದ್ದು ನಿಜ. ನಮ್ಮ ಭಾವನೆ, ಸಂಕಟಗಳನ್ನು ವ್ಯಕ್ತ ಮಾಡಲು ಅಂಥ ಅವಕಾಶ ನಮಗಿದೆ. ಅಂತಾಗಿ

ಧರಣಿ ಮಾಡಿದ್ದಕ್ಕೆ ದೂಷಣೆ ಸಲ್ಲ. ಅದು ನಮ್ಮ ಹಕ್ಕು ಎಂದರು. ಅದು ತಪ್ಪೆನಿಸಿದರೆ ತಿದ್ದುಕೊಳ್ಳುತ್ತೇವೆ, ಅಧ್ಯಕ್ಷರು ಕೊಡುವ ಶಿಕ್ಷೆ ಸ್ವೀಕರಿಸಲೂ ಸಿದ್ಧ ಎಂದು ಮಾತನ್ನು ಮುಗಿಸಿದರು.

**ಶ್ರೀ ಪಿ.ಜಿ.ಆರ್.ಸಿಂಧ್ಯಾ** ಅವರು ಮಾತನಾಡಿ, ನಾವು ಮೂಲ ವಿಷಯಗಳನ್ನೂ ಚರ್ಚಿಸುವುದನ್ನು ಬಿಟ್ಟು ಧರಣಿ, ಕೂಗಾಟ ಮತ್ತು ಬಹಿಷ್ಕಾರಗಳಿಗೇ ಸಮಯ, ವ್ಯರ್ಥಮಾಡಿ ಮಹತ್ವ ಕೊಡುತ್ತಿದ್ದೇವೆ ಎನಿಸುತ್ತದೆ. ರಾಜ್ಯದಲ್ಲಿ ವಿಶೇಷತಃ ಉತ್ತರ ಕರ್ನಾಟಕದಲ್ಲಿ ರೈತರ ವ್ಯವಸಾಯೋತ್ಪನ್ನಗಳಿಗೆ ಬೆಲೆ ಸಿಗದಿರುವ ಸಂದರ್ಭದಲ್ಲಿ ಅದನ್ನು ಪ್ರಸ್ತಾಪಿಸುವ ಮಾನ್ಯ ಸದಸ್ಯರ ತವಕ ಅರ್ಥವಾಗುತ್ತದೆ. ಆದರೆ ಅವರು ಧಾಳಿ ಮಾಡಿದ ರೀತಿ ಸದನದ ರೀತಿ ರಿವಾಜುಗಳಿಗೆ ಸರಿಯಾದುದಲ್ಲವೆಂದು ನನ್ನ ಭಾವನೆ. ಮಾನ್ಯ ಮುಖ್ಯಮಂತ್ರಿಗಳು ನಮ್ಮ ಪಕ್ಷದವರೇ ಏನೋ ಮಾಡಿದ್ದಾರೆ. ನೀವು ಎಷ್ಟು ದಿನ ಧರಣಿ ಮಾಡುತ್ತೀರಿ! ಅದಕ್ಕೆ ಏನಾದರೂ ಪರಿಹಾರ ಕಂಡುಹಿಡಿಯೋಣ ಎಂದು ಒಂದು ಮಾತು ಹೇಳಿದ್ದರೆ ಪರಿಸ್ಥಿತಿ ಇಲ್ಲಿಗೆ ಬರುತ್ತಿರಲಿಲ್ಲವೆಂದು ನಾನು ತಿಳಿದಿದ್ದೇನೆ ಎಂದರು.

ಸಚಿವ **ಶ್ರೀ ಡಿ.ಬಿ.ಚಂದ್ರೇಗೌಡ** ಅವರು, ಸದನದಲ್ಲಿ ನಡೆದ ಘಟನೆಗಳು ವಿಧಾನಸಭೆಗೆ ಶೋಭೆ ತರುವುದಿಲ್ಲ. ವಿಧಾನಸಭೆಯ ನಡವಳಿಕೆಯ ನಿಯಮಗಳಲ್ಲಿ ಬಾವಿಗೆ ಬೀಳುವುದು ಸಂವಿಧಾನಿಕ ನಡವಳಿಕೆ ಎಂದಿಲ್ಲ. ಚುನಾಯಿತರಾಗಿ ಬಂದು ಈ ಸಭೆಯಲ್ಲಿರುವ ಎಲ್ಲ ಪಕ್ಷಗಳ ಶಾಸಕರು, ಎಲ್ಲ ಜನತೆಯ ಪ್ರತಿನಿಧಿಗಳೆ. ಅಂತಾಗಿ ಬೆಳೆ ಖರೀದಿ ಕೇಂದ್ರ ಮುಚ್ಚಿದ್ದರೆ ಮತಕೊಟ್ಟವನೂ ಕೇಳುತ್ತಾನೆ. ಅವನನ್ನು ಸಮಾಧಾನಗೊಳಿಸುವುದು ನಮ್ಮ ಕರ್ತವ್ಯ. ರೈತರ ವಿಚಾರವನ್ನು ವೈಜ್ಞಾನಿಕ ವಿಧಾನದಲ್ಲಿ ಚರ್ಚೆ ಮಾಡುವುದು ಬಿಟ್ಟು ಜಗಳವಾಡುವುದಲ್ಲ. ಕಾರ್ಯಕಲಾಪ ನಡೆಯಲು ಎಲ್ಲರೂ ಅನುವು ಮಾಡಿಕೊಡಬೇಕೆಂದು ವಿನಯದಿಂದ ಪ್ರಾರ್ಥಿಸಿದರು.

**ಶ್ರೀ ಸಿ.ಚೆನ್ನಿಗಪ್ಪ** ಅವರು ರೈತರ ಬೆಳೆಗಳ ಬೆಲೆ ಕುಸಿದು ರೈತರು ಸಾಯುತ್ತಿದ್ದಾರೆ. ಅಂತಾಗಿ ವಿರೋಧ ಪಕ್ಷದ ನಾಯಕರು ತಂದಿರುವ ನಿಲುವಳಿ ಸೂಚನೆಗೆ ಅವಕಾಶ ನೀಡಿ ಚರ್ಚೆಗೆ ಅನುವು ಮಾಡಿಕೊಡಬೇಕೆಂದು ಸಭಾಧ್ಯಕ್ಷರಲ್ಲಿ ವಿನಂತಿಸಿದರು.

**ಶ್ರೀ ಬಿ.ಬಿ.ಶಿವಪ್ಪ** ಅವರು, ಬಹುಕಾಲದಿಂದ ನೆನಗುದಿಗೆ ಬಿದ್ದಿದ್ದ ರೈತ ಸಮಸ್ಯೆಗಳ ಕುರಿತಂತೆ ಎಲ್ಲಾ ಪಕ್ಷಗಳ ಸದಸ್ಯರು ವಿರೋಧ ಪಕ್ಷದ ನಾಯಕರ ಮಾತುಗಳನ್ನು ಆಲಿಸಬೇಕಾಗಿತ್ತು. ಬದಲು ಕೇವಲ ಧಿಕ್ಕಾರಗಳಲ್ಲಿಯೇ 2 ದಿನಗಳನ್ನು ಕಳೆಯಲಾಗಿದೆ. ಕೇವಲ ಧಿಕ್ಕಾರಗಳಿಂದಲೇ ರೈತರ ಸಮಸ್ಯೆಗಳು ಪರಿಹಾರವಾಗುತ್ತದೆ ಎಂದರೆ ಇನ್ನೂ 3 ದಿನಗಳ ಕಾಲ ಧಿಕ್ಕಾರಗಳನ್ನೆ ಹಾಕೋಣ. ಆಡಳಿತ ಪಕ್ಷವು ಸ್ವಲ್ಪ ಸಂಯಮ ಕಳೆದುಕೊಳ್ಳದೆ ಸಾವಧಾನದಿಂದ ಸಮಸ್ಯೆಗಳನ್ನು ಆಲಿಸಿದ್ದರೆ ಗೊಂದಲಕ್ಕೆ ಅವಕಾಶವಾಗುತ್ತಿರಲಿಲ್ಲ ಎಂದು ಹೇಳಿ ಸದಸ್ಯರೆಲ್ಲ ಸಹಕರಿಸಬೇಕೆಂದು ಕೇಳಿಕೊಂಡರು. ಶ್ರೀ **ಬಿ.ಎನ್.ಬಚ್ಚೇಗೌಡರು,** ವಿವಾದವನ್ನು ತಿಳಿಗೊಳಿಸಲು ಪ್ರಯತ್ನವಾಗಲಿ. ಎರಡು ದಿನಗಳ ಕಾಲಕ್ಕೆ ಸದನ ನಡೆಸಲು 6 ಲಕ್ಷ ರೂ.ಗಳು ಖರ್ಚಾಗಿವೆ ಎಂದರು. ಸಭಾಧ್ಯಕ್ಷರಾದ ಶ್ರೀ **ಎಂ.ವಿ.ವೆಂಕಟಪ್ಪನವರು,** ನಡೆದಂಥ ಕಹಿ ಪ್ರಸಂಗವನ್ನು ಮರೆತು ಮುಂದೆ ಸದಸ್ಯರು ಸದನದಲ್ಲಿ ಸರಿಯಾಗಿ ನಡೆದುಕೊಂಡು ಹೋಗುವುದು ಕರ್ತವ್ಯ; ಸಂಯಮದಿಂದ ಮೊದಲು ಕೇಳುವ ಅಭ್ಯಾಸ ಮಾಡಿಕೊಳ್ಳಬೇಕು ಎಂದರು.

**ಶ್ರೀ ಜಗದೀಶ್ ಶೆಟ್ಟರ್** ಅವರು, ರಾಜ್ಯದಲ್ಲಿ ರೈತ ಏನು ಕಷ್ಟಪಡುತ್ತಿದ್ದಾನೆ ಅದರ ಬಗ್ಗೆ ಚರ್ಚೆಯಾಗಬೇಕು. ಇಡೀ ರಾಜ್ಯದಿಂದ ಜನ ಇಲ್ಲಿಗೆ ಬಂದಿದ್ದಾರೆ. ನಮ್ಮ ಬಗ್ಗೆ ಏನು ಚಿಂತನೆ ನಡೆಯುತ್ತಿದೆ, ಸದಸ್ಯರ ನಡೆವಳಿಕೆಯ ಬಗೆಗೆಲ್ಲ ನೋಡುತ್ತಿದ್ದಾರೆ. ಜ್ವಲಂತ ಸಮಸ್ಯೆಯ ಬಗ್ಗೆ ಚರ್ಚೆಯಾಗಬೇಕೆಂಬ ಸದುದ್ದೇಶದಿಂದ ಶಾಸಕ ಮಿತ್ರರಿಗೆ ವಿನಂತಿ ಮಾಡಿಕೊಳ್ಳುವಲ್ಲಿ ಆಸೀನರಾಗಬೇಕೆಂದು ಕೇಳಿಕೊಂಡರು. ಆಗ ಭಾರತೀಯ ಜನತಾಪಕ್ಷದ ಮಾನ್ಯ ಸದಸ್ಯರುಗಳು ಆಸನಗಳಲ್ಲಿ ಆಸೀನರಾದರು. ಶ್ರೀ ಪಿ.ಜಿ.ಆರ್.ಸಿಂಧ್ಯ ಅವರು, ರೈತರ ಸಮಸ್ಯೆಯ ಬಗ್ಗೆ ದೇಶದಲ್ಲಿ ರಾಜ್ಯದಲ್ಲಿ, ಸದನದಲ್ಲಿ ಚರ್ಚೆ ಆಗಬೇಕು. ರೈತರಿಗೆ ತೊಂದರೆ ಇದೆ, ಡಬ್ಲುಟಿಓನಿಂದ ಹೊರಬರಲು ರೆಸಲ್ಯುಷನ್ ಮಾಡಬೇಕೆಂದು ಹೇಳಿದ್ದೆ. ಯಾವುದೂ ಆಗಲಿಲ್ಲ, ಈ ಬಗ್ಗೆ ಮಾನ್ಯ ಮಂತ್ರಿಗಳು ಏನೂ ಹೇಳದಿರುವ ಕಾರಣ ಅದನ್ನೂ ಕುರಿತು ವ್ಯಾಪಕ ಚರ್ಚೆಗೆ ಅವಕಾಶ ಕೊಡಬೇಕೆಂದು ಹೇಳಿದರು.

ಈ ಚರ್ಚೆಯಲ್ಲಿ ಸರ್ವ ಶ್ರೀ ಎನ್.ಸಂಪಂಗಿ, ಎಂ.ಮಹದೇವ, ಬಿ.ಎಚ್.ಬನ್ನಿಕೋಡು, ಎಸ್.ಎಸ್.ಪಾಟೀಲ್, ವಿಶ್ವೇಶ್ವರ ಹೆಗಡೆ ಕಾಗೇರಿ ಅವರುಗಳು ಪಾಲ್ಗೊಂಡಿದ್ದರು.

**ವಿಷಯ 3:** ಹಿರೇಕೆರೂರು ತಾ. ಸಕ್ಕರೆ ಕಾರ್ಖಾನೆ ಪ್ರಾರಂಭ ಬಯಸಿ ರೈತರ ಸತ್ಯಾಗ್ರಹ

14.3.2001 ರ ವಿಧಾನ ಸಭಾಧಿವೇಶನದಲ್ಲಿ*4 ವಿಪಕ್ಷನಾಯಕ **ಶ್ರೀ ಜಗದೀಶ್ ಶೆಟ್ಟರ್** ಅವರು : ಹಿರೇಕೆರೂರು ತಾ. ಬಸವೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ ಆರಂಭ ಮೂರು ವರ್ಷದಿಂದಲೂ ಬರಿ ಹೇಳಿಕೆಯಲ್ಲಿ ಉಳಿದಿದೆ. ರೈತರಿಗೆ ಬೇರೆ ಬೇರೆ ಸಹಕಾರಿ ಸಂಘಗಳಲ್ಲಿ ಸಾಲ ಕೊಡಿಸಿ ಷೇರು ಹಣವನ್ನಾಗಿ ಮಾಡಿ ಸಂಗ್ರಹಿಸಲಾಗುತ್ತಿದೆ. ಈವರೆಗೆ 13,273 ಜನರಿಂದ ತಲಾ 10 ಸಾವಿರ ರೂ.ನಂತೆ ಒಟ್ಟು 4.49 ಲಕ್ಷ ರೂ. ಸಂಗ್ರಹಣೆ ಮಾಡಿದ್ದಾರೆ. ಆದರೆ 8,193 ಜನರನ್ನು ಮಾತ್ರ ಕಾರ್ಖಾನೆ ಸದಸ್ಯರನ್ನಾಗಿ ಮಾಡಿ ಉಳಿದ 5085 ರೈತರನ್ನು ಮಾಡಿಲ್ಲ. ಈ ರೈತರಿಂದ ಸಂಗ್ರಹಿತ 2.74 ಲಕ್ಷ ರೂ. ಅಮಾನತ್ತು ಅಕೌಂಟಿನಲ್ಲಿದೆ. ಅವರ ಷೇರು ಬಂಡವಾಳ ಸಂಗ್ರಹ ಮಾಡಿ ಸದಸ್ಯರನ್ನಾಗಿಸಿಲ್ಲ. ಸಾಲ ಪಡೆದುಕೊಂಡ ಸಹಕಾರ ಸಂಘಗಳಲ್ಲಿ ಬಡ್ಡಿ ಏರುತ್ತಿದೆ. ಸಾಲ ವಸೂಲಾತಿ ಕ್ರಮ ಕೈಗೊಳ್ಳಲಾಗಿ ರೈತರು ಧರಣಿ ಸತ್ಯಾಗ್ರಹ ಮಾಡುತ್ತಿದ್ದಾರೆ. ಹಾಕಿದ ಷೇರು ಬಂಡವಾಳವನ್ನು ಹಿಂದಿರುಗಿಸಿ ಎಂದು ಒತ್ತಾಯಿಸಿದ್ದಾರೆ. ಮಾಜಿ ವಿಧಾನ ಸಭಾಧ್ಯಕ್ಷರಾದ ಶ್ರೀ ಬಿ.ಜಿ.ಬಣಕಾರ್ ನೇತೃತ್ವದಲ್ಲಿ 12ನೇ ತಾರೀಖಿನಿಂದ ರೈತರು ಸತ್ಯಾಗ್ರಹ ಮಾಡುತ್ತಿದ್ದಾರೆ. ಹಣವನ್ನು ವಾಪಸ್ ಕೊಡಲು ಅದೀಪ್ ಚೌಧರಿ ಅವರು ನಿರ್ದೇಶನ ನೀಡಿದ್ದರೂ ಅದರಂತೆ ಇಲಾಖೆಯವರು ನಡೆದುಕೊಳ್ಳುತ್ತಿಲ್ಲ ಎಂದೆಲ್ಲ ಹೇಳಿ ತಕ್ಷಣ ಹಣ ವಾಪಸ್ ಕೊಡಿಸುವ ವ್ಯವಸ್ಥೆ ಆಗಬೇಕೆಂದು ಒತ್ತಾಯಿಸಿದರು. ಆಗ ಸಕ್ಕರೆ ಸಚಿವ **ಶ್ರೀ ವಿ.ಕೃಷ್ಣಪ್ಪ** ಅವರು, ಎರಡು ಮೂರು ದಿವಸಗಳಲ್ಲಿ ಸ್ವತಹ ಅಧಿಕಾರಿಗಳೊಡನೆ ಚರ್ಚಿಸಿ ಸರ್ಕಾರದ ಕ್ರಮವನ್ನು ತಿಳಿಸುತ್ತೇನೆ ಎಂದರು.

**ವಿಷಯ 4:** ಅರಸೀಕೆರೆ ಬಳಿ ನೀರಾ ಇಳಿಸುವ ಚಳವಳಿ ; ಪೋಲೀಸ್ ದೌರ್ಜನ್ಯ

**ಶ್ರೀ ಡಿ.ಎಚ್.ಶಂಕರ ಮೂರ್ತಿ** ಅವರು 22.3.2001ರ ವಿಧಾನ ಪರಿಷತ್ತಿನ ಅಧಿವೇಶನದಲ್ಲಿ*5 ಮಾತನಾಡುತ್ತ, ಅರಸೀಕೆರೆ ಹತ್ತಿರದ ರೈತರು ನೀರಾ ಇಳಿಸುವ ಚಳುವಳಿ ಮಾಡುತ್ತಿದ್ದಾರೆ. ಕೊಬ್ಬರಿ, ತೆಂಗಿನಕಾಯಿ ಬೆಲೆ ಕುಸಿತದ ಕಾರಣ

---

*4. ವಿಧಾನಸಭೆಯ ನಡವಳಿಕೆಗಳು., ಸಂಪುಟ 3(1–2), ಭಾಗ.I, (14.3.2001), ಪು.237–38

*5. ವಿಧಾನಪರಿಷತ್ತಿನ ನಡವಳಿಕೆಗಳು., ಸಂಪುಟ 303 (1–5), (22.3.2001), ಪು.434–05

ನೀರಾ ಸತ್ಯಾಗ್ರಹ ಮಾಡುತ್ತಿದ್ದಾರೆ. ಪೋಲೀಸರು ಅವರ ಮೇಲೆ ತುಂಬಾ ದೌರ್ಜನ್ಯವನ್ನು ನಡೆಸುತ್ತಿದ್ದಾರೆ. ರೈತರ ಮನೆಗಳಿಗೆ ನುಗ್ಗಿ ಮಹಿಳೆಯರ ಮೇಲೆ ಕೈಮಾಡುವುದು, ಬೂಟುಗಾಲಿನಿಂದ ಒದೆಯುವುದು, ನೀರಾ ಚಳುವಳಿ ಅಂಗವಾಗಿ ರೈತರು ತೆಂಗಿನ ಗಿಡಗಳಿಗೆ ಕಟ್ಟಿದ ಗಡಿಗೆಗಳನ್ನು ಕೀಳುವಲ್ಲಿ ರೈತರ ಮನೆಗೂ ನುಗ್ಗಿ ಹಾಗೆ ಮಾಡಿದ್ದಾರೆ. ಇದನ್ನೆಲ್ಲ ಸರ್ಕಾರ ನಿಯಂತ್ರಣ ಮಾಡಿ ದೌರ್ಜನ್ಯದಿಂದ ನಡೆದುಕೊಂಡಿರುವ ಪೋಲಿಸರ ಮೇಲೆ ಸೂಕ್ತ ಕ್ರಮವನ್ನು ಸರ್ಕಾರ ತೆಗೆದುಕೊಳ್ಳಬೇಕು ಎಂದರು. ಸಭಾನಾಯಕರಾದ ಶ್ರೀ ಎಚ್.ಕೆ.ಪಾಟೀಲ್ ಅವರು ಉತ್ತರವನ್ನು ಮರುದಿನ ತರಿಸಿ ಹೇಳುವ ಬಗ್ಗೆ ತಿಳಿಸಿದರು.

ಈ ಸಭೆಯಲ್ಲಿ ಸರ್ವಶ್ರೀ ಎಸ್.ಚನ್ನಬಸವಯ್ಯ, ಎಸ್.ಆರ್.ಪಾಟೀಲ್ ಅವರೂ ಮಾತನಾಡಿದರು.

**ಶ್ರೀ ಡಿ.ವಿ.ಸದಾನಂದ ಗೌಡ**ರು, ನೀರಾ ಇಳಿಕೆಯವರ ಮೇಲೆ ಪೋಲೀಸ್ ದೌರ್ಜನ್ಯದ ಬಗ್ಗೆ 29.3.2001ರ ವಿಧಾನ ಸಭಾ ಅಧಿವೇಶನದಲ್ಲಿ* ಶ್ರೀ ಮಾತನಾಡುತ್ತ, ಚಳುವಳಿಯನ್ನು ಸರ್ಕಾರ ಹತ್ತಿಕ್ಕುತ್ತಿದೆ. ಸುಮಾರು 500–600 ಜನ ಪೋಲಿಸರು ಚಳುವಳಿಗಾರರನ್ನು ಏಕಾಏಕಿ ಬಂಧಿಸಿ ಕೋರ್ಟಿಗೆ ಹಾಜರ್ಪಡಿಸದೆ ಇರುವುದು, ನೆರೆಯ ಗ್ರಾಮಗಳಾದ ಬಿಸಿಲಳ್ಳಿ, ಹಿರಿಯೂರು, ಚಿಕ್ಕೂರು ಗ್ರಾಮಗಳಲ್ಲಿ ಮಹಿಳೆ ಮತ್ತು ಮಕ್ಕಳ ಮೇಲೆ ಪೋಲಿಸ್ ದೌರ್ಜನ್ಯ ನಡೆದಿರುವುದು ಕುರಿತು ಗೃಹ ಸಚಿವರ ಗಮನಕ್ಕೆ ಬಂದಿರಬೇಕು ಎಂಬ ಬಗೆಗೆಲ್ಲ ನುಡಿದರು. ಮಾತು ಮುಂದುವರಿಸಿ ಚಿಕ್ಕೂರಿನ ಬಳಿ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಬಸ್ಸಿಗೆ ಬೆಂಕಿ ಹಚ್ಚಿರುವುದು, ಬಿಸಿಲಳ್ಳಿಯಲ್ಲಿ ನಡೆದ ಪೋಲೀಸ್ ದೌರ್ಜನ್ಯವನ್ನು ಪ್ರತಿಭಟಿಸಲು ಚಳುವಳಿಗಾರರು ಹೋದಾಗ ಪೋಲೀಸರು ಅಶ್ರುವಾಯು ಸಿಡಿಸಿದುದು, ಮನೆ ಮನೆ ನುಗ್ಗಿ ಇಲ್ಲಿಯೂ ಮಹಿಳೆ, ಮಕ್ಕಳು ಎಂದು ನೋಡದೆ ಥಳಿಸಿದುದು, ಮನೆಮಠಗಳು ಕಿಟಕಿ, ಬಾಗಿಲು, ಹೆಂಚುಗಳು ಒಡೆದು ಹೋಗಿ, ಬಾಗೂರು ನವಿಲೆ ಸುರಂಗದ ಸಂತ್ರಸ್ತರ ಮೇಲೆ ನಡೆದ ದೌರ್ಜನ್ಯದಂತೆ ಇಲ್ಲಿಯೂ ನಡೆದ ಬಗ್ಗೆ ಪತ್ರಿಕಾವರದಿಗಳು ಬಂದಿರುವುದು, ಇನ್ನೂ ಒಂದು ಹೆಜ್ಜೆ ಮುಂದೆ ಸಾಗಿ ಪೋಲೀಸರು ತೆಂಗಿನ ತೋಟಗಳಲ್ಲಿ ಹೊಂಬಾಳೆಗಳನ್ನು ಕಡಿದು ಹಾಕಿರುವುದು ವರದಿಯಾಗಿರುವುದು, ನಿರಪರಾಧಿಗಳ ಬಂಧನ, ಹಲವಾರು ಜನ ಪೋಲೀಸ್ ದೌರ್ಜನ್ಯದ ಕಾರಣ

---

*6. ವಿಧಾನಸಭಾ ನಡವಳಿಕೆಗಳು., ಸಂಪುಟ 4(1–3), ಭಾಗ.I, (29.3.2001), ಪು.777–780; 1207–09

ಊರು ಬಿಟ್ಟು ಹೋಗಿರುವುದು, ವಿಪರೀತ ಭಯದ ವಾತಾವರಣವಿರುವುದು, ಅಬ್ಕಾರಿ ಗುತ್ತಿಗೆದಾರರ ಪ್ರೋತ್ಸಾಹ ಹಾಗೂ ಅವರ ಬೆಂಬಲದಿಂದ ಈ ಘಟನೆ ನಡೆದಿರುವಂಥದು, ನೀರಾ ತೆಗೆದು ಅನೇಕರು ಜೀವನ ನಡೆಸುತ್ತಿರುವುದು, ಬಸ್ಸನ್ನು ಸುಟ್ಟ ಸಂದರ್ಭದಲ್ಲಿ ಅರೆಸ್ಟ್ ಮಾಡಿದ 60 ಜನರನ್ನು ಕೋರ್ಟಿಗೂ ಹಾಜರು ಪಡಿಸದೆ ಮಾಹಿತಿಯನ್ನು ಪೂರ್ಣ ನೀಡದೆ, ಹಾಸನದ ಎಲ್ಲೋ ಒಂದು ಪೋಲೀಸ್ ಠಾಣೆಯಲ್ಲಿಟ್ಟು ಅಲ್ಲೂ ಅವರ ಮೇಲೆ ದೌರ್ಜನ್ಯ ನಡೆಸಿರುವುದು, ಪೋಲೀಸರೇ ಕೆಎಸ್‌ಆರ್‌ಟಿಸಿ ಬಸ್ಸಿಗೆ ಬೆಂಕಿ ಹಾಕಿ ದೌರ್ಜನ್ಯದ ಕೇಸ್ ಅನ್ನು ಹಾಕಲೆಳೆಸಿರುವರೆಂಬ ಅನುಮಾನವಿರುವುದು, ಈ ಬಗೆಗೆಲ್ಲ ಸರ್ಕಾರದ ಕ್ರಮವೇನು? ಎಂಬುದನ್ನು ತಿಳಿಸಬೇಕೆಂದು ಆಗ್ರಹಿಸಿದರು.

ಶ್ರೀ ಸಿ.ಬೈರೇಗೌಡರು ಮಾತನಾಡಿ, ತೆಂಗು ಬೆಳೆಯುವ ರೈತರ ತೀರ ಕಂಗಾಲು ಸ್ಥಿತಿ, ನೂರಾರು ವರ್ಷ ಇರುವಂಥ ತೆಂಗಿನಮರಗಳನ್ನು ಕಡಿಯುತ್ತಿರುವುದು, ತೆಂಗಿನಕಾಯಿ ಬೆಲೆ ಮೂರು ರೂ.ಗಳಿಗಿಂತ ಕಡಿಮೆಯಾಗಿ ಕೇಳುವವರಿಲ್ಲದಿರುವುದು, ತೆಂಗಿನ ನುಸಿರೋಗ ತಡೆಗೆ 2 1/2 ಕೋಟಿ ರೂ ಖರ್ಚುಮಾಡಿದರೂ ಪ್ರಯೋಜನವಾಗಿಲ್ಲದಿರುವುದು, ತೆಂಗಿನ ಮರಗಳಲ್ಲಿ ಕಾಯಿಯೂ ಸಿಗದೆ ಬೆಳೆ ಹಾಳಾಗಿರುವುದು, ಶೇಂದಿ ಇಳಿಸಲು ತೊಂದರೆ ಏನು? ಬಿಯರ್ ತಯಾರು ಮಾಡುವವರಿಗೆ ಪ್ರೋತ್ಸಾಹ ಎಂದು ಹಾದಿ ಬೀದಿಯಲ್ಲಿ ಬಿಯರ್ ವ್ಯಾಪಾರ ಮಾಡಲು ಅವಕಾಶಕೊಟ್ಟು, ರೈತರ ಹಾಗೂ ತೊಂದರೆಗೊಂಡಿರುವ, ಸಾಯುತ್ತಿರುವ ಲಕ್ಷಾಂತರ ರೈತರಿಗೆ ಅವರ ಮರದಿಂದ ನೀರಾವನ್ನು ಇಳಿಸಿ ಮಾರಲು ಅವಕಾಶ ಏಕೆ ಕೊಡಬಾರದು? ಎಂದೆಲ್ಲ ಹೇಳಿದರು. ಮಾತನ್ನು ಮುಂದುವರಿಸಿ ಹಾಸನದಲ್ಲಿ ಎಲ್ಲಾ ರೈತರು ವ್ಯಾಪಕವಾದ ಚಳುವಳಿ ಮಾಡಲು ತೀರ್ಮಾನಿಸಿದ್ದಾರೆ. ಪರಿಣಾಮವನ್ನು ಲೆಕ್ಕಿಸದೆ ರೈತರು ನೀರಾ ಇಳಿಸುವ ಕೆಲಸ ಮಾಡುತ್ತಾರೆ. ಇವೊತ್ತು ರೈತರನ್ನು ಹೆದರಿಸಿ, ಬೆದರಿಸಿ, ದಬ್ಬಾಳಿಕೆ ನಡೆಸಿ, ಕೆಲವರನ್ನು ದಸ್ತಗಿರಿ ಮಾಡಿ ನಾಪತ್ತೆ ಮಾಡಿರುವುದು ಸರಿಯಲ್ಲ. ನಾವೇನು ಪ್ರಜಾ ಪ್ರಭುತ್ವವಿಲ್ಲದ ಕತ್ತಲೆ ರಾಜ್ಯದಲಿದ್ದೇವೆಯೋ? ರೈತರ ಅಳಿವು ಉಳಿವಿನ ಪ್ರಶ್ನೆ ಬಂದಾಗ ಅವರು ಯಾವುದನ್ನೂ ಕೂಡ ಲೆಕ್ಕಕ್ಕೆ ಇಡುವುದಿಲ್ಲ. ಸರ್ಕಾರ ಇದನ್ನು ಗಮನಿಸಿ ಬಂಧಿತರನ್ನು ತಕ್ಷಣ ಬಿಡುಗಡೆ ಮಾಡಬೇಕು. ನೀರಾ ಇಳಿಸುವವರಿಗೆ ಬೇಕಾದರೆ ಟ್ಯಾಕ್ಸ್ ಹಾಕಿ ನೀರಾ ಇಳಿಸಲು ಅವಕಾಶ ಮಾಡಿ, ಎಂದೆಲ್ಲ ಹೇಳಿದರು.

**ಶ್ರೀ ಆರಗ ಜ್ಞಾನೇಂದ್ರ** ಅವರು ; ಅರಸೀಕೆರೆ ಸುತ್ತಮುತ್ತಲಿನ ರೈತರ ಮೇಲೆ ಹೆಂಗಸರು, ಮಕ್ಕಳ ಮೇಲೆ ಮನೆಗೂ ನುಗ್ಗಿ ಪೋಲೀಸರು ಅಮಾನುಷವಾಗಿ ಹೊಡೆದಿರುವ ಬಗ್ಗೆ ಪತ್ರಿಕೆಗಳಲ್ಲಿ, ಟೆಲಿವಿಷನ್ ಮಾಧ್ಯಮದಲ್ಲಿ ಬಂದಿದೆ; ಪೋಲೀಸರು ಸಾರಾಯಿ ಗುತ್ತಿಗೆದಾರರ ಪರವಾಗಿ ಅವರ ಸಂಬಳದ ಆಳುಗಳಂತೆ ವರ್ತಿಸಿದ್ದಾರೆ. ನೀರಾವನ್ನು ಜನ ಕುಡಿಯಲಾರಂಭಿಸಿದರೆ ಸಾರಾಯಿ ಮಾರಾಟವಾಗುವುದಿಲ್ಲವೆಂಬ ಕಾರಣಕ್ಕೆ ಪೋಲೀಸರ ಮೇಲೆ ಪ್ರೆಷರ್ ಹಾಕಿ ಕಾರ್ಯಾಚರಣೆ ಆಗಿದೆ. ತೆಂಗಿನ ಬೆಲೆ ಕಡಿಮೆಯಾದಾಗ ನೈಸರ್ಗಿಕವಾಗಿ ಬರುವ ನೀರಾವನ್ನು ತೆಗೆದುಕೊಳ್ಳುವುದು ರೈತರಿಗೆ ಅನಿವಾರ್ಯ. ಎಲ್ಲೆಲ್ಲೂ ಇಂದು ಸೆಕೆಂಡ್ಸ್ ಮಾರಾಟವಿದೆ. ಸಾರಾಯಿ ಪ್ಯಾಕೆಟ್ ಮಾಡಿ ರಾಜ್ಯಾದಂತ ಮಾರಾಟ ಮಾಡುತ್ತಿರುವುದಿದೆ. ಅದರಲ್ಲಿ ಏನು ರಾಸಾಯನಿಕವೋ, ಸೇರಿದ್ದು, ಜನ ಕುಡಿದು ಸಾಯುತ್ತಿದ್ದಾರೆ. ಅದಕ್ಕೆ ಕಾರಣರಾದವರ ಮನೆಗೆ ನುಗ್ಗಿ ಶಿಕ್ಷಿಸದೆ ರೈತರ ಮೇಲೇಕೆ ದೌರ್ಜನ್ಯ! ಬಂಧಿತರನ್ನು ದಯವಿಟ್ಟು ಬಿಡಿ. ನೀರಾ ಇಳಿಸುವ ಬೇಡಿಕೆಯನ್ನು ಈಡೇರಿಸಿ ಎಂದೆಲ್ಲ ಹೇಳಿ ವಿನಂತಿ ಇಟ್ಟರು. ಸಚಿವ ಶ್ರೀ **ಡಿ.ಬಿ. ಚಂದ್ರೇಗೌಡರು,** ಸಂಬಂಧಿಸಿದ ಮಂತ್ರಿಗಳು ಮೇಲ್ಮನೆಯಿಂದ ಬಂದ ಮೇಲೆ ಈ ಬಗ್ಗೆ ಹೇಳಿಕೆ ನೀಡುತ್ತಾರೆ ಎಂದರು.

ಗೃಹ ಸಚಿವ **ಶ್ರೀ ಮಲ್ಲಿಕಾರ್ಜುನ ಖರ್ಗೆ** ಅವರು ಹಾಸನ ಜಿಲ್ಲೆಯ (ಅರಸೀಕೆರೆ) ನೀರಾ ಚಳುವಳಿ ಕುರಿತು ಹೇಳುತ್ತ: ಅರಸೀಕೆರೆ, ಚನ್ನರಾಯಪಟ್ಟಣ ತಾ.ಗಳಲ್ಲಿ ಕಾನೂನು ವಿರುದ್ಧ ಕರ್ನಾಟಕ ರಾಜ್ಯ ರೈತ ಸಂಘದ ಕೆಲವರು ನೀರಾ ತೆಗೆದು ಚಳುವಳಿ ಆರಂಭಿಸಿದರು. ಅಬಕಾರಿ ಅಧಿಕಾರಿಗಳು, ಪೋಲೀಸ್ ಸಹಾಯ ಪಡೆದು ಇಂಥ ರೈತರ ವಿರುದ್ಧ ಕ್ರಮ ತೆಗೆದುಕೊಂಡು 40 ಪ್ರಕರಣಗಳನ್ನು ದಾಖಲಿಸಿರುತ್ತಾರೆ. ಅಬಕಾರಿ ಇಲಾಖಾಕ್ರಮದ ವಿರುದ್ಧ ಚಳುವಳಿ ನಿರತ ರೈತರು ಅಬಕಾರಿ ಗುತ್ತಿಗೆದಾರರ ವಾಹನ, ಸಾರಾಯಿ ಪ್ಯಾಕೆಟ್ ಇತ್ಯಾದಿಗಳನ್ನು ತಡೆ ಹಿಡಿದು ಲೂಟಿ ಮಾಡಿದ ಕಾರಣ 10 ಪ್ರಕರಣಗಳು ಪೋಲೀಸ್ ಠಾಣೆಯಲ್ಲಿ ದಾಖಲಾಗಿವೆ. 28.3.2001ರಂದು ತಾಲೂಕು ಕಛೇರಿ ಮುಂದೆ ಧರಣಿ ಕುಳಿತಿದ್ದವರನ್ನು ಬಂಧಿಸಿ, ನ್ಯಾಯಲಯದ ಮುಂದೆ ಹಾಜರು ಮಾಡಿ 10.4.2001 ರ ವರೆಗೆ ನ್ಯಾಯಾಂಗ ಬಂಧನದಲ್ಲಿ ಇರಿಸಲಾಗಿದೆ. ಬೈಲಹಳ್ಳಿಯಲ್ಲಿಯೂ ಪೋಲೀಸರ ಮೇಲೆ ಹಲ್ಲೆ ನಡೆದ ಕಾರಣ, ಕೆ.ಎಸ್.ಆರ್.ಟಿ.ಸಿ ಬಸ್ಸಿಗೆ ಬೆಂಕಿ ಹಚ್ಚಿದ ಕಾರಣ ಮೊಕದ್ದಮೆಗಳನ್ನು 50–60 ಜನರ ಮೇಲೆ ದಾಖಲು ಮಾಡಿದೆ. ಪೋಲೀಸ್ ಉನ್ನತಾಧಿಕಾರಿಗಳು ಪೂರ್ಣ ಬಂದೋಬಸ್ತ್ ಮೇಲ್ವಿಚಾರಣೆ

ಮಾಡುತ್ತಿದ್ದಾರೆ ಎಂದೆಲ್ಲ ತಿಳಿಸಿದರು. ಶ್ರೀ ಡಿ.ವಿ.ಸದಾನಂದ ಗೌಡರು ಈ ಬಗ್ಗೆ ಜಿಲ್ಲಾಧಿಕಾರಿಗಳಿಂದ ತನಿಖೆ ನಡೆಸಲು ವಿನಂತಿಸಿದರು. ಶ್ರೀ ಖರ್ಗೆ ಅವರು ಅವಶ್ಯಕವಿದ್ದರೆ ಡಿ.ಸಿ.ಯವರಿಂದ ವರದಿ ತರಿಸಿಕೊಳ್ಳುವ ಬಗ್ಗೆ ಹೇಳಿದರು.

**ಶ್ರೀ ಜಿ.ವಿ.ಸಿದ್ದಪ್ಪ** ನವರು, ತಾವು ಬಿಸ್ಲೇಹಳ್ಳಿ ಎಸ್.ಪಿ.ಅವರೊಡನೆ ಹೋಗಿದ್ದುದು, ಹೆಣ್ಣು ಮಕ್ಕಳೇ ಪೋಲೀಸರನ್ನು ಹೊಡೆಯಲು ಬಂದರೇ ವಿನಾ, ಪೋಲೀಸರು ಯಾವ ರೀತಿಯ ದೌರ್ಜನ್ಯವನ್ನು ಮಾಡಲಿಲ್ಲ. ಪೋಲೀಸರು ಅರಸೀಕೆರೆಗೆ ಬಂದ ಮೇಲೆ ಬಸ್ ಅನ್ನು ಸುಡಲಾಗಿದೆಯೇ ವಿನಾ ಅವರು ಅಲ್ಲಿದ್ದಾಗ ಸುಟ್ಟಿಲ್ಲ. ಬಸ್ ಸುಟ್ಟವರ ಬಗ್ಗೆ ಹೆಣ್ಣು ಮಕ್ಕಳು ದೂರುಕೊಟ್ಟಿರುವಲ್ಲಿ, ಅವರನ್ನು ಕಂಡುಹಿಡಿದು ದಸ್ತಗಿರಿ ಮಾಡಲಿದ್ದಾರೆ. ಆ ಹಳ್ಳಿಯಲ್ಲಿರುವವರೆಲ್ಲ ನಮ್ಮವರೆ. ಗಲಾಟೆ ನಡೆದದ್ದು ಕೇಳಿ ಆಮೇಲೆ ಹೋದೆ ಎಂದೆಲ್ಲ ತಿಳಿಸಿದರು.

**ವಿಷಯ 5:** ಬೆಂಗಳೂರು ಕಾವೇರಿ ಭವನದ ಕೆಪಿಟಿಸಿಎಲ್ ಕಛೇರಿಯ ಮುಂದೆ ರೈತರ ಸತ್ಯಾಗ್ರಹ (2002)

ವಿಪಕ್ಷನಾಯಕ **ಶ್ರೀ ಜಗದೀಶ್ ಶೆಟ್ಟರ್** ಅವರು 24.1.2002ರ ವಿಧಾನ ಸಭಾ ಕಲಾಪಗಳಲ್ಲಿ*7 ಪಾಲ್ಗೊಂಡು ಮಾತನಾಡುತ್ತ: ರಾಜ್ಯದಲ್ಲಿ ವಿದ್ಯುತ್ ಅಭಾವವಾಗಿದೆ. ರೈತರು ಕಾವೇರಿ ಭವನದ ಕೆಪಿಟಿಸಿಎಲ್ ಕಚೇರಿ ಮುಂದೆ ದೊಡ್ಡ ಪ್ರಮಾಣದಲ್ಲಿ ಸತ್ಯಾಗ್ರಹ ಮಾಡುತ್ತಿದ್ದಾರೆ. ಮಾನ್ಯ ಮುಖ್ಯಮಂತ್ರಿಗಳು ಬಜೆಟ್‌ನಲ್ಲಿ ಸತತ 12 ಗಂಟೆಗಳ ಕಾಲ ವಿದ್ಯುತ್ ಕೊಡುತ್ತೇವೆಂದರೂ, ಕೊನೆಯ ಪಕ್ಷ 5–6 ಗಂಟೆಗಳ ಕಾಲದಷ್ಟೂ ಕೊಡಲು ಇಂದು ಸಾಧ್ಯವಾಗಿಲ್ಲ. ಸುಮಾರು 14 ಸಾವಿರ ಪಂಪು ಸೆಟ್ಟುಗಳಿಗೆ ವಿದ್ಯುತ್ತು ಇಲ್ಲದೆ ನೀರು ಒದಗದೆ ಬರಡಾದ ಭೂ ಪರಿಸ್ಥಿತಿ ಇದೆ. ರೈತರು 18 ತಾಸುಗಳ ನಿರಂತರ ವಿದ್ಯುತ್ ಬೇಕೆಂದು ಪ್ರತಿಭಟನೆ ನಡೆಸುತ್ತಿದ್ದಾರೆ. ರಾಯಚೂರು, ರಾಮಗುಂಡಂ ವಿದ್ಯುತ್ ಕೇಂದ್ರದಲ್ಲಿ ತಾಂತ್ರಿಕ ವೈಫಲ್ಯದಿಂದ ಉತ್ತರಕರ್ನಾಟಕದ ಜನತೆಗೆ ವಿದ್ಯುತ್ ದೊರಕದೆ ತಬ್ಬಲಿ ಆಗಿದ್ದಾರೆ. ಕೆಪಿಟಿಸಿಎಲ್ ಅವ್ಯವಸ್ಥೆಯಿಂದ ಕೂಡಿದೆ. ರೈತರದು ಬಹಳ ದುಸ್ಥಿತಿ ಆಗಿದೆ. ರಾಜ್ಯ ಸರ್ಕಾರ ಬೇರೆ ಕಂಪೆನಿಗಳಿಂದಲಾದರೂ ವಿದ್ಯುತ್ ಅನ್ನು ಖರೀದಿಸಿ ಕನಿಷ್ಟ ಪಕ್ಷ 12 ತಾಸು ವಿದ್ಯುತ್ ಒದಗಿಸಲು ಕ್ರಮ ಕೈಗೊಳ್ಳಬೇಕು, ಕಳೆದ 6 ತಿಂಗಳಿಂದ ಇರುವ ವಿದ್ಯುತ್ ಅಭಾವದ ಪರಿಸ್ಥಿತಿ ನೀಗಬೇಕು, ಎಂದೆಲ್ಲ ನುಡಿದರು.

---

*7. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 1, ಭಾಗ.2, (24.1.2002) ಪು. 1254–57

**ಶ್ರೀ ಪಿ.ಜಿ. ಆರ್.ಸಿಂಧ್ಯಾ** ಅವರು, ಗ್ರಾಮೀಣ ಪ್ರದೇಶದ ಜನರಿಗೆ ವಿದ್ಯುತ್ತಿನ ಹಾಹಾಕಾರವಾಗಿದೆ. ಎಲ್ಲ ಕಡೆ ರೈತರ ಪ್ರತಿಭಟನೆ ನಡೆದಿದ್ದು ಕೆಪಿಟಿಸಿಎಲ್ ಅನ್ನು ಮುಚ್ಚಿ ಎಂದು ಧರಣಿ ಮಾಡುತ್ತಿದ್ದಾರೆ. ಕಾನೂನು ವ್ಯವಸ್ಥೆಯ ನಿರ್ವಹಣೆ ಕಷ್ಟವಾಗಿದೆ. ನಿನ್ನೆಯ ದಿನ ಪ್ರೊ॥ಎಂ.ಡಿ.ನಂಜುಂಡಸ್ವಾಮಿಯವರ ನೇತೃತ್ವದಲ್ಲಿ ಕೆಪಿಟಿಸಿಎಲ್‌ಗೆ ಬೀಗ ಹಾಕಿ ರೈತರು ಪ್ರತಿಭಟನೆ ಮಾಡಿದ್ದಾರೆ. ವಿದ್ಯುತ್ ಸರಬರಾಜು ವ್ಯವಸ್ಥೆಯನ್ನು ಉತ್ತಮಪಡಿಸಲು ಪ್ರಾಮಾಣಿಕ ಪ್ರಯತ್ನವಾಗಿಲ್ಲ. ಮಾನ್ಯ ಮುಖ್ಯಮಂತ್ರಿಗಳು ಬಳ್ಳಾರಿ ಭಾಷಣದಲ್ಲಿ ಸಾವಿರ ಮೆಗಾವ್ಯಾಟ್ ವಿದ್ಯುತ್ ಅನ್ನು ಉತ್ಪಾದನೆ ಮಾಡಲು ಕ್ರಮ ಕೈಗೊಂಡಿದ್ದೇವೆ ಎಂದು ಹೇಳಿದ್ದಾರೆ. ಈ ವರ್ಷ ಮಳೆಗಾಲ ವ್ಯತ್ಯಾಸದ ಕಾರಣ ಜಲಾಶಯಗಳಲ್ಲಿ ನೀರು ಕಡಿಮೆ ಇದೆ. ದಿಟ. ಆದರೆ ಬಜೆಟ್ ಭಾಷಣದಲ್ಲಿ ಮುಖ್ಯಮಂತ್ರಿಗಳು ಭರವಸೆ ಕೊಟ್ಟಿದ್ದು ಏಕೆ? ವಿದ್ಯುತ್ ಇಲ್ಲದ ಕಾರಣ ರೈತರು ರಾತ್ರಿ ವೇಳೆ ತಮ್ಮ ಹೊಲಗಳಿಗೆ ಹೋಗಲು ಕಷ್ಟವಾಗಿದೆ. ಸಿಂಗಲ್ ಫೇಸ್‌ನಲ್ಲಿಯೂ ಒಂದು ಕರೆಂಟ್ ಕೊಡುತ್ತಿಲ್ಲ. ಕೆಪಿಟಿಸಿಎಲ್‌ಗೆ ಈವರೆಗೆ 1900 ಕೋಟಿ ರೂ. ನಷ್ಟು ಸರ್ಕಾರದಿಂದಲೇ ಬಾಕಿ ಇದೆ ಎಂದು ತಿಳಿದು ಬಂದಿದೆ. ತತ್‌ಕ್ಷಣ ರಾಜ್ಯದಲ್ಲಿ ಕೊನೆಯ ಪಕ್ಷ 8 ಗಂಟೆಗಳ ಕಾಲ ಹಗಲು ಹೊತ್ತಿನಲ್ಲಿ ವಿದ್ಯುತ್ ಕೊಡುವ ವ್ಯವ್ಯಸ್ಥೆ ಮಾಡಬೇಕೆಂದು ಸರ್ಕಾರವನ್ನು ಒತ್ತಾಯಿಸಿದರು. ಅದೂ ಸಾಧ್ಯವಿಲ್ಲವೆಂದರೆ ಉತ್ತರ ಕೊಡಬೇಕು.

ಇಂಧನ ಸಚಿವ **ಶ್ರೀ ವೀರಕುಮಾರ ಪಾಟೀಲ್** ಅವರು ಅಧ್ಯಕ್ಷರಲ್ಲಿ ಸ್ವಲ್ಪ ಕಾಲಾವಕಾಶ ಕೊಟ್ಟರೆ ಉತ್ತರ ಕೊಡಲು ಅನುಕೂಲವಾಗುತ್ತದೆ ಎಂದರು. **ಶ್ರೀ ಕೆ.ಎಂ.ಕೃಷ್ಣಮೂರ್ತಿ** ಅವರೂ ವಿದ್ಯುತ್ ವಿಚಾರ ತುಂಬಾ ಗಂಭೀರವಾಗಿರುವ ಕಾರಣ ಮಾನ್ಯ ಸಚಿವರಿಂದ ಉತ್ತರ ಬೇಕು ಎಂದರು. ಅಧ್ಯಕ್ಷರು, ಸಚಿವರಿಗೆ ಉತ್ತರಿಸಲು ಸಮಯಾಕಾಶವನ್ನು ನೀಡಿದೆ ಎಂದರು.

**ವಿಷಯ 6:** ಹಿರಿಯೂರು ತಾಲೂಕು ಶಾಖೋತ್ಪನ್ನ ವಿದ್ಯುತ್ ಉತ್ಪಾದನಾ ಕೇಂದ್ರಕ್ಕೆ (ಸ್ಥಾವರಕ್ಕೆ) ಪರವಾನಗಿ; ಪ್ರತಿಭಟನೆ ಮತ್ತು ಗೋಲಿಬಾರ್ (2002)

**ಶ್ರೀ ಪಿ.ಜಿ.ಆರ್.ಸಿಂಧ್ಯ** ಅವರು 24.7.2002ರ ವಿಧಾನ ಸಭಾಧಿವೇಶನದಲ್ಲಿ*8 ಮಾತನಾಡುತ್ತ: ಹಿರಿಯೂರು ತಾಲೂಕಿನಲ್ಲಿ ಶಾಖೋತ್ಪನ್ನ ವಿದ್ಯುತ್ ಉತ್ಪಾದನಾ ಕೇಂದ್ರಕ್ಕೆ ಪರವಾನಗಿ ಕೊಟ್ಟಿರುವುದರ ವಿರುದ್ಧ ಅಲ್ಲಿನ ರೈತರು, ಪರಿಸರವಾದಿಗಳು, ಸಾರ್ವಜನಿಕರು, ಬಹಳ ದೊಡ್ಡ ಪ್ರಮಾಣದಲ್ಲಿ 2 ತಿಂಗಳಿನಿಂದಲೂ ಪ್ರತಿಭಟನೆ ಮಾಡುತ್ತಿದ್ದಾರೆ. ಇದರಿಂದ ಬಹಳ ತೊಂದರೆ, ಬೇರೆಡೆಗೆ ವರ್ಗಾಯಿಸಿ ಎಂದು ಸತ್ಯಾಗ್ರಹ ಮಾಡುತ್ತಿದ್ದವರ ಮೇಲೆ ಗುಂಡು ಹಾರಿಸಿ ನಾಲ್ಕು ಜನರನ್ನು ಕೊಂದಿರುವ ಘಟನೆ ನಡೆದಿದೆ. ಹಿರಿಯೂರಿನಲ್ಲಿ ನಡೆದ ಈ ರಾಕ್ಷಸೀ ಕೃತ್ಯಕ್ಕೆ ನಾವು ಖಂಡಿಸಲೇಬೇಕಾಗಿದೆ. ತಕ್ಷಣ ಹೊರ ರಾಜ್ಯದಿಂದ ಬಂದಿರುವ ಶಾಖೋತ್ಪನ್ನ ವಿದ್ಯುತ್ ಉತ್ಪಾದನಾ ನಿರ್ವಾಹಕರಿಗೆ ಕೊಟ್ಟಿರುವ ಲೈಸೆನ್ಸ್ ಅನ್ನು ರದ್ದು ಮಾಡದೆ ಹೋದರೆ ಬಹಳ ತೊಂದರೆ ಆಗುತ್ತದೆ. ಅದು ನ್ಯಾಫ್ತ್ ಬೇಸ್ಡ್ ಅಥವಾ ಕೋಲ್ ಬೇಸ್ಡ್ ಪವರ್ ಪ್ರಾಜೆಕ್ಟ್ ಆಗಿರದೆ, ಸ್ಥಳದ ಮರಗಿಡಗಳನ್ನು ಕಡಿದು ಆ ಮೂಲಕ ವಿದ್ಯುತ್ ಉತ್ಪಾದನೆ ಮಾಡುವ ಯೋಜನೆ ಆಗಿದೆ. ಪರವಾನಗಿ ಕೊಡಲು ಆಧಾರವೇನು? ಅದು ರದ್ದಾಗದಿದ್ದರೆ ದೊಡ್ಡದಾಗಿ ಚಳುವಳಿ ಆರಂಭವಾಗುತ್ತದೆ. ಸದ್ಯದ ಘಟನೆಯ ಸ್ಥಳದಲ್ಲಿ ಎಸ್.ಪಿ.ಇದ್ದರಾ? ಅಜಿಟೇಷನ್ ಆಗಲಿದ್ದುದು ಗೊತ್ತಿರಲಿಲ್ಲವೆ? ಕ್ರಮವೇನು ತೆಗೆದುಕೊಂಡರು? ಮಾನ್ಯ ಗೃಹ ಸಚಿವರು ಈ ಬಗ್ಗೆ ತಿಳಿಸಲು ಆಗ್ರಹಿಸಿದರು.

ವಿಪಕ್ಷ ನಾಯಕ **ಶ್ರೀ ಜಗದೀಶ್ ಶೆಟ್ಟರ್** ಅವರು ಘಟನೆಯ ಬಗ್ಗೆ ಮಾತನಾಡಿ, ಝಳಕಿ. ಸೊಲ್ಲಾಪುರ ಘಟನೆಯನ್ನು ನೆನಸಿ, ಅಲ್ಲಿನ ದುರಂತದಂತೆಯೇ ಹಿರಿಯೂರಿನ ರೈತರು ಪರಿಸರವಾದಿಗಳು ಚಳುವಳಿ ಮಾಡುವಲ್ಲಿ ಗೋಲಿಬಾರ್‌ನಿಂದ ದುರಂತ ಸಂಭವಿಸಿದ ಬಗ್ಗೆ ಥರೋ ತನಿಖೆ ಆಗಬೇಕು. ಝಳಕಿ ಘಟನೆಯ ನಂತರವೂ ಪೋಲೀಸ್ ವ್ಯವಸ್ಥೆ ಸುಧಾರಣೆ ಆಗಬೇಕಿತ್ತು ಹಿರಿಯೂರಿನ ಘಟನೆ ಸಂಬಂಧ ಸರ್ಕಾರ ಸ್ಪಷ್ಟೀಕರಣ ಕೊಡಬೇಕು ಎಂದರು.

---

*8.ವಿಧಾನ ಸಭಾ ನಡವಳಿಕೆಗಳು., ಸಂಪುಟ 6 (3–5), ಭಾಗ.II (24.7.2002) ಪು. 1248–1259

ಶ್ರೀ ಸಿ. **ಬೈರೇಗೌಡರು** ಅವರು ಮಾತನಾಡುತ್ತ, ಝಳಕಿ ದುರಂತ ನಡೆದು ವಾರವಾಗಿಲ್ಲ; ಹಿರಿಯೂರಿನಲ್ಲಿ ಗೋಲಿಬಾರ್‌ನಿಂದ 4 ಜನರ ಹತ್ಯೆ, 48 ಜನರಿಗೆ ಗಾಯಗಳಾಗಿವೆ. ರೈತರ, ಯಾವುದೇ ವರ್ಗದ ಜನರ ಸಮಸ್ಯೆಗಳನ್ನು ಗುಂಡಿನ ಮೂಲಕ ಬಗೆಹರಿಸುವ ಯೋಚನೆ ಬದಲಾಗಿ ಸರ್ಕಾರ ಅದನ್ನು ತಪ್ಪಿಸುವ ಕ್ರಮಗಳನ್ನು ಕೈಗೊಳ್ಳಬೇಕು. ಜನರ ಭಾವನೆಗಳನ್ನು ಅರ್ಥೈಸಿ ಜನರ ಉದ್ರೇಕ ಶಮನ ಮಾಡುವ ಬದಲಿಗೆ ಗುಂಡಿನಿಂದ ಭಾವನೆಗಳ ಶಮನ ಮಾಡಲೆಳಸಿದರೆ ಅದೊಂದು ಮಹತ್ತರ ತಪ್ಪು. ನೊಂದವರಿಗೆ ನೆಮ್ಮದಿಯನ್ನು ಸರ್ಕಾರ ನೀಡಲಿ ಎಂದು ವಿನಂತಿಸಿದರು. ಗೃಹ ಸಚಿವ **ಶ್ರೀ ಮಲ್ಲಿಕಾರ್ಜುನ ಖರ್ಗೆ** ಅವರು, ಘಟನೆಯ ಬಗ್ಗೆ ಕಳವಳವಾಗಿದೆ; ಮಾಹಿತಿ ತರಿಸಿಕೊಂಡು ವಿವರ ಕೊಡಲು ಸ್ವಲ್ಪ ಕಾಲಾವಕಾಶ ಬೇಕು ಎಂದು ಕೋರಿದರು.

ಶ್ರೀ **ಪಿ.ಜಿ.ಆರ್.ಸಿಂಧ್ಯಾ** ಅವರು, ಹಿರಿಯೂರಿನಲ್ಲಿ 2 ತಿಂಗಳಿನಿಂದ ನಡೆಯುತ್ತಿರುವ ಪ್ರತಿಭಟನೆ, ಕಳೆದ ಮೂರುದಿನಗಳಿಂದ ನಡೆಯುತ್ತಿರುವ ತೀವ್ರ ಚಳುವಳಿ, ರೈತರು ಪರಿಸರವಾದಿಗಳು, ಅನೇಕ ಹಳ್ಳಿಗಳಲ್ಲಿ 20 ಕಿ.ಮೀ. ಒಳಗೆ ಸದರಿ ವಿದ್ಯುತ್ ಕೇಂದ್ರ ಸ್ಥಾಪನೆ ಮಾಡಲು ಬಿಡುವುದಿಲ್ಲ ಎಂದು ಪ್ರತಿಭಟನೆ ಮಾಡುತ್ತಿರುವುದು, ತಮಿಳುನಾಡಿನಿಂದ ರಾತ್ರೋ ರಾತ್ರಿ ಸ್ಥಾವರವನ್ನು ಪ್ರಾರಂಭಿಸಲು ಬಂದಿರುವ ವಿಷಯ, ಸ್ಥಳೀಯ ವಿಷಯ ಸರ್ಕಾರಕ್ಕೆ ಗೊತ್ತಿದ್ದೂ, ಗೊತ್ತಿಲ್ಲವೆಂದು ಹೇಳುತ್ತಿರುವುದು ಸೂಕ್ತವಾಗದಿರುವುದು, ಲೈಸೆನ್ಸ್ ಯಾವ ಆಧಾರದ ಮೇಲೆ ಕೊಟ್ಟಿದೆ ಎಂಬುದನ್ನು ಸರ್ಕಾರ ಹೇಳಬೇಕಿರುವುದು, ಶಾಂತ ಪರಿಸ್ಥಿತಿ ಬರಲು ಲೈಸೆನ್ಸ್ ರದ್ದುಗೊಳಿಸಬೇಕಿರುವುದು ಕುರಿತೆಲ್ಲ ಹೇಳಿ ಗೃಹ ಸಚಿವರಿಂದ ವಿವರ ಬಯಸಿದರು.

ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರು, ಈಗಾಗಲೇ ಸ್ಥಳಕ್ಕೆ ಅಡಿಷನಲ್ ಡಿಜಿಪಿ ಅವರನ್ನು ಸಿಚುಯೇಷನ್ ನಿಯಂತ್ರಿಸಲು ಕಳುಹಿಸಿರುವುದು, ಡಿಆರ್‌ಫೋರ್ಸ್ ಮತ್ತು ಬೇರೆ ರಿಸರ್ವ್ ಫೋರ್ಸ್ ಕಳುಹಿಸಿರುವುದು, ಪರಿಸ್ಥಿತಿ ತಹ ಬಂದಿಗೆ ಬಂದು ಶಾಂತವಾಗಿರುವುದು, ಲೈಸೆನ್ಸ್ ಕೊಟ್ಟಿರುವ ಬಗ್ಗೆ ಹಾಗೂ ನಡೆದ ಪ್ರತಿಭಟನೆಯ ಕುರಿತು ಹೇಳಿಕೆ ನೀಡುವುದು ಹಾಗೂ ಏನೋ ಘಟನೆ ನಡೆದುಹೋಗಿದೆ, ಶಾಂತಿಯನ್ನು ಕಾಪಾಡಿ ಎಂದು ರೈತರಲ್ಲಿ, ಚಳುವಳಿಕಾರರಲ್ಲಿ, ಸದನದಲ್ಲಿ ಮನವಿ ಮಾಡಿ ಆ ಬಗೆಗೆಲ್ಲ ಹೇಳಿದರು.

•

ಶ್ರೀ ಪಿ.ಜಿ.ಆರ್.ಸಿಂಧ್ಯಾ ಅವರು ಗೃಹ ಇಲಾಖೆಗೆ ಎಲ್ಲ ವರದಿಗಳೂ ಬರುವಲ್ಲಿ ಪವರ್ ಪ್ರಾಜೆಕ್ಟ್‌ಗೆ ಕೊಟ್ಟ ಪರ್ಮಿಷನ್, ನಡೆದ ಪೋಲೀಸ್ ಫೈರಿಂಗ್‌ಗೆ ಪರ್ಮಿಷನ್ ಕೊಟ್ಟಿದ್ದರ ಬಗ್ಗೆ ಸದನಕ್ಕೆ ತಿಳಿಯಬೇಕು. ಝುಳಕಿ ಪ್ರಕರಣವನ್ನು ಸಬ್‌ಇನ್ಸ್‌ಪೆಕ್ಟರ್ ಮತ್ತು ಸರ್ಕಲ್ ಇನ್ಸ್‌ಪೆಕ್ಟರ್ ನಡುವಣ ವಿವಾದ ಎಂದು ಬಿಟ್ಟು ಆತ್ಮಹತ್ಯೆ ಪ್ರಕರಣವೆಂದು ಮಾಡಿ ನಮ್ಮ ಮನಸ್ಸನ್ನು ಸರ್ಕಾರ ಹ್ಯುಮಿಲಿಯೇಟ್ ಮಾಡಿದೆ. ಈ ದಿಸೆಯಲ್ಲಿ ವಿಫಲವಾಗಿರುವ ಸರ್ಕಾರ, ಕೊಡುವ ಸಂದೇಶ ಚಳುವಳಿಗಾರರಿಗೆ ತಲುಪುವ ರೀತಿ ಯಾವುದು ಎಂದೆಲ್ಲ ಪ್ರಶ್ನೆ ಇಟ್ಟರು. ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರು ಘಟನೆ ರಾಷ್ಟ್ರೀಯ ಹೆದ್ದಾರಿಯಲ್ಲಿ ನಡೆದಿರುವುದರಿಂದ ವಿವಿಧ ಕಡೆಯಿಂದ ಜನ ಹೋಗಿ ಬಂದು ಮಾಡುವಲ್ಲಿ ವಾತಾವರಣವನ್ನು ತಿಳಿಯಾಗಿಸಿದರೆ ಎಲ್ಲರಿಗೂ ಅನುಕೂಲ. ಆಧಾರಪೂರ್ವಕ ವರದಿ ಬಂದ ಮೇಲೆ ಸ್ಪಷ್ಟವಾಗಿ ವಿವರಿಸಿ ಕ್ರಮ ಜರುಗಿಸಲಾಗುವುದು ಎಂದು ಹೇಳಿದರು. ಶ್ರೀ ಪಿ.ಜಿ. ಸಿಂಧ್ಯಾ ಅವರು The systematic failure of police ಎಂದು ನುಡಿದು, ನಾಳೆ ಚರ್ಚೆಗೆ ಅವಕಾಶವಾಗಿ, ಮಾಹಿತಿಯನ್ನು ವಿವರಿಸುವುದಾದರೆ ಸಮಯ ನೀಡಿಕೆಗೆ ವಿಪಕ್ಷದ ಸಹಕಾರವಿದೆ ಎಂದರು. ಶ್ರೀ ಜಗದೀಶ್ ಶೆಟ್ಟರ್ ಅವರು ಝುಳಕಿ ಘಟನೆಯಾದ ತಕ್ಷಣ ಕ್ರಮ ಕೈಗೊಂಡಿದ್ದರೆ ಇಂಥ ಘಟನೆಗಳು ಪುನರಾವರ್ತನೆ ಆಗುತ್ತಿರಲಿಲ್ಲ ಎಂದರು. ಅಲ್ಲಿನ ಎಸ್.ಪಿ.ಅವರನ್ನು ವರ್ಗಾವಣೆ ಮಾಡಿ, ಸಿಓಡಿ ಬದಲು ಸಿಬಿಐ ತನಿಖೆ ಮಾಡಿ ಎಂದು ಒತ್ತಾಯಿಸಿದರೂ ಸರ್ಕಾರ ಸ್ಪಂದಿಸಲಿಲ್ಲ ಎಂದರು.

ಉಪಾಧ್ಯಕ್ಷರು, ಗೃಹ ಸಚಿವರು ಎಲ್ಲಾ ವರದಿ ತರಿಸಿಕೊಂಡು ಹೇಳಿಕೆ ಕೊಡುವ ಬಗ್ಗೆ ಹೇಳಿದ್ದಾರೆ. ಚರ್ಚೆಗೆ ಅವಕಾಶ ಮಾಡಲಾಗುವುದು, ಸದನದ ಬಾವಿಗೆ ಬಂದಿರುವ ಮಾನ್ಯ ಸದಸ್ಯರೆಲ್ಲ ಸ್ವಸ್ಥಾನಕ್ಕೆ ತೆರಳಬೇಕು ಎಂದು ನುಡಿದು ಸಭೆಯನ್ನು 15 ನಿಮಿಷಗಳ ಕಾಲ ಮುಂದೂಡಿದರು. ಸಂಜೆ 5 ಗಂಟೆ 57 ನಿಮಿಷಕ್ಕೆ ಸದನ ಸಮಾವೇಶಗೊಂಡು ಶ್ರೀ ಎಂ.ವಿ.ವೆಂಕಟಪ್ಪನವರು ಅಧ್ಯಕ್ಷ ಪೀಠ ಅಲಂಕರಿಸಿದರು. ವಿರೋಧ ಪಕ್ಷದ ಎಲ್ಲ ಸದಸ್ಯರು ಬಾವಿಯಲ್ಲಿ ಧರಣಿ ನಿರತರಾಗಿ ಪೋಲೀಸ್ ದೌರ್ಜನಕ್ಕೆ, ಗೋಲಿಬಾರ್ ಮಾಡಿಸಿದ ಸರ್ಕಾರಕ್ಕೆ ರೈತ ವಿರೋಧಿ ಸರ್ಕಾರಕ್ಕೆ ಧಿಕ್ಕಾರ ಎಂದು ಘೋಷಣೆ ಕೂಗುತ್ತಿದ್ದರು. ನಂತರ ಅಧ್ಯಕ್ಷರು ವಿನಂತಿಸಿ ಧರಣಿಯನ್ನು ಹಿಂತೆಗೆಸುವಲ್ಲಿ ಸಫಲರಾದರು. ಈ ದಿನದ ನಡವಳಿಕೆಗಳಲ್ಲಿ ಶ್ರೀ ಕಾಗೋಡು ತಿಮ್ಮಪ್ಪ ಅವರೂ ಪಾಲ್ಗೊಂಡಿದ್ದರು.

**ವಿಷಯ 7:** ಬ್ಯಾಡಗಿ ತಹಸೀಲ್ದಾರ್ ಕಛೇರಿ ಮುಂದೆ ರೈತರು ಸತ್ಯಾಗ್ರಹ

28.7.2003ರ ವಿಧನ ಸಭಾಧಿವೇಶನದಲಿ*9 ಶ್ರೀ **ಎಸ್.ಎಸ್.ಪಾಟೀಲ್** ಅವರು, ತಹಸೀಲ್ದಾರ್ ಕಚೇರಿ ಮುಂದೆ 51 ಜನ ರೈತರು ಸಾಮೂಹಿಕವಾಗಿ ನೇಣು ಆತ್ಮಹತ್ಯೆ ಮಾಡಿಕೊಳ್ಳುವುದಾಗಿ ಸರ್ಕಾರಕ್ಕೆ ನೋಟೀಸ್ ಕೊಟ್ಟಿರುವ ಬಗ್ಗೆ ಹಾಗೂ ಸರ್ಕಾರದ ಪ್ರತಿಕ್ರಿಯೆ ಇಲ್ಲದಿರುವ ಬಗ್ಗೆ ಮಾತು ಮುಂದಿಟ್ಟರು. ನಂತರ ಮುಂದುವರಿದು ಹಾವೇರಿ ಜಿಲ್ಲೆಯ ರೈತರ ಇನ್‌ಶೂರೆನ್ಸ್ ಹಣದ ಮೇಲೆ ಬಡ್ಡಿ ಮನ್ನಾ ಹಣ ತುಂಬಿಲ್ಲವೆಂದು ರೈತರೆಲ್ಲ ತಹಸೀಲ್ದಾರ್ ಕಛೇರಿ ಮುಂದೆ ಕುಳಿತಿದ್ದಾರೆ. 1ನೇ ತಾರೀಖಿನೊಳಗೆ ಹಣ ತುಂಬದೆ ಹೋದರೆ ಎಲ್ಲರೂ ನೇಣುಹಾಕಿಕೊಂಡು ಕಛೇರಿ ಮುಂದೆ ಆತ್ಮಹತ್ಯೆ ಮಾಡಿಕೊಳ್ಳುತ್ತೇವೆಂದು 51 ಜನ ರೈತರು ಸಹಿ ಮಾಡಿರುವ ನೋಟೀಸ್ ಅನ್ನು ಮುಖ್ಯಮಂತ್ರಿಗಳಿಗೆ ರಾಜ್ಯಪಾಲರಿಗೆ ಕಳುಹಿಸಿದ್ದಾರೆ. ರಾಜ್ಯದ ರೈತರ ಸ್ಥಿತಿ ತುಂಬಾ ಕಷ್ಟ. ಮಳೆಯಾದರೆ ಬಿತ್ತಲು ಬೀಜವಿಲ್ಲ; ಬಡ್ಡಿ ಮನ್ನಾ ಹಣ ತುಂಬಲಿಲ್ಲ, ಬರಗಾಲ ಕಾಮಗಾರಿ ಇಲ್ಲ, ದನಕರುಗಳಿಗೆ ಮೇವಿಲ್ಲ. ಸಾಮೂಹಿಕ ಆತ್ಮಹತ್ಯೆ ಮಾಡಿಕೊಂಡರೆ ನಾಳಿನ ಪರಿಸ್ಥಿತಿ ರಾಜ್ಯದಲ್ಲಿ ಏನಾಗುತ್ತದೆ? ಉತ್ತರಿಸಿ ಎಂದರು. ರೈತರ ಮಾತಿಗೆ ಉತ್ತರಬೇಕು ಎಂದರು.

ವಿಪಕ್ಷನಾಯಕ **ಶ್ರೀ ಜಗದೀಶ್ ಶೆಟ್ಟರ್** ಅವರು ಸಾಮೂಹಿಕ ಆತ್ಮಹತ್ಯೆ ಕುರಿತ ನೋಟೀಸ್ ನನಗೂ ಬಂದಿದೆ. ತುರ್ತಾಗಿ ಮುಖ್ಯಮಂತ್ರಿಗಳಿಗೆ ಗಂಭೀರ ಸಮಸ್ಯೆ ಆದ ಕಾರಣ ಕಳುಹಿಸಿದ್ದೇನೆ. ಇದಕ್ಕೆ ಪ್ರಮುಖ್ಯ ಕಾರಣವಾಗಿ ಬೆಳೆ ವಿಮೆ ಬಡ್ಡಿ ಮನ್ನಾ ಹಾಗೂ ಇನ್ನಿತರ ಕಾರಣಗಳಿರಬಹುದು. ಬೆಳೆ ವಿಮೆ ಪ್ರೀಮಿಯಂ ತುಂಬುವ ಅವಧಿ 31ನೇ ತಾರೀಖಿಗೆ ಮುಗಿಯುತ್ತದೆ. ರೈತರು ಪ್ರೀಮಿಯಂ ಹಣ ತುಂಬಿಲ್ಲ (ತುಂಬಲಿಕ್ಕಲಾಗಿಲ್ಲ!) ಕಂಪೂಟರ್ರೈಸ್ಡ್ ಉತ್ತರ ಸಿಗುತ್ತಿಲ್ಲ. ಈ ಕಾರಣ ಒಂದು ತಿಂಗಳ ಅವಧಿ ವಿಸ್ತರಣೆ ನೀಡಲು ಮನವಿ ಮಾಡಿಕೊಳ್ಳಲು ಕೃಷಿ ಸಚಿವರಿಗೂ ಒತ್ತಾಯ ಮಾಡಿದೆ. ಬೆಳೆ ವಿಮೆ ಹಣ ಬಿಡುಗಡೆ ಆಗಿಲ್ಲ. ಸರ್ಕಾರ ರೈತರ ಸಮಸ್ಯೆಗೆ ಸ್ಪಂದಿಸದಿದ್ದರೆ ನಾಳೆ ಗಂಭೀರ ಪರಿಸ್ಥಿತಿ ಉಂಟಾಗುತ್ತದೆ, ಎಂದರು. ಶ್ರೀ ಎಸ್.ಎಸ್.ಪಾಟೀಲರು ರೊಕ್ಕ ತುಂಬುವ ಬಗ್ಗೆ ರೈತರಿಗೆ ಆಶ್ವಾಸನೆ ಕೊಡದಿದ್ದರೆ ಸಾಮೂಹಿಕ ಆತ್ಮಹತ್ಯೆ ನಿಶ್ಚಿತವಾಗಿತ್ತು. ಅದಕ್ಕೆ ಅಸೆಂಬ್ಲಿಯಲ್ಲಿ ಹೋರಾಡುತ್ತೇವೆ. ಸತ್ಯಾಗ್ರಹ ಮಾಡುತ್ತೇವೆ, ಆತ್ಮಹತ್ಯೆ ಬೇಡ ಎಂದರೂ ಅವರು ಕೇಳುತ್ತಿಲ್ಲ. ಆ ವಿಷಯವನ್ನು ನಾವೂ ಗಂಭೀರವಾಗಿ ತೆಗೆದುಕೊಂಡಿಲ್ಲವೆನಿಸುತ್ತದೆ.

---

*9. ವಿಧಾನಸಭೆಯ ನಡವಳಿಕೆಗಳು, ಸಂಪುಟ 7(1–5), (28.7.2003),

ಶ್ರೀ **ಸಿ.ಚನ್ನಿಗಪ್ಪ** ಅವರು, ಪಿಎಲ್‌ಡಿ ಬ್ಯಾಂಕ್ ಸಾಲವನ್ನು ವಸೂಲು ನಾವು ಮಾಡುವುದಿಲ್ಲ. ಬಡ್ಡಿ ಮನ್ನಾ ಮೊದಲು ಸರ್ಕಾರದ ಉತ್ತರ ನೀಡಿದೆ. ತ್ಯಾಮಗೊಂಡ್ಲು ಹೋಬಳಿ ಕೂಡಿಗೆ ಹಳ್ಳಿಯ ಚಿಕ್ಕಣ್ಣನ ಟ್ರಾಕ್ಟರ್ ಸೀಸ್ ಮಾಡಿದ್ದಾರೆ; ಪಿ.ಎಲ್.ಡಿ ಬ್ಯಾಂಕ್ ಮುಂದೆ ನಿಲ್ಲಿಸಿದೆ ಎಂದರು.

ಕಾನೂನು ಸಚಿವ ಶ್ರೀ **ಡಿ.ಬಿ.ಚಂದ್ರೇಗೌಡ** ಅವರು, ಸದನದಲ್ಲಿ ಯಾವುದೇ ವಿಚಾರ ಹೇಳಿದರೆ ಅದಕ್ಕೆ ಮಾನ್ಯತೆ, ಗೌರವ ಹಾಗೂ ಘನತೆ ಬರಬೇಕು, ಎಂದು ಪ್ರತಿಕ್ರಿಯಿಸಿದರು.

## ವಿಷಯ 8: ಕೋಲಾರ ಜಿಲ್ಲೆಗೆ ಬಿತ್ತನೆ ಬೀಜ ಸರಬರಾಜಿನ ಅಭಾವ : ರೈತರ ಪ್ರತಿಭಟನೆ

15.7.2003ರ ವಿಧಾನಪರಿಷತ್ತಿನ ಅಧಿವೇಶನದಲ್ಲಿ*10 **'ಮುಖ್ಯಮಂತ್ರಿ'** ಚಂದ್ರು ಅವರು ಮಾತನಾಡುತ್ತ, ಜಿಲ್ಲೆಯಲ್ಲಿ ಕಳೆದ ಮೂರು ದಿನಗಳಿಂದ ಮಳೆ ಬೀಳುತ್ತಿದೆ. ಬಿತ್ತನೆ ಕಾರ್ಯ ಆರಂಭಿಸುವ ಸಲುವಾಗಿ ರೈತರು, ಬಿತ್ತನೆ ಬೀಜ ನಿಗಮದ ಉಗ್ರಾಣಕ್ಕೆ ಬಂದು ಬಿತ್ತನೆ ಬೀಜ ಕೇಳಿದರು. ಅಲ್ಲಿ ದಾಸ್ತಾನು ಇರಲಿಲ್ಲ. ರೈತರು ಉಗ್ರವಾದ ಪ್ರತಿಭಟನೆಯನ್ನು ಆ ಕಾರಣ ನಡೆಸುತ್ತಿದ್ದಾರೆ. ಪ್ರತಿ ಎಕರೆಯಲ್ಲಿ ರಾಗಿ ಬಿತ್ತನೆ ಮಾಡಲು ಸುಮಾರು 10 ಕೆ.ಜಿ ಬಿತ್ತನೆ ಬೀಜ ಅಗತ್ಯ. ಆದರೆ ಉಗ್ರಾಣದಲ್ಲಿ ಕೇವಲ 30 ಕ್ವಿಂಟಾಲ್ ರಾಗಿ ಮಾತ್ರವಿತ್ತು. ರೈತರಿಗೆ ದಿಕ್ಕು ತೋಚದಾಯಿತು. ಜುಲೈನಲ್ಲಿ ಮಳೆ ಬಿದ್ದರೆ ಜೋಳ, ತೊಗರಿ, ಅಲಸಂದೆ ಹಾಗೂ ಇತರ ಬೆಳೆ ಬೆಳೆಯಲು ಸಾಧ್ಯ. ಆದರೆ ಇವ್ಯಾವ ಧಾನ್ಯಗಳೂ ಅಲ್ಲಿಲ್ಲದಿದ್ದುದು ರೈತರ ಆತಂಕಕ್ಕೆ ಕಾರಣವಾಯಿತು. ಇದು ಸರ್ಕಾರದ ನಿರ್ಲಕ್ಷ್ಯಕ್ಕೆ ಜ್ವಲಂತ ಸಾಕ್ಷಿ. ಹಾಗೂ ರೈತ ಸಂಪರ್ಕ ಕೇಂದ್ರಗಳಲ್ಲಿ ರಿಯಾಯಿತಿ ದರದಲ್ಲಿ ಬಿತ್ತನೆ ಬೀಜ ತೆಗೆದುಕೊಳ್ಳಲು ಪಹಣಿ ಸೇರಿದಂತೆ ಅಗತ್ಯವಾದ ದಾಖಲೆಗಳನ್ನು ಹೊಂದಿಸಲು ಕನಿಷ್ಠ 100ರೂ ಖರ್ಚು ಬೀಳುತ್ತದೆ. ಇದರಿಂದ ರೈತ ಸಂಪರ್ಕ ಕೇಂದ್ರಗಳಿಂದ ರೈತರು ರಿಯಾಯಿತಿ ದರದಲ್ಲಿ ಬೀಜ ಪಡೆಯಲು ಹರ ಸಾಹಸ ಮಾಡಬೇಕಿದೆ, ಎಂಬ ಆರೋಪ ಪ್ರತಿಭಟನಾಕಾರರಿಂದ ಕೇಳಿ ಬಂದಿದೆ. ಸರ್ಕಾರ ಈ ವಿಷಯವನ್ನು ಗಂಭೀರವಾಗಿ ಪರಿಗಣಿಸಿ ಸೂಕ್ತ ವ್ಯವಸ್ಥೆಯನ್ನು ಸಂಬಂಧಿಸಿದ ಅಧಿಕಾರಿಯಿಂದ ಮಾಡಿಸಬೇಕೆಂದು ವಿನಂತಿಸಿದರು.

---

*10. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 321(4–5), ಭಾಗ.II (15.7.2003) ಪು.1193;

ಶ್ರೀ **ಹೆಚ್.ಕೆ.ಪಾಟೀಲರು,** ಸದ್ಯ ಪ್ರಸ್ತಾಪಿತ ಮಹತ್ವದ ವಿಚಾರ, ಆ ಭಾಗದಲ್ಲಿ ಮಳೆ ಆಗುತ್ತಿರುವುದು, ಬಿತ್ತನೆ ಬೀಜಗಳ ಬಗ್ಗೆ ವ್ಯವಸ್ಥೆ ಮಾಡಿರುವ ವಿಚಾರದಲ್ಲಿ ಡೆವಲಪ್‌ಮೆಂಟ್ ಕಮೀಷನರ್ ಅವರಿಗೆ ಸೂಚನೆ ಕಳುಹಿಸಿ ಕೋಲಾರ ಜಿಲ್ಲೆಯಲ್ಲಿ ಬೀಜದ ಸರಬರಾಜು ವ್ಯವಸ್ಥೆ ಮಾಡುವ ಬಗ್ಗೆ ತಿಳಿಸುತ್ತೇನೆ ಎಂದರು.

**ವಿಷಯ 9:** ನವಲುಗುಂದದಲ್ಲಿ ಬೆಳೆ ವಿಮೆ ಮುಷ್ಕರದ ರೈತರ ಮೇಲೆ ಹಲ್ಲೆ

ವಿಧಾನ ಪರಿಷತ್ತಿನ 9.2.2004 ರ ಅಧಿವೇಶನದಲ್ಲಿ*11 ಶ್ರೀ **ಬಸವರಾಜ ಹೊರಟ್ಟಿ** ಅವರು : ಧಾರವಾಡ ಜಿಲ್ಲೆ ನವಲುಗುಂದ ತಾಲೂಕಿನಲ್ಲಿ ಬೆಳೆ ವಿಮೆ ತುಂಬುವಲ್ಲಿ ಅನ್ಯಾಯವಾಗಿದೆ ಎಂದು ಮುಷ್ಕರ ಮಾಡುತ್ತಿದ್ದರು. ಶಾಂತರೀತಿಯಲ್ಲಿ ರೈತರು ಹೋರಾಟ ಮಾಡುತ್ತಿದ್ದ ಸಂದರ್ಭದಲ್ಲಿ ಸಣ್ಣ ಪುಟ್ಟ ಘಟನೆಗಳ ಕಾರಣ ಕಿಡಿಗೇಡಿಗಳಿಂದ ಕಲ್ಲು ತೂರಾಟವಾಯಿತು. ಪೋಲೀಸರು ಸಿಕ್ಕಾಪಟ್ಟೆ ರೈತರನ್ನು ಹೊಡೆದು ಲಾಠಿ ಪ್ರಹಾರ ಮಾಡಿದ್ದಾರೆ. 36 ರೈತರು ಈ ಏಟುಗಳಿಂದಾಗಿ ಆಸ್ಪತ್ರೆಯಲ್ಲಿದ್ದಾರೆ. 37 ರೈತರನ್ನು ಬಂಧಿಸಿ 'Attempt to murder' ಎಂದು 207ನೇ ಸೆಕ್ಷನ್ ಕೇಸ್ ಹಾಕಿದ್ದಾರೆ. ಇಂಥ ಗಂಭೀರ ಪರಿಸ್ಥಿತಿಯಲ್ಲಿ ರೈತರುಗಳನ್ನು ಕರೆದುಕೊಂಡು ಹೋಗಿ ಬಳ್ಳಾರಿ ಜೈಲಿನಲ್ಲಿ ಹಾಕಿದ್ದಾರೆ. ಆದರೆ ರೈತರು ಒಬ್ಬ ಪೋಲೀಸ್ ಅಧಿಕಾರಿಯೊಂದಿಗೂ ಜಗಳಮಾಡಿಲ್ಲ. ಸಾರ್ವಜನಿಕ ಆಸ್ತಿಪಾಸ್ತಿ ನಷ್ಟ ಮಾಡಿಲ್ಲ. ಘಟನೆ ನೋಡಲು ಬಂದ ಹಸಿರುಟವೆಲ್ ಹಾಕಿಕೊಂಡಿದ್ದ ರೈತರನ್ನು ಸಹ ಜೈಲಿಗೆ ಹಾಕಿದ್ದಾರೆ. ಕ್ರಿಮಿನಲ್ ಕೇಸ್ ಹಾಕಿ ಬಳ್ಳಾರಿ ಜೈಲಿಗಟ್ಟಿದ್ದಾರೆ. ಜೈಲಿನಲ್ಲಿರುವ 67 ಜನ ರೈತರು ತುಂಬಾ ಬಡವರು. ಜಾಮೀನು ಕೊಡುವುದಕ್ಕೆ ಯಾರೂ ಇಲ್ಲ. ಧಾರವಾಡದ 18 ತಾಲೂಕುಗಳ ಪೈಕಿ ನವಲುಗುಂದ ತಾಲೂಕಿಗೆ ಮಾತ್ರ ವಿಮಾ ಸೌಲಭ್ಯ ವಿಸ್ತರಿಸಿಲ್ಲ. ಬೆಳೆ ವಿಮೆ ಸಲುವಾಗಿ ರೈತರು 49 ಲಕ್ಷ ರೂ ಕಟ್ಟಿದ್ದಾರೆ. 2 ಕೋಟಿ ರೂ.ಗಳು ರೈತರಿಗೆ ಬರಬೇಕಿದೆ. ಬರಗಾಲದ ಪರಿಸ್ಥಿತಿ ಕಳೆದ 4 ವರ್ಷದಿಂದ ಇರುವಲ್ಲಿ ರೈತರು ಮನೆಗೆ ಬೀಗ ಹಾಕಿ ಊರು ಬಿಟ್ಟು ಹೋಗಿದ್ದಾರೆ. ಹರಿದ ಬಟ್ಟೆ ಉಟ್ಟುಕೊಂಡಿದ್ದ ರೈತರನ್ನು ಜೈಲಿಗೆ ಹಾಕಿದ್ದಾರೆ. ಇದೆಲ್ಲ ದೂರದರ್ಶನ ಮತ್ತು ಪತ್ರಿಕೆಗಳಲ್ಲಿ ಬಂದಿದೆ. ದಯಮಾಡಿ ರೈತರಿಗೆ ಆಗಿರುವಂಥ ಅನ್ಯಾಯ ಸರಿಪಡಿಸಿ. ಅಧಿಕಾರಿಗಳು ಅಧಿಕಾರವನ್ನು ದುರುಪಯೋಗ ಮಾಡಿಕೊಂಡಿದ್ದಾರೆ. ಅದಾಗಿ ಈ ರೈತರ ಮೇಲಿನ ಕೇಸ್‌ಗಳನ್ನು ವಾಪಸ್

---

*11. ವಿಧಾನ ಪರಿಷತ್ತಿನ ನಡವಳಿಕೆಗಳು ಸಂ.328(1–6) ಪು. 98–101 9.2.2004

ತೆಗೆದುಕೊಳ್ಳಬೇಕು. ರೈತರಿಗೆ ಬರಬೇಕಾದಂಥ ವಿಮಾ ಸೌಲಭ್ಯವನ್ನು ಒದಗಿಸಿಕೊಡಬೇಕು ಎಂದೆಲ್ಲ ಹೇಳಿ, ಅವರ ಕುಟುಂಬಗಳು ಬೀದಿ ಪಾಲಾಗಿರುವ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು, ಅನ್ಯಾಯ ಸರಿಪಡಿಸಬೇಕೆಂದು ಕೇಳಿಕೊಂಡರು.

**ಶ್ರೀ ಬಸವರಾಜ್ ಬೊಮ್ಮಾಯಿ** ಅವರು ರೈತರ ಬೆಳೆ ವಿಮೆ ಕುರಿತಂತೆ ಮಾನ್ಯ ಹೊರಟ್ಟಿಯವರ ವಾದಕ್ಕೆ ಬೆಂಬಲ ನೀಡುತ್ತ: ಕಳೆದ ಎರಡೂ ವರೆ ವರ್ಷಗಳಿಂದ ನಮ್ಮ ಜಿಲ್ಲೆಗಳಲ್ಲಿ ಬೆಳೆ ವಿಮೆ ಬಗ್ಗೆ ಹೋರಾಟ ನಡೆದಿದೆ. ರಾಜ್ಯ ಮಟ್ಟದ ಸಭೆಯಲ್ಲಿ ಮಾನ್ಯ ಕೃಷಿ ಸಚಿವರು ಸಭೆ ನಡೆಸಿ ವಿಮಾ ಹಣ ಬಿಡುಗಡೆ ಮಾಡುವ ಪ್ರಯತ್ನ ಮಾಡಿದರು. ಸ್ಥಳೀಯ ಅಧಿಕಾರಿಗಳು ಕಳೆದ ಐದು ವರ್ಷದ ಆವರೇಜ್ ಈಲ್ಡ್ ಬಗ್ಗೆ ಸಮರ್ಪಕ ಮಾಹಿತಿ ಕೊಡದೆ ನ್ಯಾಯ ಸಮ್ಮತವಾದ ಬೆಳೆ ವಿಮೆ ವಿಶೇಷವಾಗಿ ನಮ್ಮ ನವಿಲುಗುಂದ ತಾಲೂಕಿನ ರೈತರಿಗೆ ಮುಟ್ಟಿಲ್ಲ. ವಿಮೆ ಹಣದಿಂದ ಅವರು ವಂಚಿತರಾಗಿದ್ದಾರೆ. ಅಧಿಕಾರಿಗಳಿಗೆಲ್ಲ ಹೇಳಿಕೊಂಡು ಬಂದರೂ ಫಲಕಾಣದೆ ಇಂದು ಪ್ರತಿಭಟನೆ ಮಾಡುತ್ತಿದ್ದಾರೆ. ಇಡಿ ನವಲುಗುಂದ ತಾಲೂಕಿನಲ್ಲಿ ಪಕ್ಷಾತೀತವಾಗಿ ರೈತ ಸಮೂಹ ಸೇರಿ ಪ್ರತಿಭಟನೆ ನಡೆದಿದೆ. ಯಾವ ವರಿಷ್ಠಾಧಿಕಾರಿಯೂ ಅವರ ಸಮಸ್ಯೆಯನ್ನು ಬಗೆ ಹರಿಸುವ ಪ್ರಯತ್ನ ಮಾಡಲಿಲ್ಲ. ಈ ಚಳುವಳಿಯನ್ನು ಮುರಿಯಬೇಕು ಎಂದು ಇನ್ನೊಂದು ಗುಂಪು ಬೆಳೆ ವಿಮಾ ರೈತರ ಮೇಲೆ ಕಲ್ಲು ತೂರಾಟ ಮಾಡಿತು. ಈ ಪ್ರಚೋದನೆಯಿಂದ ಪೋಲೀಸರು ರೈತರಿಗೆ ಹಿಗ್ಗಾಮುಗ್ಗಿಯಾಗಿ ಹೊಡೆದಿದ್ದಾರೆ. 35 ಜನರಿಗೆ ಮೂಳೆ ಮುರಿದಿದೆ. ರೈತರ ನ್ಯಾಯ ಬದ್ಧ ಬೇಡಿಕೆಗೆ ಲಾಠಿಯೇ ಉತ್ತರವಾಗಿದೆ. ಹಿರೇಕೆರೂರು, ಹಾವೇರಿ ರೈತರಿಗೂ ಹೀಗೆಯೆ ಆಯಿತು. ರೈತರ ಮೇಲಿನ ಕೇಸನ್ನು ವಾಪಸ್ ಪಡೆಯಬೇಕು. ಸಂಬಂಧಿಸಿದ ಅಧಿಕಾರಿಗಳನ್ನು ಅಮಾನತಿನಲ್ಲಿಡಬೇಕು. ಸರ್ಕಾರ ಹೀಗೆ ಮಾಡದೆ ಹೋದರೆ ಲಾಠಿಗೆ ರೈತರು ತಕ್ಕ ಉತ್ತರ ಕೊಟ್ಟಾರು, ಎಂದು ಹೇಳಿದರು. ಸಹಕಾರ ಸಚಿವ ಶ್ರೀ ಹೆಚ್.ವಿಶ್ವನಾಥ್ ಅವರು, ಈ ವಿಷಯವನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿದೆ. ಸಂಬಂಧ ಪಟ್ಟ ಸಚಿವರು ಇದಕ್ಕೆ ಸದನದಲ್ಲಿ ಉತ್ತರ ಕೊಡುತ್ತಾರೆ ಎಂದರು.

**ವಿಷಯ 10:** ಹಕ್ಕು ಹೋರಾಟದ ರೈತರ ಮೇಲಿನ ಕೇಸುಗಳ ವಾಪಸಾತಿ

2.8.2004ರ ವಿಧಾನ ಸಭೆಯ ಅಧಿವೇಶನದಲ್ಲಿ*[11] **ಶ್ರೀ ನೆಹರು ಚನ್ನಬಸಪ್ಪ ಓಲೆಕಾರ್** ಅವರು ವಿಷಯ ಪ್ರಸ್ತಾಪ ಮಾಡುತ್ತ: ರಾಜ್ಯದ ಅನೇಕ ರೈತರು ಹೋರಾಟವನ್ನು ತಮ್ಮ ಹಕ್ಕುಗಳಿಗಾಗಿ ಮಾಡುತ್ತಿದ್ದ ಸಂದರ್ಭದಲ್ಲಿ ಮನವಿ ಸಲ್ಲಿಸಲು ಹೋದಾಗ ಪೋಲೀಸರು ಕೇಸುಗಳನ್ನು ಹಾಕಿದ್ದಾರೆ. 5.3.04 ರಂದು ಬ್ಯಾಡಗಿಯಲ್ಲಿ ಮನವಿ ಕೊಡಲು ಹೋದ 25 ಜನರ ಮೇಲೆ; 10.11.2003 ರಂದು ಹಿರೇಕೆರೂರಿನಲ್ಲಿ ಸುಮಾರು 192 ಜನರ ಮೇಲೆ ಕೇಸು ಹಾಕಿರುವುದೇ ಅದಕ್ಕೆ ಉದಾಹರಣೆ ಆಗಿದೆ. ಕೃಷಿ ಮಂತ್ರಿಗಳು ಬಂದಾಗ ಅರ್ಜಿ ಸಲ್ಲಿಸಲು ಹೋದವರನ್ನು ತಡೆಗಟ್ಟಿ ಮನವಿ ಕೊಡಲು ಅವಕಾಶ ಕೊಡಲಿಲ್ಲ. ಆಗ ಪ್ರತಿಭಟನೆ ಮಾಡುವ ಸೂಚನೆ ಕಂಡಾಗ ಕೃಷಿ ಸಚಿವರು ಮನವಿ ಪಡೆಯುವ ಬಗ್ಗೆ ಹೇಳಿದರು. ಸದನದ ಸದಸ್ಯ ಶ್ರೀ **ಬಿ.ಸಿ.ಪಾಟೀಲ್** ಅವರು ಕೆಲವು ಹಿರಿಯ ನಾಯಕರ ಜೊತೆ ಹೋದಾಗ, ಹೊರಗೆ ಕುಳಿತಿದ್ದ ಜನರ ಮೇಲೆ ಲಾಠಿ ಛಾರ್ಜು ಆದದ್ದು ಪತ್ರಿಕೆಯಲ್ಲೂ ಪ್ರಕಟವಾಗಿದೆ. ಸರ್ಕಾರ ಜನತೆಯ ಸಮಸ್ಯೆಗಳಿಗೆ ಸ್ಪಂದಿಸದಿದ್ದರೆ ರೈತರು ಬೀದಿಗಿಳಿಯುವ ಪ್ರಸಂಗಗಳು ಬರುತ್ತವೆ. ರಾಣಿಬೆನ್ನೂರಿನಲ್ಲಿಯೂ 20 ಜನರ ಮೇಲೆ ಕೇಸ್ ಬಿದ್ದಿದೆ. ರೈತರು ಸಮಸ್ಯೆಯಲ್ಲಿದ್ದಾರೆ; ಸಂಕಟದಲ್ಲಿದ್ದಾರೆ. ಕೋರ್ಟಿಗೆ ಅಲೆದಾಡುತ್ತ ಹೊಲದ ಕೆಲಸ ಅವರಿಗೆ ಅಸಾಧ್ಯವಾಗಿದೆ. ಹೀಗಾಗಿ ಕೇಸ್‌ಗಳನ್ನು ವಾಪಸ್ ಪಡೆಯಬೇಕು ಎಂದು ಸರ್ಕಾರವನ್ನು ಒತ್ತಾಯಿಸಿದರು.

**ಶ್ರೀ ಜೆ.ಸಿ.ಮಧುಸ್ವಾಮಿ** ಅವರು ಮಾತನಾಡಿ : ನೀರಾ ಗಲಾಟೆ, ಕೆ.ಇ.ಬಿ ಗಲಾಟೆ, ಹೇಮಾವತಿ ಅಥವಾ ಕಾವೇರಿ ನೀರಿನ ಗಲಾಟೆ ಸಂದರ್ಭದಲ್ಲಿ ರಸ್ತೆಯಲ್ಲಿ ನಿಂತು ಹೋರಾಟ ಮಾಡಿದವರಿಗೆ 5–6 ಕೇಸುಗಳನ್ನು ಹಾಕಿ ಕೋರ್ಟಿನಲ್ಲಿ ನಿಲ್ಲಿಸುವ ಕೆಲಸ ಬಿಟ್ಟು, ಸರ್ಕಾರ ಕೇಸ್ ವಾಪಸು ತೆಗೆದುಕೊಳ್ಳಬೇಕು, ಎಂದರು.

**ಶ್ರೀ ಬಿ.ಸಿ. ಪಾಟೀಲ್** ಅವರು, 212 ಜನ ರೈತರ ಮೇಲೆ ಸರ್ಕಾರದವರು ಛಾರ್ಜ್ ಶೀಟನ್ನು ಹಾಕಿದ್ದಾರೆ. ಬೆಳೆ ವಿಮೆ ಮತ್ತು ಸಕ್ಕರೆ ಕಾರ್ಖಾನೆಯ ಬಗ್ಗೆ ನ್ಯಾಯಯುತ ಹೋರಾಟ ಮಾಡಿದ ರೈತರು ಈ ಬರಗಾಲ ಪರಿಸ್ಥಿತಿಯಲ್ಲಿ ಕೂಡ ನ್ಯಾಯಲಯಕ್ಕೆ ಅಲೆಯುವಂಥ ಪರಿಸ್ಥಿತಿ ಬಂದಿದೆ. ಈ 212 ಜನ ಪ್ರತಿ ತಿಂಗಳೂ ಕೋರ್ಟಿಗೆ ಹೋಗಬೇಕೆಂದು ಹೇಳಿದರೆ ಮನೆಯಲ್ಲಿರುವ ಹೆಣ್ಣು

*11. ವಿಧಾನಸಭೆಯ ನಡವಳಿಕೆಗಳು., ಸಂಪುಟ 8, ಭಾಗ I (2.8.2004), ಪು. 272–81

ಮಕ್ಕಳ ಬಂಗಾರವನ್ನು ಒತ್ತೆ ಇಟ್ಟು ಕೋರ್ಟಿಗೆ ಹೋಗುವ ಸಂದರ್ಭ ಇದೆ. ನಮ್ಮ ಕೇಸ್‌ನಲ್ಲಿ ಆದಂಥ ಅನ್ಯಾಯ ಸರಿಪಡಿಸಬೇಕು. ನನ್ನ ಕೇಸ್‌ನಲ್ಲಿ ನನಗೆ 159 ಸಿಆರ್‌ಪಿಸಿ ಅಡಿ ನೋಟೀಸ್ ಸರ್ವ್ ಮಾಡದೆ 'ಬಿ' ರಿಪೋರ್ಟ್ ಕೊಟ್ಟಂಥ ಪೋಲೀಸ್ ಅಧಿಕಾರಿ ಅಮಾನತ್ತು ಆಗಬೇಕು. ರೈತರ ಮೇಲಿನ ಕೇಸ್ ವಾಪಸ್ ತೆಗೆದುಕೊಳ್ಳಬೇಕು ಎಂದರು.

**ಶ್ರೀ ಜಿ.ವಿ.ಶ್ರೀರಾಮರೆಡ್ಡಿ** ಅವರು, 1997ರಲ್ಲಿ ಹಾಲಿನ ದರ ಕಡಿಮೆ ಮಾಡಿದ್ದಾರೆ ಎಂದು ರೈತರು ಹೋರಾಟ ಮಾಡಿದರು. ಅವರ ಮೇಲೆ ಕೇಸ್ ಹಾಕಿದರು. ನಾನೂ ಕೂಡ ಕೋರ್ಟಿಗೆ ಹೋಗುತ್ತಿದ್ದೇನೆ. ಹೋರಾಟಗಾರರನ್ನೆಲ್ಲ 5–6 ವರ್ಷದಿಂದ ತಿರುಗಿಸುತ್ತಿದ್ದಾರೆ. ಕ್ರಿಮಿನಲ್ ನೇಚರ್ ಅಲ್ಲದಿದ್ದಾಗ, ಸಾರ್ವಜನಿಕ ಸಮಸ್ಯೆಗಳಿಗೋಸ್ಕರ ಹೋರಾಡಿದಾಗ ಕೇಸ್ ವಾಪಸು ಪಡೆಯುವಂತೆ ಈ ಸಂದರ್ಭವೂ ಹಾಗೆ ಆಗಿರುವಲ್ಲಿ ದಯವಿಟ್ಟು ಕೇಸ್ ಅನ್ನು ವಾಪಸ್ಸು ಪಡೆಯಬೇಕೆಂದು ಒತ್ತಾಯಿಸಿದರು.

**ಶ್ರೀ ವಾಟಾಳ್ ನಾಗರಾಜ್** ಅವರು, ನಮಗೆ ರೈಲ್ವೆ ವಿಚಾರದಲ್ಲಿ ಅನ್ಯಾಯವಾಗಿದೆ ಎಂದು ಪ್ರತಿ ಸಾರಿ ರೈಲು ತಡೆದಾಗಲೂ ನನ್ನ ಮೇಲೆ, ಜೊತೆಗಿದ್ದವರ ಮೇಲೆ ಕೇಸುಗಳನ್ನು ಹಾಕಲಾಗಿದೆ. ಆ ಮೊಕದ್ದಮೆಗಳು ವರ್ಷಾನುಗಟ್ಟಲೆ ನಡೆದು ಬಂದಿವೆ. ಅಂಥ ಎಲ್ಲ ಮೊಕದ್ದಮೆಗಳನ್ನು ವಿವರವಾಗಿ ಪರಿಶೀಲಿಸಿ ರೈತರ ಮೇಲೆ ಅಂದರೆ ವಿಶೇಷವಾಗಿ ಆಗಿರತಕ್ಕ ಮೂರು ಸಾವಿರ ರೈತರ ಮೇಲಿನ ಕೇಸನ್ನು ಕೂಡಲೇ ಹಿಂತೆಗೆದು ಕೊಳ್ಳುವಂಥ ಕ್ರಮ ಜರುಗಿಸಬೇಕೆಂದು ಕೋರಿದರು.

ವಿಪಕ್ಷ ನಾಯಕ **ಶ್ರೀ ಬಿ.ಎಸ್.ಯಡಿಯೂರಪ್ಪನವರು**, ಸರ್ವೇ ಸಾಮಾನ್ಯವಾಗಿ ತಮಗೆ ನ್ಯಾಯಸಿಗಬೇಕೆಂದು ಹೇಳಿ ಬೀದಿಗಿಳಿದು ಹೋರಾಟ ಮಾಡುವಂಥದ್ದು ಸರ್ಕಾರದ ಗಮನಕ್ಕೆ ತರುವಂಥದ್ದು ಸ್ವಾಭಾವಿಕವಾದ ಸಂಗತಿ. 100ಕ್ಕೆ 90 ಇಂಥ ಕೇಸುಗಳು ನ್ಯಾಯಯುತವಾದವು. ಯಾವುದೇ ಇರಲಿ ವಿಶೇಷವಾಗಿ ರೈತರು, ಕಾರ್ಮಿಕರ ಮೇಲಿರುವ ಎಲ್ಲಾ ಕೇಸುಗಳನ್ನು ಪರಿಶೀಲಿಸಿ, ವಾಪಸ್ ಪಡೆದು ವಿನಾಕಾರಣ ಕೋರ್ಟಿಗೆ ಅಲೆಯುವುದನ್ನು ತಪ್ಪಿಸಿ ಎಂದು ವಿನಂತಿಸಿದರು.

**ಶ್ರೀ ಸಿ.ಎಂ.ಉದಾಸಿ** ಅವರು ಇಡೀ ರಾಜ್ಯಾಂದ್ಯಂತ ಅಕ್ರಮ ಸಾಗುವಳಿ ಮಾಡಿರುವ ರೈತರ ಮೇಲಿನ ಅನೇಕ ಮೊಕದ್ದಮೆಗಳಲ್ಲಿ ವಾಪಸ್ ಪಡೆಯುತ್ತಿದ್ದರೂ, ಕೆಲವು ಹಾಗೆಯೇ ಉಳಿದಿವೆ. ಹಾನಗಲ್ ತಾಲೂಕಿನ ಒಂದು ಹಾಗೂ ಇನ್ನು ಆರು ಪ್ರಕರಣಗಳನ್ನು ಹಾಗೆಯೇ ಬಿಡಲಾಗಿದೆ. ಬೆಳೆ ವಿಮೆಗಾಗಿ ಹೋರಾಡಿದವರ ಮೇಲೆ ರಾಜ್ಯಾದಂತ ಮೊಕದ್ದಮೆ ಹೂಡಿರುವುದಿದೆ. ರಾಣಿಬೆನ್ನೂರು, ಹಿರೇಕೆರೂರು, ಮತ್ತು ಬ್ಯಾಡಗಿಯಲ್ಲಿ ಹೋರಾಟದಲ್ಲಿ ಈ ಸದನದ ಸದಸ್ಯರೂ ಆರೋಪಿಗಳಾಗಿರುವಂಥ, 192 ಜನ ರೈತರು 8 ದಿನ ಜೈಲಿನಲ್ಲಿ ಇರುವಂಥ ಪ್ರಸಂಗ ಬಂದಿದೆ. ವಿದ್ಯುಚ್ಛಕ್ತಿ ಬಳಕೆ, ಮೀಟರ್ ಕೊಡಿಸುವುದು, ನಿಯಮಿತ ವಿದ್ಯುತ್ ಸರಬರಾಜು ಒದಗಣೆ ಇತ್ಯಾದಿ ಸಂದರ್ಭದಲ್ಲಿ ಆಗಿರುವ ಅನ್ಯಾಯದ ವಿರುದ್ಧ ಹೋರಾಟ ಮಾಡಿರುವ ರೈತರ ಮೇಲಿನ ಮೊಕದ್ದಮೆಗಳನ್ನು ವಾಪಸ್ ಪಡೆಯಬೇಕೆಂದು ಕೇಳಿಕೊಂಡರು.

**ಶ್ರೀ ಗೋವಿಂದ ಎಂ.ಕಾರಜೋಳ** ಅವರು, 2002ರಲ್ಲಿ ಬಿಜಾಪುರ ಜಿಲ್ಲೆಯ ಇಂಡಿ ತಾ. ರೈತರ ಭೀಮಾ ನದಿಗೆ ನೀರು ಬಿಡಬೇಕೆಂದು ಹೋರಾಟ ಮಾಡಿದಂಥ ಸಂದರ್ಭದಲ್ಲಿ ಮಹಾರಾಷ್ಟ್ರ ಸರ್ಕಾರದ ಅಧಿಕಾರಿಗಳು ನಮ್ಮ ಇಂಡಿ ತಾಲೂಕಿನ 78 ರೈತರ ಮೇಲೆ ಮೊಕದ್ದಮೆ ಹೂಡಿ, ವಾಹನ ಜಪ್ತಿ ಮಾಡಿ, ಮೋಟಾರು ಜಪ್ತಿಮಾಡಿ, ಒಯ್ದಿದ್ದಾರೆ. ರೈತರು 2 ವರ್ಷದಿಂದ ಸೋಲಾಪುರ ಕೋರ್ಟಿಗೆ ಅಲೆದಾಡುತ್ತಿದ್ದಾರೆ. ಅಂತಾಗಿ ನಮ್ಮ ರಾಜ್ಯದಲ್ಲಿನ ಕೇಸುಗಳನ್ನು ವಾಪಸ್ ಪಡೆವುದಲ್ಲದೆ, ಮಹಾರಾಷ್ಟ್ರ ಸರ್ಕಾರಕ್ಕೂ ವಿನಂತಿಸಿ ವಾಪಸು ಪಡೆಯುವಂತೆ ಕ್ರಮ ಕೈಗೊಳ್ಳಬೇಕು ಎಂದರು. ಶ್ರೀ ಆರ್.ಧ್ರುವನಾರಾಯಣ ಅವರು ಕೂಡ ಮೊಕದ್ದಮೆ ವಾಪಸ್ ಪಡೆಯಲು ಆಗ್ರಹಿಸಿದರು.

ಸಚಿವ **ಶ್ರೀ ಎಂ.ಪಿ.ಪ್ರಕಾಶ್** ಅವರು: ಹೋರಾಟಕ್ಕೆ ಎರಡು ಮುಖಗಳಿವೆ. ಒಂದು ಹೋರಾಟದ ಸಾಫಲ್ಯದ ನಿರೀಕ್ಷೆ; ಇನ್ನೊಂದು ಹೋರಾಟದಿಂದ ಅನಿವಾರ್ಯವಾಗಿ ಅನುಭವಿಸಬೇಕಾದ ತೊಂದರೆಗಳು. ಇವನ್ನು **ಪೋಲಾರ್ ರಿಸಲ್ಟ್** ಎಂದು ಕರೆಯುತ್ತೇವೆ. ವಿಮೆ ವಿಚಾರ, ಬರಗಾಲ ಕಾಮಗಾರಿ ವಿಚಾರದಲ್ಲಿ ಹೋರಾಟದ ಮಾಡಿದ ಕಾರಣವೆ ಮಾನ್ಯ ಬಿ.ಸಿ.ಪಾಟೀಲ್, ಓಲೇಕಾರ್, ಸುರಾಜ್ ಸಜ್ಜನ್ ಅವರು ಸದನಕ್ಕೆ ಬರಲು ಸಾಧ್ಯವಾಯಿತು. ಹೋರಾಟದಿಂದ ಜನಪ್ರಿಯ ವ್ಯಕ್ತಿತ್ವದ ಬೆಳೆಯುವುದಲ್ಲದೆ, ಜೊತೆಗೆ ಸಣ್ಣ ಪುಟ್ಟ ಕಿರಿ ಕಿರಿಗಳಾದ ಪೋಲೀಸ್ ಇಲಾಖೆಯವರು ಹಾಕುವಂಥ ಕೇಸುಗಳೂ ಇರುತ್ತವೆ. ಅವುಗಳನ್ನು ವಾಪಸು

ಪಡೆಯುವ ಬಗ್ಗೆ ಸಹಮತವು ಮಾನ್ಯ ಮುಖ್ಯಮಂತ್ರಿಗಳಿಗೂ ಇದೆ. ಈ ಬಗ್ಗೆ ಕಾಬಿನೆಟ್‌ನಲ್ಲಿ ಇಟ್ಟು ತೀರ್ಮಾನ ಮಾಡಬೇಕಾಗುತ್ತದೆ. ಈ ಬಗ್ಗೆ ಹೇಳುವುದಾದರೆ 14.7.2003 ರಂದು ಮಧ್ಯಾಹ್ನ 1 ಗಂಟೆ ಸುಮಾರಿಗೆ, ಬ್ಯಾಡಗಿ ತಹಸೀಲ್ದಾರ್ ಕಛೇರಿ ಮುಂದೆ, ಅಖಿಲ ಭಾರತ ಪ್ರಗತಿಪರ ಜನತಾದಳ ಸದಸ್ಯರು ಸೇರಿ ರೈತರಿಗೆ ಬೆಳೆ ವಿಮೆ, ದನಗಳಿಗೆ ಮೇವಿನ ವ್ಯವಸ್ಥೆ, ಬರಗಾಲ ಕಾಮಗಾರಿ, ದೀರ್ಘಾವಧಿ ಸಾಲದ ಸೌಲಭ್ಯ ಹಾಗೂ ಇತರ ಬೇಡಿಕೆಗಳನ್ನಿಟ್ಟುಕೊಂಡು, ಜೊತೆಗೆ ತಂದ ಎತ್ತು, ಕುರಿ, ಎತ್ತಿನ ಬಂಡಿ ಸಮೇತ ತಹಸೀಲ್ದಾರ್ ಕಾರ್ಯಾಲಯಕ್ಕೆ ನುಗ್ಗಿದರೆಂದು (ಹಾಲಿಶಾಸಕ) ನೆಹರು ಚನ್ನಬಸಪ್ಪ ಓಲೆಕಾರ ಅವರು ಆರೋಪಿತರಾಗಿದ್ದಾರೆ. ಇವರ ಜೊತೆಯ ನಾಲ್ಕು ಜನರೂ ಸೇರಿ ಮಾಡಿದ ಪ್ರಚೋದನೆಯಿಂದ, ಕಛೇರಿ ಕೆಲಸಕ್ಕೆ ಅಡೆ ತಡೆ ಮಾಡಿ, ಅವಾಚ್ಯ ಬೈಗಳು ಬೈದು ಕಿಟಕಿ ಗಾಜುಗಳನ್ನು ಕಲ್ಲು ಮತ್ತು ಚಪ್ಪಲಿಯಿಂದ ಒಡೆದು ಹಾಕಿ, ತಹಸೀಲ್ದಾರ್ ಮತ್ತು ಸಿಬ್ಬಂದಿಯವರಿಗೆ ಘಾಯಗೊಳಿಸಿ ಜೀವಭಯ ಹಾಕಿ ಸುಮಾರು 1500 ರೂ. ಗಳ ನಷ್ಟ ಮಾಡಿದ್ದಾರೆ. ಈ ಸಂಬಂಧ ಬಸವರಾಜ ಶಿವಪ್ಪ, ನೆಹರು ಚನ್ನಬಸಪ್ಪ ಓಲೆಕಾರ ಹಾಗೂ ಇತರೆ 17 ಮಂದಿ ವಿರುದ್ಧ ಪ್ರಕರಣ ದಾಖಲು ಮಾಡಿದೆ. ಕೆಲವರನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಲಾಗಿದೆ. ಹಿರೇಕೆರೂರು ಪಟ್ಟಣದಲ್ಲಿ ಪ್ರವಾಸಿ ಮಂದಿರದ ಬಳಿ ನಡೆಯುತ್ತಿದ್ದ ಸರ್ಕಾರದ ಕಾರ್ಯಕ್ರಮಗಳಿಗೆ ಬಿ.ಸಿ.ಪಾಟೀಲ್ ಮತ್ತು 2 ಸಾವಿರ ಜನರು, ತಡೆ ಒಡ್ಡುವ ಕಾರಣದಿಂದ ಹೋಗುವಲ್ಲಿ, ಪೋಲೀಸರು ತಡೆದದ್ದು, ಬಿ.ಸಿ.ಪಾಟೀಲರ ಪ್ರಚೋದನಕಾರಿ ಭಾಷಣದ ಕಾರಣ, ದೊಂಬಿ, ಗಲಾಟೆ ನಡೆದು ಪೋಲೀಸ್ ಅಧಿಕಾರಿ, ಸಿಬ್ಬಂದಿ ವರ್ಗದ ಮೇಲೆ ಕಲ್ಲು ತೂರಾಟ, ಗಾಯ ಮಾಡಿದ್ದು ಮಹಿಳಾ ಪಿ.ಸಿ ಮಲ್ಲಮ್ಮ ಅವರಿಗೆ ತಲೆಗೆ ಗಾಯ, ಕೆ.ಎಸ್.ಆರ್.ಟಿಸಿ. ಬಸ್ಸುಗಳಿಗೆ ಜಖಂ ಮಾಡಿ ಸರ್ಕಾರಿ ಜೀಪಿಗೆ ಬೆಂಕಿ ಹಚ್ಚಿದ್ದು ಒಟ್ಟು ರೂ. 1,30,00000ರಷ್ಟು ಹಾನಿಯಾದದ್ದು, ದೊಂಬಿ ನಿರತ ಗುಂಪು ಚದುರಿಸಲು ಲಾಠಿ ಪ್ರಹಾರ, ಅಶ್ರುವಾಯು ಪ್ರಯೋಗ ಆಗಿದ್ದು ಕುರಿತೆಲ್ಲ ಹೇಳಿದರು; 211 ಮಂದಿ ವಿರುದ್ಧ ಪ್ರಕರಣ ದಾಖಲಿಸಿ, 193 ಜನರ ದಸ್ತಗಿರಿ, ಹಾಗು ಕೆಲವರಿಗೆ ದಸ್ತಗಿರಿ ವಾರೆಂಟ್ ಹೊರಡಿಸಿರುವ ಬಗ್ಗೆಯೂ ತಿಳಿಸಿದರು.

ಇನ್ನೊಂದು ವಿಶೇಷವೆಂದರೆ ರೈತರ ಸಾಮಾಜಿಕ ಸೌಲಭ್ಯ ಚಿಂತನೆಯ ಕುರುಹಾಗಿ 20.3.2003ರ ವಿಧಾನ ಪರಿಷತ್ತಿನ ಅಧಿವೇಶನದಲ್ಲಿ ಶ್ರೀ **ಬಿ.ಸಿ.ಪಾಟೀಲ್** ಅವರು ಗದಗ-ಬಿಜಾಪುರ ರೈಲ್ವೆ ಲೈನನ್ನು ಬ್ರಾಡ್‌ಗೇಜಿಗೆ

ಪರಿವರ್ತಿಸಲು ಒತ್ತಾಯಿಸಿ ಬಿಜಾಪುರ, ಬಾಗಲಕೋಟೆ ರೈತರು ಪಕ್ಷಾತೀತವಾಗಿ ಸತ್ಯಾಗ್ರಹ ನಿರತರಾಗಿರುವ ಬಗ್ಗೆ ಗಮನಸೆಳೆದಿರುವುದಾಗಿದೆ. ಶ್ರೀ ಹೆಚ್.ಕೆ.ಪಾಟೀಲರು ಮಾನಿಟರಿಂಗ್ ಸರ್ವೆ ಹಾಗೂ ಬಜೆಟ್‌ಕೂಡ ಆಗಿರುವ ಬಗ್ಗೆ, ಹೋರಾಟ ನಡೆದಿರುವ ಬಗ್ಗೆ ಮುಖ್ಯಮಂತ್ರಿ ಹಾಗೂ ಶಾಸಕರ ಸಭೆ ನಡೆಸುವ ಬಗ್ಗೆ ತಿಳಿಸಿದುದಾಗಿದೆ.

**ವಿಷಯ 11:** ವಿಶ್ವವಾಣಿಜ್ಯ ಸಂಘಟನೆಯ ಹಾಂಕಾಂಗ್ ಮೇಳ; ರೈತ ಸಂಘಟನೆಗಳ ಪ್ರತಿಭಟನೆ

ಸಂಘಟನೆಯ 149 ರಾಷ್ಟ್ರಗಳಿಗೆ ಡಬ್ಲುಟಿಓನ 12ನೇ ಸಚಿವ ಮಟ್ಟದ ನಿಯೋಗವು ತಿಕ್ಕಾಟಗಳ ನಡುವೆಯೆ ಅಂತಿಮ ಕರಡು ಮಸೂದೆಯನ್ನು ರೂಪಿಸಿದ್ದನ್ನು ಗಮನಿಸಿತು. ಸಂಧಾನದ ನಂತರ ಪರಿಷ್ಕೃತ ಕರಡು ಮಸೂದೆಗೆ ನಿಯೋಗ ಮಟ್ಟದ ಸಭೆ ಅನುಮೋದನೆ ನೀಡಿತು. ಈ ಕರಡು ಮಸೂದೆ ಅನ್ವಯ ಶ್ರೀಮಂತ ರಾಷ್ಟ್ರಗಳೂ ತಮ್ಮಲ್ಲಿನ ಕೃಷಿ ಸಬ್ಸಿಡಿಯನ್ನು 2013ರೊಳಗೆ ಪೂರ್ಣವಾಗಿ ಕಡಿತಗೊಳಿಸಬೇಕು. ಹತ್ತಿ ಸಬ್ಸಿಡಿಯನ್ನು ಮುಂದಿನ ವರ್ಷವೇ ಕಡಿತಗೊಳಿಸಬೇಕು. 2010 ರೊಳಗೆ ಕೃಷಿ ಸಬ್ಸಿಡಿಯನ್ನು ಕಡಿತಗೊಳಿಸಬೇಕೆಂದುದ್ದಕ್ಕೆ ಐರೋಪ್ಯ ರಾಷ್ಟ್ರಗಳು ತೀವ್ರ ವಿರೋಧ ವ್ಯಕ್ತಪಡಿಸಿದ್ದುವು. ಅಂತಾಗಿ ಗಡುವನ್ನು 2013ಕ್ಕೆ ವಿಸ್ತರಿಸಲಾಯಿತು. ದೋಹಾ ಘೋಷಣೆಯ ಸಂಧಾನ ಪ್ರಕ್ರಿಯೆಯನ್ನು 2006 ರೊಳಗೆ ಮುಗಿಸಲು ಇದು ಸಹಕಾರಿ. ಭಾರತದ ಸಲಹೆಯಾದ ವಿಶೇಷ ಪ್ಯಾಕೇಜ್‌ಗೂ ತುಸು ಮಾನ್ಯತೆ ದೊರೆತಿತು. ಭಾರತಕ್ಕೆ ಅಗತ್ಯಕ್ಕಿಂತ ಹೆಚ್ಚು ಕೃಷಿ ಉತ್ಪನ್ನಗಳು ಆಮದಾದಲ್ಲಿ ಉತ್ಪನ್ನಗಳ ರಕ್ಷಣೆಗಾಗಿ ಆಮದು ಉತ್ಪನ್ನಗಳ ಮೇಲೆ ಸುಂಕ ವಿಧಿಸಬಹುದು. ಶ್ರೀಮಂತ ರಾಷ್ಟ್ರಗಳಲ್ಲಿ ಸಬ್ಸಿಡಿ ಹೊಂದಿರುವ ಯಾವ ಉತ್ಪನ್ನಗಳನ್ನು ಭಾರತಕ್ಕೆ ರಫ್ತು ಮಾಡುವಂತಿಲ್ಲ. ಅವುಗಳು ತಮ್ಮಲ್ಲಿನ ಕೃಷಿ ಉತ್ಪನ್ನಗಳಿಗೆ ಸಬ್ಸಿಡಿಯನ್ನು ಹಂತ ಹಂತ ಕಡಿತಗೊಳಿಸಬೇಕಿದೆ. ಅಂತಾಗಿ ಭಾರತದ ರೈತರೂ ಸ್ಪರ್ಧೆಯೊಡ್ಡಬಹುದು ಎಂಬುದು ಕೇಂದ್ರ ವಾಣಿಜ್ಯ ಸಚಿವರ ಮಾತು ಆಗಿತ್ತು. (20.12.2005) **ಹಾಂಕಾಂಗ್‌ನಲ್ಲಿ ಹಲವಾರು ರೈತ ಸಂಘಟನೆಯ ಕಾರ್ಯಕರ್ತರು ಸಮಾವೇಶ ನಡೆಯುತ್ತಿದ್ದ ಕಟ್ಟಡದ ಮುಂಭಾಗದಲ್ಲಿ ಡಬ್ಲೂಟಿಓ ನೀತಿಯನ್ನು ವಿರೋಧಿಸಿ ಪ್ರತಿಭಟನೆ ನಡೆಸಿದರು. ಕೊರಿಯ, ಇಂಡೋನೇಷ್ಯಾದ ರೈತರೂ ಪ್ರತಿಭಟನೆಯಲ್ಲಿ ಪಾಲ್ಗೊಂಡಿದ್ದರು.** ರಾಜ್ಯ ರೈತ ಸಂಘದ ನಾಯಕಿ ಶ್ರೀಮತಿ ಚುಕ್ಕಿ ನಂಜುಂಡಸ್ವಾಮಿ ಹಾಗು ಮಧ್ಯ ಪ್ರದೇಶದ ಕಿಸಾನ್ ಸಂಘರ್ಷ ಸಮಿತಿ ನಾಯಕ, ಶಾಸಕ ಸುಧೀರ್ ಮಿಶ್ರಾ ನೇತೃತ್ವದಲ್ಲಿ ಈ ಪ್ರತಿಭಟನೆ ನಡೆಯಿತು.

**ಡಬ್ಲುಟಿಓ ಸಂಬಂಧೀ ಒಪ್ಪಂದಗಳು :** ಗ್ರಾಮೀಣ ವಲಯಕ್ಕೆ ಹಾನಿಯಾಗುವ ವಿಶ್ವ ವ್ಯಾಪಾರ ಸಂಘಟನೆಯ ಯಾವುದೇ ಒಪ್ಪಂದ ಭಾರತಕ್ಕೆ ಸ್ವೀಕಾರಾರ್ಹವಲ್ಲ. ದೇಶದ ರೈತರ ರಕ್ಷಣೆಗೆ ಭಾರತ ಮುಂದಾಗುತ್ತದೆ. ದೇಶದ ಒಟ್ಟು ಆಂತರಿಕ ಉತ್ಪನ್ನದ ಶೇ.22 ರಷ್ಟು ಕೃಷಿ ಕ್ಷೇತ್ರವು ಒದಗಿಸಿವೆ, ಎಂದೆಲ್ಲ ಮಾಸ್ಕೋದಲ್ಲಿ ನಡೆದ ಜಿ8 ರಾಷ್ಟ್ರಗಳ ಹಣಕಾಸು ಸಚಿವರ ಸಭೆಯಲ್ಲಿ ಕೇಂದ್ರ ಸಚಿವ ಪಿ.ಚಿದಂಬರಮ್ ತಿಳಿಸಿದ ಸಂಗತಿ ವರದಿಗೊಂಡಿತ್ತು (12.2.06). 2 ದಿನಗಳ ಕಾಲ ನಡೆದ ಡಬ್ಲುಟಿಓ ಸಂಬಂಧದ ಜಿ–6 ದೇಶಗಳಾದ ಭಾರತ, ಅಮೇರಿಕ, ಐರೋಪ್ಯ ಒಕ್ಕೂಟ, ಆಸ್ಟ್ರೇಲಿಯಾ, ಜಪಾನ್ ಮತ್ತು ಬ್ರೆಜಿಲ್ ದೇಶಗಳ ಪ್ರತಿನಿಧಿಗಳ ಸಭೆಯಲ್ಲಿ ಕೃಷಿ ಕ್ಷೇತ್ರ ಸಂಬಂಧದ ರಾಜೀಸೂತ್ರಕ್ಕೆ ಸಮ್ಮತವಿಲ್ಲದೆ ಸಭೆ ವಿಫಲವಾಯಿತು. ದೋಹಾ ಮಾತುಕತೆಯ ನಂತರ ಕೃಷಿ ಸಬ್ಸಿಡಿ, ಕೃಷಿಯೇತರ ಉತ್ಪನ್ನಗಳಿಗೆ ಮಾರುಕಟ್ಟೆ ಪ್ರವೇಶ ಮತ್ತು ಸೇವಾ ಕ್ಷೇತ್ರಗಳ ಸಂಬಂಧದಲ್ಲಿ ಒದಗಿದ ಬಿಕ್ಕಟ್ಟು ಹಾಗೆಯೇ ಯಥಾಸ್ಥಿತಿ ಇರುವಂತಾಯಿತು. (13.3.06)

**ವಿಷಯ 12:** ಜಿ–8 ಶೃಂಗ ಸಭೆಯ ನಡವಳಿಕೆಗಳು

ಜಿ.ಶೃಂಗ ಸಭೆಯ ಉಗಮ 1975ರಲ್ಲಿ ಆಯಿತು. ಆ ಸಭೆ ವಿಶ್ವದ ಬಲಿಷ್ಠ ಕೈಗಾರಿಕಾ ಸಂಪನ್ನ ರಾಷ್ಟ್ರಗಳ ಅನೌಪಚಾರಿಕ ಸಮಾವೇಶ. ಫ್ರಾನ್ಸ್‌ನ ಆತಿಥ್ಯದಲ್ಲಿ ನಡೆದ ಮೊದಲ ಸಭೆಯಲ್ಲಿ ಜರ್ಮನಿ, ಜಪಾನ್, ಅಮೆರಿಕ, ಬ್ರಿಟನ್ ಹಾಗೂ ಇಟಲಿ ದೇಶಗಳು ಪಾಲ್ಗೊಂಡಿದ್ದ ಆ ಸಭೆ ಜಿ–6 ಶೃಂಗಸಭೆ ಎನಿಸಿತು. ಅದರ ಅಜೆಂಡಾ ವಿಶ್ವದಲ್ಲಿ ತೈಲಬಿಕ್ಕಟ್ಟು ಕುರಿತುದುದಾಗಿತ್ತು. ಸರದಿ ಪ್ರಕಾರ ಸಭೆ ಆಯೋಜನೆಗೆ ತೀರ್ಮಾನವೂ ಆಯಿತಾಗಿ 1976ರ ಸಭೆಗೆ ಕೆನಡಾ ಕೂಡ ಬಂದದ್ದರಿಂದ ಜಿ–7 ಶೃಂಗ ಎನಿಸಿತು. 1998 ರವರೆಗೆ 7 ದೇಶಗಳು ಮಾತ್ರ ಇದ್ದು 98ರ ಶೃಂಗ ಸಭೆಯಲ್ಲಿ ರಷ್ಯಾವು ಕೂಡಲಾಗಿ ಜಿ–8 ರಾಷ್ಟ್ರಗಳ ಶೃಂಗಸಭೆ ಆಯಿತು. ಈ ಸಭೆ ಶಾಶ್ವತ ಕಚೇರಿಯನ್ನು ಹೊಂದದ ಅನೌಪಚಾರಿಕ ಶೃಂಗ ಸಭೆಯಾದರೂ ಸದಸ್ಯ ದೇಶಗಳ ಆರ್ಥಿಕ ಮತ್ತು ರಾಜಕೀಯ ನಿಲುವುಗಳು, ಬದ್ಧತೆಗಳ ಪ್ರಕಟಣೆಯಿಂದಾಗಿ ವಿಶ್ವದ ಆರ್ಥಿಕ ಆಗು ಹೋಗುಗಳ ಬಗ್ಗೆ ಪ್ರಭಾವ ಬೀರುತ್ತವೆ. ಅಂತಾಗಿ ವಿಶ್ವಸಂಸ್ಥೆ, ವಿಶ್ವಬ್ಯಾಂಕ್, ವಿಶ್ವ ವ್ಯಾಪಾರ ಸಂಘಟನೆಗಳ ಕಾರ್ಯಾನುಷ್ಠಾನಗಳ ಮೇಲೆ ಈ ಶೃಂಗ ಸಭೆ ತನ್ನ ಪ್ರಭಾವವನ್ನು ಬೀರುತ್ತದೆ. ಪ್ರತಿ ವರ್ಷದ ಬೇಸಿಗೆಯಲ್ಲಿ ನಡೆಯುವ ಈ ಶೃಂಗಸಭೆ 2006ರಲ್ಲಿ ರಷ್ಯಾದ ಸೆಂಟ್‌ಪೀಟರ್ಸ್‌ಬರ್ಗ್‌ನಲ್ಲಿ ಸೇರಿತು. ಜಿ–8 ಸದಸ್ಯ ರಾಷ್ಟ್ರಗಳ ಸಮಾವೇಶಕ್ಕೆ ಅಭಿವೃದ್ಧಿ

ಸಾಧಕ ದೇಶಗಳ ಮುಖ್ಯಸ್ಥರಿಗೂ ಆಹ್ವಾನವಿರುತ್ತದೆ. ಹಾಗಾಗಿ ಭಾರತದ ಪ್ರಧಾನಿ ಮನಮೋಹನ್ ಸಿಂಗ್, ಚೀನಾ, ಬ್ರೆಜಿಲ್, ಮೆಕ್ಸಿಕೊ, ದಕ್ಷಿಣ ಆಫ್ರಿಕಾ, ಕಝಕಸ್ತಾನ್, ಕಾಂಗೈ ಗಣರಾಜ್ಯದ ಮುಖ್ಯಸ್ಥರು, ವಿಶ್ವಸಂಸ್ಥೆ ಮಹಾ ಕಾರ್ಯದರ್ಶಿ ಕೋಫಿ ಆನ್ನಾನ್ ಪಾಲ್ಗೊಂಡ ಸಭೆ ಅದಾಗಿತ್ತು.

ಕೃಷಿ ರಿಯಾಯಿತಿ ಶ್ರೀಮಂತ ರಾಷ್ಟ್ರಗಳಲ್ಲಿ ಅನೈತಿಕವಾಗಿದ್ದರೂ ಬಡ ರಾಷ್ಟ್ರಗಳನ್ನು ದುರ್ಬಲಗೊಳಿಸುವ ಕ್ರಮವಾಗಿದ್ದರೂ ಕೃಷಿ ಸಬ್ಸಿಡಿ ಕಡಿತಕ್ಕೆ ಜಿನೆವಾದಲ್ಲಿ ನಡೆದ ಡಬ್ಲುಟಿಓ ಸಭೆಯಲ್ಲಿ ಅಮೆರಿಕಾ ನಿರಾಕರಿಸಲಾಗಿ ಮಾತುಕತೆ ಮುರಿದು ಬಿದ್ದಿತ್ತು. 2006ರ ಜಿ.8 ಶೃಂಗ ಸಭೆಯಲ್ಲಿ ಕೃಷಿ ಸಬ್ಸಿಡಿ ಕಡಿತಕ್ಕೆ ಈ ಹಿಂದೆ ಒಪ್ಪದಿದ್ದ ಜಿ–8 ರಾಷ್ಟ್ರಗಳು ಈ ಸಭೆಯಲ್ಲಿ ಸಮ್ಮತಿಸಿದುವು. ಹಾಗು ಜಿನೇವಾದ ವೈಫಲ್ಯದ ಬಗ್ಗೆ ವಿಷಾದ ವ್ಯಕ್ತಪಡಿಸಿದ ಅವು ಕೃಷಿ ಮತ್ತು ಕೈಗಾರಿಕಾ ಉತ್ಪನ್ನಗಳ ವ್ಯಾಪಾರದಲ್ಲಿ ಮಾರುಕಟ್ಟೆ ವ್ಯವಹಾರಗಳನ್ನೂ ಸುಧಾರಿಸಲು ಒಪ್ಪಿದವು. ಕೃಷಿಗೆ ಅನ್ವಯವಾದ ಆಂತರಿಕ ಬೆಂಬಲವನ್ನು 2013ರ ವೇಳೆಗೆ ಪೂರ್ಣವಾಗಿ ನಿಲ್ಲಿಸುವ ಬಗ್ಗೆಯೂ ಭರವಸೆ ನೀಡಿದವು. ಇದಕ್ಕೆ ಅಭಿವೃದ್ಧಿ ಸಾಧಕ ರಾಷ್ಟ್ರಗಳಾದ ಭಾರತ ಹಾಗು ಇತರ ನಾಲ್ಕು ಹೊರಸಂಪರ್ಕ ರಾಷ್ಟ್ರಗಳು, ಕೇವಲ ತಮ್ಮ ಸುರಕ್ಷೆಗೆ ಶ್ರೀಮಂತ ರಾಷ್ಟ್ರಗಳು ಕಾಳಜಿ ವಹಿಸುತ್ತ ಅವು ವ್ಯಾಪಾರೀ ವಲಯದಲ್ಲಿ ಸೃಷ್ಟಿಸಿದ ತೊಡಕುಗಳನ್ನು ನಿವಾರಿಸಲು ಜಿ–8 ರಾಷ್ಟ್ರಗಳಿಗೆ ತೀವ್ರವಾಗಿ ಆಗ್ರಹ ಪಡಿಸಿದುದೇ ಕಾರಣವಾಗಿತ್ತು. ಅದಾಗಿ ಅಭಿವೃದ್ಧಿಸಿದ್ಧಿ ರಾಷ್ಟ್ರಗಳಲ್ಲಿನ ರಫ್ತು ರಿಯಾಯಿತಿ, ದುಬಾರಿ ದರ ಮುಂತಾದ ವಿಶ್ವ ಕೃಷಿ ಮಾರುಕಟ್ಟೆ ವೈಪರೀತ್ಯಗಳನ್ನು ತಿಳಿದು ವ್ಯಾಪಾರೀಕರಣ ಸಮತಟ್ಟು ಸೃಷ್ಟಿ, ಸಂಪತ್ತು ಹಂಚಿಕೆ ಉದ್ಯೋಗ ಸೃಷ್ಟಿ ಡಬ್ಲುಟಿಓ ಅವಕಾಶ ಕಲ್ಪಿಸಿರುವಲ್ಲಿ ಅಸಮಾನತೆ ಬೇಡ ಎಂದು ಭಾರತ ಚೀನಾ ಬ್ರೆಜಿಲ್, ದ.ಆಫ್ರಿಕಾ, ಮೆಕ್ಸಿಕೋ ರಾಷ್ಟ್ರಗಳ ಅಭಿಪ್ರಾಯಕ್ಕೆ ಜಿ8 ರಾಷ್ಟ್ರಗಳು ಮಣಿದವು. (18.7.2006)

ಜಿನೀವಾದಲ್ಲಿ ನಡೆದ ಮಾತುಕತೆ ಸದ್ಯಕ್ಕೆ ಸ್ಥಗಿತವಾಗಿದೆ, ಮಾತುಕತೆ ಮುರಿದು ಬಿದ್ದಿಲ್ಲ ಎಂಬುದು ರೈತರ ಸಬ್ಸಿಡಿ ಸಂಬಂಧದಲ್ಲಿ. ಅಂತರಾಷ್ಟ್ರೀಯ ವಾಣಿಜ್ಯ ವ್ಯವಹಾರದಲ್ಲಿನ ಹೆಚ್ಚಿನ ಪಾರದರ್ಶಕತೆ ಕುರಿತು ಡಬ್ಲುಟಿಓದ ಮಹಾಕಾರ್ಯದರ್ಶಿ ಪಾಸ್ಕಲ್ ಲಾಮಿ ಅವರ ಅಭಿಪ್ರಾಯವಾಗಿತ್ತು. ಅಮೆರಿಕ ತನ್ನ ರೈತರಿಗೆ 2005ರಲ್ಲಿ 2200 ಕೋಟಿ ಡಾಲರ್‌ನಷ್ಟು ಸಬ್ಸಿಡಿ ನೀಡಿತು. ಆ ಪ್ರಮಾಣವನ್ನು ತಗ್ಗಿಸಲು ಅದು ಸಿದ್ಧವಿಲ್ಲ. ಅದಾಗಿ ಸಂಧಾನ ಸ್ಥಗಿತವಾಗಿತ್ತು.

ಅತಿಯಾದ ಸರ್ಕಾರಿ ಸಬ್ಸಿಡಿ ಪಡೆದ ಶ್ರೀಮಂತ ರಾಷ್ಟ್ರಗಳ ರೈತರ ಉತ್ಪನ್ನಗಳನ್ನು ಅತಿ ಸುಲಭದ ದರದಲ್ಲಿ ಭಾರತದಂಥ ಅಭಿವೃದ್ಧಿ ಸಾಧಕ ರಾಷ್ಟ್ರದಲ್ಲಿ ಮಾರಲು ಅವಕಾಶವಾದರೆ ನಮ್ಮ ರೈತರು ಶಾಶ್ವತ ಬಡವರಾದಾರು. ಭಾರತೀಯ ಶ್ರೀಮಂತ ರೈತರಿಗೂ ಅಮೇರಿಕ ಯುರೋಪುಗಳ ಕೃಷಿ ಉತ್ಪನ್ನಗಳ ಬೆಲೆಯ ಸವಾಲನ್ನು ಎದುರಿಸುವುದು ಕಷ್ಟವಾಗುತ್ತದೆ. ಉಳಿದ ಸಣ್ಣ ಮತ್ತು ಮಧ್ಯಮ ರೈತರ ಪಾಡೇನು? ಈ ಸಂದರ್ಭದಲ್ಲಿಯೇ 'ಜಿ' ರಾಷ್ಟ್ರಗಳ ಕೂಟದಲ್ಲಿ ಒಡಂಬಡಿಕೆ, ಸಂಧಾನಗಳು ಮುಕ್ತಾಯ ಇನ್ನೂ ಕಂಡಿಲ್ಲ. ಜಾಗತಿಕ ವ್ಯವಹಾರವೊಂದು ಸಂಕೀರ್ಣ ವಿಷಯ. ಭಾರತವು ಸಣ್ಣ ಮತ್ತು ಮಧ್ಯಮ ವರ್ಗದ ರೈತರ ಹಿತ ಕಾಪಾಡಬೇಕಿದೆ; ಬೃಹತ್ ಉದ್ಯಮಗಳ ಅಗತ್ಯಗಳನ್ನು ಪೂರೈಸಬೇಕಾದ ಸಂದಿಗ್ಧ, ಭಾರತಕ್ಕಿದೆ. ವಿದೇಶಿ ಕೃಷಿ ಉತ್ಪನ್ನಗಳ ಮಾರಾಟಕ್ಕೆ ಅವಕಾಶವಾದರೆ ನಮ್ಮ ರೈತರಿಗೆ ಅಧೋಗತಿ; ಅವಕಾಶ ಬಿಟ್ಟರೆ ಉದ್ಯಮಗಳಿಗೆ ಬೇಕಾದ ಸರಕು ಮತ್ತು ಸಾಧನೋಪಕರಣಗಳ ಆಮದಿಗೆ ಧಕ್ಕೆ. ಈ ಬಿಕ್ಕಟ್ಟಿನ ಪರಿಹಾರ ವಿಳಂಬವಾಗುತ್ತಲೇ ಇರುವುದು ಸೂಕ್ತವಲ್ಲ. ಇಲ್ಲಿ ಅಭಿವೃದ್ಧಿ ಸಿದ್ಧಿ ರಾಷ್ಟ್ರಗಳ ಅನುಕಂಪ ಅಭಿವೃದ್ಧಿ ಸಾಧಕ ರಾಷ್ಟ್ರಗಳ ಮೇಲೆ ಎಂಬುದರ ಬದಲು ಸಮರಸ ಧರ್ಮ ಬೆಳೆದರೆ, ಸ್ವಹಿತ ರಾಜಕಾರಣ ಮರೆಯಾದೀತು. ಸಂಘಟನೆಯ ಸಂಧಾನಕ್ಕೆ ಬೆಲೆ ಬಂದೀತು. ಇಲ್ಲವಾದರೆ ಅದು ಆಧುನಿಕ ಊಳಿಗಮಾನ್ಯ ಪ್ರತಿಷ್ಠಾನವಾದೀತು.

ಯುರೋಪ್ ಮಾದರಿಯಲ್ಲಿ ಸಮೃದ್ಧಿ ಕಂಡದ್ದು ಕೈಗಾರಿಕಾ ಸಂಸ್ಕೃತಿಯಲ್ಲಿದೆ; ಭಾರತದ ಸಮೃದ್ಧತೆ ಇರುವುದು ಮಹಿಳೆಯರ ಸ್ವತ್ತೂ ಆಗಿದ್ದ ಕೃಷಿ ಸಂಸ್ಕೃತಿಯಲ್ಲಿ. ಕೈಗಾರಿಕೆ ಸಂಸ್ಕೃತಿ, ಅನುಭೋಗ ಸಾಮರ್ಥ್ಯಕ್ಕಿಂತ ಅತ್ಯಧಿಕ ಉತ್ಪಾದನೆ ಅನಿವಾರ್ಯವಾಗುತ್ತದೆ. ಆಗ ಮಾರುಕಟ್ಟೆ ವಿಸ್ತರಣೆ, ಕಚ್ಚಾವಸ್ತು ಸಂಗ್ರಹಕ್ಕೆ ಸಾಮ್ರಾಜ್ಯಶಾಹಿ ಧೋರಣೆ ಬೆಳೆಯುತ್ತದೆ. ಭಾರತದಲ್ಲಿ ಇದೆಲ್ಲ ಹೇರಿಕೊಂಡು ಬಂದ ಪರಂಪರೆಯಾಗಿ ಸ್ವಾತಂತ್ರ್ಯ ನಂತರವೂ ಬದಲಾಗಲಿಲ್ಲ. ಜಾಗತೀಕರಣದ ಅಬ್ಬರದಲ್ಲಿ ಅದಕ್ಕೆ ಮಗದಷ್ಟು ಆಕ್ರಮಣ ರೂಪ ಬರುತ್ತಿದೆ. ನಮ್ಮಲ್ಲಿ ಜನರನ್ನು ಬಾಗಿಸಿ ಕೃಷಿ ಸಂಸ್ಕೃತಿಯ ವೈವಿಧ್ಯತೆಯ ಅನಾವರಣದ ಬದಲಿಗೆ ತಮಗೆ ಬೇಕಾದ ಏಕಮುಖಿ ಆವರಣಕ್ಕೆ ಒಗ್ಗಿಸಿಕೊಳ್ಳುವ ಪ್ರಯತ್ನಗಳು ನಡೆಯುತ್ತಿದೆ. ಜನರಿಗೆ ಬೇಕಾಗುವಂತೆ ಒಲಿಯುವ ಕೆಲಸ ಆಗುತ್ತಿಲ್ಲ ಎಂಬುದು ಶ್ರೀ ಅರವಿಂದ ಚೊಕ್ಕಾಡಿಯವರ ಅಭಿಪ್ರಾಯ. ಕೃಷಿ ವಿಷಯದಲ್ಲಿಯಂತು ಇದು ನಿಜವಾಗುತ್ತಿದೆ. ಅಂತಾಗಿ ಸರಕಾರಕ್ಕೆ ಅದು ಭಾರವೆನಿಸಿ ಬಹುರಾಷ್ಟ್ರೀಯ ಕಂಪೆನಿಗಳು ಉದ್ಯಮಗಳು ಅದರ ಮೇಲೆ ತಮ್ಮ ಹಿಡಿತವನ್ನು ಸ್ಥಾಪಿಸಲೆಳೆಸುತ್ತಿವೆ. ಬೀಜ, ಹಾಗೂ ಬೆಳೆಗಳ ಬೆಲೆ ವಿಷಯಗಳಲ್ಲಿ ಇದೆಲ್ಲ ಎದ್ದು ಕಾಣುವ ಅಂಶಗಳಾಗಿವೆ.

ಈಚೆಗೆ ಭಾರತವು ಹತ್ತು ರಾಷ್ಟ್ರಗಳಾದ ದಕ್ಷಿಣ ಏಷ್ಯಾ ರಾಷ್ಟ್ರಗಳ (ಅಸಿಯಾನ್) ನಡುವೆ ಮುಕ್ತ ವಾಣಿಜ್ಯ ಒಪ್ಪಂದಕ್ಕಾಗಿ ವಿಚಾರ ವಿನಿಮಯ ನಡೆದಿದೆ. ಒಪ್ಪಂದದ ಚೌಕಟ್ಟು ಮುಂದಿನ ಕೆಲವಾರು ತಿಂಗಳಲ್ಲಿ ಸಿದ್ಧವಾಗುವ ಬಗ್ಗೆ ಆಸೆಯು, ಭಾರತ ಅಸಿಯಾನ್ ಪ್ರಮುಖದ ಸಭೆಯ ನಂತರ ಪುಟಗೊಂಡಿದೆ. ಫಿಲಿಪೈನ್ಸ್‌ನ ಸಿಬಾ ನಗರದಲ್ಲಿ ಈ ಶೃಂಗ ಸಭೆ ನಡೆಯಿತು. ಪ್ರಧಾನಿ ಮನಮೋಹನ್‌ಸಿಂಗ್ ಅವರೊಡನೆ ವಾಣಿಜ್ಯಮಂತ್ರಿ ಕಮಲನಾಥ್ ಈ ಸಭೆಯಲ್ಲಿ ಪಾಲ್ಗೊಂಡಿದ್ದುದು ಸಭೆಯ ಮಹತ್ವಕ್ಕೆ ಸಾಕ್ಷಿ. ಸೀಮಾ ಸುಂಕವನ್ನು ರದ್ದು ಪಡಿಸುವುದು, ಹಾಗೂ ಇದರಿಂದ ನಮ್ಮ ರೈತರಿಗೆ ಸಾಧ್ಯವಾದಷ್ಟೂ ತೊಂದರೆಯಾಗದಂತಹ ರಕ್ಷಣಾ ವ್ಯವಸ್ಥೆಗೆ ಮುಕ್ತ ವಾಣಿಜ್ಯ ಒಪ್ಪಂದದಲ್ಲಿ ಏಷಿಯನ್ ರಾಷ್ಟ್ರಗಳು ಸಮ್ಮತಿಸಿವೆ. ಬಹುತೇಕ ಕೃಷಿ ಸಂಬಂಧಿಯಾದ ಸುಮಾರು 490 ವಸ್ತುಗಳ ಆಮದಿನ ಮೇಲೆ ಸೀಮಾ ಸುಂಕದ ಕಡಿತ ಸಾಧ್ಯವಾಗದು ಎಂದೂ ಭಾರತ ಹೇಳಿದೆ. ಸಿದ್ಧ ಪಡಿಸಿದ ವಸ್ತುಗಳ ವ್ಯಾಪಾರದಲ್ಲಿ ಆಮದು ಸುಂಕದ ಇಳಿಕೆ ಕುರಿತು ಪರಿಶೀಲನೆ ನಡೆಯಲಿದೆ. ಪ್ರತಿ ಶತ 5 ರಷ್ಟು ವ್ಯವಹಾರ ನಿಯಂತ್ರಣಕ್ಕೆ ಒಟ್ಟು ವ್ಯವಹಾರದಲ್ಲಿ ಉಭಯ ಪಕ್ಷಗಳೂ ಬದ್ಧವಾಗಿವೆ. ಅಂತು ಭಾರತವು, ಕೃಷಿಕರ ಹಿತರಕ್ಷಣೆ ಮತ್ತು ಕೃಷಿ ಉತ್ಪಾದನೆ ಸಂಬಂಧದ ವ್ಯವಹಾರದಲ್ಲಿ ಸೂಕ್ಷ್ಮಗಳನ್ನು ಅರಿತು ನಡೆದಿರುವುದು ಸ್ವಾಗತಾರ್ಹವಾಗಿದೆ. (16.1.2007)

ಕಳೆದ ವರ್ಷ ಭಾರತ-ಅಸಿಯಾನ್ ರಾಷ್ಟ್ರಗಳ ನಡುವೆ 23 ಶತಕೋಟಿ ವಾಣಿಜ್ಯ ವಹಿವಾಟು ನಡೆದಿದ್ದು ಶೇ.30 ರಷ್ಟು ಪ್ರಗತಿ ಉಂಟಾಗಿದೆ ಎಂದು ಪ್ರಧಾನಿ ಮನಮೋಹನಸಿಂಗ್ ಅವರು ಪತ್ರಿಕಾ ಗೋಷ್ಠಿಯಲ್ಲಿ ತಿಳಿಸಿದ್ದಾರೆ. ವಾಣಿಜ್ಯ ಸಚಿವ ಕಮಲನಾಥ್ ಅವರು ಅಸಿಯಾನ್ ಮತ್ತು ಭಾರತದ ನಡುವೆ 490 ವಸ್ತುಗಳ ಕೊಡುಕೊಳ್ಳುವಿಕೆ ಶೇ.5ರ ಮಿತಿಯನ್ನು ಮೀರಬಾರದು ಎಂಬ ಭಾರತದ ಪ್ರಸ್ತಾವವನ್ನು ಅಸಿಯಾನ್ ರಾಷ್ಟ್ರಗಳು ಒಪ್ಪಿವೆ ಎಂದಿದ್ದಾರೆ. ಇದೊಂದು ಅಪೇಕ್ಷಣೀಯ ನಡೆಯಾಗಿದೆ.

ಕೃಷಿ ಕ್ಷೇತ್ರಗಳಲ್ಲಿ ಚಿಲ್ಲರೆ ವ್ಯಾಪಾರಕ್ಕೆ ವಿದೇಶಿ ನೇರ ಬಂಡವಾಳ ಹೂಡಿಕೆಗೆ ಅವಕಾಶ ನೀಡುವ ಪ್ರಸ್ತಾವವೂ ಇದೆ. ಮುಂದಿನ 10 ವರ್ಷಗಳಲ್ಲಿ 1 ಲಕ್ಷ ಕೋಟಿ ರೂ.ಗಳಷ್ಟು ಬಂಡವಾಳದ ಅವಶ್ಯಕತೆಯೂ ಇದೆ. ಈ ಪ್ರಸ್ತಾವಕ್ಕೆ ಕೇಂದ್ರದ ಅನುಮತಿ ದೊರೆತರೆ ಹೈನೋದ್ಯಮ, ಮೀನುಗಾರಿಕೆ, ಕೋಳಿ ಸಾಗಾಣಿಕೆ, ಹಣ್ಣು ತರಕಾರಿ, ಆಹಾರ ಉದ್ಯಮ ಕ್ಷೇತ್ರಗಳಲ್ಲಿ ವಿದೇಶಿ ಬಂಡವಾಳದ ನೇರ ಹೂಡಿಕೆ

ಹರಿದು ಬರಲಿದೆ. ಕೇಂದ್ರವು ಮುಕ್ತ ನಿಲುವನ್ನು ಹೊಂದಿರುವ ಬಗ್ಗೆ ಹೇಳಲಾಗಿದೆ. ಶೈತ್ಯಾಗಾರ ಕೇಂದ್ರಗಳ ಬಗ್ಗೆ ಈ ಹೂಡಿಕೆ ಬೇಕೆನ್ನಲಾಗಿದೆ. ಆದರೆ ಇವಾವುದೂ ನಮ್ಮ ದೇಶೀಯ ರೈತರನ್ನು ಗುಲಾಮರನ್ನಾಗಿಸದೆ, ಸ್ವ-ಉದ್ಯೋಗ ಪರಿಣತರನ್ನಾಗಿಸುವುದಾದರೆ ಕೃಷಿ ಸಂಸ್ಕೃತಿಯ ಬಾಂಧವ್ಯ ಬೆಳೆದೀತು.

**ವಿಷಯ 13:** ವಿವಿಧ ರೈತ ಪ್ರತಿಭಟನೆಗಳ ಪತ್ರಿಕಾ ವರದಿಗಳು*

**1. ಬೆಲೆಕುಸಿತ :** ತರಕಾರಿ ಬೆಲೆ ಕುಸಿತದಿಂದಾಗಿ ಉತ್ಪಾದನಾ ವೆಚ್ಚವೂ ಚಿಕ್ಕ ಬಳ್ಳಾಪುರದ ರೈತರಿಗೆ ಸಿಗದಂಥ ದುಸ್ಥಿತಿಯಾಯಿತು. ಅಂತಾಗಿ ಸರ್ಕಾರದ ಗಮನ ಸೆಳೆಯಲು, ರೈತರು ಬೆಳೆದ ತರಕಾರಿಯನ್ನು ಉಚಿತವಾಗಿ ವಿತರಿಸಿ, ಟ್ರಾಕ್ಟರ್ ಟೊಮೊಟೊವನ್ನು ರಾಷ್ಟ್ರೀಯ ಹೆದ್ದಾರಿಗೆ ಸುರಿದು ಪ್ರತಿಭಟಿಸಿದರು. ಬೆಂಬಲ ಬೆಲೆ ನಿಗದಿಗೆ, ಬೆಳೆ ಖರೀದಿಗೆ ಒತ್ತಾಯಿಸಿ, ರಸ್ತೆ ತಡೆಯನ್ನು ನಡೆಸಿದರು. ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ಪ್ರತಿ ಕೆ.ಜಿ.ಟೊಮೊಟೊಗೆ ಕೇವಲ 50 ಪೈಸೆ ದೊರೆತು ಸಾಗಾಣಿಕೆ ವೆಚ್ಚಕ್ಕೂ ಎಟಕುತ್ತಿಲ್ಲ. ಮಾರುಕಟ್ಟೆಯಲ್ಲಿ ಚೆಲ್ಲಾಡಿರುವ ಬೆಳೆ ದನಗಳ ಪಾಲಾಗಿದೆ. ಬೇಸಿಗೆಯಲ್ಲೂ ಸೌತೆಕಾಯಿ ಬೆಲೆ ನೆಲ ಕಚ್ಚಿದೆ. ಇದೆಲ್ಲ ರೈತರ ಪ್ರತಿಭಟನೆಗೆ ಕಾರಣವಾಗಿತ್ತು. (12.3.2006)

**2. ಬೀಜಮಸೂದೆ ಕಾಯ್ದೆ :** ರೈತರಿಗೆ ಮಾರಕವೆನಿಸಿರುವ ಬೀಜ ಮಸೂದೆ ಕಾಯ್ದೆಯನ್ನು ಕೈಬಿಡುವಂತೆ ಐದು ಲಕ್ಷ ಸಹಿಗಳಿರುವ ಮನವಿ ಪತ್ರದ ಮೂಲಕ ಕೇಂದ್ರ ಸರ್ಕಾರಕ್ಕೆ ರಾಜ್ಯ ರೈತ ಸಂಘಗಳ ಒಕ್ಕೂಟ ಒತ್ತಾಯಿಸಲಿರುವ ಬಗ್ಗೆ ಕುರುಬೂರು ಶಾಂತಕುಮಾರ್ ಹೇಳಿರುವುದು ವರದಿಗೊಂಡಿತು. ಅಮೇರಿಕೆಯ ಬಹುರಾಷ್ಟ್ರೀಯ ಕಂಪೆನಿಗಳು ಕುಲಾಂತರಿ ಬೀಜದ ನೆಪದಲ್ಲಿ ಭಾರತೀಯ ಕೃಷಿ ಪದ್ಧತಿಯನ್ನು ನಾಶಮಾಡುವ ಸಂಚು ನಡೆಸಿವೆ. ಶೇ.70ರಷ್ಟು ಭಾಗ ಕೃಷಿಯಲ್ಲಿರುವ ನಮ್ಮ ಜನರ ದೇಶೀಯ ಪದ್ಧತಿಯ ಮೇಲೆ ಅಮೆರಿಕದ ಶೇ.7ರಷ್ಟು ಜನರ ಕೃಷಿ ಪದ್ಧತಿಯನ್ನು ಹೇರಬಾರದು, ಎಂಬುದೂ ಅವರ ಮಾತಾಗಿತ್ತು. ಇದಲ್ಲದೆ ಕೃಷಿ ಉತ್ಪನ್ನದ ಬೆಲೆ ನಿಗದಿಗೆ ಕೃಷಿ ಬೆಲೆ ನಿಗದಿ ಆಯೋಗ ರಚನೆ, ಶಾಲೆಗಳಲ್ಲಿ ಬಿಸಿ ಊಟದ ಜೊತೆಗೆ ಹೈನುಗಾರಿಕೆ ಉತ್ತೇಜಿಸಲು ಹಾಲು ಮೊಸರು ವಿತರಿಸಿ ಲೀಟರ್ ಹಾಲಿಗೆ 12 ರೂ. ನಿಗದಿಗೊಳಿಸಬೇಕು, ರೈತರಿಗೆ ಸುಲಭವಾಗಿ ಪಹಣಿ ದೊರೆಯಬೇಕು, ಎಂದೆಲ್ಲ ಸುದ್ದಿಗೋಷ್ಠಿಯಲ್ಲಿ ರೈತ ಸಂಘಟನೆಗಳ ಒಕ್ಕೂಟವು ಸೂಚಿಸಿತು (12.3.2006).

**3. ನಾಲಾಯೋಜನೆ** : ಕಳಸಾ–ಬಂಡೂರಿ ನಾಲಾ ಯೋಜನೆ ಮಹಾದಾಯಿಯ ಉಪಹಳ್ಳಗಳನ್ನು ಮಲಪ್ರಭಾ ನದಿಗೆ ಕೊಡಿಸುವ ತಿರುವು ಯೋಜನೆ. ನಾಲೆಯ ಮೂಲಕ ಈ ಹಳ್ಳಗಳನ್ನು ಕೂಡಿಸಿದರೆ 7–5 ಟಿ.ಎಂ.ಸಿ. ನೀರು ಒದಗುವಂಥದ್ದು. ಇದರಿಂದ ಹುಬ್ಬಳ್ಳಿ–ಧಾರವಾಡ ಅವಳಿ ನಗರ ಮತ್ತು ನಡುವಣ ಹಾದಿಯ ಹಳ್ಳಿಗಳಿಗೆ ಕುಡಿಯುವ ನೀರು ಒದಗುತ್ತದೆ. ಜೊತೆಗೆ ಮಲಪ್ರಭಾ ಅಚ್ಚುಕಟ್ಟು ಪ್ರದೇಶದ ರೈತರ ಹೊಲಕ್ಕೆ ನೀರೊದಗಿಸಲು ಸಾಧ್ಯವಾಗುತ್ತದೆ ಎಂದು ಜಲಸಂಪನ್ಮೂಲ ಸಚಿವರಾಗಿದ್ದ ಎಚ್.ಕೆ.ಪಾಟೀಲ್, 100 ಕೋಟಿ ರೂ. ಈ ಯೋಜನೆಗೆ ಕೇಂದ್ರದ ಸಮ್ಮತಿ ಪಡೆದಿದ್ದರು. ಈ ಯೋಜನೆಯಿಂದ ಗೋವಾ ರಾಜ್ಯದ ಯಾವುದೇ ಪ್ರದೇಶಗಳು ಮುಳುಗಡೆ ಆಗದಿದ್ದರೂ, ಆ ರಾಜ್ಯವು ಯೋಜನೆಯನ್ನು ವಿರೋಧಿಸಿತು. ಅದರಿಂದ ಕೇಂದ್ರವು ಮೊದಲು ಒಪ್ಪಿಗೆ ನೀಡಿದ್ದರೂ ನಂತರದಲ್ಲಿ ತಡೆಯಾಜ್ಞೆ ನೀಡಿತು. ರಾಜ್ಯ ಸರ್ಕಾರ ಆಗ ತಡೆಯಾಜ್ಞೆ ತೆರವು ಮಾಡಲು ನಿಯೋಗ ಹೋಗಿ ಮನವಿ ಸಲ್ಲಿಸಿತು. ಆನಂತರ ಶ್ರೀ ಬಸವರಾಜ, ಬೊಮ್ಮಾಯಿ ನೇತೃತ್ವದ **'ಮಲಪ್ರಭಾ ಅಚ್ಚು ಕಟ್ಟು ಪ್ರದೇಶದ ರೈತ ಹೋರಾಟ ಸಮಿತಿ'** ರೂಪುಗೊಂಡು ಹೋರಾಟ ನಡೆಸುತ್ತ ಬಂತು. ನರಗುಂದದಲ್ಲಿ ನಾಲ್ಕಾರು ತಿಂಗಳು ನಿರಂತರ ಹೋರಾಟ ನಡೆಯಿತು. ಧರಣಿಯೂ ನಡೆಯಿತು. ರಸ್ತೆ ತಡೆ, ಜಾಗೃತಿ ಹೋರಾಟ ಕಾರ್ಯಗಳೂ ಆದುವು. ರಕ್ತದಲ್ಲಿ ಪ್ರಧಾನಿಗೆ ಪತ್ರ ಬರೆದುದೂ ಆಯಿತು. ಮಹಾರಾಷ್ಟ್ರ, ಆಂಧ್ರ ಪ್ರದೇಶಗಳು ಕೇಂದ್ರದ ಅನುಮತಿ ಪಡೆಯದೆಯೆ ನೀರಾವರಿ ಯೋಜನೆಗಳನ್ನು ಅನುಷ್ಠಾನಗೊಳಿಸಿವೆ. ಹೀಗಾಗಿ ಈ ನಾಲಾ ಯೋಜನೆಯ ಆರಂಭಕ್ಕೆ ಹಿಂದೇಟು ಹಾಕದೆ, ತಡಮಾಡದೆ ಮುಂದುವರಿಯಬೇಕು ಎಂದು ಮಲಪ್ರಭಾ ಅಚ್ಚುಕಟ್ಟು ಪ್ರದೇಶದ ರೈತರ ಒಕ್ಕೂಟ ರಾಜ್ಯ ಸರ್ಕಾರವನ್ನು ಆಗ್ರಹಿಸಿತು. ಒಕ್ಕೂಟದ ಅಧ್ಯಕ್ಷ ಶಾಸಕ ಬಸವರಾಜ ಬೊಮ್ಮಾಯಿ, ಕಾಮಗಾರಿ ಆರಂಭಕ್ಕೆ ವಿಳಂಬ ನೀತಿ ತಾಳಿದರೆ ರೈತರ ಹೋರಾಟ ಅನಿವಾರ್ಯ; 2002ರಲ್ಲಿಯೇ ಕೇಂದ್ರವು ತಾತ್ವಿಕ ಒಪ್ಪಿಗೆ ನೀಡಿರುವಲ್ಲಿ, ಅಗತ್ಯವಿರುವ ಯೋಜನೆಯ ಮಾರ್ಪಾಡು, ಹಾಗೂ ಹಣಕಾಸಿನ ವ್ಯವಸ್ಥೆಯನ್ನು ಕರ್ನಾಟಕ ನೀರಾವರಿ ನಿಗಮಕ್ಕೆ ವಹಿಸಬೇಕು. ಯೋಜನೆ ವಿಳಂಬವಾದಷ್ಟೂ ರೈತರು ತೊಂದರೆಗೀಡಾಗುತ್ತಾರೆ ಎಂದು ಹೇಳಿದರು. (31.1.06;12.3.06);

* ಕನ್ನಡ ಪ್ರಭ, ಪ್ರಜಾವಾಣಿ, ವಿಜಯ ಕರ್ನಾಟಕ, ಡೆಕ್ಕನ್ ಹೆರಾಲ್ಡ್, ಸಂಯುಕ್ತ ಕರ್ನಾಟಕ, ಉದಯವಾಣಿ, ಆಂದೋಲನ, ವಿಜಯ ಟೈಮ್ಸ್

**4. ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರಗಳು :** ಟೊಮೊಟೋ ಬೆಲೆಯು ಮಾರುಕಟ್ಟೆಯಲ್ಲಿ ಬಹಳ ಕುಸಿದಿದ್ದು ಸರ್ಕಾರದ ನಿರ್ಲಕ್ಷ್ಯವೆಂದು ಕೆ.ಜಿ.ಗೆ 25 ಪೈಸೆ ಆಗಿ ರೈತ ದಿವಾಳಿ ಹಂತ ತಲುಪಿದ ಎಂದು ರೈತ ಸಂಘಟನೆಯ ಸಿ.ವಿ. ನಾಗರಾಜು ಅವರು ಪ್ರತಿಭಟನೆ ರೂಪಿಸಿದ ಬಗೆ ಎಂದರೆ, 4 ಸಾವಿರ ಕೆ.ಜಿ.ಟೊಮೊಟೊವನ್ನು ಉಚಿತವಾಗಿ ಎಚ್.ಡಿ.ಕೋಟೆ ಸಂತೆಯುಲ್ಲಿ ಹಂಚಿದುದಾಗಿದೆ. (8.3.06)

ಹುಬ್ಬಳ್ಳಿ ಕೃಷಿ ಉತ್ಪನ್ನ ಮಾರುಕಟ್ಟೆ, ಧಾರವಾಡ, ಅಣ್ಣಿಗೇರಿ ಹಾಗೂ ಹಾವೇರಿ ಮಾರುಕಟ್ಟೆಯಲ್ಲಿ ಬೆಲೆ ಕುಸಿತ ಮತ್ತು ವರ್ತಕರ ಕಿರಿಕಿರಿ ಖಂಡಿಸಿ ಒಣಮೆಣಸಿನಕಾಯಿ ಬೆಳೆಗಾರರು ರಸ್ತೆ ತಡೆ ನಡೆಸಿದರು. ಕ್ವಿಂಟಾಲ್‌ಗೆ 5500 ರೂ. ಒಣಮೆಣಸಿನಕಾಯಿಗೆ ಬೆಲೆ 4 ಸಾವಿರಕ್ಕೆ ಇಳಿದದ್ದು ರೈತರ ಆಕ್ರೋಶಕ್ಕೆ ಕಾರಣವಾಗಿತ್ತು. ರೈತರು ನೀರು ಸಿಂಪಡಿಸಿಕೊಂಡು ಬರುವ ಕಾರಣ ಕಳಪೆ ಒಣಮೆಣಸಿನ ಕಾಯಿಯನ್ನು ತರುತ್ತಿದ್ದಾರೆ; ಅದರಿಂದ ಜಾಲಿವೇಪಿಜನ್ ತೈಲ ಉತ್ಪಾದಕರು ಅದನ್ನು ಖರೀದಿಸುವುದನ್ನ ಬಿಟ್ಟಿದ್ದಾರೆ, ಎಂಬುದು ವ್ಯಾಪಾರಸ್ಥರ ಮಾತು. ಅಂತಾಗಿ ಅವರು ವಹಿವಾಟು ಸ್ಥಗಿತಗೊಳಿಸಿದ ಕಾರಣ ರೈತರು ಬೀದಿಗಿಳಿದರು. ವರ್ತಕರು ಏನೇನೋ ಸಬೂಬು ಹೇಳಿ ಏಜೆಂಟ್‌ರೊಡನೆ ಸೇರಿ ಸತಾಯಿಸುತ್ತಾರೆ ಎಂಬುದು ರೈತರ ಆರೋಪ. ಇದೆಲ್ಲ ರೈತರು ಮತ್ತು ವರ್ತಕರ ನಡುವಣ ಸಂಘರ್ಷಕ್ಕೆ ಎಡೆಗೊಟ್ಟಿರುವಲ್ಲಿ ಸರ್ಕಾರ ಮಧ್ಯಪ್ರವೇಶ ಮಾಡಿದರೆ ಪರಿಹಾರ ದೊರಕಬಹುದು ಎಂಬ ಅಭಿಪ್ರಾಯ ವ್ಯಕ್ತವಾಗಿತ್ತು. (19.2.06)

ದಾವಣಗೆರೆಯಲ್ಲಿ ಬೆಲೆ ಕುಸಿತದ ಕಾರಣ ರೈತರು ಸುಮಾರು 50 ಚೀಲ ಬದನೆಕಾಯನ್ನು ಜಿಲ್ಲಾಧಿಕಾರಿ ಕಛೇರಿ ಎದುರು ಸುರಿದು ಪ್ರತಿಭಟಿಸಿದರು. ಬೆಂಬಲ ಬೆಲೆಯಡಿ ಖರೀದಿಸಲು ಒತ್ತಾಯಿಸಿ ಘೋಷಣೆ ಕೂಗಿದರು. ಲೋಡುಗಟ್ಟಲೆ ತರಕಾರಿಗಳನ್ನು ಗೋಶಾಲೆಗೆ ಕಳುಹಿಸಿರುವಾಗ ಸರ್ಕಾರವೇ ರೈತರನ್ನು ರಕ್ಷಿಸಬೇಕು; ತರಕಾರಿ ಖರೀದಿ ಕೇಂದ್ರ ತೆರೆಯಬೇಕು, ಶೀತಲೀಕರಣ ಕೇಂದ್ರ ತೆರೆಯಬೇಕು, ಎಂದೂ ರೈತ ಸಂಘದ ಸದಸ್ಯರ ಒತ್ತಾಯವಾಗಿತ್ತು. (15.3.2006)

**5. ರೈತ ಸಂಪರ್ಕ ಕೇಂದ್ರ :** ಹೆಗ್ಗಡದೇವನ ಕೋಟೆ ತಾಲೂಕಿನಲ್ಲಿ ಬಿತ್ತನೆ ಬೀಜಕ್ಕಾಗಿ ರೈತ ಸಂಪರ್ಕ ಕೇಂದ್ರಗಳ ಎದುರು ಎರಡು ರಾತ್ರಿಯಿಂದ ನಿದ್ದೆಗೆಟ್ಟು ಕಾದಿದ್ದ ಸಾವಿರಾರು ರೈತರು ಇದ್ದರು. ಮೈಸೂರು ಜಿಲ್ಲೆಗೆ ಸರ್ಕಾರ ನೀಡಿರುವ ಹತ್ತಿ ಬಿತ್ತನೆ ಬೀಜ ಸಾಲದಾಗಿತ್ತು. ಶೇ.75 ರಿಯಾಯಿತಿ ದರದಲ್ಲಿ ಬಿತ್ತನೆ ಬೀಜ ವಿತರಿಸಿದ ಕಾರಣ ಬೇಡಿಕೆ ಹೆಚ್ಚಾಯಿತೆಂದಿರುವುದುಂಟು. ಕ್ಷೇತ್ರದ ಶಾಸಕ ಎಂ.ಪಿ. ವೆಂಕಟೇಶ್ ಕೃಷಿ ಸಚಿವರು ಬರುವ ದಿನ ಬೆಳಗ್ಗೆ ಪಟ್ಟಣದಲ್ಲಿ ಕಾಣಿಸಿಕೊಂಡಾಗ ರೈತರು ಘೇರಾವ್ ಮಾಡಿದರು. ಅಗತ್ಯವಿದ್ದ ಬಿತ್ತನೆ ಬೀಜವನ್ನು ಮೊದಲೇ

ಒದಗಿದ್ದರೆ ರೈತರು ಬೀದಿಗಿಳಿಯುವುದು, ಸರಗೂರಿನ ಸರ್ಕಾರಿ ಕಛೇರಿಗಳ ಮೇಲೆ ರೈತರು ಆಕ್ರೋಶಗೊಳ್ಳುವುದು ತಪ್ಪುತ್ತಿತ್ತು. ರೈತರ ಕೃಷಿ ಅಗತ್ಯಗಳನ್ನು ಪೂರೈಸದಿದ್ದರೆ, ಅವರು ಅನಿವಾರ್ಯವಾಗಿ ಬೀದಿಗಿಳಿಯುತ್ತಾರೆ (5.5.2006) ಎನ್ನಲಾಗಿತ್ತು.

**6. ಬಿತ್ತನೆ ಬೀಜ ಪೂರೈಕೆ :** ವಿಧಾನಸಭಾಧಿವೇಶನದಲ್ಲಿ (22.6.2006) ವಿಪಕ್ಷನಾಯಕ ಮಾಜಿ ಮುಖ್ಯಮಂತ್ರಿ ಶ್ರೀ **ಧರ್ಮಸಿಂಗ್** ಅವರು, ಸಮರ್ಪಕ ಬಿತ್ತನೆ ಬೀಜ ಪೂರೈಕೆಗೆ ಹಾಗೂ ಸಬ್ಸಿಡಿ ಹಣ ಬಿಡುಗಡೆಗೆ ಸರ್ಕಾರ ಸ್ಪಂದಿಸದೆ ವಿಫಲವಾಗಿದೆ ಎಂದು ಆರೋಪಿಸಿ ರಾಯಚೂರು, ಗುಲ್ಬರ್ಗ ಭಾಗಗಳಲ್ಲಿ ಉದ್ದು ಬಿತ್ತನೆ ಬೀಜವನ್ನು ತುರ್ತಾಗಿ ಪೂರೈಕೆ ಮಾಡದಿದ್ದರೆ ರೈತರಿಗೆ ವರ್ಷವಿಡೀ ಆ ಬೆಳೆ ಬೆಳೆಯಲು ಸಾಧ್ಯವಾಗುವುದಿಲ್ಲ. ಬಿತ್ತನೆ ಅವಧಿ ಮುಗಿಯುತ್ತಿದೆ. ರೈತರಿಗೆ ಸಬ್ಸಿಡಿಯೇ, ತಲುಪಿಲ್ಲ. ಸರ್ಕಾರ ಸಬ್ಸಿಡಿ ಹಣ ಬಿಡುಗಡೆ ಮಾಡುವ ಸ್ಥಿತಿಯಲಿಲ್ಲ. ರೈತರ ಹಿತ ಕಾಪಾಡಲು ಸರ್ಕಾರ ಸಂಪೂರ್ಣವಿಫಲವಾಗಿದೆ ಎಂಬುದು ಅವರ ಆರೋಪವಾಗಿತ್ತು. ಶ್ರೀ **ಧರ್ಮಸಿಂಗ್** ಅವರ ಮಾತನ್ನು ಬೆಂಬಲಿಸುತ್ತ ಶ್ರೀ **ಬೋಸರಾಜ್** ಅವರು, 9 ಕೋಟಿ ರೂ. ಬಿತ್ತನೆ ಬೀಜ ಖರೀದಿಗೆ ಸಬ್ಸಿಡಿ ನೀಡಬೇಕಾಗುವಲ್ಲಿ ಕೇವಲ 3.54 ಲಕ್ಷ ರೂ. ಮಾತ್ರ ಬಿಡುಗಡೆ ಮಾಡಲಾಗಿದೆ. ಸಬ್ಸಿಡಿಯನ್ನು ಈಗ ಬಿಡುಗಡೆ ಮಾಡದಿದ್ದರೆ ಒದಗುವ ಗಲಾಟೆಗೆ ಸರ್ಕಾರವೇ ಹೊಣೆ ಎಂಬ ಎಚ್ಚರಿಕೆಯ ಮಾತೂ ಅವರಲ್ಲಿತ್ತು. ಶ್ರೀ **ಉಮಾಪತಿ** ಹಾಗೂ ಶ್ರೀ **ಶರಣ ಪ್ರಕಾಶ್ ಪಾಟೀಲ್** ಅವರುಗಳು ಸಭಾಧ್ಯಕ್ಷರ ಪೀಠದ ಮುಂದೆ ನಿಂತು ಸರ್ಕಾರ ಹೇಳಿಕೆ ನೀಡಬೇಕೆಂದು ಆಗ್ರಹಿಸಿದರು. ಶ್ರೀ ಶ್ರೀನಿವಾಸ ಗೌಡ ಅವರು ಎರಡು ಕೃಷಿ ವಿಶ್ವವಿದ್ಯಾಲಯಗಳಲ್ಲಿ ಬಿತ್ತನೆ ಬೀಜ ಸಾಕಷ್ಟು ದಾಸ್ತಾನು ಇದ್ದರೂ ಆಂಧ್ರ ಪ್ರದೇಶದಿಂದ ಬಿತ್ತನೆ ಬೀಜ ಖರೀದಿಸುವ ಕಾರಣವೇನು ಎಂದು ಪ್ರಶ್ನಾರೋಪ ಮಾಡಿದರು. ಈ ಸಂಬಂಧ ಮುಖ್ಯಮಂತ್ರಿಯವರಿಂದ ಉತ್ತರ ಕೊಡಿಸುವ ಬಗ್ಗೆ ಸಚಿವ ಶ್ರೀ **ಎಂ.ಪಿ.ಪ್ರಕಾಶ್** ಅವರು ಹೇಳಿದ್ದರು. ಆದರೆ ಕಾಂಗ್ರೆಸ್ ಸದಸ್ಯರು ಇದನ್ನು ಪ್ರತಿಭಟಿಸಿ ವಿಪಕ್ಷನಾಯಕ ಶ್ರೀ ಧರ್ಮಸಿಂಗ್ ಅವರೊಡನೆ ಸಭಾತ್ಯಾಗ ಮಾಡಿದರು.(23.6.2006)

**7. ಒಣಬೇಸಾಯದ ಭೂಮಿಗೆ ನೀರಾವರಿ ತೆರಿಗೆ; ರೈತರ ಭೂಮಿ ಮುಟ್ಟುಗೋಲು :** ನರಗುಂದ, ನವಿಲುಗುಂದಗಳಲ್ಲಿ 'ರೈತ ಹುತಾತ್ಮ'ರ 25ನೇ ವರ್ಷದಾಚರಣೆ ನಡೆದ ಸಂದರ್ಭ. ಒಣಬೇಸಾಯದ ಭೂಮಿಗೆ ನೀರಾವರಿ ಕರ ವಿಧಿಸುವುದು ನ್ಯಾಯವಲ್ಲ; ಹಾಗೂ ನೀರಾವರಿ ಕರ ಪಾವತಿಸಿದ ಭೂಮಿಯನ್ನು

ಮುಟ್ಟುಗೋಲು ಹಾಕಿಕೊಳ್ಳುವ ಸರ್ಕಾರದ ನೀತಿ ವಿರುದ್ಧ ಅಲ್ಲಿಯ ರೈತರಿಗೆ ಆಕ್ರೋಶವುಂಟಾಗಿತ್ತು. ಇದೇ ಕಾರಣಕ್ಕೆ 1980–81ರ ಸಮಯದಲ್ಲಿ ಇದೇ ನೆಲದಲ್ಲಿ 'ರೈತ ಬಂಡಾಯ'ವಾಗಿದ್ದರೂ ಸರ್ಕಾರ ಅದರ ನೆನಪೇ ಇಲ್ಲದಂತೆ ವರ್ತಿಸಿದೆ. ಜೊತೆಗೆ ಕಂದಾಯ ಸಚಿವ ಶ್ರೀ ಜಗದೀಶ್‌ಶೆಟ್ಟರ್ ಅವರೂ ಈ ಆಚರಣಾ ಸಭೆಗೆ ಗೈರು ಹಾಜರಾಗಿದ್ದುದು, ರೈತರಿಗೆ ನಿರಾಸೆ ತಂದಿತ್ತು. ಶ್ರೀ ಬಸವರಾಜ ಬೊಮ್ಮಾಯಿ ಅವರು ಕಂದಾಯ ಸಚಿವರು ಈ ರೈತರ ನೆರವಿಗೆ ತಕ್ಷಣ ಬರಬೇಕು; ಮುಟ್ಟುಗೋಲು ಪ್ರಕರಣಗಳನ್ನೂ ತಕ್ಷಣ ತೆರವುಗೊಳಿಸಲು, ಜಿಲ್ಲಾಧಿಕಾರಿಗಳೊಡನೆ ಚರ್ಚಿಸಿ ಮುಖ್ಯಮಂತ್ರಿಗಳಿಗೆ ಮನವರಿಕೆ ಮಾಡಲಾಗುವುದು; ಸರ್ಕಾರ ನಿರ್ಲಕ್ಷಿಸಿದರೆ, 25 ವರ್ಷಗಳಿಂದ ಕಷ್ಟ ಎದುರಿಸಿರುವ ರೈತರಿಗೆ ಪರಿಹಾರಕ್ಕಾಗಿ ನ್ಯಾಯಾಲಯದ ಕಟ್ಟೆಗೆ ವಿಷಯವನ್ನು ಒಯ್ಯಲಾಗುವುದು, ಎಂದಿದ್ದಾರೆ. ಸರ್ವ ಶ್ರೀ ಈಶ್ವರಚಂದ್ರ ಹೊಸಮನಿ, ಎನ್.ಎಚ್.ಕೋನರೆಡ್ಡಿ, ವೀರಣ್ಣ ನೀರಲಗಿ ಅವರುಗಳು ಈ ಮಾತುಗಳಿಗೆ ಬೆಂಬಲ ಸೂಚಿಸಿ, ಈ ಕಾರ್ಯಸಾಧ್ಯವಾಗದಿದ್ದರೆ ಸಚಿವರು ರಾಜಿನಾಮೆ ನೀಡಬೇಕು ಎಂಬ ಅಭಿಪ್ರಾಯ ಸೂಚಿಸಿದರು. ಶ್ರೀ ಕೊಟ್ರೇಶಿ ಶಿರೂರ ಅವರು ಮಲಪ್ರಭಾ ಅಚ್ಚುಕಟ್ಟು ಪ್ರದೇಶದ ನೀರಾವರಿ, ಒಣಬೇಸಾಯ ಭೂಮಿಯ ಪರಿಣಾಮದ ಪುನರ್ ಸಮೀಕ್ಷೆ, ಒಣಬೇಸಾಯ ಭೂಮಿಗೂ ನೀರಾವರಿ ತೆರಿಗೆ ಹಾಕಿದ್ದರೆ, ಆಸ್ತಿ ಮುಟ್ಟುಗೋಲು ಮಾಡಿದ್ದರೆ ರೈತರಿಗೆ ಸರ್ಕಾರ ತುಂಬಿಕೊಡಬೇಕಾದ ನಷ್ಟ ಹಾಗೂ ರೈತರ ತಾಳ್ಮೆಯ ಪರೀಕ್ಷೆ ಕುರಿತೆಲ್ಲ ನುಡಿದರು. ಈ ಬಗ್ಗೆ ಬೆಂಗಳೂರಿಗೆ ಸರ್ಕಾರದ ಬಳಿ ನಿಯೋಗ ಹೋಗಿ ಮನವರಿಕೆ ಮಾಡುವ ಬಗ್ಗೆ ಹೇಳಿದುದನ್ನು ಶ್ರೀ ಮಲ್ಲಿಕಾರ್ಜುನ ಸಿದ್ದಣ್ಣವರ ವರದಿ ಮಾಡಿದ್ದಾರೆ (22.7.2006).

ನವಲುಗುಂದ, ಶಲವಡಿ, ಚಿಲಕವಾಡ, ಕರ್ಲವಾಡ, ಹೆಬಸೂರು ಮುಂತಾದ ಗ್ರಾಮಸ್ಥರ ರೈತ ಹಕ್ಕು ಪತ್ರಗಳಲ್ಲಿ ಮಾಲ್ಕಿ ಹಕ್ಕು 'ಸರ್ಕಾರ' ಎಂದು ನಮೂದಾಗಿತ್ತು. ಇದು ರೈತರು ಉತಾರವನ್ನು ಪಡೆದಾಗ ಕಂಡು ಬಂದು ಅವರಲ್ಲಿ ಆತಂಕಗಳನ್ನು ಸೃಷ್ಟಿಸಿತು. ಅದರಿಂದ ಯಾವುದೇ ಯೋಜನೆಯ ಫಲಾನುಭವಿಗಳು ಆಗಲು ಸಾಧ್ಯವಾಗದು. ನರಗುಂದ ರೈತ ಬಂಡಾಯದ ನಂತರವೂ ಸರ್ಕಾರ ನೀರಾವರಿ ಕರ ಕುರಿತಂತೆ ಸೂಕ್ತ ನಿರ್ದೇಶನ ನೀಡದಿದ್ದ ಸಲುವಾಗಿ ಪಾಟ್ಕರಿಗಳು ತಮ್ಮ ಪೀಕ್–ಪಾನಿಯಲ್ಲಿ ನೀರಾವರಿ ಎಂದು ಬರೆದುಕೊಂಡು ಬಂದಿದ್ದಾರೆ. ಮಲಪ್ರಭಾಯೋಜನೆ ಅನುಷ್ಠಾನಗೊಂಡಾಗ ಅಚ್ಚುಕಟ್ಟು ಪ್ರದೇಶದ ಎಲ್ಲ ಭೂಮಿಯು

ನೀರಾವರಿಗೆ ಒಳಪಡುತ್ತದೆ ಎಂದು ತಿಳಿಯಲಾಗಿತ್ತು. ವಾಸ್ತವದಲ್ಲಿ ಎಲ್ಲ ಭೂಮಿಗೆ ನೀರು ಬರದಿದ್ದರೂ, ಸರ್ಕಾರ 'ನೀರಿನ ಕರ'ವನ್ನು ಸಾರಾಸಗಟಾಗಿ ವಿಧಿಸಿದ್ದು, ಸಮಸ್ಯೆಯಾಗಿತ್ತು. ಮುಖ್ಯ ಕಾಲುವೆಯ ಬದಿಗೆ ಇರುವ ಭೂಮಿಗೆ ನೀರು ಬರದೆ, ಸಣ್ಣ ಕಾಲುವೆಗಳ ವ್ಯಾಪ್ತಿಯ ಜಮೀನಿಗೆ ನೀರಾವರಿ ಆಗುತ್ತದೆ. ನೀರು ಪಡೆಯುವ ಭೂಮಿ, ಒಣಬೇಸಾಯದ ಭೂಮಿ ಕುರಿತು ಸೂಕ್ತ ಸಮೀಕ್ಷೆ ನಡೆಸದಿರುವುದೇ ಸಮಸ್ಯೆಗೆ ಕಾರಣವಾಗಿರುವಲ್ಲಿ ಪುನರ್ ಸಮೀಕ್ಷೆ ಅಗತ್ಯವಿದೆ, ಈ ಬಗ್ಗೆ ಪ್ರಯತ್ನ ಮಾಡುವ ಬಗ್ಗೆ, ಕಂದಾಯ ಇಲಾಖೆ ರೈತರ ಭೂಮಿಯನ್ನು ಮುಟ್ಟುಗೋಲು ಹಾಕಿಕೊಂಡಿರುವುದು ಜಿಲ್ಲಾಧಿಕಾರಿಗಳಿಂದಲೂ ತಿಳಿದು ಬಂದಿದ್ದು, ಪತ್ರಿಕಾ ವರದಿಗಳೂ ಪ್ರಕಟವಾಗಿರುವುದು, ಈ ಹಿನ್ನೆಲೆಯಲ್ಲಿ ಮುಟ್ಟುಗೋಲು ತೆರವು ಮಾಡಿ ರೈತರಿಗೆ ಕೃಷಿ ಭೂಮಿಯನ್ನು ಮರಳಿಸುವ ಬಗ್ಗೆ ಸಚಿವ ಶೆಟ್ಟರ್ ಸರ್ಕಾರದ ನಿರ್ಧರಿಸಿದೆ ಎಂಬುದನ್ನು ಪತ್ರಿಕೆಗಳು ವರದಿ ಮಾಡಿವೆ (25.7.2007). ಹೀಗೆ ರೈತರ ಹಾಗು ರೈತರ ಪರ ಹೋರಾಟ ಹಾಗು ಪತ್ರಿಕಾ ಲೇಖನ, ವರದಿಗಳು, ಸರ್ಕಾರದ ಗಮನಕ್ಕೆ ತರುವಲ್ಲಿ ಯಶಸ್ವಿಯಾದುವು.

**8. ತೊಗರಿ ಬೆಳೆ ರಫ್ತಿಗೆ ನಿರ್ಬಂಧ :** ಬೀದರ್‌ನಲ್ಲಿ ರಾಜ್ಯ ರೈತ ಸಂಘವು, ಸಕ್ಕರೆ ಆಮದು ಮಾಡಿಕೊಳ್ಳಲು, ತೊಗರಿ ಬೆಳೆ ರಫ್ತು ಮಾಡಲು ಕೇಂದ್ರ ಸರ್ಕಾರ ಹೇರಿದ ನಿರ್ಬಂಧವನ್ನು ಖಂಡಿಸಿ ರೈಲ್ ರೋಕೋವನ್ನು ಹಮ್ಮಿಕೊಂಡಿತ್ತು. ಅಂಬೇಡ್ಕರ್ ವೃತ್ತದಿಂದ ರೈಲ್ ನಿಲ್ದಾಣದ ವರೆಗೆ ಪ್ರತಿಭಟನಾ ಮೆರವಣಿಗೆಯನ್ನು ನೂರಾರು ಕಾರ್ಯಕರ್ತರೊಡನೆ ನಡೆಸಿತು. ನಾಂದೇಡ್ ಬೆಂಗಳೂರು ಲಿಂಕ್ ಎಕ್ಸ್‌ಪ್ರೆಸ್ ಅನ್ನು ತಡೆಯಿತು. ಸಂಘದ ಅಧ್ಯಕ್ಷ ಬಸವರಾಜ ತಂಬಾಕೆ ಅವರು ಕೇಂದ್ರದ ಈ ರೈತ ವಿರೋಧ ನೀತಿಯಿಂದಾಗಿ ರೈತರ ಸಮಸ್ಯೆಗಳು ಉಲ್ಬಣವಾಗಿವೆ, ರಫ್ತಿನ ಮೇಲಿನ ನಿರ್ಬಂಧ ತೆಗೆದರೆ ರೈತರಿಗೆ ಹೆಚ್ಚು ಬೆಲೆ ಸಿಗುತ್ತದೆ, ನಿರ್ಬಂಧ ರದ್ದು ಪಡಿಸಬೇಕೆಂದು ಆಗ್ರಹಿಸಿ ರಾಷ್ಟ್ರಪತಿಯವರಿಗೆ ಮನವಿ ಪತ್ರವನ್ನು ರವಾನಿಸಿದರು (8.8.06).

**9. ಕಬ್ಬು ಬೆಳೆಗೆ ದರ ನಿಗದಿ :** ಕಬ್ಬಿನ ಬೆಳೆಗೆ ಸಂದಾಯವಾಗಿರುವ ಬೆಲೆಯು ಬೇಸಾಯದ ವೆಚ್ಚಕ್ಕೆ ತಾಳೆಯೇ ಆಗದು. ರಾಜ್ಯದ ಪ್ರಮುಖ ಬೆಳೆಯಾದ ಕಬ್ಬಿಗೆ ಅದರ ಬೇಸಾಯಕ್ಕೆ ಅನುಗುಣವಾದ ವೈಜ್ಞಾನಿಕ ಬೆಲೆ ನಿಗದಿಯಾಗುತ್ತಿಲ್ಲ. ಕಾಟಾಚಾರಕ್ಕೆ ವರ್ಷಕ್ಕೆ 10–15ರೂ. ಬೆಲೆ ಏರಿಕೆ ಮಾಡುವುದು ಒಂದು ಅರ್ಥಹೀನ ರೂಢಿಯಾಗಿ ಬಿಟ್ಟಿದೆ. ಬೆಲ್ಲದ ಬೆಲೆ ಸಕ್ಕರೆಯ ಮಟ್ಟಕ್ಕೇ ಇದೆ. ಖಾಸಗಿಯವರ

ಆಲೆಮನೆಗಳೂ ಕಾರ್ಖಾನೆಗಳಂತೆಯೆ ಕಾರ್ಯೋನ್ಮುಖವಾಗಿವೆ. ಅದರಿಂದ ರೈತರಿಗೆ ಮಾರಾಟದ ಆಯ್ಕೆಗೆ ಮುಕ್ತ ಅವಕಾಶವಿದೆ. ಹೀಗಾಗಿ ರೈತರನ್ನು ಆಕರ್ಷಿಸಲು ಕಾರ್ಖಾನೆಗಳೂ ಸೂಕ್ತದರ ನೀಡಬೇಕಾಗುತ್ತದೆ. ಚಾಮರಾಜನಗರದ ಕಡೆಯ ಬನ್ನಾರಿ ಸಕ್ಕರೆ ಕಾರ್ಖಾನೆ ಸರ್ಕಾರ ಸೂಚಿತ ಬೆಲೆ ಕೊಡಲು ತಯಾರಿದೆ. ಆದರೆ ಸರ್ಕಾರ ತನ್ನ ಬೆಲೆ ನೀತಿ ಪ್ರಕಟಿಸಬೇಕಾಗಿದೆ. ರೈತರು ಉತ್ಪನ್ನಗಳಿಗೆ ಸೂಕ್ತ ಬೆಲೆ ದೊರಕಿಸಿಕೊಳ್ಳಲು ಹೋರಾಡಲೇಬೇಕಿದೆ. ಇದಕ್ಕಾಗಿ ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿ ರೈತರು ಬೀದಿಗಿಳಿದು ಪ್ರತಿಭಟನೆ ಮಾಡುತ್ತಿದ್ದಾರೆ. ರೈತರ ಈ ಒತ್ತಾಯದಿಂದ ಮಂಡ್ಯದ ಮೈಶುಗರ್ ಕಂಪೆನಿ ಟನ್ನಿಗೆ 1100 ರೂ. ದರ ನಿಗದಿಮಾಡಿದೆ. ಆದರೆ ಈ ದರವನ್ನು ಸರ್ಕಾರವು 1400 ರೂಗಳಿಗೆ ನಿಗದಿಗೊಳಿಸಿದರೆ ರೈತರ ಪ್ರತಿಭಟನೆ ನಿಂತು ಸಾಂತ್ವನ ನೆಲೆ ಒದಗೀತು ಎಂದೆಲ್ಲ ರೈತ ಹಿತಕಾಳಜಿಗಳೂ ವ್ಯಕ್ತವಾಗಿವೆ (22.7.06).

**10. ಕೃಷಿಯೋಗ್ಯ ಭೂಮಿಯ ಅಸ್ತಿತ್ವ :** 1974ರ ಭೂಮಸೂದೆ ಸುಗ್ರೀವಾಜ್ಞೆ ರಾಜ್ಯದಲ್ಲಿ ಜಾರಿಗೆ ಬಂದಾಗ ಗೇಣಿದಾರರಿಗೆ ಸಹಸ್ರಾರು ಎಕರೆ ಜಮೀನಿನ ಒಡೆತನ ಕೊಟ್ಟಂತಾಯಿತು. ಭೂ ಮಾಲೀಕರಿಗೆ ಪರಿಹಾರ ಧನ ನಿರೀಕ್ಷಿತ ಮಟ್ಟಕ್ಕಿರಲಿಲ್ಲ. ಇಂದು ಅದೇ ಭೂಮಿಯನ್ನು ಸ್ವಾಧೀನ ಪಡಿಸಿಕೊಂಡು ಬಹುರಾಷ್ಟ್ರೀಯ ಕಂಪೆನಿಗಳಿಗೆ ಪರಭಾರೆ ಮಾಡುವ ತಂತ್ರವನ್ನು ಹೆಣೆಯಲಾಗಿರುವುದು ರೈತರ ಗಮನಕ್ಕೆ ಬಂದಂತಿಲ್ಲ. 'ಅಭಿವೃದ್ಧಿ ಕಾರ್ಯ ಯೋಜನೆ' ಎನ್ನುವ ಹೆಸರಿನಲ್ಲಿ, ರೈತರ ಕೃಷಿಯೋಗ್ಯ ಭೂಮಿಯ ಸ್ವಾಧೀನದ ಅಕ್ರಮಕ್ಕೆ ರೈತರ ಶೋಷಣೆಗೆ ಪ್ರಶ್ನೆ ಏಳುತ್ತಿಲ್ಲ. ಏಕೆ? ಆಹಾರ ಧಾನ್ಯ ಬೆಳೆಯುವ ಕೃಷಿಗೆ ಮೀಸಲಾದ ಫಲವತ್ತಿನ ಭೂಮಿ ಇಂದು ಸುಸ್ಥಿರ ಜಮೀನಾಗಿ ಉಳಿಯಲಾಗುತ್ತಿಲ್ಲ. ಬಹಳಷ್ಟು ಭೂಮಿ ಉದ್ದಿಮೆ-ಕೈಗಾರಿಕೆ-ಅಣೆಕಟ್ಟು-ರಸ್ತೆ ಅಗಲೀಕರಣ ಸಂಬಂಧದಲ್ಲಿ ಪರಭಾರೆ ಆಗಿದೆ. ಇಲ್ಲಿ ಎಳ್ಳಿನಷ್ಟು ಪರಿಹಾರ ನೀಡಿ ಆನೆಯಷ್ಟು ಹಣ ಕೊಳ್ಳೆ ಹೊಡೆಯುವ ದಂಧೆ ಏರ್ಪಟ್ಟಿದೆ. ಸಂವಿಧಾನದಲ್ಲಿ ಕೃಷಿ ಭೂಮಿ ಸಂರಕ್ಷಣೆ ಮಹತ್ವವನ್ನು ಹೇಳಿರುವ ಬಗ್ಗೆ ರೈತರಿಗೆ ಮನದಟ್ಟು ಮಾಡಬೇಕಿದೆ. ಇದಾಗದಿದ್ದರೆ ರೈತರು-ಕೃಷಿ ಕಾರ್ಮಿಕರು ನಿರಾಶ್ರಿತರಾದಾರು. ಈ ಸ್ವಾಧೀನ ಪ್ರಕ್ರಿಯೆಯಿಂದ ಬಂಡವಾಳಶಾಹಿ ವಿದೇಶೀಯ ಕುಳಗಳಿಗೆ ನೆಲ ನೀಡುವ ಚಾಳಿಯ ವಿರುದ್ಧ 'ಜನಜಾಗೃತಿ ಅಂದೋಲನ' ಆರಂಭ ಆಗಬೇಕು ಎಂದು ಅಮೃತಮಲ್ಲ ಅವರು ಪ್ರತಿಪಾದಿಸಿದ್ದಾರೆ (22.8.06). ಪ್ರಗತಿ ಬೇಕು.

ವರ್ತಮಾನದ ಬೆಳಸಿನಲ್ಲಿ ಸಂವೇದಿಸಬೇಕು. ಜಾಗತೀಕರಣದಲ್ಲಿ ಅಂಸ್ತಿತ್ವ ಉಳಿಸಿಕೊಳ್ಳಬೇಕು ಅಂತೇ ಜಾಗತೀಕರಣದ ಹೆಸರಿನಲ್ಲಿ ನೆಲದ ಬೆಳೆಯ ಹಕ್ಕನ್ನು ಅಡವಿಡಬಾರದು ಎಂಬ ಸಹಜ ಪ್ರತಿಭಟನಾ ಸೂಚಕ ಪ್ರತಿಪಾದನೆ ಇಲ್ಲಿದೆ.

**11. ಬರಪೀಡಿತ ದಾವಣಗೆರೆಯಲ್ಲಿ ರೈತರ ಪ್ರತಿಭಟನೆ :** ಮಳೆ ಇಲ್ಲದೆ ಜಿಲ್ಲೆಯ ವಿವಿಧ ತಾಲೂಕುಗಳಲ್ಲಿ ಬೆಳೆಗಳು ಒಣಗುತ್ತಿವೆ. ಜೋಳದ ಬೆಳೆ ಹಾಳಾಗಿರುವ ಕಡೆ ಎಕರೆ ಜೋಳದ ಬೆಳೆ ಹಾನಿಗೆ 10 ಸಾವಿರ ರೂ. ಪರಿಹಾರ, ಟನ್ ಕಬ್ಬಿಗೆ 1500 ರೂ.ಗಳ ಬೆಂಬಲ ಬೆಲೆ, ಬಡ್ಡಿ ರಹಿತ ಸಾಲವನ್ನು ರಾಷ್ಟ್ರೀಯ ಹಾಗು ಸಹಕಾರಿ ಬ್ಯಾಂಕ್‌ಗಳಿಂದ ಬರಪರಿಹಾರಧನ ನೀಡಬೇಕು, ಎಂದೆಲ್ಲ ರೈತ ಸಂಘಟನೆಯ ನಾಯಕರು ಹೇಳಿ ದಾವಣಗೆರೆ ಪ್ರದೇಶವನ್ನು, ಬರಪೀಡಿತವೆಂದು ಘೋಷಿಸಲು ಬೇಡಿಕೆ ಇಟ್ಟು ಪ್ರತಿಭಟನೆಯಲ್ಲಿ ತೊಡಗಿದ್ದರು. ಬೆಂಬಲ ಬೆಲೆ ಘೋಷಣೆಯಾಗದೆ, ಬೆಲೆ ಕುಸಿತವೂ ಸೇರಿ ತರಕಾರಿ ಬೆಳೆಗಾರರೂ ದುಸ್ಥಿತಿಗೀಡಾಗಿದ್ದಾರೆ. ಅವರ ಉತ್ಪನ್ನಗಳಿಗೆ ಬೆಂಬಲ ಬೆಲೆ ಘೋಷಿಸಬೇಕು ಎಂಬುದೂ ಪ್ರತಿಭಟನೆಯ ಅಂಶವಾಗಿತ್ತು. ಈ ಪ್ರತಿಭಟನೆಯಲ್ಲಿ ದಾವಣಗೆರೆ ಜಿಲ್ಲಾ ರೈತ ಸಂಘದ ಘಟಕ, ಸರ್ವೋದಯ ಕರ್ನಾಟಕ ರೈತ ಸಂಘ, ಕರುನಾಡ ಸೇನೆ, ದಲಿತ ಸಂಘರ್ಷ ಸಮಿತಿಯೂ ಸೇರಿ ಜಿಲ್ಲಾಧಿಕಾರಿಗಳು ಕಛೇರಿಯ ಮುಂದೆ ಪ್ರದರ್ಶನ ಮಾಡಿದವು. ಜಿಲ್ಲಾ ಪಂಚಾಯಿತಿ ಕಛೇರಿಯಿಂದ ಮುಂದೆ ಜಯದೇವ ವೃತ್ತದಿಂದ 5 ಕಿ.ಮೀ. ದೂರದ ಪ್ರತಿಭಟನಾ ಮೆರವಣಿಗೆಯಲ್ಲಿ ಬಂದವರು 500 ಜನ ರೈತರು, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಡಿ, ಕೂಲಿ ಹಣ ಮತ್ತು ನಿರುದ್ಯೋಗ ಭತ್ಯೆಯನ್ನು ನೀಡಬೇಕೆಂದು ಅವರ ಬೇಡಿಕೆ ಇತ್ತು. 173 ಗ್ರಾಮಗಳ ಕೃಷಿ ಕಾರ್ಮಿಕರಿಗೆ 15 ದಿನಗಳ ಕಾಲ ಕೆಲಸ ಮಾಡಿಸಿಕೊಂಡು ಕೂಲಿಯನ್ನು ನೀಡಿಲ್ಲ. ಜೊತೆಗೆ ಯೋಜನೆಯಡಿ ಇರುವ ಕೆಲಸವನ್ನು ನಿಲ್ಲಿಸಲಾಗಿದೆ. ಈ ಕಾರಣ ಜಗಳೂರು ತಾಲೂಕಿನ ರೈತರು, ರೈತ ಸಂಘದ ಹಾಗೂ ಹಸಿರು ಸೇನೆಯ ನೇತೃತ್ವದಲ್ಲಿ ಮೆರವಣಿಗೆ ಬಂದು ಅನಿರ್ದಿಷ್ಟ ಕಾಲ ಧರಣಿ ಸತ್ಯಾಗ್ರಹವನ್ನು ಆಚರಿಸತೊಡಗಿದ್ದರು. ಮೆಲ್ಲಕಟ್ಟೆ ಮತ್ತು ಅನಾಜಿ ಗ್ರಾಮದ ರೈತರು, ಬೆಳೆ ವಿಮೆಗೆ ಸರ್ಕಾರವು ಅವಧಿಯನ್ನು ಆಗಸ್ಟ್ 31ರ ವರೆಗೆ ನಿಗದಿಗೊಳಿಸಿದೆ. ರೆವಿನ್ಯೂ ಮತ್ತು ಕೃಷಿ ಇಲಾಖಾ ಅಧಿಕಾರಿಗಳು, ಮಾತ್ರ ಮನವಿ ಮಾಡಿದರೂ ಈ ಅವಧಿಯನ್ನು ಗಮನಿಸುತ್ತಿಲ್ಲ. ಬ್ಯಾಂಕಿನ ಅಧಿಕಾರಿಗಳು ವಿಮಾಕಂತಿನ ಹಣವನ್ನು ಕಟ್ಟಿಸಿಕೊಳ್ಳುತ್ತಿಲ್ಲ. ಅಂತಾಗಿ ಸರ್ಕಾರವು ವಿಮಾಕಂತು

ಕಟ್ಟುವ ಅವಧಿಯನ್ನು ವಿಸ್ತರಿಸಬೇಕು ಎಂಬ ಬೇಡಿಕೆ ಇಟ್ಟು ರಸ್ತೆ ತಡೆಯನ್ನು ಅನಾಜಿ ಗ್ರಾಮದ ಬಳಿ ಆಚರಿಸಿದರು. ರೈತರು ಸಿಟ್ಟಾಗಿದ್ದರು ಜಿಲ್ಲಾಡಳಿತವು, ಕ್ಷೀಣ ಮಳೆಯಿಂದಾಗಿರುವ ಬೆಳೆ ಹಾನಿಯನ್ನು ಅಂದಾಜು ಸಮೀಕ್ಷೆ ಮಾಡಿ ತಮಗೆ ಪರಿಹಾರ ಒದಗಿಸಬೇಕೆಂದೂ ಆ ರೈತರ ಹಕ್ಕೊತ್ತಾಯವಾಗಿತ್ತು. ಈ ಸಂದರ್ಭದಲ್ಲಿ ತಹಸೀಲ್ದಾರ್ ಹಾಗೂ ಕೃಷಿ ಇಲಾಖಾಧಿಕಾರಿಗಳು ಬಂದು ರೈತರ ಸಮಸ್ಯೆಗಳನ್ನು ಆಲಿಸಿದರು (29.8.2006). ರೈತರು ಈ ಪ್ರತಿಭಟನೆಯ ಮೂಲಕ ಸಮಸ್ಯೆಯ ಮುಖಗಳನ್ನು, ಪರಿಹಾರದ ಬಗೆಯನ್ನು ಅಧಿಕಾರಿ ವರ್ಗಕ್ಕೆ ಸೂಚಿಸಿದ್ದರೆನ್ನಬೇಕು.

**12. ರೈತರಿಂದ ರೇಷ್ಮೆ ಬೆಳೆ ಹಾನಿಕಾರಣ ಅಧಿಕಾರಿಗಳಿಗೆ ಘೇರಾವ್ :** ಭಾರತೀ ನಗರದ ರೇಷ್ಮೆ ಕೃಷಿ ಸೇವಾ ಕೇಂದ್ರದ ವತಿಯಿಂದ ಗ್ರಾಮದ 98 ಜನ ರೈತರಿಗೆ ಅಧಿಕಾರಿಗಳು ಕೆಟ್ಟಿದ್ದ 10 ಸಾವಿರ ರೇಷ್ಮೆ ಮೊಟ್ಟೆಗಳನ್ನು ವಿತರಿಸಿದ್ದರು. ಅದರಿಂದ ಬೆಳೆ ನಷ್ಟವಾಗಿತ್ತು. ರೈತರು ಆಕ್ರೋಶಗೊಂಡಿದ್ದರು. ಬೆಳೆ ಪರಿಶೀಲನೆಗೆಂದು ಗ್ರಾಮಕ್ಕೆ ಬಂದ ಮೂವರು ಇಲಾಖಾ ಅಧಿಕಾರಿಗಳನ್ನೂ ಮೆಣಸಗೆರೆ ಮತ್ತು ದೇವೇಗೌಡನ ದೊಡ್ಡಿ ಗ್ರಾಮಸ್ಥರು ಮನೆಗಳಲ್ಲಿ ಕೂಡಿ ಹಾಕಿದರು. ವಿಷಯ ತಿಳಿದು ರೇಷ್ಮೆ ಇಲಾಖೆಯ ಸಹಾಯಕ ನಿರ್ದೇಶಕರು ಬಂದು ಪರಿಹಾರವಾಗಿ 100 ಮೊಟ್ಟೆಗೆ 15 ಸಾವಿರ ರೂ. ಕೊಡಿಸುವ ಭರವಸೆ ನೀಡಿ ದಿಗ್ಬಂಧನ ತೆರವು ಮಾಡಿಸಿದರು. ಮೆಣಸಗೆರೆ, ದೇವೇಗೌಡನ ದೊಡ್ಡಿ ಗ್ರಾಮದಲ್ಲಿ ಹೆಚ್ಚು ರೇಷ್ಮೆ ಬೆಳೆಗಾರರಿರುವ ಕಾರಣ ಚಾಕಿ ಸಾಕಾಣಿಕಾ ಕೇಂದ್ರ ಮಂಜೂರು ಮಾಡುವ ಬಗ್ಗೆ ತಿಳಿಸಿ, 50 ಮಂದಿ ರೈತರಿಗೆ ರೇಷ್ಮೆ ಕೃಷಿ ಕುರಿತು 2 ದಿನಗಳ ತರಬೇತಿ ನೀಡುವ ಬಗ್ಗೆ, ಮುಂದೆ ರೈತರಿಗೆ ತೊಂದರೆಯಾಗದಂತೆ ಕ್ರಮವಹಿಸುವ ಬಗ್ಗೆಯೂ ಭರವಸೆ ಇತ್ತರು. (9.9.06) ಇದು ಅಧಿಕಾರಿಗಳ ಅಜಾಗರೂಕತೆಗೆ ರೈತರು ತೋರಿದ ಪ್ರತಿಭಟನೆಯ ಸ್ವರೂಪವಾಗಿತ್ತು.

**13. ಪಿಎಸಿಸಿ ಬ್ಯಾಂಕಿಗೆ ರೈತರ ಮುತ್ತಿಗೆ :** ರೈತರ ಜಮೀನನ್ನು ಬ್ಯಾಂಕಿನ ಹೆಸರಿಗೆ ಸಾಲ ನೀಡುವ ಮುನ್ನವೇ ಚಾಮರಾಜನಗರ ತಾ. ಉಮ್ಮತ್ತೂರು ಕೃಷಿ ಪತ್ತಿನ ಸಹಕಾರ ಬ್ಯಾಂಕು ರಿಜಿಸ್ಟ್ರೇಷನ್ ಮಾಡಿಸಿಕೊಂಡಿತು. ಹಾಗಾಗಿ 9 ತಿಂಗಳು ಮುಗಿದಿದೆ. ತಾನೂ ಸಾಲ ನೀಡದೆ, ಬೇರೆ ಬ್ಯಾಂಕುಗಳಲ್ಲೂ ಸಾಲ ಸಿಗದಂತೆ ಮಾಡಿದೆ. ಶೇ.10 ರಷ್ಟು ಹಣ ಕಟ್ಟಿಸಿಕೊಂಡು ರಸೀತಿಯನ್ನು ನೀಡಿಲ್ಲ. 20 ಲಕ್ಷ ರೂ. ಮಧ್ಯಮಾವಧಿ ಸಾಲದ ಹಣ ಮಂಜೂರಾಗಿದ್ದರೂ ತಾಂತ್ರಿಕ ಕಾರಣವನ್ನು

ಮುಂದೊಡ್ಡಿ ರೈತರಿಗೆ ನೀಡಿರಲಿಲ್ಲ. ಈ ಕಾರಣ ಜಿಲ್ಲಾ ರೈತ ಸಂಘದ ನೇತೃತ್ವದಲ್ಲಿ ಬ್ಯಾಂಕಿಗೆ ಮುತ್ತಿಗೆ ಹಾಕಿ ಬೀಗ ಜಡಿಯಲಾಗಿದೆ. ಸಾಲ ವಿತರಿಸುವವರಿಗೆ ಪ್ರತಿಭಟನೆ ನಿಲ್ಲಿಸುವುದಿಲ್ಲ ಎಂದು ರಾತ್ರಿ ಅಲ್ಲೆ ಊಟ ಮಾಡಿ ಬಿಡಾರ ಮಾಡಿರುವುದು ವರದಿಗೊಂಡಿದೆ (12.9.2006).

14. ಸಾಗಾಣಿಕೆ ಬಾಡಿಗೆ, ಸಂತೆ ಸುಂಕ ಕೊಟ್ಟು ಆ ಬೆಲೆಯೂ ಬೆಳೆದ ಬೆಳೆಗೆ ಬೆಲೆ ಕುಸಿತದಿಂದಾಗಿ ಸಿಗದ ಕಾರಣ ಜಾವಗಲ್ ಸಂತೆಗೆ ತಂದಿದ್ದ ಟೊಮೊಟೋವನ್ನು ಬೀದಿಗೆ ಸುರಿದು ರೈತರು ಸಂತೆ ಮೈದಾನದಲ್ಲಿ ಪ್ರತಿಭಟನೆ ಮಾಡಿದರು (13.9.06).

15. ಬೆಂಗಳೂರು ಎಲ್ಲ 5 ವಿದ್ಯುತ್ ಸರಬರಾಜು ಕಂಪೆನಿ (ಬೆಸ್ಕಾಮ್)ಗಳು ಶೇ.7 ರಿಂದ 8 ರಷ್ಟು ವಿದ್ಯುತ್ ದರ ಹೆಚ್ಚಳಕ್ಕೆ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಮನವಿ ಸಲ್ಲಿಸಿವೆ. ಈ ಬಗ್ಗೆ ಆಕ್ಷೇಪಣಾ ಅರ್ಜಿಗಳು ಭಾರಿ ಸಂಖ್ಯೆಯಲ್ಲಿ ದಾಖಲಾಗಿವೆ. ಇದು ಉಡುಪಿಯ ಭಾರತೀಯ ಕಿಸಾನ್ ಸಂಘದ ನೇತೃತ್ವದಲ್ಲಿ ವಿವಿಧ ಸಂಘಟನೆಗಳು ಸೇರಿ ನಡೆಸಿದ ಪ್ರಯತ್ನದ ಫಲವಾಗಿದೆ. ಅಂದರೆ ಪ್ರತಿಭಟನೆಯ ಒಂದು ಶಾಂತ ಸ್ವರೂಪ ಇದಾಗಿದೆ ಎನ್ನಬೇಕು (14.8.06).

16. ಕಳೆದ ವರ್ಷದ ನುಸಿರೋಗ ತವಿದು, ಕೊಬ್ಬರಿಯ ಹೆಚ್ಚಿನ ಉತ್ಪಾದನೆ ಆಯಿತು. ಮತ್ತು ಮಾರಾಟಕ್ಕೆ ಅದರ ಪ್ರಮಾಣ ಹೆಚ್ಚಿ ಬೆಲೆ ಕುಸಿತವಾಯಿತು. 5200 ರೂ.ಗಳಿಂದ 4600ಕ್ಕೆ ಇಳಿದ ಕಾರಣ ರೊಚ್ಚಿಗೆದ್ದ ರೈತರು ಪ್ರತಿಭಟನೆ ನಡೆಸಿ ಅದು ಹಿಂಸಾರೂಪ ತಳೆದಿತ್ತು. ರೈತರ ಸಂಕಷ್ಟ ಗಮನಿಸಿ ಅಡಮಾನ ಯೋಜನೆಯಡಿ ಶೇ.90ರಷ್ಟು ಸಾಲವನ್ನು ನೀಡಿ, ಸಾಲದ ಮಿತಿಯನ್ನು 1 ಲಕ್ಷದವರೆಗೆ ಹೆಚ್ಚಿಸಲಾಯಿತು. (21.10.06)

17. ತುಮಕೂರು ಜಿಲ್ಲಾ ರೈತರು, ಕೊಬ್ಬರಿ ಬೆಲೆ ಬಗ್ಗೆ ಸರ್ಕಾರದ ನಿಲುವು ಪ್ರಕಟಣೆ, ಆಗದಿರುವುದು ಕೊಬ್ಬರಿ ಧಾರಣೆ ಕುಸಿತ, ಕೆಲ ವರ್ತಕರ ಹಿಡಿತದಲ್ಲಿದ್ದ ಮಾರುಕಟ್ಟೆ ಹಾಗು ಅವರು ಕೈಗೊಳ್ಳುತ್ತಿದ್ದ ಏಕಪಕ್ಷೀಯ ನಿರ್ಣಯ ಈ ಬಗೆಗೆಲ್ಲ ಸಮಸ್ಯೆಗಳ ಹಿನ್ನೆಲೆಯಲ್ಲಿ 8 ದಿನಗಳ ಸರದಿ ಉಪವಾಸ ನಡೆಸಿ, ಎಪಿಎಂಸಿ ಗೆ ಒಂದು ಹಂತದಲ್ಲಿ ಬೀಗ ಮುದ್ರೆ ಹಾಕಲು ಮುಂದಾಗಿದ್ದರು. ಜಿಲ್ಲಾಧಿಕಾರಿಗಳು ಆಶ್ವಾಸನೆಯನ್ನು ನೀಡಿ ರೈತರು ಮತ್ತು ವರ್ತಕರ ನಡುವೆ ಸಂಧಾನ ನಡೆಸಿ ಕೊಟ್ಟ ಕಾರಣ, ಅಕ್ಟೋಬರ್ 25ರವರೆಗೆ ತಾತ್ಕಾಲಿಕವಾಗಿ ಪ್ರತಿಭಟನೆಯನ್ನು ರೈತರು ಹಿಂತೆಗೆದುಕೊಂಡರು (21.10.06)

18. ಬಾಗಲಕೋಟೆಯಲ್ಲಿ ಕಬ್ಬು ಬೆಳೆಗಾರರು, ಸರ್ಕಾರ ನಿಗದಿಗೊಳಿಸಿರುವ ಟನ್ ಕಬ್ಬಿಗೆ 1200 ರೂ.ಗಳನ್ನು ಸಕ್ಕರೆ ಕಾರ್ಖಾನೆಗಳು ನೀಡಲು ನಿರಾಕರಿಸಿದ ಕಾರಣ ತೀವ್ರವಾಗಿ ಪ್ರತಿಭಟಿಸಿದರು. ಜಿಲ್ಲೆಯಾದ್ಯಂತ ರಸ್ತೆ ತಡೆಯ ಯಶಸ್ವಿ ಹೋರಾಟ ನಡೆಸಿದ್ದು ಜನ ಜೀವನವು ಅಸ್ತವ್ಯಸ್ತವಾಯಿತು. ಕಸದ ರಾಶಿ ಹಾಗೂ ಕಲ್ಲು ಹಾಕಿ ರಸ್ತೆ ಯುದ್ದಕ್ಕೂ ಟೈರ್‌ಗಳಿಗೆ ಬೆಂಕಿ ಹಚ್ಚಿದ್ದು ವಾಹನ ಸಂಚಾರ ಸ್ಥಗಿತಕ್ಕೆ ಆ ಹೋರಾಟ ಕಾರಣವಾಗಿತ್ತು. ಜಿಲ್ಲಾಧಿಕಾರಿಗಳ ಜೊತೆಗಿನ ಮಾತುಕತೆ ಫಲಕೊಡಲಿಲ್ಲ. ರೈತ ಸಂಘದ ಈ ಪ್ರತಿಭಟನೆ ಜಿಲ್ಲೆಯಾದ್ಯಂತ ಪ್ರಮುಖ ನಗರ ಹಾಗೂ ಪಟ್ಟಣಗಳಲ್ಲೂ ನಡೆಯಿತು. ರೈತರ ಮೇಲೆ ಲಾಠಿ ಪ್ರಹಾರವೂ ಆಯಿತು; ಜಿಲ್ಲಾಡಳಿತ ಹೇರಿದ ನಿಷೇಧಾಜ್ಞೆಯನ್ನು ಲೆಕ್ಕಿಸದೆ ಜಿಲ್ಲಾಡಳಿತ ಸೌಧದ ಸಮೀಪದಲ್ಲಿಯೇ ಧರಣಿ ನಡೆಸಿದರು. (15, 16, 17–11–06).

19 ಮೈಸೂರಿನಲ್ಲಿಯೂ ಕಬ್ಬು ಬೆಲೆ ನಿಗದಿ ಮತ್ತು ಬೆಳೆಗಾರರ ಸಮಸ್ಯೆಗಳ ನಿವಾರಣೆಗೆ ಸರ್ಕಾರ ನವೆಂಬರ್ 25 ರೊಳಗೆ ಕ್ರಮಕೈಗೊಳ್ಳದಿದ್ದರೆ ಚುನಾವಣೆಯಲ್ಲಿ ಮಹತ್ವದ ನಿರ್ಣಯ ಕೈಗೊಳ್ಳಲು ರೈತರಿಗೆ ಕರೆ ನೀಡುವ ಬಗ್ಗೆ ಕಬ್ಬು ಬೆಳೆಗಾರರ ಸಂಘ ತಿಳಿಸಿದೆ.

20. ಬಳ್ಳಾರಿ ರೈಲ್ವೆ ನಿಲ್ದಾಣದಿಂದ 100 ಟನ್‌ಗೂ ಅಧಿಕ ಈರುಳ್ಳಿಯನ್ನು ಗೂಡ್ಸ್‌ನಲ್ಲಿ ಕೋಲ್ಕೊತ್ತಾದ ಮೂಲಕ ಬಾಂಗ್ಲಾಕ್ಕೆ ಕಳುಹಿಸಲು ಚಳ್ಳಕೆರೆ ರೈತರು ತಂದಿದ್ದರು. ಈರುಳ್ಳಿ ಸಾಗಿಸಲು ಅಧಿಕಾರಿಗಳು ವ್ಯಾಗನ್ ನೀಡಲು ತಕರಾರು ಮಾಡಲು ಉದ್ವಿಗ್ನ ಸ್ಥಿತಿ ನಿರ್ಮಾಣವಾಗಿ ಪ್ರತಿಭಟನೆಗೆ ಕಾರಣವಾಗಿತ್ತು. (14.11.06) ನಂತರ ವ್ಯಾಗನ್ ನೀಡಲಾಯಿತು;

21. ಗದುಗಿನಲ್ಲಿ, ಬೆಂಬಲ ಬೆಲೆಯಲ್ಲಿ ಕೊಳ್ಳಲು ಸರ್ಕಾರದ ಆದೇಶ ಬರದೆ 'ಎ' ದರ್ಜೆ ಈರುಳ್ಳಿ ಖರೀದಿ ನಿಲ್ಲಿಸಿದ್ದರಿಂದ ರೈತರು ಪ್ರತಿಭಟನೆ ನಡೆಸಿದರು. ಜಿಲ್ಲಾಧಿಕಾರಿಗಳಿಗೆ ಆದೇಶವು ಸರ್ಕಾರ ಹೊರಡಿಸಿದರೂ ತಲುಪದೆ ಖರೀದಿ ಆರಂಭವಾಗಿರಲಿಲ್ಲ. ಸಂಜೆ 4 ಗಂಟೆಯವರೆಗೆ ಕಾಯ್ದು ರೈತರು, ನೆರೆ ಜಿಲ್ಲೆಯಲ್ಲಿ ಖರೀದಿ ನಡೆದದ್ದು ತಿಳಿದು, ರೈತರು ಸಂಘಟಿತರಾಗಿ, ಈರುಳ್ಳಿ ತಂದಿದ್ದ ಟ್ರಾಕ್ಟರ್‌ಗಳನ್ನು ಜ॥ಕಾರ್ಯಪ್ಪ ವೃತ್ತದಲ್ಲಿ ನಿಲ್ಲಿಸಿ ಟೈರ್‌ಗೆ ಬೆಂಕಿ ಹಚ್ಚಿ, ಬೀದಿಗೆ ಈರುಳ್ಳಿಯನ್ನು ಚೆಲ್ಲಿ ರಸ್ತೆ ತಡೆ ಮಾಡಿದರು (16.11.06); ಸರ್ಕಾರಕ್ಕೆ ರೈತರ ಸಾಂತ್ವನದ ಉದ್ದೇಶವಿದ್ದರೂ ಆದೇಶ ಚಾಲನೆಯ ಸಂದರ್ಭದಲ್ಲಿ ಆಗುವ ಅಡ್ಡಿಗಳು ರೈತ ಪ್ರತಿಭಟನೆಗೆ ಇಂಬುಗೊಡುವ ಬಗೆ ಇದಾಗಿದೆ.

**22. ಬಿಟಿ ಹತ್ತಿ ಮತ್ತು ಬದನೆ :** ಮಾನ್ಸಾಂಟೋ ಬಳುವಳಿಯಾದ ಬಿಟಿ ಹತ್ತಿ ಬೀಜದ ವಿರುದ್ಧ ರಾಷ್ಟ್ರಾದ್ಯಂತ ಚಳುವಳಿ ನಡೆಯಿತು. ಆದರೆ ಅಧಿಕಾರಿಗಳ ಒತ್ತಾಸೆ ಹಾಗು ಕೊಟ್ಟ ಲೈಸೆನ್ಸಿನಿಂದ ನಮ್ಮ ಹತ್ತಿ ಮಾರುಕಟ್ಟೆ ಮನ್ಸಾಂಟೋ ಮಹಿಕೋದ ಏಕಸ್ವಾಮ್ಯ ನಿಯಂತ್ರಣದಲ್ಲಿ ಬಂದಿ ಆಗಿದೆ. ವಿದರ್ಭ ಮತ್ತು ಆಂಧ್ರದ ರೈತರ ಆತ್ಮಹತ್ಯೆಗಳು ಈ ಏಕಸ್ವಾಮ್ಯದ ಫಲಶ್ರುತಿಯೆ ಆಗಿವೆ ಬಿ.ಟಿ.ಹತ್ತಿ ಈಗ ವಿಫಲವಾಗುತ್ತಿದೆ. ಕಾರಣ ಗುಂಡನೆಯ ಹತ್ತಿ ಹುಳುವಿನ ಪ್ರತಿರೋಧ ಶಕ್ತಿ ಹೆಚ್ಚಿ ಹತ್ತಿ ಅದು ಬೆಳೆಯನ್ನೆ ತಿಂದು ಹಾಕುತ್ತಿದೆ. ಈ ಹುಳು ಸಂಪೂರ್ಣ ಪ್ರತಿರೋಧ ಗಳಿಸಲು ಇನ್ನು 6 ರಿಂದ 9 ವರ್ಷಗಳು ಬೇಕಾಗುತ್ತದೆ. ಆ ವೇಳೆಗೆ ಹತ್ತಿ ಬೆಳೆವ ಜಮೀನು ಉಪಯುಕ್ತತೆ ಕಳೆದುಕೊಂಡಿರುತ್ತದೆ. ಈ ಅವಧಿಯಲ್ಲಿ ರೈತರ ಆತ್ಮಹತ್ಯೆಗಳು ಉಂಟಾಗುವ ಸಾಧ್ಯತೆಗಳೇ ಹೆಚ್ಚು. ಹೀಗಿರುವಲ್ಲಿ 'ಪ್ಯಾಟ್‌ಕಾಪ್' ಅಧ್ಯಕ್ಷರುಗಳಿಗೆ ಬದನೆ ಮತ್ತು ಅಕ್ಕಿ ಮಾರುಕಟ್ಟೆಗಳನ್ನು ವಶಮಾಡಿಕೊಳ್ಳಲು ರಾಜ್ಯಗಳ ಅಧಿಕಾರಿಗಳು ನೆರವಾಗುತ್ತಿದ್ದಾರೆ. ಅಂದರೆ ವಿನಾಶಕಾರಿ ರಾಸಾಯನಿಕಗಳು ನಮ್ಮ ಆಹಾರ ಜೀರ್ಣಾಂಗಗಳಿಗೆ ಸವಾಲಾಗುತ್ತವೆ. ಈಗ ಬದನೆ ತಳಿಯ ಮೇಲಿನ ಪ್ರಯೋಗದ ಮೇಲೆ ಸರ್ವೋಚ್ಚ ನ್ಯಾಯಾಲದಲ್ಲಿ ದಾವೆ ಬಿದ್ದ ಕಾರಣ, ತೀರ್ಪನ್ನು ಷರತ್ತುಗಳನ್ನು ಹಾಕಿ ನೀಡಲಾಗಿದೆ: ತಳಿ ತಂತ್ರ ಮಂಜೂರು ಸಮಿತಿಯ ಪಾರದರ್ಶಕತೆ, ತಜ್ಞರ ಸ್ವತಂತ್ರ ಸಮಿತಿಯ ಅಭಿಪ್ರಾಯಕ್ಕೆ ಖಡ್ಡಾಯ ಮನ್ನಣೆ, ನಿರ್ಧಾರಗಳು ಪಟ್ಟ ಭದ್ರ ಹಿತಾಸಕ್ತಿಯಿಂದ ದೂರವಿರುವುದು, ಎಂದೆಲ್ಲ ಹೇಳಿದೆ. ಆದರೆ ಭಾರತಕ್ಕೆ ಈ ತಂತ್ರಜ್ಞಾನ ಮೌಲ್ಯ ಮಾಪನದ ಅನುಭವ ಹಾಗೂ ವ್ಯವಸ್ಥೆ ಇಲ್ಲದ ಕಾರಣ, ಈ ಕಂಪೆನಿಯ 'ಟೆಸ್ಟಿಂಗ್ ಬೆಂಚ್ ಮಾರ್ಕ್' ಒಪ್ಪಿಕೊಂಡು ಕಂಪೆನಿಗೇ ಅಡವಿಟ್ಟುಕೊಂಡಂತಾಗಿದೆ. ಈ ಕಾರಣಗಳಿಂದಲೇ ಕೊಯಮತ್ತೂರಿನಲ್ಲಿ ಮಹಿಕೋದ ಜಿಇ ಭತ್ತದ ಬೆಳೆಯನ್ನು ಪ್ರಯೋಗ ಕ್ಷೇತ್ರದಲ್ಲಿ ರೈತರು ಸಿಡಿದೆದ್ದು ನಾಶ ಮಾಡಿದರು. ಜೈವಿಕ ತಂತ್ರಜ್ಞಾನ ಇಲಾಖೆಯು ಈ ಬೆಳೆಯ ಪ್ರಾತ್ಯಕ್ಷಿಕೆಯ ನೆಲೆಯನ್ನು ಬೇರೆ ಬೆಳೆಗಳ ಹೊಲಗದ್ದೆಗಳಿಂದ ಪ್ರತ್ಯೇಕ ವಿತರಿಸಬೇಕೆಂದು ನಿಬಂಧನೆ ಮಾಡಿದ್ದರೂ ಮಹಿಕೋ ಇದನ್ನು ನಿರ್ಲಕ್ಷಿಸಿತು. ಇದರಿಂದ ತಮಿಳುನಾಡು ರೈತ ಸಂಘವು ತಾನು ಈ ಬಗ್ಗೆ ಗಂಭೀರ ಕ್ರಮಕ್ಕೆ ಮುಂದಾಗುವ ಬಗ್ಗೆ ಎಚ್ಚರಿಕೆ ನೀಡಿದ್ದಾರೆ. ಆಮಿಷಕಾರಣ ಮಾನ್ಸೆಂಟೊ ಸೂಚನೆಗೆ ದೊರೆತಷ್ಟು ಮಾನ್ಯತೆ ಅಧಿಕಾರಿಗಳಿಂದ ರೈತರದಕ್ಕೆ ದೊರೆಯುತ್ತಿಲ್ಲದಿರುವುದೇ ದುರಂತ, ಎಂದು ಅಂಕಣಕಾರ ಶ್ರೀ ಟಿ.ಎಸ್. ಜಾರ್ಜ್ ವಿಶ್ಲೇಷಿಸಿದ್ದಾರೆ (19.11.06). ಈ ಬಗೆಗಿನ ಹೋರಾಟದ ಬಿಸಿ ಕೃಷಿ ವಿಶ್ವವಿದ್ಯಾಲಯದ ಜೈವಿಕ ತಂತ್ರಜ್ಞಾನದ ವಿಜ್ಞಾನಿಗಳಿಗೆ

ತಾಗಿರುವಂತೆ. ತಳಿಗಳಿಗೆ ಕುಲಾಂತರಿ ಗುಣ ಅಳವಡಿಕೆ ಪ್ರಯೋಗಕ್ಕೆ ಮುಂದಾಗಿದ್ದ ಅವರು ರೈತರ ಅಹವಾಲನ್ನು ಕೇಳತೊಡಗಿದ್ದಾರೆ. ಧಾರವಾಡ ಕೃಷಿ ವಿಜ್ಞಾನಿಗಳ ಸಂಶೋಧನೆಯ ಸಂಪೂರ್ಣ ವಿವರವನ್ನು ನೀಡಲು ರೈತ ನಾಯಕರಿಂದ ಒತ್ತಾಯ ಬಂದಿದೆ. ಬಿ.ಟಿ.ಕಾರ್ಯಾಗಾರವೂ ಈ ಕೃಷಿ ವಿಶ್ವವಿದ್ಯಾಲಯದಲ್ಲಿ ಆಯೋಜನೆಗೊಂಡಿತ್ತು. ರೈತರು ಕೇಳುವ ಸಂಶೋಧನೆ ಬೇಕು, ವಿವಿಧ ತಳಿಯ ಬದನೆ ಹತ್ತಿ ಬೆಳೆದ ರೈತರನ್ನು ಇಂಥ ಕಾರ್ಯಾಗಾರಕ್ಕೆ ಕರೆಸಬೇಕಿತ್ತು ಎಂದೆಲ್ಲ ವಿಚಾರಗಳು ಅಲ್ಲಿ ಪ್ರಕಟವಾದುವು. ರೈತ ನಾಯಕರು ಮತ್ತು ಶಾಸಕರೂ ಪಾಲ್ಗೊಂಡ ಸಭೆಯಲ್ಲಿ ಸಂವಾದವೂ ನಡೆಯಿತು. (23.11.06)

ಮಾನ್ಸೆಂಟೋ ಕಂಪೆನಿಯ ಫಿನಾಕಲ್ ಮತ್ತು ಸುಪ್ರೀಂ ತಳಿಯ ಮೆಕ್ಕೆಜೋಳವನ್ನು ರೈತರು ಬಿತ್ತಿದ್ದರು; ಎಕರೆಗೆ 25 ಕ್ವಿಂಟಾಲ್ ಇಳುವರಿ ನಿಗದಿ ಮಾಡಿ ಬೆಳೆ ನಷ್ಟ ಪರಿಹಾರ ಕೋರಿದ್ದರು. ಕೇಂದ್ರ ಸರ್ಕಾರವು ನಿಗದಿಗೊಳಿಸಿರುವ ವಿಧಾನದಂತೆ ಕೃಷಿ ಬೀಜ ತಜ್ಞರು, ನಿರ್ಧರಿಸಿ 150 ಕ್ಕೂ ಹೆಚ್ಚಿನ ರೈತರಿಗೆ ಬೆಳೆ ನಷ್ಟ ಪರಿಹಾರ ಕೊಡಲು ಕಂಪೆನಿ ಮುಂದಾಗುತ್ತಿಲ್ಲ. ತನ್ನದೇ ವೈಜ್ಞಾನಿಕ ಪದ್ಧತಿ ರೀತ್ಯಾ ಎಕರೆಗೆ 25 ಕ್ವಿಂಟಾಲ್ ಇಳುವರಿ ನಿಗದಿ ಮಾಡಿ 45–50 ರೈತರಿಗೆ ಪರಿಹಾರದ ಪ್ರಸ್ತಾವ ನೀಡಿದೆ. ಆದರೆ ಬೀಜವೈಫಲ್ಯ, ಬೆಳೆ ನಷ್ಟಕ್ಕೆ ಪರಿಹಾರವಿಲ್ಲ ಎಂದಿದೆ. ರೈತರು ಬೆಳೆ ನಷ್ಟಕ್ಕೆ ಈಡಾಗಿ, ಪರಿಹಾರವೂ ಇಲ್ಲದೆ ವಿಶ್ವಾಸ ಕಳೆದುಕೊಂಡು ಶೋಷಣೆಗೀಡಾಗಿರುವಲ್ಲಿ, ಜನಪ್ರತಿನಿಧಿಗಳು ಹಾಗು ಕಂಪೆನಿ ವಿರುದ್ಧ ಸಿಡಿದೇಳುವ ಬಗ್ಗೆ ವರದಿಗಳು ಪ್ರಕಟವಾಗಿವೆ (23.11.06).

ಧಾರವಾಡದ ಕೃಷಿ ವಿಶ್ವವಿದ್ಯಾಲಯದ ಆವರಣದಲ್ಲಿ ಸೆಪ್ಟೆಂಬರ್‌ನಲ್ಲಿ ನಡೆದ 'ಕೃಷಿ ಮೇಳ–06' ರ ಸಂದರ್ಭದಲ್ಲಿ ಬಿಟಿ ಹತ್ತಿ, ಬಿಟಿ ಬದನೆ ತಳಿಗಳ ಬಗ್ಗೆ ರೈತರಿಗೆ ತಿಳುವಳಿಕೆ ನೀಡಬೇಕು. ಅಥವಾ ಅವನ್ನು ನಿಷೇಧಿಸಬೇಕು ಎಂದು ರೈತ ಸಂಘಟನೆಗಳು ಪ್ರತಿಭಟನೆ ತೋರಿದ್ದುವು. ಬಿಟಿ ತಳಿಗಳ ಸಾಧಕ ಬಾಧಕಗಳ ಬಗ್ಗೆಯೂ ವಿಚಾರ ವಿನಿಮಯ ನಡೆದಿತ್ತು. ರೈತ ಹೋರಾಟಗಾರರು ಈ ತಳಿ ಬೆಳೆಯಿಂದ ಭೂಮಿ ಬಂಜರಾಗಲಿದೆ ಎಂಬ ಅನುಮಾನ ತೋರಿದ್ದಾರೆ. ವಿಶ್ವವಿದ್ಯಾಲಯ ಸಂಶೋಧನೆಯಾದ ವರಲಕ್ಷ್ಮಿ ಹತ್ತಿಯ ಬಂಪರ್ ಬೆಳೆ ಆದ ನಂತರ ಭೂಮಿ ಬರಡಾದ ಸತ್ಯ ರೈತರಿಗೆ ನೇರ ಗೋಚರವಿರುವುದರಿಂದ ಬಿಟಿ ತಳಿಯ ಬಗ್ಗೆ ಗೊಂದಲು ರೈತರಲ್ಲಿ ಉಂಟಾಗಿದೆ. ಇದು ಪ್ರತಿಭಟನೆಯ ರೂಪದಲ್ಲಿ ಕಂಡುಬರುತ್ತಿದೆ (24.11.06).

**23. ಕಬ್ಬು ಬೆಲೆ ನಿಗದಿ ಹೋರಾಟಗಳು :** ಕಬ್ಬಿನ ಹಂಗಾಮು ಆರಂಭವಾದರೂ ಕಾರ್ಖಾನೆಗಳು ಕಾರ್ಯನಿರತವಾಗುತ್ತಿಲ್ಲ. ರೈತರ ಹೋರಾಟ, ಬೆಲೆ ಸಂಬಂಧ ಬೆಳೆಯುತ್ತಿದೆ. ಕಳೆದ ಸಾಲಿನಲ್ಲಿ ಟನ್ ಕಬ್ಬಿಗೆ 900 ರೂ. ನಿಂದ 1200 ರೂ. ಬೆಲೆ ಇತ್ತು. ಮಹಾರಾಷ್ಟ್ರದಲ್ಲಿ 1600 ರೂ. ವರೆಗೆ ಕಾರ್ಖಾನೆಗಳು ನೀಡಿದ್ದುವು. ಕಬ್ಬಿನ ಬೆಳೆ ಈ ವರ್ಷ ಹೆಚ್ಚಿದ್ದು ಮುಂದೆ ಸಕ್ಕರೆ ಬೆಲೆ ಇಳಿಯಲಿದೆ. ಸದ್ಯ 900 ರೂ ಮಾತ್ರ ಟನ್ನಿಗೆ ಕೊಡಲು ಸಾಧ್ಯ. ಮಹಾರಾಷ್ಟ್ರದಂತೆ ನಮ್ಮ ಸರ್ಕಾರ ಪ್ಯಾಕೇಜ್ ನೀಡಿದರೆ ಟನ್ನಿಗೆ 1200 ರೂ. ನೀಡುತ್ತೇವೆ ಎಂದು ಕಾರ್ಖಾನೆ ಮಾಲೀಕರು ಹೇಳಿಕೆ ಆಗಿದೆ. ಜೊತೆಗೆ ಅಲ್ಲಿ ಕಬ್ಬಿನ ಖರೀದಿ ತೆರಿಗೆ ಇಲ್ಲ. ಅದೇ ಕರ್ನಾಟಕದಲ್ಲಿ ಟನ್ ಕಬ್ಬಿಗೆ 75ರೂ. ಖರೀದಿ ತೆರಿಗೆ ಕಟ್ಟಬೇಕು. ಮಹಾರಾಷ್ಟ್ರದಲ್ಲಿ ಕೇಂದ್ರ ಸರ್ಕಾರದ ಶೇ. 4ರ ಬಡ್ಡಿಯ ಸಾಲ ಯೋಜನೆ ಇದೆ. ನಮ್ಮ ರಾಜ್ಯ ಸರ್ಕಾರವೂ ಅದನ್ನು ಜಾರಿಗೆ ತಂದು ಕೇಂದ್ರದಿಂದ ನಷ್ಟ ತುಂಬಿಸಿಕೊಳ್ಳಬೇಕು. ಆಗ ಪ್ರತಿ ಕಾರ್ಖಾನೆ 25 ಕೋಟಿ ರೂ. ನೆರವು ಪಡೆಯುತ್ತದೆ. ಮುಕ್ತ ಮಾರಾಟಕ್ಕೆ ಅವಕಾಶವಾಗುತ್ತದೆ. ಈ ಹಿನ್ನಲೆಯಲ್ಲಿ ಕಾರ್ಖಾನೆ ಮಾಲೀಕರ ವಾದವಿದ್ದರೆ, ರೈತರು, ಕಟಾವು ಮತ್ತು ಸಾಗಾಣಿಕೆ ವೆಚ್ಚ ಟನ್‌ಗೆ 250 ರೂ. ಕಬ್ಬು ಸುರಿಸಲು 300 ರೂ. ಖರ್ಚು, 75 ರೂ. ಖರೀದಿ ಶುಲ್ಕ ನೀಡಬೇಕಿದೆ. ಬಂಡವಾಳದ ಮೇಲೆ 160 ರೂ. ಬಡ್ಡಿ, ಅಸಲಿನ ಮೇಲೆ ಟನ್‌ಗೆ ಬ್ಯಾಂಕಿಗೆ ತುಂಬಲು 100 ರೂ. ರಿಕವರಿ 115 ಕೆ.ಜಿ. ಬಂದರೆ ಬಗಾಸ್, ಮೊಲ್ಯಾಸಿಸ್ ಎಲ್ಲ ಸೇರಿ 1684 ರೂ. ಆದಾಯ; ಉಳಿಯುವುದು ಬರೀ 850. ಹಾಗಾಗಿ ರೈತರಿಗೆ ಅಷ್ಟು ಮಾತ್ರ ಕೊಡಲು ಸಾಧ್ಯ ಎಂಬುದು ಕಾರ್ಖಾನೆಯವರ ಮಾತು. ರೈತ ಸಂಘವಾದರೋ ಕಬ್ಬಿನ ಬೆಲೆ ನಿಗದಿ ಆಗುವ ತನಕ ಕಟಾವಿಗೆ ಅವಕಾಶ ನೀಡುವುದಿಲ್ಲ, ಎಂದಿದೆ. ಸರ್ಕಾರದ ಮಧ್ಯಸ್ಥಿಕೆ ಫಲ ನೀಡದಿದ್ದರೆ ಹೋರಾಟ ತಪ್ಪುವುದಿಲ್ಲ ಎಂದು ಈ ಹಿನ್ನಲೆಯಲ್ಲಿ ಗಮನಕ್ಕೆ ಬರುತ್ತದೆ. ರಸ್ತೆ ತಡೆ ಕಾರ್ಖಾನೆಗಳಿಗೆ ಬೀಗ, ಧರಣಿ ಸತ್ಯಾಗ್ರಹ ನಡೆಸುತ್ತಿರುವ ರೈತ ಸಮೂಹ ಟನ್ ಕಬ್ಬಿಗೆ 1200 ರೂ. ಬೇಕೇ ಬೇಕು ಎನ್ನುತ್ತಿದೆ. ಬಾಗಲಕೋಟೆ ಕಬ್ಬು ಬೆಳೆಗಾರರು, ರೈತ ನಾಯಕರು ಮಹಾರಾಷ್ಟ್ರದ ಕಾರ್ಖಾನೆಗಳಲ್ಲಿ 1200 ರೂ. ನಿಂದ 1285 ರೂ. ವರೆಗೆ ಬೆಲೆ ನಿಗದಿ ಇರುವಲ್ಲಿ ಅಲ್ಲಿಗೆ ಭೇಟಿ ನೀಡಿ ಅಲ್ಲಿಯ ಪ್ರಗತಿಯನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡಿದ್ದಾರೆ. ಈ ಮಧ್ಯೆ ಆಮರಣ ಉಪವಾಸ ಹಾಗೂ ಧರಣಿ ಸತ್ಯಾಗ್ರಹ ಮುಂದುವರಿಯುತ್ತಿರುವಲ್ಲಿ ಜಮಖಂಡಿ ರೈತ ಬಸವರಾಜ ಕೊಕಟನವರ ಮತ್ತು ಬೀಳಗಿ ತಾಲೂಕಿನ ರೈತ ಮಲ್ಲಪ್ಪ ಉಪವಾಸದಿಂದ ತೀವ್ರ ಅಸ್ವಸ್ಥಗೊಂಡರು.

ಬಾಗಲಕೋಟೆ ಜಿಲ್ಲಾಸ್ಪತ್ರೆಗೆ ಸೇರಿ ಮತ್ತೆ ಧಾವಿಸಿ ಬಂದು ಹೋರಾಟದಲ್ಲಿದ್ದಾರೆ. (21.11.06). ಸುಮಾರು 20 ದಿನಗಳ ಕಾಲ ವಿವಿಧ ಹಂತದ ಹೋರಾಟ, ರಸ್ತೆ ತಡೆ, ಆಮರಣ ಉಪವಾಸ, ಕಾರ್ಖಾನೆಗಳಿಗೆ ಮುತ್ತಿಗೆ ನಡೆದರೂ ಜಗ್ಗದ ಕಾರ್ಖಾನೆಗಳ ವರ್ತನೆಗೆ ಹೋರಾಟದ ಮಗದೊಂದು ಮಜಲನ್ನು ರೈತರು ತೋರಿದ್ದಾರೆ. ಬೇಡಿಕೆ ಈಡೇರುವವರೆವಿಗೆ ಸತ್ಯಾಗ್ರಹಕ್ಕೆ ನಿಲುಗಡೆ ಇಲ್ಲ ಎಂದು, ಉಪವಾಸದ ಜೊತೆಗೆ ಅರೆ ಬೆತ್ತಲೆ ಪ್ರದರ್ಶನ ಪ್ರತಿಭಟನೆಯನ್ನು ತೋರಿದ್ದಾರೆ. ಜಮಖಂಡಿತಾ. ಬಸವರಾಜ ಕೊಕಟ್‌ನವರ ಮತ್ತು ಬೀಳಗಿಯ ಮಲ್ಲಪ್ಪ ಭಾವಿ ಇದರಲ್ಲಿ ಪಾಲ್ಗೊಂಡಿದ್ದರು. (6.12.06)

**24. ಕಾಫಿಗೆ ಪ್ಯಾಕೇಜ್ :** ಬೋರರ್ ರೋಗದಿಂದಾಗಿ ಅರೇಬಿಕಾ ಕಾಫಿ ಬೆಳೆಗಾರರಿಗೆ ಕಡಿಮೆ ಇಳುವರಿ, ಅಕಾಲಿಕ ಮಳೆ ಮತ್ತು ಬರ ಸಮಸ್ಯೆಗಳೂ ಸೇರಿ ಸಂಕಷ್ಟವಾಗಿದೆ. ಅರೇಬಿಕಾ ಕಾಫಿ ಉತ್ಪಾದನೆ ವೆಚ್ಚ, ರೊಟಸ್ಟಾಗಿಂತ ಹೆಚ್ಚು, ಬಿತ್ತಿ ಏಳು ವರ್ಷಗಳವರೆಗೆ ಫಸಲು ಸಿಗದು. ಹಾಲಿ ಬೆಳೆ ತೆಗೆದು ಹೊಸ ಸಸಿ ನೆಡಲು ಆದಾಯವಿಲ್ಲ. ಅಂತಾಗಿ ವಿಶೇಷ ಕಾಫಿ ಸಾವಧಿ ಸಾಲ ಯೋಜನೆಯಲ್ಲಿ ಲಭ್ಯ ಸಾಲದ ಮೇಲಿನ ಬಡ್ಡಿ ಕಡಿತ. ಸಾಲದ ಮೊತ್ತದ ಭಾಗಕ್ಕೆ ರಿಯಾಯಿತಿ ಬೇಕು. ಪರಿಹಾರ ಪ್ಯಾಕೇಜ್ ಪ್ರಕಟವಾಗಬೇಕೆಂಬುದು ಕೆಪಿಎ (ಕಾಫಿ ಪ್ಲಾಂಟರ್ ಅಸೋಸಿಯೇಷನ್) ಕೇಂದ್ರವನ್ನು ಒತ್ತಾಯಿಸಿದೆ. ಚಹಾ ಬೆಳೆಗಾರರಿಗೆ ಸಬ್ಸಿಡಿಯನ್ನು ಶೇ.40 ರಿಂದ 25ಕ್ಕೆ ಇಳಿಸಿರುವುದಕ್ಕೆ ತೀವ್ರ ವಿರೋಧ ವ್ಯಕ್ತ ಪಡಿಸಿದೆ. ಚಹಾ ಹರಾಜು ಕೇಂದ್ರವು ಮೂಲ ಸ್ಥಳದಲ್ಲಿ ಇಲ್ಲದಿರುವ ಕಾರಣ ಸಾಲದ ಮೊತ್ತದ ಶೇ.20 ರಷ್ಟು ಚಹಾವನ್ನು ಹರಾಜು ಕೇಂದ್ರದಲ್ಲಿ ಮಾರಾಟ ಮಾಡಬೇಕೆಂಬ ನಿರ್ಬಂಧವನ್ನು ರದ್ದು ಮಾಡಬೇಕೆಂದು ಒತ್ತಾಯಿಸಿದೆ.

**25. ತಿಪಟೂರಿನಲ್ಲಿ ಕೊಬ್ಬರಿ ರೈತರ ಆಕ್ರೋಶ :** ತಿಪಟೂರಿನ ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ಲೈಸೆನ್ಸ್ ಹೊಂದಿದ ರವಾನೆದಾರರು ಪಾಲ್ಗೊಳ್ಳುತ್ತಿದ್ದ ಮುಕ್ತ ಟೆಂಡರ್ ವ್ಯವಸ್ಥೆಗೆ ಕಳೆದ ಹತ್ತು ವರ್ಷಗಳಿಂದ ಅವಕಾಶವಿಲ್ಲವಾಗಿದೆ. ರೈತ ತಂದ ಕೊಬ್ಬರಿಯನ್ನು ಚೆಕ್‌ಪೋಸ್ಟ್‌ನಲ್ಲಿ ತೂಕ ಹಾಕಿಸಿ, ಅಂಗಡಿಗೆ ಮಾಹಿತಿ ನೀಡುವುದು, ಅಂಗಡಿಯವರು ಎಪಿಎಂಸಿ ಗೆ ತಿಳಿಸಿದ ಮೇಲೆ ಮಾರುಕಟ್ಟೆಗೆ ಬಂದಿರುವ ಕೊಬ್ಬರಿ ಪ್ರಮಾಣವನ್ನು ಘೋಷಿಸುವುದು, ನಂತರ ಮುಕ್ತ ಟೆಂಡರ್ ನಡೆಯುವುದು ಇವೆಲ್ಲ ನಡೆಯುವಲ್ಲಿ ಕೊಬ್ಬರಿಗೆ ಹೆಚ್ಚು ಬೆಲೆ ಸಿಗುತ್ತಿತ್ತು. ಈಗಲಾದರೋ ಸೆಕೆಂಡ್ಸ್ ವ್ಯವಹಾರ ಚಾಲ್ತಿಗಿದೆ. ರವಾನೆದಾರನೇ ನೇರವಾಗಿ

ರೈತರ ಮನೆಗೆ ಹೋಗಿ ತೂಕ ಮಾಡಿ ಹೊರ ರಾಜ್ಯಗಳಿಗೆ ಸಾಗಿಸುತ್ತಾನೆ. ಎಪಿಎಂಸಿ ಗೆ ಟ್ಯಾಕ್ಸ್ ಕೂಡ ಪಾವತಿ ಇರುವುದಿಲ್ಲ. ಅಲ್ಲಿಗೆ ರವಾನೆದಾರ ಕೊಟ್ಟಷ್ಟು ರೇಟಿಗೆ ರೈತ ಒಪ್ಪಬೇಕಷ್ಟೆ. ಶೇ.4 ರಷ್ಟು ಟ್ಯಾಕ್ಸ್, 1.5% ಸೆಸ್ ಕಡಿತ, ಸಾಗಾಣಿಕೆಯ ವೆಚ್ಚ ಇದಾವುದರ ಉಸಾಬರಿ ಬೇಡವೆಂದು ರೈತರನ್ನು ನಂಬಿಸಿ, ಲಾಭ ಪಡೆಯುವ ವರ್ತಕರು, ಎಪಿಎಂಸಿ ಮೂಲಕವೇ ಕೊಬ್ಬರಿ ಹರಾಜು ನಡೆಯಬೇಕು ಎಂಬ ನಿಯಮವನ್ನು ಪಾಲಿಸದೆ ಸೆಕೆಂಡ್ಸ್ ವ್ಯವಹಾರ ನಡೆಯುತ್ತಿದೆ. ಕೆಲವು ವರ್ತಕರು ರೈತರಿಗೆ ಶರತ್ತು ವಿಧಿಸಿ ತಾವು ಹೇಳುವ ಹಣ ಕೊಡುವ ರವಾನೆದಾರರಿಗೆ ಕೊಬ್ಬರಿಯನ್ನು ಒದಗಿಸಲು ಹೇಳುತ್ತಾರೆ. ಹಾಗೆ ನಡೆದು ಕೊಂಡ ರೈತರಿಗೆ ಹಣ ಕಡಿಮೆಯೇ ದೊರೆಯುತ್ತದೆ. ಹೆಚ್ಚು ಸಿಹಿ ಇರುವ ಗುಣಮಟ್ಟದ ತಿಪಟೂರು ಕೊಬ್ಬರಿಗೆ ರಾಷ್ಟ್ರೀಯ ಪ್ರಸಿದ್ಧಿ ಇದೆ, ಎಂದು ಉಗಮ ಶ್ರೀನಿವಾಸ್ ಅವರ ವರದಿಯಿಂದ ತಿಳಿಯುತ್ತದೆ (13.10.06); ಈ ಹಿನ್ನೆಲೆಗಳಲ್ಲಿ ಮಾನ್ಯ ಮುಖ್ಯಮಂತ್ರಿ ಶ್ರೀ ಎಚ್.ಡಿ.ಕುಮಾರಸ್ವಾಮಿ ಅವರು 4900 ರೂ. ಬೆಂಬಲ ಬೆಲೆಗೆ ನಿರ್ಧಾರ ತೆಗೆದುಕೊಳ್ಳುವ ಬಗ್ಗೆ ಹೇಳಿದ್ದಾರೆ ಗೃಹ ಸಚಿವ ಶ್ರೀ ಎಂ.ಪಿ.ಪ್ರಕಾಶ್ ನ್ಯಾಯ ಸಮ್ಮತ ಬೆಲೆ ಒದಗಲೇಬೇಕು; ರೈತರ ಕಾನೂನನ್ನು ಕೈಗೆ ತೆಗೆದುಕೊಳ್ಳಬಾರದೆಂದಿದ್ದಾರೆ.

**26. ಕೊಬ್ಬರಿ ಬೆಂಬಲ ಬೆಲೆಗೆ ಆಗ್ರಹ :** ತುಮಕೂರು ಜಿಲ್ಲೆಯ ತಿಪಟೂರು, ಚಿಕ್ಕನಾಯಕನ ಹಳ್ಳಿ, ಗುಬ್ಬಿ, ತುರುವೇಕೆರೆ, ಹಾಗೂ ಚಿತ್ರದುರ್ಗ ಜಿಲ್ಲೆ ಹೊಸದುರ್ಗದ ರೈತರು ಕುಮಾರಕೃಪ ಅತಿಥಿ ಗೃಹದ ಎದುರು ರಸ್ತೆಯಲ್ಲಿ, ಕೊಬ್ಬರಿಗೆ ಬೆಂಬಲ ಬೆಲೆ ಆಗ್ರಹಿಸಿ ಅನಿರ್ದಿಷ್ಟಾವಧಿ ಪ್ರತಿಭಟನೆ ಆರಂಭಿಸಿದರು. ರಾತ್ರಿಯ ಚಳಿಯನ್ನು ಲೆಕ್ಕಿಸದೆ, ರೈತರು ರೈತ ನಾಯಕ ಕೋಡಿಹಳ್ಳಿ ಚಂದ್ರಶೇಖರ್ ನೇತೃತ್ವದಲ್ಲಿ ಪ್ರತಿಭಟನೆ ನಡೆಸಿದ್ದಾರೆ. ತೀವ್ರ ಸಂಕಷ್ಟಕ್ಕೆ ತುತ್ತಾಗಿರುವ ರೈತರು ಸಚಿವ ಶ್ರೀ ಶಶಿಕಾಂತ ನಾಯಿಕ ಅವರಿಗೆ ಬೆಂಬಲಬೆಲೆಗೆ ಮನವಿ ಮಾಡಿದ್ದಾರೆ. ಸಂಪುಟ ಉಪಸಮಿತಿ 4775 ರೂ. ಬೆಂಬಲ ನೀಡುವ ಬಗ್ಗೆ ಹೇಳಿದ್ದರೂ, ಸಚಿವ ಸಂಪುಟದ ಒಪ್ಪಿಗೆ ಲಭ್ಯವಾಗಿಲ್ಲ. ಹೀಗಾಗಿ ಪ್ರತಿಭಟನೆ ನಡೆದಿತ್ತು (30.12.2006). ಈ ಮುನ್ನ ತಿಪಟೂರು ಎಪಿಎಂಸಿ ಯಲ್ಲಿ ಕೊಬ್ಬರಿ ಧಾರಣೆ ಒಂದೇ ದಿನ 800ರೂ. ನಂತೆ ಧಾರಣೆ ತೀರ ಇಳಿದು ಆರ್ಥಿಕ ಸಂಕಷ್ಟಕ್ಕೆ ಒಳಗಾದ ರೈತರು, ಎಪಿಎಂಸಿ ರವಾನೆದಾರರು, ವರ್ತಕರ ವಿರುದ್ಧ ಪ್ರತಿಭಟನೆಗಿಳಿದು ಎಪಿಎಂಸಿ ಬಂದ್ ಮಾಡಿದ್ದರು. ರೈತ ಸಂಘಟನೆಗಳೂ ರೈತ ಪರ ಹೋರಾಟ ಹೂಡಿ ಅರಸೀಕೆರೆ ಹಾಗು ಹುಳಿಯಾರ್‌ನಲ್ಲೂ ಕೂಡ ಪ್ರತಿಭಟನೆಗಳು ನಡೆದುವು. ನಂತರ ವರ್ತಕರು,

ರವಾನೆದಾರರು ಪರಸ್ಪರ ಮಾತನಾಡಿಕೊಂಡು 4800 ರೂ.ಗೆ ನಿಗದಿಪಡಿಸಿದರು. ಆದರೆ 5 ಸಾವಿರ ರೂ.ಗಳ ನಿಗದಿಗೆ ಪಟ್ಟು ಹಿಡಿದಿದ್ದಾರೆ; ತೂಕ ಮತ್ತು ಸೆಕೆಂಡ್ಸ್ ಹಾವಳಿಯಿಂದ ತೊಂದರೆ ಅನುಭವಿಸುತ್ತಿರುವ ರೈತರು ಶಾಶ್ವತ ಪರಿಹಾರ ಬಯಸುತ್ತಿದ್ದಾರೆ. (14.10.06). ಇತ್ತೀಚಿನ ದಿನಗಳಲ್ಲಿ ತೆಂಗಿನ ಇಳುವರಿ ಕುಸಿದಿದೆ. ಕಾರಣ ನುಸಿಪೀಡೆ, ತಪ್ಪುತಲೆ ಹುಳದ ಬಾಧೆಯಿಂದ ಬೋಳು ತೆಂಗಿನ ಮರಗಳೇ ಕಾಣುವಂತಾಗಿದೆ. ಈ ಹಿನ್ನೆಲೆಗಳೆಲ್ಲ ಸೇರಿ ರೈತರ ಆಕ್ರೋಶಕ್ಕೆ ಕಾರಣವಾಗಿದೆ.

**27. ಅಡಕೆ ಧಾರಣೆ ಕುಸಿತ; ಗುಟ್ಕಾ ನಿಷೇಧ :** ಕೇಂದ್ರದ ಕಾನೂನು ಪ್ರಕಾರ--ಅಂದರೆ ಆಹಾರ ಕಲಬೆರಕೆ ತಡೆ ಕಾಯ್ದೆ 1954 (ಸೆಕ್ಷನ್ 42)ರ ರೀತ್ಯಾ 1993ರಲ್ಲಿ ಹೊರಡಿಸಿದ ಅಧಿಸೂಚನೆಯಲ್ಲಿ ಆರೋಗ್ಯಕ್ಕೆ ಹಾನಿಕಾರಕ ವಸ್ತುಗಳ ಪಟ್ಟಿ ಮಾಡಿದೆ. ತಂಬಾಕು ಪಾನ್ ಮಸಾಲ, ಹಾಗೂ ಅಡಕೆ ಆ ಪಟ್ಟಿಗೆ ಸೇರಿದೆ. ಗುಟ್ಕಾಕ್ಕೆ ಅಡಕೆಯೇ ಆಧಾರ. ಅದಕ್ಕೆ ಮಸಾಲೆ, ಮೆಗ್ನಿಷಿಯಂ ಸೇರಿಸಿ ಗುಟ್ಕಾ ಮಾರಾಟವಾಗುತ್ತಿದೆ. ಆರೋಗ್ಯಕ್ಕೆ ಹಾನಿಯಾದರೂ ಗುಟ್ಕಾದ ಮಾಗ್ನಿಷಿಯಂ ಕೊಡುವ ಪುಳಕ ಬೇರೆಯದರಲ್ಲಿ ದೊರೆಯದ ಕಾರಣ ಸೇವನೆ ಹೆಚ್ಚುಗೊಂಡಿದೆ. 2007ನೇ ಜನವರಿ 1 ರಿಂದ ಗುಟ್ಕಾ ನಿಷೇಧವೆಂದಿರುವಲ್ಲಿ ಅಡಕೆ ಮಾರುಕಟ್ಟೆ ತಲ್ಲಣಗೊಂಡಿದೆ. ಅಡಕೆ ಬೆಳೆಗಾರರು ಕಂಗಾಲಾಗಿದ್ದಾರೆ. ಈ ಘೋಷಣೆ ಕಾರಣ ಅಡಿಕೆ ಗರಿಷ್ಠಧಾರಣೆ ಒಂದೇ ದಿನಕ್ಕೆ 1407 ರೂ. ನಷ್ಟು ಶಿವಮೊಗ್ಗದಲ್ಲಿ ಕುಸಿಯಿತು. ಶಿರಸಿ ಮಾರುಕಟ್ಟೆಯಲ್ಲೂ ದರ ಕುಸಿತವಾಗಿದೆ. ಉತ್ತರ ಕನ್ನಡದ ಯಲ್ಲಾಪುರದಲ್ಲಿ ಅನಿರ್ದಿಷ್ಟಾವಧಿಗೆ ಅಡಿಕೆ ವಹಿವಾಟು ಬಂದ್‌ಗೆ ವರ್ತಕರ ಸಂಘ ನಿರ್ಧರಿಸಿದೆ. ಗುಟ್ಕಾ ನಿಷೇಧದಿಂದ ಗುಟ್ಕಾ ಕಂಪೆನಿ ಮುಚ್ಚುವುದಲ್ಲದೆ ಅಡಿಕೆ ಬೆಳೆಗಾರ ಬೀದಿ ಪಾಲಾಗುತ್ತಾನೆ. ಆರ್ಥಿಕ ಪರಿಸ್ಥಿತಿ ಅಡಕೆ ಬೆಳೆಯುವ ಪ್ರದೇಶಗಳಲ್ಲಿ ಮಾರಕ ಪರಿಣಾಮಕ್ಕೀಡಾಗುತ್ತದೆ. 90ರ ದಶಕಗಳಲ್ಲಿ ನಾಯಿಕೊಡೆಗಳಂತೆ ನಿಮಿರಿದ ಗುಟ್ಕಾ ಕಂಪೆನಿಗಳ ಕಾರಣ 96–97ರಲ್ಲಿ ಅಡಕೆ ಬೆಲೆ ಕ್ವಿಂಟಾಲ್ ಗೆ 23 ಸಾವಿರ ರೂ. ದಾಟಿತ್ತು. ಈಗ ಬೆಲೆ ಕುಸಿತದಿಂದಾಗಿ ಮಾರುಕಟ್ಟೆಯಲ್ಲಿ ಅಡಕೆ ವ್ಯಾಪಾರಿಗಳು ಶೇ.70 ರಷ್ಟು ವಹಿವಾಟು ಸ್ಥಗಿತಗೊಳಿಸಿದ್ದಾರೆ. ಅಕ್ಟೋಬರ್ 13 ರಂದು ದಾವಣಗೆರೆ ಅಡಕೆ ಮಾರುಕಟ್ಟೆ ಬಂದ್‌ಗೆ ದಳ್ಳಾಳಿಗಳು ಹಾಗೂ ರೈತರು ಮುಂದಾಗಿದ್ದಾರೆ.

ಉತ್ತರ ಭಾರತದ ಹಲವು ರಾಜ್ಯಗಳು 90 ರ ದಶಕದಲ್ಲಿ ಗುಟ್ಕಾ ನಿಷೇಧಿಸಿದ ಫಲವಾಗಿ ಅಡಿಕೆ ದರ ಪಾತಾಳ ಕುಸಿತ ಕಂಡಿತ್ತು. ಮಲೆನಾಡಿನ ಅಡಿಕೆ ಬೆಳೆಗಾರರು

ಆತ್ಮಹತ್ಯೆಯ ದಾರಿ ಹಿಡಿದ ಸಂಗತಿಯೂ ಹೊರಬಿತ್ತು. ಗುಟ್ಕಾ ನಿಷೇಧದ ಬದಲು ಅದರೊಳಗಿನ ಹಾನಿಕಾರಕ ಅಂಶವನ್ನು ಮಾತ್ರ ನಿಷೇಧಿಸಬೇಕು ಎಂದು ಕಾಂಪ್ಕೋ ಅಧ್ಯಕ್ಷರು ಹೇಳಿದ್ದಾರೆ. ರೈತರು, ಜನಪ್ರತಿನಿಧಿಗಳು, ವರ್ತಕರನ್ನು ಸೇರಿಸಿ ಈ ಕುರಿತು ಚರ್ಚಿಸಿ ಹೋರಾಟದ ರೂಪು ರೇಷೆ ನಿರ್ಧರಿಸುವ ಬಗ್ಗೆ ಯಲ್ಲಾಪುರ ತಾಲೂಕು ರೈತ ಸಂಘದ ಅಧ್ಯಕ್ಷರು ತಿಳಿಸಿದ್ದಾರೆ.

ಗುಟ್ಕಾ ನಿಷೇಧ ಘೋಷಣೆ ಯ ಹಿನ್ನೆಲೆಯಲ್ಲಿ, ಯಲ್ಲಾಪುರ, ಭೀಮಸಮುದ್ರ ಶಿವಮೊಗ್ಗ ಮುಂತಾದ ಕಡೆ ಅಡಿಕೆ ಮಾರುಕಟ್ಟೆ ಅನಿರ್ದಿಷ್ಟಾವಧಿ ಬಂದ್ ಅಕ್ಟೋಬರ್ 13 ನಿಂದ ಆರಂಭಗೊಂಡಿತು. ಅಪಿ ಅಡಿಕೆ ಧಾರಣೆಯಲ್ಲಿ ತುಸು ಚೇತರಿಕೆ ಕಂಡು ಬಂದರೂ, ಸರಕು, ಬೆಟ್ಟೆ, ಗೊರಬಲು ಅಡಿಕೆಧಾರಣೆಯಲ್ಲಿ ಇಳಿಕೆಯೆ ಹೆಚ್ಚಿದ್ದು ಬೆಳೆಗಾರರ ಪ್ರತಿರೋಧವು ಕೂಡಿಕೊಂಡಿದೆ. ಕೇಂದ್ರಕ್ಕೆ ಸಲ್ಲಿಸಿದ್ದ ಬೇಡಿಕೆಗಳಲ್ಲಿ, ಹಾನಿಕಾರಕ ವಸ್ತು ಪಟ್ಟಿಯಿಂದ ಅಡಿಕೆ ಹೊರಗಿಡಬೇಕು; ಕೆಂಪಡಕೆಗೆ ಬೆಂಬಲ ಬೆಲೆ ಬೇಕು; ಅಡಕೆ ಬೋರ್ಡ್ ಸ್ಥಾಪಿಸಿ 100 ಕೋಟಿ ರೂ. ಒದಗಿಸಬೇಕು. ನೆರೆ ದೇಶದಿಂದ ಬರುವ ಅಡಕೆಗೆ ಸೀಮಾ ಸುಂಕ ಹೆಚ್ಚಿಸಬೇಕು; ಆಮದು ಕಳಪೆ ಅಡಕೆ ತಿರಸ್ಕರಿಸಿ ಗುಣಮಟ್ಟ ನಿರ್ಧಾರದ ಹಕ್ಕು ಕಾಂಪೋಗೆ ನೀಡಬೇಕು; ಗುಟ್ಕಾದಲ್ಲಿಯ ಹಾನಿಕಾರಕ ವಸ್ತು ಬಳಕೆಯನ್ನು ನಿಷೇಧಿಸಿ, ತಯಾರಿಕೆಯನ್ನು ನಿಯಂತ್ರಣದಲ್ಲಿರಿಸಿಕೊಳ್ಳಬೇಕು. ಇತ್ಯಾದಿ ಬೇಡಿಕೆಗಳು ಈಡೇರಿಲ್ಲ. ಕೇಂದ್ರಕ್ಕೆ ಮನವರಿಕೆ ಮಾಡಲು ನಿಯೋಗ ಒಯ್ಯಲು ರೈತ ಹಾಗು ಮಾರುಕಟ್ಟೆ ಸಂಘಟನೆಗಳ ಹೇಳಿಕೆಗಳೂ ಬಂದಿವೆ. (ಪತ್ರಿಕಾ ವಾರ್ತೆಗಳು: 13, 14, 15–10–2006)

**28. ಈರುಳ್ಳಿ ಖರೀದಿಗೆ ಆಗ್ರಹ :** ಹುಬ್ಬಳ್ಳಿ, ಧಾರವಾಡ, ಚಿತ್ರದುರ್ಗದ ರೈತರು ಈರುಳ್ಳಿಗೆ ವೈಜ್ಞಾನಿಕ ಬೆಂಬಲ ಬೆಲೆಗೆ ಆಗ್ರಹಿಸುತ್ತ, ಈರುಳ್ಳಿಯನ್ನು ರಸ್ತೆಗೆ ಸುರಿದು ಪ್ರತಿಭಟನೆ ಮಾಡಿ ಜಿಲ್ಲಾಧಿಕಾರಿ ಕಛೇರಿಗೆ ಮುತ್ತಿಗೆ ಹಾಕಿದರು. ಖರೀದಿಗೆ 6 ಕೇಂದ್ರಗಳ ಸ್ಥಾಪನೆ ಮಾಡಿರುವುದನ್ನು ಜಿಲ್ಲಾಧಿಕಾರಿಗಳು ತಿಳಿಸಿದರು.

**28ಅ. ನೀರು ಹಂಚಿಕೆ** ವಿಷಯದಲ್ಲಿ, ಕೊತ್ತಗೆರೆ ಕೆರೆ ವಿವಾದವು ಅಂಕೆ ತಪ್ಪಿ ರೈತರ ಎರಡು ಗುಂಪುಗಳ ನಡುವಣ ಘರ್ಷಣೆ ಹಿಂಸಾರೂಪಕ್ಕೆ ತಿರುಗಿತು. ಕೆರೆಕೋಡಿಯನ್ನು ನೀರಿಗಾಗಿ ಒಡೆಯುವ ಸಂಬಂಧ, ಅಚ್ಚುಕಟ್ಟುದಾರರಲ್ಲಿ ವಿರೋಧವು ರಾಜಕೀಯ ಪಕ್ಷಗಳ ಸ್ಪರ್ಶ ಪಡೆದಿತ್ತು. ಹೀಗಾಗಿ ಅಶ್ರುವಾಯು ಗಾಳಿಯಲ್ಲಿ ಗುಂಡು, ಬಂದ್ ಕೂಡ ನಡೆಯಿತು (23.10.2006).

29. ಶಿವಮೊಗ್ಗೆಯಲ್ಲಿ ಗುಟ್ಕಾ ನಿಷೇಧ ಪ್ರಸ್ತಾವವನ್ನು ವಿರೋಧಿಸಿ 2006 ಅಕ್ಟೋಬರ್ 26ರ ಭಾರಿ ಸಮಾವೇಶಕ್ಕೆ ಅಡಕೆ ಬೆಳೆಗಾರರ ಒಕ್ಕೂಟವು ಸಿದ್ಧವಾದ ವಿಷಯ, ಪ್ರತಿಭಟನೆ ಮಾಡುವುದು, ಪ್ರತಿಭಟನೆ ನಂತರದ ಸಮಾವೇಶದಲ್ಲಿ ಅಡಕೆ ಬೆಳೆ ಮಹತ್ವ, ಪರ್ಯಾಯ ಬಳಕೆ, ಮಾರುಕಟ್ಟೆ ವಿಶ್ಲೇಷಣೆ, ಅಡಕೆ ಧಾರಣೆ ಸ್ಥಿರತೆ ರಕ್ಷಣಾ ಕಾರ್ಯ, ಗುಟ್ಕಾ ನಿಷೇಧದ ಗೊಂದಲ ಕುರಿತೆಲ್ಲ ನಿರ್ಣಯ ಕೈಗೊಳ್ಳುವ ಬಗ್ಗೆಯೂ ಒಕ್ಕೂಟವು ತಿಳಿಸಿತು (26.10.2006); ನಲವಡಿ ಹೆಬಸೂರು, ಬ್ಯಾಹಟ್ಟಿ, ಹಾರೋ ಬೆಳವಡಿ ರೈತರು ರಸ್ತೆ ಮಧ್ಯೆ ಉಳ್ಳಾಗಡ್ಡಿ ರಾಶಿ ಹಾಕಿ ಪ್ರತಿಭಟನೆ ಮಾಡಿದರು. ಬೆಂಬಲ ಬೆಲೆ ಪರಿಷ್ಕರಣೆಗೆ ಧಾರವಾಡ ಜಿಲ್ಲಾಧಿಕಾರಿ ಕಚೇರಿ ಎದುರು 8 ದಿನಗಳ ಕಾಲ ಧರಣಿ ಆಚರಿಸಿದರು;

30. ಶೇಂಗಾ ಬೆಳೆಗೆ ನಷ್ಟ ಪರಿಹಾರ, ಈರುಳ್ಳಿಗೆ ಬೆಂಬಲ ಬೆಲೆ ನೀಡಲು ಚಳ್ಳಕೆರೆಯ ರೈತರು ಪ್ರತಿಭಟನೆ ನಡೆಸಿದರು. ಅಲ್ಲದೆ ಬೆಂಬಲಬೆಲೆಯನ್ನು 400 ರೂ.ಗೆ ಘೋಷಿಸಿರುವ ಬದಲು, ಆಂಧ್ರ ಮಾದರಿಯಲ್ಲಿ ಎಕರೆಗೆ 750 ರೂ. ಬೆಳೆ ನಷ್ಟ ಪರಿಹಾರ, ಹಾಗೂ ಈರುಳ್ಳಿಗೆ 750 ರೂ. ಬೆಂಬಲ ಬೆಲೆ ನೀಡಲು ರೈತರ ಒತ್ತಾಯವಾಗಿತ್ತು (26.10.06)

31. ಹಂಗಾಮು ಮುಗಿಯುವ ಮುನ್ನವೇ 'ಎ' ಗ್ರೇಡ್ ಈರುಳ್ಳಿ ಖರೀದಿಯನ್ನು ಸ್ಥಗಿತಗೊಳಿಸುವಂತೆ ಕೃಷಿ ಹುಟ್ಟುವಳಿ ಮತ್ತು ಮಾರುಕಟ್ಟೆ ಇಲಾಖೆ) ಆದೇಶ ನೀಡಿದ್ದು ಹುಬ್ಬಳ್ಳಿಯ ರೈತರಲ್ಲಿ ತೀವ್ರ ಆಕ್ರೋಶ ಹುಟ್ಟಿಸಿತು. ಶೇ. 40 ರಷ್ಟು ಈರುಳ್ಳಿ ಬೆಳೆ ಹೊಲದಲ್ಲಿಯೇ ಇದ್ದುದು. ಈರುಳ್ಳಿ ಬೆಲೆ ಕುಸಿತ, 2 ಕೋಟಿ ರೂ. ಆವರ್ತನಿಧಿ ನಿಗದಿ ಭರವಸೆ ಈಡೇರದಿದ್ದುದು, ಖರೀದಿ ನಿಂತದ್ದು ಇವೆಲ್ಲ ರೈತರ ಆಕ್ರೋಶಕ್ಕೆ ಕಾರಣವಾಗಿತ್ತು (14.11.06).

32. ಚಿಕ್ಕಮಗಳೂರಿನಲ್ಲಿ ರೈತರಿಗೆ ಬೆಳೆ ವಿಮೆ ಪಾವತಿಸದೆ, ಅಂಬಳೆ ಮತ್ತು ಕಸಬಾ ಹೋಬಳಿ ಆಲೂಗಡ್ಡೆ ರೈತರಿಗೆ ವಂಚಿಸಿರುವ ಬಗ್ಗೆ ರೈತರು ಹಾಗೂ ಶಾಸಕರು ಕಂಪೆನಿ ವಿರುದ್ಧ ದೂರಿದರು. ರೈತರು ವಿಮಾ ಕಂತು ಕಟ್ಟಿದ್ದರೂ, ಬೆಳೆ ನಷ್ಟಕ್ಕಾಗಿ ಸರ್ಕಾರ ರೈತರಿಗೆ ಪರಿಹಾರ ನೀಡಿರುವ ಬಗ್ಗೆ ಕಂಪೆನಿಗೆ ವರದಿಯಾಗಿದ್ದರೂ ಈ ವಂಚನೆ ಆಗಿದೆ ಎಂಬುದು ರೈತರ ಅಳಲು (14.11.06).

33. i. ಬಿಜಾಪುರ–ಬೆಳಗಾವಿ–ಬಾಗಲಕೋಟೆ ಜಿಲ್ಲೆಗಳ ಸಕ್ಕರೆ ಕಾರ್ಖಾನೆಗಳು ಸರ್ಕಾರ ನಿಗದಿತ ಟನ್ ಕಬ್ಬಿಗೆ 1200 ರೂ. ಮುಂಗಡ ಹಣ

ಕೊಡಲು ಸಮ್ಮತಿಸದ ಕಾರಣ ರೈತರು ನಡೆಸಿ ರಸ್ತೆ ಚಳುವಳಿ, ಮಾಡಿದರು. ಮುಂಬೈ-ಬೆಂಗಳೂರು ರಸ್ತೆ ಸಂಪರ್ಕ ಬಂದ್

ii. ವಿಜಾಪುರ ಜಿಲ್ಲೆಯ ಭೀಮಾನದಿಯ ಉಸುಕನ್ನು ಮಹಾರಾಷ್ಟ್ರ ಸರ್ಕಾರ ಎಗ್ಗುಸಿಗ್ಗಿಲ್ಲದೆ ಕೊಳ್ಳೆ ಹೊಡೆದು ಮಾಡುತ್ತಿರುವ ಸಾಗಾಣಿಕೆಯನ್ನು ತಡೆದು ಭೀಮಾ ನದಿ ಪಾತ್ರ ರಕ್ಷಿಸಲು ರಾಜ್ಯ ಸರ್ಕಾರ ತುರ್ತು ಕ್ರಮ ಕೈಗೊಳ್ಳಲು ಕಾಳಜಿಯ ಮನವಿಗಳು ಅರ್ಪಿತವಾದುವು.

iii. ದೇವನಹಳ್ಳಿ ತಾಲೂಕಿನಲ್ಲಿ ಅಂ.ರಾ.ವಿಮಾನ ನಿಲ್ದಾಣ ಯೋಜನೆಗಾಗಿ ಬಡ ಕೃಷಿ ಕಾರ್ಮಿಕರ ಜಮೀನು ಸ್ವಾಧೀನಕ್ಕೆ ನೀಡದ ಸೂಕ್ತ ಪರಿಹಾರ, 2800 ಎಕರೆ ಪ್ರದೇಶದಲ್ಲಿ ಬಗರ್ ಹುಕುಂ ಸಾಗುವಳಿ ಮಾಡುತ್ತಿದ್ದ ರೈತರಿಗೆ ಯಾವುದೇ ಪರಿಹಾರ ನೀಡದಿರುವುದು, ಈ ಕಾರಣ ನಡೆದ ರೈತ ಸಂಘದಿಂದ ರಸ್ತೆ ತಡೆ;

iv. ಪೆಪ್ಸಿ-ಕೋಕ್ ತಂಪು ಪಾನೀಯಗಳ ವಿರುದ್ಧ ಅವುಗಳನ್ನು ಸಾಗಿಸುವ ವಾಹನಗಳ ವಿರುದ್ಧ ಕ್ವಿಟ್ ಇಂಡಿಯಾ ಸತ್ಯಾಗ್ರಹ ಮಾದರಿಯಲ್ಲಿ ಧರಣಿ ಮಾಡುವ ಬಗ್ಗೆ ರಾಜ್ಯ ರೈತ ಸಂಘದ ಘೋಷಣೆ.

v. ಅಡಕೆ ಜತೆ ತಂಬಾಕಿನಿಂದ ತಯಾರಿಸಿದ ಗುಟ್ಕಾ ಸೇರಿಸುವುದು ಕಲಬೆರಕೆ ನಿಷೇಧ. ಈ ಹಿನ್ನೆಲೆಯಲ್ಲಿ ಅಡಕೆ ಬೆಲೆ ಕುಸಿದ ಕಾರಣ, ಆಹಾರ ಪಟ್ಟಿಯಿಂದ ಅಡಕೆಯನ್ನು ತೆಗೆಯಲು ಬೆಳೆಗಾರರು ಕೇಂದ್ರ ಸರ್ಕಾರವನ್ನು ಒತ್ತಾಯಿಸಲು ನಿರ್ಧರಿಸಿದರು. (22.11.06)

vi. ಅಣ್ಣಿಗೇರಿಯಲ್ಲಿ ಬೆಂಬಲ ಬೆಲೆಗೆ ಈರುಳ್ಳಿ ಖರೀದಿಯನ್ನು ಸರ್ಕಾರ ನಿಲ್ಲಿಸಿರುವುದುರ ವಿರುದ್ದ ರೈತರು ರಸ್ತೆ ತಡೆ ನಡೆಸಿದರು. ವ್ಯಾಪಾರಸ್ಥರನ್ನು ನಿಯಂತ್ರಿಸಿ ಬೆಂಬಲ ಬೆಲೆ ಸೌಲಭ್ಯವನ್ನು ಒದಗಿಸಿ ರೈತರಿಗೆ ನ್ಯಾಯ ನೀಡಬೇಕೆಂದು ಈ ಪ್ರತಿಭಟನೆಯ ಅಭಿಪ್ರಾಯವಾಗಿತ್ತು. (28.11.06);

vii. ಬಾಗಲಕೋಟೆಯಲ್ಲಿ ರೈತರಿಗೆ ನ್ಯಾಯಯುತ ಕಬ್ಬು ದರ ನಿಗದಿಯಾಗಬೇಕು. ಕಳೆದ 15 ದಿನಗಳಿಂದ ಹೋರಾಟ ನಡೆಸುತ್ತಿರುವ ರೈತರ ಬೇಡಿಕೆಗಳನ್ನು ಈಡೇರಿಸಬೇಕು. ಪ್ರತಿಟನ್ ಕಬ್ಬಿಗೆ 1200 ರೂ. ದರ ನೀಡದೆ ಹೋದರೆ ಬಾಗಲಕೋಟೆ ಬಿಜಾಪುರ ಬೆಳಗಾವಿ ಜಿಲ್ಲೆಯ ಮಠಾಧೀಶರು ಆಮರಣ ಉಪವಾಸ ಕೈಗೊಳ್ಳುವುದು ಖಚಿತ ಎಂದು ಕಾರಿಹಳ್ಳದ ಶರಣ ಬಸವ

ಮಹಾಸ್ವಾಮಿಗಳು, ಮಲ್ಲಾಪುರದ ದುರದುಂಡೇಶ್ವರ ಸ್ವಾಮಿಗಳು, ಶಿರೂರ ಮಹಾಂತ ತೀರ್ಥ ಬಸವ ಮಹಾಲಿಂಗ ಸ್ವಾಮಿಗಳು, ರೈತ ಹೋರಾಟಕ್ಕೆ ಬೆಂಬಲವಿಟ್ಟು ಘೋಷಿಸಿದರು (29.11.06). ಹೀಗಾಗಿ ರೈತ ಪ್ರತಿಭಟನೆ ಅಲ್ಲಿ ಮುಂದುವರಿದಿತ್ತು.

34. ಕೇಂದ್ರ ರೇಷ್ಮೆ ಮಂಡಳಿ ಕಾಯ್ದೆಗೆ ತಿದ್ದುಪಡಿ ತರುವಲ್ಲಿ ಗುಣಮಟ್ಟದ ಪ್ರಮಾಣೀಕೃತ ರೇಷ್ಮೆ ಮೊಟ್ಟೆಗಳನ್ನು ಒದಗಿಸಲು, ಬಿತ್ತನೆಗೂಡು ಬೆಳೆಗಾರರು ಮತ್ತು ಬಿತ್ತನೆ ತಯಾರಕರ ನೇರಸಂಪರ್ಕ ಕಲ್ಪಿಸಿ ಗುಣಮಟ್ಟದ ಬಗ್ಗೆ ನಿರಂತರ ನಿಗಾವಹಿಸಲು ಸಾಧ್ಯವಾಗುತ್ತದೆ. ಚೀನಾ ರೇಷ್ಮೆ ಆಮದು ತಡೆ ಸಾಧ್ಯ ಎಂದು ರೇಷ್ಮೆ ಮಂಡಳಿ ಅಧ್ಯಕ್ಷ ಎಚ್.ಹನುಮಂತಪ್ಪ ಅವರು ಅಭಿಪ್ರಾಯಪಟ್ಟು, ರೈತರು ಗುತ್ತಿಗೆ ಬೇಸಾಯದತ್ತ ಒಲವು ತೋರಿಸಬೇಕು ಎಂದಿದ್ದಾರೆ. ಆದರೆ ಈ ತಿದ್ದು ಪಡಿಯಿಂದ ಮುಕ್ತ ವಹಿವಾಟಿಗೆ ಅವಕಾಶವಾಗುತ್ತದೆ. ರೇಷ್ಮೆ ಬೆಳೆಗಾರರು ಸಂಕಷ್ಟಕ್ಕೆ ಸಿಲುಕುತ್ತಾರೆ ಎಂದು ಬೆಂಗಳೂರು ಕೇಂದ್ರ ರೇಷ್ಮೆ ಮಂಡಳಿ ಎದುರು ನವೆಂಬರ್ 24 ರಂದು ಪ್ರತಿಭಟನೆ ಮಾಡಲು ಕೋಲಾರ ರೇಷ್ಮೆ ಬೆಳೆಗಾರರು ನಿರ್ಧರಿಸಿದರು; ದೇಶ ರೇಷ್ಮೆ ಉದ್ದಿಮೆಗೆ ಹಾನಿ ಒದಗುತ್ತದೆ. ರೇಷ್ಮೆ ಮಂಡಳಿ ನಿಗದಿ ಪಡಿಸಿದ ಬೆಲೆಗೇ ಬೆಳೆ ಉತ್ಪನ್ನ ಮಾರಾಟ ಮಾಡಬೇಕಾಗುತ್ತದೆ. ಅದಕ್ಕೆ ಮಾನದಂಡ ತಿಳಿಸಿಲ್ಲ. ಬೆಳೆಗಾರರಿಗೆ ಸ್ಪರ್ಧಾತ್ಮಕ ಬೆಲೆ ಸಿಗುವುದಿಲ್ಲ. ರೇಷ್ಮೆ ಬೆಳೆಗಾರರು ಅತಿ ಸಣ್ಣ ರೈತರಾದ ಕಾರಣ, ಬೆಳೆದ ಗೂಡಿಗೆ ಸೂಕ್ತ ಬೆಲೆ ಸಿಗದಿದ್ದರೆ ಜೀವನ ಸಂಕಷ್ಟಕ್ಕೆ ಸಿಲುಕುತ್ತದೆ. ಬಹುರಾಷ್ಟ್ರೀಯ ಕಂಪೆನಿಗಳು ರೇಷ್ಮೆ ಬೆಳೆಯ ಮೇಲೆ ನಿಯಂತ್ರಣ ಹೊಂದುತ್ತವೆ. ಕೂಲಿ ಕಾರ್ಮಿಕರು ದುಸ್ಥಿತಿಗೀಡಾಗುತ್ತಾರೆ, ಎಂಬುದು ರಾಜೇಶ್ ಕೊಂಡಾಪುರ ಅವರ ವಾದವಾಗಿದೆ (24.11.06); ತುಮಕೂರು ತಾಲೂಕು ಹೆಬ್ಬೂರಿನಲ್ಲಿ ರೇಷ್ಮೆ ಬೆಳೆಗಾರರು ರಸ್ತೆ ತಡೆ ಚಳುವಳಿ ನಡೆಸಿದರು ಕುಣಿಗಲ್ ತಾ. ರೇಷ್ಮೆ ಬೆಳೆಗಾರರು ಕಾಯ್ದೆ ತಿದ್ದು ಪಡಿಯನ್ನು ರದ್ದು ಗೊಳಿಸಬೇಕೆಂದು ಒತ್ತಾಯಿಸಿ ಮಂಡಳಿ ಆಯುಕ್ತರಿಗೆ ಮನವಿ ನೀಡಿದರು. ಮಾರುಕಟ್ಟೆ ಹೊರಗೆ ಮಾರಾಟ ನಡೆಯುವುದರಿಂದ ವಂಚನೆ ಹೆಚ್ಚಾಗುತ್ತದೆ. ಮಧ್ಯವರ್ತಿಗಳ ಹಿಡಿತಕ್ಕೆ ರೇಷ್ಮೆ ವಹಿವಾಟು ಮತ್ತು ಉದ್ಯಮ ಸಿಗುವ ಸಂಭವವಿದೆ ಎಂದು ಈ ಬೆಳೆಗಾರರ ಆತಂಕವಾಗಿದೆ; ಪ್ರತಿಭಟನೆ ನಡೆದಿದೆ (17.12.06); ಚಾಮರಾಜ ನಗರದ ರೈತರ ಅಭಿಪ್ರಾಯವೂ ಹೀಗೆಯೇ ಇದ್ದು ರೇಷ್ಮೆಯಿಂದ ದೂರ ಸರಿಯುತ್ತಿದ್ದಾರೆ ಮಂಡ್ಯದಲ್ಲಿಯೂ ಶೇ.ಸು 55 ರಷ್ಟು ರೈತರು ರೇಷ್ಮೆ ಬೆಳೆಯನ್ನು ಆಶ್ರಯಿಸಿರುವಲ್ಲಿ, ರೇಷ್ಮೆ ರೈತರ ಹಿತವನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಕಾಪಾಡಿಲ್ಲ. ಚೀನಾ

ರೇಷ್ಮೆ ಉತ್ಕೃಷ್ಟ ಮಾದರಿಯದಾಗಿರುವುದರಿಂದ ಮುಕ್ತ ಮಾರುಕಟ್ಟೆಗೆ ಅವಕಾಶ ಕಲ್ಪಿಸಿದರೆ ನಮ್ಮ ರೈತರ ಗತಿ ಅಧೋಗತಿ ಆಗುತ್ತದೆ. ಮಾರುಕಟ್ಟೆ ಸಮಸ್ಯೆಗಳ ಕಾರಣ ದಲ್ಲಾಳಿಗಳಿಗೆ ಲಾಭವಾಗುತ್ತದೆ. ಸರ್ಕಾರದ ಸಬ್ಸಿಡಿಗಳನ್ನು ರೈತರಿಗೆ ತಲುಪಿಸುವ ಪ್ರಯತ್ನವನ್ನು ಅಧಿಕಾರಿಗಳು ಮಾಡುತ್ತಿಲ್ಲ ಎಂದು ರೈತರು ಹೇಳುತ್ತಾರೆ. ಈ ಬಗೆಗೆಲ್ಲ ಪರಿಶೀಲಿಸಿ ಸಮಸ್ಯೆಯ ಪರಿಹಾರಕ್ಕೆ ಕೇಂದ್ರಕ್ಕೆ ಮನವಿ ಮಾಡಿರುವ ಬಗ್ಗೆ ರೇಷ್ಮೆ ಖಾತೆ ಸಚಿವರ ಶ್ರೀ ರಾಮಚಂದ್ರಗೌಡ ಹೇಳಿದ್ದಾರೆ. ಈ ಬಗ್ಗೆ ರೈತರಿಗೆ ಮಾರಕವಾಗಿರುವ ಅಂಶಗಳನ್ನು ತೆಗೆದು ಹಾಕಿ, ದೇಶೀಯ ರೇಷ್ಮೆ ತಳಿಗಳ ರಕ್ಷಣೆ ಆಗಬೇಕು, ಮಾರುಕಟ್ಟೆ ಸುಧಾರಣೆ ಆಗಬೇಕು, ಎಂದೆಲ್ಲ ಹೇಳಿ ಪ್ರತಿಭಟನೆಯನ್ನು ಮಾಡಿವಾಳದಲ್ಲಿರುವ ರೇಷ್ಮೆ ಮಂಡಲಿಯ ಕೇಂದ್ರ ಕಛೇರಿಯ ಮುಂದೆ ಮಾಡಲಾಗಿದೆ. (8.1.2007), ಈ ನಡುವೆ ಗುಣಮಟ್ಟ ಕಾಯ್ದುಕೊಳ್ಳುವಲ್ಲಿ ಸ್ಪರ್ಧೆ ಏರ್ಪಡುತ್ತದೆ. ಅದು ಒಳ್ಳೆ ದರ ರೇಷ್ಮೆ ಗೂಡಿಗೆ ದೊರಕಲು ಅನುಕೂಲವಾಗುತ್ತದೆ ಎಂಬ ಚಿಂತನೆಗಳೂ ಇವೆ. ಭಾರತ ಸರ್ಕಾರದ ಜವಳಿ ಮಂತ್ರಾಲಯದ ಕೇಂದ್ರ ರೇಷ್ಮೆ ಮಂಡಳಿಯ ರೇಷ್ಮೆ ಬೆಳೆಗಾರರಿಗೆ ಮಾರುಕಟ್ಟೆ ಸೌಲಭ್ಯಗಳನ್ನು ಮುಂದುವರಿಸಿ, ವಿದೇಶಿ ರೇಷ್ಮೆ ತಳಿಗಳ ಗುಣಮಟ್ಟವನ್ನು ದೃಢೀಕರಿಸುವ, ಬಿತ್ತನೆ ವಲಯವನ್ನು (ಸೀಡ್‌ಏರಿಯಾ) ಸೂಕ್ತವಾದ ವಲಯಗಳಲ್ಲಿ ಮುಂದುವರಿಸಿ, ಯಾವುದೇ ಆತಂಕಕ್ಕೆ ಬೆಳೆಗಾರರು ಈಡಾಗದಂತೆ ನೋಡಿಕೊಳ್ಳಲಾಗುವುದು, ಏಕಮುಖ ತೀರ್ಮಾನ ತೆಗೆದುಕೊಳ್ಳುವುದಿಲ್ಲ ಎಂದೆಲ್ಲ ಪ್ರಕಟಣೆಯನ್ನು ನೀಡಿದೆ. ರೇಷ್ಮೆ ಮೊಟ್ಟೆ–ಗೂಡು ವಹಿವಾಟಿನಲ್ಲಿ ದಳ್ಳಾಳಿಗೆ ಅವಕಾಶವಾಗದಂತೆ, ಬಿತ್ತನೆ ವಲಯವನ್ನು ಸುರಕ್ಷಿತವಾಗಿ ಕಾಪಾಡಲು ರಾಜ್ಯವೂ ಕೇಂದ್ರವನ್ನು ಆಗ್ರಹಿಸಿದೆ (13.12.06). ರೇಷ್ಮೆ ಮಂಡಳಿಯ ರೇಷ್ಮೆ ಕಾಯಿದೆ ತಿದ್ದುಪಡಿ ತಂದಿರುವುದು ರೈತರನ್ನು ಕೆರಳಿಸಿದ್ದು, ಆ ಸಂಬಂಧ ನಡೆದ ಚರ್ಚಾ ಸಮಾರಂಭದಲ್ಲಿ ಬೆಂಗಳೂರಿನಲ್ಲಿ ರೈತರಿಂದ ಪ್ರತಿಭಟನೆ ನಡೆಯಿತು. (27.12.06)

35. ಹತ್ತಿ ಟೆಂಡರ್ ಪ್ರಕ್ರಿಯೆಯ ವಿಳಂಬದ ಕಾರಣ ಕೃಷಿ ಉತ್ಪನ್ನ ಮಾರುಕಟ್ಟೆ ಕಛೇರಿಯನ್ನು ಧ್ವಂಸಗೊಳಿಸಿ, ಬಸ್‌ಗೆ ಬೆಂಕಿ ಹಚ್ಚಿದ ರೈತರ ರೊಚ್ಚಿನಿಂದಾಗಿ ವಾತಾವರಣ ಹಾವೇರಿಯಲ್ಲಿ ವಿಕೋಪಕ್ಕೆ ಹೋಗಿತ್ತು. ಪೋಲೀಸರಿಂದ ಲಾಠಿ ಪ್ರಹಾರ, ಅಶ್ರುವಾಯು ಪ್ರಯೋಗವೂ ಆಯಿತು. ರೈತರು ಹಾಗೂ ಪೋಲೀಸರೂ ಗಾಯಗೊಂಡರು. 20 ಸಾವಿರ ಹತ್ತಿ ಅಂಡಿಗೆಗಳನ್ನು ರೈತರು ವಿವಿಧ ಭಾಗಗಳಿಂದ ತಂದಿದ್ದರು. ಖರೀದಿಯಾದ ಹತ್ತಿಯನ್ನು ಖರೀದಿಗಾರರು ಲಾರಿಗೆ ಹೇರುವಲ್ಲಿ ವಿಳಂಬವಾದ ಕಾರಣ ಟೆಂಡರ್ ಪ್ರಕ್ರಿಯೆಯೂ ವಿಳಂಬವಾಯಿತು. ಇದು ರೊಚ್ಚಿನ ಪರಿಸ್ಥಿತಿ, ಪೋಲೀಸ್ ಪ್ರಹಾರಕ್ಕೆ ಕಾರಣವಾಗಿತ್ತು. (19.12.06)

36. ಎಪಿಎಂಸಿ ಕಾಯ್ದೆ ತಿದ್ದು ಪಡಿಯನ್ನು ಕೇಂದ್ರದ ಆದೇಶದ ಮೇರೆಗೆ ರಾಜ್ಯಸರ್ಕಾರ ಮಾಡಿ ಬಹುರಾಷ್ಟ್ರೀಯ ಕಂಪೆನಿಯಾದ ವಾಲ್‌ಮಾರ್ಟ್‌ಗೆ ಪ್ರವೇಶಾವಕಾಶ ನೀಡಲಾಗುತ್ತಿದೆ. ದೇಶೀಯ ಮಾರುಕಟ್ಟೆ ಕೆಳ ಹಾಗು ಮಧ್ಯಮ ವರ್ಗದವರ ಕೈಬಿಟ್ಟು ಅಂತರಾಷ್ಟ್ರೀಯ ಬಂಡವಾಳಶಾಹಿಗಳ ಕೈಸೇರುವ ಅಪಾಯವಿದೆ. ಕೃಷಿಯನ್ನು ಗುತ್ತಿಗೆ ಮೂಲಕ ವಿದೇಶಿ ಕಂಪೆನಿಗಳಿಗೆ ಚಳುವಳಿ ಕೊಟ್ಟಂತಾಗುತ್ತದೆ. ಈ ಮುಕ್ತ ಮಾರಾಟದಿಂದ ರೈತರು ಬೀದಿ ಪಾಲಾಗುತ್ತಾರೆ. ತಿದ್ದುಪಡಿ ತರುವ ಮುನ್ನ ಸಾಧಕ ಬಾಧಕಗಳನ್ನು ಚರ್ಚಿಸಿ ರೈತರ ಹಾಗೂ ವಾಣಿಜ್ಯೋದ್ಯಮಿಗಳ ಹಿತ ರಕ್ಷಿಸಬೇಕು ಎಂದು ಎಫ್‌ಕೆಸಿಸಿಐ ಅಂತರಿಕ ವಾಣಿಜ್ಯ ಸಮಿತಿ ಹೇಳಿದೆ. ಈ ಸಂಬಂಧ ಜನವರಿ 5, 2007ರಂದು ಎಪಿಎಂಸಿ ಗಳು ಬಂದ್ ಆಚರಿಸಲು ನಿರ್ಧರಿಸಿದುವು. ರಾಜ್ಯ ಸರ್ಕಾರವಾದರೋ, ಮಸೂದೆ ಕಾನೂನು ಇಲಾಖೆ ಪರಿಶೀಲನೆಯಲ್ಲಿದೆ, 21 ರಾಜ್ಯಗಳಲ್ಲಿ ಈ ತಿದ್ದುಪಡಿ ತಂದಿರುವ ರಾಜ್ಯಗಳಲ್ಲಿ ಪರಿಣಾಮಕಾರಿಯಾಗಿ ಜಾರಿಗೆ ಬಂದಿಲ್ಲ ಎಂದು ಕರ್ನಾಟಕ ಕೈಗಾರಿಕೆ ಮತ್ತು ವಾಣಿಜ್ಯ ಸಂಸ್ಥೆಯು ಹೇಳಿ ಬಂದ್ ಆಚರಿಸುವ ಬಗ್ಗೆ ತಿಳಿಸಿದೆ. (20.12.06). ಆದರೆ ಕಾಯ್ದೆ ತಿದ್ದು ಪಡಿ ಅಂಕಿತವಾಗುವ ಮುನ್ನವೇ ಮೆಕ್ಕೆ ಜೋಳ ಖರೀದಿಗೆ ಪೈಪೋಟಿಗಿಳಿದಿರುವ ಸೂಚನೆ ಏನು? ಎಂಬುದೂ ಮುಖ್ಯ.

37. ಪಡುಬಿದ್ರಿ ಪರಿಸರದಲ್ಲಿ ಉಷ್ಣ ವಿದ್ಯುತ್ ಸ್ಥಾವರ ಸ್ಥಾಪಿಸಲು ಸ್ಥಳೀಯ ಕೃಷಿಕ ಮೂಲನಿವಾಸಿಗಳು ಹಾಗೂ ಬಡ ಕೃಷಿ ಕಾರ್ಮಿಕರನ್ನು ಒಕ್ಕಲೆಬ್ಬಿಸುತ್ತಿರುವುದು ಜನವಿರೋಧಿ, ಜೀವವೈವಿಧ್ಯ, ವಿರೋಧಿ ನೀತಿ ಎಂದು ಪ್ರತಿಭಟನಾ ಪತ್ರಗಳು ಪ್ರಕಟವಾದುವು (27.12.06);

38. ಅಕ್ಟೋಬರ್ 2006ರಲ್ಲಿ ಉಡುಪಿ ತಾಲೂಕಿನ ಯಲ್ಲೂರು ಗ್ರಾಮದ 150 ಜನ ರೈತರು 195 ಹೆಕ್ಟೇರ್ ನಷ್ಟು ಜಮೀನನ್ನು ಕಳೆದುಕೊಳ್ಳುವ ಸರ್ಕಾರಿ ಆದೇಶವು ಬಂದ ಕಾರಣ ರೈತರ ಪ್ರತಿಭಟನೆ ನಡೆದಿತ್ತು. ಅಲ್ಲಿ 1015 ಮೆಗಾವಾಟ್ ಥರ್ಮಲ್ ಪವರ್ ಪ್ಲಾಂಟ್ (ಉಷ್ಣ ಸ್ಥಾವರ) ಒಂದನ್ನು ಹೈದರಾಬಾದಿನ ನಾಗಾರ್ಜುನ ಪವರ್ ಕಾರ್ಪೊರೇಷನ್ ಲಿಮಿಟೆಡ್ (NPCL) ಕಂಪೆನಿಯು ಸ್ಥಾಪಿಸುವುದಾಗಿತ್ತು. ಈ ಯೋಜನೆಯ ಶೇ. 74ರಷ್ಟು ಪಾಲನ್ನು ಹೊಂದಿದ್ದ ಹೈದರಾಬಾದಿನ ಲಾಂಕೋಗ್ರೂಪ್ ಕಂಪೆನಿಯು ಉಷ್ಣವಿದ್ಯುತ್ ಸ್ಥಾವರದಲ್ಲಿ ಆಸಕ್ತಿಹೊಂದಿತ್ತು. ಈ ಯೋಜನೆಯನ್ನು ಚುರುಕುಗೊಳಿಸಬೇಕೆಂದು ರಾಜ್ಯದ ಅಧಿಕಾರಿ ವರ್ತುಲವು ಒತ್ತಡದಲ್ಲಿದ್ದು ಈ ಸಂಬಂಧದಲ್ಲಿ ಒದಗುವ ಅಪಾಯಗಳ ಕುರಿತ ಎಚ್ಚರಿಕೆಯನ್ನು ನಿರ್ಲಕ್ಷಿಸಲಾಗಿತ್ತು.

ಪಶ್ಚಿಮಘಟ್ಟಗಳಲ್ಲಿ ಕಲ್ಲಿದ್ದಲು ಆಧಾರಿತ ಈ ಶಕ್ತಿ ಸ್ಥಾವರವನ್ನು ಸ್ಥಾಪಿಸಿದರೆ ನೆಲ, ಜಲ ಹಾಗು ಪರಿಸರ ಸಂರಕ್ಷಣೆಗೆ ಅಪಾಯ ಒದಗುತ್ತದೆ ಎಂಬ ಎಚ್ಚರಿಕೆಯನ್ನು ಪರಿಸರ ತಾಂತ್ರಿಕ ತಜ್ಞರು ನೀಡಿದ್ದಾರೆ. ಈ ಘಟ್ಟಗಳು ಭಾರತದ ಒಟ್ಟು ಜಲಪೂರೈಕೆಯ ನಾಲ್ಕನೇ ಒಂದು ಭಾಗದಷ್ಟು ಜಲ ಕೊಡುಗೆ ನೀಡುತ್ತಿವೆ. ಯುಲ್ಲೂರಿನ ಸಡಿಲ ರಚನೆಯು ಮಣ್ಣು (Lateritic soil) ಸೂಕ್ಷ್ಮರಂಧ್ರಯುಕ್ತವಾದದ್ದು. ಸದ್ಯಪ್ರಸ್ತಾಪಿತ ಸ್ಥಾವರವು ಆರಂಭವಾದರೆ ಉಗುಳುವ ಗಂಧಕಾನಿಲವು (ಸಲ್ಫರ್ ಡೈ ಆಕ್ಸೈಡ್) ಈ ಮಣ್ಣಿನ ಮೇಲೆ ನೆಲೆಗೊಂಡು ಅರಣ್ಯ ನಾಶಕ್ಕೆ ಕಾರಣವಾಗುತ್ತದೆ. ಹಾರು ಬೂದಿಯಿಂದ ಬಂದ ಭಾರ ಲೋಹದ ಕಣಗಳು ಬಹು ಶೀಘ್ರವಾಗಿ ಜಲ ಅಂತರ ಸಂಪರ್ಕ ಜಾಲದೊಳಗೆ ತೂರಿ ಬಿಡಬಲ್ಲವು. 1966ರ ಕರ್ನಾಟಕ ಔದ್ಯೋಗಿಕ ಪ್ರದೇಶಾಭಿವೃದ್ಧಿ ಆಕ್ಟ್ (KIAD) ರೀತ್ಯಾ ಇಂಥ ಪ್ರದೇಶದ ಪಾರಂಪರಿಕ ಹಕ್ಕನ್ನು ಕಳೆದುಕೊಳ್ಳುವವರಿಗೆ ಕನಿಷ್ಠ 1 ತಿಂಗಳ ಮುಂಚೆ ತಿಳುವಳಿಕೆ ಪತ್ರ ಕಳುಹಿಸಬೇಕು; ಈ ಬಗ್ಗೆ ತನಿಖೆಗಳು ನಡೆದು ಆಯಾ ಗ್ರಾಮೀಣರ ಟೀಕೆ ಟಿಪ್ಪಣೆಗಳನ್ನು ಪಡೆಯಬೇಕು. ಆನಂತರ ಭೂ ಸಮೀಕ್ಷೆ ಭೂ ಮೌಲ್ಯ ನಿರ್ಧಾರ ನಡೆಯಬೇಕು, ಎಂದಿದೆ. ಕೇಂದ್ರ ಮತ್ತು ರಾಜ್ಯದ ಸರ್ಕಾರಗಳು ಈ ಯೋಜನೆಗೆ ಅನುಮತಿ ಕೊಟ್ಟು ಪ್ರಕಟಣೆ ಹೊರಡಿಸಿದ ಮೇಲೆ ಪ್ರತಿ ರೈತರಿಗೆ ತಿಳುವಳಿಕೆ ಪತ್ರವನ್ನು ಮತ್ತೆ ಕೊಡುವ ಅಗತ್ಯ ಬರುವುದಿಲ್ಲ ಹಾಗೂ ಭೂಮಿಯು ಸರ್ಕಾರದ ವಶಕ್ಕೆ ಬಂದು ಬಿಡುತ್ತದೆ ಎಂಬುದು ಜಿಲ್ಲಾಧಿಕಾರಿ ಕಛೇರಿಯ ಮಾತಾಗಿದೆ. ಈ ಬಗ್ಗೆ ಕೆಲವು ರೈತರು ಉಚ್ಚ ನ್ಯಾಯಾಲಯದ ಮೆಟ್ಟಿಲನ್ನು ಹತ್ತಿದರು. ನವೆಂಬರ್ 15,2006 ರಂದು ನ್ಯಾಯಾಲಯವು ವಿಚಾರಣೆ ನಡೆಸಿ ರೈತರ ಹಕ್ಕನ್ನು ಎತ್ತಿ ಹಿಡಿಯಿತು, ಸ್ಥಾವರ ಸ್ಥಳದ ಕಾವಲಿಗಿದ್ದ ಮಿಲಿಟರಿಯು ಜಾಗಖಾಲಿ ಮಾಡಬೇಕೆಂದೂ ಆದೇಶಿಸಿತು. ಆದರೆ ಎರಡು ದಿನಗಳ ನಂತರ ಗುಂಪು ಸೇರುವಿಕೆಯನ್ನು ನಿಷೇಧಿಸಿ 144 ಸೆಕ್ಷನ್ ಅನ್ನು ಜಾರಿಮಾಡಲಾಯಿತು. ಕೆಲವು ರೈತರನ್ನು ಬಂಧನಕ್ಕೊಳಪಡಿಸಲಾಯಿತು. ಜನ ಜಾಗರಣ ಸಮಿತಿಯೂ ಈ ಸ್ಥಾವರ ಸ್ಥಾಪನೆಯ ವಿರುದ್ಧ ದಾವೆ ಹೂಡಿದೆ. (Down To Earth, Dec 15, 2006) ನಾಗಾರ್ಜುನ ಯೋಜನೆ ವಿರುದ್ಧ ಈ ಹಿನ್ನೆಲೆಯಲ್ಲಿ ನೆಲ ಜಲದ ರಕ್ಷಣೆಗಾಗಿ, ರೈತರು ಮೀನುಗಾರರು ಹಾಗೂ ಇತರ ಜನತೆ ಸೇರಿದಂತೆ ಕರಾವಳಿಯೇ ಧರಣಿ ಸತ್ಯಾಗ್ರಹದಲ್ಲಿ ಪಾಲ್ಗೊಂಡಿತು (2.1.2007).

39. ರಾಜ್ಯದ ಖಾಸಗಿ ಸಕ್ಕರೆ ಕಾರ್ಖಾನೆಗಳು ಟನ್‌ಗೆ 1200 ರೂ. ಕೊಡಲು ಮೊಂಡುತನ ಮಾಡುತ್ತಿರುವಲ್ಲಿ, ಮಹಾರಾಷ್ಟ್ರಕ್ಕೆ ಟನ್ ಕಬ್ಬಿಗೆ 1280

ರೂ. ಕೊಡುವ ಕಾರಣ ಅಲ್ಲಿಗೆ ಸಾಗಿಸಲು ರೈತರ ಪ್ರತಿಭಟನಾತ್ಮಕ ನಿರ್ಧಾರವಾದದ್ದು, ತಿಪಟೂರು ಕೊಬ್ಬರಿ ಮಾರುಕಟ್ಟೆಯ ಬೆಲೆ ಕುಸಿತದಿಂದಾಗಿ, ಪರಿಷ್ಕೃತ ಬೆಲೆ ನಿಗದಿಯಾದರೂ ಖರೀದಿ ಆರಂಭವಾಗದ ಕಾರಣ ಸರಣಿ ಬಂದ್ ಆಚರಿಸಲು ರೈತ ಸಂಘಟನೆಗಳು ಹೋರಾಟಕ್ಕೆ ಇಳಿದದ್ದೂ ಕಾಣಬರುತ್ತದೆ.

40. **ಭೂಮಿ ಸ್ವಾಧೀನ : i.** ಬಿಡದಿ ಉಪನಗರಕ್ಕೆಂದು ಭೂಮಿ ವಶಪಡಿಸಿಕೊಳ್ಳುವ ವಿಷಯದಲ್ಲಿ, ಶೇ.80 ಭಾಗ ನೀರಾವರಿ ಚಟುವಟಿಕೆ ನಡೆಯುತ್ತಿದ್ದರೂ, ಒಣಭೂಮಿ ಎಂದು ಅಧಿಕಾರಿಗಳು ತಪ್ಪು ಮಾಹಿತಿ ನೀಡಿರುವುದನ್ನು ಪರಿಶೀಲಿಸದೆ ನಿರ್ಧಾರ ತೆಗೆದುಕೊಳ್ಳಬೇಡಿ ಎಂದು ಮುಖ್ಯಮಂತ್ರಿಗಳಿಗೆ ರೈತರು ಮನವಿ ಮಾಡಿದರು. ಈ ಸಂಬಂಧದ ಸಭೆ ರೈತರ ತೀವ್ರ ವಿರೋಧದಿಂದ ವಿಫಲವಾಯಿತು; ಕೊಪ್ಪಳ ಜಿಲ್ಲೆಯನ್ನು ವಿಶೇಷ ಆರ್ಥಿಕವಲಯ ಎಂದು ಘೋಷಿಸಿರುವುದಕ್ಕೆ ಸಿಂಗೂರ್ ಮಾದರಿ ಹೋರಾಟಕ್ಕೆ ಸಂಘಟನೆಗಳು ನಿರ್ಧರಿಸಿವೆ. ಕೃಷಿಯೋಗ್ಯವಾದ ಭೂಮಿಯನ್ನೇ ಕೈಗಾರಿಕೆ ಸ್ಥಾಪನೆಗೆ ನೀಡುತ್ತಿರುವುದಕ್ಕೆ ರೈತರಿಂದ ತೀವ್ರ ವಿರೋಧ ವ್ಯಕ್ತವಾಗಿದೆ. ತುಂಗಭದ್ರಾ ಜಲಾಶಯದ ಹಿನ್ನೀರಿನಿಂದ ನೀರಾವರಿಯಾಗುವ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳುವುದು ಸಲ್ಲ. ಕೈಗಾರಿಕೆಯವರು ರೈತರಿಗೆ ಹಣದ ಆಮಿಷ ಒಡ್ಡುತ್ತಿರುವಲ್ಲಿ ಜನ ಜಾಗೃತಿ ಅಗತ್ಯ, ಜನಾಂದೋಲನವನ್ನು ರೂಪಿಸಬೇಕು ಎಂದು ಹೋರಾಟಗಾರರು ಮುಂದಾಗಿದ್ದಾರೆ. (ಡಿಸೆಂಬರ್ 2006);

**ii.** ಕೈಗಾರಿಕೆ ಸ್ಥಾಪನೆ ಉದ್ದೇಶಕ್ಕೆಂದು ಕೃಷಿ ಭೂಮಿ ಸ್ವಾಧೀನಪಡಿಸಿಕೊಳ್ಳಲು ನಿಯಮವಿಲ್ಲದಿರುವಲ್ಲಿ ರೈತರು, ಜಮೀನು ಸರ್ವೆ ಮಾಡಲು ಬಂದ ಕರ್ನಾಟಕ ಕೈಗಾರಿಕೆ ಪ್ರದೇಶಾಭಿವೃದ್ಧಿ ಮಂಡಳಿ (ಕೆಐಎಡಿಬಿ ಮತ್ತು ಭೂಮಾಪನ ಇಲಾಖೆ) ವಿರುದ್ಧ ಘೋಷಣೆ ಹಾಕಿದರು. ಭೂ ಸ್ವಾಧೀನಕ್ಕೆ ಅವಕಾಶ ಮಾಡಿಕೊಡುವುದಿಲ್ಲ, ಇಲ್ಲಿರುವುದು ಫಲವತ್ತಾದ ಕೃಷಿಭೂಮಿ, ಎಂದು ರೈತರು ಪ್ರತಿಭಟಿಸಿ ಅಧಿಕಾರಿಗಳನ್ನು ವಾಪಸ್ ಕಳುಹಿಸಿದರು. ಯೋಜನೆ ಕೈ ಬಿಡಲಾಗದಿದ್ದರೆ ಸ್ವಾಧೀನದ ಭೂಮಿಗೆ ಮಾರುಕಟ್ಟೆ ಬೆಲೆ ಕೊಡಲಿ ಅಥವಾ ಅಭಿವೃದ್ಧಿ ಪಡಿಸಿದ ಜಾಗದಲ್ಲಿ ಅರ್ಧದಷ್ಟು ಜಮೀನನ್ನು ನಮಗೆ ನೀಡಲಿ ಎಂಬುದು ರೈತರ ಹಕ್ಕೊತ್ತಾಯವಾಗಿತ್ತು. ಉದ್ದೇಶಿತ ಜಮೀನು ದೇವನಹಳ್ಳಿ ಅಂತರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ 2 ಕಿ.ಮೀ. ವ್ಯಾಪ್ತಿಯಲ್ಲಿರುವಲ್ಲಿ ಕೈಗಾರಿಕಾ ಘಟಕಗಳ ಸ್ಥಾಪನೆ ವಿಮಾನಗಳ ಹಾರಾಟಕ್ಕೆ ತೊಂದರೆಯೊಡ್ಡಬಹುದು. ಅಂತಾಗಿ ಬಂಡಿಕೊಡಿಗೇನಳ್ಳಿ ಸೇರಿದಂತೆ ಐದು ಗ್ರಾಮಗಳ

ಜಮೀನನ್ನು ಹಸಿರು ವಲಯ ಎಂದು ರೂಪಿಸಲು ಬೆಂಗಳೂರು ಉತ್ತರ ತಾಲೂಕಿನ ಈ ಗ್ರಾಮೀಣರು ಆಗ್ರಹಿಸಿದರು. ಅರೆ ಬಿನ್ನಮಂಗಲ ಬಿಕೆ ಪಾಳ್ಯ, ಬಂಡಿಕೋಡಿಹಳ್ಳಿ, ಸಿಂಗಹಳ್ಳಿ, ಗೊಲ್ಲಹಳ್ಳಿ ಇತ್ಯಾದಿ ಜಾಲ ಹೋಬಳಿಯ ಸುಮಾರು 2500 ಎಕರೆ ಭೂಮಿಯನ್ನು ಬಂಜರು ಭೂಮಿ ಎಂದು ತಪ್ಪು ಮಾಹಿತಿ ನೀಡಿದ ಅಧಿಕಾರಿಗಳನ್ನೇ ಅವಲಂಬಿಸಿ ರೈತರ ಜಮೀನನ್ನು ವಶಪಡಿಸಿಕೊಳ್ಳಬಾರದು ಎಂದು, ಅರೆಬಿನ್ನ ಮಂಗಲದಲ್ಲಿ ಕೃಷಿ ಉತ್ಪನ್ನ ಸಂಸ್ಕರಣೆ ತರಬೇತಿ ಶಿಬಿರದಲ್ಲಿ ಬೆಂಗಳೂರು ನಗರ ಜಿಲ್ಲಾ ಪಂಚಾಯಿತಿ ಉಪಾಧ್ಯಕ್ಷ ಎ.ಸಿ.ಶ್ರೀನಿವಾಸ್ ಅವರು ನುಡಿದದ್ದು ವರದಿಗೊಂಡಿತು. (11.1.2007) ಈ ಅಂಶಗಳು ನಮ್ಮ ರೈತರು ಜಾಗತಿಕ ಹೋರಾಟದ ನೆಲೆಗಳನ್ನು ಎಚ್ಚರದಿಂದ ಕಾಯ್ದುಕೊಂಡಿರುವುದನ್ನು ಸೂಚಿಸುತ್ತವೆ.

iii. ಹಾಲ್ದೇನಹಳ್ಳಿ (ಬೆಂ.ಜಿಲ್ಲೆ) ರೈಲು ನಿಲ್ದಾಣದಲ್ಲಿ ರೈತರ ಜಮೀನನ್ನು ಸರ್ಕಾರ ವಶಪಡಿಸಿಕೊಳ್ಳುತ್ತಿರುವುದರ ವಿರುದ್ಧ ರೈಲು ತಡೆಯನ್ನು ಅವರು ನಡೆಸಿದರು. ಆನೇಕಲ್ ತಾಲೂಕಿನಲ್ಲಿ ಕೈಗಾರಿಕರಣ ಉದ್ದೇಶದಿಂದ 25 ಸಾವಿರ ಎಕರೆ ಕೃಷಿ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳುತ್ತಿರುವುದನ್ನು ಕೈ ಬಿಡಲು ಒತ್ತಾಯ ಮಾಡಿದರು.

iv. ಬೆಳಗಾವಿ ಜಿಲ್ಲೆ ಬೆನಾಡಿಯಲ್ಲಿ ದೇವಚಂದ್ರ ಶುಗರ್ಸ್ ಲಿಮಿಟೆಡ್ ಕಂಪೆನಿಗೆ ಕಾರ್ಖಾನೆ ಸ್ಥಾಪಿಸಲು ಸ್ಥಳ ನೀಡಲು ಕೃಷಿ ಭೂಮಿ ಸ್ವಾಧೀನಕ್ಕೆ ತೊಡಗಿದುದನ್ನು ಸ್ಥಳೀಯ ರೈತರು ತೀವ್ರ ವಿರೋಧಿಸಿದರು. ಹಿಂದೆ 30 ಎಕರೆ ಜಾಗವನ್ನು ಖರೀದಿಸುವಲ್ಲಿ ರೈತರೊಡನೆ ವಿವಿಧ ಅನುಕೂಲಗಳನ್ನು ನೀಡುವ ಭರವಸೆಯೊಂದಿಗೆ ಕಾರ್ಖಾನೆ ಆಡಳಿತ ಮಂಡಳಿ ಒಪ್ಪಂದ ಮಾಡಿಕೊಂಡಿತ್ತು. ಆದರೆ ಅದಾವುದೂ ನಡೆಯದೆ ಸಂಗ್ರಹಿತ ಶೇರು, ಬಂಡವಾಳಕ್ಕೆ ಬಡ್ಡಿಯನ್ನು ನೀಡದೆ ಅಸಲಿನಲ್ಲೂ ಶೇ.10 ರಷ್ಟು ಕಡಿತ ಮಾಡಿ ರೈತರಿಗೆ ಹಣ ವಾಪಸು ಮಾಡಲಾಗಿತ್ತು. ಕೇವಲ 30 ಎಕರೆ ಭೂ ಸ್ವಾಧೀನಕ್ಕೆ ಕರಾರು ಇದ್ದರೂ ಸದ್ಯ ಇದ್ದಕ್ಕಿದ್ದಂತೆ 125 ಎಕರೆ ಭೂ ಸ್ವಾಧೀನಕ್ಕೆ ಆದೇಶವಾದುದಕ್ಕೆ ರೈತರು ಆಕ್ರೋಶಗೊಂಡರು. 5–6 ಏತ ನೀರಾವರಿ ಹಾಗು ಅನೇಕ ಇತರೆ ಭಾವಿಗಳಿದ್ದು ಸ್ಥಳ ಸಮೀಕ್ಷೆಯಲ್ಲಿ ಕೃಷಿ ಭೂಮಿ ಎಂದೂ ಗುರುತಿಸಲಾಗಿತ್ತು. ಬೆನಾಡಿ–ಕುನೂರ, ಶಿವಾಪುರವಾಡಿ ಗ್ರಾಮಗಳ ಅಂಚಿಗಿರುವ ಈ ಕೃಷಿ ಭೂಮಿಯಲ್ಲಿ ವೇದಗಂಗಾ ನದಿಯಿಂದ ಕೊಳವೆಗಳನ್ನು ಹಾಕಿ ನೀರೊದಗಿಸಿಕೊಂಡು ಕಬ್ಬು, ತಂಬಾಕು ಮತ್ತು ಜೋಳವನ್ನು ಬೆಳೆದಿದ್ದರು. ಈ ಭೂಸ್ವಾಧೀನ ಆದೇಶದಿಂದ 200 ಸಣ್ಣ

ರೈತರು ಸಂಕಷ್ಟಕೊಳಗಾದರು. ಸುಮಾರು 15 ಕಿ.ಮೀ. ದೂರದ ಫಾಸಲೆಯೊಳಗೆ ಕಾರ್ಖಾನೆಯ ಜೊತೆ ಇನ್ನೊಂದು ಕಾರ್ಖಾನೆ ಸ್ಥಾಪನೆಗೆ ಅವಕಾಶವಿಲ್ಲ ಎಂಬ ಕಾನೂನಿದೆ. ಅದನ್ನ ಮೀರಿ ಬಂದಿರುವ ಆದೇಶ ಹಾಗೂ ಕಾರ್ಖಾನೆಗೆ ಪರವಾನಗಿ ವಿರುದ್ಧ, ಜಮೀನು ಕಳೆದುಕೊಂಡಿರುವ ರೈತರು ಸಾಮೂಹಿಕ ಆತ್ಮಹತ್ಯೆಗಿಳಿಯುವುದಾಗಿ ರಾಜ್ಯಪಾಲರಿಗೆ ಪತ್ರ ಬರೆದಿರುವ ಬಗ್ಗೆ ರವಿ ಉಪ್ಪಾರ ಗಮನ ಸೆಳೆದರು. (18.2.07).

**ಬೆಳೆಗಾರರ ಬೇಡಿಕೆಗಳು :** ಕಬ್ಬಿನ ದರ ನಿಗದಿ, ಸಾಗಾಣಿಕೆ ಸಬ್ಸಿಡಿ, ಖರೀದಿ ತೆರಿಗೆ ವಿನಾಯಿತಿ ಪ್ರತಿ ಟನ್ ಕಬ್ಬಿಗೆ ಕನಿಷ್ಠ ನೂರು ರೂ ಪರಿಹಾರ ಸೇರಿದಂತೆ ಕಬ್ಬು ಬೆಳೆಗಾರರ ಬೇಡಿಕೆ ಇತ್ತು. ತೀವ್ರ ಸಂಕಷ್ಟದಲ್ಲಿರುವ ಬೆಳೆಗಾರರ ರಕ್ಷಣೆಗೆ ತಕ್ಷಣ ಕ್ರಮ ಕೈಗೊಳ್ಳದಿದ್ದರೆ ಅವರು ಆತ್ಮಹತ್ಯೆಗೆ ಶರಣಾಗುತ್ತಾರೆ ಎಂದು ಪಕ್ಷಭೇದ ಮರೆತು ಶಾಸಕರ ಆಗ್ರಹವಿತ್ತು. ಗ್ರಾಮೀಣಾಭಿವೃದ್ಧಿ ಸಚಿವ ಶ್ರೀ ಸಿ.ಎಂ. ಉದಾಸಿ, ಹೆಚ್ಚುವರಿ 60 ಲಕ್ಷ ಟನ್ ಕಬ್ಬು ಅರೆಯಲು ಕಾರ್ಖಾನೆಗೆ ಸೂಚನೆ, ಮೇ ಅಂತ್ಯದವರೆಗೆ ಕಾರ್ಖಾನೆಗಳು ಕಬ್ಬು ಅರೆಯುವ ಕಾರ್ಯ ಮಾಡುವ ಬಗ್ಗೆ ಭರವಸೆಯನ್ನು ಅವರು ಸರ್ಕಾರದ ಪರವಾಗಿ ನೀಡಿದರು. ಆದರೆ ಸರ್ಕಾರ ನೆರವು ಪ್ರಕಟಿಸಲು ನಿರಾಕರಿಸಿದ ಕಾರಣ, ಬೆಳೆಗಾರರ ಬೇಡಿಕೆಗಳಿಗೆ ಸ್ಪಂದಿಸಲು ಸರ್ಕಾರ ಸಿದ್ಧವಿಲ್ಲದಿರುವುದನ್ನು ವಿರೋಧಿಸಿ ಪ್ರತಿಪಕ್ಷಗಳು ಸಭಾತ್ಯಾಗ ತ್ಯಾಗಮಾಡಿದುವು. (5.4.07)

42. ಕೊಡಗಿನಂಥ ಮಲೆ ಪ್ರದೇಶದಲ್ಲಿ ರೈತರಿಗೆ ಮಂಜೂರಾದ ಗದ್ದೆಗೆ ತಾಗಿಕೊಂಡ ಕಾಡು ಭೂಮಿಯಾದ ಬಾಣೆ ಜಾಗವನ್ನು ಸಾಗು ಭೂಮಿಯ ಬೇಸಾಯದ ಹಿಡುವಳಿದಾರನಿಗೆ ಜಾನುವಾರು ಮೇವು, ಎಲೆಗೊಬ್ಬರ, ಕೃಷಿ ಹಾಗು ಗೃಹ ಕೃತ್ಯಕ್ಕೆ ಬೇಕಾದ ಸೌದೆ ಹಾಗು ಮರಮುಟ್ಟುಗಳನ್ನು ಯಾವ ಸುಂಕವೂ ಇಲ್ಲದೆ ಬಳಸಿಕೊಳ್ಳುವ ಹಕ್ಕು ಪಾರಂಪರಿಕ ಹಕ್ಕಾಗಿತ್ತು.

ಇಂದು ಈ ಹಕ್ಕಿಗೆ ಧಕ್ಕೆ ಒದಗಿದೆ. ಈ ಕಾರಣ 'ಕೊಡಗರ ಬಾಣೆಜಾಗ ಹಕ್ಕು ಸಂರಕ್ಷಣೆ ಮೋರಾಟ ಸಮಿತಿ' (ಕೊಡಗು ಬಾಣೆಜಾಗ ಹಕ್ಕು ಸಂರಕ್ಷಣಾ ಹೋರಾಟ ಸಮಿತಿ) ಎಂಬ ರೈತರ ಸಂಘಟನೆಯೂ ಇದ್ದು, ಹಕ್ಕು ಸಂರಕ್ಷಣೆಗಾಗಿ ಸಭೆ ನಡೆಸಿ, ಪ್ರತಿಭಟನಾ ಮೆರವಣಿಗೆಯನ್ನು 2.4.07 ನೇ ಸೋಮವಾರ ನಾಪೋಕ್ಲುವಿನಲ್ಲಿ ಹಮ್ಮಿಕೊಂಡಿತ್ತು. (ಬ್ರಹ್ಮ ಗಿರಿ, ವಾರಪತ್ರಿಕೆ ಏಪ್ರಿಲ್, 2007)

ಹುಮ್ನಾಬಾದ್‌ನ ತಾಳಮಡಗಿ ಗ್ರಾಮ'ದ ಗಾಂಧಿನಗರದ ರೈತ ಪ್ರಭು ಮಾಣಿಕರಾವ್ ವಣಕೇರಿ (55), ಕಟಾವು ಮಾಡಿದ ಕಬ್ಬನ್ನು ಕಾರ್ಖಾನೆಯವರು ಒಯ್ಯಲಿಲ್ಲ. ಹತಾಶಗೊಂಡ ಆ ರೈತ ನೇಣಿಗೆ ಶರಣಾದ. ನಾರಂಜಾ ಸಹಕಾರ ಸಕ್ಕರೆ ಕಾರ್ಖಾನೆ ಷೇರುದಾರ ಈತ 2–5 ಎಕರೆ ಕಬ್ಬು ಬೆಳೆದಿದ್ದ. ಕಟಾವಿಗೆ ಬಂದಿದ್ದ ಕಬ್ಬಿನಲ್ಲಿ ಕಾರ್ಖಾನೆ ಸ್ವಲ್ಪ ಮಾತ್ರವೆ ಒಯ್ದಿತ್ತು. ಉಳಿದ ಕಬ್ಬನ್ನು ಕಡಿದು, ಸಾಗಿಸಲು ಸತತ ಪರದಾಡಿದ. ಅದು ಪ್ರಯೋಜನವಾಗದೆ ಒಡ್ಡಿದ್ದ ಕಬ್ಬಿನ ರಾಶಿ ಎದುರಿನ ಮರಕ್ಕೆ ನೇಣು ಹಾಕಿಕೊಂಡ. ಸುದ್ದಿ ತಿಳಿದು ಆಕ್ರೋಶಗೊಂಡ ರೈತರು ರಾಷ್ಟ್ರೀಯ ಹೆದ್ದಾರಿ 9 ರಲ್ಲಿ ಪ್ರತಿಭಟನೆ ಆರಂಭಿಸಿದರು. ಹೀಗೆ ಆತ್ಮಹತ್ಯೆಗೊಂಡ ರೈತನ ಮೃತ ಸಾವಿಗೆ ಕಾರ್ಖಾನೆ ಅಧಿಕಾರಿಗಳೇ ಕಾರಣ ತಪ್ಪಿತಸ್ಥರ ಮೇಲೆ ಕ್ರಮ ಕೈಗೊಳ್ಳಬೇಕು, ಅಲ್ಲಿಯವರೆಗೆ ಮೃತದೇಹ ತೆಗೆಯಲು ಅವಕಾಶ ಕೊಡುವುದಿಲ್ಲ ಎಂದು ಪ್ರತಿಭಟನಕಾರರು ಸ್ಥಳಕ್ಕೆ ಬಂದ ತಹಸೀಲ್ದಾರ್. ಪೋಲೀಸ್ ಅಧಿಕಾರಿಗಳಿಗೆ ಹೇಳಿದರು. ರೈತನ ದೇಹವು ಅಂತಾಗಿ ಮರದಲ್ಲಿ ನೇತಾಡುತ್ತಿತ್ತು. ಕಬ್ಬಿನ ರಾಶಿ ಎದುರಿನ ದುರಂತದ ಪ್ರತೀಕ ಅದಾಗಿತ್ತು (11.5.07). ರೈತನ ಆತ್ಮಹತ್ಯೆಯೊಂದು ಉಳಿದ ರೈತರ ಪ್ರತಿಭಟನೆಗೂ ಕಾರಣವಾಗುವ ಮಾನವೀಯ ಸ್ಪಂದನ ಇಲ್ಲಿತ್ತು.

ವಿಶೇಷತಃ ವಿವಾದಕ್ಕೆ ಈಡಾಗಿರುವ **ವಿಶೇಷ ಆರ್ಥಿಕ ವಲಯ ಯೋಜನೆ** (ಎಸ್‌ಇಝಡ್) ಈಚಿನ ಹೋರಾಟಗಳಿಗೆ ಆಧುನಿಕ ಕಾರಣ ಕರ್ತೃವೆನಿಸಿದೆ. ಭೂಸ್ವಾಧೀನದ ಈ ವಿಶೇಷ ಆರ್ಥಿಕ ವಲಯವು, ಖಾಸಗಿ ಡೆವಲಪರ್ಸ್ ಮತ್ತು ಹೂಡಿಕೆದಾರರ ಒಂದು ಪ್ರತಿಷ್ಠಾಪಿತ ವಲಯ. ಸರ್ಕಾರ ಅಥವಾ ಜಂಟಿವಲಯವು ಇದರ ಅಭಿವೃದ್ಧಿಗೆ ಹಣವನ್ನು ತೊಡಗಿಸಿ ನಿರ್ವಹಣೆ ಮಾಡಬಹುದು. ಡೆವಲಪರ್ಸ್ ಹಾಗೂ ಹೂಡಿಕೆದಾರರಿಗೆ ಇದು ಸುಗ್ಗಿಯ ನೆಲೆ. ಏನೆಲ್ಲ ರಿಯಾಯಿತಿಗಳು ಲಾಭದ ಪುಷ್ಕಳ ಅವಕಾಶಗಳು!

ಇವುಗಳ ಮುಖ್ಯ ಉದ್ದೇಶ ರಫ್ತಿಗೆ ಪ್ರೋತ್ಸಾಹ, ಬಂಡವಾಳದ ಹೂಡಿಕೆ ಮತ್ತು ಉದ್ಯೋಗ ಸೃಷ್ಟಿ ಎನ್ನಲಾಗಿದೆ. ಸಂಸತ್ತಿನಲ್ಲಿ ಈ ಬಗ್ಗೆ 2005ರಲ್ಲಿ ಬಂದ ಕಾನೂನಿನಡಿ ಎಸ್‌ಇಜೆಡ್‌ಗಳು ಹುಟ್ಟಿಕೊಂಡಿವೆ. ಆರ್ಥಿಕ ದೃಷ್ಟಿಯೊಂದೇ ಇಲ್ಲಿ ಪ್ರಧಾನ. ವರ್ತಮಾನದಲ್ಲಿ ಅದೇ ಮುಖ್ಯ ಮಾನದಂಡ. ಐ.ಟಿ ಸಾಫ್ಟ್‌ವೇರ್, ಹಾರ್ಡ್‌ವೇರ್ ಬಗೆಯ ಕ್ಷೇತ್ರದಲ್ಲಿಯೂ ಇದರ ಅಳವಡಿಕೆಯಾಗಬಹುದು, ಬಹು ಉಪಯೋಗಿ ಎಂಬ ಭಾವನೆಯು ಇದೆ. ಎಸ್‌ಇಜೆಡ್ ಸ್ಥಾಪಿಸಲು ಕನಿಷ್ಠ 10

ಹೆಕ್ಟೇರ್‌ನಿಂದ 1 ಸಾವಿರ ಹೆಕ್ಟೇರ್‌ವರೆಗೂ ಜಾಗಬೇಕು. ಆದರೆ ಅದಕ್ಕೆ ಗರಿಷ್ಠ ಎಷ್ಟು ಎಂಬುದರ ಬಗ್ಗೆ ಮಾತಿಲ್ಲ. ಇವು ಇಡೀ ದೇಶದಲ್ಲಿ ಹಬ್ಬಿದ್ದು ಸದ್ಯ 403 ಸಂಖ್ಯೆಯಲ್ಲಿದೆ. ಕಳೆದ ಒಂದೂವರೆ ವರ್ಷದಲ್ಲಿ 237 ಎಸ್‌ಇಜೆಡ್‌ಗಳಿಗೆ ಅನುಮತಿ ಸಿಕ್ಕಿದೆ. ಮಹಾರಾಷ್ಟ್ರವು ದೇಶದಲ್ಲಿ ಬಹಳ ಹೆಚ್ಚಾಗಿ ಎಸ್‌ಇಜೆಡ್‌ಗಳನ್ನು (75) ಹೊಂದಿರುವ ರಾಜ್ಯವಾಗಿದೆ. ಕರ್ನಾಟಕವು 46 ಎಸ್‌ಇಜೆಡ್‌ಗಳನ್ನು ಹೊಂದಿದೆ. ಇವುಗಳಿಗಾಗಿ ಸರ್ಕಾರ ಕಾನೂನು ಸಮ್ಮತಿ ಕೊಟ್ಟು, ವಿಶೇಷ ಸಂಪರ್ಕ ಹಾಗೂ ಸಾಮಾಜಿಕ ಮೂಲ ಸೌಲಭ್ಯವನ್ನು ಒದಗಿಸುತ್ತದೆ. ಸಾರ್ವಜನಿಕ ಉದ್ದೇಶದ ನೆಪದಲ್ಲಿ ಭೂಮಿ ಕೊಡಿಸುತ್ತದೆ. ರೈತರಿಗೆ ಜಮೀನು ಕೊಡಲು ಒತ್ತಾಯ ಹಾಕುತ್ತದೆ. ಅಭಿವೃದ್ಧಿಗೆ ಡೆವಲಪರ್‌ಗೆ ಅನುಮತಿ ಕೊಟ್ಟ ನಂತರ ಸರ್ಕಾರದ ಪಾತ್ರವಿಲ್ಲದೆ ಎಸ್‌ಇಜೆಡ್‌ಗಳಿಗೆ ಸ್ವಂತ ನಗರ ಪಾಲಿಕೆ, ರಕ್ಷಣೆ, ದೂರವಾಣಿ, ವಿದ್ಯುತ್ ಎಲ್ಲವನ್ನು ಅವೇ ಹೊಂದಿರುತ್ತವೆ. ವಿದೇಶಿ ಹೂಡಿಕೆಗೆ ಸ್ವಚ್ಛಂದ ಅವಕಾಶವಿರುತ್ತದೆ. ನಮ್ಮ ನಡುವೆಯೇ ವಿದೇಶಿ ದ್ವೀಪವಾಗಿ ಬೆಳೆಯುವ ಈ ಪ್ರದೇಶದಲ್ಲಿ ಯಾವ ಸುಂಕದ ಬಾಧೆ, ಸೇವಾ ತೆರಿಗೆಯೂ ಇರುವುದಿಲ್ಲ. 10 ವರ್ಷಗಳ ಕಾಲ ಗಳಿಸುವ ಆದಾಯದ ಮೇಲೆ ತೆರಿಗೆಯೂ ಇಲ್ಲ (ಆದರೆ ನಿರ್ವಹಣಾ ವೆಚ್ಚಕ್ಕಿಂತ ವಿದೇಶಿ ವಿನಿಮಯವನ್ನು ಒದಗಿಸಿಕೊಡಬೇಕೆಂಬ ಕಟ್ಟಳೆ ಏನೋ ಇದೆ). ಅಭಿವೃದ್ಧಿಯನ್ನೆಲ್ಲ ಒಂದು ಪ್ರದೇಶದಿಂದ ತಮ್ಮೊಳಕ್ಕೆ ಅಡಕಗೊಳಿಸುತ್ತವೆ. ಶೇ. 25ರಷ್ಟು ಭೂಪ್ರದೇಶವನ್ನು ಸಂಸ್ಕರಣೆಗೆ ಒಳಪಡಿಸಬೇಕೆಂದಿದ್ದರೂ ಅದು ತೀರ ಕಡ್ಡಾಯವೆಂದಿಲ್ಲ. ಅಲ್ಲದೆ ಶೇ.25ರಷ್ಟು ಭೂ ಭಾಗವನ್ನು ರಿಯಲ್ ಎಸ್ಟೇಟ್ ಆಗಿ ಪರಿವರ್ತಿಸಿಕೊಂಡರೆ ಕಾನೂನಿನ ತಕರಾರೇನಿಲ್ಲ. ಇದರಿಂದ ರೈತರಿಂದ ಸರ್ಕಾರ ಕಿತ್ತುಕೊಟ್ಟ ಭೂಮಿಯಿಂದ ಡೆವಲಪರ್ಸ್‌ಗಳು ಸಾವಿರಪಟ್ಟು ಲಾಭಗಳಿಸುತ್ತಾರೆ. ವಿವಿಧ ಪ್ರದೇಶಗಳಲ್ಲಿ ಅವರು ಎಸ್‌ಇಜೆಡ್ ಜಾಲವನ್ನು ಬೆಳೆಸುತ್ತಾರೆ. ಈ ಎಸ್‌ಇಜೆಡ್‌ಗಳಲ್ಲಿ ಸ್ವಂತ ವಿಮಾನ ನಿಲ್ದಾಣ, ಸಮುದ್ರ ಸಂಪರ್ಕಗಳಿಗೆ ವಿಪುಲ ಅವಕಾಶವಿದೆ. ಈ ಕಾರಣವೆ ಎಸ್‌ಇಜೆಡ್‌ಗಳೂ ಕೂಡ ರಿಯಲ್ ಎಸ್ಟೇಟ್‌ಗಳೆಂದು ರಿಸರ್ವ್‌ಬ್ಯಾಂಕ್ ಗವರ್ನರ್ ಅವರ ಹೇಳಿಕೆ ಇದೆ. ಇದಕ್ಕೆ ಸರ್ಕಾರ ಕೊಟ್ಟಿರುವ ಭಾರಿ ತೆರಿಗೆ ವಿನಾಯಿತಿ ಪ್ರೋತ್ಸಾಹದಿಂದಾಗಿ, ಔದ್ಯಮಿಕ ಚಟುವಟಿಕೆಗಳು ದೇಶದ ವಿವಿಧ ಭಾಗಗಳಿಂದ ನಿರ್ದಿಷ್ಟ ಭಾಗಕ್ಕೆ ಕೇಂದ್ರೀಕೃತಗೊಂಡು ಪ್ರಾದೇಶಿಕ ಅಸಮತೋಲನಕ್ಕೆ ಕಾರಣವಾಗುತ್ತದೆ; ಸಮಸ್ಯೆಗಳನ್ನು ಸೃಷ್ಟಿಸುತ್ತದೆ ಎಂಬ ಅಭಿಪ್ರಾಯವನ್ನು ಐಎಂಎಫ್‌ನ ಮುಖ್ಯ ಆರ್ಥಿಕ ತಜ್ಞರು ವ್ಯಕ್ತ ಮಾಡಿದ್ದಾರೆ. ಹೀಗಾಗಿ ಶ್ರೀಮಂತ ಮತ್ತು ವಾಣಿಜ್ಯ ಮಾಧ್ಯಮಗಳು ವಿದೇಶಿ ಪ್ರದೇಶಗಳನ್ನು ಎಲ್ಲರ ಕಣ್ಣೆದುರಿನಲ್ಲಿಯೇ

ಸ್ಥಾಪಿಸಿ, ಸಿದ್ಧಾಂತದ ಹೆಸರಿನಲ್ಲಿ ವಂಚಿಸ ತೊಡಗಿವೆ ಎಂದು ಖ್ಯಾತ ಅಂಕಣಕಾರ ಎಸ್.ಗುರುಮೂರ್ತಿ ವಿಶ್ಲೇಷಿಸಿ ಹೇಳಿದರು (18.3.2007). ಇದರಿಂದ ವ್ಯಕ್ತವಾಗುವ ವಿಷಯವೆಂದರೆ ದೇಶದೊಳಗೆ ನಮ್ಮ ಕಣ್ಣೆದುರಿಗೆ ಜಗಜಗಿಸುವ ವಿದೇಶದಂಥ ದ್ವೀಪ, ನಮ್ಮ ಸಾಂಸ್ಕೃತಿಕ ನಂಬುಗೆಗಳಿಗೆ ಧಗ ಧಗ ತರಿಸುವ ನೆಲೆಗಳಾಗಲಿವೆಯೆ? ಎಂಬ ಅನುಮಾನ ಹುಟ್ಟುತ್ತದೆ. ಆರ್ಥಿಕ ಲಾಭ ನಮ್ಮತನಕ್ಕೆ ಕೊಳ್ಳಿಯಾಗಬಾರದಲ್ಲವೆ?

ಈ ಹಿನ್ನೆಲೆಯಲ್ಲಿ ಕೋಲ್ಕಾತ್ತಾದ ನಂದಿಗ್ರಾಮದಲ್ಲಿ* ಇಂಡೋನೇಷಿಯಾದ ಸಲೀಂ ಕಂಪೆನಿಯ ರಾಸಾಯನಿಕ ಕೇಂದ್ರವೊಂದರ ಸ್ಥಾಪನೆಗೆಂದು ಸರ್ಕಾರದ ಭೂ ಸ್ವಾಧೀನ ಪ್ರಕ್ರಿಯೆಯಲ್ಲಿ (3.1.2007ರ)ರಂದು ಉಂಟಾದ ರೈತರ ವಿರುದ್ಧದ ಗೋಲಿಬಾರ್‌ನಲ್ಲಿ ಜನ ರೈತರು ಸತ್ತು ಒಂದು ದುರದೃಷ್ಟಕರ ಘಟನೆಯಾದದ್ದು, ಭೂಸ್ವಾಧೀನ ಪ್ರಕ್ರಿಯೆ ರಕ್ತಪಾತಕ್ಕೆ ಎಡೆಯಾದದ್ದೂ, ಈ ಕಾರಣ ಪಶ್ಚಿಮ ಬಂಗಾಳ ಸರ್ಕಾರ ಭೂ ಸ್ವಾಧೀನ ಪ್ರಕ್ರಿಯೆಯನ್ನು ಸ್ಥಗಿತಗೊಳಿಸಿದ್ದು ಗಮನಾರ್ಹವಾಗಿದೆ. ಈಗಲೂ ಚಕಮಕಿಯಂತು ನಡೆಯುತ್ತಿರುವ ಬಗ್ಗೆ ವರದಿಯಾಗಿದೆ. ಇದಲ್ಲದೆ ಬೆಂಗಳೂರು ಜಿಲ್ಲೆಯ ನೆಲಮಂಗಲದಲ್ಲಿ, ನಂದಿ ಗ್ರಾಮದ (ಪಶ್ಚಿಮ ಬಂಗಾಳ) ಭೂ ಸ್ವಾಧೀನ ವಿರೋಧಿಸಿದವರ ಮೇಲೆ ಗೋಲಿಬಾರ್ ನಡೆದು ಅಮಾಯಕರ ಸಾವಿಗೆ ಕಾರಣವಾದ ದುರ್ಘಟನೆಯನ್ನು ಖಂಡಿಸಿ ಸ್ಥಳೀಯ ಭಾರತೀಯ ಕಿಸಾನ್ ಸಂಘದವರು ಪ್ರತಿಭಟನಾ ಮೆರವಣಿಗೆ ಮಾಡಿ ತಹಶೀಲ್ದಾರ್ ಅವರಿಗೆ ಮನವಿಸಲ್ಲಿಸಿದುದು ರೈತರ ಜಾಗೃತ ಪ್ರತಿಕ್ರಿಯೆಗಳ, ಭಾವನೆಗಳ ಸಾಕ್ಷಿಯಾಗಿದೆ. ಕೇರಳದ ಬರಹಗಾರರ ಹಾಗು ಚಿಂತಕರ ಗುಂಪು, ಬಹುರಾಷ್ಟ್ರೀಯ ಕಂಪೆನಿಯ ಸ್ಥಾಪನೆ ಹಾಗೂ ನಂದಿಗ್ರಾಮದ ಪೋಲೀಸ್ ಗೋಲಿಬಾರ್ ಒಂದು ರಾಷ್ಟ್ರೀಯ ದುರಂತವೆಂದಿದೆ. ಸಂಸತ್ತಿನ ವಿರೋಧ ಪಕ್ಷದ ನಾಯಕ ಶ್ರೀ ಎಲ್.ಕೆ. ಅಡ್ವಾಣಿ ನೇತೃತ್ವದ ನಾಯಕರ ತಂಡವು ನಂದಿಗ್ರಾಮದ ಸಮೀಪದ ಸೋನಾಚುರಾಕ್ಕೆ ಭೇಟಿ ನೀಡಿ, ಗುಂಡಿಗೆ ಬಲಿಯಾದವರ ಕುಟುಂಬವರ್ಗದವರಿಗೆ ಸಾಂತ್ವನ ಹೇಳಿತು. ರೈತರ ಶವಗಳ ಮೇಲೆ ಕೈಗಾರಿಕೆ ಸ್ಥಾಪಿಸಲು ಸಾಧ್ಯವಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತ ಮಾಡಿತು (18.3.07)

ವಿಶೇಷ ವಿತ್ತವಲಯದ ಸ್ಥಾಪನೆ ಕುರಿತ ಪ್ರಕರಣದಲ್ಲಿ ಎದ್ದ ಪ್ರತಿಭಟನೆ ಬಂಗಾಳದ ನಂದಿಗ್ರಾಮದಲ್ಲಿ ತನ್ನ ಕಾವನ್ನು ಪ್ರಸ್ತುತಗೊಳಿಸಿ ಯಶಸ್ವಿಯಾಗಿದೆ.

* Down To Earth, vol.15, no.17, January 31, 2007, New Delhi.p.14

ಇಂಥದೇ ಪ್ರಕರಣ ಅಸ್ಸಾಂ ರಾಜ್ಯದಲ್ಲಿ ಕಾಮರೂಪ ಜಿಲ್ಲೆಯಲ್ಲಿ ಇತ್ತೀಚೆಗೆ (2007) ಬೊಂಗರಾ ಗ್ರಾಮದಲ್ಲಿ ನಡೆದಿದೆ. ಗ್ರಾಮದ ಸುತ್ತಮುತ್ತಲಿನ 300 ಎಕರೆ ಜಮೀನನ್ನು ಎಸ್‌ಇಜೆಡ್ ಸ್ಥಾಪಿಸಲು ಸರ್ಕಾರ ಮುಂದಾಯಿತು. ಇಂಡೋಟಿಬೆಟಿಯನ್ ಗಡಿ ಪೋಲೀಸ್ ಪಡೆಗೆ ಜಮೀನು ನೀಡಲು ನಿರ್ಧರಿಸಿತು. ಇದರ ವಿರುದ್ಧವಾಗಿ ಗ್ರಾಮಸ್ಥರು ಪ್ರತಿಭಟಿಸಿ 'ಬೊಂಗರಾ ಅಂಚಾಲಿಕ ಭೂಮಿ ಸುರಕ್ಷ ಸಮಿತಿ' ಎಂಬ ಸಂಘಟನೆಯ ಮೂಲಕ ಹೋರಾಡುತ್ತಿದ್ದಾರೆ. ಸಾಮಾಜಿಕ ಸಂಘಟನೆ, ವಿದ್ಯಾರ್ಥಿ ಸಂಘಟನೆ ಕೂಡಿದಂತೆ ಅಖಿಲ ಅಸ್ಸಾಂ ವಿದ್ಯಾರ್ಥಿಗಳ ಒಕ್ಕೂಟವು/ಗ್ರಾಮೀಣರ ಬೆಂಬಲಕ್ಕೆ ಬಂದಿವೆ. ಸರ್ಕಾರದ ನಿರ್ಧಾರ ರೈತ ವಿರೋಧಿ ಎಂದೂ, ನಿರ್ಧಾರ ಬದಲಾಯಿಸದಿದ್ದರೆ ನ್ಯಾಯಾಲಯದ ಮೆಟ್ಟಿಲು ಹತ್ತುವುದಾಗಿ ಸಮಿತಿ ಎಚ್ಚರಿಸಿದೆ. ಅಂದರೆ ರೈತ ವರ್ಗದಿಂದ ದೂರವಿರುತ್ತಿದ್ದ ಈ ಹಿಂದಿನ ಅನ್ಯ ಸಂಘಟನೆಗಳು, ಇಂದು ರೈತರ ಕಷ್ಟ ಸುಖಗಳಿಗೆ ಭಾಗಿಯಾಗುತ್ತಿರುವುದು ಒಂದು ಪ್ರಗತಿಪರ ಮಾನವೀಯ ಮಿಡಿತವೆನಿಸುತ್ತದೆ; ಹೋರಾಟದ ಸುಧಾರಣೆಯಾಗಿಯೂ ಕಾಣುತ್ತದೆ. ಇವೆಲ್ಲ ತೌಲನಿಕವಾಗಿ ಹೋರಾಟಗಳ ಆಯಾಮವನ್ನ ತೋರುವಂತಿವೆ.

ಈ ಎಸ್‌ಇಜೆಡ್ ಯೋಜನೆಯ ಮಿತಿಗಳೂ ಪ್ರಕಟವಾಗಿವೆ: ಹೆಚ್ಚು ವಿಶೇಷ ಆರ್ಥಿಕ ವಲಯಗಳನ್ನು ಸ್ಥಾಪಿಸಿರುವ ಮಹಾರಾಷ್ಟ್ರದಲ್ಲಿಯೇ ಪ್ರತಿಭಟನೆ ಹೆಚ್ಚು ಕಂಡು ಬಂದಿದೆ. 2007ರ ಅಂತ್ಯದ ವೇಳೆಗೆ 1 ಸಾವಿರ ಕೋಟಿ ವಿದೇಶಿ ನೇರ ಬಂಡವಾಳ ಬರಲಿದೆ, 5 ಲಕ್ಷ ಹೊಸ ಉದ್ಯೋಗ ಸೃಷ್ಟಿಯಾಗುತ್ತದೆ ಎಂಬೆಲ್ಲ ನಿರೀಕ್ಷೆ ಇದೆ. ಆದರೆ ಇವೆಲ್ಲ ಸೂಕ್ತ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಿದ ಮೇಲೆ ಸಾಧ್ಯವಾಗುವಂಥವು. ಅಂತರಾಷ್ಟ್ರೀಯ ಮಟ್ಟದಲ್ಲಿ ಈ ಯೋಜನೆಗೆ ಬಂಡವಾಳವನ್ನು ಒದಗಿಸಲು, ದೇಶದಲ್ಲಿರುವ ಸೀಮಾ ಸುಂಕ ನಿಯಮಗಳಿಂದ ರಬ್ಬರ್, ತೈಲ, ತಂಬಾಕು, ಸಕ್ಕರೆ, ಟೀ, ಉಪ್ಪು, ಮೈದಾ, ಕಾಫಿಗಳಿಗೆ ತೆರಿಗೆ ವಿನಾಯಿತಿ, ವಿಮೆ, ಬ್ಯಾಂಕಿಂಗ್ ಮುದ್ರಾಂಕ ಶುಲ್ಕದ ನಿಯಮಗಳಿಗೆ ಸರ್ಕಾರ ತಿದ್ದುಪಡಿಮಾಡಿದೆ. ಇದರಿಂದ ಬಹುರಾಷ್ಟ್ರೀಯ ಕಂಪೆನಿಗಳಿಗೇ ಲಾಭವಷ್ಟೆ.

ನಮ್ಮಲ್ಲಿ ಬಹುತೇಕ ಜನರು ಕೃಷಿಯನ್ನು ಅವಲಂಬಿಸಿದ್ದಾರೆ. ಎಸ್‌ಇಜೆಡ್‌ಗೆ ಕೃಷಿ ಭೂಮಿ ಪಡೆಯುವುದರಿಂದ ರೈತರಿಗೆ ನಿರುದ್ಯೋಗ, ಆರ್ಥಿಕ ಬೀಳು ಉಂಟಾಗುತ್ತದೆ. ತೆರಿಗೆ ವಿನಾಯಿತಿ ಕಾರಣ ಸುಮಾರು ಹದಿನೇಳುವರೆ ಸಾವಿರ ಕೋಟಿ ಆದಾಯಕ್ಕೆ ಧಕ್ಕೆಯಾಗುತ್ತದೆ. ಮೂರುವರೆಲಕ್ಷ ಕೋಟಿ ರೂ. ಬಂಡವಾಳ ಹೂಡಿಕೆ ನಷ್ಟವಾಗುವ ಸಂದರ್ಭವಾಗಿ ಆರ್ಥಿಕ ಚೌಕಟ್ಟು ಜಟಿಲವಾಗಬಹುದು.

ಚೀನಾದಲ್ಲಿ 1979ರಲ್ಲಿ ಆರಂಭಗೊಂಡ ಈ ಯೋಜನೆ ಫಲಕಾರಿಯಾಯಿತು. ದಿಟ. ಆದರೆ ಅಲ್ಲಿ ತೆರಿಗೆ ವಿನಾಯಿತಿಯನ್ನು ನಿಲ್ಲಿಸಿದ ಮೇಲೆ ಎಸ್‌ಇಜೆಡ್ ಅನ್ನು ಕಂಪೆನಿಗಳು ಬಿಟ್ಟು ಬಿಟ್ಟ ಸಾಕ್ಷಿಗಳಿವೆ. ಇದು ಭಾರತದಲ್ಲಿಯೂ ಸಂಭವಿಸುವ ಅಪಾಯವಿದೆಯಲ್ಲವೆ? ಇದು ಆರ್ಥಿಕ ವ್ಯರ್ಥಾಲಾಪವಾಗದೆ ಸದ್ವ್ಯಾಪಾರವಾದರೆ ಮಾತ್ರ ಅಪಾಯವಿರದು.

ಈ ಯೋಜನೆಯ ರೀತ್ಯಾ ರೈತರ ಪೈಕಿ ಶೇ. 20 ರಷ್ಟು ಮಂದಿ ಮಾತ್ರ ಪರಿಹಾರಕ್ಕೆ ಅರ್ಹರು. ಭೂ ರಹಿತ ಬಡವರೇ ಹೆಚ್ಚಿದ್ದು, ಕೃಷಿ ಭೂಮಿಗೆ ಸಂಚಕಾರವಾದರೆ ಅವರ ಬಾಳು ನಗರದ ಕೊಳಗೇರಿಗೆ ಮೀಸಲಾಗುತ್ತದೆ. ಕಡಿಮೆ ಭೂಮಿಯ ಅತಿ ಸಣ್ಣ ರೈತನಿಗೆ ಭೂಮಿ ಹೋಗಿ, ಪಡೆವ ಪರಿಹಾರದ ಮೊತ್ತವನ್ನು ಬ್ಯಾಂಕಿನಲ್ಲಿಟ್ಟರೂ ಬರುವ ಬಡ್ಡಿ ಯಾವುದಕ್ಕೂ ಸಾಕಾಗದು ಅಂತೇ ಈ ಯೋಜನೆಗೆ ವಿರೋಧವಿದೆ. ಕಂಪೆನಿ ಶೇರುದಾರರು ಮಾತ್ರ ರೈತರಿಂದ ಕಸಿದ ಸಂಪನ್ಮೂಲದ ಮೇಲೆ ಲಾಭ ಪಡೆಯುತ್ತಾರೆ.

ಭೂ ಸಂಬಂಧದ ಕಾನೂನುಗಳು, ಪರಿಸರ ಸಂಬಂಧದ ಕಾನೂನುಗಳಿಗೆ ಇಲ್ಲಿ ಅವಕಾಶವೇ ಇಲ್ಲ. ಎಲ್ಲ ಸಂಪನ್ಮೂಲಗಳು ಈ ವಲಯದ ಸೊತ್ತಾಗಿ ಬಿಡುತ್ತವೆ. ಉದ್ಯಮಿಗಳ ವಿಲಾಸಿ ನೆಲೆಯಾಗುವ ಸಂದರ್ಭವೂ ಇದೆ. ಭೂ ರಹಿತ ಬಡವರಿಗೆ ಮನೆ ನಿರ್ಮಿಸಿಕೊಡಬೇಕೆಂಬ ಸಲಹೆ ಇದ್ದರೂ ಅವರ ಬಾಳುವೆಯ ಮಟ್ಟ ಕಾಲೋನಿಯ ಆಳುಗಳಂತಿರುತ್ತದೆ. ಇದು ಕಂಪೆನಿಗಳಿಂದ ಭೂ ಕಬಳಿಕೆಗೆ ಸರಕಾರವೇ ಸವಲತ್ತು ಕೊಟ್ಟಿರುವಂಥದ್ದಾಗಿದೆ. ಆರ್ಥಿಕ ಹಾಗೂ ಸಾಮಾಜಿಕ ಕೇಂದ್ರೀಕರಣ ಪ್ರಕ್ರಿಯೆಗಳ ರಭಸದಿಂದಾಗಿ. ರಾಜಕೀಯ ಮತ್ತು ಸಾಮಾಜಿಕ ತಲ್ಲಣಗಳಿಗೆ ದಾರಿಯಾಗುವಂತಿದೆ. ಹಾಲಿ ಕಾನೂನಿನ ಚೌಕಟ್ಟಿನ ಕಾರಣ ಪರಿಸರವಾದಿಗಳನ್ನು ಒಪ್ಪಿಸಿ ಭೂಮಿ ಪಡೆಯುವುದು ಕಷ್ಟವಾಗಿರುವುದು ಒಂದು ವರ ಎಂದು ಭಾವಿಸಬೇಕು. ಸರ್ಕಾರ ಕಂಪೆನಿಗಳ ಏಜಂಟರಂತೆ ವರ್ತಿಸದಿರಲು, ಊಳಿಗಮಾನ್ಯ ಪದ್ಧತಿ ಪ್ರಸಾರಕ್ಕೆ ಮಣೆ ಹಾಕದಿರಲು ಜನಸಾಮಾನ್ಯರ ವಿರೋಧವೊಂದು ಅಸ್ತ್ರವಾದೀತೆಂಬ ಅಭಿಪ್ರಾಯವನ್ನು ಮೆ// ಜ.ಎಸ್.ಬಿ.ಒಂಬತ್ಕೆರೆಯವರು ವ್ಯಕ್ತ ಪಡಿಸಿರುವುದು (22.11.06) ಗಮನಾರ್ಹವೆನಿಸುತ್ತದೆ. ಇದಕ್ಕೆ ಪೂರಕವಾಗಿ, ನಂದಿಗ್ರಾಮ, ಯಲ್ಲೂರು ಗ್ರಾಮದ ಘಟನೆಗಳು, ರೈತ ಪ್ರತಿಭಟನೆಗಳು ದಿಕ್ಕು ದೆಸೆ ತೋರಿವೆ ಎನ್ನಬೇಕು.

ದೇಶದಾದ್ಯಂತ ಚರ್ಚೆಗೆ ಒಳಗಾಗಿರುವ ಈ **ವಿಶೇಷ ವಿತ್ತ ವಲಯದ** (ಎಸ್‌ಇಜೆಡ್) ಬಗ್ಗೆ ವಿಧಾನ ಪರಿಷತ್ತಿನಲ್ಲಿಯೂ 4.4.2007 ರಂದು ಪ್ರಸ್ತಾಪಗೊಂಡಿತು. ಕಾಂಗ್ರೆಸ್ ಮತ್ತು ಜೆಡಿ(ಯು) ಸದಸ್ಯರು ಸರ್ಕಾರ ರಿಯಲ್ ಎಸ್ಟೇಟ್ ದಂಧೆಗೆ ನೆರವಾಗುತ್ತಿದೆ ಎಂದು ಆರೋಪ ಮಾಡಿದರು. ಬಿಜೆಪಿಯ ಶ್ರೀ **ಅರವಿಂದ ಲಿಂಬಾವಳಿ** ಅವರು, ಇದೇ ಅಭಿಪ್ರಾಯವನ್ನು ವ್ಯಕ್ತ ಮಾಡಿ, ಬಡರೈತರ ಜಮೀನು ವಶಮಾಡಿಕೊಂಡ ಎಸ್‌ಇಜೆಡ್ ಸ್ಥಾಪಿಸುವ ಅಗತ್ಯವೇನು? ಎಂದರು. ಕೈಗಾರಿಕಾ ಸಚಿವ ಶ್ರೀ **ಕಟ್ಟಾ ಸುಬ್ರಮಣ್ಯ ನಾಯ್ಡು** ಅವರು ಉತ್ತರಿಸುತ್ತ ಕೇಂದ್ರವೇ ಜಾರಿಗೆ ತಂದಿರುವ ಈ ಯೋಜನೆಯನ್ನು ಅನುಷ್ಠಾನಗೊಳಿಸದಿದ್ದರೆ ಬಂಡವಾಳ ಹೂಡಿಕೆದಾರರು ನಮ್ಮಲ್ಲಿಗೆ ಬರಲು ಹಿಂಜರಿಯುತ್ತಾರೆ. ಮಹಾರಾಷ್ಟ್ರ, ತಮಿಳುನಾಡು, ಆಂಧ್ರಪ್ರದೇಶಗಳು ಈ ಯೋಜನೆಯನ್ನು ಜಾರಿಗಿಟ್ಟಿವೆ. ಕೇಂದ್ರದಿಂದ ನಮಗೆ 29 ವಿಶೇಷ ಆರ್ಥಿಕ ವಲಯ ಯೋಜನೆಗಳಿಗೆ ಅನುಮೋದನೆ ದೊರೆತಿದೆ. 16 ವಿಶೇಷ ವಿತ್ತ ವಲಯಗಳ ಯೋಜನೆಗೆ ತಾತ್ವಿಕ ಒಪ್ಪಿಗೆ ಒದಗಿದೆ. 5 ಹೊಸ ಆರ್ಥಿಕ ವಲಯವನ್ನು ಅಭಿವೃದ್ಧಿಗೊಳಿಸಲಾಗುತ್ತಿದೆ. ಹಾಸನ, ಶಿವಮೊಗ್ಗ ಹಾಗೂ ಮಂಗಳೂರಿನಲ್ಲಿ, ಈ ವಲಯಗಳನ್ನು ಸ್ಥಾಪಿಸಲಾಗುತ್ತಿದೆ. ಬೆಂಗಳೂರಿನಲ್ಲಿ 19 ವಲಯಗಳಿಗೆ ಅನುಮೋದನೆ ದೊರೆತಿದೆ. ಇದಕ್ಕಾಗಿ ಸರ್ಕಾರ 4076.33 ಎಕರೆ ಪ್ರದೇಶವನ್ನು ಸ್ವಾಧೀನ ಮಾಡಿಕೊಂಡಿದೆ. ಮತ್ತೆ 6758 ಎಕರೆ ಪ್ರದೇಶವನ್ನು ವಶಮಾಡಿಕೊಳ್ಳಲಿದೆ ಎಂದೆಲ್ಲ ಮಾಹಿತಿ ನೀಡಿದರು. ಮುಂದುವರಿದು ಬೆಂಗಳೂರಿನ ಬಯೋಕಾನ್ ಸಂಸ್ಥೆಯು ಮೂರು ಬಿ.ಟಿ.ವಲಯ ಅಭಿವೃದ್ಧಿಗೆ 534 ಕೋಟಿ ರೂ. ವಿಪ್ರೋ ಸಂಸ್ಥೆಯು ನಾಲ್ಕು ಐಟಿ ವಲಯ ಅಭಿವೃದ್ಧಿಗೆ 133.38 ಕೋಟಿ ರೂ. ಬಂಡವಾಳವನ್ನು ಹೂಡಿವೆ, ಎಂದರು.

ಜೆಡಿ(ಯು)ನ **ಡಾ.ಎಂ.ಪಿ. ನಾಡಗೌಡ** ಅವರು ಖಾಸಗಿ ಕಂಪೆನಿಗಳಿಗೆ ಈ ರೀತಿ ಮಂಜೂರಾತಿ, ಬೆಂಗಳೂರಿನಲ್ಲಿ ಮಾತ್ರ 19 ವಲಯಗಳಿಗೆ ಮಂಜೂರಾತಿ ನೀಡಿ ರಾಜ್ಯದ ಇತರ ಭಾಗಗಳನ್ನು ನಿರ್ಲಕ್ಷಿಸಲಾಗಿದೆ ಎಂದರು. ಶ್ರೀ ಬಸವರಾಜ ಬೊಮ್ಮಾಯಿ ಇದಕ್ಕೆ ದನಿಗೂಡಿಸಿ ಇದೊಂದು ರಿಯಲ್ ಎಸ್ಟೇಟ್ ದಂಧೆಯ ಭ್ರಷ್ಟಾಚಾರ' ಎಂದು ಆರೋಪಿಸಿದರು. ಕಾಂಗ್ರೆಸ್‌ನ ಶ್ರೀ **ವಿ.ಎಸ್.ಉಗ್ರಪ್ಪನವರು,** ನಂಜುಂಡಪ್ಪ ವರದಿಯನ್ನು ಗಮನಿಸಿಯೂ ಬೆಂಗಳೂರಿಗೇ ಪ್ರಾಶಸ್ತ್ಯ ನೀಡಿದ್ದು ಏಕೆ? ಎಂದು ಪ್ರಶ್ನಿಸಿದರು.

ವಿರೋಧ ಪಕ್ಷದ ನಾಯಕ ಶ್ರೀ **ಎಚ್.ಕೆ.ಪಾಟೀಲರು,** ವಿಶೇಷ ವಿತ್ತ ವಲಯವನ್ನು ಕೇಂದ್ರವೇ ಪ್ರಸ್ತಾಪಿಸಿದ್ದರೂ, ರೈತರ ಆಸ್ತಿ ಶ್ರೀಮಂತರಿಗೆ ಹೋಗುವಂಥದ್ದಾಗಬಾರದು ಎಂದರು. ಡಾ. ಎಂ.ಪಿ.ನಾಡಗೌಡ ಮತ್ತು ಶ್ರೀ ಬಸವರಾಜ ಬೊಮ್ಮಾಯಿ ಅವರು ಉಭಯ ಸದನಗಳಲ್ಲಿ ಚರ್ಚೆ ನಡೆಸಿ ಸರ್ಕಾರ ಉತ್ತರಿಸಬೇಕು ಎಂದರು. ಸಚಿವರು ಮಾತು ಮುಂದುವರಿಸಲೆಳಸಿದಾಗ, ಸರ್ಕಾರದ ನಿಲುವನ್ನು ಖಂಡಿಸಿ ಜೆಡಿ(ಯು)ನ ಸದಸ್ಯರು ಸಭಾತ್ಯಾಗ ಮಾಡಿದರು. (4.4.07) ಅಂದರೆ ವಿಶೇಷ ಆರ್ಥಿಕ ವಲಯದ ವಿಷಯ, ವಿವಾದದ ನೆಲೆಯಾದದ್ದು ಇಲ್ಲಿ ಕಾಣಬರುತ್ತದೆ; ಬಡರೈತರ ಜಮೀನನ್ನು ವಶಪಡಿಸಿಕೊಂಡು ವಿಶೇಷ ವಿತ್ತ ವಲಯದ ಹೆಸರಿನಲ್ಲಿ ರಿಯಲ್ ಎಸ್ಟೇಟ್ ಉದ್ಯಮಿಗಳ ಭೂಲೋಲುಪತೆಗೆ ಎಡೆ ಮಾಡಬಾರದು ಎಂಬುದೂ ಕಾಣಬರುತ್ತದೆ.

ಹೀಗೆ ವಿಶೇಷ ವಿವಾದಕ್ಕೆ ಈಡಾಗಿರುವ ವಿಶೇಷ ಆರ್ಥಿಕ ವಲಯ ಯೋಜನೆಯ (ಎಸ್‌ಇಜೆಡ್) ಸಂಬಂಧ ಶ್ರೀ ಪ್ರಣಬ್ ಮುಖರ್ಜಿನೇತೃತ್ವದ ಕೇಂದ್ರ ಸಚಿವರ ಸಮಿತಿಯು 5.4.2007 ರಂದು ಸಭೆ ನಡೆಸಿತು. ಸಭೆಯ ನಿರ್ಣಯದಂತೆ ಕೇಂದ್ರ ಸರ್ಕಾರವು ಮಾರ್ಪಾಡುಗಳನ್ನು ಮಾಡಿತು. ಅದರಂತೆ ಎಸ್‌ಇಜೆಡ್ ಸ್ಥಾಪನೆಗೆ ರಾಜ್ಯ ಸರ್ಕಾರ ಭೂ ಸ್ವಾಧೀನ ಮಾಡಿಕೊಳ್ಳಲಾಗದು; ಯಾವುದೇ ಎಸ್‌ಇಜೆಡ್ 5 ಸಾವಿರ ಹೆಕ್ಟೇರ್ ಮೀರಲಾಗದು, ಎಂದಿದೆ; ಎಸ್‌ಇಜೆಡ್ ಸ್ಥಾಪನೆಗೆ ಅನುಮತಿ ಪಡೆದು ಕಂಪೆನಿಗಳೇ ರೈತರ ಬಳಿಗೆ ಹೋಗಿ ಒಪ್ಪಿಗೆ ಪಡೆದು ಭೂಮಿ ಖರೀದಿಸಬೇಕು ಎಂದಿದೆ. ಈ ಮಾರ್ಪಾಟು ರೈತರ, ಸಂಸದರ, ಶಾಸಕರ, ರೈತ ಸಂಘಟನೆಗಳ, ವಿಚಾರಶೀಲರ ಪ್ರತಿಭಟನೆಗೆ ಆಗ್ರಹಗಳಿಗೆ ಸಿಕ್ಕ ಮಾನ್ಯತೆಯೇ ಸರಿ; ಅಪೇಕ್ಷೆಗಳ ಈಡೇರಿಕೆಯೆ ಸರಿ. ಆದರೆ ಈ ರೀತಿಯ ಮಾರ್ಪಾಟು ರೈತರ ಆರ್ಥಿಕ ಪ್ರಗತಿಯ ಆಯಾಮವನ್ನು ಮಾತ್ರ ಪರಿಗಣಿಸಿದೆಯೆ? ಸಾಮಾಜಿಕ, ಸಾಂಸ್ಕೃತಿಕ ಹಾಗೂ ಪರಿಸರ ಪರಿಣಾಮಗಳ ಆಯಾಮವನ್ನು ಪರಿಗಣಿಸಿದೆಯೆ? ಎಂಬುದೂ ಸ್ಪಷ್ಟವಾಗಬೇಕು. ಜನ ಜೀವನವನ್ನು, ರೈತರ ಬೇಸಾಯದ ಬದುಕನ್ನು ಕೇವಲ ಆರ್ಥಿಕ ಮಾನದಂಡದಿಂದಲೇ ಅಳೆಯಲಾಗುವುದಿಲ್ಲ. ಎಸ್‌ಇಜೆಡ್ ಪ್ರವರ್ತನೆಯ ಪ್ರತಿ ಹಂತದಲ್ಲಿಯೂ ಎಚ್ಚರದಿಂದ ನಡೆಬೇಕು. ಸಾಧಕ ಬಾಧಕಗಳ ಪರಾಮರ್ಶೆಬೇಕು. ಒಪ್ಪಂದಗಳು ಪಾರದರ್ಶಕವಿರಬೇಕು. ಎಸ್‌ಇಜೆಡ್ ಎಂಬುದು ವಿಶೇಷ ವಿತ್ತ ವಲಯದ ಹೆಸರಿನಲ್ಲಿ ನಗರೀಕರಣದ ವಿದೇಶಿ ದ್ವೀಪವಾಗಬಾರದು; ನಿರ್ದಿಷ್ಟ ವರ್ಗ ವಸಾಹತುವೆನಿಸಬಾರದು. ರಾಜಕೀಯ ಅಚ್ಚುಗಳ ಪ್ರಭಾವದಲ್ಲಿ

ಇರಬಾರದು. ಕೈಗಾರಿಕೆ ಮತ್ತು ವರ್ತಮಾನ ನಗರೀಕರಣದ ಸಾಮರಸ್ಯ ಬೆಳೆಸಿ ದೇಶೀಯ ಬೇರುಗಳನ್ನು ಗಟ್ಟಿಗೊಳಿಸುವ ಸಾಂಸ್ಕೃತಿಕ ಜತನವನ್ನು ಮೈಗೂಡಿಸಿಕೊಳ್ಳಬೇಕು.

ಇನ್ನು ಜಾಗತೀಕರಣದ ಜೊತೆಗೆ ದೇಶೀಯ ಸವಾಲುಗಳು ಮುಖಾಮುಖಿಯಾಗಿ ನಿಂತಿರುವುದೂ ಕಾಣುತ್ತದೆ. ರೈತ ಸಂಘಟನೆಗಳು ಎಚ್ಚರಗೊಂಡಂತೆ ರೈತರ ಆತ್ಮವಿಶ್ವಾಸ, ಸ್ವಾಭಿಮಾನ ಜಾಗೃತಗೊಳ್ಳುತ್ತಿರುವುದೂ ಕಾಣುತ್ತದೆ. ಹೊಸ ಹೊಸ ಸಮಸ್ಯೆಗಳು, ಜೀವನಶೈಲಿಯ ಬದಲಾವಣೆಯ ಕಾರಣ ಹುಟ್ಟಿಕೊಂಡಿವೆ. ಅದು ರೈತರ ಬಾಳುವೆಯಲ್ಲಿಯೂ ಪ್ರತಿಧ್ವನಿಸಿವೆ. ಇದನ್ನಿಲ್ಲಿ ರೈತನೊಬ್ಬನ ಪಾಲಿಗೆ ಬಿಟ್ಟು ಬಿಡುವ ಅಪ್ರವರ್ತಕ ಮನಸ್ಸು ಸೂಕ್ತವಾಗದು. ಅವನ ಸಹಯೋಗದಲ್ಲಿರುವುದು ಇಂದಿನ ಅವಶ್ಯಕತೆಯಾಗಿ ಕಾಣುತ್ತದೆ. ಈಚಿನ ಕಾವೇರಿ ಚಳುವಳಿಯಲ್ಲಿ ಇದು ಸ್ಪಷ್ಟವಾಗಿ ಪ್ರದರ್ಶಿತವಾಗಿದೆ. ಪರಸ್ಪರ ಅವಲಂಬಿತ, ಪಾಲುದಾರಿಕೆಯದೆನಿಸಿದೆ. ಪತ್ರಿಕಾ ಸಂವೇದನೆಗಳೂ ಈ ನಿಟ್ಟಿನಲ್ಲಿ ತುಂಬಾ ಗಮನ ಹರಿಸಿರುವುದೂ ಕಾಣುತ್ತದೆ. ಪ್ರತಿಭಟನೆಗಳು ವೈವಿಧ್ಯಮಯವಾಗಿ, ಜನರ ಗಮನ ಸೆಳೆಯುವಲ್ಲಿ ಯಶಸ್ವಿಯಾಗಿವೆ. ಅಲ್ಲದೆ ತಮ್ಮ ನಿರಂತರತೆಯನ್ನು ಚಳುವಳಿಯ ಮೂಲಕ ಕಾಯ್ದುಕೊಂಡು ಬಂದಿರುವುದೂ ಗಮನಕ್ಕೆ ಬರುತ್ತದೆ.

ಈಚೆಗೆ (24.8.07) ಹೊಸಕೋಟೆ ತಾ.ನಂದಗುಡಿಯಲ್ಲಿ 'ನಂದಗುಡಿ ಭೂಸ್ವಾಧೀನ ವಿರೋಧಿ ಹೋರಾಟ ಸಮಿತಿಯು' ಆಯೋಜಿಸಿದ್ದ ಸಮಾರಂಭದಲ್ಲಿ ಖ್ಯಾತ ಪರಿಸರವಾದಿ ಶ್ರೀಮತಿ ಮೇಧಾ ಪಾಟ್ಕರ್ ಅವರು ಪಾಲ್ಗೊಂಡು ವಿಶೇಷ ವಿತ್ತ ವಲಯದ ವಂಚನೆಯ ಜಾಲಕ್ಕೆ ರೈತರು ಸಿಲುಕಿದರೆ ದುರಂತ. ಬಹುರಾಷ್ಟ್ರೀಯ ಕಂಪೆನಿಗಳು ಅಗ್ಗದ ಬೆಲೆಗೆ ಭೂಮಿಯನ್ನು ಕೊಂಡು ರಿಯಲ್ ಎಸ್ಟೇಟ್ ದಂಧೆಗಿಳಿದು ಪ್ರಗತಿಯ ಹೆಸರಿನಲ್ಲಿ ಮೋಜಿನ ತಾಣ ನಿರ್ಮಿಸಬಹುದು. ರೈತರು, ಕೊಲ್ಕೊತ್ತದ ನಂದಿಗ್ರಾಮದ ಜನರ ಮಾದರಿಯಲ್ಲಿ ಹೋರಾಡಿ ಅಸ್ತಿತ್ವ ಉಳಿಸಿಕೊಳ್ಳಬೇಕು, ಎಂದಿದ್ದಾರೆ. ಅಂದರೆ ದೇಸೀ ನೆಲೆಯಲ್ಲಿ ನಡೆಯುತ್ತಿರುವ ರೈತರ ಈ ಗ್ರಾಮೀಣ S.E.Z. ವಿರೋಧ ಚಳವಳಿ ರಾಷ್ಟ್ರೀಯ ಗಮನ ಸೆಳೆದು ರಾಷ್ಟ್ರೀಯ ಚಳವಳಿ ಆಗುವ ಸೂಚನೆ ಈ ಮಾತುಗಳಲ್ಲಿ ಕಾಣುತ್ತದೆ. ಇನ್ನು ಭೂ ಸ್ವಾಧೀನವೆಂದರೆ ಕೃಷಿ ಜಮೀನುಗಳತ್ತವೆ ಕಣ್ಣು ಹಾಯುವುದು ಒಂದು ಪರಿಪಾಠವಾದಂತಿದೆ. ವಿಶೇಷ ಆರ್ಥಿಕ ವಲಯ, ಅಭಿವೃದ್ಧಿ ಕಾರಣ, ವಿಶ್ವವಿದ್ಯಾಲಯ ಸ್ಥಾಪನೆ ಹೀಗೆ ಏನಾದರೂ ಒಂದು ಹೆಸರಿನಲ್ಲಿ ರೈತರ ಬದುಕಿನ ಆಸರೆಯಾಗಿರುವ ಜಮೀನು

ಗಳಿಗೆ ಹುನ್ನಾರವಿಡುವುದೇ? ಎಂಬ ಪ್ರಶ್ನೆ ಏಳುತ್ತದೆ. ಇದರಿಂದ ಹಣದ ಆಮಿಷಕ್ಕೆ ದುರ್ಬಲ ಸಮಯದಲ್ಲಿ ಜಮೀನು ಮಾಡಿ, ನಗರದತ್ತ ವಲಸೆ ಹೋಗುವುದು, ಇದ್ದುದನ್ನು ಕಳೆದುಕೊಂಡು ಪರಾವಲಂಬಿ ಜೀವನಕ್ಕೆಳಿಸುವುದು. ನಮ್ಮ ಅಭಿವೃದ್ಧಿ ಶೀಲವೆಂದುಕೊಳ್ಳುವ ಮನಸ್ಸುಗಳಿಗೆ ಜೀವನವನ್ನು ಹರಾಜು ಹಾಕಿ ಹೋದಂಥ ರೈತ ಬಾಳುವೆ ಎನಿಸುತ್ತದೆ. ಆದರೆ ಕೆಲವು ಎಚ್ಚತ್ತ ಗ್ರಾಮೀಣ ಮನಸುಗಳು ಇಂಥ ಭೂಸ್ವಾಧೀನಕ್ಕೆ ತೀವ್ರ ವಿರೋಧ ವ್ಯಕ್ತಪಡಿಸುತ್ತಿರುವ ಕೆಲವಷ್ಟಾದರೂ ಉದಾಹರಣೆಗಳು ಕಾಣಬರುತ್ತವೆ. ನಂದಗುಡಿ ವಿಶೇಷ ಆರ್ಥಿಕ ವಲಯಕ್ಕೆ ವಿರೊಧ ವ್ಯಕ್ತವಾಯಿತಲ್ಲವೆ! ಹೀಗೆಯೆ ರಾಮನಗರದ ಅರ್ಚಕರಹಳ್ಳಿಯ ಬಳಿ ರೈತರ ಸುಮಾರು 250 ಎಕರೆ ಜಮೀನನ್ನು ಆರೋಗ್ಯ ವಿಶ್ವವಿದ್ಯಾಲಯಕ್ಕೆಂದು ಸ್ವಾಧೀನಕ್ಕೆ ಸರ್ಕಾರ ಮುಂದಾಗಿರುವುದಕ್ಕೆ ವಿರೋಧ ವ್ಯಕ್ತವಾಯಿತು. ನಿಗದಿಗೊಂಡ ಸ್ಥಳದ ನೆರೆಗೇ ಸರ್ಕಾರದ ನೂರಾರು ಎಕರೆ ಜಮೀನಿದ್ದರೂ ರೈತರ ಜಮೀನಿನತ್ತ ಏಕೆ ಕಣ್ಣು ಹಾಕಬೇಕು ಎಂಬುದು ರೈತರ ವಾದ. ಜಂಟಿ ಸಮೀಕ್ಷೆಯೂ ಇಲ್ಲದೆ ಭೂ ಸ್ವಾಧೀನಕ್ಕೆ ಅಧಿಕಾರಿಗಳು ಮುಂದಾದದ್ದು ರೈತರಿಗೆ ಹಿಡಿಸಲಿಲ್ಲ. ಹಲವಾರು ದಿನಗಳಿಂದ ರಾಷ್ಟ್ರೀಯ ಹೆದ್ದಾರಿಯ ಅರ್ಚಕರ ಹಳ್ಳಿಯ ಬಳಿ ರೈತರು ಪ್ರತಿಭಟನೆ ನಡೆಸುತ್ತ ಬಂದರು. ರೈತರಿಗೆ ಅನುಕೂಲವಾಗುವ ಪ್ರಸ್ತಾವನೆ ರೂಪಿಸದಿದ್ದರೆ, ಸರ್ಕಾರವೇ ಹೊಣೆ ಎಂದು ರೈತರ ಎಚ್ಚರಿಕೆ ನೀಡಿದ್ದಿತ್ತು. ಬೆಂಗಳೂರು ಗ್ರಾಮಾಂತರ ಜಿಲ್ಲೆ; ಜಿಲ್ಲಾಧಿಕಾರಿಗಳು ರೈತರ ಸಂಧಾನ ಸಭೆಯನ್ನು ಕರೆದು ಮಾತುಕತೆಯಾಡಿದರು. ಆದರೆ ಭೂ ಸ್ವಾಧೀನ ಪ್ರಕ್ರಿಯೆಗೆ ರೈತರ ತೀವ್ರ ವಿರೋಧವಿತ್ತು. (24.6.2007) ಪಕ್ಷ ರಾಜಕೀಯ ಈ ಸಂದರ್ಭಗಳಲ್ಲಿ ಸೌಹಾರ್ದದ ಬದಲು ಬೆರೆತರೆ, ಪ್ರತಿಭಟನೆ ವಿಕೋಪಕ್ಕೆ ಹೋಗುತ್ತದೆ. ಈ ಸಂದರ್ಭದಲ್ಲಿ ಜನಹಿತವನ್ನು ಗಮನಿಸಿ ಒಪ್ಪಿದ ತತ್ತ್ವಕ್ಕೂ ವಿರೋಧವಾಗದಂತೆ ನಡೆದು ಕೊಳ್ಳಬೇಕಾಗುತ್ತದೆ ಅಭಿವೃದ್ಧಿಯೂಬೇಕು. ಜನರ ಹಿತವೂಬೇಕು. ಪಕ್ಷರಾಜಕೀಯ ಮೀರಿದರೆ ಇದು ಸಾಧ್ಯವಾದೀತು.

ಇನ್ನೊಂದು ಉದಾಹರಣೆಯಾಗಿ, ಮಂಗಳೂರಿನ ವಿಶೇಷ ಆರ್ಥಿಕ ವಲಯದ ಎರಡನೇ ಹಂತಕ್ಕೆ ಕೃಷಿ ಭೂಮಿ ಸ್ವಾಧೀನಕ್ಕೆ ಜನ ವಿರೋಧ ಬಂದು ಅದು ವಿವಾದಕ್ಕಿಡಾಗಿದೆ. ಮೊದಲನೇ ಹಂತದಲ್ಲಿ 35 ಸಾವಿರ ಕೋಟಿ ರೂ. ಯೋಜನೆಯಾಗಿ ಮಂಗಳೂರು ವಿಮಾನ ನಿಲ್ದಾಣಕ್ಕೆ ಸನಿಹದ ಬಜ್ಪೆ ಸುತ್ತಮುತ್ತಲಿನ ಭೂ ಪ್ರದೇಶದಲ್ಲಿ ವಿಶೇಷ ಆರ್ಥಿಕ ವಲಯ ಯೋಜನೆಯನ್ನು ಚಾಲು ಮಾಡಲು ಸರ್ಕಾರ ಮುಂದಾಗಿದೆ. ಇದಕ್ಕಾಗಿ ತಾಲ್ಲೂಕಿನ ಬಜ್ಪೆ, ಕಳವಾರು, ಪೆರ್ಮುದೆ

ಪ್ರದೇಶದಿಂದ ಜನರನ್ನು ಒಕ್ಕಲೆಬ್ಬಿಸಿ ನಿರ್ವಾಸಿತರ ಕಾಲನಿಗೆ ಸ್ಥಳಾಂತರಿಸಿಯೂ ಆಗಿದೆ. ಮುಖ್ಯವಾಗಿ ಪೆಟ್ರೋಲಿಯಂ, ಪೆಟ್ರೋಕೆಮಿಕಲ್ಸ್ ಕಾರ್ಖಾನೆಗಳಿಗೆ ಅಲ್ಲಿ ಜಾಗವಾದರೆ 12 ಸಾವಿರ ಮಂದಿಗೆ ಉದ್ಯೋಗ ನೀಡಲಿದೆ ಎಂಬುದು ಕಂಪನಿಯ ಹೇಳಿಕೆ. ಅಂದರೆ ಗ್ರಾಮದ ಸ್ವಾವಲಂಬಿ ಜೀವನಾಧಾರವನ್ನು ಕಸಿದುಕೊಂಡು, ಯಾಂತ್ರಿಕ ಬದುಕಿಗೆ ಒಡ್ಡಿಸುವ ಕ್ರಿಯೆ ನಡೆಯುವಂತೆ ಆಗುವುದಿಲ್ಲಿದೆ. ಪ್ರಗತಿಯ ಮುಖ ಹೀಗೆ ಕೃಷಿ ಭೂ ಕಬಳಿಕೆಗಳಿಂದಲೇ ತೋರಿಕೊಳ್ಳಬೇಕೇ? 2ನೇ ಹಂತದ ಯೋಜನೆ ವಿರುದ್ಧವಾಗಿ, ಪೇಜಾವರ ಶ್ರೀಗಳು ಹೋರಾಟಕ್ಕಿಳಿದಿದ್ದರು. ಭೂ ಸ್ವಾಧೀನಕ್ಕೆ ಸರ್ಕಾರ ಹೊರಡಿಸಿರುವ ನೋಟಿಫಿಕೇಶನ್ ಅನ್ನು ರದ್ದು ಮಾಡಲು ಆಗ್ರಹಿಸಿ; ಉಪವಾಸ ಸತ್ಯಾಗ್ರಹದ ಮಾಡುವ ಬಗ್ಗೆ ಘೋಷಿಸಿಯೂ ಇದ್ದರು. ಗೃಹ ಸಚಿವ ಡಾ. ವಿ.ಎಸ್. ಆಚಾರ್ಯ, ಕೈಗಾರಿಕಾ ಸಚಿವ ನಿರಾಣಿಯವರು ಸಂಧಾನವನ್ನು ಯಶಸ್ವಿಯಾಗಿ ಮಾಡಿದರು. ತತ್ಫಲವಾಗಿ ಪೇಜಾವರ ಶ್ರೀ ಗಳು ಉಪವಾಸ ಸತ್ಯಾಗ್ರಹವನ್ನು ಸದ್ಯಕ್ಕೆ ಹಿಂಪಡೆದರು. ಈ ಯೋಜನೆಯ ಹಿನ್ನೆಲೆಯನ್ನು ಪರಿಶೀಲಿಸಬೇಕು.

ಹಿಂದೆ ವಶಪಡಿಸಿಕೊಂಡ 1800 ಎಕರೆ ಪ್ರದೇಶ ಬಹಳ ಫಲವತ್ತಾದ ಭೂಮಿಯಾಗಿದ್ದು ಕಳವಾರು, ಬಾಳ ಪ್ರದೇಶದ ನೂರು ಎಕರೆಯಷ್ಟು ಗದ್ದೆಯೂ ಸೇರಿತು. ದೊಡ್ಡ ಹಿಡುವಳಿದಾರರನ್ನು ಆಮಿಷಗಳ ಮೂಲಕ ಅಧಿಕಾರಿಗಳು ಒಳಮಾಡಿಕೊಂಡು ಭೂಮಿಯನ್ನು ಪಡೆದುಕೊಂಡರು. ಆಗ ಸಣ್ಣ ಮತ್ತು ಅತಿ ಸಣ್ಣ ರೈತರ ವಿಧಿ ಇಲ್ಲದೆ ಮನಸ್ಸಿಲ್ಲದಿದ್ದರೂ ತಮ್ಮ ಸ್ವಂತ ನೆಲವನ್ನು ಬಿಟ್ಟುಕೊಟ್ಟರು. ಕುಳಾಯಿ ಕಾಲೋನಿಗೆ ಹೋದರೂ ಸ್ವಂತ ನೆಲದ ಬಾಳುವೆ ಅವರಿಗೆ ಕಂಡಿಲ್ಲ. ಎಂಎಸ್ಇ ಝಡ್ ಮಾತ್ರ ಒಂದು ಲಕ್ಷ ಉದ್ಯೋಗ ಸೃಷ್ಟಿಯು ಕನಿಷ್ಠ ನಾಲ್ಕು ಸಾವಿರ ಎಕರೆಗಳಷ್ಟು ಪಡೆದು ಯೋಜನೆ ಪೂರ್ಣಗೊಳಿಸುವಲ್ಲಿ ಲಭ್ಯ ಎಂಬ ಮಾತುಗಳನ್ನು ಅಭಿವೃದ್ಧಿಯ ಹೆಸರಿ ಗಂಟಿಸಿ ಹೇಳಿದೆ. ಎರಡನೆ ಹಂತದಲ್ಲಿ ಪೆರ್ಮುದೆಯ ಅರ್ಧಭಾಗ, ತೆಂಕ ಎಕ್ಕಾರು ಕುತ್ತೆತ್ತೂರು, ದೇಲಂತಬೆಟ್ಟು ಇತ್ಯಾದಿ ಗ್ರಾಮಗಳನ್ನೊಳಗೊಂಡ 2025 ಎಕರೆ ಪ್ರದೇಶದ ಸ್ವಾಧೀನಕ್ಕೆ ಹೊರಟದ್ದು, ನೋಟಿಫೈಡ್ ಪ್ರದೇಶವೆಂದಿರುವುದಕ್ಕೆ ಪೇಜಾವರ ಶ್ರೀಗಳು, ಕೇಮಾರು ಸಾಂದೀಪನಿ ಮಠದ ಈಶ ವಿಠಲ ಸ್ವಾಮೀಜಿ, ಸ್ವಾಮಿ ಅಗ್ನಿವೇಶ್, ಪೆರ್ಮುದೆಯ ಕುಡುಬಿಗಳು, ಕೃಷಿ ಭೂಮಿ ಸಂರಕ್ಷಣಾ ಸಮಿತಿ ಗುರುವಾಯನ ಕೆರೆ ನಾಗರೀಕ ಸೇವಾ ಟ್ರಸ್ಟ್ ಯೋಜನಾ ಪ್ರದೇಶ ಸಂರಕ್ಷಣಾ ವೇದಿಕೆ ಕಾರ್ಯಕರ್ತರು ಹಾಗೂ ಕ್ಷೇತ್ರ ಸಂಸದರು

ಈ ಭೂ ಸ್ವಾಧೀನ ವಿರುದ್ಧ ವಿರೋಧ ಮಾಡಿದರು. ಪೇಜಾವರು 2025 ಎಕರೆ ಸ್ಥಳವನ್ನು ಡಿ ನೋಟಿಫೈ ಮಾಡಬೇಕೆಂದು ತೀವ್ರ ಒತ್ತಾಯ ಮಾಡಿದರು. ಕಾರಣ ನೋಟಿಫೈಡ್ ಪ್ರದೇಶದಲ್ಲಿ ಕೃಷಿಕರಿಗೆ ಮೂರುವರ್ಷಗಳಿಂದ ಸಾಲ ಸಿಗುತ್ತಿಲ್ಲ. ಗ್ರಾಮ ಪಂಚಾಯಿತಿಯ ಯಾವುದೇ ಅಭಿವೃದ್ಧಿ ಕೆಲಸಗಳಿಗೂ ಅವಕಾಶವಾಗುವುದಿಲ್ಲ. ಎಂಎಸ್‌ಇಝಡ್ ಪ್ರಮೋಟರುಗಳು ಪೇಜಾವರ ಶ್ರೀ ಗಳನ್ನೂ ಮಾತುಕತೆ ನಡುವೆ ಅಗೌರವದಿಂದ ನಡೆಸಿಕೊಂಡ ಬಗ್ಗೆಯೂ ಹೇಳಲಾಗಿದೆ.

ಬೆಳೆದು ನಿಂತು ನಳನಳಿಸುತ್ತಿದ್ದ ಭತ್ತದ ಪೈರು, ಉದ್ದು ತರಕಾರಿಗಳ ನಡುವೆ ತಮ್ಮ ಈ ಉತ್ಪತ್ನಗಳಿಗಾಗಿ ವರ್ಷವಿಡಿ ಗದ್ದೆಯಲ್ಲಿ ದುಡಿಯುತ್ತಿದ್ದ ಕುಡುಬಿಗಳಿಗೆ ಇವೆಲ್ಲ ನೆಲಸಮವಾಗಿರುವುದು ಅವರು ಬದುಕಿದ ನೆಲದ ಚರಮಗೀತೆ ಆಗಿದೆ. ಗದ್ದೆಗಳಲ್ಲಿದ್ದ ಭೂತಸ್ಥಾನ, ದೈವಸ್ಥಾನ, ನೆರೆಯ ನಾಗಬನಗಳು ಹೋಗಿ ಅವರ ಸಾಂಸ್ಕೃತಿಕ ಮೌಲ್ಯಗಳ ಮೇಲೆ ದಾಳಿ ಎಂಬಂತಾಗಿದೆ. ಕಾಲೋನಿವಾಸ, ವಲಸೆ, ಕೂಲಿಯ ಆತಂಕದ ಬಾಳುವೆ ಪಾಲಿಗೆ ಬಂದ ದುಃಖವೆಂದು ಸಂತ್ರಸದ ಮಾತುಗಳಲ್ಲಿವೆ, ಎಂಬ ಅಭಿಪ್ರಾಯದಲ್ಲಿ ಕೆ.ಎಸ್. ವೇಣುವಿನೋದ್ ಹೇಳಿರುವುದು (ಕ.ಪ್ರ:1.3.2010) ಗಮನಿಸಬೇಕಾದ ವಿಷಯ.

ಇದ್ದ, ದುಡಿದ ನೆಲದ ಮೇಲೆ ಬದುಕುತ್ತ ಹೋಗಬೇಕೆನ್ನುವುದು. ಬಾಳಿಬಂದವರ ಮಾನವ ಹಕ್ಕು ಹೌದು. ಆರಾಧಿಸಿದ ದೈವ, ನಂಬಿದ ಪರಿಸರ ಒಂದು ಸಾಂಸ್ಕೃತಿಕ ಬಾಳುವೆಯನ್ನು ರೂಪಿಸಿರುತ್ತದೆ. ಹೀಗಾಗಿ ಪ್ರಗತಿ, ಅಭಿವೃದ್ಧಿಯ ಹೆಸರಿನಲ್ಲಿ ಭೂ ಕಬಳಿಕೆಂಯು ಕ್ರೌರ್ಯವೆನಿಸಬಾರದು. ಆಕ್ರಮಣದ ಆಟಾಟೋಪವೆನಿಸಬಾರದು. ವಿಶೇಷ ಆರ್ಥಿಕ ವಲಯವು ಕಣ್ಣಿಗೆ ರಾಚುವಂಥ ನಗರೀಕರಣ ನೆಲೆಯಾದರೂ ಅದೊಂದು ದ್ವೀಪವಾಗಿ ಬೆಳೆಯುವಂಥದ್ದು. ನೆಲದ ಸಂಸ್ಕೃತಿಯನ್ನು ಒಂದು ರೀತಿಯಲ್ಲಿ ಅಣಕಿಸುವಂಥದ್ದು. ಇಂಥದ್ದರಲ್ಲಿ ತನ್ನ ನೆರೆಯಲ್ಲಿಯೆ ಹಿಂದಿದ್ದ ಗ್ರಾಮೀಣ ಬಾಳುವೆಗೆ ಪ್ರಾಚೀನ ಅಥವಾ 'ರಕ್ಷಿತ ಪ್ರಾಚೀನ ಗ್ರಾಮ' (Reserved antiquity village) ಎಂದು ತನ್ನ ಒಡಲಲ್ಲಿಯೆ ಮೀಸಲು ಪ್ರದೇಶವನ್ನೇಕೆ ಎಸ್‌ಇಜಡ್ ಮೀಸಲಿಡಬಾರದು. ಬೆಂಗಳೂರಿನ ರಾಜಾಜಿನಗರದ ಜೂಗನಹಳ್ಳಿ ಇಂಡಸ್ಟ್ರೀಯಲ್ ಎಸ್ಟೇಟ್ ಪಕ್ಕದಲ್ಲಿರುವ ಶಿವನಹಳ್ಳಿ, ಜಯನಗರದ ಅಶೋಕ ಪಿಲ್ಲರ್ ಬಳಿ ಒಳಗಿರುವ ಸಿದ್ದಾಪುರ ಗ್ರಾಮ, ಮಿಲಿನಿಯಮ್ ಅಪಾರ್ಟ್‌ಮೆಂಟ್ ಬಳಿಯ ಪುಟ್ಟೇನಹಳ್ಳಿ ಇತ್ಯಾದಿಗಳು ನಗರದ ಅಖಂಡ ಪ್ರಗತಿಪರ ಬೆಳವಣಿಗೆ, ನಗರೀಕರಣದ ನಡುವೆಯೂ ತಮ್ಮ 'ಹಳ್ಳಿ ಬಾಳುವೆ' ಯನ್ನು

ಉಳಿಸಿಕೊಂಡು ಆಧುನಿಕ ಬದುಕಿಗೂ ತೆರೆದುಕೊಂಡ ವಿಶಾಲ ಸಾಂಸ್ಕೃತಿಕ ಹೊಂದಾಣಿಕೆಯ ನೆಲೆಗಳಾಗಿವೆ. ಇಂಥ ಮನಸ್ಸು ವಿಶೇಷ ಆರ್ಥಿಕ ವಲಯದ ಪ್ರವರ್ತಕರಲ್ಲಿಯೂ ಬೆಳೆಯಬೇಕಲ್ಲವೆ! ಹಾಗೆ ಬೆಳೆದಾಗಲೇ ಅವರ 'ದ್ವೀಪ ಮಾನಸ' 'ಎಸ್ ಇ ಜಡ್' ಆಚೆಗೂ ಜನ ಪ್ರೀತಿ ಪಡೆಯಬಲ್ಲದು; ಮಾನವ ಹಕ್ಕುಗಳ ಬಗ್ಗೆ ಗೌರವಿಸಿದಂತಾಗಬಲ್ಲುದು. ಇಲ್ಲವೆಂದರೆ ನಂದಗುಡಿ ವಿಶೇಷ ಆರ್ಥಿಕ ವಲಯ ಅಸ್ಸಾಂನ ಕಾಮರೂಪ ಜಿಲ್ಲೆಯ ಬೊಂಗಾರ ಗ್ರಾಮಯಲ್ಲೂರು ಸಿಂಗೂರು ಹಾಗೂ ನಂತರ ಮಂಗಳೂರು ಎಸ್ ಇ ಜಡ್ ಗಳಿಗೆ ಎದುರಾದ ಪ್ರತಿರೋಧ 'ಮಾನವ ಹಕ್ಕುಗಳ ಆಯೋಗ'ದ ಅಧಿಕಾರದ ಇನ್ನೊಂದು ರೂಪವೇ ಆದಂತಿದೆ. ಹೀಗಾಗಿ ದೇಸೀ ನೆಲೆಗಳಿಗೆ ಸಲ್ಲಬೇಕಾದ ಗೌರವ, ಉಳಿಸಬೇಕಾದ ಅಸ್ತಿತ್ವ ಇವುಗಳಿಗೆ ಅವಕಾಶವಿದ್ದಾಗಲೇ ಯೋಜನೆಗಳಿಗೆ ಹಾದಿ ಸಾಮರಸ್ಯ ಪಡೆದುಕೊಂಡಾಗಲೇ ಮಾನವ ಮಾನಿತವಾಗುತ್ತದೆ ಎಂಬುದನ್ನು ನೆನಪಿನಲ್ಲಿಡಲೇ ಬೇಕಾಗಿದೆ.

*ಮಂಥನ : ಆಧುನಿಕ ಪ್ರತಿಭಟನೆಯ ಈ ಮಾದರಿಗಳಲ್ಲಿ, ನೀರಾವರಿ ಯೋಜನೆ ಸಂಬಂಧದ ಕರಸೇವೆ, ರೈತರ ಬೆಳೆ ಉತ್ಪನ್ನಗಳಿಗೆ ಸೂಕ್ತ ಬೆಲೆ ಬೇಡಿಕೆ, ಸಕ್ಕರೆ ಕಾರ್ಖಾನೆಗಳು ಆರಂಭವಾಗುವಲ್ಲಿ ಅಡೆತಡೆಗಳು ಹಾಗೂ ಒದಗಿಸಿದ ಕಬ್ಬಿಗೆ ಸೂಕ್ತ ಬೆಲೆ ನೀಡಲು ಹಿಂದೇಟು, ನೀರಾ ಚಳುವಳಿ ಸಂದರ್ಭದ ಪೋಲೀಸ್ ದೌರ್ಜನ್ಯ. ವಿದ್ಯುತ್ ಸರಬರಾಜಿನ ತೀವ್ರ ಅಸಮರ್ಪಕತೆ. ಉಷ್ಣಸ್ಥಾವರ ಸ್ಥಾಪನೆಗೆ ಪರಿಸರ ನಾಶದ ಕಾರಣ ವಿರೋಧ, ಬೆಳೆ ವಿಮೆ ಹಣ ಬಿಡುಗಡೆ ವಿಳಂಬ, ಬಿತ್ತನೆ ಬೀಜ ಸರಬರಾಜಿಗೆ ಅಭಾವ, ಹಕ್ಕೊತ್ತಾಯ ಮಾಡಿದ ರೈತರ ಮೇಲಿನ ಮೊಕದ್ದಮೆಗಳ ವಾಪಸಾತಿ ಇತ್ಯಾದಿ ಕುರಿತು ವಿಧಾನಸಭೆ ಹಾಗು ವಿಧಾನ ಪರಿಷತ್ತಿನಲ್ಲಿ ನಡೆದ ಚರ್ಚೆ, ಧರಣಿ, ಸತ್ಯಾಗ್ರಹ, ಸಭಾತ್ಯಾಗ ಇವೆಲ್ಲ ಪ್ರಚಲಿತ ರೈತ ಸಮಸ್ಯೆಗಳ ಗಂಭೀರ ವಾತಾವರಣವನ್ನೇ ನಿದರ್ಶಿಸುತ್ತವೆ. ಶಾಸಕರ ಮನಸ್ಸಿನಲ್ಲಿ, ರೈತರ ಕುರಿತ ಕಾಳಜಿಗಳ ಒಂದು ತೀವ್ರ ನೋಟ ಕಾಣುತ್ತದೆ. ರೈತರ ಬದುಕಿನ ಕ್ಷಣಗಳು ಅವರ ಮಾತುಗಳಲ್ಲಿ ಪ್ರತಿಬಿಂಬಿತವಾಗುತ್ತವೆ. ಇದಕ್ಕೆ ಪೂರಕವಾಗಿ ಹೊರಗಣ ಘಟನೆಗಳೂ ಸಮಸ್ಯೆಗಳ ಪದರಗಳನ್ನು ಬಿಚ್ಚಿಡುತ್ತದೆ. ಪತ್ರಿಕಾ ವಾರ್ತೆಗಳನ್ನು ವಿಶ್ಲೇಷಿಸಿದರೆ ನಮ್ಮ ಜಾಗತಿಕ ಜಗತ್ತಿನ ಜೀವನದಲ್ಲಿ ರೈತರ ನೆಲೆಗಳು ಹೇಗೆ ಸಂಘರ್ಷಕ್ಕೀಡಾಗುತ್ತಿವೆ? ಅದನ್ನು ಎದುರಿಸಿ ಬಾಳುವೆ ಮಾಡಲು ರೈತರನ್ನು ಸಿದ್ಧ ಪಡಿಸುವ ರೈತ ಸಂಘಟನೆ ಹಾಗೂ ಸಮುದಾಯ ಪ್ರಯತ್ನಗಳೂ ಕಾಣಬರುತ್ತವೆ. ಆದರೆ ಇದರಲ್ಲಿ ಸಾಫಲ್ಯ ಎಷ್ಟು? ರಾಜಕೀಯ ಇಚ್ಛಾಶಕ್ತಿ ಎಷ್ಟು ಎಂಬುದರ ವಿವೇಚನೆಯೂ ನಡೆದಿದೆ.*

ವಿಶ್ವವಾಣಿಜ್ಯ ಸಂಘಟನೆಯ ಒಪ್ಪಂದದ ಕುರಿತ ರೈತರ ಪ್ರತಿಕ್ರಿಯೆಗಳು, ಅದರ ಶೃಂಗ ಸಭೆಯಲ್ಲಿ ಕೃಷಿ ಸಬ್ಸಿಡಿ ಕುರಿತ ಚರ್ಚೆಗಳು, ಜಿ-ರಾಷ್ಟ್ರಗಳ ಶೃಂಗ ಸಭೆಯ ನಡವಳಿಕೆಗಳು ಹಾಗು ಅವುಗಳ ಒಗ್ಗಟ್ಟು ಬಲದ ಪರಿಣಾಮ. ಇವೆಲ್ಲ ಅಂತರಾಷ್ಟ್ರೀಯ ವರಸೆಯಾದರೂ, ದೇಶೀಯ ಸಂದರ್ಭಗಳಿಗೆ ಒದಗಿಸಿಕೊಳ್ಳುವ ಅನುಕೂಲಗಳನ್ನು ಚಿಂತಿಸುವ ನೆಲೆಯಾಗುತ್ತಿರುವುದು ಅಭಿವೃದ್ಧಿ ಸಾಧಕ ರಾಷ್ಟ್ರಗಳ ದೃಷ್ಟಿಯಿಂದ ಸ್ವಾಗತಾರ್ಹ. ಆದರೆ ಯಾವ ನೀತಿ ನಿಯಮವೂ ಈ ಗುಂಪಿನ ಪ್ರಬಲ ವರ್ಚಸ್ಸಿನ ರಾಷ್ಟ್ರದ ಉತ್ಪನ್ನಗಳ ವೈಭವ ರಫ್ತಿಗೆ ಅವಕಾಶವಾಗದಿದ್ದಷ್ಟು ಕಾಲ ಇದಕ್ಕೆ ಮೌಲ್ಯ. ಅಂತೇ ಸರ್ವರಿಗೂ ಸಮಬಾಳು, ಸಮಪಾಲು ಸಮರಸದಲ್ಲಿ ಹರಿಯಬೇಕು.

ಇನ್ನು ಬೆಲೆ ಕುಸಿತ, ಉತ್ಪಾದನಾ ವೆಚ್ಚ, *1990* ರ ಪೂರ್ವದಿಂದಲೇ ಮಹದಾಯಿ ಕಳಸ ಬಂಡೂರಿ ಯೋಜನೆಯ ಯಶಸ್ವಿಯಾಗಿ ನಡೆದಿರುವ ರೈತರ ಸತ್ಯಾಗ್ರಹ ಹೋರಾಟ ಹಾಗೂ ಗೋವಾ ಸರ್ಕಾರದೊಡನೆ ಈ ದಿಸೆಯಲ್ಲಿ ಹೊಂದಾಣಿಕೆಯ ಸಲಹೆಗಳು ನೀರಾವರಿಗೆ, ಕುಡಿಯುವ ನೀರಿಗೆ, ವಿದ್ಯುತ್ ಉತ್ಪಾದನೆಗೆ ಬಳಸಿಕೊಳ್ಳಬೇಕಾದ ಈ ಯೋಜನೆಯ ಜಲ ಸಂಪತ್ತು ಹಾಗೂ ರಾಜಕೀಯ ಮುತ್ಸದ್ದಿತನ, ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರಗಳಲ್ಲಿ ಪಾರದರ್ಶಕತೆ, ರೈತ ಸಂಪರ್ಕಕೇಂದ್ರಗಳಿಂದ ಬಿತ್ತನೆ ಬೀಜ ಸರಬರಾಜಿನ ಸಮಯ ನೀರಿಕ್ಷೆ, ಒಣಬೇಸಾಯ ಭೂಮಿಗೆ ಆಕರಿಸಿದ ನೀರಾವರಿ ತೆರಿಗೆ, ಬೆಳೆ ರಫ್ತಿಗೆ ನಿರ್ಬಂಧ, ಕಬ್ಬು ಬೆಳೆಗೆ ಅಸೂಕ್ತ ಧಾರಣೆ ನಿಗದಿ ಬರಪೀಡಿತ ಪ್ರದೇಶಗಳಿಗೆ ಪರಿಹಾರ, ಬೆಳೆಹಾನಿ, ಕೃಷಿ ಪತ್ತಿನ ಸಹಕಾರ ಬ್ಯಾಂಕು, ಬಿಟಿ ಹತ್ತಿ ಮತ್ತು ಬದನೆ, ಕಾಫಿ ಪ್ಯಾಕೇಜ್ ರಿಯಾಯಿತಿಗಳು, ಕೊಬ್ಬರಿ ರೈತರ ಬವಣೆ ಬೆಂಬಲ ಬೆಲೆ, ಅಡಕೆಧಾರಣೆ ಕುಸಿತ-ಗುಟ್ಕಾ ನಿಷೇಧ, ರಸ್ತೆಗೆ ಚೆಲ್ಲಿದ ಈರುಳ್ಳಿ, ರೇಷ್ಮೆ ಕಾಯ್ದೆಗೆ ತಿದ್ದುಪಡಿ, ವಿಶೇಷ (ಕೊಡಗಿನ) ಗದ್ದೆ ಬದಿಗಿನ ಕಾಡು ಭೂಮಿಯಾದ ಬಾಣೆ ಜಾಗದ ಮೇಲಿನ ಹಕ್ಕು, ವಿಶೇಷ ಆರ್ಥಿಕ ವಲಯಕ್ಕೆ ಭೂ ಸ್ವಾಧೀನ ಇತ್ಯಾದಿ ಸಂದರ್ಭಗಳಲ್ಲಿ, ನಡೆದಿರುವ ಪ್ರತಿಭಟನೆಯ ಮಾದರಿಗಳು, ಕೃಷಿ ಜೀವನದ ವಿಸ್ತೃತ ಆಯಾಮಗಳನ್ನು ತೋರಿಸಿವೆ. ಬೆಲೆ ಕುಸಿತದ ಸಂದರ್ಭದಲ್ಲಿ, ಬೆಳೆದ ಬೆಳೆಯನ್ನು ಸಂತೆಯಲ್ಲಿ ಉಚಿತವಾಗಿ ವಿತರಿಸುವಂಥ ಪ್ರತಿಭಟನೆಗಳೂ ನಡೆದಿವೆ.

## ಪೂರಕ ಅಧ್ಯಾಯ 20

# ಸದನಗಳಲ್ಲಿ ರೈತರ ಆತ್ಮಹತ್ಯೆಯ ಕುರಿತ ಚರ್ಚೆಗಳು

**ವಿಷಯ 1:** ವ್ಯವಸಾಯೋತ್ಪನ್ನ ಬೆಳೆಗಳ ಬೆಲೆ ಕುಸಿತ; ಹತಾಶ ರೈತರ ಆತ್ಮಹತ್ಯೆ

1.3.2001ರ ವಿಧಾನ ಸಭಾಧಿವೇಶನದಲ್ಲಿ*[1] ವಿರೋಧ ಪಕ್ಷದ ನಾಯಕ ಶ್ರೀ **ಜಗದೀಶ್ ಶೆಟ್ಟರ್** ಅವರು: ರೈತರ ಬೆಳೆ ಉತ್ಪನ್ನಗಳ ಬೆಲೆ ಕುಸಿತ, ಬೆಂಬಲ ಬೆಲೆಯಲ್ಲಿ ಸರ್ಕಾರ ಖರೀದಿಸಬೇಕೆಂದು ಹಿಂದಿನ ಅಧಿವೇಶನದಲ್ಲಿ ಮಾಡಿದ್ದ ಒತ್ತಾಯ, ಇಂದಿಗೂ ರೈತನನ್ನು ಕಾಡುತ್ತಿರುವ ಅದೇ ಸಮಸ್ಯೆ, ಉತ್ಪನ್ನ ಖರೀದಿಯಾಗದೆ, ಸಂಕಷ್ಟ ಹೋಗದಿರುವುದು, ಪರಿಹಾರ ಸಿಗದಿರುವುದು, ದಳ್ಳಾಳಿ, ವ್ಯಾಪಾರಿ, ಅಧಿಕಾರಿಗಳ ಕೂಟ ರೈತರಿಗೆ ಮೋಸಮಾಡಿ ಲಾಭ ಪಡೆಯುತ್ತಿರುವುದು, ಈ ವಾತಾವರಣದಿಂದಾಗಿ ರೈತರು ಆತ್ಮಹತ್ಯೆ ಮಾಡಿಕೊಳ್ಳಲೆಳೆಸಿರುವುದು, ಧಾರವಾಡ ಜಿಲ್ಲೆ ನವಲೂರಿನ ಆಲೂಗೆಡ್ಡೆಯನ್ನು ಮಾರುಕಟ್ಟೆಗೆ ರೈತ ಒಯ್ದಾಗ, 5 ಎಕರೆ ಮೀರಿ 30 ಗುಂಟೆ ಹೆಚ್ಚು ಜಮೀನು ಇರುವ ಕಾರಣ ಅವನ ಉತ್ಪನ್ನವನ್ನು ದೊಡ್ಡ ರೈತ ಎಂದು ಖರೀದಿಸದೆ ಹೋದುದು, ಆ ರೈತನಿಗೆ ಸಾಲ ತೀರದೆ ನಿರಾಶೆಯಿಂದ ಅವನು ಆತ್ಮಹತ್ಯೆ ಮಾಡಿಕೊಂಡುದುದು, ಧಾರವಾಡ ಜಿಲ್ಲೆ ನವಲಗುಂದ ತಾ. ಜಾಗೂರಿನಲ್ಲಿಯೂ ರೈತ ಆತ್ಮಹತ್ಯೆ ಮಾಡಿಕೊಂಡದ್ದು, ಲಕ್ಷಾಂತರ ಟನ್ ಮೆಕ್ಕೆಜೋಳ ಉತ್ಪನ್ನ ಬಂದರೂ ಬೆಲೆ ಸಿಗದೆ, ಖರೀದಿಯನ್ನು ಮೊದಲು ಮಾಡದಿದ್ದರೂ, ನಂತರ ಖರೀದಿ ಕೇಂದ್ರಗಳನ್ನು ಆರಂಭಿಸಿದರೂ ಖರೀದಿ ಮಾಡಬೇಕಾದ ಪ್ರಮಾಣದಲ್ಲಿ ಮಾಡದಿದ್ದುದು, ಕುರಿತೆಲ್ಲ ಹೇಳಿ ರೈತರು ಎಪಿಎಂಸಿ ಖರೀದಿ ಕೇಂದ್ರದ ಮುಂದೆ ಕುಟುಂಬದವರೊಡನೆ ತಿಂಗಳಾನುಕಾಲ ಇಟ್ಟುಕೊಂಡು ಕಾಯ್ದರೂ ತೇವಾಂಶದ ನೆಪ ಹೂಡಿ ಗುಣಮಟ್ಟ ಸರಿ ಇಲ್ಲವೆಂದು ಅಧಿಕಾರಿಗಳು ತಿರಸ್ಕರಿಸಿರುವಲ್ಲಿ ರೈತರಿಗೆ ಸಮಸ್ಯೆ ಪರಿಹಾರ ಎಲ್ಲಿ ದೊರಕೀತು? ಎಂದು ಪ್ರಶ್ನಿಸಿದರು. ಶ್ರೀ ಬಿ.ಆರ್. ಯಾವಗಲ್ ಅವರು ಉತ್ಪನ್ನಗಳನ್ನು ಪರೀಕ್ಷಿಸಿ ಒಪ್ಪುವುದು ಎಫ್‌ಸಿ.ಐ (ಫುಡ್ ಕಾರ್ಪೊರೇಷನ್ ಆಫ್ ಇಂಡಿಯ) ಅಧಿಕಾರಿಗಳಿಗೆ ಸಂಬಂಧಿಸಿದುದು ಎಂದರು. ಆಗ ಶ್ರೀ ಜಗದೀಶ್ ಶೆಟ್ಟರ್ ಅವರು, ಎಫ್‌ಸಿಐ ನವರಿಂದ ಸಹಕಾರ ಸಿಗುತ್ತಿಲ್ಲ. ಖರೀದಿ ವಿಳಂಬವಾಗುತ್ತಿದೆ ಎಂದು ಕೇಂದ್ರ ಸರ್ಕಾರಕ್ಕೆ ಪತ್ರ ಬರೆದಿದೆಯೆ? ಗದಗ್, ರಾಯಚೂರು ಹಾವೇರಿಗಳಲ್ಲೂ ರೈತರ ಸಂಕಷ್ಟ ಹೀಗೆಯೇ ಇದ್ದು, ಯಾವ ಸಚಿವರೂ ಅಲ್ಲಿಗೆ ಹೋಗಿಲ್ಲ ಎಂದರು.

---

*1. ವಿಧಾನಸಭಾ ನಡವಳಿಕೆಗಳು., ಸಂಪುಟ.1, ಭಾಗ.1 (1.3.2001), ಪು.139–79

ಕಾರ್ಮಿಕ ಸಚಿವ ಶ್ರೀ **ಎ.ಎಂ. ಹಿಂಡಸಗೇರಿ** ಅವರು ಪ್ರತಿಕ್ರಿಯಿಸಿ, ನಾಲ್ಕು ನಾಲ್ಕು ಬಾರಿ ಖರೀದಿ ಕೇಂದ್ರಗಳಿಗೆ ಹೋಗಿದ್ದು, ನಿನ್ನೆಯವರಿಗೆ 2 ಲಕ್ಷ 10 ಸಾವಿರ ಕ್ವಿಂಟಲ್ ಉತ್ಪನ್ನವನ್ನು ಖರೀದಿಸಿದೆ ಎಂದರು. ಅದಕ್ಕೆ ಶ್ರೀ ಎಸ್.ಎಸ್.ಪಾಟೀಲ್ ಅವರು ನರಗುಂದ ಖರೀದಿ ಕೇಂದ್ರ ನಿಧಾನವಾಗಿ ಆರಂಭವಾದದ್ದು, ಮುಂಡರಗಿಗೆ ಆದೇಶ ತಡವಾಗಿ ಆದದ್ದು, ಗ್ರೇಡರ್ಸ್ ಇಲ್ಲದೆ ಖರೀದಿ ಕೇಂದ್ರ ಆರಂಭಿಸಿಲ್ಲ ಎಂದರು. ಶ್ರೀ ಎ.ಎಂ.ಹಿಂಡಸಗೇರಿ ಅವರು ಎಫ್‌ಸಿಐ ನಿಂದ ಗ್ರೇಡರ್ಸ್ ಬಂದು ಗ್ರೇಡಿಂಗ್ ಮಾಡುವವರಿವಿಗೆ ಉತ್ಪನ್ನ ತೆಗೆದುಕೊಳ್ಳುವಂತಿಲ್ಲ. ನಮ್ಮ ಗ್ರೇಡರ್ಸ್‌ಗೂ ತರಬೇತಿ ಕೊಟ್ಟು ಖರೀದಿ ಆರಂಭ ಮಾಡಲಾಗಿದೆ. ಸಮಸ್ಯೆ ಇರುವ ಜಿಲ್ಲೆಗಳಲ್ಲಿ ಹೀಗೆ ಸ್ಪಂದಿಸಲಾಗಿದೆ. ನಿಗದಿತ ಅವಧಿಯಲ್ಲಿ ಸುಮಾರು 5 ಕೋಟಿ ರೂ. ಆಲೂಗೆಡ್ಡೆ ಖರೀದಿಸಿ ಫ್ರಿಜ್‌ನಲ್ಲಿಡುವುದನ್ನು ಎಪಿಎಂಸಿ ಗೆ ಹೋಗಿ ನೋಡಿ ಬಂದಿದ್ದೇವೆ ಎಂದರು. ಶ್ರೀ ಎಸ್.ಎಸ್.ಪಾಟೀಲರು ಮುಂಡರಗಿಯಲ್ಲಿ ಖರೀದಿ ಆರಂಭಿಸಿಲ್ಲ. ನೆಪ ಹೇಳದೆ ಆರಂಭಿಸಬೇಕಾದ್ದು ರಾಜ್ಯ ಸರ್ಕಾರ ಹೊಣೆ ಎಂದರು.

ಶ್ರೀ **ಆರಗ ಜ್ಞಾನೇಂದ್ರ** ಅವರು, ರೈತ ಸಂಬಂಧೀ ವಿಚಾರವನ್ನು ವಿರೋಧ ಪಕ್ಷದ ನಾಯಕರು ಇಲ್ಲಿ ಮಾತನಾಡುವಾಗ ಮುಖ್ಯಮಂತ್ರಿಗಳಿರಬೇಕು. ಕನಿಷ್ಠ ಅಧಿಕಾರಿಗಳಾದರೂ ಇದ್ದು ನೋಟ್ಸ್ ಮಾಡಿಕೊಳ್ಳದಿದ್ದರೆ ವಿಷಯ ಪ್ರಸ್ತಾಪ ಮಾಡುವಲ್ಲಿ ಅರ್ಥವೇ ಇಲ್ಲ. ನಾವು ಎರಡು ದಿವಸಗಳಿಂದ ಪ್ರತಿಭಟನೆ ಮಾಡಿದರೆ ಅದನ್ನೆ ದೊಡ್ಡದಾಗಿ ಹೇಳುತ್ತಾರೆ ಎಂದರು. ಸಚಿವ **ಶ್ರೀ ಕಾಗೋಡು ತಿಮ್ಮಪ್ಪ** ಅವರು, ವಿಪಕ್ಷ ನಾಯಕರು ಚರ್ಚೆ ಮಾಡುವ ಸಂದರ್ಭದಲ್ಲಿ ನಿರ್ಲಕ್ಷ್ಯ ಇಲ್ಲ ಎಂಬುದಕ್ಕೆ ಎಂಟು ಜನ ಸಚಿವರು ಇಲ್ಲಿರುವುದೇ, ಚರ್ಚೆಯ ಬಗ್ಗೆ ಗಾಂಭೀರ್ಯತೆ ಇದೆ ಎಂಬುದನ್ನು ಮಾನ್ಯ ಸದಸ್ಯರು ಊಹಿಸಿಕೊಳ್ಳಬೇಕು ಎಂದರು. **ಶ್ರೀ ವಿಶ್ವೇಶ್ವರ ಹೆಗ್ಡೆ ಕಾಗೇರಿ** ಅವರು ಕೃಷಿ ಸಚಿವರಾದರೂ ಇಲ್ಲಿರುವುದು ಬೇಡವೆ ಎಂದು ಪ್ರಶ್ನಿಸಿದರು.

ಶ್ರೀ ಜಗದೀಶ್ ಶೆಟ್ಟರ್ ಅವರು ಮಾತು ಮುಂದುವರಿಸಿ, ಮುಖ್ಯಮಂತ್ರಿ ಹಾಗು ಸಚಿವರೊಡನೆ ದೆಹಲಿಗೆ ಕೇಂದ್ರ ಆಹಾರ ಕೃಷಿ ಸಚಿವರನ್ನು ಭೇಟಿ ಮಾಡಿದ್ದು; ಅವರಿಗೆ ಗ್ರೇಡರ್ಸ್ ಸಮಸ್ಯೆ, ತೇವಾಂಶದ ಕ್ವಾಲಿಟಿ, ಮಿನಿಮಮ್ ಸಪೋರ್ಟ್ ಪ್ರೈಸ್, ಬಗ್ಗೆ ಹೇಳಿದ್ದು, ಎಷ್ಟೇ ಪ್ರಮಾಣದಲ್ಲಿ ಉತ್ಪನ್ನಗಳನ್ನು, ತೇವಾಂಶ ಹಾಗೂ ಇನ್ನಿತರ ದೋಷಗಳಿದ್ದೂ ಖರೀದಿ ಮಾಡಿದರೂ ಹಣ

ಕೊಡಲು ಅವರು ಸಿದ್ದ ಎಂದಿದ್ದು, ಖರೀದಿ ಕೇಂದ್ರಗಳಿಗೆ ಉಸ್ತುವಾರಿ ಸಚಿವರು ಹಾಗೂ ಅಧಿಕಾರಿಗಳು ಹೋಗದಿರುವುದು, ಖರೀದಿ ಕೇಂದ್ರಗಳನ್ನು ವಿಳಂಬವಾಗಿ ತೆಗೆದು, ಸಮಸ್ಯೆಗಳು ಉಂಟಾಗಿರುವುದು, ಹಾಗೂ ರೈತರಿಗೆ ಕಾಯುವ ತೊಂದರೆ, ಖರೀದಿಸಿದ ಮೆಕ್ಕೆ ಜೋಳವನ್ನು ಲಿಫ್ಟ್ ಮಾಡಿಡಲು ವೇರ್‌ಹೌಸ್ ಇಲ್ಲದಿರುವುದು, ಲಾರಿಗಳಿಲ್ಲದಿರುವುದು, ಗಂಗಾವತಿ, ರಾಯಚೂರು, ನವಲುಗುಂದ, ನರಗುಂದ ಹುಬ್ಬಳ್ಳಿ, ಕೊಪ್ಪಳ, ಮುಂಡರಗಿ ಎಲ್ಲೆಡೆ ಹೀಗೆಯೇ ಆಗಿರುವುದು, ಮುಖ್ಯಮಂತ್ರಿಗಳು ಸರ್‌ಪ್ರೈಸ್ ವಿಸಿಟ್ ಮಾಡಿ ರೈತರ ಪರಿಸ್ಥಿತಿ ತಿಳಿಯಬೇಕಿರುವುದು, ಯಾವುದೇ ಪಕ್ಷದ ಜನಪ್ರತಿನಿಧಿ ಖರೀದಿ ಕೇಂದ್ರಗಳಿಗೆ ಹೋದರೆ ಮುತ್ತಿಗೆ ಘೇರಾವ್ ಹಾಕುವ ರೈತರು, ಎಫ್‌ಸಿಐ ಮುಖಾಂತರ 200 ಕೋಟಿ ರೂ. ಗಿಂತ ಹೆಚ್ಚು ಹಣ ಕೊಟ್ಟು ಮೆಕ್ಕೆಜೋಳ ಹಾಗು ಇತರೇ ಉತ್ಪನ್ನಗಳ ಖರೀದಿಯನ್ನು ಕೇಂದ್ರ ಸರ್ಕಾರ ಮಾಡಿದ್ದರೂ, ಅವರ ಮೇಲೆಯೇ ಜವಾಬ್ದಾರಿ ಹಾಕುವುದು, ರಾಜ್ಯ ಸರ್ಕಾರದ 75 ಕೋಟಿ ರೂ. ಆವರ್ತನಿಧಿಯ ಗತಿ, ಎಪಿಎಂಸಿಯಿಂದ ಸಂಗ್ರಹವಾಗಿರುವ ಹಣ, ಡಬ್ಲುಟಿಓ ಮತ್ತು ಗ್ಯಾಟ್ ಒಪ್ಪಂದದಿಂದ ರೈತರಿಗೆ ಮತ್ತು ಕೃಷಿ ಉತ್ಪನ್ನಗಳಿಗೆ ಆಗಿರುವ ತೊಂದರೆ, ಅದರ ಎಫೆಕ್ಟ್‌ನಿಂದ ಹೊರಬರಲು ಮಾಡಬೇಕಾದ ಪ್ರಯತ್ನ, ರಾಜ್ಯ ಸರ್ಕಾರ ಉತ್ಪನ್ನಗಳನ್ನು ಖರೀದಿಸಿರುವ ಬಗ್ಗೆ ಅಂಕಿ ಅಂಶಗಳ ವಿವರ, ಎಪಿಎಂಸಿ ಗಳಿಗೆ ಅಭಿವೃದ್ಧಿ ಚಟುವಟಿಕೆಗಳಿಗೆ ಹಣ ಇರದಿರುವಾಗ, ಎಲ್ಲಾ ಎಪಿಎಂಸಿ ಗಳು 50 ಕೋಟಿ ರೂ. ಅನ್ನು ಆವರ್ತನಿಧಿಗೆ ಕೊಡಬೇಕೆಂದು ಬಹುಮತದಿಂದ ಹೇಳಿದಾಗ ಅದನ್ನು 50% ಗೆ ಇಳಿಸಿದ್ದು, ಆದರೂ ಟಾರ್ಗೆಟ್ ತಲುಪದಿದ್ದುದು, ಎಪಿಎಂಸಿಗಳು 50 ಕೋಟಿಯಿದ್ದರೂ ರಾಜ್ಯ ಸರ್ಕಾರ 25 ಕೋಟಿ ಕೊಟ್ಟಿಲ್ಲದಿರುವುದು, ರೈತರ ಬೆಳೆಗೆ ಸರಿಯಾದ ಬೆಲೆ ಸಿಗದಿರುವುದು, ಆಂಧ್ರದಲ್ಲಿ ಆವರ್ತನಿಧಿಗೆ 70% ಹಣವನ್ನು ಆ ರಾಜ್ಯ ಸರ್ಕಾರ, ಕೇಂದ್ರ 30% ಹಣವನ್ನು ಕಾಂಟ್ರಿಬ್ಯೂಷನ್ ಕೊಡುತ್ತಿರುವುದು, ಆಂಧ್ರದಲ್ಲಿ ಉತ್ಪನ್ನಗಳ ಖರೀದಿ ಸಾಧ್ಯವಾಗಿರುವುದು ನಮ್ಮಲ್ಲಿ ಏಕಾಗುತ್ತಿಲ್ಲ? ಈಚೆಗೆ ಎಲ್ಲಾ 700 ಹೋಬಳಿಗಳಿಗೆ 'ರೈತಮಿತ್ರ' ಎಂದು ಕಂಪ್ಯೂಟರ್ ಕೊಟ್ಟು ಮಾಹಿತಿ ಸಿಗುತ್ತದೆ ಎಂದಷ್ಟೆ ಹೇಳಿ ರೈತರಿಗೆ ಪ್ರಯೋಜನವಾಗದಿರುವುದು, 'ರೈತಮಿತ್ರ' ವನ್ನು ಸೂಕ್ತವಾಗಿ ನಿರ್ವಹಿಸಿಲ್ಲದಿರುವುದು ಕುರಿತೆಲ್ಲ ಹೇಳಿದರು. ಶ್ರೀ ಡಿ.ವಿ.ಸದಾನಂದಗೌಡ ಅವರು ಸರ್ಕಾರ 'ರೈತ ಶತ್ರು' ಎಂದಾಗ, ಶ್ರೀ ಸಿ.ಎಸ್.ನಾಡಗೌಡ ಅವರು, ಸರ್ಕಾರ ಇಟ್ಟ ಹೆಸರು 'ರೈತಮಿತ್ರ'. ಅದು ರೈತ ದ್ರೋಹಿ ಎಂದರೆ ಸರಿಯಲ್ಲ. ರೈತ ಎಷ್ಟು

ಪ್ರಮಾಣದಲ್ಲಿ ಬಿಳಿ ಜೋಳ, ಗೋಧಿ, ತೊಗರಿ ಬೆಳೆಯಬೇಕು ಎಂಬ ಮಾಹಿತಿ ನೀಡಲು ಸರ್ಕಾರದ ಪ್ರಯತ್ನವಾಗಿದೆ. ರೈತಮಿತ್ರ ಯೋಜನೆಯ ಕೇಂದ್ರಗಳು ಆರಂಭವಾದ ಮೇಲೆ ರೈತರು ಉತ್ತರ ನೀಡುತ್ತಾರೆ ಎಂದರು. ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ ಅವರು, ಕಂಪ್ಯೂಟರ್ ಮೂಲಕ ಕೆಲಸ ಮಾಡಿದರೂ ಸರ್ಕಾರಕ್ಕೆ ಪತ್ರ ಬಂದರೆ ಉತ್ತರ ವಿಳಂಬವಾಗುತ್ತಿದೆ ಎಂದರು.

ಶ್ರೀ ಜಗದೀಶ್ ಶೆಟ್ಟರ್ ಅವರು ಮಾತು ಮುಂದುವರಿಸಿ, ರಾಯಚೂರಿನಲ್ಲಿ ಆರಂಭಿಸಿದ ಖರೀದಿ ಕೇಂದ್ರವನ್ನು ರೈತರಿಗೆ ಪೇಮೆಂಟ್ ಮಾಡಲು ಹಣವಿಲ್ಲದ್ದರಿಂದ ಸರ್ಕಾರ ಮುಚ್ಚಿದ್ದು, ಭತ್ತ ಮತ್ತು ಬಿಳಿ ಜೋಳ ಮಾರುಕಟ್ಟೆಗೆ ಬರುವುದರಲ್ಲಿರುವಾಗ ಸರ್ಕಾರದ ಕಡೆಯಿಂದ ಯೋಜನೆ ಇಲ್ಲದಿರುವುದು, ಅಧಿಕಾರಿಗಳು ರೈತರ ಸಮಸ್ಯೆಗಳಿಗೆ ಸರಿಯಾಗಿ ಸ್ಪಂದಿಸುತ್ತಿಲ್ಲದಿರುವುದು, ಧಾರವಾಡ ಜಿಲ್ಲೆಯಲ್ಲಿ ಖರೀದಿ ಕೇಂದ್ರದ ಅನಾಹುತವಾಗಿ ರೈತರ ಆತ್ಮಹತ್ಯೆ ಆದದ್ದು, ಆಹಾರ ಇಲಾಖೆಯ ಅಧಿಕಾರಗಳ ನಿರ್ಲಕ್ಷ್ಯಕ್ಕೆ ಅಮಾನತು ನಿರ್ಧಾರ ಕ್ಯಾಬಿನೆಟ್‌ನಲ್ಲಿ ಆದರೂ, ಅದನ್ನು ಇಂಪ್ಲಿಮೆಂಟ್ ಮಾಡದಿರುವಂತೆ ಅಧಿಕಾರಿಗಳ ಲಾಬಿ ಶುರುವಾದದ್ದು, ಸಸ್ಪೆಂಡ್ ಅಕಸ್ಮಾತ್ ಮಾಡಿದರೂ ನೋಟೀಸ್ ಜಾರಿಯಾದ ಎರಡು ದಿನಗಳಲ್ಲಿ ಅದು ರಿವೋಕ್ ಆಗುವುದು, ಇಂಥ ಸ್ಥಿತಿಯಲ್ಲಿ ಖರೀದಿ ಕೇಂದ್ರದ ವ್ಯವಸ್ಥೆ ಸಮರ್ಪಕವಾಗುವುದು ಹೇಗೆ? ಎಂದೆಲ್ಲ ಹೇಳಿದರು. ಕೃಷಿ ಸಚಿವ ಶ್ರೀ **ಆರ್.ಬಿ.ತಿಮ್ಮಾಪುರ** ಅವರು ಮಾತನಾಡಿ ಸರ್ಕಾರದ ಬಳಿ ಹಣಕ್ಕೆ ತೊಂದರೆ ಇಲ್ಲ. ಆಲೂಗಡ್ಡೆ ಈರುಳ್ಳಿ ತೊಗರಿಯನ್ನು ಖರೀದಿ ಮಾಡುತ್ತಿದೆ ಎಂದರು. ಶ್ರೀ ಎನ್.ಯೋಗೀಶ್ ಭಟ್ ಅವರು ಅದಕ್ಕೆ ತೀರ್ಮಾನವಾಗಿದೆ, ಹಣ ಬಿಡುಗಡೆ ಆಗಿಲ್ಲ ಎಂದರು. ಶ್ರೀ ಬಿ.ಎನ್.ಬಚ್ಚೇಗೌಡರು, 6 ಕೋಟಿ ರೂ.ನಷ್ಟು ಆಲೂಗೆಡ್ಡೆ ಕೊಳೆತು ಹೋಗುವಷ್ಟು ಬಿಟ್ಟಿದ್ದು, ಮೊದಲೇ ಅದನ್ನು ಸುಸ್ಥಿತಿಯಲ್ಲಿ ಇಟ್ಟುಕೊಳ್ಳಲು ಶೀತಲ ಕೇಂದ್ರಗಳಿರಲಿಲ್ಲವೆ? 6 ಕೋಟಿ ರೂ.ಮೌಲ್ಯದ ಆಲೂಗೆಡ್ಡೆ ನಾಶದ ಬಗ್ಗೆ ಮಾನ್ಯ ಸಚಿವರು ಹೇಳಲಿ ಎಂದರು.

**ಶ್ರೀ ಆರ್.ಬಿ.ತಿಮ್ಮಾಪುರ** ಅವರು, ಧಾರಣೆ ಇಲ್ಲದಿರುವುದರಿಂದ ಆಲೂಗಡ್ಡೆಯನ್ನು ಶೀತಲ ಕೇಂದ್ರಕ್ಕೆ ಇಡುವ ವ್ಯವಸ್ಥೆ ಮಾಡಲಾಗಿದೆ. ಕೊಳೆತು ಹೋದಂಥ ಆಲೂಗೆಡ್ಡೆ ಯಾವುದೂ ಇಲ್ಲ. ಕೊಳೆತು ಹೋಗುವಂಥ ಪರಿಸ್ಥಿತಿ ಬರುವ ಮುನ್ನವೇ ಜಿಲ್ಲಾ ಪಂಚಾಯಿತಿ ಮೂಲಕ ಕೆಜಿಗೆ 2 ರೂ. ಅಥವಾ 1 ರೂನಂತೆ ಕೊಡುವ ವ್ಯವಸ್ಥೆ ಮಾಡಿದರೆ ತಪ್ಪೇನಿಲ್ಲ. ರೈತರ ನೆರವಿಗೆ ನಾವು

ಬಂದಿದ್ದೇವೆ ಎಂದರು. ಶ್ರೀ ಬಿ.ಎನ್.ಬಚ್ಚೇಗೌಡರು, 6 ಕೋಟಿ ರೂ. ನಷ್ಟ ಎಂದು ಹೇಳಿ, 50 ಪೈಸೆ, 1 ರೂ.ಗೆ ಮಾರಿದೆ ಎಂದರೆ ಸರಿಯಲ್ಲ. ಶೀಥಲ ಕೇಂದ್ರ ವ್ಯವಸ್ಥೆ ಆಗಿಲ್ಲ ಎಂದರೆ, ಶ್ರೀ ವಿ.ಕೃಷ್ಣಪ್ಪ ಅವರು ಬೆಂಗಳೂರು ಸುತ್ತಮುತ್ತ ಇರುವ ಖಾಲಿ ಶೀಥಲ ಕೇಂದ್ರಗಳನ್ನ ಬಳಸಿಕೊಳ್ಳಲಿ ಎಂದರು. ಶ್ರೀ ಜಗದೀಶ್ ಶೆಟ್ಟರ್ ಆವರ್ತನಿಧಿಯ ಸಂಗ್ರಹ, ಸರ್ಕಾರದ ಪಾಲು, ರೈತರಿಗೆ ಕೊಟ್ಟಿರುವ ದುಡ್ಡು, ರೈತರಿಗೆ ಹಣ ಬಟವಾಡೆ ಆಗದಿರುವುದು ಮೆಕ್ಕೆ ಜೋಳಕ್ಕೆ 10 ಕೋಟಿ ರೂ. ಕೊಬ್ಬರಿಗೆ ಮೂರು ಕೋಟಿ ಬಾಕಿ ಇರುವ ಬಗೆಗೆಲ್ಲ ಹೇಳಿದರು. ಶ್ರೀ **ಎಂ.ಡಿ. ಲಕ್ಷ್ಮೀನಾರಾಯಣ** ಅವರು ತಿಪಟೂರು, ತುರುವೇಕೆರೆ ಭಾಗದಲ್ಲಿ ಒಂದೂವರೆ ತಿಂಗಳಿಂದ 20 ಕೋಟಿ ರೂ.ಗಳನ್ನು ಖರೀದಿ ಬಾಬ್ತು ಕೊಟ್ಟಿಲ್ಲ. ರೈತರ ಗೋಳನ್ನು ಅರ್ಥಮಾಡಿಕೊಳ್ಳಬೇಕು. ಬಾಕಿ ಕೊಟ್ಟು ಬಿಡಬೇಕು. ಅರಸೀಕೆರೆಯಲ್ಲಿಯೂ ಬಾಕಿ ಕೊಟ್ಟಿಲ್ಲ. ನಫೆಡ್‌ನವರು ಖರೀದಿ ನಿಲ್ಲಿಸಿದ್ದಾರೆ ಎಂದರು. ಶ್ರೀ ಆರಗ ಜ್ಞಾನೇಂದ್ರ ಅವರು, 12.5 ಕೋಟಿ ರೂ. ಎಣ್ಣೆ ಬೀಜ ಖರೀದಿಸಿ ಕೇವಲ 2.5 ಕೋಟಿ ರೂ.ಕೊಟ್ಟು 10 ಕೋಟಿ ಬಾಕಿ ಮಾಡಿದರೆ ರೈತರೇನು ಮಾಡಬೇಕು! ಅವರು ಮುಖ್ಯ ಮಂತ್ರಿಯವರಿಗೆ ಪತ್ರ ಬರೆದಿದ್ದಾರೆ, ಎಂದರು. ಶ್ರೀ ಜಗದೀಶ್ ಶೆಟ್ಟರ್ ಅವರು, ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾ ಮಂಡಳಿ ಆದೇಶದಂತೆ 13.1.2001ರಂದು ಸಂಘವು ಬೆಂಬಲ ಬೆಲೆಯಲ್ಲಿ ಕೊಬ್ಬರಿಯನ್ನು ಖರೀದಿಸಿ 29,169 ಚೀಲ ಕೊಬ್ಬರಿಯನ್ನು ವೇರ್‌ಹೌಸ್, ಮತ್ತು ಹೊರರಾಜ್ಯಗಳ ನಫೆಡ್ ಬೆಂಗಳೂರು ಅವರಿಗೆ ಕೊಟ್ಟಿದ್ದಾರೆ. ಆ ಬಾಬ್ತು ಕೇವಲ 1 ಕೋಟಿ 35 ಲಕ್ಷ 63 ಸಾವಿರ ರೂ. ಬಂದಿದ್ದು 2 ಲಕ್ಷ 67 ಸಾವಿರ ರೂ. ನಫೆಡ್‌ನಿಂದ ಬರಬೇಕು. ಉಳಿಕೆ 5,311 ಚೀಲ ಕೊಬ್ಬರಿ, ವೇರ್‌ಹೌಸ್, ಹಾಗೂ ಲಾರಿಯ ವ್ಯವಸ್ಥೆ ಇಲ್ಲದೆ ಸಂಘದಲ್ಲಿಯೇ ಉಳಿದಿದೆ. 5 ಕೋಟಿ 11 ಲಕ್ಷದ 40 ಸಾವಿರ ರೂ.ಗಳ ಚೆಕ್ ಅನ್ನು ಕೊಬ್ಬರಿಗೆ ನೀಡಿದ್ದರೂ ಬ್ಯಾಂಕಿನ ಖಾತೆಯಲ್ಲಿ ಹಣವಿಲ್ಲದೆ ವಾಪಸ್ ಬಂದು ರೈತರಿಗೆ ತೊಂದರೆ ಆಗಿದೆ, ಎಂದರು. ಶ್ರೀ ಕೆ.ಷಡಕ್ಷರಿ ಅವರು, ಇದು ನಫೆಡ್‌ಗೆ ಸಂಬಂಧಿಸಿದುದಾಗಿದ್ದು ಕೇಂದ್ರ ಸರ್ಕಾರದಿಂದ ಹಣ ಕೊಡಬೇಕಾಗಿದೆ ಎಂದರು. ಶ್ರೀ ಜಗದೀಶ್ ಶೆಟ್ಟರ್ ಅವರು ಇದರ ಬಗ್ಗೆ ವ್ಯವಸ್ಥೆ ಮಾಡಿ ರೈತರ ಹಿತ ಕಾಪಾಡಬೇಕಿತ್ತು ಎಂಬ ಅಭಿಪ್ರಾಯವಿಟ್ಟರು. ಶ್ರೀ ಕಾಗೋಡು ತಿಮ್ಮಪ್ಪನವರು ನಫೆಡ್ ಹಣ ಕೊಟ್ಟಿಲ್ಲದಿರುವ ಬಗ್ಗೆ ಕೇಳಲು ಹೋಗೋಣ ಎಂದರು. ಶ್ರೀ ಎಸ್.ಎಸ್.ಪಾಟೀಲ್ ಅವರು, ರೈತರು ಸಾಯುತ್ತಿದ್ದಾರೆ, ಮೊದಲು ರಾಜ್ಯ ಸರ್ಕಾರ ಖರೀದಿಸಿ ಆನಂತರ ಕೇಂದ್ರದಿಂದ ಹಣ ರಿಲೀಸ್ ಮಾಡಿಸಿ ಕೊಳ್ಳಬೇಕು ಎಂದರು.

**ಶ್ರೀ ಜಗದೀಶ್ ಶೆಟ್ಟರ್** ಅವರು ಮಾತನಾಡುತ್ತ ಡಬ್ಲುಟಿಓ ಮತ್ತು ಗ್ಯಾಟ್ ಒಪ್ಪಂದಕ್ಕೆ ಸಹಿ ಮಾಡಿದವರು ಮತ್ತು ರೈತರ ಆತ್ಮಹತ್ಯೆಯ ಪಾಪದ ಹೊಣೆಗೆ ಕಾರಣಕರ್ತರ ಬಗ್ಗೆ ದೀರ್ಘ ಚರ್ಚೆ ಆಗಬೇಕಿದೆ ಎಂದರು. ಖರೀದಿ ಕೇಂದ್ರದ ಮಂದಗತಿಯ ಚಾಲನೆ ಆದದ್ದರಿಂದ ರೈತರು ಸಾಲ ಸೋಲ ಮಾಡಿಕೊಂಡು ಮಾನಸಿಕವಾಗಿ ವ್ಯಥೆಗೊಂಡು ರಾಜ್ಯ ಸರ್ಕಾರದ ವೈಫಲ್ಯದಿಂದ ರೈತರು ಆತ್ಮಹತ್ಯೆ ಮಾಡಿಕೊಳ್ಳುವಂಥ ಪರಿಸ್ಥಿತಿ ಬಂದಿದೆ; ಎಂದರು. ರಾಜ್ಯಪಾಲರ ಭಾಷಣದಲ್ಲಿ ರೈತರ ಸಮಸ್ಯೆಗಳ ಕುರಿತಂತೆ ಬಂದಿರುವ ವಿಷಯಗಳ ಮೇಲಿನ ಚರ್ಚೆ ಪ್ರಸ್ತುತ ಮಾಡಬೇಕಿದೆ. ಹಣ್ಣು ಹೂವು ತರಕಾರಿ ಇತ್ಯಾದಿ ಬೇಗ ನಶಿಸುವ ಉತ್ಪನ್ನಗಳ ಮಾರುಕಟ್ಟೆಯಲ್ಲಿ ಮಧ್ಯೆ ಪ್ರವೇಶಿಸಲು ನಿರಂತರವಾಗಿ ಅವಶ್ಯಕ ಹಣಕಾಸು ಒದಗಿಸಬೇಕಾದ ಅಗತ್ಯದ ಕಾರಣ ಸರ್ಕಾರ 75 ಕೋಟಿ ರೂ. ಆವರ್ತ ನಿಧಿ ಸ್ಥಾಪಿಸಿದೆ ಅಷ್ಟೆ. ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಮುಂದೆ ಈ ನಿಧಿಗೆ 50 ಕೋಟಿ ರೂ. ರಾಜ್ಯ ಸರ್ಕಾರ 25 ಕೋಟಿ ನೀಡುತ್ತವೆ. ಈಗಾಗಲೇ 10 ಜನ ರೈತರು ಸತ್ತಿದ್ದಾರೆ. ಇನ್ನುಳಿದ ರೈತರು ಆತ್ಮಹತ್ಯೆ ಮಾಡಿಕೊಂಡ ಮೇಲೆ 50 ಕೋಟಿ ರೂ. ಅನ್ನು ಸರ್ಕಾರ ಕೊಡುವುದೆ? ಮಾನ್ಯ ಮುಖ್ಯಮಂತ್ರಿಗಳು, ಕಂಪೂಟರ್‌ಗೆ 25 ಕೋಟಿ ರೂ. ಮಾಹಿತಿ ತಂತ್ರಜ್ಞಾನಕ್ಕೆ 100 ಕೋಟಿ ರೂ. ಖರ್ಚು ಮಾಡಿ, ಆವರ್ತ ನಿಧಿಗೆ 100 ಕೋಟಿ ರೂ. ಕೊಡಲು ಆಗುತ್ತಿಲ್ಲವೆಂದು ಕೇಂದ್ರ ಕೊಡಲಿ ಎನ್ನುತ್ತಾರೆ. ಮಾನ್ಯ ಮೊಯ್ಲಿಯವರ ಆರ್ಥಿಕ ಸುಧಾರಣಾ ಆಯೋಗದ ವರದಿಯ ರೀತ್ಯಾ ಅಬಕಾರಿ ಲಾಬಿಯಿಂದ 1450 ಕೋಟಿ ರೂ ಸೋರಿ ಹೋಗುತ್ತಿದ್ದು, ಅದನ್ನು ಸರ್ಕಾರ ವಸೂಲಿ ಮಾಡಿಲ್ಲ. ಮೊಯ್ಲಿಯವರ ವರದಿಯ ಮಂಡನೆ ಆಗಿಲ್ಲ. ಲಕ್ಷಾಂತರ ಜನ ರೈತರು ತೊಂದರೆಗೊಳ್ಳುತ್ತಿದ್ದರೂ ಆವರ್ತ ನಿಧಿ ಸ್ಥಾಪನೆ ಮಾಡಿಲ್ಲ.

ತೊಗರಿ ಇವತ್ತು 250 ಕೋಟಿ ರೂ. ಮೌಲ್ಯದಷ್ಟು ಮಾರುಕಟ್ಟೆಗೆ ಬರುತ್ತಿದೆ. ರಾಜ್ಯ ಸರ್ಕಾರವಾದರೋ ಮೊದಲು 1 ಕೋಟಿ ಆವರ್ತ ನಿಧಿ ಮಾತ್ರ ಮಾಡಿ, ಚಳುವಳಿ ಹಾಗೂ ಒತ್ತಡಗಳ ಕಾರಣ ಮತ್ತೆ 3 ಕೋಟಿ ರೂ. ಆವರ್ತ ನಿಧಿ ಮಾಡಿತು. ಕನಿಷ್ಠ ರೈತರ ತೊಗರಿಯನ್ನು ಖರೀದಿಸಲು 20–30 ಕೋಟಿ ರೂ.ಗಳ ಆವರ್ತ ನಿಧಿಯನ್ನು ಕೊಟ್ಟಿದ್ದರೆ, ಮಾರ್ಕೆಟ್ ಇಂಟರ್‌ವೆನ್ಷನ್ ಮಾಡಿದ್ದರೆ ಇಷ್ಟು ತೊಂದರೆ, ಒತ್ತಡ ಆಗುತ್ತಿರಲಿಲ್ಲ. ಮಂದಗತಿಯಲ್ಲಿ ಖರೀದಿ ಕೇಂದ್ರ ಸ್ಥಾಪನೆಯೂ ಇದಕ್ಕೆ ಕಾರಣವಾಗಿದೆ. ರಾಜ್ಯ ಸರ್ಕಾರ ತಕ್ಷಣ 200 ಕೋಟಿ

ರೂ.ಗಳ ಆವರ್ತ ನಿಧಿ ಸ್ಥಾಪಿಸಬೇಕು. ಖರೀದಿ ಪ್ರಕ್ರಿಯೆ ತೀವ್ರಗತಿಯಲ್ಲಿ ಆಗಬೇಕು. ಮೆಕ್ಕೆಜೋಳದ ಖರೀದಿ ಕೆಲಸ ಮುಂದುವರಿಯಬೆಕು. ರೈತರು ಸಾಲ ಸೋಲ ಮಾಡಿಕೊಂಡು ತೀರಿಸಲಾಗದೆ, ಬ್ಯಾಂಕಿನಿಂದ ಜಪ್ತಿ ನೋಟೀಸ್ ಬಂದು, ಎಷ್ಟೋ ಜನ ರೈತರು ಜೈಲಿನಲ್ಲಿ ಕೊಳೆಯುತ್ತಿದ್ದಾರೆ. ಸಾಲವಸೂಲಾತಿ ತಕ್ಷಣ ನಿಲ್ಲಿಸಲು ಆದೇಶ ಕೊಡುವುದು, ಸಾಲದ ಬಡ್ಡಿ ಮನ್ನಾ, ಅಲ್ಪಾವಧಿ, ಮಧ್ಯಮಾವಧಿ ಸಾಲವನ್ನು ದೀರ್ಘಾವಧಿಗೆ ಪರಿವರ್ತನೆ ಮಾಡಬೇಕು. ಇಲ್ಲವಾದರೆ ರೈತನು ಮಾನಸಿಕವಾಗಿ ನೊಂದು ಆತ್ಮಹತ್ಯೆ ಮಾಡಿಕೊಳ್ಳುವ ಪರಿಸ್ಥಿತಿ ಉದ್ಭವಿಸುತ್ತದೆ. ಮಿನಿಮಮ್ ಸಪೋರ್ಟ್ ಪ್ರೈಸ್ ಪ್ರಕಾರ ಬೆಲೆಯು ಅವರಿಗೆ ಸಿಗುತ್ತಿಲ್ಲ. ಅಕಸ್ಮಾತ್ ಸಿಕ್ಕಿದರೂ ಅದನ್ನು ಕಟಾಯಿಸುವಂತದ್ದು ಆಗಿದೆ. ಉತ್ಪನ್ನಕ್ಕೆ ರೈತ ಖರ್ಚು ಮಾಡಿದ ಹಣಕ್ಕೆ ನೀಗುವಷ್ಟು ಬರದೆ, ಆತ್ಮಹತ್ಯೆ ಮಾಡಿಕೊಳ್ಳಲು ಹೋಗುತ್ತಿದ್ದಾನೆ. ರೈತರ ವಿದ್ಯುತ್ ಪಂಪ್‌ಸೆಟ್‌ಗಳಿಗೆ ಕನಿಷ್ಠ 10 ತಾಸು ನಿರಂತರ ವಿದ್ಯುತ್ ಸೌಲಭ್ಯ ನೀಡುವುದು ಸರ್ಕಾರದಿಂದ ಆಗುತ್ತಿಲ್ಲ, ಖರೀದಿಕೇಂದ್ರಗಳ ಸಂಖ್ಯೆ, ಸ್ಥಳ, ತೊಗರಿ, ಮೆಕ್ಕೆಜೋಳ, ಗೋವಿನ ಜೋಳ, ಟೊಮೊಟೊ, ಭತ್ತ ಖರೀದಿಸಿದ ಪ್ರಮಾಣದ ಅಂಕಿ ಅಂಶಗಳ ವಿವರ ನೀಡಬೇಕು. ರಾಯಚೂರು (2130 ಕ್ವಿಂಟಾಲ್), ಮಾನ್ವಿ (3714 ಕ್ವಿಂಟಾಲ್) ಗಂಗಾವತಿ (1116 ಕ್ವಿಂಟಾಲ್)ಯಲ್ಲಿ ಖರೀದಿ ಬಿಟ್ಟರೆ ಕೊಪ್ಪಳದಿಂದ ಹಿಡಿದು ಎನ್.ಆರ್.ಪುರದವರೆಗಿನ 15 ಕೇಂದ್ರಗಳಲ್ಲಿ ಖರೀದಿ ಆಗಿಲ್ಲ. ತೋರಿಕೆಗೆ ಖರೀದಿ ಕೇಂದ್ರ ಎಂಬ ಬೋರ್ಡ್ ಹಾಕಿ ಆರಂಭಿಸಲಾಗಿದೆ, ಎಂದೆಲ್ಲ ಹೇಳಿದರು.

ಸಚಿವ ಶ್ರೀ ಡಿ.ಬಿ. ಚಂದ್ರೇಗೌಡರು, ಕನಿಷ್ಠ ಬೆಂಬಲ ಬೆಲೆ 445 ರೂ. ನಿಗದಿ ಮಾಡುವುದು, ಗ್ರೇಡರ್ಸ್ ಅನ್ನು ಒದಗಿಸುವುದು ಎಫ್‌ಸಿಐ ಮೂಲಕ ಕೇಂದ್ರ ಸರ್ಕಾರ. ಗ್ರೇಡರ್ಸ್ ಒದಗಿಸಿಲ್ಲವಾದ ಕಾರಣ ಖರೀದಿ ಆಗುತ್ತಿಲ್ಲ ಎಂದರು.

ಶ್ರೀ ಆರಗ ಜ್ಞಾನೇಂದ್ರ ಅವರು, ನಮ್ಮ ಭಾಗದಲ್ಲಿ 1 ಅಥವಾ 2 ಕ್ವಿಂಟಾಲ್ ಭತ್ತ ಮಾರಿ ಜೀವನ ಮಾಡುವ ಸಣ್ಣ ಸಣ್ಣ ರೈತರಿರುವಲ್ಲಿ, ಕನಿಷ್ಠ 5 ಕ್ವಿಂಟಾಲ್ ಬೇಕು ಎಂದರೆ ಹೇಗೆ? ಯಾವ ಭತ್ತ ಕೇಳಿದರೂ ಗ್ರೇಡ್ ಸರಿಯಿಲ್ಲ ಎನ್ನುತ್ತಾರೆ. 2 ತಿಂಗಳಲ್ಲಿ ಖರೀದಿಸಿರುವುದು 7 ಕ್ವಿಂಟಾಲ್ ಮಾತ್ರ. ಮಾರ್ಕೆಟ್‌ನಲ್ಲಿ ಒಳ್ಳೆ ಸಣ್ಣ ಭತ್ತಕ್ಕೆ 440ರೂ. ಇದ್ದು, ಕೇಂದ್ರ ಸರ್ಕಾರದ ಬೆಂಬಲ ಬೆಲೆ 540 ರೂ. ಇದೆ. ಅಂತಾಗಿ ಎಫ್.ಸಿ.ಐ ನವರು ಭತ್ತ, ರಾಗಿಯನ್ನು ಖರೀದಿಸಿದರೆ ಒಳ್ಳೆಯದು. ಬೇಕಾಬಿಟ್ಟಿ ಮಾರಾಟವಾದರೆ ರೈತನಿಗೆ ವರ್ಕ್‌ಔಟ್ ಆಗುವುದಿಲ್ಲ.

ಸಾವಿರ ರೂ ಕ್ವಿಂಟಾಲ್‌ಗೆ ಕೊಟ್ಟರೂ ವರ್ಕ್‌ಔಟ್ ಆಗುವುದಿಲ್ಲ. ಗೋಡೌನ್‌ಗಳನ್ನು ಟಿಎಪಿಸಿ ಕಡೆಯಿಂದ ಬೇಕಾದಷ್ಟು ಕೊಡಲಾಗಿದೆ. ಈ ಬಗೆಗೆಲ್ಲ ಮೇಲುಸ್ತುವಾರಿ ವ್ಯವಸ್ಥೆ ಮಾಡಬೇಕು, ಎಂದರು. ಶ್ರೀ ಡಿ.ವಿ.ಸದಾನಂದ ಗೌಡರೂ ಈ ವ್ಯವಸ್ಥೆಗಳ ನಿರ್ವಹಣೆಗಳ ಬಗ್ಗೆ ಸರ್ಕಾರವನ್ನು ಕೇಳಿದರು.

ಶ್ರೀ ಜಗದೀಶ್ ಶೆಟ್ಟರ್ ಅವರು ಮಾತು ಮುಂದುವರಿಸಿ; ಬೆಲೆ ಕುಸಿತದಿಂದ ಕೆರಳಿದ ರೈತರು ಬೀದಿಗಿಳಿದರು; ತರಕಾರಿಯನ್ನು ಬೀದಿಗೆ ಎಸೆದರು. ಮೆಕ್ಕೆಜೋಳದ ಖರೀದಿಯಲ್ಲಿ ವಿಳಂಬವಾಗಿದೆ ಎಂದು ರೈತರು ಜಿಲ್ಲಾಧಿಕಾರಿಗಳ ಕಛೇರಿಗೆ ಮುತ್ತಿಗೆ ಹಾಕಿದ್ದಾರೆ. ಗಂಗಾವತಿಯಲ್ಲಿ ರೈತ ಪ್ರತಿಭಟನೆ ನಡೆದಾಗ ಅಶ್ರುವಾಯು, ಗಾಳಿಯಲ್ಲಿ ಗುಂಡು ಪ್ರಯೋಗವಾಗಿದೆ. ಖರೀದಿ ಕೇಂದ್ರಗಳಿಗೆ ಹೋಗಿ ರೈತರ ಸಂಕಷ್ಟಗಳನ್ನು ಕೇಳಿದ್ದೇನೆ. ಮುಖ್ಯಮಂತ್ರಿಗಳು ಖರೀದಿ ಕೇಂದ್ರಕ್ಕೆ ಸರ್‌ಪ್ರೈಸ್ ವಿಸಿಟ್ ಕೊಟ್ಟಿದ್ದರೆ ರೈತರ ಗೋಳು ಗೊತ್ತಾಗುತ್ತಿತ್ತು. ಮೆಕ್ಕೆಜೋಳವಲ್ಲದೆ ಬೇರೆ ಬೇರೆ ಪದಾರ್ಥಗಳು ಲಕ್ಷಾಂತರ ಟನ್ ಖರೀದಿ ಕೇಂದ್ರಗಳ ಮುಂದೆ ಬಿದ್ದಿವೆ. ಒಂದು ತಿಂಗಳಿನಿಂದ ನವಲುಗುಂದ, ನರಗುಂದದಲ್ಲಿ ಧಾನ್ಯವನ್ನು ಲಿಫ್ಟ್ ಮಾಡಿಲ್ಲ. ಮಳೆ ಬಂದರೆ ಮೆಕ್ಕೆಜೋಳ ಪೂರ್ತಿ ನಾಶವಾಗುತ್ತವೆ. ರೈತರು ಆ ಜೋಳವನ್ನು ರಸ್ತೆ ಮೇಲೆ, ಖರೀದಿ ಕೇಂದ್ರಗಳ ಮುಂದೆ ಒಗೆದಿದ್ದಾರೆ. ಉತ್ಪಾದನೆಗಳಿಗೆ ಬೆಲೆ ಕುಸಿತವಾದಾಗ ರಾಜ್ಯ ಸರ್ಕಾರ 75% ಕಾಂಟ್ರಿಬ್ಯೂಷನ್ ಕೊಟ್ಟರೆ ಕೇಂದ್ರವು 30% ಕೊಡುತ್ತಿದೆ. ಈ ಬಗ್ಗೆ ಅಧ್ಯಯನ ಮಾಡಿ ರೈತರ ಕಷ್ಟ ಪರಿಹಾರಕ್ಕೆ ಶ್ರಮಿಸಬೇಕು. ವಿದ್ಯುತ್ತು ಪಂಪ್‌ಸೆಟ್ಟುಗಳಿಗೆ ನಿರಂತರವಾಗಿಲ್ಲದೆ ಹೊಲಗದ್ದೆಗಳಿಗೆ ನೀರು ಬಿಡಲು ಸಾಧ್ಯವಾಗುತ್ತಿಲ್ಲ. ಖರೀದಿ ಕೇಂದ್ರಗಳಲ್ಲಿ, ಮಧ್ಯವರ್ತಿಗಳು, ವ್ಯಾಪಾರಿಗಳು ಲಾಭ ಮಾಡಿಕೊಳ್ಳುತ್ತಿದ್ದಾರೆ. ಗ್ರೇಡ್ ತೇವಾಂಶ ಪರೀಕ್ಷೆ ಇಲ್ಲದೆ ವ್ಯಾಪಾರಿಗಳು ಖರೀದಿಸಿ, ರೆಕಾರ್ಡ್‌ನಲ್ಲಿ ಬರೆಸಿ ಐದು ಲೋಡ್ ಮೆಕ್ಕೆಜೋಳವನ್ನು ಒಯ್ದ ಕಾರಣ ಅವರ ಮೇಲೆ ಕ್ರಿಮಿನಲ್ ಕೇಸ್ ಆಗಿದೆ. ಇಂಥದ್ದು ಮುಂದುವರಿಯಬಾರದು. ಇದು ರೈತರಿಗಾಗುವ ಮೋಸ. ರೈತರು ತಿಂಗಳು ತನಕ ಖರೀದಿ ಕೇಂದ್ರದ ಮುಂದೆ ಕಾಯ್ದು ಬೇಜಾರಾಗಿ ಕೊನೆಗೆ ವ್ಯಾಪಾರಿಗಳಿಗೆ ಕ್ವಿಂಟಾಲ್‌ಗೆ 300–350 ರೂ.ಗಳಿಗೆ ಮಾರಿಹೋಗುತ್ತಾರೆ. ವ್ಯಾಪಾರಿಗಳು, ಅಧಿಕಾರಿಗಳು ಪರ್ಸೆಂಟೇಜ್ ಫಿಕ್ಸ್ ಮಾಡಿಕೊಂಡು ಖರೀದಿ ವ್ಯವಹಾರವನ್ನು ಗ್ರೇಡರ್ಸ್, ತೇವಾಂಶ ಪರೀಕ್ಷೆ ಇಲ್ಲದೆ ಮಾಡುವುದನ್ನು ಜಿಲ್ಲಾಧಿಕಾರಿಗಳು ಸರ್‌ಪ್ರೈಸ್ ವಿಸಿಟ್ ಮಾಡಿ, ದೂರು ಬಂದ ಕಡೆ ಹೋಗಿ, ತಪ್ಪಿಸಬೇಕು. ರೈತರ ಈ ಸಮಸ್ಯೆಗಳು ಪರಿಹಾರವಾಗದಿದ್ದರೆ,

ಆತ್ಮಹತ್ಯೆ ಪ್ರಕರಣಗಳು ಮುಂದುವರಿಯುತ್ತವೆ, ಎಂದೆಲ್ಲ ಹೇಳಿ ತಮ್ಮ ಮಾತನ್ನು ಮುಕ್ತಾಯ ಮಾಡಿದರು.

**ಶ್ರೀ ಪಿ.ಜಿ.ಆರ್.ಸಿಂಧ್ಯ** ಅವರು ಮಾತನಾಡುತ್ತ, ಈ ಹಿಂದೆ ಮಾನ್ಯ ಮುಖ್ಯಮಂತ್ರಿಗಳು ಮಾರುಕಟ್ಟೆಗೆ ಇಂಟರ್‌ವೆನ್‌ಶನ್ ಮಾಡುತ್ತೇವೆ ಎಂದು ಕೇಂದ್ರ ಸರ್ಕಾರವನ್ನು ಒತ್ತಾಯಿಸಲು ನಮ್ಮ ಜೊತೆಗೂಡಿ ಹೋಗಿ ಕೇಳಿಕೊಂಡಾಗ, ಕೇಂದ್ರವು ನಮ್ಮ ಸಹಕಾರಕ್ಕೆ ಬರಲಿಲ್ಲ. ನೀವು ಬಾಸುಮತಿ ಅಕ್ಕಿಯನ್ನು ಕೊಳ್ಳುವಂತೆ, ನಮ್ಮ ರಾಜ್ಯದ ಸೋನಾಮಸೂರಿ ಅಕ್ಕಿಯನ್ನು ಕೊಳ್ಳಬೇಕೆಂದು ರಾಯಚೂರು, ಕೊಪ್ಪಳ ರೈತರು ಇಟ್ಟ ಒತ್ತಾಯದ ಮೇರೆಗೆ ಕೇಂದ್ರದ ಮೇಲೆ ರಾಜ್ಯ ಸರ್ಕಾರ ಒತ್ತಾಯ ಹಾಕಿತು. ಪರೀಕ್ಷೆಗಿಡುತ್ತೇವೆ ಎಂದು ಹೇಳಿದ್ದನ್ನು ಬಿಟ್ಟರೆ, ಮುಂದಿನ ವಿಷಯ ತಿಳಿಯಲಿಲ್ಲ. ರೈತರು ಬೆಳೆದ ಎಣ್ಣೆ ಕಾಳುಗಳಿಗೆ ಬೆಲೆ ಬಂದಿಲ್ಲ. ರಾಯಚೂರು, ಕೊಪ್ಪಳ ಜಿಲ್ಲೆ ರೈತರು ಎಪಿಎಂಸಿ ಮಾರುಕಟ್ಟೆಯಲ್ಲಿ ಗಾಡಿಯಲ್ಲಿ ಜೋಳದ ಮೂಟೆಗಳನ್ನಿಟ್ಟು ಕೊಂಡು 24 ಗಂಟೆಗಳ ಕಾಲ ಅಲ್ಲಿಯೇ ಇದ್ದರೂ ಕೊಳ್ಳುವುದಕ್ಕೆ ಆಗಿಲ್ಲ. ಅಂತಾಗಿ ಅಲ್ಲಿಯೇ ಸಾಯುವಂತಾಗಿದೆ. ಈ ರೀತಿ 8–10 ಮಂದಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಅಂಥವರ ಕುಟುಂಬಗಳಿಗೆ 1 ಲಕ್ಷ ರೂ ಪರಿಹಾರ ಕೊಟ್ಟಿರುವುದು ಸರಿ. ಹಿಂದೆ ರೈತರ ಸಾಲದ ಮೇಲಿನ 250 ಕೋಟಿ ರೂ. ಬಡ್ಡಿಯನ್ನು ರದ್ದು ಮಾಡಲಾಗಿತ್ತು. ಇಂದೂ ಅದಾಗಬೇಕು. ಸರ್ಕಾರ ಮಾಡಿದ್ದ ರದ್ದಿಯಾತಿಯನ್ನು ನಬಾರ್ಡ್ ಸಂಸ್ಥೆ ಒಪ್ಪದೆ ಇದ್ದಾಗಲೂ, ನಮ್ಮ ನಿಯೋಗವು ಅಂದಿನ ಸಚಿವ ಮಾನ್ಯ ಎಸ್.ಎಸ್.ಪಾಟೀಲರ ನಾಯಕತ್ವದಲ್ಲಿ ಕೇಂದ್ರ ಕೃಷಿ ಸಚಿವರ ಮೂಲಕ ಒತ್ತಾಯ ತಂದು ನಬಾರ್ಡಿನಿಂದ ಸಾಲ ಪಡೆದು, ಬಡ್ಡಿಯನ್ನು ನಾವು ಕಟ್ಟಿದೆವು. ಅಂತಾಗಿ ಸರ್ಕಾರವು ಇಂದು ಸಾಲದ ಮೇಲಿನ ಬಡ್ಡಿಯನ್ನು ತಕ್ಷಣ ಮನ್ನಾ ಮಾಡಬೇಕು. ಈ ಬಗ್ಗೆ ಕೊಪ್ಪಳದ ರೈತನಿಗಾದ ಗತಿ ಹೀಗಿದೆ – ಬೀಜ ಸರಬರಾಜು ಮಾಡುವ ಅಧಿಕಾರಿಗಳು ಎಣ್ಣೆ ಬೀಜವೇನೋ ಕೊಟ್ಟರು. ಆದರೆ ಒಂದು ಗಂಡು ಬೀಜ ಒಂದು ಹೆಣ್ಣು ಬೀಜ ಕೊಡಬೇಕಿತ್ತು. ಹತ್ತಿ ಬೆಳೆವಂಥ ಆ ರೈತನಿಗೆ ಖಾಸಗಿಯಾಗಿ ಎಣ್ಣೆ ಬೀಜಗಳನ್ನು ಕೊಟ್ಟದ್ದರಿಂದ ಅವನ ಬೆಳೆ ವಿಫಲವಾಗಿ, ಬಡ್ಡಿ, ಅಸಲು ಕೊಡುವುದಕ್ಕೆ ಆಗಲಿಲ್ಲ. ಜಪ್ತಿ ಮಾಡಲು ಹೋದಾಗ, ಬೇರೆ ದಾರಿ ಇಲ್ಲದೆ ಪೆಸ್ಟಿಸೈಡ್ ಕುಡಿದು ಆತ್ಮಹತ್ಯೆ ಮಾಡಿಕೊಂಡ. ಆಸ್ಪತ್ರೆಗೆ ತಂದ 1 1/2 ಗಂಟೆಯೊಳಗೆ ಅವನು ಸತ್ತಿದ್ದ. ಧಾರವಾಡದ ಬಳಿಯ ರೈತನೊಬ್ಬನಿಗೆ 18 ವರ್ಷದ ದಾಟಿದ 5 ಜನ ಗಂಡು ಮಕ್ಕಳು. ಒಬ್ಬೊಬ್ಬರಿಗೆ 1

ಎಕರೆ ಜಮೀನು ಬಂದಿರುವಂಥದ್ದು. ಸಾಲ ಮಾಡಿದ, ಬೆಳೆ ವಿಫಲವಾಯಿತು. ಮತ್ತೆ ಇದ್ದಷ್ಟು ಬೆಳೆಯನ್ನು ಧಾರವಾಡದ ಎಪಿಎಂಸಿ ಕೊಳ್ಳಲಿಲ್ಲ. ಆ ರೈತ ಆತ್ಮಹತ್ಯೆ ಮಾಡಿಕೊಂಡ. ಈ ಹಿನ್ನೆಲೆಯಲ್ಲಿ ಬಡ್ಡಿ, ಸುಸ್ತಿ ಬಡ್ಡಿ ಮನ್ನಾ ಮಾಡುವುದಲ್ಲದೆ ಅಲ್ಪಾವಧಿ, ಮಧ್ಯಮಾವಧಿ ಸಾಲಗಳನ್ನು ದೀರ್ಘಾವಧಿ ಸಾಲಗಳಾಗಿ ಪರಿವರ್ತಿಸಿ. ಮಾರುಕಟ್ಟೆ ಇಲಾಖೆ, ಕೃಷಿ ಇಲಾಖೆ, ಮತ್ತು ಆಹಾರ ಇಲಾಖೆ ನಡುವೆ ಕೋಆರ್ಡಿನೇಷನ್ ಬೇಕು. ಉದಾಹರಣೆಗೆ ಚಿತ್ರದುರ್ಗ ಎಪಿಎಂಸಿ ಮಾರುಕಟ್ಟೆಯಲ್ಲಿ ರೈತರಿಂದ ಮಾಲುಕೊಳ್ಳದೆ ಮಧ್ಯವರ್ತಿಗಳಿಂದ, ದಳ್ಳಾಳಿಗಳಿಂದ ಕೊಳ್ಳುತ್ತಿದ್ದುದು, ನಾನು ಭೇಟಿ ನೀಡಿದಾಗ ಕಂಡು ಬಂತು. ಹೀಗಾಗಿ ಡಿ.ಸಿ.ಯವರು ಈ ಕೋಆರ್ಡಿನೇಷನ್ ತಂದು ರೈತರಿಗೆ ಅನುಕೂಲ ಮಾಡಿಕೊಡಬೇಕು.

ದಕ್ಷಿಣ ಕರ್ನಾಟಕದಲ್ಲಿ ಭತ್ತವು, ರಾಗಿ, ಜೋಳ ಫೆಬ್ರುವರಿ ತಿಂಗಳಲ್ಲಿ ಬರುತ್ತದೆ. ಕೇಂದ್ರ ಸರ್ಕಾರ 28 ತಾರೀಖಿನವರೆಗೆ ಕೊಳ್ಳುವಿಕೆ ನಿಲ್ಲಿಸಿದ್ದರೂ, ಸರ್ಕಾರ ತತ್ಕಾಲಕ್ಕೆ ರಿಸರ್ವ್‌ಬ್ಯಾಂಕ್‌ನಿಂದ ಅಡ್ವಾನ್ಸ್ ತೆಗೆದುಕೊಂಡು ರೈತರಿಗೆ ಸ್ವಲ್ಪವಾದರೂ ಹಣಕೊಟ್ಟು ಸಹಕಾರಕ್ಕೆ ಹೋಗಬೇಕು ಎಂದರು. ಮಾರುಕಟ್ಟೆಯಲ್ಲಿ ರೈತರ ಬೆಳೆಗಳಿಗೆ ಬೆಲೆ ಸಿಗದಿರುವ ಸಂದರ್ಭದಲ್ಲಿ ವಿದ್ಯುತ್ ಸಂಪರ್ಕವನ್ನು ಕಡಿತಗೊಳಿಸಬಾರದು.

ತೆಂಗು, ಜೋಳ, ಭತ್ತ, ಕಾಫಿ ರೈತರು ಕಷ್ಟದಲ್ಲಿರುವ ಕಾರಣ ಕೊನೆಯ ಪಕ್ಷ ಜೂನ್‌ವರೆಗೆ ಕ್ವಾಲಿಟಿ ಪವರ್ ಸಪ್ಲೈ ಮಾಡಬೇಕು. ಆತ್ಮಹತ್ಯೆಯ ರೈತರು ಕುಟುಂಬದವರಿಗೆ ಲಕ್ಷ ರೂ. ಪರಿಹಾರ ಕೊಟ್ಟಿರುವುದು ಸರಿ. ಆದರೆ ಸಾಲವನ್ನು ಅವರಿಗೆ ಮನ್ನಾಮಾಡುವ ಅಥವ ಬೇರೆ ರೀತಿಯಲ್ಲಿ ಸಹಾಯ ಮಾಡಲು ಕಾರ್ಯಕ್ರಮ ಹಾಕಿಕೊಳ್ಳಬೇಕು. ಗೊಬ್ಬರದ ಮೇಲಿನ ಸಬ್ಸಿಡಿಯನ್ನು ಹೆಚ್ಚು ಮಾಡಬೇಕು. ಸತ್ತ ರೈತನ ಕುಟುಂಬಕ್ಕೆ ಭೇಟಿ ಕೊಟ್ಟು ಸಾಂತ್ವನ ಹೇಳಬೇಕಿತ್ತು. ವಿಶ್ವಾಸ ಹೆಚ್ಚಿಸಬೇಕಿತ್ತು. ಆವರ್ತನಿಧಿಗೆ ನಿಜವಾಗಿಯೂ ಹಣ ಕೊಟ್ಟಿದ್ದರೆ ಆ ಮಾಹಿತಿಯನ್ನು ಹೇಳಿದರೆ ರೈತರಿಗೆ ಸರ್ಕಾರ ಕೆಲಸ ಮಾಡಿದೆ ಎಂಬ ಭಾವನೆ ಬರುತ್ತದೆ. ಸಕ್ಕರೆ ಕಾರ್ಖಾನೆ ಸಮಸ್ಯೆ, ರೈತರ ಸಮಸ್ಯೆ, ಕಬ್ಬಿನ ಸಮಸ್ಯೆ, ಜೋಳ ಹಾಗೂ ಮೆಣಸಿನಕಾಯಿ ಸಮಸ್ಯೆ ಇದ್ದು ಆತ್ಮಹತ್ಯೆಗಳೂ ಸಂಭವಿಸಿವೆ. ಅದಾಗಿ ಈ ಬಗೆಗೆಲ್ಲ ಚರ್ಚೆಗಳಾಗಬೇಕು ಎಂದರು.

ಸಚಿವ **ಶ್ರೀ ಡಿ.ಬಿ. ಚಂದ್ರೇಗೌಡರು** ಮಾತನಾಡುತ್ತ : ವಿಪಕ್ಷನಾಯಕರು ಆಂಧ್ರದಲ್ಲಿ ಮೆಕ್ಕೆಜೋಳವನ್ನು 39,342 ಟನ್ ಖರೀದಿ ಮಾಡಿದೆ ಎಂದಿದ್ದಾರೆ.

ಆದರೆ ನಮ್ಮಲ್ಲಿ 1,84,331 ಟನ್ ಮೆಕ್ಕೆ ಜೋಳವನ್ನು ಖರೀದಿ ಮಾಡಲಾಗಿದೆ. ಅಂದರೆ ಶೇ.75 ರಷ್ಟು ಭಾಗ ಖರೀದಿ ಕರ್ನಾಟಕದ್ದಲ್ಲಿಯೇ ಇಡೀ ದೇಶಕ್ಕೆ ಹೋಲಿಸಿದರೆ ನಡೆದಿದೆ. ಕೇಂದ್ರ ಸರ್ಕಾರ ಮಾರುಕಟ್ಟೆ ಪ್ರವೇಶ ಮಾಡದೆ ರಾಜ್ಯ ಸರ್ಕಾರವೇ ಕೊಂಡುಕೊಳ್ಳಬೇಕಾದ ಪರಿಸ್ಥಿತಿ ಒದಗುವ ಸಂದರ್ಭದಲ್ಲಿ ಮಾತ್ರ ನಾವು ಆವರ್ತ ನಿಧಿಯಿಂದ ಬಳಸಿಕೊಳ್ಳುತ್ತೇವೆ. ಈಗಾಗಲೇ ಅದರಿಂದ 9 ಕೋಟಿ ಹಣ ಕೊಟ್ಟಿದೆ. ಎಫ್‌ಸಿಐನವರು ಖರೀದಿ ಮಾಡುವಲ್ಲಿ, ಹಣ ಅದಕ್ಕೆ ರಿಇಂಬರ್ಸ್ ಆಗದಿದ್ದ ಕಡೆ ನಮಗೆ ಆ ಹಣ ಮುಂದೆ ಒದಗೀತೆಂಬ ನಿರೀಕ್ಷೆಯಲ್ಲಿ ಆವರ್ತ ನಿಧಿಯಿಂದ ಹಣವನ್ನು ನೀಡಲಾಗುವುದು. ರಾಗಿ, ಸಜ್ಜೆ, ಭತ್ತ, ಬಿಳಿ ಜೋಳ, ತೊಗರಿ ಆಲೂಗೆಡ್ಡೆ ಖರೀದಿ ರಾಜ್ಯ ಸರ್ಕಾರದಿಂದ ಆದರೆ ಮೆಕ್ಕೆ ಜೋಳವು ಕೇಂದ್ರ ಸರ್ಕಾರದಿಂದ ಆಗುತ್ತದೆ. ಈ ಬಗ್ಗೆ ಕರ್ನಾಟಕದಲ್ಲಿ ಯಾವ ಗೊಂದಲವೂ ಇಲ್ಲ. ನಾವು ಗ್ರೇಡರ್ಸ್ ತರಬೇತಿಯನ್ನು ಕೊಡುತ್ತೇವೆ ಎಂದರೆ ಎಫ್.ಸಿ.ಐ ನವರು ಒಪ್ಪದ ಕಾರಣ 51 ಜನರಿಗೆ ನೀವೇ ಕೊಡಿ ಎಂದು ಹೇಳಿದ್ದೇವೆ. ರಾಜ್ಯದ ಕೃಷಿ ಇಲಾಖೆಯ 51 ಜನ ಅಧಿಕಾರಿಗಳನ್ನು ಎಫ್‌ಸಿಐಗೆ ತರಬೇತಿಗಾಗಿ ನೀಡಿದೆ. ಎಫ್‌ಸಿಐನವರು ಖರೀದಿ ಮಾಡದಿದ್ದರೂ ಆವರ್ತ ನಿಧಿಯಿಂದ ಹಣ ಬಿಡುಗಡೆ ಮಾಡಲು ಸಚಿವ ಸಂಪುಟದ ಉಪಸಮಿತಿಯಲ್ಲಿ ತೀರ್ಮಾನಿಸಿದೆ. ಒಂದು ವೇಳೆ ಖರೀದಿ ಕೇಂದ್ರಗಳನ್ನು ಮುಚ್ಚಿದರೆ ದೊಡ್ಡ ರೈತ ಸಮೂಹವೇ ಮೇಲೇಳುತ್ತಿತ್ತು. ಉಪಶಮನ ಕಾರ್ಯವನ್ನು ಸರ್ಕಾರ ಮಾಡಿರುವುದರಿಂದ ರೈತರು ಸುಮ್ಮನಿದ್ದಾರೆ. ಖರೀದಿ ಕೇಂದ್ರಗಳನ್ನು ಮುಂದುವರಿಸಲೂ ಸರ್ಕಾರ ತೀರ್ಮಾನಿಸಿದೆ. ಎಫ್.ಸಿ.ಐ ನವರ ಜೊತೆ ಸಹ ಸಂಪರ್ಕ ಮಾಡಿದ್ದೇವೆ. ದೆಹಲಿಯಲ್ಲಿ ಸಂಬಂಧಪಟ್ಟ ಸಚಿವರ ಜೊತೆ ಚರ್ಚೆ ಮಾಡಲಾಗುತ್ತಿದೆ. ಸದ್ಯಕ್ಕೆ ಮಾಹಿತಿ ಇಷ್ಟಿದೆ ಎಂದರು.

**ವಿಷಯ 2:** ವಾಣಿಜ್ಯ ಬೆಳೆ–ವ್ಯವಸಾಯೋತ್ಪನ್ನ ಬೆಳೆ ಬೆಲೆ ಕುಸಿತ; ರೈತರ ಆತ್ಮಹತ್ಯೆ

2.3.2001ನೇ ವಿಧಾನಸಭಾಧಿವೇಶನದಲ್ಲಿ*[2] ಶ್ರೀ **ಡಿ.ವಿ.ಸದಾನಂದ ಗೌಡರು** ಅಡಿಕೆ ಬೆಳೆ ಸಂಬಂಧದಲ್ಲಿ ಮಾತನಾಡುತ್ತ, ರಾಜ್ಯದ ರೈತರ ಹಿತರಕ್ಷಣೆ, ಆವರ್ತನಿಧಿಗೆ ಸರ್ಕಾರ ಸಾಕಷ್ಟು ಹಣ ಬಿಡುಗಡೆ ಮಾಡದಿರುವುದು, ಖರೀದಿ ಕೇಂದ್ರಗಳನ್ನು ಸಾಕಷ್ಟು ತೆರೆಯಬೇಕಿರುವುದು ಹಾಗು ಮುಂದುವರಿಸಬೇಕಿರುವುದು, ಆಮದಾಗಿ ಬರುವಂಥ ಕೃಷಿ ಉತ್ಪನ್ನಗಳು ಮತ್ತು ಪ್ಲಾಂಟೇಷನ್ ಕ್ರಾಪ್‌ಗಳು ಮಾರುಕಟ್ಟೆಯ

*2. ವಿಧಾನ ಸಭಾ ನಡವಳಿಕೆಗಳು., ಸಂಪುಟ.1, ಭಾಗ.I (2.3.2001), ಪು.357–78

ಮೇಲೆ ಬೀರಿದೆ ಎನ್ನಲಾದ ನೇರ ಪರಿಣಾಮದ ಕುರಿತ ಮಾತಿನ ನೈಜತೆಯ ಬಗ್ಗೆ ವಿಮರ್ಶೆಯ ಅಗತ್ಯ, ಅಡಿಕೆ ಬೆಳೆಗಾರರೂ ಮಾಡಿಕೊಳ್ಳುತ್ತಿರುವ ಆತ್ಮಹತ್ಯೆಗೆ ಉದಾ. ಆಗಿ ಪುತ್ತೂರು ತಾಲೂಕಿನ ಅಡಿಕೆ ಬೆಳೆಗಾರ ವಾಸಪ್ಪಗೌಡ ಸಾಲ ತೀರಿಸಲಾಗದೆ ಆತ್ಮಹತ್ಯೆ ಮಾಡಿ ಕೊಂಡಿರುವುದು, ಈ ಬಗ್ಗೆ ಉಸ್ತುವಾರಿ ಸಚಿವರ ನಿಶ್ಚಿಂತೆ, ಹಾಗೂ ಅನಾಸಕ್ತಿ, ರಾಜಕೀಯುರಹಿತವಾದಂಥ ಪರಿಹಾರ ಕಂಡುಹಿಡಿದುಕೊಳ್ಳಬೇಕಾದ ಪ್ರಯತ್ನ, ತಾತ್ಕಾಲಿಕವಾಗಿ ಮಾರುಕಟ್ಟೆಯ ಮೇಲೆ ವಿಧಿಸಿರುವಂಥ ತೆರಿಗೆಗಳ ಪರಿಣಾಮ ಕುರಿತೆಲ್ಲ ಹೇಳಿದರು.

**ಶ್ರೀ ಜಯಪ್ರಕಾಶ್‌ಹೆಗಡೆ** ಅವರು, ದೊಡ್ಡ ಉದ್ದಿಮೆಗಳಿಗೆ ತೆರಿಗೆ ಮನ್ನಾ ಮಾಡಿದಂತೆ ಅಡಿಕೆ ಸಂಬಂಧದ ಸಹ ತೆರಿಗೆ ಮನ್ನಾ ಮಾಡಬೇಕು, ಎಂದರು. ಶ್ರೀ ಡಿ.ವಿ. ಸದಾನಂದಗೌಡರು ಪ್ರಯೋಗಾರ್ಥವಾಗಿ ಅಡಿಕೆ ಮಾರುಕಟ್ಟೆಯಲ್ಲಿ ವಿಧಿಸಿರುವ 4% ಮಾರಾಟ ತೆರಿಗೆ, 1% ವಹಿವಾಟು ತೆರಿಗೆ, 1% ಎಪಿಎಂಸಿ ತೆರಿಗೆಗಳನ್ನು ತಾತ್ಕಾಲಿಕ ನಿಲ್ಲಿಸಿ ಆಗುವ ಪರಿಣಾಮಗಳ ಪರಿಶೀಲನೆಗಾಗಿ ಕೋರಿಕೆ, ಅದಕ್ಕೆ ಸರ್ಕಾರದ ನಿಸ್ಪಂದನ, ಕ್ವಿಂಟಾಲ್ ಅಡಿಕೆ ಬೆಲೆ 17 ಸಾವಿರದಿಂದ 6 ಸಾವಿರ ರೂ.ಗೆ ಕುಸಿದಿರುವುದು, ಸಹಕಾರ ಸಂಘ ಮತ್ತು ಬ್ಯಾಂಕ್ ಸಾಲಗಳನ್ನು ರೈತರು ಮರುಪಾವತಿ ಮಾಡಲಾಗದಿರುವಂಥ ಪರಿಸ್ಥಿತಿ, ಸಾಲದ ಅವಧಿ ಪರಿವರ್ತನೆ, ನಬಾರ್ಡ್ ಗೈಡ್‌ಲೈನ್ಸ್ ಅನ್ನು ಮುಂದಿರಿಸಿ ಸಾಲ ಮತ್ತು ತೆರಿಗೆ ಮನ್ನಾ ಮಾಡದೆ ರೈತರ ಮೇಲೆ ಸರ್ಕಾರ ಮಾಡುತ್ತಿರುವ ದಾಳಿ, ಸಚಿವ ಮಾನ್ಯ ವೀರಪ್ಪ ಮೊಯ್ಲಿಯವರು ಮಂಗಳೂರು ಎಪಿಎಂಸಿ ಮಾರ್ಕೆಟ್ ಸಭೆ ಏರ್ಪಡಿಸಿ ಕ್ವಿಂಟಾಲ್‌ಗೆ 10 ಸಾವಿರ ರೂ. ಬೆಲೆಗೆ ಏರಿಸಲು ಹೇಳಿದ್ದು ಕಾರ್ಯಗತವಾಗದಿರುವುದು, ಎ.ಪಿ.ಎಂ.ಸಿ ಮಾರುಕಟ್ಟೆಯನ್ನು ದಕ್ಷಿಣ ಕನ್ನಡ ಜಿಲ್ಲೆಗೆ ಸ್ಥಳಾಂತರಿಸಿ ಮಾರುಕಟ್ಟೆ ಧಾರಣೆ ಸ್ಥಿರೀಕರಣ ಮಾಡುವ ಬಗ್ಗೆ ಕೊಟ್ಟ ಸರ್ಕಾರದ ಆಶ್ವಾಸನೆ, ಆ ಬಗ್ಗೆ ವಿಧಾನಸಭಾ ಚರ್ಚೆಯಲ್ಲಿ ಉತ್ತರವನ್ನೆ ನೀಡದಿರುವುದು, ಕೇಂದ್ರ ಸರ್ಕಾರದ ಕೃಷಿ ಮಂತ್ರಿಗಳನ್ನು ಭೇಟಿ ಮಾಡಿದಾಗ ಶೇ.100 ರಷ್ಟು ತೆರಿಗೆ ಏರಿಸಿ 100 ಪರ್ಸೆಂಟ್ ಇಂಪೋರ್ಟ್‌ಡೂಟಿ ಮಾಡಿ ರೈತರ ಹಿತಕ್ಕೆ ಮುಂದಾದದ್ದು ಕುರಿತೆಲ್ಲ ಹೇಳಿದರು.

**ಶ್ರೀ ಕೆ.ಬಿ. ಮಲ್ಲಿಕಾರ್ಜುನ** ಅವರು : ಇಂಪೋರ್ಟ್ ಡ್ಯೂಟಿ ಏರಿಸಿದ ಕಾರಣ 3 ಸಾವಿರದಿಂದ 3500 ರೂ. ಚಾಲಿ ಅಡಕೆಗೆ ಒದಗಿತು. ಆದರೆ ಕೆಲವು ಕಳ್ಳ ಸಾಗಾಣಿಕೆದಾರರು ಅದನ್ನು ಡ್ರೈಫ್ರೂಟ್ಸ್‌ಗೆ ಟ್ಯಾಕ್ಸ್ ಇಲ್ಲದ ಕಾರಣ, ಆ

ಹೆಸರಿನಲ್ಲಿ ಇಂಪೋರ್ಟ್ ಮಾಡಿಕೊಳ್ಳುತ್ತಿದ್ದಾರೆ. ಅವರು ಕೆಂಪು ಅಡಕೆಯನ್ನು ಒಣಗಿದ ಫ್ರೂಟ್ಸ್ ಎಂದು ಇಂಪೋರ್ಟ್ ಮಾಡಿಕೊಳ್ಳುತ್ತಿರುವಲ್ಲಿ ಸರ್ಕಾರ ಸ್ಪಷ್ಟವಾದ ಕ್ರಮ ಕೈಗೊಳ್ಳಬೇಕಿದೆ. ಟಿ.ಓ.ಟಿ ಟ್ಯಾಕ್ಸ್ ರದ್ದು ಮಾಡಬೇಕಿದೆ. ಮಲ್ಟಿಪಲ್ ಟ್ಯಾಕ್ಸ್ ಅಡಿಕೆ ಧಾರಣೆ ಇಳಿಯಲು ಮೊದಲನೇ ಕಾರಣ. ಅಡಕೆ ಹೋಗುವ ಎಲ್ಲಾ ಕಡೆ ಟ್ಯಾಕ್ಸ್ ಕೊಡಲು ಸಾಧ್ಯವಾಗದು. ಅಂತಾಗಿ ಮಲ್ಟಿಪಲ್ ಟ್ಯಾಕ್ಸ್ ನಿಲ್ಲಿಸಬೇಕು. ಕೇಂದ್ರ್ರದ ಮೇಲೆ ಒತ್ತಡ ತಂದು ಡ್ರೈಫ್ರೂಟ್ಸ್ ಇಂಪೋರ್ಟ್ ನಿಲ್ಲಿಸದಿದ್ದರೆ ಅಡಿಕೆ ಬೆಲೆ ಇನ್ನು ಕುಸಿಯುತ್ತದೆ ಎಂದರು.

**ಶ್ರೀ ವಿಶ್ವೇಶ್ವರ ಹೆಗಡೆ** ಕಾಗೇರಿ ಅವರು : ಅಡಿಕೆ ವ್ಯಾಪಾರವನ್ನು ಬಂದ್ ಮಾಡಿರುವ ಸರ್ಕಾರದ ನೀತಿಯಿಂದ ರೈತರಿಗೆ ಗಾಯದ ಮೇಲೆ ಬರೆ ಎಳೆದಂತಾಗಿದೆ. ಕಳೆದ 5 ವರ್ಷಗಳ ಹಿಂದೆ ವ್ಯಾಪಾರ ಮಾಡಿದ್ದಕ್ಕೆ ಟಿ.ಓ.ಟಿ ಟಾಕ್ಸ್ ಹಾಕುತ್ತೇವೆ ಎಂಬುದು ಪ್ರಗತಿಪರ ಧೋರಣೆ ಎನಿಸದು. ಮಾರ್ಚ್ ತಿಂಗಳ ಕೊನೆಯೊಳಗಾಗಿ ಸಹಕಾರ ಬ್ಯಾಂಕಿನ ಸಾಲ ತುಂಬುವುದಲ್ಲಿ! ಮಲ್ಟಿಪಲ್ ಟಾಕ್ಸ್ 1 ಪರ್ಸೆಂಟ್ ಪ್ರತಿ ಊರಿನಲ್ಲಿ ಕೊಡಬೇಕು ಎಂಬುದು ವ್ಯಾಪಾರ ಸ್ಥಿರ ವ್ಯವಹಾರವೆಂದರೂ ಪರೋಕ್ಷವಾಗಿ ರೈತರನ್ನು ಕಾಡುತ್ತದೆ. ರೈತರ ಬೆಳೆಗಳಿಗೆ ಬೆಲೆಯೂ ಇಲ್ಲದ ಪರಿಸ್ಥಿತಿ ಒದಗಿದೆ, ಎಂದರು.

ಈ ನಡುವೆ ಸರ್ವಶ್ರೀ ಎಂ.ಡಿ. ಲಕ್ಷ್ಮೀ ನಾರಾಯಣ, ಎಸ್.ಎಸ್.ಪಾಟೀಲ್, ಬಿ.ಎನ್.ಬಚ್ಚೇಗೌಡ, ಎಸ್.ಸುರೇಶ್ ಕುಮಾರ್, ಕೆ.ಜಯಪ್ರಕಾಶ್ ಹೆಗಡೆ, ಅಮರಗೌಡ ಲಿಂಗನಗೌಡ ಬಯ್ಯಾಪುರ, ಸಿ.ಚನ್ನಿಗಪ್ಪ ಅವರುಗಳು ಸಂಬಂಧ ಪಟ್ಟ ಸಚಿವರು ಹಾಜರಿದ್ದು, ರೈತರ ಕುರಿತಾಗಿ ಉತ್ತರಿಸಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತ ಮಾಡಿದರು.

**ಶ್ರೀ ಕೆ.ಬಿ.ಮಲ್ಲಿಕಾರ್ಜುನ** ಅವರು, ಅಡಿಕೆ ಮಾರುಕಟ್ಟೆಗಳ ಸ್ಥಗಿತ, ಟಿ.ಓ.ಟಿ ಟ್ಯಾಕ್ಸ್ ಬಗ್ಗೆ ಬರಲಿರುವ ಕಾನೂನಿಗೆ ನೀಡಬೇಕಾದ ತಡೆ; ಟಿ.ಓ.ಟಿ ಕಟ್ಟುವಲ್ಲಿ ಮೂರು ಪಟ್ಟು ಪೆನಾಲ್ಟಿಯನ್ನು ಹೆಚ್ಚಿಸಿ 20 ಲಕ್ಷ ರೂ.ವರೆಗೆ ನೋಟೀಸ್ ಕೊಟ್ಟ ಘಟನೆಯೂ ಕಡೂರಿನಲ್ಲಿ ಕಂಡು ಬಂದಿರುವುದು, ಮಲ್ಟಿಪಾಯಿಂಟ್ ಟ್ಯಾಕ್ಸ್ ಬಗ್ಗೆ ನಡೆಯುತ್ತಿರುವ ಪ್ರತಿಭಟನೆ, ಕುರಿತೆಲ್ಲ ಹೇಳಿ ಮಾರ್ಕೆಟ್ ಪ್ರಾರಂಭಿಸುವ ಬಗ್ಗೆ ಸ್ಪಷ್ಟವಾಗಿ ತಿಳಿಸಬೇಕೆಂದರು.

ಶ್ರೀ **ಡಿ.ವಿ.ಸದಾನಂದಗೌಡರು** ಮಾತನ್ನು ಮುಂದುವರಿಸಿ: ಪುತ್ತೂರು ಎಪಿಎಂಸಿ ಯಲ್ಲಿ ಸೆಸ್‌ಗಳು ಸರಿಯಾಗಿ ಕಲೆಕ್ಷನ್ ಆಗುತ್ತಿಲ್ಲ. ಅಡಿಕೆ ಮಾರುಕಟ್ಟೆಯಲ್ಲಿ ಕ್ವಿಂಟಾಲ್‌ಗೆ ಸುಮಾರು 10 ಸಾವಿರ ರೂ. ದರ ಏರುತ್ತದೆ ಎಂದಿದ್ದುದರ ಬದಲು ಇಳಿತ ಕಂಡಿದೆ. ಅಲ್ಲಿನ ಎಪಿಎಂಸಿ ಯಾರ್ಡ್‌ಗೆ ಕಳೆದ 8 ವರ್ಷಗಳಿಂದ ಮಾರ್ಕೆಟ್ ಇನ್ನು ಶಿಫ್ಟ್ ಆಗಲಿಲ್ಲ. ಶಿಫ್ಟ್ ಮಾಡುವಂಥ ಪ್ರಯತ್ನವೂ ಆಗಿಲ್ಲ. ಕೋರ್ಟಿನಲ್ಲಿ ವಿಚಾರ ಇರುವ ಕಾರಣ ಶಿಫ್ಟ್ ಮಾಡಲಾಗುತ್ತಿಲ್ಲವೆನ್ನಲಾಗುತ್ತಿದೆ. ಕೋಟಿಗಟ್ಟಲೆ ಹಣ ಖರ್ಚಾಗಿದ್ದರೂ ಪರಿಹಾರ ಕಂಡುಕೊಳ್ಳಲಿಲ್ಲ. ಎಪಿಎಂಸಿ ಯಾರ್ಡ್ ರೈತರಿಗಾಗಿ ಇರುವಂಥಾದ್ದಾಗಿಲ್ಲ, ಎಂದರು. ಶ್ರೀ **ಎನ್. ಯೋಗೀಶ್ ಭಟ್** ಅವರು ಈ ಮಾತಿಗೆ ದನಿಗೂಡಿಸಿ 20 ಕೋಟಿ ರೂ. ವೆಚ್ಚದಲ್ಲಿ ಕಟ್ಟಿದ ಈ ಯಾರ್ಡ್‌ನಲ್ಲಿ ಈವರೆಗೂ ಒಂದೇ ಒಂದು ಸೇಲ್ಸ್ ಕೂಡ ಆಗಿಲ್ಲ ಎಂದರು. ಶ್ರೀ ಡಿ.ವಿ.ಸದಾನಂದಗೌಡರು ಮತ್ತೆ ಮಾತನಾಡಿ ಪುತ್ತೂರು, ಮಂಗಳೂರು, ಸುಳ್ಯ ಎಪಿಎಂಸಿ ಯಾರ್ಡ್‌ನಲ್ಲಿ ವ್ಯವಹಾರ ಮಾಡಿಸಿಲ್ಲ. ಅಲ್ಲಿಂದ ಸೆಸ್ ತರಿಸಿ ಆವರ್ತ ನಿಧಿಗೆ ಉಪಯೋಗ ಮಾಡಿಕೊಳ್ಳಲಾಗುತ್ತಿದೆ. ರಾಜ್ಯ ಸರ್ಕಾರ ಖಜಾನೆಯಿಂದ ಆವರ್ತನಿಧಿಗೆ ಹಣ ಕೊಡಬೇಕಿತ್ತು. ರೈತನ ಸಾಗಾಣಿಕೆ, ರಸ್ತೆ ಸೌಲಭ್ಯಗಳಿಗಾಗಿ ಮಾರುಕಟ್ಟೆ ವ್ಯವಸ್ಥೆಗಾಗಿ ಖರ್ಚು ಮಾಡಬೇಕಿದ್ದ ಎಪಿಎಂಸಿ ಹಣವನ್ನು ಆ ನಿಧಿಗೆ ತುಂಬಲಾಗಿದೆ. ಅದನ್ನು ಕೇವಲ 75 ಕೋಟಿಗೆ ಇಳಿಸಿದರೂ ಈಗ ಸಂಗ್ರಹವಾಗಿರುವುದು 26.17 ಕೋಟಿ ರೂ. ಮಾತ್ರ. ರೈತರು ಮಾರುಕಟ್ಟೆಗೆ ತಂದಂಥ ವಸ್ತುವಿಗೆ ಸರಿಯಾದ ಮಾರುಕಟ್ಟೆ ಸಿಗದಿದ್ದರೆ, ಎಪಿಎಂಸಿಯಲ್ಲಿಟ್ಟು ತಕ್ಷಣ ಅದರ ಮೌಲ್ಯದ 75 ರಷ್ಟು ಮೊತ್ತ ಕೊಡಬೇಕು. ಮೂರು ತಿಂಗಳಲ್ಲಿ ಮಾರಾಟ ಮಾಡಿ ಬಡ್ಡಿ ರಹಿತವಾಗಿ ಮರುಪಾವತಿ ಮಾಡಬೇಕು ಎಂದು ಸರ್ಕಾರ ಹೇಳಿದಂತೆ ನಡೆದಿದೆಯೆ? ರೈತನ ಪರಿಸ್ಥಿತಿ ಸುಧಾರಣೆ ಆಗುವುದು ಹೇಗೆ? ಎಂದರು. ಶ್ರೀ ಟಿ.ಬಿ.ಜಯಚಂದ್ರ ಕೃಷಿ ಸಚಿವರು, ಈ ಮಾತಿಗೆ ಪ್ರತಿಕ್ರಿಯಿಸಿ ಕೇಂದ್ರವು 100 ಪರ್ಸೆಂಟ್ ಟ್ಯಾಕ್ಸ್ ಹಾಕಿದರೂ ಪರಿಣಾಮ ಬೀರಲಿಲ್ಲ. ಕಾರಣ ರಾಷ್ಟ್ರಕ್ಕೆ ಬರಬೇಕಾದ ಸ್ಟಾಕ್ ಮೊದಲೇ ಬಂದು ಬಿದ್ದಿತ್ತು. ಆವತ್ತೇ ಟ್ಯಾಕ್ಸ್ ಹಾಕಿದ್ದು ಆವತ್ತೇ ಡಿಸ್‌ಚಾರ್ಜ್ ಆಗಿ ಅಡಿಕೆ ಬೆಲೆ ಕುಸಿಯಿತು ಎಂದರು. ಶ್ರೀ ಡಿ.ವಿ. ಸದಾನಂದ ಗೌಡರು ಮಾತನಾಡಿ, ಈಚಿನ ದಿನಗಳಲ್ಲಿ ಡ್ರೈಫ್ರೂಟ್ ಆಧಾರದಲ್ಲಿ ಅಡಿಕೆ ಬರುತ್ತಿಲ್ಲ. ಡ್ರೈಫ್ರೂಟ್ ಲಿಸ್ಟ್‌ನಲ್ಲಿಯೂ ಇಲ್ಲ. ಕೊಕೋಕೋಲಾದವರಿಗೆ 8 ವರ್ಷಗಳ ತೆರಿಗೆ ಮನ್ನಾ, ಅಬಕಾರಿ ಜನರಿಗೆ 360 ಕೋಟಿ. ರೂ ಮನ್ನಾ ಮಾಡುವುದರ ಬದಲು ರೈತರ ಬಗ್ಗೆ ಸ್ಪಂದಿಸಬೇಕೆಂಬುದು

ಶ್ರೀ ಕಾಗೋಡು ತಿಮ್ಮಪ್ಪನವರ ಮನಸ್ಸಿನಲ್ಲಿದೆ. ಸದ್ಯ ತೆರಿಗೆಗಳನ್ನು ತಾತ್ಕಾಲಿಕವಾಗಿ ಸ್ವಲ್ಪಮಟ್ಟಿಗೆ ಸ್ಥಗಿತಗೊಳಿಸಿ ಪರಿಣಾಮ ನೋಡಬೇಕು. ರೈತರ ಸಾಲಗಳನ್ನು ದೀರ್ಘಾವಧಿ ಸಾಲವನ್ನಾಗಿ ಪರಿವರ್ತಿಸಬೇಕು ಎಂದರು.

ಶ್ರಿ **ಟಿ.ಬಿ.ಜಯಚಂದ್ರ** ಅವರು, ಕಾಂಪ್ಕೊದಂಥ ಸಂಸ್ಥೆ ಇದ್ದರೂ ಅಡಿಕೆ ರೇಟ್‌ನಲ್ಲಿ ಪರಿಣಾಮವಾಗಲಿಲ್ಲ ಏಕೆ? ಅಡಿಕೆ ಆಮದು ಮಾಡಿಕೊಳ್ಳುವ ಸಂದರ್ಭದಲ್ಲಿ ಕೌನ್ಸೆಲಿಂಗ್ ಏಜೆನ್ಸಿ ಮಾಡಿ ರೆಕಗ್ನೈಸ್ ಮಾಡಿಸಿ ಕೇಂದ್ರ ಸರ್ಕಾರ ಆಥರೈಸ್ಡ್ ಮಾಡಿದರೆ ಅಂಡರ್ ಇನ್‌ವಾಯ್ಸ್ ಆಗಿ ಬರುವುದು ಸಾಧ್ಯವಾಗುವುದಿಲ್ಲ. ಬೇರೆ ದೇಶದಿಂದ ಅಡಿಕೆ ಬರುತ್ತಿದೆ ಎಂದರೆ ಅಂಡರ್ ಇನ್‌ವಾಯ್ಸ್ ಆಗಿ ಬರುವುದೇ ಕಾರಣ ಎಂದರು. ನೂರರಷ್ಟು ಟಾಕ್ಸ್ ಜಾಸ್ತಿ ಮಾಡುವುದರ ಜೊತೆಗೆ ಕ್ಯಾಂಪ್ಕೊಗೆ ಏಜೆನ್ಸಿ ಮಾಡಬೇಕು ಎಂದರು. ಅದಕ್ಕೆ ಸದಾನಂದ ಗೌಡರು ಕೇಂದ್ರ ಸರ್ಕಾರದ ಮುಂದೆ ಡಿಮಾಂಡ್ ಈ ಬಗ್ಗೆ ಇಟ್ಟಿದೆ. ಮಾರ್ಕೆಟ್ ವ್ಯವಸ್ಥೆಗೆ ಹೊಸ ಆಯಾಮ ಕೊಟ್ಟು, ಸಣ್ಣ ಪ್ಯಾಕೆಟ್‌ಗಳಲ್ಲಿ ಮಾರಾಟ ಮಾಡುವ ಬಗ್ಗೆ ಕಾಂಪ್ಕೊ ತೀರ್ಮಾನಿಸಿದೆ ಎಂದರು. ಮುಂದುವರಿದು ರಾಜ್ಯದ ರೈತರಿಂದ 140 ಕೋಟಿ ರೂ. ಬಾಕಿ ಬರಬೇಕೆಂದು ವಸೂಲಿಗೆ ಸರ್ಕಾರ ಹೊರಟಿರುವುದು, ಪಂಪ್‌ಸೆಟ್‌ಗೆ ಕರೆಂಟ್ ಸಂಪರ್ಕವನ್ನು ಕಡಿಯಲೆಳಸಿರುವುದನ್ನು ನಿಲ್ಲಿಸುವುದು, ಕನಿಷ್ಠ ದಿನಕ್ಕೆ 8–10 ಗಂಟೆಗಳ ಕಾಲ ವಿದ್ಯುತ್ ಒದಗಿಸಬೇಕಿರುವುದು ಕುರಿತೆಲ್ಲ ಹೇಳಿದರು.

**ಶ್ರೀ ಬಿ.ಆರ್.ಯಾವಗಲ್** ಅವರು ಬೆಳೆಗಳ ಬೆಲೆ ಕುಸಿತದ ಕಾರಣ ರೈತರಿಗೆ ಹಾನಿಯಾಗಿರುವ ಬಗ್ಗೆ ಮಾತನಾಡುತ್ತ : ರಾಜ್ಯದಲ್ಲಿ 18 ಲಕ್ಷ ಚೀಲಕ್ಕಿಂತ ಹೆಚ್ಚು ಪದಾರ್ಥಗಳನ್ನು ಖರೀದಿಸಿರುವುದು, ಬೆಳಗಾಂ, ಬೀದರ್, ಪಿರಿಯಾಪಟ್ಟಣ ಮುಂತಾದ ಕಡೆ ವಾಣಿಜ್ಯ ಬೆಳೆಗಳನ್ನು (ಹತ್ತಿ ಇತ್ಯಾದಿ) ರೈತರು ಬಿಟ್ಟು ಗೋವಿನಜೋಳದತ್ತ ಸಾಗಿರುವುದು, ಹತ್ತಿಯ ಇಳುವರಿ ಈಚೆಗೆ ಬರದಿರುವುದಕ್ಕೆ ರೋಗ ಕಾರಣವಾಗಿರುವುದು, ಹಾಗು ಕಾಯಿ ಹಿಡಿಯದೆ, ಖರ್ಚು ಹೆಚ್ಚಿರುವುದು, ಹತ್ತಾರು ಕ್ವಿಂಟಾಲ್ ಬರಬೇಕಾದ ಬೆಳೆ ಹತ್ತಾರು ಕೆ.ಜಿ.ಗೆ ಇಳಿದಿರುವುದು, ಹಾಕಿ ಹಣವೂ ಬರದೆ ಸಾಲ ತೀರಿಸಲಾಗದಿರುವುದು, 99 ಪಾಲಿಗಿಂತ ಹೆಚ್ಚಿನ ಗೋವಿನ ಜೋಳದ ಬೆಳೆ ಕಂಡಿರುವುದು, ಹಿಂಗಾರಿ ಬೆಳೆ ಪೂರ್ಣ ಬೆಳೆದು ನಿಂತಿರುವುದು, ಬೆಲೆ ಕುಸಿತವಾಗಿರುವುದು, ನರಗುಂದದಲ್ಲಿ ಸುಮಾರು ಒಂದು ತಿಂಗಳಿನಿಂದ 1 ಲಕ್ಷ ಚೀಲಗಳನ್ನು ಒಟ್ಟುಮಾಡಿಕೊಂಡು ಸಾವಿರಾರು ರೈತರು ಎಪಿಎಂಸಿ ಯಾರ್ಡಿನಲ್ಲಿ ನಿಂತಿರುವುದು, ಭಾರತೀಯ ಆಹಾರ ನಿಗಮದವರು ಈ ಬೆಳೆಯನ್ನು ಕೊಳ್ಳಲು

ಇಲ್ಲಿನ ಭಾಷೆ ಬರದ ಪರರಾಜ್ಯದ ಗ್ರೇಡರ್ಸ್‌ಗಳನ್ನು ನೇಮಿಸಿರುವುದರಿಂದ ತೊಂದರೆ, ಬೆಳಗ್ಗೆ 12 ರಿಂದ 4 ಗಂಟೆವರೆಗೆ ಅವರು ಕೆಲಸ ಮಾಡುವಲ್ಲಿ 100–200 ಚೀಲಗಳಿಂದ ಸ್ಯಾಂಪಲ್ ತೆಗೆದು ತೇವಾಂಶ ಹಾಗು ಕಸದ ಪ್ರಮಾಣ ನಿರ್ಧರಿಸುವಲ್ಲಿ ಆಗುವ ವಿಳಂಬ, ಗ್ರೇಡರ್ಸ್‌ಗಳನ್ನು ಬೇಗ ವರ್ಗಾಯಿಸುವುದು ಎಲ್ಲ ಸಹಕಾರಗಳನ್ನು ಜಿಲ್ಲಾಡಳಿತ ಕೊಟ್ಟರೂ ನಿಗಮದವರು ತೋರುವ ಅಸಹಕಾರ, ಈ ನಡುವೆ ನಡೆಯುವ ಅವ್ಯವಹಾರಗಳು, (ಟ್ರಕ್ ಸಾಗಾಣಿಕೆ ಸ್ಲಿಪ್, ಟೆಸ್ಟಿಂಗ್ ನಮೂದನೆ ಇಲ್ಲದವಕ್ಕೂ ಸರ್ಟಿಫೈಡ್ ಮಾಲು ಎಂದು ಅನುಮತಿಸುವುದು ಇತ್ಯಾದಿ), ಭಾರತೀಯ ಆಹಾರ ನಿಗಮವು ದೇಶದಲ್ಲಿ 22 ಸಾವಿರ ಕೋಟಿ ರೂ ನಷ್ಟ ವ್ಯವಹಾರ ಮಾಡಿದರೂ ಶೇ 90 ಪಾಲು ಹರ್ಯಾಣ ಮತ್ತು ಪಂಜಾಬ್‌ಗಳಲ್ಲಿಗೇ ಮೀಸಲು ಮಾಡಿಕೊಂಡಿರುವುದು, 22 ಸಾವಿರ ಕೋಟಿ ವ್ಯವಹಾರದಲ್ಲಿ ನಮ್ಮ ರಾಜ್ಯದಲ್ಲಿ ಕೇವಲ 200 ಕೋಟಿ ರೂ. ವ್ಯವಹಾರ ಅಂದರೆ ಶೇ.1ಕ್ಕೂ ಕಡಿಮೆ ಇರುವ ವ್ಯವಹಾರ ಮಾಡಿರುವುದು, ಕನಿಷ್ಠ ಬೆಂಬಲ ಬೆಲೆಯನ್ನು ರಾಜ್ಯವಾಗಲಿ, ಕೇಂದ್ರವಾಗಲಿ ನಿರ್ಧರಿಸಿರುವಲ್ಲಿ ರೈತರಿಗೆ ನ್ಯಾಯ ಒದಗಿಲ್ಲದಿರುವುದು, ಗೋಡೌನ್‌ಗಳ ಕೊರತೆ, ರೈತರ ಸಾಲ ಇತ್ಯಾದಿ ವಿಷಯಗಳ ಬಗ್ಗೆ ಮಾತನಾಡಿದರು.

ನಂತರ ರೈತರು ಏಕೆ ಸಾಯುತ್ತಿದ್ದಾರೆ? ಎಂದು ಪ್ರಶ್ನೆ ಹಾಕಿಕೊಂಡು, ಬಹುತೇಕ ಅವರು ತಮ್ಮ ವೃತ್ತಿಯಲ್ಲಿ ವಿಶ್ವಾಸ ಕಳೆದುಕೊಳ್ಳುವಂಥ ಪರಿಸ್ಥಿತಿಗೆ ಬಂದಿದ್ದಾರೆ; ಸಾಲವೂ ಸಿಗುತ್ತಿಲ್ಲ. ಸಾಲ ಕೊಡುವವರೆಲ್ಲ ನಿಲ್ಲಿಸಿಬಿಟ್ಟಿದ್ದಾರೆ. ರೈತರಿಗಿರುವ ಭೂಮಿಯ ನಾಲ್ಕು ಪಟ್ಟು ಸಲ ಬೆಳೆದು ಹೋಗಿದೆ. ಜೀವನ ನಿರ್ವಹಣೆ ಹಾಗೂ ಅನೇಕ ಅಗತ್ಯಗಳಿಗೆ ಸಾಲ ಸಿಗದಂಥ ಪರಿಸ್ಥಿತಿ ಆಗಿದೆ. ಮಾರುಕಟ್ಟೆಯಲ್ಲಿ ಯಾವುದೇ ಚಟುವಟಿಕೆ ಇಲ್ಲ. ಅನೇಕ ವಿಧವಾದ ಆತಂಕಗಳು ಅಮರಿಕೊಂಡಿವೆ. ಮಾಲನ್ನು ಕೊಂಡು ಗೋಡೌನ್‌ಗಳಿಗೆ ಸಾಗಿಸಿ ನಮ್ಮಲ್ಲಿರುವ ಅನೇಕ ಪ್ರಾಮಾಣಿಕ ಅಧಿಕಾರಿಗಳ ಸೇವೆಯನ್ನು ಸೂಕ್ತವಾಗಿ ಬಳಸಿಕೊಂಡು ರೈತರ ಸಹಾಯಕ್ಕೆ ಬರಬೇಕು. ಎಂದೆಲ್ಲ ತಮ್ಮ ಅಭಿಪ್ರಾಯವನ್ನು ಮುಂದಿಟ್ಟರು.

**ಶ್ರೀ ಸಿ.ಬೈರೇಗೌಡರು** ಈ ಮಾತುಗಳನ್ನು ಬೆಂಬಲಿಸುತ್ತ, ರೈತನಿಗೆ ಬಂಡವಾಳ ಹೂಡಲು ಬ್ಯಾಂಕ್, ಸಹಕಾರ ಸಂಘಗಳಿಂದ, ಡಿಫಾಲ್ಟರ್ ಆಗಿರುವುದರಿಂದ ಸಾಲ ಸಿಗುತ್ತಿಲ್ಲ. ಖಾಸಗಿಯವರಲ್ಲಿ ದುಬಾರಿ ಬಡ್ಡಿ. ಆಸ್ತಿಯನ್ನು ಈಡು ಮಾಡಲು ಸಾಧ್ಯವಿಲ್ಲದಿರುವ ರೈತರ ಪರಿಸ್ಥಿತಿ ಪರಿಹಾರಕ್ಕೆ ಸರ್ಕಾರದ ಸಲಹೆಗಳೇನು? ಎಂದು ಪ್ರಶ್ನಿಸಿದರು. ಶ್ರೀ **ಬಿ.ಆರ್.ಯಾವಗಲ್** ಅವರು ರೈತರನ್ನು ಋಣಭಾರದಿಂದ

ಮುಕ್ತ ಮಾಡಿ ತಾಂತ್ರಿಕವಾಗಿ ಮತ್ತು ಹಣಕಾಸಿನ ದೃಷ್ಟಿಯಿಂದ ಹೊಸ ಮಾರ್ಗ ತೋರಿಸಬೇಕು. ಕಾಂಪೀಟ್ ಮಾಡಲು ಹಚ್ಚಿ ಉತ್ಪಾದನೆ ಹೆಚ್ಚು ಮಾಡಲು ಹಚ್ಚಿ, ಬೆಲೆಯನ್ನು ಕಟ್ಟಿಕೊಡಬೇಕು ಎಂದೆಲ್ಲ ಸಲಹೆಗಳನ್ನಿಟ್ಟು ತಮ್ಮ ಮಾತನ್ನು ಮುಕ್ತಾಯಗೊಳಿಸಿದರು.

7.3.2001ರ ವಿಧಾನ ಸಭಾಧಿವೇಶನದಲ್ಲಿ ಹತಾಶ ರೈತರ ಆತ್ಮಹತ್ಯೆಯ ಕುರಿತು **ಶ್ರೀ ಸಿ.ಬೈರೇಗೌಡರು** ಮಾತನಾಡುತ್ತ[*3] : ರೈತರ ಬದುಕು ಸ್ವಲ್ಪ ಮಟ್ಟಿಗಾದರೂ ಸುಧಾರಣೆ ಆಗದೆ ಆತ್ಮಹತ್ಯೆಗೆ ಕಾರಣವಾಗಿರುವುದು; ಧಾರವಾಡದಲ್ಲಿ ಅಗ್ರೋಕಮಿಟಿ ಮಾಡಿ, ಪ್ರಖ್ಯಾತ ಕೃಷಿ ವಿಜ್ಞಾನಿ ಡಾ॥ ದ್ವಾರಕನಾಥ್ ಅಧ್ಯಕ್ಷತೆಯ ಆಯೋಗ ಮಾಡಿರುವಲ್ಲಿ ಸೂಕ್ತತೆ, ಆಗಿರುವ ತೀರ್ಮಾನಗಳು ಕಾರ್ಯಗತವಾಗದಿರುವುದು; ಡಬ್ಲುಟಿಓದಿಂದಾಗಿ ಹೊರದೇಶದಿಂದ ಕೃಷ್ಯುತ್ಪನ್ನಗಳು ಆಮದಾಗಿ ನಮ್ಮ ಮಾರುಕಟ್ಟೆಯ ಮೇಲೆ ಆಗಿರುವ ಪರಿಣಾಮ; ಆದರೂ ಕಳೆದ ವರ್ಷದ 6.9 ಪರ್ಸೆಂಟ್ ಕೃಷಿ ಉತ್ಪನ್ನ ಆಮದು ಈ ವರ್ಷ 5.63 ಪರ್ಸೆಂಟ್‌ಗಿಳಿದಿರುವುದು; ಹೀಗಿದ್ದೂ ಬೆಲೆ ಕುಸಿತವಾಗುತ್ತಿರುವುದು; ಸುಮಾರು 8 ಮಿಲಿಯನ್ ಟನ್ ನಷ್ಟ ಆಹಾರ ಧಾನ್ಯದ ಉತ್ಪಾದನೆ ಕಡಿಮೆ ಆಗಿರುವುದು; ರೈತನ ಆತ್ಮಹತ್ಯೆ ನಡೆಯುತ್ತಿರುವುದು; ರೈತನು ಕೊಳ್ಳುವ ಕೃಷಿ ಪರಿಕರಗಳು, ಗೊಬ್ಬರ, ಔಷಧಿ, ಟ್ರಾಕ್ಟರ್, ಡೀಸೆಲ್‌ಗಳ ಬೆಲೆ 1989 ರಿಂದ 1998 ರ ಅವಧಿಯಲ್ಲಿ ಶೇ. 229 ರಷ್ಟು ಹೆಚ್ಚಿರುವುದು, ರೈತನು ಬೆಳೆವ ಉತ್ಪನ್ನಗಳ ಏರಿಕೆ ಕೇವಲ 199 ರಷ್ಟು ಆಗಿರುವುದು – ಈ ಕಾರಣಗಳಿಂದ ಬೆಲೆ ಕುಸಿತವಾಗುತ್ತಿದೆ ಎಂದೆಲ್ಲ ಹೇಳಿದರು.

**ಶ್ರೀ ಕೆ.ಎಚ್.ರಂಗನಾಥ್** ಅವರು, ಉತ್ಪನ್ನ ಕಡಿಮೆ ಇದ್ದು ಮಾರುಕಟ್ಟೆಯಲ್ಲಿ ಮಾಲು ಅಲಭ್ಯ, ಇದ್ದಾಗ ಬೆಲೆ ಹೆಚ್ಚುವ ಬದಲು ಕಡಿಮೆಯಾದರೆ ಕಾರಣ ಬಹುಮಟ್ಟಿಗೆ ವ್ಯಾಪಾರಸ್ಥರೇ ಆಗಿರಬೇಕು. ಅವರು ಬೆಲೆಗಳನ್ನು ಫ್ಲಕ್ಚುಯೇಟ್ ಮಾಡುತ್ತಿರಬೇಕು, ಎಂದರು. **ಶ್ರೀ ಕೆ.ಶ್ರೀನಿವಾಸಗೌಡ** ಅವರು ಮಾತನಾಡುತ್ತ, ಬೆಳೆಗಳಿಗೆ ಬೆಲೆ ಸಿಗದಿರಲು ಖಾಸಗಿಯವರು ಡಬ್ಲುಟಿಓ ಗುಮ್ಮವನ್ನು ಇಟ್ಟುಕೊಂಡು ಕಳೆದ ಒಂದು ವರ್ಷದಿಂದ ರೈತರ ಬೆಳೆಗಳನ್ನು ಸ್ಟಾಕ್ ಮಾಡಲಿಲ್ಲ. ಪೀಕ್‌ಸೀಸನ್‌ನಲ್ಲಿ ರೈತರು ತಮ್ಮ ಎಲ್ಲ ಬೆಳೆಗಳನ್ನು ಮಾರುಕಟ್ಟೆಗೆ ತಂದು ಹಾಕಲೇಬೇಕಾಯಿತು. **ಶ್ರೀ ಕಾಗೋಡು ತಿಮ್ಮಪ್ಪ** ಅವರು, ಆಮದಾಗಿ ಬಂದಿಲ್ಲದಿದ್ದರೂ ಆಲೂಗೆಡ್ಡೆ, ಟೊಮೊಟೋ ಬೆಲೆ ಇಳಿಯಲು ಕಾರಣವೇನು? ಅವುಗಳನ್ನು ಬೆಳೆದದ್ದು ಜಾಸ್ತಿ

*3 ವಿಧಾನಸಭಾ ನಡವಳಿಕೆಗಳು., ಸಂಪುಟ 2, (1–3) ಭಾಗ.I (7.3.2001), ಪು.186–89

ಆಗಿ ತಿನ್ನುವುದು ಕಡಿಮೆಯಾದ ಕಾರಣವಾಗಿರಬೇಕು ಎಂದರು. **ಶ್ರೀ ಕೆ.ಎಚ್.ರಂಗನಾಥ್** ಅವರು, ವರ್ತಕರು ಕೊಂಡಿಲ್ಲ ಎನ್ನುವುದು ಒಪ್ಪುವಂಥದ್ದಲ್ಲ. ಸಾಕಷ್ಟು ಮಾಲು ಇಲ್ಲ. ತಿನ್ನುವವರ ಸಂಖ್ಯೆಯೂ ಇದೆ. ಆಮದೂ ಸಹ ಕಡಿಮೆಯಾಗಿದೆ. ವ್ಯಾಪಾರಸ್ಥರೇ ಡಬ್ಲುಟಿಓ ಅನ್ನುವುದನ್ನು ಗಮನದಲ್ಲಿರಿಸಿಕೊಂಡು ಬೆಲೆ ಕುಸಿತಕ್ಕೆ ಕಾರಣರಾಗಿರಬೇಕು ಎಂದರು.

**ಶ್ರೀ ಸಿ.ಬೈರೇಗೌಡರು** ಮಾತು ಮುಂದುವರಿಸಿ, ಕಳೆದ ಒಂದು ವರ್ಷದಿಂದ ಯಾವ ಕೃಷಿ ಉತ್ಪನ್ನಕ್ಕೂ ಬೆಲೆ ಇಲ್ಲ. ಆಹಾರ ಉತ್ಪಾದನೆ 8 ದಶಲಕ್ಷ ಟನ್ ಕಡಿಮೆ ಆಗಿದೆ. ಬೇರೆ ಉತ್ಪನ್ನಗಳ ಉತ್ಪಾದನೆ ಕೂಡ ಕಡಿಮೆ ಆಗಿದೆ. ದೇಶದ ಜನ ಸಾಮಾನ್ಯರಲ್ಲಿ ಕೊಳ್ಳುವ ಶಕ್ತಿ ಕಡಿಮೆ ಆಗಿದೆ. ಇಂತಲ್ಲ ಬೇಡಿಕೆ ಕೂಡ ಕಡಿಮೆಯಾಗುತ್ತದೆ ಆಗ ಸಪ್ಲೈ ಅಂಡ್ ಡಿಮ್ಯಾಂಡ್ ಥಿಯರಿ ಕೂಡ ಆಪರೇಟ್ ಆಗುತ್ತದೆ. ಈ ಹೊತ್ತು ಇನ್‌ಫರ್ಮೇಷನ್ ಟೆಕ್ನಾಲಜಿ (ಐಟಿ)ಯನ್ನು ಕೃಷಿಯಲ್ಲಿ ಬಳಸಬೇಕಾದ ಅವಶ್ಯಕತೆ ಇದೆ. ಕೃಷಿ ತಂತ್ರಜ್ಞಾನದ ಅಳವಡಿಕೆ, ಕೃಷಿ ಮಾರುಕಟ್ಟೆಯ ವಿಚಾರದ ಮಾಹಿತಿ ರೈತನಿಗೆ ಇರಬೇಕಾದ ಬಹಳ ಇದೆ ಎಂದರು.

8.3.2001ರ ವಿಧಾನಸಭಾಧಿವೇಶನದಲ್ಲಿ[4] ಶ್ರೀ **ಸಿ.ಗುರುಸ್ವಾಮಿ** ಅವರು ಮಾತನಾಡಿ, ಬೆಳೆಗಳ ಬೆಲೆ ಕುಸಿತದ ಕಾರಣ, ರೈತರು, ಕೃಷಿಕಾರ್ಮಿಕರಿಗೆ ಒದಗಿರುವ ಸಂಕಷ್ಟ, ಬೇಸಾಯಕ್ಕೆ ಖರ್ಚು ಮಾಡಿರುವ ಮೊಬಲಗಿನ ನಷ್ಟ, ಕಾಡು ಪ್ರಾಣಿಗಳಿಂದ ಫಸಲು ನಾಶ, ಮಳೆಯಿಂದಾದ ಹಾನಿ, ಒದಗಿದ ಸಂಕಟ, ಈ ತೊಂದರೆಗಳಿಂದಾಗಿ ರೈತರ ಆತ್ಮಹತ್ಯೆ, ರೈತರ ಸಮಸ್ಯೆಗಳಿಗೆ ಪರಿಹಾರ ಇಲ್ಲದಿರುವುದು, ರೈತರ ಜವಾಬ್ದಾರಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಮೇಲಿರುವುದು, ಈ ಬಗ್ಗೆ ಸಂಬಂಧಪಟ್ಟ ಮಂತ್ರಿಗಳ ಹೇಳಿಕೆಯ ಅಗತ್ಯ, ಮೆಕ್ಕೆಜೋಳಕ್ಕೆ ಬೆಂಬಲ ನೀಡಿ ಖರೀದಿ, ತೆಂಗಿನ ಕಾಯಿ ಬೆಲೆ ಕುಸಿತ ಹಾಗು ತೆಂಗಿಗೆ ತಗುಲಿರುವ ನುಸಿರೋಗ ಕಂಬಳಿ ಹುಳುವಿನ ರೋಗ ಕಪ್ಪುತಲೆ ಹುಳುವಿನ ರೋಗ, ಪ್ರಮುಖ ಬೆಳೆ ಅರಿಶಿನ (ಬೆಲೆ ರೂ. 1300), ಬೆಲ್ಲದ ಬೆಲೆ (700–800 ರೂ)ಯಿಂದಾಗಿ ಇವುಗಳನ್ನು ಕೊಳ್ಳುವವರಿಲ್ಲದಿರುವುದು, ಡಬ್ಲುಟಿಓದ ಇಂಪ್ಲಿಕೇಷನ್ ರೈತರು ಬೆಳೆದ ಪದಾರ್ಥಗಳ ಮೇಲೆ ಬೀರಿರುವ ಪರಿಣಾಮ, ಎಪಿಎಂಸಿ ಯಲ್ಲಿ ರೈತರಿಗೆ ಮಾತ್ರ ಬಡ್ಡಿ ವಸೂಲಿಗೆ ರಿಯಾಯಿತಿ ಕೊಡದಿರುವುದು, ಎಕ್ಸೈಸ್, ಕೋಕೋ–ಕೋಲಾದವರಿಗೆ ರಿಯಾಯಿತಿ ನೀಡಿರುವುದು, ಕೋ ಆಪರೇಟೀವ್ ಲೈನ್‌ನಲ್ಲಿ ಸಾಲವನ್ನು ವೇವ್ ಮಾಡುವ ಅಧಿಕಾರವಿದ್ದೂ ಚಲಾಯಿಸದೆ ಇರುವಲ್ಲಿ ರೈತರಿಗೆ ಆಗುತ್ತಿರುವ ಹಿಂಸೆ, ಸಾಲಗಳ

*4. ವಿಧಾನಸಭಾ ನಡವಳಿಕೆಗಳು., ಸಂಪುಟ 2 (1–3), ಭಾಗ-I, 8.3.2001, ಪು 477–509

ಅವಧಿಯನ್ನು ಪರಿಷ್ಕರಿಸುವುದು, ಲೋನ್ ಅನ್ನು ವೇವ್ ಮಾಡುವುದು, ಹಾಗೂ ಚಾಮರಾಜನಗರ ಜಿಲ್ಲೆಗೆ 1 ಕೋಟಿ 25 ಲಕ್ಷ ರೂ.ಗಳನ್ನು ಸರ್ಕಾರ ನೀಡಿರುವುದು; ಇದರಲ್ಲಿ ರೈತರ ಬೆಳೆ ಹಾನಿ, ಬೆಳೆ ಬೆಲೆ ಕುಸಿತ, ಮಳೆಯಿಂದ ಬೆಳೆ ಹಾನಿ ಆಗಿರುವುದು–ಈ ಸಂಬಂಧದ ಪರಿಹಾರಕ್ಕೆ ರೈತರಿಗೆ ಏನೂ ಹಣ ನೀಡಿಲ್ಲ. ವಿದ್ಯುತ್ತಿನ ಕೊರತೆ ಕೂಡ ಬಹಳ ಆಗಿದೆ. ಹೀಗಾಗಿ ರೈತರಿಗೆ ತುರ್ತಾಗಿ ಸಹಾಯ ಮಾಡಬೇಕಿದೆ ಎಂದೆಲ್ಲ ಹೇಳಿ ಮಾತು ಮುಗಿಸಿದರು.

**ಶ್ರೀ ಶ್ರೀನಿವಾಸಗೌಡ** ಅವರು ಮಾತನಾಡಿ : ಸ್ವಾತಂತ್ರ್ಯಾನಂತರದಲ್ಲಿ ಆಹಾರ ಧಾನ್ಯಗಳಂಥ ಬೆಳೆಗಳು ಜಾಸ್ತಿಯಾಗಬೇಕೆಂದಾಯಿತು. ಬೆಳೆಯುತ್ತಿದ್ದ ಹಿಂದಿನ ತಳಿಗಳನ್ನು ಬದಲಿಸಿ ಆಹಾರಭಾವ ನೀಗಿಸಬೇಕೆಂದು ಹೊಸ ತಳಿ ಬಳಸಿ ಬೆಳೆಯಲಾಗುತ್ತಿದೆ. ಸುಮಾರು 53 ವರ್ಷಗಳ ಕಾಲ ಇನ್‌ಪುಟ್ಸ್ ಮೇಲೆ ಹೆಚ್ಚು ಗಮನವನ್ನು ಎಲ್ಲಾ ಸರ್ಕಾರಗಳು ಕೊಟ್ಟ ಕಾರಣ ಔಟ್‌ಪುಟ್ ಬಗ್ಗೆ ಸರಿಯಾದ ಮಾಹಿತಿ, ಮಾರ್ಗದರ್ಶನ ಇಲ್ಲವಾಗಿದೆ. ಬೆಳೆಗಳಿಗೆ ಏನು ಬೆಲೆ ಕೊಡಬೇಕು ಎಂಬ ಬಗ್ಗೆಯೂ ಚಿಂತನೆ ಮಾಡಲಿಲ್ಲ. ಮಾನ್ಯ **ರಾಜ್ಯಪಾಲ ಧರ್ಮವೀರ** ಅವರು **ಕೋಲಾರ** ತಾಲೂಕಿನ **ಜನಪನಹಳ್ಳಿ ಗ್ರಾಮದ ಹರಿಜನ ರೈತನ ಮನೆಗೆ ಹೋಗಿ** ಕತ್ತಾಳೆ ಗೆಡ್ಡೆ **ಬೇಯಿಸಿಕೊಂಡು ಅವನು ಜೀವನ** ಮಾಡುತ್ತಿದ್ದ ಬಗ್ಗೆ ಕಂಡದ್ದನ್ನು ಪತ್ರಿಕೆಯಲ್ಲಿ ಪ್ರಸಾರ **ಮಾಡಲಾಗಿತ್ತು**. ನಮ್ಮ ಬಡ ರೈತರ ಪರಿಸ್ಥಿತಿ ಇಂದೂ ಹೀಗೆಯೇ ಇದೆ. ಆಂಧ್ರ, ಕರ್ನಾಟಕದಲ್ಲಿ ಸಾಲ ಮಾಡಿ ಬೆಳೆದರೂ ಬೆಳೆ ಸಿಗಲಿಲ್ಲವೆಂದು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಬರಪೀಡಿತ ಕೋಲಾರ ಜಿಲ್ಲೆಯಲ್ಲಿ **ಕತ್ತಾಳೆಗಡ್ಡೆ ತಿಂದು ಜೀವನ ಮಾಡಿದ್ದರೂ ಆತ್ಮಹತ್ಯೆ ಮಾಡಿಕೊಂಡಿಲ್ಲ**. ಮುಸುಕಿನ ಜೋಳ, ಭತ್ತ, ಆಲೂಗೆಡ್ಡೆ, ತೊಗರಿ ಬೆಳೆಯನ್ನು ಖರೀದಿ ಮಾಡಿರುವ ಬಗ್ಗೆ ಸಚಿವರ ವರದಿಯಲ್ಲಿ ಹೇಳಿರುವುದಕ್ಕೂ, ರಾಜ್ಯಪಾಲರ ಭಾಷಣದಲ್ಲಿ ಹೇಳಿರುವುದಕ್ಕೂ ಬಹಳ ವ್ಯತ್ಯಾಸವಿದೆ, ಎಂದರು. ಸಚಿವ ಶ್ರೀ **ಡಿ.ಬಿ.ಇನಾಂದಾರ್** ಅವರು; ಮೆಕ್ಕೆ ಜೋಳ, ಸೆಜ್ಜೆ, ಹಾಗೂ ರಾಗಿಯನ್ನು ಖರೀದಿ ಮಾಡಿದ ಬಗ್ಗೆ ಹೇಳುವಲ್ಲಿ ಅಗತ್ಯವಿರುವೆಡೆ ಬೆಂಬಲ ಬೆಲೆಯಲ್ಲಿ ಖರೀದಿ ಕೇಂದ್ರಗಳನ್ನು ತೆರೆಯಲಾಗಿದೆ ಎಂದರು, ಹಾಗೂ ವಿವರಗಳನ್ನು ನೀಡಿದರು. ಶ್ರೀ ಕೆ.ಎಚ್.ಹನುಮಂತೇಗೌಡರು ಹಾಸನ ಸಂತೆಯಲ್ಲಿ ಸಾವಿರಾರು ಕ್ವಿಂಟಾಲ್ ಜೋಳ ಬರುವಲ್ಲಿ ಖರೀದಿ ಕೇಂದ್ರ ಏಕೆ ತೆರೆದಿಲ್ಲ ಎಂದುದಕ್ಕೆ, ಟಾಸ್ಕ್‌ಫೋರ್ಸ್‌ನಿಂದ ಶಿಫಾರಸ್ಸು ಬಂದ ಕಡೆ ಮಾತ್ರ ತೆರೆಯಲಾಗುತ್ತದೆ ಎಂದು ಇನಾಂದಾರ್ ತಿಳಿಸಿದರು. **ಶ್ರೀ ಕೆ.ಶ್ರೀನಿವಾಸಗೌಡ** ಅವರು, ಹತ್ತಿ ಬೆಳೆಯುವ ರೈತನಿಗೆ, ಹತ್ತಿಯನ್ನು ದಳ್ಳಾಳಿಗೆ

ಕೊಟ್ಟರೂ ಅವನೂ ಹಣ ಕೊಡಲು ತಿಂಗಳಾನುಗಟ್ಟಲೆ ವಿಳಂಬ ಮಾಡುವುದು, ಇದರಿಂದ 6 ಸಾವಿರ ಹೆಕ್ಟೇರ್ ಹತ್ತಿ ಬೆಳೆ ಇದ್ದ ಭೂಮಿ 2 1/2 ಸಾವಿರ ಹೆಕ್ಟೇರ್‌ಗೆ ಇಳಿದಿರುವುದು, ಎಲ್ಲರೂ ಮೈಜ್, ಆಲೂಗೆಡ್ಡೆ ಬೆಳೆದು ಈ ಪರಿಸ್ಥಿತಿ ತಂದುಕೊಂಡಿರುವುದು, ಗೋಡೌನ್ ಇಲ್ಲವೆಂದು ಖರೀದಿ ನಿಲ್ಲಿಸಿರುವುದರ ಕುರಿತು ಹೇಳಿದರು. ಶ್ರೀ ಡಿ.ಬಿ.ಇನಾಂದಾರ್, ಧಾನ್ಯ ಇಡಲು ಗೋಡೌನ್ ಹುಡುಕತಕ್ಕ ಪರಿಸ್ಥಿತಿ ಬಂದಿದೆ ಎಂದರು. ಶ್ರೀ ಶ್ರೀನಿವಾಸಗೌಡ ಅವರು. ಮುಕ್ಕೆಜೋಳ, ಆಲೂಗೆಡ್ಡೆಗೆ ಬೇಗ ಹುಳು ಬೀಳದಂತೆ ಫ್ಯೂಮಿಗೇಷನ್ ಅನ್ನು ಒಂದು ವಾರದಲ್ಲಿ ಮಾಡಿ. ಬರೀ ಅಧಿಕಾರಿಗಳು ಹೇಳಿದ್ದೇ ಕಾನೂನು ಅಂತ ಆಗಬಾರದು. ಇನ್ನು ರೈತರಿಗೆ ಪ್ರಪೋಜಿಷನ್ ಗೊಬ್ಬರ ಕೊಡಲು, ಅದನ್ನು ಮಾಡಿಕೊಡಲು ಕೆಲವು ಗೊಬ್ಬರ ಕಂಪೆನಿಗಳಿಗೆ ಟೆಂಡರ್ ಕೊಡಲಾಗಿದೆ. ಕೆಲವನ್ನು ಗೊಬ್ಬರ ಸ್ಟೋರ್ ಮಾಡಲು ನೀಡಿದೆ. ಸಿಡಬ್ಲುಸಿಯವರು ಅರ್ಜಿ ಹಾಕಿದ್ದು, ಬೇರೆಯವರು ಪಾಲ್ಗೊಳ್ಳದ ಕಾರಣ ಅವರಿಗೆ ನೀಡಲಾಗಿದೆ ಎಂದು ನುಡಿದರು.

**ಶ್ರೀ ಬಿ.ಆರ್.ಯಾವಗಲ್** ಅವರು, ಗೋಡೌನ್‌ಗಳು ಬೇಕೆಂದು ಒತ್ತಾಯ ಗಲಾಟೆ ನಡೆದಿದೆ. ಎಲ್ಲೆಡೆ ಪ್ರೈವೇಟ್ ಗೋಡೌನ್‌ಗಳನ್ನು ಒತ್ತಾಯದಿಂದ ಪಡೆದು ಬಳಕೆ ಮಾಡಿದ ರಾಜ್ಯ ಮಟ್ಟದ ಸಂಘಟನೆ ಇರುವಲ್ಲಿ, ಹುಬ್ಬಳ್ಳಿ ಗೋಡೌನ್ ಅನ್ನು ಬೇರೆಯವರಿಗೆ ಲೀಸ್ ಕೊಡಲು ತಯಾರಿ ಮಾಡಿಕೊಂಡಿರುವಲ್ಲಿ ಜಾಹೀರಾತು ಮಾಡಿಕೊಂಡಿರುವಲ್ಲಿ ಆ ಬಗ್ಗೆ ಏನು ಹೇಳುತ್ತೀರಿ ಎಂದರು. ನಂತರ ಶ್ರೀ ಕೆ. ಶ್ರೀನಿವಾಸಗೌಡರು ರೈತರಿಗೆ ಪ್ರಿಪೋಜಿಷನ್ ಗೊಬ್ಬರ ಮಾಡಲು ಕೊಟ್ಟಿರುವ ಬಗ್ಗೆ, ಶ್ರೀ ಬಿ.ಆರ್. ಯಾವಗಲ್ ಅವರು ಗೊಬ್ಬರವನ್ನು ಓಪನ್ ಗೋಡೌನ್‌ನಲ್ಲಿ ಇಟ್ಟು, ಕಾಳು ಕಡ್ಡಿಗಳಿಗೆ ರಕ್ಷಣೆ ಕೊಡುವ ಬಗ್ಗೆ, ಶ್ರೀ ಡಿ.ಟಿ. ಇನಾಂದಾರ್ ಅವರು ಸರ್ಕಾರಿ ಮತ್ತು ಖಾಸಗಿ ಗೋಡೌನ್‌ಗಳಲ್ಲಿ ಮೆಕ್ಕೆ ಜೋಳವನ್ನು ಇಡುವ ವ್ಯವಸ್ಥೆಯ ಬಗ್ಗೆ, ಶ್ರೀ ಹಂಪನಗೌಡರು, ರೈತರ ಗೋಡೌನ್‌ಗಳಲ್ಲಿ ಆಂಧ್ರ ಸರ್ಕಾರ ಭತ್ತ ಹಾಗೂ ಧಾನ್ಯಗಳನ್ನು ಇಟ್ಟಿರುವ ಬಗ್ಗೆ ಹೇಳಿದರು. ಶ್ರೀ ಡಿ.ಬಿ.ಇನಾಂದಾರ್ ಅವರು ಮಾತು ಮುಂದುವರಿಸಿ ಎಫ್.ಸಿ.ಐ ನವರು 3 ತಿಂಗಳ ಸ್ಟಾಕ್ ಅನ್ನು ನಮ್ಮ ರಾಜ್ಯದ ಗೋಡೌನ್‌ಗಳಲ್ಲಿ ಇಟ್ಟಿರುವ ಬಗ್ಗೆ, ಶ್ರೀ ಸಿ.ಬೈರೇಗೌಡರು, ಗೋಡೌನ್‌ಗಳನ್ನು ಸರ್ಕಾರ ಬಳಸಿಕೊಳ್ಳದಿರುವುದು, ಆಡಳಿತ ಪಕ್ಷದ ಸದಸ್ಯರೇ ಬಾವಿಗೆ ಬಂದು ಧರಣಿ ಮಾಡುವುದು ಈ ಕುರಿತೆಲ್ಲ ಹೇಳಿದರು. ಶ್ರೀ ಕೆ.ಶ್ರೀನಿವಾಸ ಗೌಡರು ಕೇರಳ ಮತ್ತು ತಮಿಳುನಾಡುಗಳಿಂದ ಕೇಂದ್ರ ಸರ್ಕಾರವು ನಫೆಡ್

ಮೂಲಕ ಮುನ್ನೂರು ಕೋಟಿಗೆಳಷ್ಟು, ಕರ್ನಾಟಕದಿಂದ ಕೇವಲ 14 ಕೋಟಿ ರೂ.ನಷ್ಟು ಮಾತ್ರ ಕೊಂಡಿರುವುದು, ನಮ್ಮ ರೈತರಿಗಾದ ಅನ್ಯಾಯ; ರಾಜ್ಯ ಸರ್ಕಾರ ಆವರ್ತ ನಿಧಿಯನ್ನು ಹೆಚ್ಚಿಸದೆ ರೈತರಿಗೆ ಕಷ್ಟವಾಗಿರುವುದು. ಟೊಮೊಟೋ, ಹಾಗೂ ಇತರೆ ತರಕಾರಿಗಳಿಗೆ ಸರಿಯಾದ ರೇಟ್ ಕೊಟ್ಟಿಲ್ಲದಿರುವುದು, ಹಾಗೂ ರೈತರಿಗೆ ಬಡ್ಡಿಯ ಮಾಫಿಯನ್ನು ಹೆಂಡದ ದೊರೆಗಳಿಗೆ ಮಾಡಿದಂತೆ, ಮಾಡಿರುವುದು, ರೈತರ ಬೆಳೆ ಪದಾರ್ಥಗಳಿಗೆ ಇಡಲು ಗೋಡೌನ್ ರಿಸರ್ವ್ ಮಾಡದಿರುವುದು, ವೈಜ್ಞಾನಿಕವಾಗಿ ಬೆಲೆಯನ್ನು ಬೆಳೆಗಳಿಗೆ ಕಟ್ಟುವ ಕೆಲಸ ಮಾಡಬೇಕಾಗಿರುವುದು, ರೈತರ ಕಷ್ಟದಲ್ಲಿ ಎಲ್ಲರೂ ಪಾಲ್ಗೊಳ್ಳಬೇಕಿರುವುದು ಕುರಿತೆಲ್ಲ ಹೇಳಿ ಮಾತು ಮುಗಿಸಿದರು.

**ಶ್ರೀ ಚೆಲುವರಾಯಸ್ವಾಮಿ** ಅವರು, ಎಂಟು ಜನ ರೈತರು ಆತ್ಮಹತ್ಯೆ ಮಾಡಿಕೊಂಡಿರುವಲ್ಲಿ ಸರ್ಕಾರ ಮಾಡಿರುವ ಚಿಂತನೆ ಏನು ಎಂಬುದು ತಿಳಿಯಬೇಕು. ಬೆಳೆಗಳ ಬೆಲೆ ಕುಸಿತ, ಗೋಡೌನ್ ಸಮಸ್ಯೆ, ದೀರ್ಘಾವಧಿ ಸಾಲವಾಗಿ ಅಲ್ಪಾವಧಿ ಸಾಲ ಪರಿವರ್ತನೆ ರೈತರ ಸಾಲ ಮನ್ನಾದ ಬಗ್ಗೆ ನಿರ್ಲಕ್ಷ್ಯ, ಪಂಪ್‌ಸೆಟ್ಟಿಗೆ ಸಾಲ ನೀಡಿಕೆಯಲ್ಲಿ ವಿಳಂಬ ಹಾಗೂ ಲೈಸನ್ಸ್ ಅಲಭ್ಯತೆ, ತೆಂಗಿಗೆ ಬರುವ ನುಸಿರೋಗದ ಸಮಸ್ಯೆ, ರೈತರ ಬಗ್ಗೆ ಚರ್ಚೆ ಆಗುವಲ್ಲಿ ಅಗತ್ಯವಿರುವ ಮಂತ್ರಿಗಳ ಹಾಜರಿಗೆ ಕೊರತೆ, ಬೆಲೆ ಕುಸಿತದ ಕಾರಣ ನೇಣುಹಾಕಿಕೊಳ್ಳುತ್ತಿರುವ ರೈತವೃಂದ, ಇತ್ಯಾದಿ ವಿಷಯಗಳ ಮೇಲೆ ಮಾತನಾಡಿ, ಮಾತು ಮುಗಿಸಿದರು.

**ಶ್ರೀ ಕರಡಿ ಸಂಗಣ್ಣ** ಅವರು, ರೈತರು ಬೆಳೆದ ಬೆಳೆಗೆ ಬೆಲೆ ಇಲ್ಲದಿರುವುದು, ಮಾರುಕಟ್ಟೆಯ ಕೊರತೆ, ಕೃಷಿ ಉತ್ಪನ್ನದ ಖರ್ಚು, ಅಸಮರ್ಪಕ ವಿದ್ಯುತ್ ಸರಬರಾಜು ರೈತರಿಗೆ ಪೂರ್ಣ ವಿದ್ಯುತ್‌ನ ಅಲಭ್ಯತೆ, ವಿದ್ಯುತ್ ದರ ಏರಿಕೆ, ಕೃಷಿ ಸಾಲದ ವಸೂಲಾತಿ, ಖಾಸಗಿ ಸೀಡ್ಸ್ ಕಂಪೆನಿಗಳ ಹಾವಳಿ, ಇತ್ಯಾದಿಗಳ ಕಾರಣ ಮಾನಸಿಕ ಮತ್ತು ದೈಹಿಕ ದುರ್ಬಲತೆಗೆ ಈಡಾಗಿ ರೈತರು ಆತ್ಮಹತ್ಯೆಯ ಮಾರ್ಗ ಹಿಡಿದಿರುವುದು, ಜಾಗತೀಕರಣಗಳ ಹಿನ್ನೆಲೆಯಲ್ಲಿ ಹೊರದೇಶದವರೊಡನೆ ಸ್ಪರ್ಧಿಸಲು ಸಾಧ್ಯವಾಗುವುದಿಲ್ಲ ಎಂದು ರೈತರ ಆತಂಕ, ಖಾಸಗಿ ದಳ್ಳಾಳಿಗಳು ರೈತರ ಉತ್ಪನ್ನಗಳನ್ನು ಖರೀದಿಸದಿರುವುದು, ಅಂತಾಗಿ ಖರೀದಿ ಕೇಂದ್ರಗಳನ್ನು ಸರ್ಕಾರ ತೆಗೆಯಬೇಕಾದ ತುರ್ತು, ಈ ಬಗ್ಗೆ 30.10.2000ರಲ್ಲಿ ಆರಂಭವಾಗ ರೈತ ಚಳುವಳಿ, ತತ್ಫಲವಾಗಿ ಖರೀದಿ ಕೇಂದ್ರ ತೆರೆಯಲು ಸರ್ಕಾರದ ನಿರ್ಣಯ, ರೈತರ ಮೇಲಿನ ಚಳುವಳಿ ಮೊಕದ್ದಮೆಗಳ ವಾಪಸಾತಿ, ಖಾಸಗಿ ಕಂಪೆನಿಗಳಿಂದ

ಬೀಜ ಖರೀದಿಸಿದ 9 ಜನ ರೈತರು ರಾಜ್ಯದಲ್ಲಿ ಮಾಡಿಕೊಂಡಿರುವ ಆತ್ಮಹತ್ಯೆ, ರೈತರ ಕುಟುಂಬಗಳಿಗೆ ಸರ್ಕಾರ ನೀಡಿರುವ ಲಕ್ಷ ರೂ.ಗಳ ಪರಿಹಾರ, ಕಾವೇರಿ ಕಾಟನ್ ಸೀಡ್ಸ್ ಕಂಪೆನಿಯವರು ಆತ್ಮಹತ್ಯೆ ಮಾಡಿಕೊಂಡಿರುವ ರೈತರಿಗೆ ಮೊದಲು ಬಿತ್ತನೆಗೆ ಬರೀ **ಫೀಮೇಲ್ ಬೀಜ** ಮಾತ್ರ ಸರಬರಾಜು ಮಾಡಿರುವುದು, ರೈತರು ಆ ಬಗ್ಗೆ ಸರಬರಾಜು ಮಾಡಿದ ಕಂಪೆನಿಯವರನ್ನು ಸಂಪರ್ಕಿಸಿದಾಗ, ಕಂಪೆನಿ ತಪೊಪ್ಪಿಕೊಂಡು ರೈತನಿಗೆ ಕೇವಲ 10 ಸಾವಿರ ರೂ ನೀಡಿರುವುದು, ಪಿಎಲ್‌ಡಿ ಬ್ಯಾಂಕ್ ಸಾಲ ಹಾಗು ಇತರರಲ್ಲಿಯ ಸಾಲ ತೀರಿಸಬೇಕಾದ ಒತ್ತಡಕ್ಕೆ ಒಳಗಾಗಿ ವಿಷ ಸೇವನೆ ಮಾಡಿ ಆತ್ಮಹತ್ಯೆ ಮಾಡಿಕೊಂಡಿರುವುದು, ಗೋದಾಮು ವ್ಯವಸ್ಥೆಯ ಕೊರತೆಯ ಕಾರಣ ಖರೀದಿ ಮಾಡದೆ ನೀಡುತ್ತಿರುವ ಸರ್ಕಾರದ ಹೇಳಿಕೆ ಈ ಕುರಿತೆಲ್ಲ ವಿಚಾರ ಮಂಡನೆ ಮಾಡಿದರು.

**ಶ್ರೀ ಡಿ.ಬಿ.ಇನಾಂದಾರ್** ಅವರು, ರೈತರ ಎಲ್ಲ ಕೃಷಿ ಉತ್ಪನ್ನಗಳನ್ನು ಖರೀದಿಸುವ ಗೋದಾಮು ವ್ಯವಸ್ಥೆ ಕುರಿತು ಹೇಳಿದರು.

ಶ್ರೀ ಕರಡಿಸಂಗಣ್ಣನವರು, ಮಾತು ಮುಂದುವರಿಸಿ ಅಬ್ಕಾರಿ ಗುತ್ತಿಗೆದಾರರಿಂದ ಬರಬೇಕಾದ ಹಣವನ್ನು ಸರ್ಕಾರ ಮನ್ನಾ ಮಾಡಿದಂತೆ, ರೈತರ ಸಾಲದ ಮೇಲಿನ ಬಡ್ಡಿ ಮತ್ತು ಅಸಲು ಸಾಲ ಮನ್ನಾ ಮಾಡುವುದರಿಂದ ರೈತರಿಗೆ ಅನುಕೂಲಿಸುವುದು, ರೈತರ ಆಸ್ತಿಯನ್ನೆಲ್ಲ ಮುಟ್ಟುಗೋಲು ಹಾಕಿಕೊಂಡರೂ, ಸಾಲ ತೀರಿಸಲಾಗದಂಥ ಅವರ ಸ್ಥಿತಿ, ಬೆಳೆಗಳಿಗೆ ಬೆಲೆ ಸಿಗದ ಅವರ ಕೊರಗು, ಹಿಂದೆ ತೋಟಗಾರಿಕೆ ಬೆಳೆಗಳಿಗೆ ತುಂತುರು ನೀರಾವರಿಗೆ ಸರ್ಕಾರ ಕೊಡುತ್ತಿದ್ದ ಸಬ್ಸಿಡಿ, ಹಣ್ಣು ಸಂಸ್ಕರಣಾ ಕೇಂದ್ರ, ಶೈತ್ಯಾಗಾರದ ಅಗತ್ಯ, ಬೆಳೆಗೆ ಮಾರುಕಟ್ಟೆ ವ್ಯವಸ್ಥೆ, ಕೊಪ್ಪಳದಲ್ಲಿ ರೈತರು ಬೆಳೆಗಳಿಗೆ ಒಳ್ಳೆಯ ಬೆಲೆಗಾಗಿ ಕೇಳಿ ಮಾಡಿದ ಪ್ರತಿಭಟನೆ, ರೈತರ ಮೇಲೆ ಹಾಕಿರುವ ಮೊಕದ್ದಮೆಗಳ ವಾಪಸಾತಿ ಕುರಿತೆಲ್ಲ ಮಾತನಾಡಿದರು.

**ಶ್ರೀ ಜಿ.ಎಸ್.ಪಾಟೀಲ್** ಅವರು, ಸರ್ಕಾರ 25 ಲಕ್ಷ ಕ್ವಿಂಟಾಲ್‌ಗೂ ಮೀರಿ ಮೆಕ್ಕೆಜೋಳವನ್ನು ಖರೀದಿ ಮಾಡಿದ ಸ್ವಾಗತಾರ್ಹ ನಡೆ, ರೈತರ ಬೆಳೆಗೆ ಕೆಲವು ತಿಂಗಳ ಕಾಲ ಸಂರಕ್ಷಣೆ ಮಾಡುವ ವ್ಯವಸ್ಥೆ, ನಬಾರ್ಡ್ ನವರು ಶೇ.7 ರ ಬಡ್ಡಿಯಂತೆ ಸಾಲ ನೀಡಿದರೂ, ರೈತರಿಗೆ ಮುಟ್ಟುವಲ್ಲಿ ಬಡ್ಡಿಯ ದರ ಶೇ. 15ರಿಂದ 17ಕ್ಕೆ ಏರುವ ಪರಿಸ್ಥಿತಿ, ನಬಾರ್ಡ್‌ನವರು ಸಾಲವನ್ನು ಕೊಡುವ ಬಡ್ಡಿ ದರದಲ್ಲಿಯೇ ಗ್ರಾಮ ಸಹಕಾರಿ ಸಂಘಗಳ ಮೂಲಕ ನೇರವಾಗಿ ರೈತರಿಗೆ ಕೊಟ್ಟು

ಅನುಕೂಲಿಸುವುದು, ಮೆಕ್ಕೆ ಜೋಳದ ರಫ್ತುವಿಗೆ ನಿರ್ಬಂಧದ ತೆರವು, ರೈತರಿಗೆ ಸಂಕಷ್ಟ ಪರಿಹಾರ– ಹೀಗೆಲ್ಲ ಸಮಸ್ಯೆ ಹಾಗೂ ಪರಿಹಾರದ ಬಗ್ಗೆ ತಿಳಿಸಿದರು.

**ಶ್ರೀ ಪ್ರಭಾಕರ ಬಂಗೇರಿ** ಅವರು ಕೃಷಿ ಉತ್ಪನ್ನಗಳ ಬೆಲೆ ಕುಸಿತದ ತಡೆಗೆ ಸಮರ್ಪಕ ವ್ಯವಸ್ಥೆ ಸರ್ಕಾರದ ವತಿಯಿಂದ ಇನ್ನೂ ಆಗದಿರುವುದು, ಸಾಕಷ್ಟು ಗೋಡೌನ್‌ಗಳಿದ್ದರೂ ಅಗತ್ಯವಾದ ಖರೀದಿ ಕೇಂದ್ರಗಳನ್ನು ತೆರೆದಿಲ್ಲದಿರುವುದು, ಮಾರುಕಟ್ಟೆ ಸಮಿತಿಗಳು ರೈತರಿಂದ ವಸೂಲು ಮಾಡಿದ ಹಣದಿಂದ ಶೇಕಡ 1 ರಷ್ಟು ಆವರ್ತ ನಿಧಿಗೆ ನೀಡಿರುವುದು, ರಾಜ್ಯ ಸರ್ಕಾರದ ಪಾಲು, ತೋಟಗಾರಿಕೆ ಉತ್ಪನ್ನಗಳ ಶೀತಲೀಕರಣ ದಾಸ್ತಾನು ವ್ಯವಸ್ಥೆಯ ಬಗ್ಗೆ ಸರ್ಕಾರ ನೀಡಬೇಕಿರುವ ಮಾಹಿತಿ, ರೈತರು ಸದ್ಯ ಸಹಕಾರ ಸಂಘಗಳಲ್ಲಿ ತಮ್ಮ ಉತ್ಪನ್ನಗಳನ್ನು ಇಟ್ಟಿದ್ದು, ಶೇ.75 ರಷ್ಟು ಹಣವನ್ನು ತೆಗೆದುಕೊಂಡಿರುವುದು, ಸಾಲ ಮರು ಪಾವತಿ ಮಾಡಲಾಗದೆ, ಆ ಬಗ್ಗೆ ನೋಟೀಸ್ ಪಡೆಯುತ್ತಿರುವುದು, ಅಡವಿಟ್ಟ ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡಿದರು ಸಾಲ ತೀರಿಸುವುದಿರಲಿ, ಬಡ್ಡಿಯನ್ನೂ ತೀರಿಸಲಾಗಿಲ್ಲದಿರುವುದು, ರೈತನ ಜೀವನಕ್ಕೆ ಧಕ್ಕೆಯಾಗುವಂಥ ಪರಿಸ್ಥಿತಿ, ಅರ್ಥಾತ್ ಆತ್ಮಹತ್ಯೆ ಮಾಡಿಕೊಳ್ಳುವ ಪರಿಸ್ಥಿತಿ ಉಂಟಾಗಿರುವುದು, ಸಾಲ ವಸೂಲಾತಿಗೆ ಹೋದಾಗ ರೈತನಿಗೆ ಈ ಆತ್ಮಹತ್ಯೆಯ ಪರಿಸ್ಥಿತಿ ಒದಗುತ್ತಿರುವುದು, ಬಡ್ಡಿ ಮತ್ತು ಸುಸ್ತಿ ಬಡ್ಡಿ ಮನ್ನಾ ಮಾಡಬೇಕಾದ ಅಗತ್ಯ ಕುರಿತೆಲ್ಲ ಮಾತನಾಡಿದರು.

**ವಿಷಯ 3:** ಕೋಲಾರ ತಾ. ಕಲ್ಲಂದೂರು ಹಳ್ಳಿ ರೈತನ ಆತ್ಮಹತ್ಯೆ

1.8.2001ರ ವಿಧಾನಪರಿಷತ್ತಿನ ಅಧಿವೇಶನದಲ್ಲಿ, **ಶ್ರೀ.ವಿ.ಆರ್.ಸುದರ್ಶನ್** ಅವರು ಮಾತನಾಡಿ[*5] ಕಲ್ಲಂದೂರು ಹಳ್ಳಿಯಲ್ಲಿ ನಾರಾಯಣಸ್ವಾಮಿ ಎಂಬ ರೈತ, ಆತ್ಮಹತ್ಯೆಯನ್ನು, ಸ್ವಂತ ಕಾಪತ್ರಯ, ಸಾಲದ ಭಾರದಿಂದ ಮಾಡಿಕೊಂಡದ್ದೆಂದು ಆಗಿರುವ ವರದಿ, ಸ್ಥಳಕ್ಕೆ ತಾವು ಭೇಟಿ ನೀಡಿ ತಿಳಿದ ವಿಷಯ ಇತ್ಯಾದಿಗಳನ್ನು ಪ್ರಸ್ತುತ ಪಡಿಸಿದರು. ನಾರಾಯಣ ಸ್ವಾಮಿಗೆ ಇದ್ದುದು ಎರಡು ಎಕರೆ, ಅದರ ಹಕ್ಕನ್ನು ಪಡೆಯಲು ಆತ ಹೈಕೋರ್ಟಿಗೆ ಮೊರೆ ಹೋಗುವಂಥ ಪರಿಸ್ಥಿತಿ ಬಂತು. ಹೈಕೋರ್ಟ್ ತೀರ್ಪು ಬಂತು. ಅದನ್ನು ಪಡೆಯಲೂ ಆತನ ಸುಮಾರು ಹಣ ಖರ್ಚು ಮಾಡುವಂಥ ಪರಿಸ್ಥಿತಿ ಆಯ್ತು. ಹೀಗಾಗಿ ಆತ್ಮಹತ್ಯೆಗೀಡಾದ. ಕೋಲಾರ ಜಿಲ್ಲೆಯಲ್ಲಿ 5 ಜನ ರೈತರು ಬೇರೆ ಬೇರೆ ಪರಿಸ್ಥಿತಿ ಕಾರಣ ಆತ್ಮಹತ್ಯೆ

*5. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 306 (3–5), ಭಾಗ.II. 1.8.2001, ಪು.677–79

ಮಾಡಿಕೊಂಡಿದ್ದಾರೆ, ಎಂದರು. ನಂತರ ಸರ್ಕಾರ ತಕ್ಷಣ ರೈತರ ನೆರವಿಗೆ ಹೋಗುವುದು, ಆತ್ಮವಿಶ್ವಾಸ ಮೂಡಿಸುವ ಕಾರ್ಯ ರೂಪಿಸುವುದು, ಸ್ಥಳೀಯ ಸಂಸ್ಥೆಗಳು, ರೈತನಾಯಕರು, ರೈತ ಸಂಘಟನೆಗಳು, ಈ ದಿಸೆಯಲ್ಲಿ ಮುಂದಾಗಬೇಕಿರುವುದು, ಮುಂದಿನ ದಿನಗಳಲ್ಲಿ ಇಂಥ ಘಟನೆಗಳು ಪುನರಾವರ್ತನೆ ಆಗದಂತೆ ನೋಡಿಕೊಳ್ಳುವುದು, ರೈತರೂ ಸಹ ಆತ್ಮವಿಶ್ವಾಸ ಹೆಚ್ಚಿಸಿಕೊಳ್ಳುವ ಪ್ರವೃತ್ತಿಯನ್ನು ರೂಢಿಸಿಕೊಳ್ಳಬೇಕಿರುವುದು, ಸರ್ಕಾರ ಈ ಬಗೆಗೆ ದೀರ್ಘಾವಧಿ ಕಾರ್ಯಕ್ರಮ ಹಾಕಿಕೊಳ್ಳಬೇಕಿರುವುದು ಕುರಿತೆಲ್ಲ ಹೇಳಿದರು.

**ಶ್ರೀ ಕೆ.ವಿ.ಸುಬ್ಬಾರೆಡ್ಡಿ** ಅವರು, ನಾರಾಯಣಸ್ವಾಮಿ ಎಂಬ ರೈತ ಆತ್ಮಹತ್ಯೆ ಮಾಡಿಕೊಳ್ಳಲು ಕಾರಣ ಹೇಳುತ್ತಾ, ಹಣಕೊಟ್ಟವರು ಹೊಡೆದು ಪೋಲೀಸ್ ಕಂಪ್ಲೇಂಟ್ ಆದದ್ದು, ಹಣ ಕೊಡಲು ಮೂರು ತಿಂಗಳಷ್ಟು ಅವಧಿ ನೀಡಿದ್ದು, ಆದರೆ ಹಣ ಕೊಡಲಿಲ್ಲವೆಂದು ಮತ್ತೆ ಆದ ಗಲಾಟೆ, ಆತನ ಜಮೀನನ್ನು ಕುಕ್ಕದ ಜಮೀನಿನವರು ಕಬಳಿಸಲು ಮಾಡಿದ ಯತ್ನ, ಹೈಕೋರ್ಟು ಅವನ ಪರ ಕೊಟ್ಟ ತೀರ್ಪಿದ್ದರೂ, ಸಾಲ ಕೊಟ್ಟವರ ಕಿರುಕುಳ ಹೆಚ್ಚಿ ಅವನು ಆತ್ಮಹತ್ಯೆ ಮಾಡಿಕೊಂಡದ್ದು ಎಂದಿರುವ ಪತ್ರಿಕಾವರದಿ, ಅಂತಾಗಿ ಈ ಬಗ್ಗೆ ಆಗಬೇಕಾದ ಕೂಲಂಕಷ ತನಿಖೆ, ಅವನ ಕುಟುಂಬಕ್ಕೆ ಸರ್ಕಾರ 15 ದಿನದೊಳಗಾಗಿ ಕೊಡಬೇಕಾದ ಪರಿಹಾರ ಕುರಿತೆಲ್ಲ ಹೇಳಿದರು.

ಸಭಾನಾಯಕ **ಶ್ರೀ ಹೆಚ್.ಕೆ.ಪಾಟೀಲ**ರು, ಕಲ್ಲಂದೂರು ರೈತನ ಆತ್ಮಹತ್ಯೆಯ ಬಗ್ಗೆ ಉಭಯ ಸದಸ್ಯರು ಸರ್ಕಾರದ ಗಮನ ಸೆಳೆದ ಬಗ್ಗೆ ಹೇಳುತ್ತ: ರೈತ ಕೃಷಿಯನ್ನು ಎಷ್ಟೇ ಪ್ರಾಮಾಣಿಕವಾಗಿ ಮಾಡಿದರೂ, ತೊಂದರೆಗೀಡಾಗಿರುತ್ತಾನೆ. ಇಂದಿನ ವಿವಿಧ ಪರಿಸ್ಥಿತಿಗಳ ಕಾರಣ ಟೆನ್‌ಷನ್ ಮತ್ತು ಪ್ರೆಷರ್‌ಗೆ ಒಳಗಾದ ರೈತನಿಗೆ ಆತ್ಮವಿಶ್ವಾಸ ಕುದುರುವಂಥ ಚಟುವಟಿಕೆ ಹಾಗೂ ಪ್ರಯತ್ನಗಳು ಎಲ್ಲರಿಂದ ಆಗಿ, ಸರ್ಕಾರದಿಂದ ರೈತನಿಗೆ ಸೂಕ್ತ ಪರಿಹಾರ ಸಿಗಬೇಕಾದ ಕ್ರಮ ಕೈಗೊಳ್ಳಬೇಕು ಎಂದರು.

ಸಚಿವ ಶ್ರೀ **ವಿ.ಮುನಿಯಪ್ಪನವರು** ಮಾತನಾಡಿ ಕೋಲಾರ ಜಿಲ್ಲೆಯ ಮಳೆ ಆಶ್ರಿತ ಬೇಸಾಯದ ಕಷ್ಟ ಪರಂಪರೆ, ಬರ ಪರಿಸ್ಥಿತಿಯ ದುಸ್ತರ ದಿನಗಳು, ಈಚಿನ ದಿನಗಳಲ್ಲಿಯ ತೀರ ದುಸ್ಥಿತಿಗೆ ಸಿಲುಕಿ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ಪ್ರಸಂಗಗಳು. ಇದು ಕಳೆದ ನಾಲ್ಕೈದು ವರ್ಷಗಳಿಂದ ಹೆಚ್ಚಿರುವುದು, ಈ ಬಗ್ಗೆ ಎಲ್ಲಾ ವರ್ಗದ ಜನಗಳು, ಎಲ್ಲಾ ಪಕ್ಷಗಳು ಸರ್ಕಾರದ ಜೊತೆ ಸಹಕರಿಸಿ ಪರಿಹಾರ ಕಂಡುಕೊಳ್ಳಬೇಕಿದೆ ಎಂದರು.

**ವಿಷಯ 4.** ಜಮೀನು ಆಕ್ರಮಣ : ಜಿಲ್ಲಾಧಿಕಾರಿ ಕಛೇರಿ ಎದುರು ರೈತನ ವಿಷಸೇವನೆ

26.3.2002 ವಿಧಾನ ಪರಿಷತ್ತಿನ ಅಧಿವೇಶನದಲ್ಲಿ*6 **ಶ್ರೀ ಎ.ಎಚ್.ಶಿವಯೋಗಿ ಸ್ವಾಮಿಯವರು** ಮಾತನಾಡುತ್ತ : ದಾವಣಗೆರೆ ಜಿಲ್ಲೆ ಜಗಳೂರು ತಾ. ದೇವೀಪುರ ಗ್ರಾಮದ ರೈತ ಶಂಕರ ನಾಯಕ, ಹನುಮಕ್ಕನ ಹಳ್ಳಿ ಬಳಿ 5 ಎಕರೆ ಗೋಮಾಳದ ಜಮೀನನ್ನು ಕಳೆದ 10 ವರ್ಷಗಳಿಂದ ಸಾಗುವಳಿ ಮಾಡುತ್ತಿದ್ದವ. ಏನೋ ಕಾರಣದಿಂದ 1 ವರ್ಷ ಗ್ರಾಮದಲ್ಲಿರಲಿಲ್ಲ. ವಾಪಸ್ಸು ಬಂದಾಗ ಅವನ 5 ಎಕರೆ ಜಮೀನನ್ನು ಬೇರೆಯವರು ಮಾಡುತ್ತಿದ್ದರು. ಆ ಜಮೀನನ್ನು ಪುನಃ ಬಿಡಿಸಿ ಕೊಡುವಂತೆ ಜಿಲ್ಲಾಧಿಕಾರಿಗೆ ಲಿಖಿತ ದೂರುಕೊಟ್ಟ. ಏನೇ ಪ್ರಯತ್ನ ಮಾಡಿದರೂ ಆ ಜಮೀನು ವಾಪಸು ಸಿಗಲಿಲ್ಲ. ಆ ಕಾರಣ 19.3.2002ರಂದು ಜಿಲ್ಲಾಧಿಕಾರಿಯವರ ಕಛೇರಿಗೆ ಬಂದು ವಿಷ ಸೇವಿಸಿದ. ಆಸ್ಪತ್ರೆಗೆ ಸೇರಿಸಿದರೂ ಅವನು ಉಳಿಯಲಿಲ್ಲ. ಅವನ ಕುಟುಂಬಕ್ಕೆ ಬೇರೆ ದಾರಿ ಇಲ್ಲ. ಆತನ ಮಕ್ಕಳಿಗಾದರೂ ಆತನ ಜಮೀನನ್ನು ದೊರಕಿಸಿ ಕೊಡಿ ಎಂದರು.

**ಶ್ರೀ ಕೆ.ಎಚ್.ರಂಗನಾಥ್** ಅವರು ಪ್ರತಿಕ್ರಿಯಿಸುತ್ತ, ಆ ರೈತ ಸರ್ಕಾರದ ಜಮೀನನ್ನು ಅತಿಕ್ರಮಿಸಿ ಬೇಸಾಯ ಮಾಡಿ, 1 ವರ್ಷ ಕಾಲ ಬಿಟ್ಟು ಹೋಗಿದ್ದಾನೆ. ಈಗ ವಿಷ ಕುಡಿದು ಆತ್ಮಹತ್ಯೆ ಮಾಡಿಕೊಂಡಿದ್ದಾನೆ. ಭೂಮಿಯನ್ನು ಯಾರಿಗೆ ಕೊಡಬೇಕು ಎಂದು ಸಭಾಪತಿಗಳನ್ನು ಕೇಳಿದರು – ಶ್ರೀ ಶಿವಯೋಗಿ ಸ್ವಾಮಿಯವರು ಆ ಬಗ್ಗೆ ಮಾತನಾಡಿ, 10 ವರ್ಷದಿಂದ ಅವನು ಕೃಷಿ ಮಾಡಿದ್ದಾನೆ. ಈಗ ಬೇರೆಯವರು ಅದೇ ಜಮೀನನ್ನು ಮಾಡತೊಡಗಿರುವಾಗ ಡಿ.ಸಿ.ಯವರಿಂದ ಪರಿಹಾರ ಬಯಸಿದ; ಸಿಗಲಿಲ್ಲ. ಆಗ ತನ್ನ ಕೊನೆದಾರಿ ಹುಡುಕಿಕೊಂಡ, ಎಂದರು. ಈ ಮಾತಿಗೆ ಸಭಾಪತಿಯವರು, ಇದು ಕ್ಲಿಷ್ಟ ಪ್ರಶ್ನೆ, ಕಂದಾಯ ಸಚಿವರೇ ಬಂದು ಉತ್ತರಿಸಬೇಕು ಎಂದರು.

**ವಿಷಯ 5:** ಬೆಳೆ ಸಾಲದ ಹೊರೆ: ಕಾಫಿ ಬೆಳೆಗಾರನ ಆತ್ಮಹತ್ಯೆ

8.8.2002ರ ವಿಧಾನ ಪರಿಷತ್ತಿನ ಅಧಿವೇಶನದಲ್ಲಿ*7 **ಶ್ರೀ ಬಿ.ವಿ.ಕರೀಗೌಡರು** ಮಾತನಾಡುತ್ತ : ಹಾಸನ ಜಿಲ್ಲೆ ಆಲೂರು ತಾ. ನೆಡಗೇರು ಗ್ರಾಮದ ರೈತ ಸಾಲ

---

*6. ವಿಧಾನಪರಿಷತ್ತಿನ ನಡವಳಿಕೆಗಳು., ಸಂಪುಟ 309 (4–6), (26.3.2002), ಪು.1097

*7. ವಿಧಾನಪರಿಷತ್ತಿನ ನಡವಳಿಕೆಗಳು., ಸಂಪುಟ 315 (1–4), (8.8.2002), ಪು.672

ಮಾಡಿ, 20 ಗುಂಟೆ ಕಾಫಿ ಬೆಳೆದ; ಬರಡು ಭೂಮಿ 1.5 ಎಕರೆ ಇತ್ತು. ಬೆಳೆ ಅಂತು ಬರಲಿಲ್ಲ. ಬ್ಯಾಂಕ್ ಸಾಲ ಹಾಗೂ ಇತರೆ ಸಾಲಗಳಿದ್ದುವು. ತೀರಿಸಲಾಗದೆ ದೇವಸ್ಥಾನದಲ್ಲಿ ನೇಣು ಹಾಕಿಕೊಂಡ; ಕಗ್ಗರವಳ್ಳಿ ಗ್ರಾಮದ ರೈತ ರಾಜು ಎಂಬಾತ ಸಾಲದ ಹೊರೆ ತಾಳಲಾರದೆ ವಿಷ ಕುಡಿದು ಆತ್ಮಹತ್ಯೆ ಮಾಡಿಕೊಂಡ. ಅರಕಲಗೂಡು ಮುತ್ತಿಗೆ ಗ್ರಾಮದ ರೈತ ಸೋಮು (35) ಸಾಲದ ಬಾಧೆ ತಾಳಲಾರದೆ ಗೌರಿಕಟ್ಟೆಗೆ (ಕೆರೆ!) ಬಿದ್ದು (ನೀರುಬಲಿ!) ಆತ್ಮಹತ್ಯೆ ಮಾಡಿಕೊಂಡ ಇಷ್ಟು ಆತ್ಮಹತ್ಯೆಗಳು ನಡೆದರೂ ಯಾವ ಮಂತ್ರಿಗಳೂ ಈ ಸ್ಥಳಗಳಿಗೆ ಹೋಗಿ ವಿಚಾರಿಸಿಲ್ಲ; ಸಾಲದ ವಿವರವನ್ನು ಕೇಳಲಿಲ್ಲ; ಸಾಂತ್ವನ ಹೇಳಿಲ್ಲ. ಕುಟುಂಬಕ್ಕೆ ಪರಿಹಾರವನ್ನು ಕೊಟ್ಟಿಲ್ಲ, ಎಂದರು.

ಸಭಾನಾಯಕ **ಶ್ರೀ ಹೆಚ್.ಕೆ.ಪಾಟೀಲ್** ಅವರು ಕರೀಗೌಡರ ಮನಸ್ಸಿನ ಅಳಲನ್ನು ಮನ್ನಿಸುತ್ತ, ಆತ್ಮವಿಶ್ವಾಸ ಕುದುರಿಸುವ ಕಾರ್ಯವಾಗಬೇಕು. ಕಾಫಿ ಬೆಳೆಗಾರನ ಆತ್ಮಹತ್ಯೆ ಎಂದರೆ ಸಂತೋಷದ ವಿಷಯವಲ್ಲ. ಜೋಳ, ರಾಗಿ, ತೊಗರಿ ಬೆಳೆಗಾರರು ಆತ್ಮಹತ್ಯೆ ಮಾಡಿಕೊಂಡಿರುವುದನ್ನು ನೋಡಿದ್ದೇವೆ. ಕಾಫಿ ಬೆಳೆಗಾರರು ಸಾಕಷ್ಟು ಸ್ಥಿತಿವಂತರು, ಎಂಬ ಭಾವನೆಯೂ ಇದೆ. ಆದರೆ ಇಲ್ಲಿ ಸರ್ಕಾರಕ್ಕೆ ಸೂಕ್ತ ಪರಿಹಾರವನ್ನು ರೈತರ ಆತ್ಮಹತ್ಯೆಯ ಸಂದರ್ಭದಲ್ಲಿ ಕೊಡಲು ಎಷ್ಟು ಸಾಧ್ಯವಿದೆಯೋ ಅಷ್ಟು ಕೊಡಲಾಗುತ್ತದೆ, ಎಂದರು.

**ವಿಷಯ 6:** ಅಡಿಕೆ ಬೆಲೆ ಕುಸಿತ : ರೈತರ ಆತ್ಮಹತ್ಯೆ

2.8.2001ರ ವಿಧಾನಸಭಾಧಿವೇಶನದಲ್ಲಿ[*8] **ಶ್ರೀ ವಿಶ್ವೇಶ್ವರ ಹೆಗ್ಗಡೆ** ಅವರು: ಬೆಳೆಗಾರರು ಬೆಲೆ ಕುಸಿತದಿಂದ ಅನುಭವಿಸುತ್ತಿರುವ ತೊಂದರೆ; ಹತಾಶಸ್ಥಿತಿಗೆ ಹೋಗಿ ಅವರು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು; ರಾಜ್ಯಕ್ಕೆ ನೂರು ಕೋಟಿ ರೂ. ಆದಾಯವನ್ನು ಅವರು ಕೊಡುತ್ತಿದ್ದರೂ ಸಂಕಷ್ಟಕ್ಕೆ ಒಳಗಾಗಿರುವುದು ಕ್ವಿಂಟಾಲ್ ಅಡಿಕೆಗೆ ಕಳೆದ ವರ್ಷ ದರ 10 ಸಾವಿರವಿದ್ದುದು ಇಂದು 2 ಸಾವಿರಕ್ಕೆ ಇಳಿದು ಬೆಳೆಗಾರರ ಜೀವನದಲ್ಲಿ ಗಂಭೀರ ಸಮಸ್ಯೆ ಉಂಟಾಗಿರುವುದು, ಬೆಳೆ ಹೆಚ್ಚಳ ಅಥವಾ ಹೊರದೇಶದಿಂದ ಬರುವ ಅಡಕೆಯ ಕಾರಣ ದರ ಕುಸಿತವೆ? ಎಂಬ ಬಗ್ಗೆ ಸಂಶೋಧನೆಯ ಅಗತ್ಯ, ಮಾರುಕಟ್ಟೆ ವ್ಯವಸ್ಥೆಯನ್ನು ಹೆಚ್ಚು ಕಲ್ಪಿಸಿಕೊಡುವ ಅಗತ್ಯ, ತೀವ್ರ ಬೆಲೆ ಕುಸಿತವಾಗಿರುವಲ್ಲಿ ಬೆಳೆಗಾರರ ರಕ್ಷಣೆಗೆ

*8 ವಿಧಾನ ಸಭೆಯ ನಡವಳಿಕೆಗಳು., ಸಂಪುಟ 8 (1–2), ಭಾಗ–I, (2.8.2001), ಪು.79–81

ಹೋಗಿ ವಿಶ್ವಾಸ ತುಂಬಲು ಸರ್ಕಾರ ಮಾಡಬೇಕಾದ ಪ್ರಯತ್ನ ಆ ಜನರ ಜೀವಕ್ಕೆ ಆಸ್ತಿಗೆ ಭದ್ರತೆಯನ್ನು, ವಿಶ್ವಾಸವನ್ನು ಕೊಡುವಂಥ ಸರ್ಕಾರದ ಸಂದೇಶ ಮೊದಲು ಒದಗಬೇಕಿರುವುದು, ಕುರಿತೆಲ್ಲ ಹೇಳಿದರು. ನಂತರ ಹೊನ್ನಾವರದಲ್ಲಿ ಅಡಿಕೆ ಬೆಳೆಗಾರ ದಂಪತಿಗಳು ಆತ್ಮಹತ್ಯೆ ಮಾಡಿಕೊಂಡದ್ದು, ಪುತ್ತೂರಿನಲ್ಲಿ ಮೂರು ಜನ ಆತ್ಮಹತ್ಯೆ ಮಾಡಿಕೊಂಡದ್ದು ಕುರಿತು ಉದಾಹರಣೆ ನೀಡಿ ಆತ್ಮಹತ್ಯಾ ಪ್ರವೃತ್ತಿ ಬೆಳೆಯುತ್ತಿರುವ ಬಗ್ಗೆ ಸಂಶೋಧನೆ ಮಾಡಲು ತಂಡವನ್ನು ರಚಿಸುವ ಬಗ್ಗೆ ಸರ್ಕಾರ ಹೇಳಿರುವಂಥ ಯೋಗ್ಯ ಸಲಹೆ, ಹಾಗೆಯೇ ಅಡಿಕೆ ಬೆಲೆ ಕುಸಿತ ಕುರಿತ ಅಧ್ಯಯನ ಮಾಡಿಸಿ ಬೆಳೆಗಾರರಿಗೆ ವಿಶ್ವಾಸ ಮೂಡಿಸಬೇಕು ಎಂದರು. ಈ ಸಂದರ್ಭದಲ್ಲಿ ತಜ್ಞರ ಸಮಿತಿಯನ್ನು ನೇಮಕ ಮಾಡುವಲ್ಲಿ ಕ್ಯಾಂಪ್ಕೋ ಮತ್ತು ಇನ್ನಿತರ ಸಂಘ ಸಂಸ್ಥೆಗಳ ಸಲಹೆಗಳನ್ನು ಪಡೆದುಕೊಳ್ಳಬೇಕು ಎಂದು ವಿನಂತಿ ಮಾಡಿದರು.

ಸಚಿವ **ಶ್ರೀ ಡಿ.ಬಿ.ಚಂದ್ರೇಗೌಡರು** ಮಾತನಾಡಿ ದಕ್ಷಿಣ ಕನ್ನಡ, ಉತ್ತರ ಕನ್ನಡದಲ್ಲಿ ಬೆಳೆಯತಕ್ಕಂಥ 'ಚಾಳಿ' ಎಂಬ ಅಡಿಕೆ ಬೆಳೆಯ ದರ ಕುಸಿತವಾಗಿದೆ. ಈ ವಿಚಾರವನ್ನು ಸಂಬಂಧಪಟ್ಟ ಸಚಿವರ ಗಮನಕ್ಕೆ ಅಡಿಕೆ ಬೆಳೆಗಾರರ ಪ್ರತಿನಿಧಿಯಾಗಿ ತರುತ್ತೇನೆ ಎಂದರು.

**ಶ್ರೀ ಡಿ.ವಿ. ಸದಾನಂದ ಗೌಡ**ರು ಮಾತನಾಡಿ, ಪುತ್ತೂರು ತಾಲೂಕಿನಲ್ಲಿ ಮೂರು ಜನ ಅಡಿಕೆ ಬೆಳೆಗಾರರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ; ಜಿಲ್ಲಾಧಿಕಾರಿಯವರಿಗೆ ವಿಶೇಷವಾಗಿ ಆ ಭಾಗದಲ್ಲಿ ಆಗುವಂಥ ಅಡಿಕೆ ಬೆಳೆಗಾರರ ಆತ್ಮಹತ್ಯೆಯ ಬಗ್ಗೆ ಪರಿಶೀಲನೆ ಮಾಡುವಂತ ಆದೇಶ ನೀಡಲು ಕೇಳಿಕೊಂಡರು.

**ವಿಷಯ 7:** ಕುಷ್ಟಗಿ ತಾ. ಮುಕ್ತಾರಾಂ ಪುರದ ರೈತ ಕುಟುಂಬದ ಸಾಮೂಹಿಕ ಆತ್ಮಹತ್ಯೆ

31.7.2003 ರ ವಿಧಾನಸಭಾಧಿವೇಶನದಲ್ಲಿ*9 **ಶ್ರೀ ಹಸನ್ ಸಾಬ್ ನಬಿಸಾಬ್ ಧೋತಿಹಾಳ** ಅವರು ಮುಕ್ತಾರಾಂಪುರ ಗ್ರಾಮದ ಬಡ ರೈತನ ಕುಟುಂಬಕ್ಕೆ 6 ಎಕರೆ ಜಮೀನು ಮಾತ್ರ ಇದ್ದು, ಸಾಮೂಹಿಕ ಆತ್ಮಹತ್ಯೆ ಮಾಡಿಕೊಂಡ ಬಗ್ಗೆ ಮಾತನಾಡಿ ಸಾಲ ಹಾಗೂ ಬಡತನದ ತೊಂದರೆಯಿಂದ ವಿಷವನ್ನು ಸೇವಿಸಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಕುಟುಂಬದಲ್ಲಿ ಉಳಿದಿರುವ ವೃದ್ಧ ತಂದೆ ತಾಯಿ

*9 ವಿಧಾನ ಸಭೆಯ ನಡವಳಿಕೆಗಳು., ಸಂಪುಟ 8 (2-3), ಭಾಗ-II (31.7.2001), ಪು.910-11

ಹಾಗು ಒಬ್ಬ ಮಗ ಅವರಿಗಾದರೂ ಸರ್ಕಾರ ಪರಿಹಾರ ಒದಗಿಸಬೇಕೆಂದು ಕೇಳಿಕೊಂಡರು. **ಶ್ರೀ ಕರಡಿ ಸಂಗಣ್ಣ ಅಮರಪ್ಪ** ಅವರು, ಈ ಮುಕ್ತಾರಾಂಪುರದ ಕುಟುಂಬದಲ್ಲಿನ ಏಳು ಜನರು ಸಾಮೂಹಿಕ ಆತ್ಮಹತ್ಯೆ ಮಾಡಿಕೊಂಡಿರುವ ವಿಷಯವನ್ನು ಪ್ರಸ್ತಾಪಿಸಿ, ಬಡತನ ಮತ್ತು ಬರಗಾಲದಿಂದ ತತ್ತರಿಸಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಉಳಿದಿರುವ ಕುಟುಂಬದವರಿಗೆ ಪರಿಹಾರವನ್ನು ಸರ್ಕಾರ ಒದಗಿಸಬೇಕು. ಅನೇಕ ಜಿಲ್ಲೆಗಳಲ್ಲಿ ಜನರಿಗೆ ಉದ್ಯೋಗ ಕೊಡಲು ಸರ್ಕಾರ ಮುಂದೆ ಬರದಿದ್ದರೆ ಇಂಥ ಸಾಮೂಹಿಕ ಆತ್ಮಹತ್ಯೆಗಳು ಪ್ರತಿಗ್ರಾಮದಲ್ಲಿಯೂ ನಡೆಯುವಂಥ ಸಂದರ್ಭವಾಗುತ್ತದೆ. ಈ ಬಗ್ಗೆ ಸರ್ಕಾರ ತನ್ನ ಆಲೋಚನೆಯನ್ನು ಸ್ಪಷ್ಟ ಪಡಿಸಲಿ ಎಂದರು.

ಸಚಿವ **ಶ್ರೀ ಎಂ ಮಲ್ಲಿಕಾರ್ಜುನ ನಾಗಪ್ಪ** ಅವರು ಉಭಯ ಶಾಸಕರು ಆತ್ಮಹತ್ಯೆಯ ಕುಟುಂಬದ ವಿಷಯವನ್ನು ಎತ್ತಿದ ಬಗ್ಗೆ ಪ್ರತಿಕ್ರಿಯಿಸಿ, ಸದರಿಗ್ರಾಮದಲ್ಲಿ ಬೆಳಗಿನ 4.30ರ ಸಮಯದಲ್ಲಿ 8 ಜನರ ಕುಟುಂಬದಲ್ಲಿದ್ದ ಶ್ರೀಮತಿ ವೀರಬಸಮ್ಮ 20 ವರ್ಷಗಳಿಂದ ಅಸ್ತಮಾ ರೋಗದಿಂದ ಬಳಲುತ್ತಿದ್ದು, ಚಿಕಿತ್ಸೆ ಪಡೆದರೂ ಗುಣವಾಗದೆ ಜುಗುಪ್ಸೆಗೊಂಡು ವಿಷ ಸೇವಿಸಿ ಆತ್ಮಹತ್ಯೆ ಮಾಡಿಕೊಂಡರು. ಇದನ್ನು ಕಂಡ ಅವರ ಮೂವರು ತಮ್ಮಂದಿರು, ಮೂವರು ತಂಗಿಯರು ಸಹ ವಿಷ ಸೇವಿಸಿ ಆತ್ಮಹತ್ಯೆ ಮಾಡಿಕೊಂಡರು. ಕುಟುಂಬದವರು ಕಿರಾಣಿ ವ್ಯಾಪಾರ ಮಾಡುತ್ತಿದ್ದಾರೆ. ಇವರಿಗೆ ನಾಲ್ಕುವರೆ ಎಕರೆ ಜಮೀನು ಇದೆ. ಸರ್ಕಾರ ಸಹಾಯವನ್ನು ಮಾಡಲಿಕ್ಕೆ ಪ್ರಯತ್ನಿಸುತ್ತಿದೆ, ಮುಂದೆ ಇಂಥ ಅಹಿತಕರ ಘಟನೆ ನಡೆಯಬಾರದು ಎಂದೇ ನಮ್ಮ ಉದ್ದೇಶ ಎಂದರು.

**ಶ್ರೀ ಎಸ್.ಎಸ್.ಪಾಟೀಲ್** ಅವರು ಸಚಿವರ ಮಾತನ್ನು ಒಪ್ಪದೆ, ಕುಟುಂಬದ ಆ ಏಳು ಜನರು ಅನ್ನ ಇಲ್ಲದೆ ಉಪವಾಸವಿದ್ದು ಸತ್ತಿದ್ದಾರೆ. ಒಬ್ಬ ಹೆಂಗಸಿಗೆ ಜಡ್ಡು ಆಗಿ ಸತ್ತಿರಬಹುದು. ಉಳಿದವರಿಗೆ ಕೂಳಿಲ್ಲದೆ, ಉಪವಾಸಮಾಡಿ ಬದುಕಲಾರದೆ ತೀರಿದ್ದಾರೆ. ಈ ಸತ್ಯವನ್ನು ಮುಚ್ಚಿಡದೆ ನ್ಯಾಯಾಂಗ ತನಿಖೆ ಆಗಬೇಕು, ಎಂದರು. ಸಚಿವರು ಅಂಥ ಸತ್ಯ ಮುಚ್ಚುವ ಪ್ರಯತ್ನ ನಾವು ಮಾಡುತ್ತಿಲ್ಲ ಎಂದರು.

1.8.2003ರ ಅಧಿವೇಶನದಲ್ಲಿ*[10] ಈ ಸಾಮೂಹಿಕ ಆತ್ಮಹತ್ಯೆಯ ವಿಷಯದ ಬಗ್ಗೆ ವಿರೋಧ ಪಕ್ಷದ ನಾಯಕ **ಶ್ರೀ ಜಗದೀಶ್ ಶೆಟ್ಟರ್** ಅವರು ನಿಲುವಳಿ ಸೂಚನೆಯನ್ನು ತರುವ ಕಾರಣವನ್ನು ವಿವರಿಸಿ, ಹೂಜಿ ಕುಟುಂಬದ ಆರು ಜನರ ಆತ್ಮಹತ್ಯೆಯ ಸುದ್ದಿಯು, ಸಂಪಾದಕೀಯ ಹಾಗು ಎಲ್ಲ ಪತ್ರಿಕೆಗಳ ಮುಖಪುಟದಲ್ಲಿ ಬಂದಿರುವ ಬಗ್ಗೆ ಗಮನ ಸೆಳೆದರು. ಕ್ರಿಮಿನಾಶಕ ವಿಷ ತೆಗೆದುಕೊಂಡು ಸತ್ತಿದ್ದಾರೆ. ವಿವಿಧ ಕಡೆ ಆತ್ಮಹತ್ಯೆಯ ಪ್ರಕರಣಗಳು ನಡೆದಿವೆ. ಕೆಲವು ವೈಯುಕ್ತಿಕ ದ್ವೇಷ, ಕೆಲವು ಮಾನಸಿಕ ಸ್ಥಿಮಿತ ಕಳೆದುಕೊಂಡೋ, ಬೇರೆ ಬೇರೆ ಕಾರಣಗಳಿಂದಲೋ ನಡೆದಿವೆ. ಈ ಆರು ಜನ ಸಹಿತವಾದ ಕುಟುಂಬದ ಅಲ್ಲಿ ಇಲ್ಲಿ ಕೂಲಿನಾಲಿಯಿಂದ ಜೀವನ ಸಾಗಿಸುತ್ತಿದ್ದ ಅತ್ಯಂತ ಬಡ ರೈತ ಕುಟುಂಬದವರಾಗಿದ್ದರು. ಹಸಿವಿನಿಂದ ರೈತ ಕುಟುಂಬದ ಆರೂ ಜನರ ಆತ್ಮಹತ್ಯೆ ಎಂದರೆ ಇದೊಂದು ದೊಡ್ಡ ದುರಂತ. ತೀವ್ರ ಬಡತನ, ಹಸಿವೂ, ಅನಾರೋಗ್ಯ ಸಾಲದ ಬಾಧೆ ತಾಳದೆ ಆತ್ಮಹತ್ಯೆ ಎಂದು ಪತ್ರಿಕಾ ವರದಿಯಲ್ಲಿದೆ. ಪೋಲೀಸ್ ಅಧಿಕಾರಿಗಳು ಗ್ರಾಮಕ್ಕೆ ಹೋಗಿ ವಿಚಾರಿಸಿದಾಗ ಕಳೆದ ಕೆಲವು ತಿಂಗಳಿಂದ ಕೂಲಿಯೂ ಸಿಗದೆ ಅವರಿಗೆ ಪರದಾಟವಾಗಿತ್ತು ಎಂದು ತಿಳಿದು ಬಂದಿದೆ. **ಕೂಲಿಗಾಗಿ ಕಾಳು ಯೋಜನೆಯೂ** ಅವರ ನೆರವಿಗೆ ಬಂದಿಲ್ಲ. ಬಡತನ, ಸಾಲದ ಬಾಧೆಯಿಂದ ಜುಗುಪ್ಸೆಗೊಂಡು ಬದುಕಿದ್ದರೂ ತಂದೆಗೆ ಭಾರ ಎಂಬ ತೀರ್ಮಾನದಿಂದ ಒಟ್ಟಿಗೆ ವಿಷ ಸೇವಿಸಿದರೆಂದು ಶಂಕಿಸಲಾಗಿದೆ. ಪತ್ರಿಕಾ ವರದಿಯ ರೀತ್ಯಾ 2 ತಿಂಗಳಿಂದ ಅರೆ ಹೊಟ್ಟೆಯಲ್ಲಿ ಬದುಕುತ್ತಿದ್ದರು, ಎಂದಿದೆ. ಕಳೆದ 2 ದಿನಗಳಿಂದ ಪೂರ್ತಿ ಉಪವಾಸವಿದ್ದರು ಎಂದು ಕುಟುಂಬದ ಆಪ್ತರಾದ ತಮ್ಮಣ್ಣ ನಡುವಿನ ಮನಿ ಮತ್ತು ಚನ್ನಬಸಪ್ಪ ಪೂಜಾರ್ ಅವರು ತಿಳಿಸಿದ್ದಾರೆ. ಒಂದು ಸೇರು ಕಾಳೂ ಇಲ್ಲ. ಒಂದು ವಾರದಿಂದ ಮನೆಯಲ್ಲಿ ಒಲೆಯನ್ನೆ ಹೊತ್ತಿಸಿರಲಿಲ್ಲ. ಅಂತಾಗಿ ಅವರು ಹೇಗೆ ಬದುಕಿರಬಹುದು? ಹಸಿವಿನಿಂದ ಆತ್ಮಹತ್ಯೆ ಮಾಡಿಕೊಂಡರು ಎಂದು ನೆರೆಯವರು ಅತ್ತುಕೊಂಡು ಹೇಳಿದ್ದಾರೆ. ಇಂಥ ಸಂದರ್ಭವಾಗಿರುವಲ್ಲಿ ಉದಾಸೀನ ಮಾಡದೆ ಮಾನ್ಯ ಮುಖ್ಯಮಂತ್ರಿಗಳು ಅಲ್ಲಿಗೆ ಭೇಟಿ ನೀಡಿ ನಿಜವಾದ ಪರಿಸ್ಥಿತಿ ತಿಳಿಯಲಿ. ಸರ್ಕಾರ ರೈತರ ಆತ್ಮಸ್ಥೈರ್ಯವನ್ನು ಹೆಚ್ಚಿಸಲು ಯೋಜನೆಗಳನ್ನು ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು, ಎಂಬ ನಮ್ಮ ಒತ್ತಾಯವಿದೆ. ರಾಜ್ಯದಲ್ಲಿ ಸಾಲದಬಾಧೆ ತಾಳಲಾರದೆ ಕಳೆದ ಎರಡು

*10. ವಿಧಾನಸಭೆಯ ನಡವಳಿಕೆಗಳು., ಸಂಪುಟ 8(2–3), ಭಾಗ.II , (1.8.2003), ಪು. 1225–70

ವರ್ಷಗಳಿಂದ ಸುಮಾರು 300ಕ್ಕೂ ಹೆಚ್ಚು ರೈತರು ಆತ್ಮಹತ್ಯೆ ಮಾಡಿಕೊಂಡಿರುವಲ್ಲಿ, ರೈತರ ಕಲ್ಯಾಣಕ್ಕಾಗಿ ಕೆಲಸ ಮಾಡದಿರುವುದು ಸೂಕ್ತವಲ್ಲ. ಮೊನ್ನೆ ಶಿಗ್ಗಾಂವ ತಾಲೂಕಿನ ತಿಮ್ಮಾಪುರದಲ್ಲಿ, ಮಂಡ್ಯ ಜಿಲ್ಲೆಯಲ್ಲಿ, ಹಿರೇಕೆರೂರು ತಾಲೂಕಿನಲ್ಲಿ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಆತ್ಮಹತ್ಯೆ ಮಾಡಿಕೊಂಡವರ ಪಟ್ಟಿ ಇವೊತ್ತು ಸರ್ಕಾರದ ಬಳಿ ಇಲ್ಲ. ಸರ್ಕಾರಕ್ಕೆ ವರದಿ ಆಗಿದೆಯೋ ಇಲ್ಲವೊ ಗೊತ್ತಿಲ್ಲ. ನನ್ನ ಬಳಿಯೆ ಅಂಥ 38–40 ರೈತರ ಹೆಸರುಗಳಿವೆ. ಸರ್ಕಾರ ತನ್ನ ರೆಕಾರ್ಡ್ಸ್‌ನಲ್ಲಿರುವ ಆತ್ಮಹತ್ಯೆಯ ರೈತರ ಸಂಖ್ಯೆ ಹೇಳಲಿ ಎಂದರು. ನಾನು ಸಾಕಷ್ಟು ರೈತ ಕುಟುಂಬದವರ ಮನೆಗಳಿಗೆ ಭೇಟಿ ಕೊಟ್ಟು ಸಾಂತ್ವನ ಹೇಳಿ ಬಂದಿದ್ದೇನೆ. ಮಂತ್ರಿಗಳು ಯಾರೂ ಹೋಗಿಲ್ಲ. ಇದು ರೈತ ವಿರೋಧಿ ಧೋರಣೆ ಎಂದರು.

**ಶ್ರೀ ಮಲ್ಲಿಕಾರ್ಜುನ ಖರ್ಗೆ** ಅವರು ಇಡೀ ಕರ್ನಾಟಕದಲ್ಲಿ ಎಲ್ಲೆಲ್ಲಿ ಇಂಥ ಘಟನೆಗಳು ನಡೆದರು ಅದಕ್ಕೆ ಸ್ಪಂದಿಸುವುದು ನಮ್ಮ ಸರ್ಕಾರದ ಜವಾಬ್ದಾರಿ. ಅದನ್ನು ಮಾಡಲಾಗುತ್ತಿದೆ ಎಂದರು. **ಶ್ರೀ ಜಗದೀಶ್ ಶೆಟ್ಟರ್** ಅವರು ಮಾತು ಮುಂದುವರಿಸಿ ಗುಲ್ಬರ್ಗ ಮತ್ತು ಬೀದರ್‌ನಲ್ಲಿ ಒಂದೆರಡು ತಿಂಗಳ ಅಂತರದಲ್ಲಿ 18 ಜನರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಆಗ ರೈತ ಕುಟುಂಬಕ್ಕೆ ಪರಿಹಾರವನ್ನು ಒತ್ತಾಯಿಸಿದ್ದರು. ಸದನ ಸಮಿತಿ ಆಯಿತು. ಅದರ ಸದಸ್ಯನಾಗಿ ನಾನೂ ಹೋಗಿದ್ದೆ. 7–8 ರೈತರ ಕುಟುಂಬಗಳಿಗೆ ಸದನ ಸಮಿತಿ ಶಿಫಾರಸ್ಸು ಮಾಡಿತ್ತು. ಆ ಕುಟುಂಬದ ರೈತರು ಸಾಲದ ಬಾಧೆಯಿಂದ ಆತ್ಮಹತ್ಯೆ ಮಾಡಿಕೊಂಡಿದ್ದುದರಿಂದ 1 ಲಕ್ಷ ರೂ. ಪರಿಹಾರ ತಲಾ ಕೊಡಬೇಕೆಂದು ವರದಿಯಲ್ಲಿ ಹೇಳಿದ್ದಂತೆ, ಅಂದಿನ ಸರ್ಕಾರ ಕೊಟ್ಟಿತು ಎಂದರು. ಶ್ರೀ.ಎಸ್.ಎಸ್.ಪಾಟೀಲ್ ಅವರೂ ಜಿಲ್ಲಾ ಉಸ್ತುವಾರಿ ಸಚಿವರು ಹಾಗೂ ಡಿಸಿ ಅವರಿಗೆ ಈ ಪರಿಹಾರ ನೀಡಲು ಅಧಿಕಾರವನ್ನು ನೀಡಿತ್ತು ಎಂದರು. ಶ್ರೀ ಜಗದೀಶ್ ಶೆಟ್ಟರ್ ಅವರು, ಸರ್ಕಾರವೂ ವೀರೇಶ್ ಸಮಿತಿಯು ನೀಡಿರುವ ವರದಿಯನ್ನು ಪರಿಶೀಲಿಸಿ ಫೆಬ್ರುವರಿ ಬಜೆಟ್ ಭಾಷಣದಲ್ಲಿ ಹೇಳಿದಂತೆ ಪರಿಹಾರದ ಹಣವನ್ನು ಸಾಲದ ಹೊರೆಯ ಕಾರಣದ ಆತ್ಮಹತ್ಯೆಯ ರೈತ ಕುಟುಂಬಕ್ಕೆ ಈವರೆಗೂ ಕೊಟ್ಟಿಲ್ಲವೇಕೆ? ಎಂದು ಪ್ರಶ್ನಿಸಿದರು. ಸರ್ಕಾರದ ನಿರ್ಲಕ್ಷ್ಯವೇಕೆ? ಎಂದರು. ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರು ಈ ಬಗ್ಗೆ ವಿಶೇಷ ಸಮಿತಿ ರೂಪಿಸಲಾಗಿದೆ, ಪರಿಹಾರದ ಕೆಲಸ ಮಾಡುತ್ತೇವೆ ಎಂದರು. ಶ್ರೀ ಜಗದೀಶ್ ಶೆಟ್ಟರ್ ಅವರು, ವಿಧಾನ ಸಭೆಯಲ್ಲಿ ವಿಷಯ ಪ್ರಸ್ತಾಪವಾದ ಮೇಲೆ ಪರಿಹಾರಕ್ಕೆ ಮೊನ್ನೆ 18ನೇ ತಾರೀಖು ಆರ್ಡರ್ ಆಯಿತು ಎಂದರೆ ಸರ್ಕಾರದ ಬೇಜವಾಬ್ದಾರಿತನವಾಗಿದೆ.

ಹೀಗಾಗಿ ಸರ್ಕಾರದಿಂದ ಪರಿಹಾರ ನೀಡಿಕೆಗೆ ಮೀನಮೇಷಮಾಡಿರುವುದು, ಆತ್ಮಹತ್ಯೆ ಮಾಡಿಕೊಂಡ ರೈತರ ಸಂಖ್ಯೆ ನೀಡಿಲ್ಲದಿರುವುದು, ಕೊಪ್ಪಳ ಮತ್ತು ಹಿರೀಬಗನಾಳ ಗ್ರಾಮಗಳಲ್ಲಿ ರೈತರ ಮೇಲೆ ನಡೆದಿರುವ ಪೋಲೀಸ್ ದೌರ್ಜನ್ಯ, ಲಾಠಿ ಪ್ರಹಾರ ಅಲ್ಲಿಯ ರೈತರ ಚಳುವಳಿಯನ್ನು ಗ್ರಾಮಸ್ಥರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದೆ, ಹತ್ತಿಕ್ಕುವ ಪ್ರಯತ್ನಗಳು, ರೈತರ ಆತ್ಮಹತ್ಯೆಯಂಥ ದುರಂತಗಳು ರಾಜ್ಯದೆಲ್ಲೆಡೆ ನಡೆಯುತ್ತಿರುವುದು, ಹಳ್ಳಿಗಳಲ್ಲಿ ಬಲವಂತ ಸಾಲವಸೂಲಾತಿ, ಟ್ರಾಕ್ಟರ್ ಸೀಜಿಂಗ್, ಆಸ್ತಿ ಜಪ್ತಿ ಆಗುತ್ತಿರುವುದು, ರೈತರ ಮನೆ ಮುಂದೆ ಅಸಹ್ಯಕರ ಸಾಲ ವಸೂಲಾತಿ ನಡೆಯುತ್ತಿರುವ ಕಾರಣದಿಂದ, ರೈತರು ಮಾನಸಿಕ ಚಿಂತೆಗೀಡಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು ಸಾಲ ವಸೂಲಾತಿಯನ್ನು ಕೈಬಿಟ್ಟು, ರೈತರ ಬೇಡಿಕೆಗಳನ್ನು ಈಡೇರಿಸಬೇಕು ಎಂದೆಲ್ಲ ಹೇಳಿ ತಮ್ಮ ಮಾತುಗಳನ್ನು ಮುಗಿಸಿದರು.

**ಶ್ರೀ ಬಿ.ಸೋಮಶೇಖರ್** ಅವರು ಏಳು ಜನರ ಆತ್ಮಹತ್ಯೆ ಬಗ್ಗೆ ಮಾತನಾಡುತ್ತ ಅನಾರೋಗ್ಯದ ಅಕ್ಕ ಈರಬಸಮ್ಮ ಮೃತಪಟ್ಟಾಗ, ಸಾವಿನ ದುಃಖ ತಡೆಯಲಾಗದೆ ಸೋದರ ಸೋದರಿಯುರು ಕ್ರಿಮಿನಾಶಕ ಔಷಧಿ ಸೇವಿಸಿ ಆತ್ಮಹತ್ಯೆ ಮಾಡಿಕೊಂಡಿರುವುದು ರಾಜ್ಯದ ಇತಿಹಾಸದಲ್ಲಿಯೇ, ಮೊದಲನೆಯದು, ಸಾಮೂಹಿಕ ಆತ್ಮಹತ್ಯೆ ಪ್ರಕರಣಗಳು ಜಾಸ್ತಿ ಆಗಿರುವುದು, ಸಮಾಜದ ಅಶಾಂತಿ, ಆರ್ಥಿಕ ಮುಗ್ಗಟ್ಟು, ಮನಸ್ಸಿನ ದುಗಡ ಇತ್ಯಾದಿ ಸಂದರ್ಭವಾಗಿ ಎಕ್ಸ್‌ಟ್ರೀಮ್ ಸ್ಟೆಪ್‌ನಲ್ಲಿ ಆತ್ಮಹತ್ಯೆ ಮಾಡಿಕೊಂಡಿರಬಹುದಾದ ಪರಿಸ್ಥಿತಿ, ಸಂವಿಧಾನದ ನೀತಿಯಂತೆ ಪ್ರತಿ ವ್ಯಕ್ತಿಯ ಪ್ರಾಣ, ಆಸ್ತಿ ರಕ್ಷಣೆ ಸರ್ಕಾರದ ಹೊಣೆ ಆಗಿರುವುದು, ಬಡತನದ ಬೇಗೆಯಿಂದ ಈ ಏಳು ಜನರ ಸಾಮೂಹಿಕ ಆತ್ಮಹತ್ಯೆ ಘಟಿಸಿರುವುದು, ಈ ಕುಟುಂಬದ ಸಮಸ್ಯೆ ಎಷ್ಟೋ ದಿನಗಳಿಂದ ಕಾಡುತ್ತಿದ್ದಾಗ, ಪರಿಹಾರ ಕಾಮಗಾರಿಗಳು ಅವರಿಗೆ ನೆರವಾಗದಿರುವುದು, ಇಂಥ ಸಂದರ್ಭಗಳಲ್ಲಿ ನೈತಿಕ ಹಾಗೂ ಸಂವಿಧಾನಾತ್ಮಕವಾಗಿ ಸರ್ಕಾರದ ಜವಾಬ್ದಾರಿ ಇರುವುದು, ಪೋಲೀಸ್ ಸ್ಟೇಷನ್ ವ್ಯಾಪ್ತಿಯಲ್ಲಿ ಸಾಮಾಜಿಕ ಪರಿಸ್ಥಿತಿ, ಸಾರ್ವಜನಿಕ ಸಮಸ್ಯೆ, ಗ್ರಾಮಸಮಸ್ಯೆಗಳನ್ನು ಸಂಪರ್ಕ ಸಭೆಗಳ ಮೂಲಕ ತಿಳಿದುಕೊಂಡು ಪರಿಹಾರ ಸೂಚಕ ಕಾರ್ಯಗಳು ಆಗುತ್ತಿಲ್ಲದಿರುವುದೇ ಇಂಥ ಆತ್ಮಹತ್ಯೆ ದುರಂತಗಳಿಗೆ ಕಾರಣವಾಗಿರುವುದು, ಆತ್ಮಹತ್ಯೆಯ ಸಂದರ್ಭಗಳಲ್ಲಿ ಸರ್ಕಾರ ಸ್ಪಂದಿಸದೆ, ಅದರ ಪ್ರಮಾಣ ಬೆಳೆದಿರುವುದು, ಬ್ಯಾಡಗಿಯಲ್ಲಿ 51 ಜನ ರೈತರು ಸಾಲದ ಹೊರೆ ಹೊರಲಾಗದೆ ನೇಣು ಹಾಕಿ

ಕೊಳ್ಳುತ್ತೇವೆಂದು ಸಾಲಾಗಿ ನಿಂತಿರುವ ಸುದ್ದಿ, ಇದನ್ನೆಲ್ಲ ಗಂಭೀರವಾಗಿ ಗಮನಿಸಬೇಕಾದ ಅಗತ್ಯತೆ, ಆತ್ಮಹತ್ಯೆಯ ಕಾರಣಗಳ ತನಿಖೆ, ಹಾಗೂ ಅದನ್ನು ತಪ್ಪಿಸುವ ಉಪಾಯಗಳು, ಸತ್ತವರ ಕುಟುಂಬಕ್ಕೆ ಪರಿಹಾರವನ್ನು ಸೂಕ್ತವಾಗಿ ನೀಡುವುದು, ಕುರಿತೆಲ್ಲ ಹೇಳಿ ತಮ್ಮ ಮಾತುಗಳನ್ನು ಮುಗಿಸಿದರು.

**ಶ್ರೀ ಪಿ.ಜಿ.ಆರ್.ಸಿಂಧ್ಯ** ಅವರು, ಕಳೆದ ಐದು ವರ್ಷಗಳಿಂದ ಸತತವಾಗಿ ರಾಜ್ಯದಲ್ಲಿ ಆತ್ಮಹತ್ಯೆ ನಡೆಯುತ್ತಿದೆ. ಆಗೆಲ್ಲ ರೈತ ಕುಟುಂಬದಲ್ಲಿ ಒಬ್ಬ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದ. ಇಡೀ ಕುಟುಂಬವೆ ಸಾಮೂಹಿಕ ಆತ್ಮಹತ್ಯೆಗೆಳೆಸಿರುವುದು ಇದೇ ಮೊದಲ ಬಾರಿಗೆ ಆಗಿದೆ. ಈ ರೀತಿ ರೈತರು ಆತ್ಮಹತ್ಯೆ ಮಾಡಿಕೊಳ್ಳಬೇಕಾದರೆ, ಕೇಂದ್ರ ಸರ್ಕಾರದ ಪರಿಹಾರವೇನು? **ಕೃಷಿ ನೀತಿ** ಜಾರಿಗೆ ತಂದಿದ್ದರೂ ಸಹ ಪಂಜಾಬು ಹರಿಯಾಣ, ರಾಜಾಸ್ಥಾನದಲ್ಲಿ, ಆಂಧ್ರದಲ್ಲಿ ಸುಮಾರು 10 ಸಾವಿರ ರೈತರು ಈ 5 ವರ್ಷಗಳಲ್ಲಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ರೈತರು ಸಾಲ ತೆಗೆದುಕೊಳ್ಳುವಂಥ ಸ್ಥಿತಿಯಲಿಲ್ಲ; ಬ್ಯಾಂಕ್‌ಗಳು ಸಾಲ ಕೊಡುವಂಥ ಸ್ಥಿತಿಯಲಿಲ್ಲ. ಬ್ಯಾಕಿಂಗ್ ಇನ್ಸ್‌ಟಿಟೂಷನ್‌ಗಳಲ್ಲಿ ಎಷ್ಟು ಜನ ರೈತರು ಸಾಲ ತೆಗೆದುಕೊಂಡಿದ್ದಾರೆ ಎಂಬ ಸಮೀಕ್ಷೆ ಮಾಡಬೇಕಿತ್ತು. ಪರಿಹಾರ ನೀಡುವ ಕೆಲಸವನ್ನು ಕೇಂದ್ರ ಸರ್ಕಾರ ಮಾಡಬೇಕಿತ್ತು. ರೈತರ ಆತ್ಮಹತ್ಯೆಯ ಬಗ್ಗೆ ಕಾಳಜಿ, ಆಸಕ್ತಿ ಇದ್ದಿದ್ದರೆ ಈ ವೇಳೆಗೆ, ನೆರವನ್ನು ಕೇಂದ್ರವು ಘೋಷಣೆ ಮಾಡಬೇಕಿತ್ತು. ಕೇಂದ್ರ ಸರ್ಕಾರ ಇದನ್ನು ಮಾಡಿಲ್ಲ.

ಮೂರು ವರ್ಷದಿಂದ ಬರಗಾಲ ಎಂದು ಹೇಳಲಾಗುತ್ತಿದೆ. ರೈತರಿಗೆ 12.50 ಸಾವಿರ ಕೋಟಿ ರೂ.ಗಳು ತೋಟಗಾರಿಕೆಯಲ್ಲಿ ನಷ್ಟವಾಗಿದೆ. ಅತ್ತೂ ಕರೆದ ಮೇಲೆ ಮೂರು ವರ್ಷವಾದ ಮೇಲೆ ಆತ್ಮಹತ್ಯೆ ಮಾಡಿಕೊಂಡವರಿಗೆ 1 ಲಕ್ಷ ರೂ. ಕೊಡುವ ವಿಚಾರ ಹೇಳಿದ್ದೀರಿ. ಎಷ್ಟು ಜನಕ್ಕೆ ದುಡ್ಡು ಕೊಟ್ಟಿದ್ದೀರಿ? ಅದು ಬರಿ ಘೋಷಣೆ ಆಗಿದೆ. ಯಾವ ಊರಿನಲ್ಲಿ **ಗ್ರೀನ್ ಕಾರ್ಡ್** ಕೆಳಗೆ ಬಡತನದಲ್ಲಿ ಇರುವಂಥ ಕುಟುಂಬಗಳು ಎಷ್ಟಿವೆ! ಹಳ್ಳಿಯಲ್ಲಿ ತಿಳಿದುಕೊಳ್ಳುವುದು ಕಷ್ಟದ ಕೆಲಸವೆ? ಕೇಂದ್ರದಿಂದ ರಾಜ್ಯ ಸರ್ಕಾರವು ಹಳದಿ ಕಾರ್ಡ್ ಯೋಜನೆ ಮಾಡಿರುವಲ್ಲಿ ಅದು ಕೇಂದ್ರದಿಂದ ಪುಕ್ಕಟೆಯಾಗಿ ಅಕ್ಕಿ ಕೊಡುವುದರ ಬಗ್ಗೆ ಹೇಳಲಾಗಿದೆ. ಅದರ ವ್ಯವಸ್ಥೆ ಆಗಿದ್ದಿದ್ದರೆ ಇಂಥ ಪರಿಸ್ಥಿತಿ ಒದಗುತ್ತಿರಲಿಲ್ಲ. ರಾಜ್ಯ ಸರ್ಕಾರಕ್ಕೆ ರೈತರ ಆತ್ಮಹತ್ಯೆ ವಿಚಾರದಲ್ಲಿ ಒಂದು ರೀತಿ ಉದಾಸೀನವಿದೆ, ಅಸಡ್ಡೆ ಇದೆ. ಅಸಹನೀಯವಾಗಿರುವಂಥದ್ದಿದೆ. ಅಂತೇ ಸಾಮೂಹಿಕ ಆತ್ಮಹತ್ಯೆ ಪ್ರಕರಣಗಳು

ಹೆಚ್ಚುತ್ತಿವೆ. ಪ್ರಕೃತಿ ವಿಕೋಪ, ಮಳೆ ಅಭಾವ, ಬರಗಾಲವಿದೆ, ಹಣವಿಲ್ಲ. ನಿಜ, ಆತ್ಮಹತ್ಯೆ ಬೇಡ, ರಕ್ಷಣೆ ಕೊಡುತ್ತೇವೆ ಎಂದು ಸರ್ಕಾರ ಭರವಸೆ ಕೊಡುವುದೂ ಇಲ್ಲವೆ? ರಾಜ್ಯದಲ್ಲಿ 155 ತಾಲೂಕುಗಳಲ್ಲಿ ಬರಗಾಲವಿದ್ದರೂ 121 ತಾ.ನಲ್ಲಿ ಮಾತ್ರ ಬರಗಾಲ ಎಂದು ಬರೆಯಲಾಗಿದೆ. ಚನ್ನಗಿರಿ ತಾ.ನಲ್ಲಿ ಅಡಿಕೆ ಬೆಳೆ ಪೂರ್ಣ ನಾಶವಾಗಿದೆ. ಆ ರೈತರು ಏನು ಮಾಡಬೇಕು? ಅಮಾನವೀಯ ದೃಷ್ಟಿ ಇರಬಾರದು, ಸರ್ಕಾರದ ಧೋರಣೆಯನ್ನು ಪ್ರತಿಭಟಿಸುತ್ತೇನೆ, ಎಂದೆಲ್ಲ ಹೇಳಿ ಮಾತನ್ನು ಮುಗಿಸಿದರು.

**ಶ್ರೀ ಎಸ್.ಪಿ.ಮುದ್ದ ಹನುಮೇಗೌಡ**ರು ತಮ್ಮ ಮಾತುಗಳನ್ನು ಮಂಡಿಸುತ್ತ : ಒಂದೇ ಸಲ ಒಂದು ಕುಟುಂಬದ 6 ಜನ ಸತ್ತರೆಂದ ತಕ್ಷಣ ಅದರಲ್ಲಿ ಸರ್ಕಾರದ ವೈಫಲ್ಯ ಅಥವಾ ಅಧಿಕಾರಿಗಳ ವೈಫಲ್ಯವೆನ್ನುವುದಕ್ಕಿಂತ ಅಂಥ ಆತ್ಮಹತ್ಯೆಗೆ ಕಾರಣವನ್ನು ಮನಶ್ಶಾಸ್ತ್ರದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಬೇಕು. ಅಂಥ ಕುಟುಂಬದ ಪರವಾಗಿ ನಮ್ಮ ಭಾವನೆಗಳನ್ನು ವ್ಯಕ್ತಪಡಿಸುವುದು ನಮ್ಮ ಧರ್ಮ. ಇಂಥ ಘಟನೆಯ ಹಿಂದೆ ಇರುವ ಸಾಮಾಜಿಕ ದೃಷ್ಟಿಯನ್ನು ಅಧ್ಯಯನಿಸಿ, ಅಂಥ ಘಟನೆಗಳನ್ನು ತಡೆ ಹಿಡಿಯಲು ತೆಗೆದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಸಲಹೆ ಕೊಡುವ ಜವಾಬ್ದಾರಿ ಸದನಕ್ಕೆ ಇದೆ; ರಕ್ಷಣೆಯ ಜವಾಬ್ದಾರಿ ಸರ್ಕಾರಕ್ಕಿದೆ. ಇದಕ್ಕೆ ಸಾರ್ವಜನಿಕರ ಸಹಕಾರವೂ ಬೇಕು. ಕುಟುಂಬಕ್ಕೆ ಪರಿಹಾರ ಕೊಟ್ಟಿದ್ದೇವೆ ಎಂದು ಹೇಳಿಕೊಳ್ಳುವ, ಫೋಟೋ ಹಾಕಿಸಿ ಕೊಳ್ಳುವುದರಲ್ಲಿಯೇ ನಾವು ತಲ್ಲೀನರಾಗಬಾರದು, ಆತ್ಮಹತ್ಯೆ ಮಾಡಿಕೊಳ್ಳುವುದು 309ನೇ ಸೆಕ್ಷನ್ ಅಡಿಯಲ್ಲಿ ಅಪರಾಧ. ಆದರೂ ಸರ್ಕಾರವನ್ನು ಇಕ್ಕಟ್ಟಿಗೆ ಸಿಲುಕಿಸುವಂಥ, ಅಥವಾ ಸಮಾಜವನ್ನು ದೃಷ್ಟಿಯಲ್ಲಿಟ್ಟುಕೊಂಡು ಆತ್ಮಹತ್ಯೆಯ ಬೆದರಿಕೆ (black mail) ಹಾಕತಕ್ಕಂಥ ಪ್ರಕರಣಗಳಿದ್ದರೆ ಅಂಥವಕ್ಕೆ ಇತಿಶ್ರೀ ಹಾಕುವಂಥ ಜವಾಬ್ದಾರಿ ಸದನದ ಮೇಲಿದೆ; ಸದನದ ಕರ್ತವ್ಯವಾಗಿದೆ, ಎಂದೆಲ್ಲ ಹೇಳಿ ಮಾತು ಮುಗಿಸಿದರು.

**ಶ್ರೀ ಕರಡಿ ಸಂಗಣ್ಣ ಅಮರಪ್ಪ** ಅವರು, ಯಾವ ಸಂದರ್ಭದಲ್ಲಿ ರೈತ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ, ಯಾವ ರೀತಿಯ ಸಂಕಷ್ಟದಲ್ಲಿದ್ದಾನೆ ಎನ್ನುವುದನ್ನು ಹಿರಿಯ ಶಾಸಕರುಗಳು ವಿವರಿಸಿ ಸಭೆಯ ಗಮನ ಸೆಳೆದಿದ್ದಾರೆ. ಆತ್ಮಹತ್ಯೆಯಲ್ಲಿ ಭಾಗಿಯಾದವರು ಮಾನಸಿಕವಾಗಿ ಆಘಾತಗೊಂಡವರು, ವಯಸ್ಸು ಬಹಳ ಕಡಿಮೆ ಇದ್ದವರು. ಅವರ ಸಾಮೂಹಿಕ ಆತ್ಮಹತ್ಯೆಗೆ ಕಾರಣಗಳಿವೆ: ಕೊಪ್ಪಳ ಜಿಲ್ಲೆಯಲ್ಲಿ ಮೂರು ವರ್ಷಗಳಿಂದ ಮಳೆ ಕೊರತೆಯ ಕಾರಣ ರೈತರ ದಾರುಣಸ್ಥಿತಿ

ಉಂಟಾಗಿರುವುದು; ಬರ ಪರಿಹಾರ ಯೋಜನೆ ನಡೆದಿದೆ ದಿಟ. ಆದರೆ ಬರದ ತೀವ್ರತೆಗನುಗುಣವಾಗಿ ಸರ್ಕಾರದ ಗಮನ ಸಾಗಿಲ್ಲ. ಕೇಂದ್ರದಲ್ಲಿ ಅಕ್ಕಿ ಕೊಳೆಯುತ್ತ ಬಿದ್ದಿದ್ದರೂ ಬರಪರಿಹಾರಕ್ಕೆ ಅದನ್ನು ಕೊಡುತ್ತಿಲ್ಲ. ರಾಜ್ಯ ಸರ್ಕಾರವೂ ಇದರಲ್ಲಿ ತನ್ನ ಪಾಲನ್ನು ನಿರ್ವಹಿಸುತ್ತಿಲ್ಲ. ರೈತರ ಆತ್ಮಹತ್ಯೆಯ ಕಾರಣ ಸರ್ಕಾರದ ಪರಿಹಾರದ ಘೋಷಣೆ ಮಾಡಿರುವುದಕ್ಕೆ ಸ್ವಾಗತವಿದೆ. ವಾಸ್ತವಾಂಶವನ್ನು ಸರ್ಕಾರದ ಸಾರ್ವಜನಿಕರ ಗಮನಕ್ಕೆ ತರುವಂಥ ಕೆಲಸವನ್ನು ಪತ್ರಿಕೆಗಳು ಮಾಡಿವೆ. ಇನ್ನು ತೋಟಗಾರಿಕೆ ಬೆಳೆಗಳ ಬಗ್ಗೆ ಯಾವ ಸರ್ಕಾರಗಳೂ ಪ್ರಸ್ತಾಪಿಸುತ್ತಿಲ್ಲ. ರಾಷ್ಟ್ರೀಯ ಭದ್ರತಾ ಯೋಜನೆಯನ್ನು ಕೇಂದ್ರದಲ್ಲಿದ್ದುದು ರಾಜ್ಯಕ್ಕೆ ವರ್ಗಾಯಿಸಲಾಗಿದೆ. ಕುಟುಂಬದ ಯಜಮಾನ ಸತ್ತಾಗ, ಕುಟುಂಬದವರಿಗೆ ಸೂಕ್ತ ಆರ್ಥಿಕ ನೆರವನ್ನು ಕೊಟ್ಟರೆ ಎಷ್ಟೋ ಸಹಾಯವಾಗುತ್ತದೆ, ಎಂದೆಲ್ಲ ಹೇಳಿದರು.

**ಶ್ರೀ ವಿಶ್ವೇಶ್ವರ ಹೆಗಡೆ** (ಅಂಕೋಲ) ಅವರು, ಕಳೆದ ಮೂರು ವರ್ಷಗಳಿಂದ ರಾಜ್ಯದಲ್ಲಿರುವ ಬರಗಾಲ, 155 ತಾಲೂಕುಗಳಲ್ಲಿ ಬರಗಾಲದ ಬವಣೆ, ಹೊರರಾಜ್ಯಗಳಿಗೆ ಕೂಲಿಗಾಗಿ ಗುಳೆ ಹೋಗುತ್ತಿರುವ ದನಕರುಗಳು ಕಟುಕರ ಪಾಲಾಗುತ್ತಿರುವ ಪರಿಸ್ಥಿತಿ ಇರುವಲ್ಲಿ ಸಚಿವರ ಯಾವುದೋ ಒಂದು ಚರ್ಯೆಯನ್ನು (ದೋಸೆ ತಿನ್ನುವುದು) ಅನಗತ್ಯ ಮೀಡಿಯಾ ಇವೆಂಟ್ ಮಾಡಿರುವುದು, ಬರ ಪ್ರದೇಶದಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು, ಕುರಿತೆಲ್ಲ ಮಾತನಾಡಿದರು. **ಶ್ರೀ ಸಿ.ಆರ್.ಸಗೀರ್ ಅಹಮದ್** ಅವರು, ಟೀಕೆ ಟಿಪ್ಪಣಿಯಿಂದ ಸಮಸ್ಯೆ ಬಗೆಹರಿಯುವುದಿಲ್ಲ. ರಾಜ್ಯದಲ್ಲಿ ರೈತರ ಹಿತದೃಷ್ಟಿಯಿಂದ ಮಾಡಬೇಕಾದುದನ್ನು ಲಘುವಾಗಿ ತೆಗೆದುಕೊಳ್ಳು ವಿಚಾರ ಇಲ್ಲಿಲ್ಲ ಎಂದರು. ಶ್ರೀ ವಿಶ್ವೇಶ್ವರ ಹೆಗ್ಗಡೆ ಕಾಗೇರಿ ಅವರು ಮುಂದುವರಿದು ಡಾ॥ ವಿರೇಶ್ ವರದಿಯ ಸಂಗತಿಗಳನ್ನು ಗಮನಿಸಿ, ರೈತರ ಪರವಾಗಿ ಆತ್ಮಹತ್ಯೆ ಸಂದರ್ಭದಲ್ಲಿ ತಕ್ಷಣ ಪರಿಹಾರ ಕೊಡುವ, ಉದ್ಯೋಗಾವಕಾಶ ಸೃಷ್ಟಿಸುವ, ಕೇಂದ್ರ ಸರ್ಕಾರದಿಂದ ಬರುವ ಹಣಕ್ಕೆ ಪ್ರಯತ್ನ ಪಡುವ, ಸ್ವಶಕ್ತಿಯಿಂದ ಆರ್ಥಿಕ ಕ್ರೋಢೀಕರಣಕ್ಕೆ ಪ್ರಯತ್ನಿಸಬೇಕಾದ ಬಗೆಗೆಲ್ಲ ಮಾತನಾಡಿದರು. ರೈತನಲ್ಲಿ ಆತ್ಮವಿಶ್ವಾಸ ಮೂಡಿಸುವ ಪ್ರಯತ್ನ ಮಾಡಲೂ ಆಗ್ರಹಿಸಿದರು.

**ಶ್ರೀ ಶಿವಾನಂದ ಎಸ್.ಪಾಟೀಲರು,** ಶಿವಮೊಗ್ಗ ಜಿಲ್ಲೆ ಸಾಗರ ತಾಲೂಕಿನಲ್ಲಿ ಕೂಡ ಆದ ಆತ್ಮಹತ್ಯೆ ಕುರಿತು ಹೇಳುತ್ತ, ಈ ಹಿಂದೆ ಜಂಟಿ ಸದನ ಸಮಿತಿಯ ವರದಿಯ ಪ್ರಕಾರ ಪರಿಹಾರ ನೀಡಲಾಗಿದೆಯೆ? ಎಂಬ ಪ್ರಶ್ನೆ ನಮ್ಮೆದುರಿಗಿದೆ.

ರಾಜ್ಯದಲ್ಲಿ 84 ತಾಲೂಕುಗಳು ಶಾಶ್ವತ ಬರಗಾಲಕ್ಕೆ ತುತ್ತಾಗುತ್ತವೆ. ಒಂದು ಮುಂಗಾರಿ ಮಳೆ ಬರದಿದ್ದರೆ ಬರಗಾಲಕ್ಕೆ ಅವು ತುತ್ತಾಗುತ್ತವೆ. ಹಿಂಗಾರಿ ಮಳೆಯೂ ಬರದಿದ್ದರೆ ಸಂಪೂರ್ಣ ಬರಗಾಲಕ್ಕೆ ತುತ್ತಾಗುತ್ತವೆ. ಶಾಶ್ವತವಾಗಿ ಬರಗಾಲವನ್ನು ಹೋಗಲಾಡಿಸಲು ಕೆಲವು ಯೋಜನೆಗಳನ್ನು ಸರ್ಕಾರ ಸೃಷ್ಟಿಸಬೇಕಿತ್ತು. ಸ್ವಲ್ಪ ಮಟ್ಟಿಗಾದರೂ ಪರಿಹಾರದ ದಿಕ್ಕಿನಲ್ಲಿ ಸಾಗಬೇಕಿತ್ತು. ಆತ್ಮಹತ್ಯೆ ಮಾಡಿಕೊಳ್ಳುವ ರೈತರಿಗೆ ಸರ್ಕಾರದಿಂದ ಭರವಸೆಯ ಸಂದೇಶ ಹೋಗಬೇಕು. ಸರ್ಕಾರ ರೈತರ ಪರ ಇದೆ ಎಂದರೆ ರೈತರು ಆತ್ಮಹತ್ಯೆ ಮಾಡಿಕೊಳ್ಳುವ ಅವಶ್ಯಕತೆ ಇರುವುದಿಲ್ಲ. 127 ಕೋಟಿ ರೂ. ಬಡ್ಡಿ ಮನ್ನಾ ಮಾಡಿದೆ ಎಂದು ಸರ್ಕಾರ ಹೇಳಿದರೆ, ಸೀಮಿತ ವರ್ಗಕ್ಕೆ ಸಿಗುವ ಲಾಭವೆನಿಸದೆ ಇಡೀ ರೈತ ಸಮುದಾಯಕ್ಕೆ ಸಿಗುವಂತಿರಬೇಕು. ಫಿಸ್ಕಲ್ ಡಿಫಿಸಿಟ್ ಅರೆಸ್ಟ್ ಮಾಡಿ, ನಾನ್-ಪ್ಲಾನ್ ಎಕ್ಸ್‌ಪೆಂಡೀಚರ್ ಅನ್ನು 2000 ಕೋಟಿ ರೂ.ವರೆಗೆ ಕಡಿಮೆ ಮಾಡಿರುವಲ್ಲಿ, ರೆವೆನ್ಯೂ ರೆಸೀಟ್ಸ್ ಇನ್‌ಕ್ರೀಸ್ ಆಗಿದೆ ಎಂದು ಮಾನ್ಯ ಮುಖ್ಯಮಂತ್ರಿಗಳು ಹೇಳಿದ್ದಾರೆ. ಇಷ್ಟೊಂದು ಆದಾಯ ಸರ್ಕಾರಕ್ಕೆ ಇದೆ ಎಂದರೆ ರೈತರಿಗೋಸ್ಕರ 200-300 ಕೋಟಿ ರೂ.ಗಳ ಯೋಜನೆಯನ್ನು ತ್ವರಿತವಾಗಿ ಅನೌನ್ಸ್ ಮಾಡುವ ಕಾರ್ಯಕ್ರಮಗಳನ್ನು ಹಾಕಿಕೊಂಡರೆ ನಿಜವಾಗಲೂ ಆತ್ಮಹತ್ಯೆ ಪ್ರಕರಣಗಳು ಇಲ್ಲಿಗೇ ನಿಲ್ಲುತ್ತದೆ. ಇಲ್ಲದಿದ್ದರೆ ನಿರಂತರವಾಗಿ ಇದು ನಡೆಯುತ್ತದೆ, ಆತ್ಮಹತ್ಯೆ ಮಾಡಿಕೊಳ್ಳುವ ಸಂದಿಗ್ಧ ಪರಿಸ್ಥಿತಿ ಉದ್ಭವವಾಗದಿರುವ ಹಾಗೆ ಲಾಂಗ್‌ಟರ್ಮ್ ಮೆಷರ್‌ಗಳನ್ನು ಸರ್ಕಾರ ಘೋಷಣೆ ಮಾಡಬೇಕೆಂದೂ ಕೇಳಿಕೊಂಡು ತಮ್ಮ ಮಾತನ್ನು ಮುಗಿಸಿದರು.

ಶ್ರೀ **ಜಿ.ಎಸ್.ಗಡ್ಡದೇವರ ಮಠ** ಅವರು ಮಾತನಾಡುತ್ತ, ನನ್ನ ತಾಲೂಕಿನಲ್ಲಿ ರೈತರು ಚಾವಡಿ ಹಾಗೂ ತಾಲೂಕು ಕಛೇರಿಗೆ ಕೀಲಿ ಹಾಕಲು ಮುಂದಾಗಿದ್ದಾರೆ. ಕಾರಣ ಬೆಳೆ ವಿಮೆ ಪ್ರೀಮಿಯಂ ತುಂಬುವ ಕಡೆಯ ದಿನಾಂಕ 31 ತಾರೀಖನ್ನು ವಿಸ್ತರಿಸಲು ಕೇಳಿಕೊಂಡಿರುವುದಾಗಿದೆ ಎಂದರು. ಸಚಿವ **ಶ್ರೀ ಮಲ್ಲಿಕಾರ್ಜುನ ಖರ್ಗೆ** ಅವರು ಈ ಬಗ್ಗೆ ಕೇಂದ್ರದ ಕೃಷಿ ಸಚಿವರಲ್ಲಿ ಎಕ್ಸ್‌ಟೆನ್‌ಷನ್‌ಗೆ ಕೋರಿದ್ದು ಆದೇಶವನ್ನು ಕಾಯುತ್ತಿದ್ದೇವೆ ಎಂದರು.

**ಛೇರ್ಮನ್** ಅವರು ಈ ಸಂದರ್ಭದಲ್ಲಿ ಶ್ರೀ ಕರಡಿ ಸಂಗಣ್ಣ ಅಮರಪ್ಪ ಅವರ ಮಾತಿಗೆ ಪ್ರತಿಕ್ರಿಯಿಸಿ ಪ್ರತಿಯೊಂದು ಸಾವನ್ನು ಸಹ ಆತ್ಮಹತ್ಯೆ ಎಂದು ಪರಿಗಣನೆ ಮಾಡುವುದು ಅಥವಾ ಸಂಬಂಧವಿಲ್ಲವೆಂದು ಹೇಳುವ ಪ್ರವೃತ್ತಿಗೆ ಅವಕಾಶಕೊಡಬಾರದು. ರೈತ ತನ್ನ ಆತ್ಮಸ್ಥೈರ್ಯವನ್ನು ಕಳೆದುಕೊಳ್ಳುವಂಥ ಪರಿಸ್ಥಿತಿ

ಬಂದಿದೆ. ಬಹುತೇಕ ಸದನದ ಅಭಿಪ್ರಾಯವನ್ನು ಗಣನೆಗೆ ತೆಗೆದುಕೊಂಡು ಸರ್ಕಾರ ಉತ್ತರ ಕೊಡುತ್ತದೆ ಎಂದು ಭಾವಿಸಿದ್ದೇನೆ, ಎಂದರು.

ಸಚಿವ **ಶ್ರೀ ಎಂ.ಮಲ್ಲಿಕಾರ್ಜುನ ನಾಗಪ್ಪ** ಅವರು ಮಾತನಾಡುತ್ತ, ಕೊಪ್ಪಳ ಜಿಲ್ಲೆಯ ಆತ್ಮಹತ್ಯೆ ಘಟನೆ ಬಗ್ಗೆ ಸದನದ ಸದಸ್ಯರು ತಿಳಿಸಿದ ವಿಷಯ ಇಟ್ಟ ಸಲಹೆಗಳ ಬಗ್ಗೆ ಹೇಳಿ, ಕುಷ್ಟಗಿ ತಾಲೂಕಿನ ಎಂ.ರಾಂಪುರ ತಮ್ಮ ಮತ ಕ್ಷೇತ್ರದ ವ್ಯಾಪ್ತಿಯಲ್ಲಿರುವುದು, ಬರಗಾಲ ಕಾಮಗಾರಿಯಲ್ಲಿ ಎರಡು ಕಾಮಗಾರಿಯನ್ನು ಅಲ್ಲಿ ಆರಂಭಿಸಿದುದು, ಸದ್ಯ ಸಾಮೂಹಿಕ ಆತ್ಮಹತ್ಯೆಯ ಕುಟುಂಬದವರಲ್ಲಿದ್ದ ಖಾಯಿಲೆ, ಹಾಗೂ ಇತರ ವಿವರಗಳು, ಆತ್ಮಹತ್ಯೆಯ ಕಾರಣವಾಗಿದ್ದ ಆ ಕುಟುಂಬದವರ ಜೀವನದ ಜುಗುಪ್ಸೆಗಳು, ಆತ್ಮಹತ್ಯೆಯ ಸುದ್ದಿ ತಿಳಿದು ಅಧಿಕಾರಿಗಳು, ಶಾಸಕರು ಹೋಗಿ ಕುಟುಂಬಕ್ಕೆ ಸಾಂತ್ವನ ಹೇಳಿದ್ದು, ತಾವೂ ಭೇಟಿ ಕೊಡಲಿರುವುದು, ಬರಗಾಲ ಕಾಮಗಾರಿ ಹೆಚ್ಚಿನ ರೀತಿಯಲ್ಲಿ ಅಲ್ಲಿ ನಡೆಯಬೇಕೆನ್ನುವ ಸದನ ಸದಸ್ಯರ ಅಭಿಪ್ರಾಯಕ್ಕೆ ಸಮ್ಮತಿ, ಮಳೆಕೊರತೆ ಅನುಸಾರ ತಾಲೂಕುಗಳಲ್ಲಿ ಬರಗಾಲ ಘೋಷಣೆ ಕೂಲಿಗಾಗಿ ಯೋಜನೆಯನ್ನು ಸ್ವತಹ ಉಸ್ತುವಾರಿಯಲ್ಲಿ ಜಾರಿಗೊಳಿಸಿ, ಗೋಕಟ್ಟೆ ಕೆಲಸವನ್ನು ಆರಂಭಿಸಿರುವುದು, ತಾಲೂಕಿನ ಟಾಸ್ಕ್ ಫೋರ್ಸ್ ಮೂಲಕ ಹಣ ಬಿಡುಗಡೆ ಮಾಡುವುದು; ಪ್ರತಿ ಗ್ರಾಮ ಪಂಚಾಯಿತಿಯಲ್ಲಿ ಬರಕಾಮಗಾರಿಯಲ್ಲಿ ಕೂಲಿಗಾಗಿ ಕಾಳು ಯೋಜನೆ ಜಾರಿ; ಹಸಿವಿನಿಂದ ಯಾರೂ ಸಾಯದಂಥ ಪರಿಸ್ಥಿತಿ ನಿರ್ಮಾಣ; ಮಾಹಿತಿ ಒದಗಿರುವಂತೆ ಸತ್ತಿರುವ 185 ರೈತರು ಯಾವ ಕಾರಣಗಳಿಗೆ ಸತ್ತರು ಎಂದು ಡಾ.ವೀರೇಶ್ ವರದಿ ಇದ್ದು, ಆ ಬಗ್ಗೆ ಕಮಿಟಿ ರಚಿಸುವ 16.7.2003ರ ಆದೇಶವಿರುವುದು, ಕುರಿತೆಲ್ಲ ಹೇಳಿದರು.

**ಶ್ರೀ ಪಿ.ಜಿ.ಆರ್.ಸಿಂಧ್ಯ** ಅವರು, ಕರ್ನಾಟಕದಲ್ಲಿ ಎಷ್ಟು ಜನ ಹಸಿವಿನಿಂದ ಸತ್ತಿದ್ದಾರೆ, ಎಷ್ಟು ಜನ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ ಎಂಬುದನ್ನು ನ್ಯಾಷನಲ್ ಹ್ಯೂಮನ್‌ರೈಟ್ಸ್ ಕಮಿಷನ್ (ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗ) ಎಂಬ ಸ್ವತಂತ್ರ ಸಂಸ್ಥೆಯಿಂದ ತನಿಖೆ ಮಾಡಿಸಲು, ಸಲಹೆ ನೀಡಿದರು. ಸಚಿವ **ಶ್ರೀ ಮಲ್ಲಿಕಾರ್ಜುನ ಖರ್ಗೆ** ಅವರು, ಮಾತನಾಡಿ ನಮ್ಮ ರಾಜ್ಯದಲ್ಲಿ ಈ ಹಿಂದೆ ಹಾಗೂ ಇಂದೂ ಎಲ್ಲಿಯೂ ಹಸಿವಿನಿಂದ ರೈತರು ಸತ್ತಿದ್ದಾರೆ ಎಂಬ ವರದಿ ಇಲ್ಲದಿರುವುದು, ಅಸಿಸ್ಟೆಂಟ್ ಕಮೀಷನರ್ ನೇತೃತ್ವದ ಕಮಿಟಿಯನ್ನು ರೈತರು ಸತ್ತ ಕಾರಣದ ಮಾಹಿತಿ ತಿಳಿಯಲು ನೇಮಿಸಿರುವುದು, ದೇಶದಲ್ಲಿ ಶೇ 70 ರಷ್ಟು ಜನ ರೈತರು ಅಥವಾ ರೈತ ಕಾರ್ಮಿಕರು ಇದ್ದು, ಅವರಲ್ಲಿ ರೈತರು ಸತ್ತರೆ ಕಾರಣ

ತಿಳಿದು ಪರಿಹಾರ ಕೊಡುವುದು, ನಿಜಾಂಶ ತಿಳಿದು ಅದರಂತೆ ಕಾರ್ಯ ಕೈಗೊಳ್ಳುತ್ತಿರುವಲ್ಲಿ ಸರ್ಕಾರ ಅತ್ತ ಕಡೆ ಗಮನ ಹರಿದಿಲ್ಲ ಎಂಬ ಆರೋಪ ಸೂಕ್ತವೆನಿಸದಿರುವುದು, ಕುರಿತೆಲ್ಲ ಹೇಳಿದರು. ಕಮಿಟಿಯು ವೀರೇಶ್ ವರದಿಯನ್ನು ಪರಿಶೀಲಿಸಿ ಕೊಡುವಂಥ ಸಲಹೆಗನುಸಾರ ಪರಿಹಾರ ಕೊಡೋಣ ಎಂದರು.

**ಶ್ರೀ ಬಿ.ಸೋಮಶೇಖರ್** ಅವರು, ವಿರೇಶ್ ಕಮಿಟಿ ವರದಿಯು ನಮಗೆ ಸೂಕ್ತವಾಗಿ ಕಂಡುಬಂದಿಲ್ಲ. ಯಾವುದೋ ಕಾರಣಕ್ಕೆ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಎಲ್ಲರಿಗೂ ಪರಿಹಾರ ಕೊಡಲಾಗದು ಎಂದು ಬರೆಸಿಕೊಳ್ಳಲು ಸಮಿತಿ ರಚನೆ ಮಾಡಲಾಗಿದೆ. ಯಾರೂ ಸಹ ಬೇಕೆಂದು ಸಾಯುವುದಕ್ಕೆ ಹೋಗುವುದಿಲ್ಲ. ಈವೊತ್ತು ಈ ಬಗ್ಗೆ ಬಹಳ ಹಗುರವಾಗಿ ಮಾತನಾಡುತ್ತಿದ್ದಾರೆ. ಇದು ಒಪ್ಪುವಂಥದ್ದಲ್ಲ, ಎಂದು ನುಡಿದರು. 51 ಜನ ಆತ್ಮಹತ್ಯೆ ಮಾಡಿಕೊಳ್ಳಲು ಕ್ಯೂ ನಿಂತಿದ್ದಾರೆ – ಈ ಬಗ್ಗೆ ಮಾಹಿತಿ ಬೇಕು ಎಂದ ಶ್ರೀ **ಎಸ್.ಎಸ್.ಪಾಟೀಲ್** ಅವರ ಮಾತಿಗೆ ಶ್ರೀ ಬಿ.ಸೋಮಶೇಖರ್ ಅವರೂ ದನಿಗೂಡಿಸಿ ಹಾಗಾದರೆ ಅದು ಸಾಮೂಹಿಕ ಹತ್ಯೆಯಾಗುತ್ತದೆ ಎಂದರು. ಶ್ರೀ ಪಿ.ಜಿ.ಆರ್.ಸಿಂಧ್ಯ ಅವರು, ಬಡತನ ಮತ್ತು ಸಾಲದ ಕಾರಣ ರೈತರ ಆತ್ಮಹತ್ಯೆ ಎಂಬ ತಮ್ಮ ಅಭಿಪ್ರಾಯಕ್ಕೂ ಹಾಗು ಅದು ಕಾರಣವಲ್ಲ ಎಂಬ ಸರ್ಕಾರದ ಅಭಿಪ್ರಾಯದ ನಡುವೆ ಅಡ್ಡಾಡುವ ಬದಲು ಸುಪ್ರೀಂ ಕೋರ್ಟ್ ಜಡ್ಜ್ ಇರುವಂಥ ಎನ್‌ಎಚ್‌ಆರ್‌ಸಿ.ಗೆ ಈ ವಿಷಯದ ಸತ್ಯಾಂಶ ತಿಳಿಯುವ ಕಾರ್ಯವನ್ನು ವಹಿಸಿ ಎಂದರು. ಮೂರು ವರ್ಷಗಳ ಹಿಂದೆ ಸತ್ತವರ ಕುಟುಂಬದವರಿಗೆ ಪರಿಹಾರ ಸಿಕ್ಕಿಲ್ಲ. ಅಂತೇ ನ್ಯಾಷನಲ್ ಹ್ಯೂಮನ್ ರೈಟ್ಸ್ ಕಮಿಷನ್‌ಗೆ (NHRC) ಈ ಬಗ್ಗೆ ಪರಿಶೀಲಿಸಲು ಕೇಳಿಕೊಳ್ಳಿ ಎಂಬ ಸಲಹೆಯನ್ನು ಇಟ್ಟರು. ನಂತರ ನಡೆದ ಚರ್ಚೆಯಲ್ಲಿ ಅಸಿಸ್ಟೆಂಟ್ ಕಮಿಷನರ್ ಲೆವೆಲ್ ಕಮಿಟಿ ರೂಪಿಸುವುದು, ರೈತರು ಆತ್ಮಹತ್ಯೆ ಮಾಡಿಕೊಂಡ ಕಾರಣಗಳ ಬಗ್ಗೆ ಭಿನ್ನಾಭಿಪ್ರಾಯ ವಾದಗಳು, ನ್ಯಾಯಾಂಗ ತನಿಖೆಗೆ ಒತ್ತಾಯ, 51 ಜನರ ರೈತರ ಸಾಮೂಹಿಕ ಆತ್ಮಹತ್ಯೆ ಮಾಡಿಕೊಳ್ಳಲಿರುವ ವರದಿ ಕುರಿತು ಸರ್ಕಾರದ ಪ್ರತಿಕ್ರಿಯೆ ಇಲ್ಲದಿರುವಿಕೆ, ಕ್ರಾಪ್ ಇನ್ಸೂರೆನ್ಸ್ ಬಂದ ಮೇಲೆ ಬಡ್ಡಿ ಮನ್ನಾ ಮಾಡುವ ವಿಚಾರ, ಸತ್ತಿರುವ ನಿಜವಾದ ರೈತರ ಕುಟುಂಬಕ್ಕೆ ಸಹಾಯ ನೀಡಲು ಸರ್ಕಾರದ ಆದೇಶ, ಬರಗಾಲ ಕಾಮಗಾರಿ ಸಂಬಂಧವಾಗಿ ರಾಜ್ಯಕ್ಕೆ 9.99 ಲಕ್ಷ ಮೆಟ್ರಿಕ್ ಟನ್ ಕಾಳು, 1888 ಕೋಟಿ ರೂ. ಸಹಾಯ ಧನ ಕೇಳಿರುವುದು, ರೈತರಿಗೆ ಪರಿಹಾರ ನೀಡಿಕೆ ಬಗ್ಗೆ ನ್ಯಾಯಾಂಗ ತನಿಖೆ ಬಗ್ಗೆ ಏನೂ ಸರ್ಕಾರ

ಹೇಳದಿರುವುದು ರೈತ ವಿರೋಧಿ ಧೋರಣೆ ಎಂದು ಪ್ರತಿಭಟಿಸಿ ಸಭಾತ್ಯಾಗ ಮಾಡಿದ್ದು, ಆತ್ಮಹತ್ಯೆಯನ್ನು ಯಾವುದೇ ಕಾರಣಕ್ಕೂ ಮಾಡಿಕೊಳ್ಳದಿರಲು ಜನರಿಗೆ ಸಚಿವರ ಮನವಿ, ಬರಗಾಲ ಇರುವ 121 ತಾಲೂಕುಗಳಿಗೆ ತಿಂಗಳಿಗೆ 5–10 ಕೆ.ಜಿ. ಅಕ್ಕಿಯನ್ನು ತಲಾ ಕೊಡುವ ಬದಲು 35 ಕೆ.ಜಿಗೆ ಏರಿಸುವುದು, ಸಾಧ್ಯವೆ? ಹಳದಿ ಕಾರ್ಡುಗಳ ಸಂಖ್ಯೆ (2 1/2 ಲಕ್ಷ) ಬಡತನ ಹಸಿವು, ಸಾಲ, ಹಿಂಸೆ, ಚಿತ್ರ ಹಿಂಸೆ ಕಾರಣ ರೈತರು ಸತ್ತಿರುವರೆಂಬ ಅಭಿಪ್ರಾಯ, ತತ್‌ಕ್ಷಣ ಪರಿಹಾರವೆಂದು 10 ಸಾವಿರ ಕೊಡತಕ್ಕದ್ದು ಎಂದಿದ್ದರೂ ಅಸಿಸ್ಟೆಂಟ್ ಕಮೀಷನರ್ ಕಛೇರಿಯಲ್ಲಿ 3–4 ವರ್ಷಗಳಿಂದ ಬಾಕಿ ಇರುವುದು, ಇತ್ಯಾದಿ ವಿಷಯಗಳು ಚರ್ಚೆಯಲ್ಲಿ ಮೂಡಿ ಬಂದುವು. ಅವುಗಳಲ್ಲಿ ಸಲಹೆಗಳಿದ್ದುವು, ಭಿನ್ನಾಭಿಪ್ರಾಯಗಳಿದ್ದುವು, ವಾದ ವಿವಾದಗಳಿದ್ದುವು, ಉತ್ತರ, ಪ್ರತ್ಯುತ್ತರಗಳಿದ್ದವು, ರೈತರ ಸಂಕಷ್ಟದ ವಿಚಾರಗಳಿದ್ದುವು; ನೆರವೆಂದು ಧನ ಪರಿಹಾರದ ಒತ್ತಾಯವಿಟ್ಟಿದ್ದಿತ್ತು, ಆಡಳಿತಾತ್ಮಕ ಲೋಪಗಳ ಬಗ್ಗೆ ಹೇಳಿದ್ದಿತ್ತು. ಇವೆಲ್ಲ ರೈತರ ಆತ್ಮಹತ್ಯೆಯ ವಿಷಯದ ಸುತ್ತಲೇ ಸುತ್ತುವರಿದಿದ್ದುವು.

ಈ ದಿನದ ಚರ್ಚೆಯಲ್ಲಿ ಸರ್ವಶ್ರೀ ಭಾರತೀ ಶಂಕರ್, ಅರಗ ಜ್ಞಾನೇಂದ್ರ, ಶಿವಾನಂದ ಪಾಟೀಲ್, ಎಸ್.ಸುರೇಶ್ ಕುಮಾರ್, ಹೆಚ್.ಎಂ.ರೇವಣ್ಣ, ಕೆ.ಜಯಪ್ರಕಾಶ್ ಹೆಗಡೆ, ಸಿ.ಆರ್.ಸಗೀರ್ ಅಹಮದ್, ಕೆ.ಷಡಕ್ಷರಿ, ಬಿ.ಎಚ್.ಬನ್ನಿಕೋಡ್ ಅವರುಗಳೂ ಪಾಲ್ಗೊಂಡಿದ್ದರು.

**ವಿಷಯ 8:** ರೈತರ ಆತ್ಮಹತ್ಯೆ : ಅನ್ಯಮೂಲದ ಮಾಹಿತಿಗಳು

ಕೃಷಿ ಸಮಸ್ಯೆಗಳನ್ನು ದಿಟ್ಟವಾಗಿ ಎದುರಿಸಿಕೊಂಡು ಬಂದವನು ನಮ್ಮ ಪಾರಂಪರಿಕ ರೈತ. ಆದರೆ ಇಂದು ರೈತರ ಜೀವನದಲ್ಲಿ ಆತಂಕ ಹಾಗೂ ಸಂಕೀರ್ಣತೆ ಎರಡೂ ಮೇಲಾಳಿಕೆ ಮಾಡಿವೆ. ಕಾರಣ ಸಾಮಾಜಿಕ ಜೀವನದಲ್ಲಿ ನಮ್ಮ ಸಾಂಸ್ಕೃತಿಕ ಮೌಲ್ಯಗಳ ಮೇಲೆ ಆಘಾತಗಳಾಗುತ್ತಿರುವುದು ಒಂದು ಕಾರಣವಾಗಿದೆ. ಸಮಸ್ಯೆ ಎದುರಿಸುವ ಶಕ್ತಿ ಸೂಕ್ಷ್ಮತೆಯನ್ನು ಕಳೆದುಕೊಂಡ ಆತ್ಮಹತ್ಯೆಯೇ ಉಳಿದಿರುವ ದಾರಿ ಎಂದು ವ್ಯಕ್ತಿಯ ಪರಿಭಾವಿಸಿರುವ ದೌರ್ಬಲ್ಯವೂ ಇದಕ್ಕೆ ಕಾರಣವಾಗಿದೆ. ತಾನು ಸತ್ತರೆ ಸಮಸ್ಯೆಯ ಪರಿಹಾರ, ತನಗೂ ಮುಕ್ತಿ ಎಂದು ಕೊಂಡರೆ ಅದೇ ಒಂದು ದುರಂತ. ತನ್ನನ್ನು ನಂಬಿದವರ ಬಾಳುವೆಯ ಗತಿ ಏನು? ಎಂಬ ವಿವೇಚನೆಯೂ ಬೇಕು. ಇದಲ್ಲದೆ ಜೊತೆಗೂಡಿ ಸಾಮೂಹಿಕ ಆತ್ಮಹತ್ಯೆ (ಕುಟುಂಬವಿಡೀ ಆತ್ಮಹತ್ಯೆ) ಮಾಡಿಕೊಂಡರೂ ಸಾಮಾಜಿಕ ದುರಂತವೆ. ಅಂತೇ

ಸಾಮಾಜಿಕರ, ಸರ್ಕಾರದ ಹೊಣೆ, ಪ್ರಜ್ಞೆ ಇಲ್ಲಿ ನೆರವಿಗೆ ಸಾಂತ್ವನಕ್ಕೆ ಧಾವಿಸಬೇಕು. ನಡೆದಿರುವ ಆತ್ಮಹತ್ಯೆಗಳ ಪ್ರಕರಣಗಳೂ ನಮ್ಮ ಪ್ರಜ್ಞೆಗೆ ಸವಾಲೊಡ್ಡುತ್ತಿವೆ. ಜೀವಂತ ವ್ಯಕ್ತಿಗಳನ್ನು ಅಣಕಿಸುವಂತಿವೆ. ರೈತರಿಗೆ ದಿಕ್ಕು ತೋಚದ ಗತಿ ಏಕೆ ಬಂತು! ಯೋಚಿಸಬೇಕು ಮೂಡಿಗೆರೆ ತಾ.ಸಾರಗೋಡು ಗ್ರಾಮದ ಮೀಸಲು ಅರಣ್ಯ ನಿವಾಸಿಯಾದ ಬಡ ರೈತನಿಗೆ ಅರಣ್ಯ ಇಲಾಖೆ ಒಕ್ಕಲೆಬ್ಬಿಸುವ ನೋಟೀಸ್ ಬಂತು. ಅವನು ಕೀಟನಾಶಕ ಸೇವಿಸಿ ಆತ್ಮಹತ್ಯೆ ಮಾಡಿಕೊಂಡ. ಇಲ್ಲಿ ನೂರಾರು ವರ್ಷಗಳಿಂದ ಕಾಡಿನ ಪರಿಸರಕ್ಕೆ ಹೊಂದಿಕೊಂಡು ನೆಮ್ಮದಿ ಬಾಳುತ್ತಿದ್ದ ಜನರಿಗೆ ಅನುಕೂಲಿಸುವಂತೆ ಅರಣ್ಯ ಸಂರಕ್ಷಣೆ ಕಾಯ್ದೆಗೆ ತಿದ್ದುಪಡಿ ತರಬೇಕು ಎಂಬುದೊಂದು ಸಲಹೆ ಇದೆ (30.1.06). ಜೊತೆಗೆ ಕಾಡುಬಿಟ್ಟು, ಹೊರಗೆ ಪರ್ಯಾಯ ಜೀವನ ನಿರ್ವಹಣೆಗೆ ದಾರಿ ತೋರದಿದ್ದರೆ, ತರಬೇತಿ ನೀಡದಿದ್ದರೆ ಆಗುವ ಅನಾಹುತ ಇದೇ. ಬೆಳೆಗಾಗಿ ಮಾಡಿದ್ದ ಸಾಲ ತೀರಿಸಲಾಗದೆ ಮಾನವಿ ತಾ.ಹಿರೇಕೊಟ್ನಕಲ್ ಗ್ರಾಮದ ಯುವರೈತ ತಿಮ್ಮನಗೌಡ (22) ಆತ್ಮಹತ್ಯೆ ಮಾಡಿಕೊಂಡ. ಕಳೆದ ವರ್ಷದ ಬೆಳೆ ಅತಿ ವೃಷ್ಟಿಯಿಂದ ಹಾನಿಗೊಂಡಿದ್ದರೆ, ತುಂಗಭದ್ರಾ ಎಡದಂಡೆ ನಾಲೆಯಿಂದ ನೀರು, ಬೆಳೆ ಕೈಗೆ ಬರುವವರಿಗೆ ದೊರೆಯಲಿಲ್ಲ. ಸಾಲ ತೀರಿಸಲಾಗದೆ ಜುಗುಪ್ಸೆಗೊಂಡು ಕ್ರಿಮಿನಾಶಕ ಸೇವಿಸಿ ಅಸ್ವಸ್ಥಗೊಂಡ; ಆಸ್ಪತ್ರೆಗೆ ಸಾಗಿಸುವ ಹಾದಿಯಲ್ಲಿಯೇ ಮೃತಪಟ್ಟ; ರಾಯಚೂರು ಜಿಲ್ಲೆ ನಾರಾಯಣಪುರ ಬಲದಂಡೆ ನಾಲೆ ಒಡೆದು ಬೆಳೆದು ನಿಂತಿದ್ದ ಬೆಳೆಗೆ ನೀರು ನುಗ್ಗಿ ನಷ್ಟವಾಗಿ ದೇವದುರ್ಗ ತಾಲೂಕಿನ ರೈತ ಆತ್ಮಹತ್ಯೆ ಮಾಡಿಕೊಂಡ. ಹಿಂದೆ ಮಳೆ ಕೈಕೊಟ್ಟು ಬೆಳೆ ಬರದಿದ್ದಾಗ ಇವರುಗಳೇ ಹೋಗಿ ಕೂಲಿ ಮಾಡಿ ಬದುಕುತ್ತಿದ್ದ ಸ್ಥೈರ್ಯ, ನೀರಾವರಿ ಬಂದ ಮೇಲೆ ಜೀವನ ಶೈಲಿ ಬದಲಾಗಿ, ಅಂಥ ಸ್ಥೈರ್ಯವನ್ನು ಇಂದಿನ ರೈತರು ಕಳೆದುಕೊಳ್ಳುತ್ತಿದ್ದಾರೆಯೆ? ಎನಿಸುತ್ತದೆ. ಕಾಲುವೆ ಒಡೆದು ನೀರು ನಷ್ಟ, ಬೆಲೆ ಕುಸಿತ, ಪ್ರಕೃತಿ ವಿಕೋಪ, ಬೆಳೆ ರೋಗಗಳು, ಕಳಪೆ ಬೀಜ ಮತ್ತು ಗೊಬ್ಬರ ಸರಬರಾಜಿನ ಕಾರಣ ಬೆಳೆ ನಷ್ಟ, ಕೂಲಿ ಹೆಚ್ಚಳ, ಸಾಲದ ಅನಿವಾರ್ಯತೆ, ಹಾಗು ಪರಿಣಾಮ ಈ ಸಂಕಷ್ಟಗಳಿಗೆ ಸಿಕ್ಕಿದ ರೈತರು ಆತ್ಮಹತ್ಯೆ ಹಾದಿಗೆಳಸಿರುವುದು ಇಂದಿನ ಸಾಮಾಜಿಕ ವಿಪರ್ಯಾಸ.

ಕಾಗವಾಡದ ವಿಜಯ ಶಾಮರಾವ ಗಾಯಕವಾಡ (49)ನಿಗೆ ಇದ್ದ 2 ಎಕರೆಯಲ್ಲಿ 2 ವರ್ಷದಿಂದ ಬೆಳೆ ಬರದೆ ಲಕ್ಷ ರೂಪಾಯಿ ಸಾಲದಲ್ಲಿ 25 ಸಾವಿರ ರೂ. ಮರುಪಾವತಿಗೆ ಸಾಧ್ಯವಾಗದೆ ಮನೆಯಲ್ಲಿ ಆ ರೈತ ನೇಣು

ಹಾಕಿಕೊಂಡ; ಇದ್ದ ಸ್ವಲ್ಪ ತೋಟದಲ್ಲಿ ಈರುಳ್ಳಿ ಮತ್ತು ಸೂರ್ಯಕಾಂತಿ ಬಿತ್ತನೆ ಮಾಡಿದ್ದ ಚಳ್ಳಕೆರೆ ತಾ.ಹೊಸಮುಚ್ಚಗುಂಟೆ ಗ್ರಾಮದ ರೈತ ನಾಗರಾಜರೆಡ್ಡಿ 80 ಸಾವಿರ ರೂ. ಸಾಲ ಮಾಡಿದ್ದ ಬೆಳೆ ಆಗಲಿಲ್ಲ. ಬದುಕು ಕಷ್ಟವಾಯಿತು. ಸಾಲದ ತಗಾದೆಯಿಂದ ವಿಷಸೇವಿಸಿ ಪ್ರಾಣಬಿಟ್ಟ; ಕೊಪ್ಪಳ ತಾ. ಡೊಂಬರಳ್ಳಿಯಟ ವಾಸಪ್ಪ ಕಲ್ಲಪ್ಪ ಕರಡ್ಡಿ (35)ಗೆ 2 ಲಕ್ಷ ರೂ. ಬ್ಯಾಂಕ್ ಮತ್ತು ಖಾಸಗಿ ಸಾಲವಿದ್ದು, ಬೆಳೆ ವಿಫಲವಾಗಿತ್ತು. ಹೊಲಕ್ಕೆ ಹೋಗಿ ವಿಷಸೇವಿಸಿ ಆತ್ಮಹತ್ಯೆ ಮಾಡಿಕೊಂಡ. ಅವನಿಗಿದ್ದವರು ಪತ್ನಿ ಹಾಗೂ ಮೂವರು ಮಕ್ಕಳು; ಕೋಲಾರ ತಾ. ಮಂಗಸಂದ್ರ ಗ್ರಾಮದ ಎನ್.ವೆಂಕಟೇಶಪ್ಪ, ಮುದುವತಿ ಗ್ರಾಮೀಣ ಬ್ಯಾಂಕ್ ಹಾಗೂ ಖಾಸಗಿ ವ್ಯಕ್ತಿಗಳಿಂದ 4 ಲಕ್ಷ ರೂ. ಸಾಲ ಪಡೆದಿದ್ದ. ಬೆಳೆ ಬರಲಿಲ್ಲ, ಸಾಲ ಮರುಪಾವತಿ ಮಾಡಲಾಗದೆ, ಬಡ್ಡಿ ಕಟ್ಟಲಾಗದೆ ತಿರುಪತಿಗೆ ಹೋಗಿ ಆತ್ಮಹತ್ಯೆ ಮಾಡಿಕೊಂಡ; ಹಿರಿಯೂರು ತಾ. ಬ್ಯಾಡರಹಳ್ಳಿ ರೈತ ಕೆಂಚರಾಯನಿಗೆ ಪಿ.ಎಲ್.ಡಿ ಬ್ಯಾಂಕಿನಲ್ಲಿ, ಮಸ್ಕಲ್ ಗ್ರಾಮದ ಮೂರು ಎಕರೆ ಜಮೀನಿಗೆ ಕೊಳವೆ ಭಾವಿಗಾಗಿ ಮಾಡಿದ ಸಾಲ, ಕಳಪೆ ವಿದ್ಯುತ್ ಪೂರೆಕೆಯಿಂದ 5–6 ಬಾರಿ ಪಂಪ್‌ಸೆಟ್ ಮೋಟಾರು ಸುಟ್ಟುಹೋಗಿ ದುರಸ್ತಿಗಾಗಿ ಕೈಗಡ ಸಾಲ ಇತ್ತು. ಕೊಳವೆ ಭಾವಿಗೆ ನೀರು ಹೆಚ್ಚು ಬರಲಿಲ್ಲ. ಮನೆಗಷ್ಟೆ ದವಸಧಾನ್ಯ ಆಗಿತ್ತು. ಬ್ಯಾಂಕಿನ ಒತ್ತಡದಿಂದಾಗಿ ತನ್ನ ಜಮೀನಿನ ಅರ್ಧ ಭಾಗ ಮಾರಿ ಹಾಗೂ ಕೈಗಡ ಹಣದಿಂದ ಬ್ಯಾಂಕ್ ಸಾಲ ತೀರಿಸಿದ್ದ. ಉಳಿದ 1.50 ಎಕರೆ ಜಮೀನಿನಲ್ಲಿ 10 ಗುಂಟೆಯನ್ನು ರಸ್ತೆ ಮಾಡಲು ಕೊಡಬೇಕಾಯಿತು. ಇದ್ದ ಜಮೀನಿನಿಂದ ಜೀವನ ನಿರ್ವಹಣೆ ಕಷ್ಟವಾಗಿ, ಕೈಗಡ ಸಾಲ ತೀರಿಸಲಾಗದೆ ಮನೆಯಲ್ಲಿಯೇ ವಿಷ ಸೇವಿಸಿದ. ಆಸ್ಪತ್ರೆಗೆ ಗ್ರಾಮಸ್ಥರು ಆತನನ್ನು ಸೇರಿಸಿದರೂ ಚಿಕಿತ್ಸೆ ಫಲ ಕೊಡಲಿಲ್ಲ.

ಕಬ್ಬಿಗೆ ವೈಜ್ಞಾನಿಕ ಬೆಲೆ ನಿಗದಿಗಾಗಿ ಮೂರು ದಿನಗಳ ಕಾಲ ಏಕ ಪ್ರಕಾರವಾಗಿ ಪ್ರತಿಭಟನೆ ಮಾಡುತ್ತಿದ್ದ ಐವರು ರೈತರು ಮೈಸೂರು ಜಿಲ್ಲಾಧಿಕಾರಿಗಳ ಕಛೇರಿಯ ಮುಂದೆ ಅದರ ಎಡಭಾಗದ ಮರಗಳನ್ನು ಏರಿದರು. ಈ ಐವರು ಕಬ್ಬಿನ ಬೆಳೆಗಾರರು ರೈತರಿಗಾಗಿ ನಮ್ಮ ಪ್ರಾಣ ಹೋಗಲಿ, ಕಬ್ಬಿಗೆ ಜಿಲ್ಲಾಧಿಕಾರಿಗಳು ನ್ಯಾಯ ಬೆಲೆಯನ್ನು ಆಗಲಾದರೂ ನಿಗದಿ ಪಡಿಸಲಿ ಎಂದು ಘೋಷಣೆ ಕೂಗುತ್ತಾ ನೇಣು ಬಿಗಿದುಕೊಳ್ಳಲು ಯತ್ನಿಸಿದರು. ಪೋಲೀಸರು ತಕ್ಷಣ ಮರವನ್ನು ಏರಿ ಅವರ ಪ್ರಯತ್ನಕ್ಕೆ ತಡೆ ಹಾಕಿದರು. ಜಿಲ್ಲಾಧಿಕಾರಿಯವರು ಸ್ಥಳಕ್ಕೆ ಬಂದು, ವಾರದೊಳಗೆ ಬೆಲೆ ನಿಗದಿಗೆ ಕ್ರಮ ಕೈಗೊಳ್ಳುವುದಾಗಿ ಭರವಸೆ ನೀಡಲಾಗಿ ರೈತರ

(ಆತ್ಮಹತ್ಯಾ) ಪ್ರತಿಭಟನೆ ಸದ್ಯಕ್ಕೆ ಸ್ಥಗಿತಗೊಂಡಂತಾಗಿತ್ತು. 'ಆತ್ಮಹತ್ಯೆ'ಯ ಪ್ರಯತ್ನವೂ ಪ್ರತಿಭಟನೆಯ ಒಂದು ಸ್ವರೂಪವಾಗಿ ಕಾಣಿಸಿಕೊಂಡದ್ದು, ಆಡಳಿತಕ್ಕೆ ಕೊಟ್ಟ ಒಂದು ಎಚ್ಚರಿಕೆಯಂತೆಯೇ ಇದೆ. ರೈತರ ಕಷ್ಟ ಪರಿಹಾರವಾಗದಿದ್ದರೆ, ಆತ್ಮಹತ್ಯೆಯೇ ಮಾರ್ಗ ಎಂಬ ಮನೋಸ್ಥಿತಿಗೆ ರೈತರು ಬರಲು ಇತರ ಕಾರಣಗಳನ್ನು ಹುಡುಕಬೇಕು.

ಚನ್ನಪಟ್ಟಣ ತಾ. ಹೂಡಿಕೆ ಹೊಸಳ್ಳಿಯ ರೈತ ಶ್ರೀಕಂಠೇಗೌಡ ಆನೆಗಳ ದಾಳಿಯಿಂದ ಕಬ್ಬು ಹಾಗೂ ಬಾಳೆ ತೋಟ ನಾಶವಾದುದಕ್ಕೆ ಜುಗುಪ್ಸೆಗೊಂಡು ವಿಷ ಸೇವಿಸಿ ಆತ್ಮಹತ್ಯೆ ಮಾಡಿಕೊಂಡ ಪ್ರಕರಣವಾಯಿತು. ಈ ಸಂದರ್ಭದಲ್ಲಿ ಮಾನ್ಯ ಮುಖ್ಯಮಂತ್ರಿಯವರು ಮೃತರ ಕುಟುಂಬಕ್ಕೆ ಭೇಟಿ ನೀಡಿ ಸಾಂತ್ವನ ಹೇಳಿ ರೈತ ಸಮುದಾಯಕ್ಕೆ ಆತ್ಮಹತ್ಯೆ ಹಾದಿ ಬೇಡ ಎಂದೂ ಮನವಿ ಮಾಡಿದುದು ಸ್ವಾಗತಾರ್ಹವಾಗಿತ್ತು.

ಹುಣಸೂರು ತಾ. ಬಿಳಿಕೆರೆ ಹೋಬಳಿ ಗೆಜ್ಜಯ್ಯನ ವಡ್ಡರಗುಡಿ ಗ್ರಾಮದಲ್ಲಿ ರೈತ ಶಿವಣ್ಣನ ಒಂದು ಎಕರೆ ಜಮೀನಿತ್ತು. ಮಠವೊಂದು ಆಕ್ರಮಿಸಿದ್ದ ಗ್ರಾಮದ ಗೋಮಾಳದ ಜಮೀನಿನ ಭಾಗದಲ್ಲಿ ಈ ರೈತನ ಜಮೀನು ಸೇರಿತ್ತು. ಈ ಅತಿಕ್ರಮಣದಿಂದ ತನ್ನ ಜಮೀನು ಕೈ ತಪ್ಪಿ ಹೋಗುತ್ತದೆ ಎಂಬ ಆತಂಕದಲ್ಲಿ ಅವನು ವಿಷ ಸೇವಿಸಿ ಆತ್ಮಹತ್ಯೆ ಮಾಡಿಕೊಂಡ. ಇದಕ್ಕೆ ಮಠವೇ ಹೊಣೆ ಎಂದು ಗ್ರಾಮಸ್ಥರು ಪ್ರತಿಭಟಿಸಿ, ರೈತನ ಕುಟುಂಬಕ್ಕೆ ಪರಿಹಾರ ನೀಡಿ ಅತಿಕ್ರಮಿತ ಜಾಗವನ್ನು ಹಿಂದಿರುಗಿಸಬೇಕೆಂದು ಒತ್ತಾಯವಿಟ್ಟರು. ಪರಿಹಾರ ಘೋಷಣೆ ಆಗುವವರೆವಿಗೆ ಶವವನ್ನು ಮರಣೋತ್ತರ ಪರೀಕ್ಷೆಗೆ ನೀಡುವುದಿಲ್ಲ ಎಂದು ಧರಣಿ ಕುಳಿತರು ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು ನ್ಯಾಯಯುತವಾಗಿ ವಿವಾದ ಬಗೆ ಹರಿಸುವ ಭರವಸೆ ಕೊಡಲು ಗ್ರಾಮಸ್ಥರು ಧರಣಿಯನ್ನು ನಿಲ್ಲಿಸಿದರು. ಮಠದ ಮೂಲಗಳೇನೋ ರೈತನ ಆತ್ಮಹತ್ಯೆಗೆ ವೈಯಕ್ತಿಕ ಸಮಸ್ಯೆಯೆ ಕಾರಣ ಎಂದಿವೆ.

5 ಎಕರೆ ತೋಟ (ಅಡಕೆ) ಹಳದಿ ರೋಗದಿಂದ ಸಂಪೂರ್ಣವಾಗಿ ನಾಶಗೊಂಡ ಕಾರಣ, ಧಾರಣೆ ಕುಸಿತ, ಗುಟ್ಕಾ ನಿಷೇಧ ಸುದ್ದಿ ಹಾಗೂ ಬ್ಯಾಂಕಿನ 25 ಲಕ್ಷ ರೂ. ಸಾಲದ ಹೊರೆಯ ಕಾರಣ ಚಿಕ್ಕಮಗಳೂರು ಜಿಲ್ಲೆ ಕೊಪ್ಪ ತಾ. ಮರಿತೊಟ್ಲು ಗ್ರಾಮದ ಶ್ರೀಮಂತ ಅಡಕೆ ಬೆಳೆಗಾರ ಅರುಣ್ ಅವರು ಆತ್ಮಹತ್ಯೆ ಮಾಡಿಕೊಂಡರು. ಜೀವದ ಬೆಲೆ ಇಂಥದ್ದಕ್ಕೆ ಗುತ್ತಿಗೆಯಾಗಬೇಕೆ? ಎಂದು ಪ್ರಶ್ನೆಯೂ ಏಳುತ್ತದೆ. ಅದಕ್ಕೆ ಉತ್ತರಿಸಬೇಕಾದ ವ್ಯಕ್ತಿ ಇಲ್ಲದಿದ್ದರೂ ಅಂಥ ಪ್ರಯತ್ನಗಳಿಗೆ ಮುಂದಾಗುವವರಿಗೆ ಇದು ಮನವರಿಕೆ ಆಗುವಂತೆ ಮಾಡುವುದು ಸಾಮಾಜಿಕ

ಹೊಣೆ. ಬಯಲು ಸೀಮೆಯ ರೈತರ ಆತ್ಮಹತ್ಯೆ ಪ್ರಕರಣದಂಥವು ಮಲೆನಾಡಿನ ಶ್ರೀಮಂತ ಅಡಕೆ ಬೆಳೆಗಾರರವರೆಗೂ ಹೆಚ್ಚಿದ್ದು ಪರಿಸ್ಥಿತಿಯ ವ್ಯಂಗ್ಯವೆನಿಸಿದೆ.

ಸಾಲದ ಆತಂಕಕ್ಕೀಡಾದ ಬಿಜಾಪುರದ ಸಿಂಧಗಿ ತಾ. ತಿಳಿಗೊಳ ಗ್ರಾಮದ ರೈತ ಪ್ರಭುಗೌಡ ಬಾಮುಗೌಡ ಪಾಟೀಲ್ (42), ಹಾಗೂ ಈರುಳ್ಳಿ ಬೆಲೆ ಕುಸಿತದಿಂದ ಕಂಗೆಟ್ಟ ರಾಯಚೂರು ಜಿಲ್ಲೆ ಲಿಂಗಸೂಗೂರು ತಾ. ರಾಂಪೂರ ಗ್ರಾಮದ ನಿಂಗಪ್ಪ ನಾಗರಾಳ (52) ವಿಷಸೇವಿಸಿ ಆತ್ಮಹತ್ಯೆ ಮಾಡಿಕೊಂಡರು. ಅದೇ ದಿನ, ಮಗಳ ಮದುವೆಗೆ ಮಾಡಿದ ಕೈಗಡ ಸಾಲ ತೀರಿಸಲಾಗದೆ ಅರಸೀಕೆರೆ ತಾ. ಜಾವಗಲ್ ಗ್ರಾಮದ ರೈತ ಮಹಿಳೆ ಮಂಜುಳಾ ಕೂಡ ಆತ್ಮಹತ್ಯೆ ಮಾಡಿಕೊಂಡರು; ಹಿರಿಯೂರು ತಾ. ಗೌನಹಳ್ಳಿ ಗ್ರಾಮದ ಜೋಗಪ್ಪ (58) ಕೆನರಾಬ್ಯಾಂಕಿನಲ್ಲಿ 50 ಸಾವಿರ ರೂ. ಬೆಳೆ ಸಾಲ ತೆಗೆದಿದ್ದ. ಜಮೀನು ಹಸನು ಮಾಡಲು, ಬಿತ್ತನೆ ಬೀಜಕ್ಕೆ, ಗೊಬ್ಬರಕ್ಕೆಂದು ಖಾಸಗಿ ಕೈ ಸಾಲ ಪಡೆದಿದ್ದ. ಆದರೆ ಸೂರ್ಯಕಾಂತಿ ಬೆಳೆ ಕೈಕೊಟ್ಟಿತು. ಸಾಲದ ಒತ್ತಡಕ್ಕೆ ಈಡಾಗಿ ಮನೆಯಲ್ಲಿಯೇ ನೇಣು ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡ; ಸ್ವಂತ ಹೊಲದಲ್ಲಿ ಭತ್ತ ಬೆಳೆದು ಅಥವಾ ಕೋರಿಗೆ ಹೊಲ ಮಾಡಿ 3 ರಿಂದ 8 ಸಾವಿರದವರೆಗೆ ನಷ್ಟವಾದರೆ ಅವರ ಪರಿಸ್ಥಿತಿ ಏನು? ಇಂಥ ಪರಿಸ್ಥಿತಿಗೆ ಸಿಕ್ಕ ದಾವಣಗೆರೆ ತಾ. ಕೋಳೇನಹಳ್ಳಿ ಗ್ರಾಮದ ರಾಧಾ ಕೃಷ್ಣ (52) ತನ್ನ ಅಣ್ಣನ ಹೊಲದಲ್ಲಿ ಆತ್ಮಹತ್ಯೆ ಮಾಡಿಕೊಂಡಾತ; ಹೊಸದುರ್ಗ ಸಮೀಪದ ದೇವಪುರ–ಕೋಡಿಹಳ್ಳಿ ಗ್ರಾಮದ ಸಿ.ತಿಮ್ಮಪ್ಪ (54), ಜಾನಕಲ್ ಕೆನರಾ ಬ್ಯಾಂಕ್‌ನಲ್ಲಿ ಅಡಕೆ ಬೆಳೆ ಹಾಗೂ ಕೊಳವೆ ಭಾವಿ ಕೊರೆಸಲು 1.75 ಲಕ್ಷ ಸಾಲ ಮಾಡಿದ್ದ. ಕೊಳವೆ ಭಾವಿ, ಅಡಕೆ ಬೆಳೆ ಎರಡೂ ವಿಫಲವಾದುವು. ಸಾಲದ ಬಾಧೆ ಅಮರಿತು. ವಿಷಸೇವಿಸಿ ಸಾವಿಗೆ ಶರಣಾದ. ಆಸ್ಪತ್ರೆಯ ಚಿಕಿತ್ಸೆಯೂ ಅವನ ಸಾವನ್ನು ತಪ್ಪಿಸಲಿಲ್ಲ; ಬೆಳೆ ನಾಶದಿಂದ ಗುಲ್ಬರ್ಗ ಜಿಲ್ಲೆ ಆಳಂದ ತಾ. ಶ್ರೀ ಚಂದಗ್ರಾಮದ ಸಣ್ಣ ರೈತ ಶಂಕ್ರೆಪ್ಪಾ ಬಿರಾದಾರ (68) ಹಾಗೂ ಗುಲ್ಬರ್ಗ ತಾಲೂಕಿನ ಹೊನ್ನಕಿರಣಗಿಯ ಶಿವಪ್ಪ ನಿಂಗಪ್ಪ ಪೂಜಾರಿ (40) ತೊಗರಿ ಬೆಳೆನಾಶದಿಂದ ಕಂಗಾಲಾಗಿ ಆತ್ಮಹತ್ಯೆ ಮಾಡಿಕೊಂಡರು. ಬೆಳೆ ಸಾಲದ ಹೆದರಿಕೆಯೂ ಇತ್ತು. ಹೀಗೆಯೇ ಸಾಲದ ಬಾಧೆ ತಾಳಲಾರದೆ ತರೀಕೆರೆ ತಾ. ಅರುವನಹಳ್ಳಿಯ ರೈತ ಈರಣ್ಣ (36) ವಿಷಕುಡಿದು ಆತ್ಮಹತ್ಯೆ ಮಾಡಿಕೊಂಡ; ಮುಂಡರಗಿ ತಾ. ಹೆಸರೂರು ಗ್ರಾಮದ ಬಣ್ಣೆಪ್ಪ ಜುಟ್ಲಣ್ಣ (38) 75 ಸಾವಿರ ರೂ. ಸಿಂಡಿಕೇಟ್ ಬ್ಯಾಂಕ್ ಸಾಲ ತೀರಿಸಲಾಗದೆ ವಿಷಸೇವಿಸಿ ಆತ್ಮಹತ್ಯೆ, ಕೂಡ್ಲಿಗಿ ತಾ. ಹಾರಕಬಾವಿ ಸಣ್ಣ ಬಸಣ್ಣ (52) ಬೆಳೆ ನಷ್ಟ ಒದಗಿ

ಬ್ಯಾಂಕ್ ಹಾಗೂ ಖಾಸಗಿ ಸಾಲಗಳನ್ನು ತೀರಿಸಲಾಗದೆ ಕ್ರಿಮಿನಾಶಕ ಸೇವಿಸಿ ಆತ್ಮಹತ್ಯೆ, ಸಾಗರ ತಾ. ಬಳ್ಳಿ ಬಯಲು ಗ್ರಾಮದ ರೈತ ಡಾಕಪ್ಪ ಕುಣಬಿ (55) ಜಮೀನಿನ ಮೇಲೆ ಬ್ಯಾಂಕ್‌ನಿಂದ 30 ಸಾವಿರ ರೂ. ಸಾಲ ಪಡೆದಿದ್ದು ಸಾಲ ಮರು ಪಾವತಿ ನೋಟೀಸ್‌ಗೆ ಹೆದರಿ ವಿಷ ಕುಡಿದು ಆತ್ಮಹತ್ಯೆಗೆ 2007ರ ಜನವರಿ ಆದಿಯಲ್ಲಿ ಶರಣಾದವರು; ಕೊಪ್ಪಳ ಜಿಲ್ಲೆ ಯಲಬುರ್ಗಾ ತಾ. ಕುದರಿ ಕೋಟಗಿ ಗ್ರಾಮದ ರೈತ ಶರಣಪ್ಪ ಹರ್ಲಾಪುರ (45): ಪತ್ನಿ, ನಾಲ್ಕು ಮಕ್ಕಳು ಹಾಗೂ ಅಪಾರ ಬಂಧು ಬಳಗವಿದ್ದವ. ಆದರೂ ಸಾಲದ ಬಾಧೆ ತಾಳಲಾರದೆ ವಿಷಸೇವಿಸಿ ಆತ್ಮಹತ್ಯೆ ಮಾಡಿಕೊಂಡ (7.1.07); ಬೀದರ್ ಜಿಲ್ಲೆ ಅಣದೂರವಾಡಿ ಗ್ರಾಮದ ಪಪ್ಪು ನಿಟ್ಟೂರ (22), ಎಸ್‌ಬಿಐ, ಡಿ.ಸಿ.ಸಿ. ಬ್ಯಾಂಕ್‌ಗಳಲ್ಲಿ 1 ಲಕ್ಷ ರೂ. ಸಾಲ ಪಡೆದಿದ್ದ. ನಿರೀಕ್ಷಿತ ಬೆಳೆ ಬರಲಿಲ್ಲ. ಸಾಲದ ಚಿಂತೆಯಿಂದ ವಿಷಸೇವಿಸಿದ ಎಂದು ಆತನ ತಾಯಿಯ ಮಾತು. ಅವನನ್ನು ಆಸ್ಪತ್ರೆಗೆ ಸೇರಿಸಿದರೂ ಫಲದೊರೆಯಲಿಲ್ಲ (9.1.07); ದಾವಣಗೆರೆ ಜಿಲ್ಲೆ ಹರಿಹರ ತಾ. ಭಾನುವಳ್ಳಿ ಗ್ರಾಮದ ರೈತ ಬೆಳೆ ಮಾರಾಟವಾದರೂ ಸರಿಯಾದ ಬೆಲೆ ಸಿಗದೆ, ಬಂದ ಹಣದಿಂದ ಸಾಲ ತೀರಿಸಲಾಗದೆ ಸಾವಿಗೆ ಶರಣಾದ (16.1.07); ಮೈಸೂರು ಜಿಲ್ಲೆ ಕೆ.ಆರ್.ನಗರ ತಾ. ಕಲ್ಯಾಣಪುರದ ರೈತ ಈರೇಗೌಡ (49) ಕೈಕೊಟ್ಟ ಬೆಳೆ, ಸಾಲ ತೀರದ ವ್ಯಥೆಯಲ್ಲಿ ತನ್ನ ಜಮೀನಿನ ಬಳಿಯಲ್ಲಿಯೇ ವಿಷ ಸೇವಿಸಿದಾತ. ಆಸ್ಪತ್ರೆಗೆ ಸಾಗಿಸುವ ಹಾದಿಯ ಮಧ್ಯದಲ್ಲಿಯೆ ಸಾವು ಒದಗಿತು. ಪತ್ನಿ ಹಾಗು ನಾಲ್ವರು ಪುತ್ರಿಯರಿದ್ದ ಸಂಸಾರಗಳಿಗೆ ಕೆರೆ ವ್ಯವಸಾಯ ಸೇವಾ ಸಹಕಾರಿ ಬ್ಯಾಂಕ್‌ನಲ್ಲಿ 10 ಸಾವಿರ ರೂ. ಸಾಲ ಖಾಸಗಿ ವ್ಯಕ್ತಿಗಳಿಂದ 90 ಸಾವಿರ ಸಾಲ ಪಡೆದಿದ್ದ ಆತನಿಗೆ ಬಾಳೆ ಮತ್ತು ಅರಶಿನ ಬೆಳೆಗೆ ರೋಗ ತಗುಲಿ ಫಸಲಿನ ತೀವ್ರ ನಷ್ಟ ಹಾಗೂ ಕೈ ಸಾಲ ತೀರಿಸಲಾಗದೆ ಆತ್ಮಹತ್ಯೆಗೆ ಶರಣಾದದ್ದೆಂದು ಕುಟುಂಬದವರು ಹೇಳಿದ ಕಾರಣವಾಗಿದೆ. ಮದ್ದೂರು ತಾ. ರೈತ ವಿ.ಎಂ ತಮ್ಮಣ್ಣ (42) ಶಿವಪುರದ ಎಸ್‌ಬಿಐ ಶಾಖೆಯಲ್ಲಿ 35 ಸಾವಿರ ರೂ. ವ್ಯವಸಾಯ ಸೇವಾ ಸಹಕಾರ ಬ್ಯಾಂಕಿನಲ್ಲಿ 15 ಸಾವಿರ ರೂ. ಪತ್ನಿ ಪಾರ್ವತಮ್ಮನ ಹೆಸರಿನಲ್ಲಿ ಸ್ತ್ರೀಶಕ್ತಿ ಸಂಘದಿಂದ 20 ಸಾವಿರ ರೂ. ಖಾಸಗಿ ಲೇವಾದೇವಿದಾರರಿಂದ 2 ಲಕ್ಷಕ್ಕೂ ಹೆಚ್ಚಿನ ಸಾಲ ಪಡೆದಿದ್ದಾತ. ಸಾಲದ ಬಾಧೆ ತಡೆಯಲಾಗದೆ ತನ್ನ ಜಮೀನಿನ ಹುಣಸೇಮರಕ್ಕೆ ನೇಣು ಹಾಕಿಕೊಂಡ (18.3.07); ಬೀದರ್ ಜಿಲ್ಲೆ ಹುಮನಾಬಾದ್ ಪ್ರದೇಶದ ಸಿರಕಟನ ಹಳ್ಳಿಯ ಶಿವಾನಂದ ವೀರಶೆಟ್ಟಿ ಬಿರಾದಾರ (48) ಮೂರು ಎಕರೆಯಲ್ಲಿ ಸಮೃದ್ಧ ಕಬ್ಬು ಬೆಳೆದು, ಅದರ ಕಟಾವಿಗೆ ಕಾರ್ಖಾನೆಯಲ್ಲಿ ಹೋರಾಟ ಪ್ರತಿಭಟನೆ ನಡೆಸಿದ. ಕಬ್ಬು

ನೀರಿಲ್ಲದೆ ಒಣಗಿತು. ಆತ ಕೀಟನಾಶಕ ಕುಡಿದು ಆತ್ಮಹತ್ಯೆ ಮಾಡಿಕೊಂಡ. ಅದೇ ಗ್ರಾಮದ ರೈತ ಅಲಿಯೋದ್ದೀನ್ ಕೂಡ ಬೆಳೆದು ನಿಂತ ಕಬ್ಬನ್ನು ಕಾರ್ಖಾನೆಗೆ ವಿಲೇವಾರಿ ಆಗದೆ ಆತ್ಮಹತ್ಯೆಗೆಳೆಸಿದ್ದ ಗ್ರಾಮಸ್ಥರು ಅದನ್ನು ತಡೆದರು. ಕಪಲಾಪೂರ್‌ನ ಕಲ್ಲಪ್ಪ ಚನ್ನಪ್ಪ ಘಾಳೆ (60) ಒಂದು ಎಕರೆಯಲ್ಲಿ ತಾನು ಬೆಳೆದಿದ್ದ ಕಬ್ಬು ವಿಲೇವಾರಿ ಆಗದೆ ಒಣಗುತ್ತಿದ್ದುದನ್ನು ಕಂಡು ತೀವ್ರ ಆತಂಕಕ್ಕೀಡಾಗಿ ಹೃದಯಾಘಾತದಿಂದ ತೀರಿದ. ಭಾಲ್ಕಿ ತಾ. ನೇಳಗಿ ಗ್ರಾಮದ ರೈತ ಕಲ್ಲಪ್ಪ ರಾಮಶೆಟ್ಟಿ ಕಾರಬಾರಿ ಆತ್ಮಹತ್ಯೆ ಮಾಡಿಕೊಂಡಾತ.(11.4.07). ಅಂದರೆ ಸಾಲ ಮಾಡಿ ಬೆಳೆದ ಕಬ್ಬು ಕಟಾವಾಗದೆ ತೀವ್ರ ಆತಂಕಕ್ಕೆ ಬಿದ್ದರು ರೈತರು. ಸಾಲಗಾರರ ಕಾಟದಿಂದ ದಿಕ್ಕುತೋಚದಾದರು ರೈತರು. ಕಾರ್ಖಾನೆ ಕಬ್ಬನ್ನು ಕೊಂಡಿದ್ದರೆ ಈ ರೈತರ ಆತ್ಮಹತ್ಯೆ ತಪ್ಪುತ್ತಿತ್ತು ಎಂಬುದೂ ಗಮನಕ್ಕೆ ಬರುತ್ತದೆ.

ಜೇವರ್ಗಿ ತಾಲೂಕಿನ (ಗುಲ್ಬರ್ಗಾ ಜಿಲ್ಲೆ) ಗ್ರಾಮೀಣರು 15 ಸಾವಿರ ಟನ್ ಕಬ್ಬು ಬೆಳೆದಿದ್ದರು. ಒಪ್ಪಂದವಾಗಿದ್ದಂತೆ ಶ್ರೀ ರೇಣುಕಾ ಶುಗರ್ ಫ್ಯಾಕ್ಟರಿ ಆಡಳಿತ ಮಂಡಳಿ ಖರೀದಿಸಬೇಕಾಗಿತ್ತು. ಆದರೆ ಕಬ್ಬು ಖರೀದಿಸಲು ಹಿಂದೇಟು ಹಾಕಿದ ಆಡಳಿತ ಮಂಡಳಿಯೊಡನೆ ರೈತರು ಹಲವಾರು ಬಾರಿ ಮಾತುಕತೆ ನಡೆಸಿದರೂ ಫಲ ಕೊಡಲಿಲ್ಲ. ಆ ಕಾರಣ ಕಬ್ಬು ಬೆಳೆಗಾರರು, ತಹಸೀಲ್ದಾರ್ ಕಛೇರಿ ಆವರಣದಲ್ಲಿ ಜಿಲ್ಲಾ ರೈತ ಹೋರಾಟ ಸಮಿತಿ ನೇತೃತ್ವದಲ್ಲಿ 17 ದಿನಗಳಿಂದ ಸರದಿ ಉಪವಾಸ ಸತ್ಯಾಗ್ರಹ ಆರಂಭಿಸಿದ್ದರು. ಸಾಮೂಹಿಕ ಆತ್ಮಹತ್ಯೆ ಮಾಡಿಕೊಳ್ಳುವುದಾಗಿ ರೈತರು ಘೋಷಿಸಿದ್ದರು. ಜಿಲ್ಲಾಡಳಿತದೊಂದಿಗೆ ನಡೆದ ಮಾತುಕತೆ ಪ್ರಯೋಜನವಾಗಲಿಲ್ಲ. ತಹಸೀಲ್ದಾರ್ ಕಛೇರಿ ಆವರಣದಲ್ಲಿ ಹಾಕಿದ್ದ ಹೋರಾಟದ ಟೆಂಟಿನಲ್ಲಿಯೇ ಮಧ್ಯಾಹ್ನ ಸಿದ್ದಪ್ಪ ಬಾಳಪ್ಪ ಗೋಳ, ಭೀಮರಾಯ ಯಲಗೋಡ, ಮಲ್ಲಣ್ಣ ಸೋಮನಾಳ ಕರಕನಳ್ಳಿ, ಸುಭಾಸ್ ಮಾಲಿ ಪಾಟೀಲ್ ರಂಜಣಗಿ, ರೇವಣ ಸಿದ್ದಪ್ಪ ಪಿ.ನೇದಲಗಿ, ಶಿವಶರಣಪ್ಪ ಹಳಿಮನಿ, ಗುಂಡು ರಾಠೋಡ, ಸೂರ್ಯಕಾಂತ ನಾಯಿಕೋಡಿ, ವಿಜಯಕುಮಾರ್ ಪಾಟೀಲ್ ಗೋಂವಗಿ ಮುಂತಾದ ರೈತರು ಮೊದಲೇ ಕ್ರಿಮಿನಾಶಕ ಔಷಧಿಯನ್ನು ತೆಗೆದುಕೊಂಡು ಬಂದಿದ್ದು ಸೇವಿಸಿ ಆತ್ಮಹತ್ಯೆಗೆಳಸಿದರು. ತಕ್ಷಣ ಆ ರೈತರನ್ನು ಆಸ್ಪತ್ರೆಗೆ ಸೇರಿಸಲಾಗಿ ಪ್ರಾಣಾಪಾಯದಿಂದ ಪಾರಾದರು. ಅವರ ವಿರುದ್ಧ ಪ್ರಕರಣವನ್ನು ದಾಖಲಿಸಲಾಯಿತು. ಪ್ರತಿಭಟನಾ ನಿರತ 50 ಜನ ರೈತರನ್ನು ಬಂಧಿಸಲಾಯಿತು (12.4.07). ಅಂದರೆ ಕಾರ್ಖಾನೆ ಆಡಳಿತ ಮಂಡಳಿಯ ಒಪ್ಪಂದ ಭಂಗ, ಕಬ್ಬು

ಖರೀದಿಸದೆ ಒಣಗಲು ಅವಕಾಶ ಮಾಡಿ ರೈತರ ಆತಂಕಕ್ಕೆ ಕಾರಣವಾದದ್ದು, ಖರೀದಿದರದ ಸೂಕ್ತ ನಿಗದಿ ಮಾಡಿ, ಕೊರತೆ ಬಿದ್ದರೆ ಸರ್ಕಾರದ ನೆರವು ಒದಗಬೇಕಾದುದು ಇತ್ಯಾದಿಗಳು ಆಗದೆ ಹತಾಶೆಯಿಂದ ರೈತರ ಸಾಮೂಹಿಕ ಆತ್ಮಹತ್ಯೆಗೆ ಪ್ರಯತ್ನವಾದುದೇ, ರೈತರ ಸರಣಿ ಆತ್ಮಹತ್ಯೆಗಳ ಹಿಂದಿರುವ ಕಾರಣಗಳು ಒಂದೊಂದಾಗಿ ಗಮನಕ್ಕೆ ಬರುತ್ತವೆ; ಪ್ರತಿಭಟನೆಯ ಸ್ವರೂಪಗಳೂ ಕಾಣಬರುತ್ತವೆ.

ಹುಬ್ಬಳ್ಳಿ ತಾ. ಪಾಲಿಕೊಪ್ಪ ಗ್ರಾಮದ ರೈತ ಮಂಜುನಾಥ ಸುಭಾಷ ಚಿಂತಪ್ಪನವರ (32) ಹಾಗೂ ಈತನ ಗರ್ಭಿಣಿ ಪತ್ನಿ ಸರಸ್ವತಿ (25) ಶಿಗ್ಗಾಂವ ತಾಲೂಕಿನ ಬನ್ನೂರಿಗೆ ನೆಂಟರ ಮನೆಗೆ ಹೋಗಿದ್ದರು. ನಂತರ ಈ ರೈತ ದಂಪತಿಗಳು ಆಸ್ಪತ್ರೆಗೆ ಹೋಗಿ ಬರುವ ಬಗ್ಗೆ ಹೇಳಿ ಹೊರಟವರು. ಶಿಗ್ಗಾವ ತಾ. ಗಂಜಿಗಟ್ಟಿ ಬನ್ನಿ ಕೊಪ್ಪದ ಹಾದಿಯ ಹೊಲದಲ್ಲಿ ಕ್ರಿಮಿನಾಶಕ ಸೇವಿಸಿ ಸಾವನ್ನಪ್ಪಿದರು. ಕಳೆದ ವರ್ಷ ಇವರ ಮದುವೆ ಆಗಿತ್ತು. 9 ಎಕರೆ ಹೊಲ ಪಾಲಿಕೊಪ್ಪದಲ್ಲಿತ್ತು. ಆದರೆ ಸಾಲದ ಬಾಧೆ ಅವರ ಸಾವಿಗೆ ಕಾರಣವಾಗಿತ್ತು (21.2.07). ಸಕಲೇಶಪುರ ತಾ. ಬೆಳಗೂಡು ಹೋಬಳಿ ಮೂಗಲಿ ಗ್ರಾಮದ ಲೋಕೇಶ್ (37) ಸಾಲ ಬಾಧೆಯಿಂದ ನೊಂದಿದ್ದಾತ ಕೈ ಸಾಲ ನೀಡಿದ್ದ ವ್ಯಕ್ತಿಗೆ ಚೆಕ್ ನೀಡಿದ್ದು, ಅದು ಬೌನ್ಸ್ ಆಯಿತು. ನ್ಯಾಯಾಲಯದಲ್ಲಿ ಆ ವ್ಯಕ್ತಿ ಮೊಕದ್ದಮೆ ಹೂಡಿದ. ಈ ಸಂಬಂಧವಾಗಿ ಸಮನ್ ತಲುಪಿದ ಕೆಲವೇ ಗಂಟೆಯಲ್ಲಿ ಲೋಕೇಶ್ ಆತ್ಮಹತ್ಯೆ ಮಾಡಿಕೊಂಡಾಗಿತ್ತು (24.2.07). ಹೀಗೆಯೇ ಹುಣಸೂರು ಕಾಳೇಗೌಡನ ಕೊಪ್ಪಲು ಗ್ರಾಮದ ಶಿವಕುಮಾರ್ (35) ವಿಜಯ ಬ್ಯಾಂಕ್‌ನಲ್ಲಿ 2 ಲಕ್ಷ ರೂ. ಓರಿಯಂಟಲ್ ಬ್ಯಾಂಕಿನಲ್ಲಿ 40 ಸಾವಿರ ರೂ. ಸಾಲವಿದ್ದು, ಸಾಲದ ಬಾಧೆ ಸಹಿಸಲಾಗಲಿಲ್ಲ; ಹೂವಿನ ಹಿಪ್ಪರಗಿಯ (ವಿಜಾಪುರ ಜಿಲ್ಲೆ) ರಾಜೇಸಾಬ ಶಾಹುಸೇನ್ ಸಾಬ ಮುಲ್ಲಾ (55) ಪಿ.ಎಲ್‌ಡಿ ಬ್ಯಾಂಕ್, ಗ್ರಾಮದ ಸೊಸೈಟಿ ಸೇರಿದಂತೆ, ಸಾಲವಲ್ಲದೆ ಮತ್ತಿತರ ಕಡೆಯ ಸಾಲವೂ ಇತ್ತು. ಈತನಿಗೂ ಸಾಲದ ಬಾಧೆ; ಇವರೀರ್ವರೂ ವಿಷಸೇವಿಸಿ ಆತ್ಮಹತ್ಯೆ ಮಾಡಿಕೊಂಡರು. ಗುಲ್ಬರ್ಗ ಜಿ. ಜೇವರ್ಗಿ ತಾ. ನೆಲೋಗಿ ಗ್ರಾಮದ ಹುಸೇನಸಾಬ ಬಂದಗಿ ಸಾಬ ಇನಾಮದಾರ (50) ಎಂಬ ರೈತ ಸಾಲದ ಹೊರೆ ತಾಳಲಾರದೆ ರಾತ್ರಿ ಹೊಲದಲ್ಲಿ ಕ್ರಿಮಿನಾಶಕ ಸೇವಿಸಿದ. ಚಿಕಿತ್ಸೆಗಾಗಿ ಆಸ್ಪತ್ರೆಗೆ ಸೇರಿಸಿದರೂ ಸಾವಿಗೀಡಾದ (29.3.07). ಇಂಡಿ ತಾ. ಬಸನಾಳ ಗ್ರಾಮದ ರೈತ ಸೋಮಲಿಂಗ ಕಲ್ಲಪ್ಪ ಖಜಲಿ (42) ಎರಡು ಲಕ್ಷ ಬ್ಯಾಂಕ್ ಸಾಲ ಪಡೆದು ದ್ರಾಕ್ಷಿ ಬೆಳೆದಿದ್ದ. ನೀರಿಲ್ಲದೆ ಆ ಬೆಳೆ ಒಣಗುತ್ತಿದ್ದುದನ್ನು ಕಂಡು ಮತ್ತೆ ಸಾಲ

ಮಾಡಿ ಕೊಳವೆ ಭಾವಿ ತೋಡಿಸಿದ. ಅದೂ ವಿಫಲವಾಯಿತು. ಹತಾಶೆಗೊಂಡ ಅವನು ಸಾಲದ ಬಾಧೆಗೀಡಾಗಿ ವಿಷ ಸೇವಿಸಿ ಆತ್ಮಹತ್ಯೆ ಮಾಡಿಕೊಂಡ; ರಾಯಚೂರು ಜಿಲ್ಲೆ ದೇವದುರ್ಗ ತಾ. ಮಲ್ಲಾಪುರ ತಾಂಡಾ ನಿವಾಸಿ ನೀಲಪ್ಪ ತಂದೆ ಹನುಮನಾಯಕ ಎಂಬ ರೈತ ಪೀಕಾರ್ಡ್ ಬ್ಯಾಂಕಿನಿಂದ 25 ವರ್ಷಗಳ ಹಿಂದೆ ಬೋರ್‌ವೆಲ್‌ಗಾಗಿ ಹಾಗೂ ಆಯಿಲ್ ಎಂಜಿನ್ ಖರೀದಿಗೆ ಸಾಲ ಪಡೆದಾತ. ನಂತರ ಮಕ್ಕಳ ಹೆಸರಲ್ಲೂ ಕೃಷಿಗಾಗಿ ಸಾಲ ಪಡೆದಿದ್ದು ಅದನ್ನು ತೀರಿಸಲು ಸಾಧ್ಯವಾಗಿರಲಿಲ್ಲ-ಏಪ್ರಿಲ್ 30 ರೊಳಗೆ ಸಾಲವನ್ನು ಮರು ಪಾವತಿಸಿದರೆ ಬಡ್ಡಿ ಮನ್ನಾ ಎಂದು ಸಾಲ ನೀಡಿದ ಸಹಕಾರಿ ಬ್ಯಾಂಕಿನಿಂದ ನೋಟೀಸ್ ಬಂತು. ಈ ನೋಟೀಸ್ ನೋಡಿ ಕಂಗೆಟ್ಟ ನೀಲಪ್ಪ ಸಾಲ ಮರುಪಾವತಿಸಲಾಗದೆ ಜುಗುಪ್ಸೆಗೊಂಡು ತನ್ನ ಹೊಲದಲ್ಲಿನ ಮರಕ್ಕೆ ನೇಣು ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡ ಘಟನೆ ನಡೆಯಿತು (2.5.07); ಹುಮನಾಬಾದ್ ತಾ.ಉಡಬಾಳ ಗ್ರಾಮದ ಬಾಲರೆಡ್ಡಿ ತನ್ನ 12 ಎಕರೆ ಪೈಕಿ 4 ಎಕರೆಯಲ್ಲಿ ಬೆಳೆದ ಕಬ್ಬಿನ ಕಟಾವು ಅವಧಿ ಮುಗಿದರೂ ಕಾರ್ಖಾನೆಯವರು ಒಯ್ದಿರಲಿಲ್ಲ. ಗಂಡನ ದುಃಖದ ಸ್ಥಿತಿಯನ್ನು ನೋಡಲಾಗದೆ, ಮನೆಯ ಸಂಕಷ್ಟ ಸಹಿಸಲಾಗದೆ, 7 ವರ್ಷದ ಮಗನೊಂದಿಗೆ ರೈತನ ಗರ್ಭಿಣಿ ಪತ್ನಿ ಮಲ್ಲಮ್ಮ ಬಾಲರೆಡ್ಡಿ (30) ಭಾವಿಗೆ ಬಿದ್ದು ಆತ್ಮಹತ್ಯೆ ಮಾಡಿಕೊಂಡಳು (3.5.07); ಬೀದರ್ ಜಿಲ್ಲೆ ಚಿಟ್ಟಾವಾಡಿ ಗ್ರಾಮದ ರೈತ ದಶರಥ ಗುಂಡಪ್ಪ ಮಲ್ಲಾನೋರ್ (45) ಕಬ್ಬು ಕಟಾವು ವಿಳಂಬ, ಸಾಲದ ಬಾಧೆ ಕಾರಣ ತನ್ನ ಹೊಲದಲ್ಲಿ ನೇಣು ಹಾಕಿಕೊಂಡ (10.5.07). ಇನ್ನು ಕರ್ನಾಟಕದಾಚೆಯ ವಿಶಿಷ್ಟ ರೈತ ಆತ್ಮಹತ್ಯೆಯ ಉದಾಹರಣೆಯೊಂದಿದೆ: ಕೊಲ್ಕತ್ತಾದ ಸಿಂಗೂರ್‌ನಲ್ಲಿ ಪ್ರಶಾಂತ್‌ದಾಸ್ ಎಂಬುವನ ಕೇವಲ ಒಂದೂವರೆ ಎಕರೆ ಜಮೀನು ನಂಬಿಕೊಂಡು ಬದುಕನ್ನು ತನ್ನ ಸೋದರರು, ಮಕ್ಕಳು, ಪತ್ನಿಯೊಡನೆ ಸಾಗಿಸುತ್ತಿದ್ದ. ಈ ಜಮೀನನ್ನು ಅವನ ಅರಿವಿಗೆ ಬಾರದಂತೆ ಟಾಟಾ ಮೋಟಾರು ಸಣ್ಣ ಘಟಕಕ್ಕೆ ಸರ್ಕಾರ ಸ್ವಾಧೀನ ಪಡಿಸಿಕೊಳ್ಳಲಾಗಿ, ಅವನು ಮರಕ್ಕೆ ನೇಣು ಬಿಗಿದಿಕೊಂಡು ಸತ್ತ. ಕಂಪೆನಿಯೊಂದಕ್ಕೆ ಕೃಷಿ ಭೂಮಿಯನ್ನು ವರ್ಗಾಯಿಸಿದ ಫಲವಿದು (26.5.07)

ಯಲಬುರ್ಗಾ ತಾ. ತಳಕಲ್ ಗ್ರಾಮದ ತಿಮ್ಮಾರೆಡ್ಡಿ ಚಾಡಿ (44), ಶ್ರೀಮತಿ ಸರೋಜಾ ಚಾಡಿ (37) ದಂಪತಿಗಳಿಗೆ ಇದ್ದದ್ದು 13 ಎಕರೆ ಜಮೀನು. ಬ್ಯಾಂಕ್ ಮತ್ತು ಖಾಸಗಿ ಸಾಲ 20 ಲಕ್ಷ ರೂ. ಅನ್ನು ತೀರಿಸಲು 8 ಎಕರೆ ಭೂಮಿಯನ್ನು ಮಾರಿದರು. 5 ಎಕರೆಯಲ್ಲಿ ಬೆಳೆದ ದಾಳಿಂಬೆಗಾಗಿ ಮಾಡಿದ 4

ಲಕ್ಷ ರೂ. ಸಾಲದ ಬಾಧೆ ಇತ್ತು. ದಾಳಿಂಬೆ ಬೆಳೆ ಕೈ ಹತ್ತಿಲಿಲ್ಲ. ಈ ಹಿನ್ನೆಲೆಯಲ್ಲಿ ಮಕ್ಕಳು ಮನೆಪಾಠಕ್ಕೆ ಹೋಗಿದ್ದಾಗ ಈ ರೈತ ದಂಪತಿಗಳು ಕ್ರಿಮಿನಾಶಕ ಕುಡಿದು ಆತ್ಮಹತ್ಯೆಗೆಳಸಿದರು. ಆಸ್ಪತ್ರೆಗೆ ಸೇರಿಸಿದ ಶಿವಮ್ಮಾರೆಡ್ಡಿಯವರ ದೇಹ ಸ್ಥಿತಿ ಗಂಭೀರವಾಗಿದ್ದು ಅವರ ಪತ್ನಿ ಸಾವಿಗೀಡಾದರು (15.4.2007). ಇವನ್ನೆಲ್ಲ ಗಮನಿಸಿದರೆ ಹತಾಶೆಯ ಸ್ಥಿತಿಯಲ್ಲಿ ಉಳಿದವರ ಉಸಾಬರಿ ಗಮನಕ್ಕೆ ಬರುವುದಿಲ್ಲ ಎನ್ನಬೇಕೆ? ಅಥವಾ ಇರುವ ಬಂಧುಗಳ ಮಡಿಲಿಗೆ ಹೆತ್ತ ಕುಡಿಗಳನ್ನು ಒಪ್ಪಿಸಿ ಹೋಗುವ ಮನಸ್ಥಿತಿಯೆ? ಇದು ಹಿಂದಿನ ಮಾಸ್ತಿ ಸಂಪ್ರದಾಯದಲ್ಲಿ ಸತಿಯರು ಸತಿಹೋಗುವಾಗ ಮಕ್ಕಳನ್ನು ಬಂಧುಗಳ ರಕ್ಷಣೆಗೆ ಇಟ್ಟು ಹೋಗುವಂಥ ಸಂರಕ್ಷಕ ಆ ಕಾಲದ ಒಪ್ಪಿತ ಉದಾಹರಣೆಯಂತಿರದೆ, ಹತಾಶೆ ಸ್ಥಿತಿಯ ಮಾನಸಿಕ ಆತಂಕದ ದುರಂತದಂತೆ ಭಾಸವಾಗುತ್ತದೆ.

ಕುಮಟಾ ತಾಲೂಕಿನ ಯಲವಳ್ಳಿ ಗ್ರಾಮದ ಮಹಾಬಲೇಶ್ವರ ಕೃಷ್ಣ ಮರಾಠೆ ಎಂಬ ರೈತ ಸಹಕಾರ ಸಂಘದಿಂದ ಕೃಷಿ ಬಳಕೆಗೆ ಹಾಗೂ ಮಗಳ ಮದುವೆಗೆ ಸಾಲ ಪಡೆದಿದ್ದ. ಕೃಷಿ ಸಾಲ ಮನ್ನಾ ಆಗಲಿಲ್ಲ. ಪತ್ನಿ ಕೂಡ ಮಾನಸಿಕ ಅಸ್ವಸ್ಥೆ. ಅಂತಾಗಿ ಸಾಲ ತೀರಿಸಲಾಗದೆ ಹತಾಶೆಯಿಂದ ಬಚ್ಚಲು ಮನೆಯ ಜಂತಿಗೆ ನೇಣುಹಾಕಿಕೊಂಡ (17.4.07). ಆತ್ಮಹತ್ಯೆಗೆ ಆರಿಸಿಕೊಂಡ ಸ್ಥಳ ಆತನ ಬದುಕಿನ ಸ್ಥಿತಿಯ ಪ್ರತೀಕವಾಗಿರುವಂತಿದೆ. ಈ ಉದಾಹರಣೆಗಳನ್ನು ಜನವರಿ 2006 ರಿಂದ ಆಗಿಹೋದ ಆತ್ಮಹತ್ಯೆಗಳಲ್ಲಿ ಆಯ್ದು ಕೊಂಡಿರುವಂಥವಾಗಿವೆ.

ಈ ದಿಸೆಯಲ್ಲಿ ಇಂದಿನ ಸಾಮಾಜಿಕ, ರಾಜಕೀಯ ಹಾಗು ಪ್ರಭುತ್ವದ ಸ್ಪಂದನಗಳು, ಆತ್ಮಹತ್ಯೆಯ ಅಂಕಿ ಅಂಶಗಳಿಂದ ಒದಗಿದ ಪರಿಹಾರಗಳ ಪರಿಶೀಲನೆಯನ್ನೂ ಗಮನಿಸಬೇಕಾಗುತ್ತದೆ.

2003 ರಿಂದ ಮೂರು ವರ್ಷಗಳಲ್ಲಿ ಆತ್ಮಹತ್ಯೆ ಮಾಡಿಕೊಂಡ 1301 ರೈತರ ಪ್ರಕರಣಗಳಲ್ಲಿ ಪರಿಹಾರ ನೀಡಿಕೆಗೆ 475 ರೈತ ಕುಟುಂಬಗಳು ಮಾತ್ರ ಅರ್ಹವಾಗಿದ್ದುವು. ಅವುಗಳಿಗೆ ಒಂದೊಂದು ಲಕ್ಷ ರೂ.ಗಳ ಪರಿಹಾರ ನೀಡಲಾಗಿದೆ. ಇನ್ನು 47 ಪ್ರಕರಣಗಳು ಪರಿಶೀಲನಾ ಸಮಿತಿಯ ಮುಂದಿವೆ. ಹೆಚ್ಚು ಆತ್ಮಹತ್ಯೆಗಳು ನಡೆದ ಬೆಳಗಾವಿ, ಹಾಸನ, ಕೊಡಗು. ಚಿತ್ರದುರ್ಗ, ಶಿವಮೊಗ್ಗ ಹಾಗೂ ಚಿಕ್ಕಮಗಳೂರು ಜಿಲ್ಲೆಗಳಿಗೆ ಕೇಂದ್ರದ ನೆರವಿನ ಪರಿಹಾರದ ಪ್ಯಾಕೇಜ್ ನೀಡಲಾಗಿದೆ.

ಬೆಳಗಾವಿ (107), ತುಮಕೂರು, (69), ಚಿತ್ರದುರ್ಗ (93), ಹಾಸನ (139), ಶಿವಮೊಗ್ಗ (81), ದಾವಣಗೆರೆ (65), ಕೊಪ್ಪಳ (60), ಬೀದರ್ (59), ಮಂಡ್ಯ (57), ಹಾವೇರಿ (52), ಬಳ್ಳಾರಿ (50) ವಿಜಾಪುರ (50), ಕೊಡಗು (47), ಬೆಂಗಳೂರು ಗ್ರಾಮಾಂತರ (44), ಧಾರವಾಡ (42), ಬಾಗಲಕೋಟೆ (37), ಗುಲ್ಬರ್ಗ (34), ಕೋಲಾರ (33), ದ.ಕನ್ನಡ (21), ಮೈಸೂರು (19), ಉತ್ತರ ಕನ್ನಡ (18), ಚಾಮರಾಜನಗರ (14), ಉಡುಪಿ (4), ಬೆಂಗಳೂರು ನಗರ ಜಿಲ್ಲೆ (2) ಹೀಗೆ ಅಂಕಿ ಅಂಶಗಳನ್ನು 16.2.2006 ರ ವಿಧಾನ ಸಭಾಧಿವೇಶನದಲ್ಲಿ ಕೃಷಿ ಸಚಿವ ಬಂಡೆಪ್ಪ ಕಾಶೆಂಪೂರ್ ಅವರು ಶ್ರೀ ಅಪ್ಪಾಜಿ ನಾಡಗೌಡ ಅವರ ಪ್ರಶ್ನೆಗೆ ಉತ್ತರವಾಗಿ ನೀಡಿದರು.

ಸಾಕಷ್ಟು ಸಾಲ ಸೌಲಭ್ಯ ವಂಚಿತರಾದ ರೈತರು ಆತ್ಮಹತ್ಯೆಗೆಳಸುತ್ತಿದ್ದಾರೆ. ರೈತರಿಗೆ ಅಗತ್ಯ ಸಾಲ ಸೌಕರ್ಯ ದೊರಕಿಸಲು, ಮಹಾರಾಷ್ಟ್ರ, ಆಂಧ್ರ ರಾಜ್ಯಗಳ 30 ಜಿಲ್ಲೆಗಳ ರೈತರ ಆತ್ಮಹತ್ಯೆ ಪ್ರಕರಣಗಳ ದೃಷ್ಟಿಯಿಂದಲೂ ಕೇಂದ್ರ ಸರ್ಕಾರವು ಸಮಗ್ರ ಕ್ರಿಯಾ ಯೋಜನೆಯನ್ನು ಪ್ರಕಟಿಸುವ ಬಗ್ಗೆ ಕೇಂದ್ರ ಹಣಕಾಸು ಸಚಿವ ಶ್ರೀ ಪಿ. ಚಿದಂಬರಮ್ ಹೇಳಿದ್ದು ವರದಿಗೊಂಡಿದೆ (18.4.06). ಅಗತ್ಯ ಸಾಲದ ಸೌಕರ್ಯದ ಹೊಣೆ ಕೇಂದ್ರದ್ದಾದರೆ, ಬೇರೆಯ ಸಮಸ್ಯೆಗಳ ಪರಿಹಾರ ರಾಜ್ಯ ಸರ್ಕಾರದ್ದು ಎಂದೂ ಅವರ ಮಾತಾಗಿತ್ತು.

ರೈತರ ಸಾಲದ ಬಾಧೆ, ಆತ್ಮಹತ್ಯೆ ಬಗ್ಗೆ ಅಧ್ಯಯನ ನಡೆಸಿ ಸಾಲ ಮುಕ್ತಗೊಳಿಸಲು ಮಾರ್ಗೋಪಾಯಗಳನ್ನು ಸೂಚಿಸುವ ವರದಿ ನೀಡಲು ಇಂದಿರಾಗಾಂಧಿ ಸಂಶೋಧನಾ ಮತ್ತು ಅಭಿವೃದ್ಧಿ ಸಂಸ್ಥೆಯ ಅಧ್ಯಕ್ಷ ಶ್ರೀ ಆರ್. ರಾಧಾಕೃಷ್ಣನ್ ನೇತೃತ್ವದ ಸಮಿತಿಯನ್ನು ಕೇಂದ್ರವು ರೂಪಿಸಿತು. ಆ ಸಮಿತಿಗೆ ಕೇಂದ್ರ ಕೃಷಿ ಖಾತೆ ಮಾಜಿ ಕಾರ್ಯದರ್ಶಿ ಪಿ.ಡಿ.ಶೆಣೈ, ಸಿಂಡಿಕೇಟ್ ಬ್ಯಾಂಕ್ ಮಾಜಿ ಅಧ್ಯಕ್ಷ ಕಾಂತಾಕುಮಾರ್, ನಬಾರ್ಡ್ ವ್ಯವಸ್ಥಾಪಕ ನಿರ್ದೇಶಕ ವೈ.ಎಸ್.ಪಿ.ಥೋರಟ್ ಅವರು ಸದಸ್ಯರುಗಳು. 1995ರ ಮುನ್ನಿನ ಆತ್ಮಹತ್ಯೆ ಕುರಿತ ಮಾಹಿತಿ ಕೇಂದ್ರ ಗೃಹ ಇಲಾಖೆಯಲ್ಲೂ ಇಲ್ಲ. 1995 ರ ನಂತರ ಪ್ರತಿ ವರ್ಷದ ಲಕ್ಷ ಆತ್ಮಹತ್ಯೆಯ ಪ್ರಕರಣಗಳಲ್ಲಿ ಶೇ.12 ರಿಂದ 16 ರಷ್ಟು ರೈತರು ಎಂದು ಸಂಸತ್ತಿನಲ್ಲಿ ತಿಳಿಸಿದ ಅಂಶ. 2004 ರಿಂದ ಕರ್ನಾಟಕ, ಮಹಾರಾಷ್ಟ್ರ, ಆಂಧ್ರದಲ್ಲಿ ರೈತರ ಆತ್ಮಹತ್ಯೆಯ ಸಂಖ್ಯೆ ಹೆಚ್ಚುತ್ತ ಬಂದಿದೆ. ಎಂ.ಪಿ.ಗಳು ಕೇಂದ್ರದ ಮೇಲೆ

ಈ ಬಗ್ಗೆ ಪರಿಹಾರೋಪಾಯಕ್ಕಾಗಿ ಒತ್ತಾಯಿಸಿದ ಕಾರಣ ತಜ್ಞರ ಸಮಿತಿಯನ್ನು ನೇಮಿಸಿತು. ಕೃಷಿ ಉತ್ಪಾದನಾ ವೆಚ್ಚದ ಹೆಚ್ಚಳ ಹಾಗೂ ಆದಾಯದ ಕುಸಿತ, ಸಾಲದ ಭಾರ ಹೆಚ್ಚಲು ಕಾರಣವಾಗಿದೆ. ಆರ್ಥಿಕ ಉದಾರೀಕರಣದ ಫಲ ಎಂಬುದು ತಜ್ಞರ ವಿವರಣೆಯಾಗಿದೆ. (18.4.2006)

27.6.2006ರ ವಿಧಾನ ಪರಿಷತ್ತಿನ ಅಧಿವೇಶನದಲ್ಲಿ ಶ್ರೀ **ಎಸ್.ಎಂ.ಆನಂದ್** ಅವರು ಸಾಲದ ಹೊರೆಯಿಂದ ಆತ್ಮಹತ್ಯೆಗೊಂಡ ರೈತರ ಸಂಖ್ಯೆ ಬಗ್ಗೆ ಸಚಿವ ಶ್ರೀ **ಬಂಡೆಪ್ಪ ಕಾಶಂಪುರ್** ಅವರು ನೀಡಿದ ಉತ್ತರದಿಂದ ತೃಪ್ತರಾಗದೆ 200 ಕ್ಕೂ ಹೆಚ್ಚಿನ ಜನರಿಗೆ ಪರಿಹಾರ ಒದಗಿಲ್ಲ ಎಂದರು.

ಕರ್ನಾಟಕದ 15 ಜಿಲ್ಲೆಗಳಿಗೆ ರೈತರು ತೀವ್ರ ಸಂಕಷ್ಟಕ್ಕೀಡಾಗಿ ಅವರ ಆತ್ಮಹತ್ಯೆಯ ಪ್ರಕರಣಗಳು ವರದಿಗೊಂಡವು. ಈ ಜಿಲ್ಲೆಗಳ ರೈತರಿಗೆ ತುರ್ತಾಗಿ ನೆರವು ನೀಡಬೇಕೆಂದು ಹೈದರಾಬಾದ್‌ನಲ್ಲಿ ನಡೆದ ಸಭೆಯಲ್ಲಿ ಒತ್ತಾಯ ಮಾಡಲಾಗಿತ್ತು. ಬೆಂಗಳೂರಿಗೆ ಜೂನ್ 2006ರಲ್ಲಿ ಬೆಂಗಳೂರಿಗೆ ಭೇಟಿ ನೀಡಿದ ರಾಷ್ಟ್ರೀಯ ರೈತ ಆಯೋಗದ ಮುಖ್ಯಸ್ಥ ಡಾ॥ ಸ್ವಾಮಿನಾಥನ್ ಅವರಿಗೆ ಈ ಮಾಹಿತಿ ನೀಡಿ ಪರಿಹಾರಕ್ಕೆ ಶಿಫಾರಸು ಮಾಡಲು ರಾಜ್ಯ ಸರ್ಕಾರವು ಕೋರಿತು. ಕೇಂದ್ರ ಸರ್ಕಾರದ ಗೃಹ ಸಚಿವಾಲಯದ ಕ್ರೈಮ್ ಬ್ಯೂರೋ ಸಿದ್ಧಪಡಿಸಿದ ರೈತರ ಆತ್ಮಹತ್ಯೆ ಪ್ರಕರಣಗಳ ಅಂಕಿ ಅಂಶಗಳನ್ನು, ಹೈದರಾಬಾದ್‌ನಲ್ಲಿ ಕೃಷಿ ಸಚಿವ ಶ್ರೀ ಶರದ್ ಪವಾರ್ ನಡೆಸಿದ ಸಭೆಯಲ್ಲಿ ಪ್ರಕಟಪಡಿಸಿದಾಗ ಹಾಜರಿದ್ದ ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶ, ಕೇರಳ, ಗುಜರಾತ್ ತಮಿಳುನಾಡಿನ ಅಧಿಕಾರಿಗಳು ಒಪ್ಪಲಿಲ್ಲ; ಆಂಧ್ರದ ಮಾನ್ಯ ಮುಖ್ಯಮಂತ್ರಿ ಶ್ರೀ ರಾಜಶೇಖರ್ ರೆಡ್ಡಿ ಅವರೂ ಒಪ್ಪಲು ಸಾಧ್ಯವಿಲ್ಲ ಎಂದರು. ಈ ಅಂಕಿ ಅಂಶಗಳನ್ನೆ ನಂಬಿರುವ ಕೇಂದ್ರ ಸರ್ಕಾರವು ಕರ್ನಾಟಕದಲ್ಲಿ ರೈತರ ಆತ್ಮಹತ್ಯೆಯನ್ನು ತಡೆಗಟ್ಟಲು ಸದ್ಯಕ್ಕೆ ಪ್ಯಾಕೇಜ್ ಘೋಷಿಸುವುದೆನ್ನುವಂತಿಲ್ಲ. ಮಹಾರಾಷ್ಟ್ರದ ವಿದರ್ಭ ಭಾಗದ ರೈತರಿಗಾಗಿ ಪ್ರಧಾನಿಯವರು ಘೋಷಿಸಿರುವ 3750 ಕೋಟಿ ರೂ. ಪ್ಯಾಕೇಜ್, ರೈತರ ನೆರವಿಗೆ ತುರ್ತಾಗಿ ಧಾವಿಸುವ ಪ್ಯಾಕೇಜ್ ಅಲ್ಲ ಎನ್ನಲಾಗಿದೆ. ಸಾಲಬಾಧೆಯ ರೈತರಿಗೆ ಬಡ್ಡಿ ಮನ್ನಾದಿಂದ ನೆಮ್ಮದಿ ಬಂದೀತೆ? ಎಂಬ ಪ್ರಶ್ನೆ ಇದೆ. ಅಂತಹ ಪ್ಯಾಕೇಜ್ ಕರ್ನಾಟಕಕ್ಕೂ ಒದಗಿದರೆ ರೈತರಿಗೆ ನೆರವಾದೀತೆ? ಎಂಬ ಪ್ರಶ್ನೆ ಇದೆ. ಕಾರಣ ವಿದರ್ಭ ಪ್ರಾಂತ್ಯಕ್ಕೆ 3750 ಕೋಟಿ ರೂ.ಗಳ ಪ್ರಧಾನಿ ಪ್ಯಾಕೇಜ್ ಘೋಷಣೆಯಾದರೂ ಮಹಾರಾಷ್ಟ್ರದಲ್ಲಿ ರೈತರ ಆತ್ಮಹತ್ಯೆ ಮುಂದುವರಿದಿದ್ದು,

ತನ್ನ ಗಂಡ ಸಾಲ ಮಾಡಿದ್ದರಿಂದ ನೊಂದ ರೈತ ಪತ್ನಿಯೊಬ್ಬಳು ನಿಫಾಡ್ ತಾಲೂಕಿನಲ್ಲಿ ಆತ್ಮಹತ್ಯೆ ಮಾಡಿಕೊಂಡ (5.7.06) ಉದಾಹರಣೆ ಇದೆ. ಹಾಗೂ ಸಾಲದ ಬಾಧೆಯಿಂದ ಜುಗುಪ್ಸೆಗೊಂಡ ವಿದರ್ಭ ಪ್ರದೇಶದ 11 ರೈತರು ಮೂರು ದಿನಗಳಲ್ಲಿ ಆತ್ಮಹತ್ಯೆ ಮಾಡಿಕೊಂಡಿದ್ದು, ಪ್ರಧಾನಿ ಕಛೇರಿ ರೈತರಿಗೆ ಪ್ಯಾಕೇಜ್ ಪ್ರಕಟಣಾ ಘೋಷಣೆ ಮಾಡಿದ ನಂತರವೂ ಇದು ಸಂಭವಿಸಿರುವುದು (28.7.06) ಮೇಲಿನ ಮಾತಿಗೆ ಪುಷ್ಟಿ ನೀಡುವಂತಿದೆ.

ಕೇಂದ್ರ ಸರ್ಕಾರವು ರೈತರ ಆತ್ಮಹತ್ಯೆ ಪ್ರಕರಣಗಳನ್ನು ಗಂಭೀರವಾಗಿ ಪರಿಗಣಿಸಿದ್ದು, ಕರ್ನಾಟಕ ಸೇರಿದಂತೆ ದೇಶದ ಎಲ್ಲಾ ರಾಜ್ಯಗಳ ಮುಖ್ಯ ಕಾರ್ಯದರ್ಶಿಗಳಿಗೆ 2003ರ ನಂತರ ಆತ್ಮಹತ್ಯೆ ಮಾಡಿಕೊಂಡ ರೈತರ ಸಂಖ್ಯೆ ಅದಕ್ಕೆ ಕಾರಣಗಳು ಹಾಗು ತಡೆಯಲು ಕೈಗೊಂಡ ಕ್ರಮಗಳ ಬಗ್ಗೆ ವರದಿ ನೀಡಲು ಹೇಳಿದೆ. ದಕ್ಷಿಣ ರಾಜ್ಯಗಳಿಗೂ ಸೂಕ್ತ ಪ್ಯಾಕೇಜ್ ನೀಡಲು ಚಿಂತನೆ ನಡೆಸಿದೆ ಎಂದು ಹೇಳಲಾಗಿದೆ. ಕೇಂದ್ರದ ಅರ್ಥ ಸಚಿವ ಶ್ರೀ ಪಿ.ಚಿದಂಬರಮ್ ಅವರು, ದೇಶದ ವಿವಿಧ ರಾಜ್ಯಗಳ ಆತ್ಮಹತ್ಯಾ ಪೀಡಿತ 31 ಜಿಲ್ಲೆಗಳಲ್ಲಿ ಕರ್ನಾಟಕದ ಹಾಗು ಮಹಾರಾಷ್ಟ್ರದ ತಲಾ, 6 ಆಂಧ್ರದ 16 ಹಾಗೂ ಕೇರಳದ 3 ಜಿಲ್ಲೆಗಳಿವೆ; ರೈತರ ಆತ್ಮಹತ್ಯೆಯನ್ನು ತಡೆಯಲು ಕೇಂದ್ರವು ಪ್ಯಾಕೇಜ್ ಸಿದ್ಧಪಡಿಸುತ್ತಿದೆ ಎಂದು ಲೋಕ ಸಭೆಯಲ್ಲಿ ತಿಳಿಸಿರುವುದಿದೆ. ಲಘು ಅವಧಿಯ ಕೃಷಿ ಸಾಲವು ರೈತರಿಗೆ ದೊರಕಿಸಿ ಸಮಸ್ಯೆ ನಿವಾರಿಸಲು ಯತ್ನಿಸಲಾಗುತ್ತದೆ ಎಂದಿದ್ದಾರೆ. (29.7.06) ಅಂದರೆ ಕೇಂದ್ರಕ್ಕೆ ಸಮಸ್ಯೆಯ ಬಿಸಿ ತಾಗಿರುವುದು ಸ್ಪಷ್ಟವಾಗಿ ಇದರಿಂದ ತಿಳಿಯುತ್ತದೆ.

ಇದಲ್ಲದೆ ಈ ನಾಲ್ಕು ರಾಜ್ಯಗಳಲ್ಲಿ ರೈತರ ಆತ್ಮಹತ್ಯೆಗಳನ್ನು ತಡೆಗಟ್ಟುವಂತೆ ಆಯಾ ರಾಜ್ಯ ಸರ್ಕಾರಗಳಿಗೆ ಹಾಗೂ ಕೇಂದ್ರಕ್ಕೆ ನಿರ್ದೇಶನ ಬೇಕೆಂದು ಕೋರಿ ಸುಪ್ರೀಂ ಕೋರ್ಟಿಗೆ ಸಂಜೀವ್ ಭಟ್ನಾಗರ್ ಎಂಬ ವಕೀಲರು ಅರ್ಜಿಸಲ್ಲಿಸಿದ್ದಾರೆ. ಅವರ ರೀತ್ಯಾ 2001 ರಿಂದ ಕರ್ನಾಟಕದಲ್ಲಿ 5190, ಆಂಧ್ರದಲ್ಲಿ 1835, ಮಹಾರಾಷ್ಟ್ರದಲ್ಲಿ 881 ಹಾಗೂ ಕೇರಳದಲ್ಲಿ 201 ರೈತರು ಆತ್ಮಹತ್ಯೆಗೀಡಾಗಿದ್ದಾರೆ. ಅಂದರೆ ಖಾಸಗಿ ಸಂಗ್ರಹಿತ ಹಾಗೂ ಸರ್ಕಾರಿ ಸಂಗ್ರಹಿತ ಈ ಬಗೆಗಿನ ಅಂಕಿ ಅಂಶಗಳಲ್ಲಿ ವ್ಯತ್ಯಾಸ ಕಾಣುತ್ತದೆ. ಇದಲ್ಲದೆ ಈ ಅರ್ಜಿ ಸಂಬಂಧ ಸುಪ್ರೀಂ ಕೋರ್ಟ್ ಕೇಂದ್ರಕ್ಕೆ ನೋಟೀಸ್ ಜಾರಿ ಮಾಡಿದೆ. ನಾಲ್ಕೂ ರಾಜ್ಯ ಸರ್ಕಾರಗಳಿಗೂ ನೋಟೀಸ್ ಜಾರಿ ಮಾಡಿದೆ (15.8.06)

ಪತ್ರಿಕಾ ವಲಯವೂ ರೈತರ ಆತ್ಮಹತ್ಯೆಯನ್ನು ತಪ್ಪಿಸುವ ಬಗ್ಗೆ ಜನರ ಸಲಹೆಗಳನ್ನು ಕೇಳಿದೆ. ಹಾಗೆ ಬಂದ ಸಲಹೆಗಳಲ್ಲಿ (30.7.06) ರೈತ ಸಮುದಾಯ ರಾಜಕೀಯದಿಂದ ಮುಕ್ತವಿರಬೇಕು. ಕಡಿಮೆ ಬಡ್ಡಿ ದರದ ಸಾಲ ಬೆಳೆದ ಬೆಳೆಗಳ ನೇರ ಸರ್ಕಾರಿ ಖರೀದಿ ಮಾಧ್ಯಮಗಳಲ್ಲಿ ರೈತರಿಗೆ ಇರುವ ಸರ್ಕಾರದ ಸವಲತ್ತುಗಳ ಮಾಹಿತಿ, 60 ದಾಟಿದ ರೈತರಿಗೆ ಪಿಂಚಣಿ ವ್ಯವಸ್ಥೆ ಒದಗಿಸಬೇಕು; ರೈತರ ಬೆಳೆಗೆ ಬೆಂಬಲ ಬೆಲೆ ನಿಗದಿ ಹಾಗೂ ವ್ಯಯಿಸಿದ ಮೊತ್ತಕ್ಕೆ ಲಾಭದಾಯಕ ಪರಿಮಿತಿ, ಪ್ರಕೃತಿ ವಿಕೋಪಗಳ ಸಂದರ್ಭಗಳಲ್ಲಿ **'ಉದ್ಯೋಗ ಖಾತ್ರಿ'** ಯೋಜನೆ ಇರಬೇಕು. ಮದ್ಯಪಾನ, ಜೂಜು ಇತ್ಯಾದಿ ವ್ಯಸನಗಳಿಂದ ದೂರವಿರಿಸಬೇಕು. ಈ ಬಗ್ಗೆ ಮನಪರಿವರ್ತನೆಯ ಶಿಕ್ಷಣವು ಗ್ರಾಮಗಳಲ್ಲಿ ದೊರೆಯಬೇಕು; ರೈತರ ಕಷ್ಟ ಸುಖಕ್ಕೆ ಸ್ಪಂದಿಸುವ ರೈತ ಸಂಘ, ಧೈರ್ಯ ತುಂಬುವ ಸರ್ಕಾರ, ಅಧಿಕಾರಿಗಳ ಪ್ರಾಮಾಣಿಕತೆ, ಇವುಗಳಿಂದ ನನ್ನವರು ಇದ್ದಾರೆ ಎಂಬ ಭಾವನೆಯ ಪ್ರೇರಣೆ ಒದಗಬೇಕು. ಉತ್ಪಾದನಾ ವೆಚ್ಚದ ಆಧಾರದ ಮೇಲೆ ಕೃಷಿ ಉತ್ಪನ್ನಗಳಿಗೆ 'ಕನಿಷ್ಠ ಬೆಲೆ' ನಿಷ್ಕರ್ಷಿಸಬೇಕು, ಬೆಳೆಗಾರರನ್ನು ಈ ನಿಷ್ಕರ್ಷೆಯ ಸಂದರ್ಭದಲ್ಲಿ ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು; ನಿಯಂತ್ರಿತ ಬೆಲೆಯಲ್ಲಿ ಗೊಬ್ಬರ, ಕ್ರಿಮಿನಾಶಕ ಮತ್ತು ಕೀಟನಾಶಕಗಳನ್ನು ಒದಗಿಸಬೇಕು; ರೈತರು ಶಕ್ತ್ಯಾನುಸಾರ ಸಾಲ ಪಡೆಯುವುದು; ಸಬ್ಸಿಡಿ ಸಾಲದ ಸದುಪಯೋಗ; ರೈತರಿಗೆ ಉತ್ತಮ ಮಾರುಕಟ್ಟೆ ವ್ಯವಸ್ಥೆಯ ಬೆಳೆಗೆ ಅನುಕೂಲ ಕಲ್ಪನೆ, ದುಶ್ಚಟಗಳಿಂದ ದೂರ ಮಾಡುವಿಕೆ; ಆಧುನಿಕ ನಗರ ಶೈಲಿಯ ಜೀವನಕ್ಕೆ ಬೆರಗಾಗಿರುವುದು, ಪಾರಂಪರಿಕ ಅನುಭವವನ್ನು ಮರೆತು ಆಧುನಿಕ ಶೈಲಿಗೆ ಮಾರು ಹೋಗಿರುವುದು ಇದೆ. ರೈತರ ಆತ್ಮಹತ್ಯೆಗೆ ದುರ್ಬಲ ಮನಸ್ಸು ಕಾರಣವಾಗಿದ್ದು, ಶೂನ್ಯ ಬಂಡವಾಳದ ನೈಸರ್ಗಿಕ ಶಕ್ತಿಗೆ, ಮುಗ್ಧ ಮತ್ತು ಮುಕ್ತ ಮನಸ್ಸಿನೊಂದಿಗೆ, ತೆರೆದುಕೊಳ್ಳಬೇಕು. ಮನಃಪರಿವರ್ತನ ಮಾಡಿಕೊಂಡು ಸ್ವಪರಿಹಾರ ಹುಡುಕಿಕೊಳ್ಳಬೇಕು. ಕೃಷಿ ಉತ್ಪನ್ನಗಳಿಗೆ ಬೇಡಿಕೆ ಮತ್ತು ಪೂರೈಕೆಯ ವೈಪರೀತ್ಯವೆ ಬೆಳೆ ಬೆಲೆ ಕುಸಿತಕ್ಕೆ ಕಾರಣ. ಬಿತ್ತನೆ ಪ್ರಾರಂಭಿಸುವ ಪೂರ್ವದಲ್ಲಿ ನಿರ್ದಿಷ್ಟ ಪ್ರದೇಶದಲ್ಲಿ ನಿರ್ದಿಷ್ಟ ಬೆಳೆ ಮಾತ್ರ ತೆಗೆಯಲು ರೈತರ ಮನ ಒಲಿಸಬೇಕು. ಅಂಥ ಬೆಳೆಗಳಿಗೆ ಮಾತ್ರ ಬೆಳೆವಿಮೆ, ಬೆಂಬಲ ಬೆಲೆ ಸೌಲಭ್ಯ ದೊರೆಯಬೇಕು. ಆತ್ಮಹತ್ಯೆಯ ರೈತನ ಕುಟುಂಬಕ್ಕೆ ಲಕ್ಷ ರೂ.ಗಳ ಪರಿಹಾರದ ಬದಲು ದೀರ್ಘಾವಧಿಯಲ್ಲಿ ಆರ್ಥಿಕವಾಗಿ ಚೇತರಿಸಿಕೊಳ್ಳುವವರಿವಿಗೆ ಜೀವನಾಧಾರ ಭದ್ರತೆಯನ್ನು ಕಲ್ಪಿಸಬೇಕು. ಪ್ರತಿ ರೈತನೂ ಉಳಿತಾಯ ಮಾಡಿ ವಿಮಾ ಪಾಲಿಸಿ ಮಾಡಬೇಕು, ಯಶಸ್ಸು ಸಾಧಿಸಿದ ಕೃಷಿಕರ ಸಾಧನೆಗಳು ಮಾಧ್ಯಮಗಳ ಮೂಲಕವೂ

ರೈತರಿಗೆ ತಿಳಿಯಬೇಕು. ಕಳವಳದ ಅಭಿವ್ಯಕ್ತಿಗಿಂತ ಮುಂಜಾಗ್ರತಾ ಕ್ರಮ ಮುಖ್ಯ ಎಂದೆಲ್ಲ ಸಾರ್ವಜನಿಕ ಪ್ರತಿಕ್ರಿಯೆ ಬಂದಿದೆ.*9 ಇದೊಂದು ರೀತಿ ರೈತ ಹಿತಾಸಕ್ತಿಗೆ ಮೂಡಿಬಂದ ಸಾರ್ವಜನಿಕ ಸ್ಪಂದನೆ ಎನ್ನಬೇಕು.

ಧಾರವಾಡ ಕೃಷಿ ವಿಶ್ವವಿದ್ಯಾಲಯದ ಮಾಜಿ ಉಪಕುಲಪತಿ, ಪದ್ಮಶ್ರೀ ಪ್ರಶಸ್ತಿ ವಿಜೇತ ಡಾ॥ ಎಂ.ಮಹದೇವಪ್ಪ ಅವರನ್ನು ಸಂದರ್ಶಿಸಿ ರೈತರ ಆತ್ಮಹತ್ಯೆ ಕುರಿತು ಕೇಳಿದಾಗ; ರೈತರ ಮನೋಸ್ಥಿತಿಯನ್ನು, ಬಾಳುವೆಯ ಗತಿಯನ್ನು ನಾವು ಗಮನಿಸಬೇಕು. ಸಮುದಾಯದ ಹಾಗೂ ಸರ್ಕಾರದ ಒತ್ತಾಸೆ ಅವರ ಆತ್ಮವಿಶ್ವಾಸಕ್ಕೆ ನೆರವಾಗಬೇಕು. ಆತ್ಮಸ್ಥೈರ್ಯ, ಸ್ವಾವಲಂಬನೆಯನ್ನು ಬೆಳೆಸಬೇಕು. ಅದನ್ನು ಬೆಳೆಸದಿದ್ದರೆ ಆತ್ಮಹತ್ಯೆಯ ಬಾಧಕಗಳು ಅವರನ್ನು ಪೀಡಿಸುತ್ತವೆ. ಪರ್ಯಾಯ ಬೆಳೆಗಳ ಪ್ರಯೋಜನ ಆಧುನಿಕ ದೇಸಿ ಕೃಷಿ ಅಭಿವೃದ್ಧಿ ಪ್ರಯತ್ನಗಳು ಹಾಗೂ ನೈಸರ್ಗಿಕ ಕೃಷಿ ಪ್ರಯತ್ನಗಳ ಬಗ್ಗೆ ರೈತರಿಗೆ ಹೆಚ್ಚಿನ ತಿಳುವಳಿಕೆ ಕೊಡಬೇಕು. ರೈತರಿಗೆ ನೀಡುವ ಪರಿಹಾರ ಮಾನವೀಯ ನೆಲೆಯದಾಗಿರಬೇಕು. ಆತ್ಮಹತ್ಯೆ ಪ್ರೇರಕಗಳಿಂದ ರೈತರು ದೂರವಾಗುವಂತೆ ನೋಡಿಕೊಳ್ಳಬೇಕು, ಎಂಬ ತಮ್ಮ ಚಿಂತನೆಗಳನ್ನು ವ್ಯಕ್ತಮಾಡಿದರು.

ರಾಜ್ಯದಲ್ಲಿ ಸಾಲದ ಬಾಧೆ ತಾಳಲಾರದೆ ನಡೆದ ರೈತರ ಆತ್ಮಹತ್ಯೆಗಳನ್ನು ಗಂಭೀರವಾಗಿ ಪರಿಗಣಿಸಿರುವ ಪ್ರಧಾನಮಂತ್ರಿ ಮನಮೋಹನಸಿಂಗ್ ಅವರು [ವಿಜಯಕರ್ನಾಟಕ, (9.8.06)] ಆ ರೈತರ ಕುಟುಂಬದ ಮಕ್ಕಳ ವಿದ್ಯಾಭ್ಯಾಸ ಹಾಗೂ ಆರೋಗ್ಯ ಸಂರಕ್ಷಣೆಗೆ ಪ್ರಧಾನಮಂತ್ರಿಗಳ ಪರಿಹಾರ ನಿಧಿಯಿಂದ ನೆರವು ನೀಡಲು ತೀರ್ಮಾನಿಸಿದ್ದಾರೆ. ಈ ಸಂಬಂಧ ಚಿತ್ರದುರ್ಗ, ಬೆಳಗಾವಿ, ಹಾಸನ, ಚಿಕ್ಕಮಗಳೂರು ಹಾಗೂ ಶಿವಮೊಗ್ಗ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಪರಿಹಾರ ನಿಧಿ ಕಾರ್ಯದರ್ಶಿಯವರು ನೇರವಾಗಿ ಪತ್ರ ಬರೆದು, ಪ್ರತಿಜಿಲ್ಲೆಗೂ 50 ಲಕ್ಷ ರೂ.ಗಳ ಮೊತ್ತವನ್ನು ತುರ್ತಾಗಿ ಬಿಡುಗಡೆ ಮಾಡುವುದಾಗಿ ಹೇಳಿದ್ದಾರೆ. ರಾಷ್ಟ್ರೀಕೃತ ಬ್ಯಾಂಕ್‌ನಲ್ಲಿ ಜಿಲ್ಲಾಧಿಕಾರಿಗಳ ಹೆಸರಿನಲ್ಲಿ ಖಾತೆ ತೆರೆಯುವಂತೆಯೂ ತಿಳಿಸಿದ್ದಾರೆ. ಖಾತೆಗೆ ಹಣ ಜಮಾ ಆದ ನಂತರ ದಾಖಲಾಗುವ ಆತ್ಮಹತ್ಯೆ ಪ್ರಕರಣಗಳಿಗೆ ಈ ನೆರವು ದೊರೆಯುತ್ತದೆ (9.8.06). ಮಹಾರಾಷ್ಟ್ರದ ವಿದರ್ಭದಲ್ಲಿ 2006ರ ಆಗಸ್ಟ್ ತಿಂಗಳಲ್ಲಿ 103 ರೈತರು ಆತ್ಮಹತ್ಯೆ ಮಾಡಿಕೊಂಡ ಬಗ್ಗೆ ವಿದರ್ಭ ಜನಾಂದೋಲನ ಸಮಿತಿ ತಿಳಿಸಿದೆ; ಪ್ರಧಾನ ಮಂತ್ರಿಗಳ 2750 ಕೋಟಿ ರೂ.ಗಳ ವಿಶೇಷ ಪ್ಯಾಕೇಜ್ ಹಣವು, ವಿತರಣಾ ವ್ಯವಸ್ಥೆಯ ಲೋಪದೋಷಗಳ ಕಾರಣ ರೈತರಿಗೆ ತಲುಪಿಲ್ಲ ಎಂದು ಸಮಿತಿಯ ಅಧ್ಯಕ್ಷರು ತಿಳಿಸಿರುವುದಿದೆ. (31.8.2006)

---

*9. i. ರೈತರ ಆತ್ಮಹತ್ಯೆ ತಪ್ಪಿಸುವುದು ಹೇಗೆ – ನಿಮ್ಮ ಅನಿಸಿಕೆ., **ಪ್ರಜಾವಾಣಿ** (30.7.2006)
ii. ರೈತರ ಆತ್ಮಹತ್ಯೆ ನಿಲ್ಲಬಹುದೆ?,

ಸೆಪ್ಟೆಂಬರ್ 10, **ವಿಶ್ವ ಆತ್ಮಹತ್ಯೆ ನಿಗ್ರಹ ದಿನ.** ಮಾನಸಿಕ ಖಿನ್ನತೆ, ವೈಫಲ್ಯ, ಹತಾಶೆಗಳ ಕಾರಣ ಜುಗುಪ್ಸೆಗೊಂಡ ಜೀವ ಆತ್ಮಹತ್ಯೆಗೆ ಶರಣಾಗುತ್ತದೆ. ಆದರೆ ಅದು ಪರಿಹಾರವಲ್ಲ. ಜೀವನವನ್ನು ಸೂಕ್ತವಾಗಿ ನಡೆಸಲು ಅನೇಕ ದಾರಿಗಳಿವೆ. ಜೀವ ಅಮೂಲ್ಯ. ಯೋಗ್ಯ ವ್ಯಕ್ತಿಯಾಗಿ ಅದನ್ನು ಬಳಸಿ ನಕಾರಾರ್ಥಕ ಒಳ ಅರ್ಥವನ್ನು ಹೊಂದಿರುವ 'ಆತ್ಮಹತ್ಯೆ' ಎಂಬ ಪದಕ್ಕೆ, ಕ್ರಿಯೆಗೆ ಪ್ರಾಮುಖ್ಯ ನೀಡದೆ ಜೀವನವನ್ನು ಅನುಭವಿಸಿ, ಎಂದೆಲ್ಲ ಸಂದೇಶಗಳೊಡನೆ ಶಾಲಾ ಕಾಲೇಜು ವಿದ್ಯಾರ್ಥಿಗಳು, ಪೋಷಕರು, ಆತ್ಮಹತ್ಯೆ ನಿಗ್ರಹದಿನವನ್ನು ಆಚರಿಸುವಲ್ಲಿ ಬೆಂಗಳೂರಿನಲ್ಲಿ ವಿಚಾರ ಸಂಕಿರಣವನ್ನು ನಿಮ್ಹಾನ್ಸ್‌ನಲ್ಲಿ ಹಮ್ಮಿಕೊಳ್ಳಲಾಗಿತ್ತು. ಇಂಥ ಸಂದೇಶ ಗ್ರಾಮೀಣ ಪ್ರದೇಶದಲ್ಲಿ ಹರಡಿಕೊಳ್ಳುತ್ತ ಹೋಗಬೇಕು. ಅದು ರೈತರ ಆತ್ಮಹತ್ಯೆಯ ತಡೆಗೆ ಪ್ರೇರಣೆ ಕೊಟ್ಟೀತು.

ನೆರೆಯ ಅಬ್ಬರ, ಭೀಕರ ಬರಗಾಲ, ನಕಲಿ ಬೀಜಗಳ ಹಾವಳಿ, ಮಧ್ಯವರ್ತಿಗಳ ಕಾಟ – ಇವುಗಳ ನಡುವೆ ರೈತ ಸಮುದಾಯ ಕಂಗೆಟ್ಟಿದೆ. ರೈತರ ಆತ್ಮಹತ್ಯೆ ಪಿಡುಗಿನಂತೆ ಹಬ್ಬಿದೆ. ಕೇಂದ್ರ ಹಾಗೂ ರಾಜ್ಯದ ಪ್ಯಾಕೇಜ್ ಘೋಷಣೆಗಳು, ಇನ್ನೂ ಫಲಕೊಟ್ಟಿಲ್ಲ. ಭಾರತ ವಿಶ್ವದ ಬಲಿಷ್ಠ ಅರ್ಥ ವ್ಯವಸ್ಥೆಯಾಗಿ ಉಳಿಯಲು ಇಲ್ಲಿಯ ಕೃಷಿ ವ್ಯವಸ್ಥೆ ಸದೃಢವಾಗಬೇಕು. ರೈತರು ಸ್ವಸ್ಥ ಮಾನಸಿಕತೆ ಬೆಳಸಿಕೊಳ್ಳಬೇಕು, ಎಂಬ ಸಲಹೆಗಳು ಸಾರ್ವಜನಿಕರಿಂದ ಪ್ರಕಟವಾಗಿವೆ. (16.9.2006)

ಪ್ರಧಾನಿಯವರು ಜೂನ್ 30 ಮತ್ತು ಜುಲೈ 1 ರಂದು ಮಹಾರಾಷ್ಟ್ರದ ರೈತರ ಆತ್ಮಹತ್ಯಾ ಪೀಡಿತ ಪ್ರದೇಶವಾದ ವಿದರ್ಭಕ್ಕೆ ಭೇಟಿ ನೀಡಿ ರೈತರಿಗೆ 3750 ಕೋಟಿ ರೂ. ವಿಶೇಷ ಪ್ಯಾಕೇಜ್ ಘೋಷಿಸಿದರಷ್ಟೆ. ಆದರೂ ಆ ಪ್ಯಾಕೇಜನ್ನು ಕೇಂದ್ರ ಕೃಷಿ ಇಲಾಖೆ ಅಂತಿಮಗೊಳಿಸಿರಲಿಲ್ಲ. ಪ್ಯಾಕೇಜ್ ಘೋಷಿಸಿದ ನಂತರವೂ 311 ಜನ ವಿದರ್ಭ ಭಾಗದ ರೈತರು ಆತ್ಮಹತ್ಯೆ ಮಾಡಿಕೊಂಡರು. 2006 ಸೆಪ್ಟೆಂಬರ್ 29ರ ವೇಳೆಗೆ 110 ರೈತರು ಆತ್ಮಹತ್ಯೆಗೆ ಶರಣಾದರು. ಪರಿಸ್ಥಿತಿಯ ಗಂಭೀರತೆಯನ್ನು ಗಮನಿಸಿ ಕರ್ನಾಟಕವಲ್ಲದೆ (ಶಿವಮೊಗ್ಗ, ಬೆಳಗಾವಿ, ಹಾಸನ, ಕೊಡಗು, ಚಿಕ್ಕಮಗಳೂರು, ಚಿತ್ರದುರ್ಗ) ಮಹಾರಾಷ್ಟ್ರ, ಆಂಧ್ರ, ಕೇರಳ ರಾಜ್ಯಗಳ ಆತ್ಮಹತ್ಯಾ ತಡೆ ಪ್ಯಾಕೇಜಿಗೆ ಕೇಂದ್ರ ಸಚಿವ ಸಂಪುಟ ಅನುಮೋದನೆ ಕೊಡುವ ಮೂಲಕ ರೈತರ ಬವಣೆಯ ಪರಿಹಾರಕ್ಕೆಳೆಸಿದ್ದಾರೆ.

ಕೃಷಿ ಉತ್ಪನ್ನಗಳ ಬೆಲೆ ಕುಸಿತ, ಆ ಉತ್ಪನ್ನಗಳ ಆಮದಿನ ಮೇಲೆ ನಿರ್ಬಂಧವಿಲ್ಲದಿರುವುದು, ರೈತಾಪಿ ವರ್ಗ ಸಾಲ ಪಡೆಯಲು ಇರುವ ಅನಾನುಕೂಲಗಳು, ರಸಗೊಬ್ಬರ, ಕೀಟನಾಶಕ, ಕೃಷಿ ಸಲಕರಣೆ, ವಿದ್ಯುತ್, ನೀರು, ಡೀಸೆಲ್‌ಗಳಿಗೆ ಸರ್ಕಾರ ನೀಡುತ್ತಿದ್ದ ಸಹಾಯದ್ರವ್ಯದ ಕಡಿತ – ಈ ಕಾರಣಗಳಿಂದ ರೈತರ ಆತ್ಮಹತ್ಯೆ ಹೆಚ್ಚುತ್ತಿದೆ ಎಂದು ಅಖಿಲ ಭಾರತ ಕಿಸಾನ್ ಸಭಾದ ಪ್ರಧಾನ ಕಾರ್ಯದರ್ಶಿ ಕೆ.ವರದರಾಜನ್, ಕರ್ನಾಟಕ ಪ್ರಾಂತ ರೈತ ಸಂಘದ ಜಿಲ್ಲಾ ಸಮಿತಿ ಮಂಗಳೂರಿನಲ್ಲಿ ಆಯೋಜಿಸಿದ ಬಹಿರಂಗ ಸಭೆಯಲ್ಲಿ ತಮ್ಮ ಆತಂಕವನ್ನು ವ್ಯಕ್ತಪಡಿಸಿದರು; ದೇಶದಲ್ಲಿ 9 ವರ್ಷಗಳಲ್ಲಿ 1,34,321 ಮಂದಿ ರೈತರು ಆತ್ಮಹತ್ಯೆ ಮಾಡಿಕೊಂಡಿರುವರೆಂದು ಕೇಂದ್ರ ಕೃಷಿ ಸಚಿವ ಶರದ್ ಪವಾರ್ ಅವರು ಲೋಕ ಸಭೆಯಲ್ಲಿ ತಿಳಿಸಿರುವುದು ಸರ್ಕಾರಿ ಸಂಗ್ರಹಿತ ಅಂಕಿ–ಅಂಶ. ಆದರೆ ಆ ಸಂಖ್ಯೆ 2 ಲಕ್ಷಕ್ಕೂ ಮೀರಿದೆ ಎಂಬ ಅಭಿಪ್ರಾಯವನ್ನು ವರದರಾಜನ್ ವ್ಯಕ್ತ ಮಾಡಿದ್ದಾರೆ. (8.11.07).

ಆತ್ಮಹತ್ಯೆ ಮಾಡಿಕೊಂಡ ರೈತರ ಮನೆಯಲ್ಲಿಯೇ ವಾಸ್ತವ್ಯ ಮಾಡಿ ಅವರ ಕುಟುಂಬದ ಕಷ್ಟಗಳನ್ನು ಅರಿಯುವ ಬಗ್ಗೆ ಮಾನ್ಯ ಮುಖ್ಯಮಂತ್ರಿ ಶ್ರೀ ಎಚ್.ಡಿ.ಕುಮಾರಸ್ವಾಮಿ ಹೇಳಿದ್ದಾರೆ. ಸಾಲದ ಬಾಧೆಯಿಂದ ರೈತರು ಆತ್ಮಹತ್ಯೆ ಮಾಡಿಕೊಳ್ಳದೆ ಆತ್ಮಸ್ಥೈರ್ಯ ತಂದುಕೊಳ್ಳಬೇಕು. ರೈತರ ಸಂಕಷ್ಟಕ್ಕೆ ಸರ್ಕಾರ ನೆರವು ನೀಡುವುದು; ಕಳೆದ 1 ವರ್ಷದಲ್ಲಿ (2005–06) 178 ಮಂದಿ ಆತ್ಮಹತ್ಯೆ ಮಾಡಿಕೊಂಡಿರುವರಲ್ಲಿ, 44 ರೈತರಿಗೆ ಸಾಲದ ಹೊರೆ ಇತ್ತು. 22 ಕುಟುಂಬಗಳಿಗೆ ತಲಾ 1 ಲಕ್ಷ ಬಿಡುಗಡೆ ಆಗಲಿದೆ. ಉಳಿದ 22 ಕುಟುಂಬಗಳಿಗೂ ಮಾಹಿತಿ ಬಂದ ಮೇಲೆ ಹಣ ನೀಡಲಾಗುವುದೆಂದಿದ್ದಾರೆ (13.12.06). ಇದರ ಫಲವನ್ನು ಕಾದು ನೋಡಬೇಕು.

ರಾಜ್ಯದ ಆರು ಜಿಲ್ಲೆಗಳಿಗೆ 2700 ಕೋಟಿ ರೂ. ವಿಶೇಷ ಪ್ಯಾಕೇಜ್ ನೀಡಿದರೂ, ಜಿಲ್ಲೆಗೆ ತಲಾ 50 ಲಕ್ಷ ಬಿಡುಗಡೆ ಮಾಡಿದ್ದರೂ ರೈತರ ಆತ್ಮಹತ್ಯೆ ಪ್ರಕರಣಗಳು ನಿಲ್ಲದೆ ಸರ್ಕಾರ ಹಾಗೂ ಸಾರ್ವಜನಿಕರಿಗೆ ಒಗಟಾಗಿ ಪರಿಣಮಿಸಿದೆ. ಇಲ್ಲಿ ಆರ್ಥಿಕ ಸಮಸ್ಯೆ ಮೂಲ ಕಾರಣವೆಂದರೂ ಸಾಮಾಜಿಕ ದುರಂತವಾಗಿ ಪರಿಣಮಿಸುತ್ತಿದೆ. ಸಾಲಕ್ಕೆ ಕುಟುಂಬದವರೆಲ್ಲ ಬಲಿಗೊಳ್ಳುತ್ತಿರುವುದು ಸಮಸ್ಯೆಯೆ.

ಸಾಲವನ್ನು ಶಕ್ತಿಗೂ ಮೀರಿ ಪಡೆದವರನ್ನು ಗುರುತಿಸಿ ಆಕಸ್ಮಿಕ ಹಾನಿಗೀಡಾದವರಿಗೆ ಜಿಲ್ಲಾಡಳಿತದ ಮೂಲಕ ಸಾಲ ತೀರಿಸುವುದು, ಬಿತ್ತನೆ ಬೆಳೆ ಸಾಲ ಹಾಗೂ ಸಬ್ಸಿಡಿದರದಲ್ಲಿ ಬೀಜ ನೀಡುವಿಕೆ, ರೈತರ ಫಸಲಿಗೆ ಬೆಲೆ ನಿಗದಿ ಮಾಡಿ ಸರ್ಕಾರವೇ ನೇರ ಖರೀದಿಗಿಳಿದರೆ ಆತ್ಮಹತ್ಯೆ ಪ್ರಕರಣಗಳು ಕಡಿಮೆಗೊಳ್ಳಬಹುದು ಎಂಬ ಸಲಹೆಗಳೂ ಸೂಚಿತವಾಗಿವೆ. ಆದರೆ ಸರ್ಕಾರದಿಂದ ಸಾಲ ಭರಿಸುವಿಕೆಗೂ ಮಿತಿ ಇದ್ದು ಅದು ಉಳಿದ ಸಮಾಜಕ್ಕೆ ಭಾರವಾಗದಂತೆ ಹಾಗೂ ಸೌಲಭ್ಯ ಪ್ರೇರಣೆಯು ಅರ್ಹ ಸಂದರ್ಭಗಳಿಗೆ ಅನ್ವಯವಾಗುವಂತೆ ನೋಡಿಕೊಳ್ಳಬೇಕಾಗುತ್ತದೆ.

ಆತ್ಮಹತ್ಯೆ ಪೀಡಿತ ವಿದರ್ಭ ಪ್ರದೇಶದಲ್ಲಿ ಡೋರ್ಲಿಗ್ರಾಮದ ರೈತರು ಸಾಲಕ್ಕೆ ಸಿಕ್ಕಿ ಬಿದ್ದು ತಮ್ಮ ಹಳ್ಳಿಯನ್ನೆ ಟಾಟಾ ಕಾರು ಘಟಕ ಸ್ಥಾಪನೆಗೆ ಮಾರಾಟ ಮಾಡುವ ಘೋಷಣೆ ಮಾಡಿರುವುದು ಪರಿಸ್ಥಿತಿಯ ವ್ಯಂಗ್ಯವೆನಿಸಿದೆ. ನಮ್ಮ ಜಮೀನು ಬರಡಾಗಿದೆ. ಬೆಳೆದ ಬೆಳೆಗೆ ಸೂಕ್ತ ಬೆಲೆ ಇಲ್ಲ. ರೈತರ ಆತ್ಮಹತ್ಯೆ ನಿಂತಿಲ್ಲ. ಹತ್ತಿ ಬೆಳೆಗೂ ಸೂಕ್ತ ಬೆಲೆ ಇಲ್ಲ. ನಮ್ಮ ಗ್ರಾಮ ಮಾರಾಟ ಮಾಡಿ ಟಾಟಾ ಕಾರು ಘಟಕಕ್ಕೆ ನಮ್ಮ ಜಮೀನು ಮಾರಿ ನಮ್ಮ ಯಾತನೆಗೆ ಮುಕ್ತಿ ಕೊಡಿ ಎಂಬ ಘೋಷಣೆಗಳ ಫಲಕವನ್ನು (12.12.2006) ಆ ಗ್ರಾಮಸ್ಥರು ಹಿಡಿದು ನಿಂತು ಕೃಷಿ ಮಂತ್ರಿ ಶ್ರೀ ಶರದ್ ಪವಾರರ 66ನೇ ಜನ್ಮದಿನಾಚರಣೆಯ ಸಂದರ್ಭದಲ್ಲಿ ಹೇಳುತ್ತಿದ್ದರು. ಅದು ಅವರ ಸಾವಿಗೀಡಾಗುವ ಸೂಚನೆಯ ಸಂಕಟದ ಕೊನೆ ಅಹವಾಲು ಆಗಿರಬಹುದೆ? ಎಂಬ ಪ್ರಶ್ನೆ ಕಾಡುತ್ತದೆ.

ಬೆಳಗಾವಿ ಸಾಂಬ್ರಾ ವಿಮಾನ ನಿಲ್ದಾಣದ ವಿಸ್ತರಣೆಗೆ ಒಟ್ಟು 340 ಎಕರೆ ಜಮೀನಿನ ಅಗತ್ಯವಿದ್ದು. ಜಾಗ ಖಾಲಿ ಮಾಡಲು ನೋಟೀಸ್ ಜಾರಿಯಾಗಿದೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಪ್ರಕ್ರಿಯೆಯನ್ನು ಆರಂಭಿಸಿವೆ. ಬೆಳಗಾವಿ ಜಿಲ್ಲಾ, ತಾಲೂಕು, ಗ್ರಾಮ ಪಂಚಾಯಿತಿ ಸದಸ್ಯರು. ಈ ವಿಸ್ತರಣೆ ಯೋಜನೆಗೆ ವಿರೋಧ ವ್ಯಕ್ತಪಡಿಸಿ ಮುಖ್ಯಮಂತ್ರಿಗಳಿಗೆ ಮನವಿ ಸಲ್ಲಿಸಿದ್ದಾರೆ. ಗ್ರಾಮಸ್ಥರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದೆ ರೈತರ ಹಿತವನ್ನು ಕಡೆಗಣಿಸಿ ವಿಮಾನ ನಿಲ್ದಾಣದ ವಿಸ್ತರಣೆ ಕಾರ್ಯ ಕೈಗೆತ್ತಿಗೊಳ್ಳಲಾಗುತ್ತಿದೆ ಎಂದು ಗ್ರಾಮಸ್ಥರ ವಿರೋಧ ವ್ಯಕ್ತವಾಗಿದೆ. ದೊಡ್ಡ ರೈತರಿಗೆ ಮಾತ್ರ ಪರಿಹಾರ ಒದಗಿ ನಿಜವಾದ ರೈತರು, ಕೃಷಿ ಕಾರ್ಮಿಕರು, ಕೂಲಿಕಾರರು, ಬೀದಿ ಪಾಲಾಗುವರು; ಸುಮಾರು 20 ಬೆಲ್ಲದ ಗಾಣಗಳಿಗೂ ಕುತ್ತು ಬಂದು ಗ್ರಾಮಸ್ಥರಿಗೆ ಉದ್ಯೋಗವಿಲ್ಲದಂತಾಗುತ್ತದೆ ಎಂದೆಲ್ಲ ಗ್ರಾಮಸ್ಥರ

ದೂರು ಆಗಿದೆ. ಈ ಕಾರಣ ಆಕ್ರೋಶಗೊಂಡಿರುವ ಸಾಂಬ್ರಾ ಗ್ರಾಮಸ್ಥರು ಸಮೀಕ್ಷೆ ನಡೆಸಲು ಗ್ರಾಮಕ್ಕೆ ಆಗಮಿಸುವ ಕಂದಾಯ ಅಧಿಕಾರಿಗಳ ಮುಂದೆಯೆ ಆತ್ಮಹತ್ಯೆ ಮಾಡಿಕೊಳ್ಳುವುದಾಗಿ ಎಚ್ಚರಿಸಿದ್ದಾರೆ (14.12.06): ರೈತರ ಆತ್ಮಹತ್ಯೆಗೆ ಭೂಸ್ವಾಧೀನ, ಉದ್ಯೋಗ ನಷ್ಟವು ಹೇಗೆ ಕಾರಣವಾಗಬಲ್ಲವು ಎಂಬ ಸೂಚನೆ ಇಲ್ಲಿದೆ.

ಮಾನ್ಯ ಮುಖ್ಯಮಂತ್ರಿ ಶ್ರೀ ಹೆಚ್.ಡಿ.ಕುಮಾರಸ್ವಾಮಿಯವರು, ಸುದ್ದಿಗಾರರೊಡನೆ ಮಾತನಾಡುತ್ತ, ಯಾವುದೇ ರೀತಿಯ ಸಂಕಷ್ಟ ಬಂದರೂ, ಆತ್ಮಹತ್ಯೆಗೆ ಮೊರೆಹೋಗಬೇಡಿ ಎಂದು ರೈತರಿಗೆ ಕೈ ಮುಗಿದು ಪ್ರಾರ್ಥಿಸಿದುದು ಬ್ಯಾಂಕ್‌ಗಳ ಮೂಲಕ ಕೋಟ್ಯಂತರ ಸಾಲ ಪಡೆದವರೇ ಆತಂಕಗೊಳ್ಳದಿರುವಾಗ, ರೈತರೇಕೆ ಆತ್ಮಹತ್ಯೆಗೆ ಮುಂದಾಗಬೇಕು? ರೈತರಿಗೆ ತೊಂದರೆ ನೀಡುವ ಲೇವಾದೇವಿಗಾರರ ವಿರುದ್ಧ ಸೂಕ್ತಕ್ರಮ ಕೈಗೊಳ್ಳಲು ಅಧಿಕಾರಿಗಳಿಗೆ ಸೂಚಿಸಿರುವುದಾಗಿ ತಿಳಿಸಿದುದು, ಸಾಲಬಾಧೆಯಿಂದ ಆತ್ಮಹತ್ಯೆ ಮಾಡಿಕೊಂಡ ರೈತರ ಕುಟುಂಬಕ್ಕೆ 24 ಗಂಟೆಯೊಳಗೆ ಒಂದು ಲಕ್ಷ ರೂ. ಪರಿಹಾರ ನೀಡಲು ಜಿಲ್ಲಾಧಿಕಾರಿಗಳಿಗೆ ಸೂಚಿಸಿರುವುದು ಆತ್ಮಹತ್ಯೆಗೆ ಪ್ರೇರಣೆಯಾದ ಕ್ರಮವಾಗದೆ ಮಾನವೀಯ ನಡೆ ಎಂದಿರುವುದೆಲ್ಲ ವರದಿಗೊಂಡಿದೆ (20.12.06)

ನೀರಾವರಿ ಸೌಲಭ್ಯವಿದ್ದರೂ, ನಿರಂತರ ಬರ, ದುಬಾರಿಯಾಗುತ್ತಿರುವ ಕೃಷಿ ಪರಿಕರಗಳ ಬೆಲೆ, ಕಳಪೆ ಬೀಜ ಹಾಗು ನಕಲಿ ಕ್ರಿಮಿನಾಶಕಗಳ ಸರಬರಾಜು ಭತ್ತ ಮತ್ತು ಹತ್ತಿಯಂಥ ಪ್ರಮುಖ ಆಹಾರ ಹಾಗೂ ಆರ್ಥಿಕ ಬೆಳೆಗಳಿಗೆ ಒದಗದ ವೈಜ್ಞಾನಿಕ ಬೆಲೆ, ನೀರಾವರಿ ಪ್ರದೇಶದ ಬೇಸಾಯದಲ್ಲಿಯ ಹೆಚ್ಚಿನ ಖರ್ಚು ಹಾಗು ಶ್ರಮ ಇವೆಲ್ಲ ರೈತರನ್ನು ಕಂಗೆಡಿಸಿವೆ. ಸರ್ಕಾರದ ಜನಪ್ರಿಯ ಯೋಜನೆಗಳ ಪ್ರಕಟವಾದಂತೆ ಅರ್ಹರನ್ನು ತಲುಪಿದಾಗಲೇ, ಅರ್ಥಪೂರ್ಣ. ರೈತರ ಸಂಕಟ ತಪ್ಪಿ, ಆತ್ಮವಿಶ್ವಾಸ ಮೂಡಿಸುವ ಕೆಲಸವಾದಾಗ ಆತ್ಮಹತ್ಯೆಗಳಿಗೆ ಅವಕಾಶವಿರುವುದಿಲ್ಲ. ಆಗ ಶೇ.4ರ ಬಡ್ಡಿದರ ಸಾಲ, ನೂತನ ಕೃಷಿ ನೀತಿ, ಸಾಲ ಮನ್ನಾ ಯೋಜನೆಗಳೂ ಯಶಸ್ವಿಯಾಗುತ್ತವೆ.

ವಿಶೇಷತಃ ಪತ್ರಕರ್ತ ಪಿ.ಸಾಯಿನಾಥ ಅವರು ಗ್ರಾಮೀಣ ಪ್ರದೇಶಗಳ ಬಗ್ಗೆ ಅಧ್ಯಯನ ಮಾಡಿರುವ ಬಗ್ಗೆ ವರದಿಗೊಂಡಿರುವುದು ಕುತೂಹಲಕಾರಿಯಾಗಿದೆ. ಸಾಯಿನಾಥರ ಕೃತಿ ಭಾರತದ ಹಳ್ಳಿಗಳ ಚಿತ್ರಣವನ್ನು ಬೆತ್ತಲೆಗೊಳಿಸಿರುವ ಒಂದು ವಿಶಿಷ್ಟ ಹೊತ್ತಗೆ. ತಮಿಳುನಾಡು, ಮಧ್ಯಪ್ರದೇಶ ಹಾಗೂ ಒರಿಸ್ಸಾ ಸರ್ಕಾರಗಳು

ಗ್ರಾಮೀಣ ಪ್ರದೇಶದ ಯೋಜನೆಗಳಿಗೆ ಈ ಕೃತಿಯಿಂದ ಬಹಳ ಪ್ರಯೋಜನ ಪಡೆದುವು. ಎಚೆತ್ತುಕೊಂಡು ರೂಪಿಸಿದ್ದ ಯೋಜನೆಗಳನ್ನು ಬದಲಿಸಿದುವು. ದೇಶದ ಅನೇಕ ಪತ್ರಿಕೆಗಳು (ಸುಮಾರು 60) ಗ್ರಾಮೀಣ ಸಂಬಂಧೀ ಅಂಕಣಗಳನ್ನು ಆರಂಭಿಸಿದುವು; ಹೆಚ್ಚಿನ ಸ್ಥಳಾವಕಾಶವನ್ನು ಮೀಸಲಿಟ್ಟವು!

*ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯಲ್ಲಿ 1997 ರಿಂದ 2000ದ ಅವಧಿಯಲ್ಲಿ ಸುಮಾರು 1800 ಮಂದಿ ಆತ್ಮಹತ್ಯೆ ಮಾಡಿಕೊಂಡಿದ್ದರು. ಮೊದಲಿಗೆ ಆತ್ಮಹತ್ಯೆಯ ಸುದ್ದಿ ಮುಖಪುಟದಲ್ಲಿ ಪ್ರಕಟವಾಗುತ್ತಿದ್ದುದು ಕೊನೆ ಕೊನೆಗೆ ಸಿಂಗಲ್ ಕಾಲಮ್ ನಂತರ ಜಾಗ ತುಂಬಿಸುವ ಫಿಲ್ಲರ್ ಸುದ್ದಿಯಂತೆ ಪ್ರಕಟವಾಗಿ ತದನಂತರ ಅದರ ಪ್ರಕಟನೆಯೆ ಇಲ್ಲವಾಯಿತು. ಈ ಸಂದರ್ಭದಲ್ಲಿಯೆ ಸಾಯಿನಾಥರು ಅನಂತರಪುರ ಜಿಲ್ಲೆಯಲ್ಲಿ ವ್ಯಾಪಕವಾಗಿ ಅಡ್ಡಾಡಿ ಆತ್ಮಹತ್ಯೆ ಮಾಡಿಕೊಂಡ ಪ್ರತಿ ರೈತನ ಮನೆಗೆ ಹೋದರು. ಆತ್ಮಹತ್ಯೆಯ ಕಾರಣಗಳನ್ನು ತಿಳಿದುಕೊಂಡರು. ಅವರ ಸಂಕಷ್ಟಗಳ ಕುರಿತು ಅಧ್ಯಯನ ನಡೆಸಿದರು. ರೈತರು ಆತ್ಮಹತ್ಯೆ ಮಾಡಿಕೊಂಡಾಗ, ಅವರ ಕುಟುಂಬಗಳಿಗೆ ಜನಪ್ರತಿನಿಧಿಗಳು, ಅಧಿಕಾರಿಗಳು ಹೋಗಿ ಒಂದು ಸಾಂತ್ವನದ ಮಾತೂ ಹೇಳುವ ಕ್ಷಮತೆ ತೋರಿರಲಿಲ್ಲ, ಸಾಯಿನಾಥರು ಹೋಗಿ ಅವರ ಸಮಸ್ಯೆಗಳನ್ನು ವೈಜ್ಞಾನಿಕವಾಗಿ ಅರಿತು, ಅವರ ಕರುಣಾಜನಕ ಸ್ಥಿತಿಯನ್ನು ದಾಖಲಿಸಿದರು.*

ಮೂರು ವರ್ಷಗಳ ಅವಧಿಯಲ್ಲಿ ಆತ್ಮಹತ್ಯೆಗೆ ಮೊರೆ ಹೋದವರು ಕೇವಲ 54 ಮಂದಿ ಎಂಬುದು ಆಂಧ್ರ ವಿಧಾನಸಭೆಯಲ್ಲಿ ಸರ್ಕಾರ ಕೊಟ್ಟ ಸಂಖ್ಯೆ ಆಗಿತ್ತು. ಅದೇ ಸಾಯಿನಾಥರ ಅಧ್ಯಯನದಲ್ಲಿ ಅದು 1800 ಆಗಿದ್ದು, ಅದರ ಎಲ್ಲ ವಿವರಗಳು ಸಾವಿಗೆ ಕಾರಣವಾದ ಸಂಗತಿಗಳ ಸಹಿತ ಇದ್ದುವು. ಜಿಲ್ಲಾ ಅಪರಾಧ ದಾಖಲೆ ಬ್ಯೂರೋ ಈ ಆತ್ಮಹತ್ಯೆ ಪ್ರಕರಣಗಳಿಗೆ, ಪರೀಕ್ಷೆ ಫೇಲು, ಭಗ್ನಪ್ರೇಮ, ವಿವಾಹ ಪೂರ್ವ ಸಂಬಂಧದ ಕಷ್ಟ. ದಾಂಪತ್ಯ ವಿರಸ, ಬಂಜೆತನ, ನಿರಂತರ ರೋಗ ಇತ್ಯಾದಿ ಬೇರೆ ಬೇರೆ ಕಾರಣಗಳನ್ನು ದಾಖಲೆ ಮಾಡಿಕೊಂಡಿತ್ತು. ಅವರದು ರೈತರ ಆತ್ಮಹತ್ಯೆಯಲ್ಲವೆಂದಿತ್ತು. ಬೇರೆ ಕಾರಣಗಳಿಗೆ ಆದ ಆತ್ಮಹತ್ಯೆ ವಾಸ್ತವವಾಗಿ ಶೇ.5 ಕ್ಕಿಂತಲೂ ಕಡಿಮೆ ಇತ್ತು.

ಈ ಅಧ್ಯಯನದ ಮುಖ್ಯವಾದ ಸಂಗತಿಯೊಂದೆಂದರೆ 1800 ರೈತರ ಪೈಕಿ, 1601 ರೈತರು ಸಿಬಾ–ಗೈಗಿ ಕಂಪೆನಿಯ ಕೀಟನಾಶಕ ಸೇವಿಸಿ ಆತ್ಮಹತ್ಯೆ

ಮಾಡಿಕೊಂಡುದುದಾಗಿತ್ತು. ಕಂಪೆನಿಯ ಜೊತೆ ಶಾಮೀಲಾಗಿ ರೈತರಿಗೆ ಈ ಕೀಟನಾಶಕವನ್ನು ಅಧಿಕಾರಿ ವರ್ಗ ಉಚಿತವಾಗಿ ನೀಡುತ್ತಿದ್ದುದು ಆತ್ಮಹತ್ಯೆಗೆ ಸುಲಭದ ದಾರಿಯಾಗಿತ್ತು. ಸಾಯಿನಾಥ ಅವರು ರೈತರ ಸಮಸ್ಯೆಗಳನ್ನು ಈ ಹಿನ್ನೆಲೆಯಲ್ಲಿ ವಿವೇಚಿಸಿ; ಕೃಷಿ ನೀತಿ, ಸಾಲಗಾರರ ಕಿರುಕುಳ, ಮಧ್ಯವರ್ತಿಗಳ ಕಿರುಕುಳ, ಅಸ್ಥಿರ ಬೆಲೆ, ಹವಾಮಾನ ವೈಪರೀತ್ಯ, ಜಾಗತೀಕರಣದ ಹೊಡೆತ, ಬದಲಾದ ಜೀವನಶೈಲಿ ಹಾಗೂ ಕೃಷಿ ಪದ್ಧತಿ ಇತ್ಯಾದಿ ನೂರಕ್ಕೂ ಹೆಚ್ಚು ಕಾರಣಗಳನ್ನು ಪಟ್ಟಿಮಾಡಿದರು. ಹಳ್ಳಿಗಳ ಜೀವನಾದರ್ಶವನ್ನು ಎತ್ತಿ ತೋರಿದ ತಲಸ್ಪರ್ಶಿ ಅಧ್ಯಯನದ ಫಲ ಅದಾಗಿತ್ತು, ಎಂದು ಸುದ್ದೀಶ ಅವರು ಕೆಲವು ವಿವರಗಳನ್ನು ನೀಡಿದ್ದಾರೆ.*10

***ಮಂಥನ:*** *ಆತ್ಮಹತ್ಯೆ ಕುರಿತಾಗಿ ಸುದ್ದಿ ಮಾಧ್ಯಮಗಳು ಉದಾಸೀನ ತೋರಲಿಲ್ಲ. ವಿವರಗಳನ್ನು ಪ್ರಕಟಿಸಿದುವು, ಪತ್ರಿಕೆಗಳಲ್ಲಿ ಜಿಲ್ಲಾವಾರು ವಿವರಗಳು, ಅನಿಸಿಕೆಗಳು ಪ್ರಕಟವಾದುವು. ವಿಚಾರ ಸಂಕಿರಣಗಳೂ ನಡೆದುವು. ಕೆಲವು ಪತ್ರಿಕೆಗಳು ಧಾರಾವಾಹಿಯಾಗಿ ಆತ್ಮಹತ್ಯೆ ಪ್ರಕರಣಗಳನ್ನು ಉದ್ಧೃತ ಸಹಿತ ವಿವೇಚಿಸಿದವು. ವಿಶೇಷ ಪುರವಣಿಯನ್ನು ಹೊತ್ತಗೆ ರೂಪದಲ್ಲಿ ತಂದುವು. ವಿಧಾನಸೌಧದ ಗ್ರಂಥಾಲಯ ಸಮಿತಿ ಪ್ರಕಟಮಾಡಿದ ನನ್ನ* ***'ಕರ್ನಾಟಕ ರೈತ ಚಳುವಳಿ – ಸತ್ಯಾಗ್ರಹಗಳು'*** *ಕೃತಿಯ ಮೂರನೇ ಸಂಪುಟದಲ್ಲಿ ಈ ಬಗೆಗೆ ಸಾಕಷ್ಟು ವಿವರಗಳೂ ಪ್ರಕಟವಾಗಿವೆ; ಮನಶ್ಶಾಸ್ತ್ರೀಯ ಹಿನ್ನೆಲೆಯಲ್ಲಿಯೂ ವಿವೇಚಿಸಿದೆ. ಕೃಷಿ ತಜ್ಞರು, ರೈತರೊಡನೆಯೂ ಆ ಬಗ್ಗೆ ಮಾಡಿದ ಸಂದರ್ಶಿತ ಭಾಗಗಳನ್ನು ಅಡಕ ಮಾಡಲಾಗಿದೆ.*

*ಇನ್ನು ಇಡೀ ದೇಶದಲ್ಲಿ ರೈತರ ಆತ್ಮಹತ್ಯೆಯ ವಿಚಾರ ಚರ್ಚೆಗೊಳ್ಳುತ್ತಿದೆ. ಸಾಲದ ಬಾಧೆಯಿಂದ ರೈತರು ಇಂಥ ಪ್ರಕರಣಗಳಿಗೆ ಈಡಾಗುತ್ತಿದ್ದಾರೆ. ಆತ್ಮಹತ್ಯೆಗಳ ಹಿನ್ನೆಲೆಯಲ್ಲಿ ಬಡ ರೈತರ ಸಂಕಷ್ಟ ನಿವಾರಣೆಗೆಂದು ಪ್ರಧಾನಿಯವರು ಪ್ರಕಟಿಸಿದ. ವಿಶೇಷ ಪ್ಯಾಕೇಜ್, ಕೋಟಿ ರೂಗಳ ಯೋಜನೆ ಅದು ಶ್ರೀಮಂತ ರೈತರಿಗೂ ದಕ್ಕುವುದೆಂದರೆ ಅಪಾತ್ರ ದಾನವಲ್ಲವೆ? ಎಂಬ ಪ್ರಶ್ನೆ ಸರ್ಕಾರದ ಎದುರಿಗಿದೆ. ಈ ಪ್ಯಾಕೇಜನ್ನು ನಿರ್ವಹಿಸುತ್ತಿರುವ ಬಗ್ಗೆ ರಿಸರ್ವ್ ಬ್ಯಾಂಕ್ ಕೆಲವು ಅಂಶಗಳನ್ನು ಭಾರತ ಸರ್ಕಾರದ ಗಮನಕ್ಕೆ ತಂದಿದೆ ಎಂದರೆ ಅದೊಂದು ಪರೋಕ್ಷ ವಿಮರ್ಶೆಯೆ. ಕೃಷಿ ಹಾಗೂ ಕೃಷಿ ಸಂಬಂಧದ ಎಲ್ಲಾ ಸಾಲಗಳನ್ನು, ಬಡ್ಡಿಯನ್ನು ಬ್ಯಾಂಕ್‌ಗಳು ಹೆಚ್ಚು ಕಡಿಮೆ ಮನ್ನಾ ಮಾಡಿವೆ. ಇದು ಶ್ರೀಮಂತ ಭೂಮಾಲೀಕರಿಗೂ*

---
*10. ವಿಜಯ ಕರ್ನಾಟಕ, 6.1.07

ವರದಾನವಾಗಿದೆ. ಪ್ಯಾಕೇಜ್ ರೂಪಿಸುವಲ್ಲಿ ಅದರ ಚಾಲನೆಗೆ ಸೂಕ್ತ ಮಾರ್ಗದರ್ಶಕ ಸೂತ್ರಗಳನ್ನು ಹೆಣೆದಿದ್ದರೆ ಅರ್ಹತೆ ಆಧಾರದಲ್ಲಿ ಸೌಲಭ್ಯ ಒದಗುತ್ತಿತ್ತು.

ಬೆಂಗಳೂರು ವಿಶ್ವವಿದ್ಯಾಲಯದ 41 ನೇ ಘಟಿಕೋತ್ಸವದಲ್ಲಿ (2007) ಉಪರಾಷ್ಟ್ರಪತಿ ಭೈರೋನ್ ಸಿಂಗ್ ಶೇಖಾವತ್ ಅವರು, ರಾಷ್ಟ್ರದಲ್ಲಿ **ಏಳು ಕೋಟಿ ಸಣ್ಣ ಹಿಡುವಳಿದಾರರು** ಇದ್ದಾರೆ. ಕೃಷಿಯೇತರ ಉದ್ದೇಶಕ್ಕೆ ಭೂಮಿ ಬಳಕೆಯಾಗುವಲ್ಲಿ ಹಿಡುವಳಿಯೂ ಕಿರಿದಾಗುತ್ತಿದೆ. ಹೀಗಾಗಿ ಆರ್ಥಿಕ ಸಂಕಷ್ಟಕ್ಕೆ ಸಣ್ಣ ರೈತರು ಸಿಕ್ಕಿ ಆತ್ಮಹತ್ಯೆ ಮಾರ್ಗ ಹಿಡಿದಿದ್ದಾರೆ. ಇದು ರಾಷ್ಟ್ರದ ನಾನಾ ಭಾಗಗಳಲ್ಲಿ ಮರುಕಳಿಸುತ್ತಿರುವುದು ಆತಂಕಕಾರಿಯಾಗಿದೆ. ರೈತರ ಸರ್ವತೋಮುಖ ಬೆಳವಣಿಗೆ ಯಾದಾಗ ಮಾತ್ರ 'ಅಭಿವೃದ್ಧಿ' ಅರ್ಥಪೂರ್ಣ ಶಬ್ದವಾಗುತ್ತದೆ ಎಂದು ತಮ್ಮ ಭಾಷಣದಲ್ಲಿ ತಿಳಿಸಿದ್ದಾರೆ. ಕೃಷಿ ಉತ್ಪನ್ನಗಳ ಗುಣಮಟ್ಟ ಹೆಚ್ಚಾದಾಗ ಮಾತ್ರ ವಿಶ್ವ ಮಾರುಕಟ್ಟೆಯಲ್ಲಿ ನಮ್ಮ ಪಾತ್ರಕ್ಕೆ ಮೌಲ್ಯ ಬರುತ್ತದೆ. ಇದಕ್ಕೆ ಕೃಷಿ ಶಿಕ್ಷಣ ಹಾಗೂ ತಂತ್ರ ಜ್ಞಾನ ಸಾಧನೆ ಬೇಕು ಎಂದು ಅಭಿಪ್ರಾಯ ಪಟ್ಟಿದ್ದಾರೆ.

ರೈತರ ಆತ್ಮಹತ್ಯೆ ತಡೆಗೆ ಸಮಗ್ರ ಹವಾಮಾನ ಆಧಾರಿತ ನಿರ್ದಿಷ್ಟ ಬೆಳೆ ವಿಮಾ ಯೋಜನೆಯು ಕರ್ನಾಟಕ, ಮಹಾರಾಷ್ಟ್ರ, ಜಾರ್ಖಂಡ್‌ಗಳಲ್ಲಿ ಜೂನ್ 2007 ರಿಂದ ಜಾರಿಗೆ ಬರುವುದೆನ್ನಲಾಗಿದೆ. ಬೆಳೆ ನಷ್ಟಕ್ಕೆ ರೈತರಿಗೆ ಇದು ಶೀಘ್ರ ಪರ್ಯಾಯವಾಗಿ ಈ ಯೋಜನೆ ಇದ್ದು 100 ಕೋಟಿ ರೂ. ಮೀಸಲು ಇದಕ್ಕಿದೆ. ರಾಷ್ಟ್ರೀಯ ಕೃಷಿ ವಿಮಾ ಯೋಜನೆ ಪ್ರದೇಶಾಧಾರಿತವಾದದ್ದು. ಇಳುವರಿ ಖಾತರಿ ವಿಮಾ ಯೋಜನೆಯಾದದ್ದು. ಇದು ನಿಧಾನಗತಿಯದಾಗಿತ್ತು; ಬೆಳೆ ಕಟಾವು ಪ್ರಯೋಗ ಆಧಾರಿತವಾಗಿತ್ತು. ಪಾರದರ್ಶಕತೆ ಇರಲಿಲ್ಲ. ಇವೆಲ್ಲದರಿಂದ ಅಗತ್ಯವಿದ್ದ ಸಮಯದಲ್ಲಿ ರೈತರಿಗೆ ಪರಿಹಾರ ಸಿಗುತ್ತಿರಲಿಲ್ಲ. ಈ ಅತ್ಯಾಧುನಿಕ ತಂತ್ರ ಜ್ಞಾನದಿಂದ ಬೆಳೆ ನಷ್ಟ ಅಂದಾಜು ಮಾಡಿ, ಬೆಳೆ ಕಟಾವು ಪ್ರಯೋಗವಿಲ್ಲದೆಯೆ ರೈತರಿಗೆ ಶೀಘ್ರ ಪರಿಹಾರ ಒದಗುತ್ತದೆ. ರೈತರ ಆತ್ಮಹತ್ಯೆಯ ತಡೆಗೆ ಹೊಸ ಯೋಜನೆ ದೊರಕಿದಂತಾಗಿದೆ, ಎಂಬುದು ವಿಮಾ ಕಂಪೆನಿ ಅಧಿಕಾರಿಗಳ ಮಾತಾಗಿದೆ.

ನನ್ನ **ಕರ್ನಾಟಕ ರೈತ ಚಳುವಳಿ–ಸತ್ಯಾಗ್ರಹಗಳು** ಕೃತಿಯ ಮೂರನೆಯ ಸಂಪುಟದಲ್ಲಿ ರೈತರ ಆತ್ಮಹತ್ಯೆಯ ಕುರಿತು ಬಹು ದೀರ್ಘವಾಗಿ 2002ರ ಸುಮಾರಿನವರೆಗಿನ ಮಾಹಿತಿಗಳನ್ನು ಈಗಾಗಲೇ ಹೇಳಿದಂತೆ ತೌಲನಿಕವಾಗಿ ನೀಡಿ ವಿಶ್ಲೇಷಿಸಲಾಗಿದೆ. ಆ ನಂತರದ ರೈತರ ಆತ್ಮಹತ್ಯೆಯ ಪ್ರಕರಣಗಳನ್ನು, ಅದರ

ವಿವಿಧ ಮುಖಗಳನ್ನು ಪರಿಹಾರೋಪಾಯಗಳ ಪ್ರಯತ್ನಗಳನ್ನು ಸದ್ಯ ವಿವರಿಸಲಾಗಿದೆ. ರೈತರ ಮನಸ್ಸು ಸೂಕ್ಷ್ಮವಾಗುತ್ತಿರುವುದು, ಜೀವನ ಶೈಲಿಯ ಸಮತೋಲನ ಸೂಕ್ಷ್ಮಗಳು, ನಿರ್ಭಾವುಕ ಸಾಮಾಜಿಕ ಸಂಬಂಧಗಳು. ಅಧಿಕಾರಿ ವಲಯದ ನಿರ್ಲಿಪ್ತತೆ, ನಂತರದ ರಾಜಕೀಯ ಎಚ್ಚರಗಳು, ಪತ್ರಿಕಾ ಸಂವೇದನೆಗಳನ್ನು ಇಲ್ಲಿ ಮಂಡಿಸಲಾಗಿದೆ.

ಸಾಲ ಬಾಧೆ, ಸಾಲದತಗಾದೆ, ಬೆಳೆ ಹಾನಿ ಬ್ಯಾಂಕಿಗೆ ಕೊಟ್ಟ ಚೆಕ್‌ಬೌನ್ಸ್ ಆಗಿ ಸಂಬಂಧ ಕಾರಣ, ಬ್ಯಾಂಕ್ ಖಾಸಗಿ ಸಾಲ, ಕೈಗಡ ಸಾಲ, ಬೆಳೆಗೆ ಬೆಲೆ ಕುಸಿತ, ಮಾರಾಟವಾಗದ ಸರಕು ಇವೆಲ್ಲ ಎಂದಿನ ನಿರಂತರ ಆತ್ಮಹತ್ಯೆಯ ಕಾರಣಗಳಾಗಿ ಕಂಡು ಬರುತ್ತವೆ. ಕೆಲವರು ಮನೆಯಲ್ಲಿ ಕೆಲವರು ಹೊಲದಲ್ಲಿ, ಕೆಲವರು ಮನೆ ದೇವರ ನೆಲೆಯಲ್ಲಿ ವಿಷಸೇವನೆ ಮಾಡಿ ಕೆಲವರು ಮರಕ್ಕೆ ನೇಣು ಹಾಕಿಕೊಂಡು ಬೆಳೆ ಕಟಾವು ವಿಳಂಬವಾಗಿ ಗಂಡನ ಕಂಗಾಲು ಸ್ಥಿತಿ ಕಂಡ ಗರ್ಭಿಣಿ ಪತ್ನಿ ಭಾವಿಗೆ ಬಿದ್ದು, ಬೆಳೆದ ಕಬ್ಬಿನ ರಾಶಿ ಎದುರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಇಂಥ ಸಂದರ್ಭಗಳಲ್ಲಿ ಭಾವನೆಗಳು *(sentiments)*, ನಂಬಿಕೆಗಳು ಸಾವಿನ ಸಮಯದಲ್ಲಿ ಅಂಟಿಕೊಂಡಿರುವುದು ಕಾಣುತ್ತದೆ. ಇದರ ಅಧ್ಯಯನದಿಂದ ಈ ನೆಲೆಯನ್ನು ಬಳಸಿ ನಂಬಿಕೆ, ಭಾವನೆಗಳಿಂದಲೇ ಮನಸ್ಸು ಪರಿವರ್ತಿಸಿ ರೈತರ ಆತ್ಮಹತ್ಯೆ ತಡೆಯುವ ಕೆಲಸ ಸಾಮಾಜಿಕರ ಅರ್ಥಾತ್ ಸಮಾಜ ಜೀವನದಲ್ಲಿ ಆಗಬೇಕು.

ಆನೆ ಹಾವಳಿಯಿಂದ ಕಬ್ಬು ಹಾಗೂ ಬಾಳೆ ತೋಟ ನಾಶವಾಗಿ ಹತಾಶೆಗೊಂಡ ರೈತ; ಟಾಟಾ ಕಂಪೆನಿ ಕಾರು ಘಟಕಕ್ಕೆ ತನ್ನ ಜಮೀನು ಆಕ್ರಮಣಗೊಂಡು ವರ್ಗವಾದ ಕಾರಣ ನಲುಗಿದ ರೈತ; ಮಠದಿಂದ ಜಮೀನು ಆಕ್ರಮಣವಾದ್ದರಿಂದ ದಿಕ್ಕು ತೋಚದ ರೈತ, ಬೆಳೆಗೆ ರೋಗ ತಗುಲಿ ಬೆಳೆ ನಾಶವಾಗಿ ಬ್ಯಾಂಕ್ ಸಾಲ ತೀರಿಸಲಾಗದ ರೈತ, ಬೆಳೆ ಸಾಲದ ಭಯದಿಂದ ತತ್ತರಿಸಿದ ರೈತ, ಸಾಲ ಮರುಪಾವತಿ ನೋಟೀಸಿಗೆ ಹೆದರಿದ ರೈತ, ಕೈಸಾಲ ತೀರದೆ ಮಾನಸಿಕ ಹಿಂಸೆ ಮತ್ತು ಅವಮಾನ ತಾಳದೆ ಹೋದ ರೈತ, ಕಾರ್ಖಾನೆ ಕೊಳ್ಳದೆ ಒಣಗಿದ ಕಬ್ಬು ಬೆಳೆಯ ಆತಂಕಗೊಂಡ ರೈತ, ಕಬ್ಬಿಗೆ ಸೂಕ್ತ ದರ ದೊರಕದ ಸಾಲ ಹಾಗೂ ಜೀವನ ನಿರ್ವಹಣೆ ಕಷ್ಟವೆನಿಸಿದ ರೈತ ದಂಪತಿಗಳು, ರೈತರ ತಂಡ, ಆತ್ಮಹತ್ಯೆಯೂ ಒಂದು ಪ್ರತಿಭಟನೆ ಎಂದು ತೋರಲು ಹೊರಟ ಕಬ್ಬು ಬೆಳೆಗಾರರ ಗುಂಪು, ಇವರೆಲ್ಲ ವಿಷ ಸೇವನೆ, ನೇಣು, ಇತ್ಯಾದಿಗಳು ಮೂಲಕ ಏಕಾಂತ ಕೌಟುಂಬಿಕ ಹಾಗೂ ಸಾಮೂಹಿಕ ಆತ್ಮಹತ್ಯೆ ಮಾಡಿಕೊಂಡುವರಲ್ಲಿ ಸೇರಿದ್ದಾರೆ.

ಹೀಗೆ ಆತ್ಮಹತ್ಯೆ ಮಾಡಿಕೊಳ್ಳುವವರಲ್ಲಿ ತನ್ನನ್ನು ನಂಬಿದವರ ಗತಿ, ಭವಿಷ್ಯದ ಬಗ್ಗೆ ಏಕೆ ಯೋಚನೆ ಬರುವುದಿಲ್ಲ, ಊಹೆ ಮಾಡುವುದಿಲ್ಲ ಎಂಬ ಮನಶ್ಶಾಸ್ತ್ರೀಯ ಪ್ರಶ್ನೆಯೂ ಏಳುತ್ತದೆ. ಇದಕ್ಕೆ ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಆಯಾಮದ ನೆಲೆಗಳಲ್ಲಿಯೂ ಯೋಚಿಸಬೇಕಾಗುತ್ತದೆ.

ಸುಭಾಷಿತವೊಂದು ಹೀಗಿದೆ: 'ತ್ಯತ್ಯಜೇತ್ ಕ್ಷುಧಾರ್ತೋ ಮಹಿಲಾಂ ಸುಪುತ್ರಾಂ' – ಹಸಿವಿನಿಂದ ಕಂಗಾಲಾದವನಿಗೆ ಹೆಂಡತಿ ಮಕ್ಕಳ ಪರಿವೆ ಇಲ್ಲದೆ ಬಿಟ್ಟು ಹೋಗುತ್ತಾನೆ. ಕಂಗೆಟ್ಟ ರೈತನಿಗೆ ಹೀಗೆಯೇ ಯಾವುದರ, ಯಾರ ಪರಿವೆಯು ಆತ್ಮಹತ್ಯೆಯ ಕಾಲಕ್ಕೆ ಬರುವುದಿಲ್ಲವೆನಿಸುತ್ತದೆ. 'ಕ್ಷೀಣಾ ನರಾ ನಿಷ್ಕರುಣಾ ಭವಂತಿ' ಅಷ್ಟೇ ಅಲ್ಲ 'ನಿಷ್ಭಾವಾ ಭವಂತಿ' ಕೂಡ ಆಗಿಬಿಡುತ್ತಾನೆ. ಅಂದರೆ ಕೈಲಾಗದ ಸಮಯದಲ್ಲಿ ಎಲ್ಲರೂ ಕರುಣೆಯನ್ನು ಕಳೆದುಕೊಳ್ಳುತ್ತಾರೆ; ಭಾವನೆಗಳನ್ನು ಕಳೆದುಕೊಳ್ಳುತ್ತಾರೆ ಅರ್ಥಾತ್ ಭಾವನಾತ್ಮಕ ಸಂಬಂಧಗಳನ್ನು ಮರೆಯುತ್ತಾರೆ. ಇಲ್ಲಿ ಉಳಿದ ಬಾಂಧವರು / ಬಂಧುಗಳು ಅಥವಾ ಸಮಾಜ ತನ್ನ ಅವಲಂಬಿತರನ್ನು ನೋಡಿಕೊಳ್ಳಲಿ ಎಂಬ ನಿರೀಕ್ಷೆಯು ರೈತನಲ್ಲಿ ಸೂಕ್ಷ್ಮವಾಗಿ ಅಡಗಿರಬಹುದೆ! ಎಂಬುದನ್ನೂ ಗಮನಿಸಬೇಕಾಗುತ್ತದೆ. ಇದೊಂದು ರೀತಿ ಸಮಾಜ, ಸರ್ಕಾರದ ಪ್ರಜ್ಞೆಗೆ ಸಂಕಷ್ಟದ ನೋವು ತಾಗಿ ಪರಿಹಾರ ಯೋಚಿಸಲಿ, ಎಂಬ ಪ್ರಜ್ಞಾ ಪ್ರತಿಭಟನೆ; ಪ್ರಜ್ಞಾ ಸವಾಲು ಎನ್ನುವಂತಿದೆ.

ಸಾಲ ತೆಗೆದು ಕೊಂಡ ಮೇಲೆ ಸಾಲ ಹಿಂದಿರುಗಿಸುವುದು ಸಂಸ್ಕೃತಿ. ಇದನ್ನು ಪಾಲಿಸಿಕೊಂಡು ಬಂದ ಪರಂಪರೆ ನಮ್ಮ ರೈತರದು. ಇದು ಅವರ ಸುಪ್ತ ಮನಸ್ಸಿನಲ್ಲಿ ಕೆಲಸ ಮಾಡುತ್ತಿರುತ್ತದೆ. ಅಂತೇ ಸಾಲ ಹಿಂದಿರುಗಿಸಲಾಗದಿದ್ದಾಗ, ಹತ್ತೂ ಜನರ ಮುಂದೆ ಅದಕ್ಕಾಗಿ ಅವಮಾನವಾದಾಗ, ಅದನ್ನು ತಾಳಿಕೊಳ್ಳಲಾಗದ ಸಾಂಸ್ಕೃತಿಕ ಹತಾಶೆಯ ಭಾರ ಅವನ ಆತ್ಮಹತ್ಯೆಗೆ ಪ್ರೇರಕವಾಗಬಹುದಾದ ಒಂದು ಅಂಶವಾಗಿದೆ. 'ಈಸ್ಕಂಡೋನು ಈರಭದ್ರ, ಕೊಟ್ಟೋನು ಕೋಡಂಗಿ' ಎಂಬ ಹಳೆಗಾಲದ ಪರಿಸ್ಥಿತಿ ಇಂದು ಬೇರೆ ಆಯಾಮ ಪಡೆದಿದೆ. ಈಸ್ಕಂಡೋನು ಈರಭದ್ರ' ಎಂಬ ಧಾರ್ಷ್ಟೀಕದವನ ವಿಷಯ ಬೇರೆ. ಸಾಮಾನ್ಯವಾಗಿ ಸೂಕ್ಷ್ಮ ಮನಸ್ಸಿನ ನಮ್ಮ ರೈತರಿಗೆ ಅಂಥ ಸಾಂಸ್ಕೃತಿಕ ಧಾರ್ಷ್ಟ್ಯ ಇಲ್ಲ. ಕರ್ತವ್ಯ ಪಾಲನೆಯತ್ತ ಅವರದು ಹೆಚ್ಚು ಕಾಳಜಿ. ಕೊಟ್ಟೋನು ಇಂದು ಕೋಡಂಗಿಯಾಗದೆ ವಸೂಲಿಯ ಕ್ರೌರ್ಯಗಳನ್ನು ತೋರುವಲ್ಲಿಯೂ ಆತ್ಮಹತ್ಯೆಯ ಕಾರಣವು ಕಾಣಿಸಿಕೊಳ್ಳುವಂತಿದೆ.

ಆತ್ಮಹತ್ಯೆಯೂ ಒಂದು ಪ್ರತಿಭಟನೆ ಎಂದು ರೈತರು ಚಳುವಳಿ, ಧರಣಿ ಸತ್ಯಾಗ್ರಹಗಳಲ್ಲಿ ತೋರಿರುವುದು, ಹಿಂದೆ ಕೋಲಾರದ ರೇಷ್ಮೆ ಬೆಳೆಗಾರರು ರೇಷ್ಮೆ ಕಡ್ಡಿಗಳ ಕಂಬಕ್ಕೆ ನೇಣು ಹಾಕಿದ ರೈತನ ಪ್ರತೀಕ ತೋರಿದಂತೆ ಜಿಲ್ಲಾಧಿಕಾರಿಗಳ ಕಛೇರಿ ಆವರಣದ ಮರದ ಮೇಲೇರಿ ನೇಣು ಹಾಕಿಕೊಳ್ಳುವ, ಆವರಣದಲ್ಲಿಯೆ ವಿಷ ಸೇವಿಸುವಂಥ ರೈತರ ಸಾಮೂಹಿಕ ಆತ್ಮಹತ್ಯೆ ಪ್ರಯತ್ನಗಳು ಇಂದು ಕಂಡು ಬಂದಿವೆ. ರೈತರ ಆತ್ಮಹತ್ಯೆಗೆ ಆರಿಸಿಕೊಂಡ ಜಾಗಗಳಲ್ಲಿ ದೇವಸ್ಥಾನ ನೀರಿನ ಕಟ್ಟೆ ಅಲ್ಲದೆ 'ತನ್ನ ನೆಲ, ತನ್ನ ಮನೆ, ತನ್ನ ಹೊಲ'ಗಳೂ ಸೇರಿರುವಲ್ಲಿ, ಇಷ್ಟು ದಿನ ಬದುಕು ಕೊಟ್ಟ ನೆಲೆ ಎಂಬ ಭಾವನಾತ್ಮಕ ಸಂಬಂಧಕ್ಕೆ ಅದು ದುರಂತ ವಿದಾಯ ಹೇಳುವ ಬಗೆಯಾದ ಆತ್ಮಹತ್ಯೆಯ ನೆಲೆಗಳಾದುದು ವಿಪರ್ಯಾಸ. ರೈತನ ವಿಷ ಸೇವನೆಯ ಸಂದರ್ಭದಲ್ಲಿ ಗ್ರಾಮಸ್ಥರು ಆಸ್ಪತ್ರೆಯ ಚಿಕಿತ್ಸೆಗೆ ಸೇರಿಸಿದ ಮಾನವೀಯ ನಡೆಗಳೂ ಇವೆ. ಇದು ಸಾಮಾಜಿಕ ನೇವರಿಕೆ. ಹಿಂದೆ ಏಕಾಂತ ಅಥವಾ ಏಕಾಂಗಿ ಆತ್ಮಹತ್ಯೆಯಾದ ಸಂದರ್ಭ ಕಾಣುತ್ತಿದ್ದುದು 2003ರ ನಂತರದಲ್ಲಿ ಸರಣಿ ಆತ್ಮಹತ್ಯೆಗಳು, ಸಾಮೂಹಿಕ ಪ್ಯಾಕೇಜುಗಳು ಪ್ರಕಟವಾದರೂ, ಆತ್ಮಹತ್ಯೆ ನಿಲ್ಲದಿರಲು ಬಹುಶಃ ಪರಿಹಾರಗಳು, ಮಧ್ಯವರ್ತಿಗಳಿಂದ ರೈತರಿಗೆ ಹಾಗೂ ರೈತ ಕುಟುಂಬಗಳಿಗೆ ತಲುಪುತ್ತಿಲ್ಲದಿರುವುದೂ ಕಾರಣವಾಗಿರಬಹುದು. ಆತ್ಮಹತ್ಯೆಗಳು ಮುಂದುವರಿಯುತ್ತಿರುವುದಂತು ಸ್ವಸ್ಥ ಸಮಾಜದ ಲಕ್ಷಣವಲ್ಲ; ಆತಂಕಕಾರಿ ಬೆಳೆಸು.

ಆತ್ಮಹತ್ಯೆಯಿಂದಾಗಿವ ಕೌಟುಂಬಿಕ ಪರಿಣಾಮಗಳು, ಸಾಮಾಜಿಕ ಅವ್ಯವಸ್ಥೆ ನೈತಿಕ ಹೊಣೆ ಕುರಿತು ರೈತ ಜಾಗೃತಿ ಶಿಬಿರಗಳನ್ನು ಏರ್ಪಡಿಸಬೇಕು. ಸಾಲಮರು ಪಾವತಿಯ ಮಾಹಿತಿಗಳು. ಪ್ಯಾಕೇಜುಗಳಂಥ ಪರಿಹಾರಗಳ ಕುರಿತು ಮಾಹಿತಿಗಳನ್ನು ನೀಡಬೇಕು. ವೈಯಕ್ತಿಕ ದೌರ್ಬಲ್ಯಗಳಿಂದಾಗುವ ಅಪಾಯದ ಬಗ್ಗೆ ಎಚ್ಚರ ಮೂಡಿಸಬೇಕು. ಸ್ವಾವಲಂಬನೆಯ ಹಾದಿಗಳನ್ನು ಮನನ ಮಾಡಿಸಬೇಕು. ಸಮುದಾಯದ ಜೊತೆ ಬಾಳುವ ಸಮರಸ ಶೈಲಿಯ ಜೀವನಕ್ಕೆ ಎಲ್ಲರೂ ಸ್ಪಂದಿಸಿದಾಗ ರೈತನ ಜೀವನ ಶೈಲಿಯನ್ನು ಮನ್ನಿಸುವ ವೈಶಾಲ್ಯ ಬೆಳೆಯುತ್ತದೆ. ವಿಶ್ವಾಸ ಬಾವಣಿಕೆ ಬೆಳೆದಷ್ಟು, ಬೆಳೆಸಿದಷ್ಟೂ ಗ್ರಾಮೀಣ ಹಾಗೂ ನಗರದ ನಡುವಣ ಬದುಕು ಹಸನಾಗುತ್ತದೆ.

ಕಳೆದ ವರ್ಷ (2006) ಜಿಲ್ಲಾಧಿಕಾರಿಗಳ ಕಛೇರಿ ಆವರಣದ ಮರಗಳಿಗೆ ಸಾಮೂಹಿಕವಾಗಿ ನೇಣು ಹಾಕಿಕೊಳ್ಳುವ ಹಾಗೂ ಈ ವರ್ಷ (2007) ಏಪ್ರಿಲ್ ತಿಂಗಳಲ್ಲಿ ತಹಸೀಲ್ದಾರ್ ಕಛೇರಿ ಆವರಣದಲ್ಲಿ ವಿಷಸೇವಿಸಿ ಸಾಮೂಹಿಕ

ಆತ್ಮಹತ್ಯೆಗೆಳೆಸಿದ ಪ್ರಯತ್ನದ ಕಬ್ಬು ಬೆಳೆಗಾರರ ಸಮಸ್ಯೆ ಬಹಳ ಗಂಭೀರವಾದುದೆ ಆಗಿತ್ತು. ಸಕ್ಕರೆ ಕಾರ್ಖಾನೆ ಮಾಲೀಕರ ಸಂಘ, 2007ರ ಮಾರ್ಚ್ ಅಂತ್ಯದೊಳಗೆ 300 ರೂ. ಸಹಾಯ ಧನ ನೀಡದಿದ್ದರೆ ಕಬ್ಬು ಅರೆಯುವುದನ್ನು ಸ್ಥಗಿತಗೊಳಿಸುವುದಾಗಿ ರಾಜ್ಯ ಸರ್ಕಾರಕ್ಕೆ ಎಚ್ಚರಿಕೆ ನೀಡಿದೆ. ಹೆಚ್ಚುವರಿಯಾಗಿ ಕಬ್ಬಿನ ಬೆಳೆ ಆಗಿದೆ. ಅರೆಯುವುದೆ ಸಮಸ್ಯೆ ಆಗಿದೆ ಎನ್ನಲಾಗಿದೆ.

ಕೇಂದ್ರ ಕೃಷಿ ಸಚಿವರಾದ **ಶರದ್ ಪವಾರ್** ಅವರು 2007ರ ಮಾರ್ಚ್ ತಿಂಗಳಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ಮಾತನಾಡುತ್ತ ರಾಷ್ಟ್ರದಲ್ಲಿ ಈ ವರ್ಷ 90 ಲಕ್ಷ ಟನ್ ಸಕ್ಕರೆ ಹೆಚ್ಚುವರಿ ಉತ್ಪಾದನೆಯಾಗಿ, ಅದರ ಮಾರಾಟ ಹಾಗೂ ರೈತ ಹಿತರಕ್ಷಣೆಯೆ ಹೇಗೆ? ಎಂದು ಇಂದಿಗಲ್ಲದೆ ಮುಂದಿಗೂ ದೊಡ್ಡ ಸಮಸ್ಯೆಯಾಗುವಂತಿದೆ. ಬ್ರೆಜಿಲ್, ಆಸ್ಟ್ರೇಲಿಯ, ಚೀನಾ ಕೂಡಿದಂತೆ ಆಫ್ರಿಕನ್ ದೇಶಗಳಲ್ಲಿ ಹೆಚ್ಚಿನ ಕಬ್ಬಿನ ಬೆಳೆ ಆಗಿದೆ. ಅಂತಾಗಿ ನಮ್ಮ ರಫ್ತು ವಹಿವಾಟು ಕಷ್ಟವಾಗಿದೆ. ಕಬ್ಬಿನಿಂದ ಸಕ್ಕರೆಯಲ್ಲದೆ ಸಕ್ಕರೆ ಕಾರ್ಖಾನೆಯಲ್ಲಿ ವಿದ್ಯುತ್ ಉತ್ಪಾದನೆ, ಎಥೆನಾಲ್ ಮತ್ತು ಕಾಕಂಬಿ ತಯಾರಿಕೆ ಆಗಬೇಕು. ಬ್ರೆಜಿಲ್‌ನಲ್ಲಿ ಇಂಥ ತಯಾರಿಕೆ ಯಶಸ್ವಿಯಾಗಿದೆ. ಚೀನಾದಲ್ಲಿ ಹೀಗೆಯೇ 37 ಬೃಹತ್ ಘಟಕಗಳು ಸ್ಥಾಪನೆ ಆಗುತ್ತಿವೆ. ನಮ್ಮ ದೇಶದಲ್ಲಿಯೂ ಇದು ಆಗಬೇಕು, ಎಂದಿದ್ದಾರೆ. ರಾಜ್ಯ ಸಕ್ಕರೆ ಸಚಿವ ಶ್ರೀ **ಎಸ್.ಎ.ರವೀಂದ್ರನಾಥ್** ಅವರು, ಸಕ್ಕರೆ ಕಾರ್ಖಾನೆಗಳ ಮೇಲಿನ ಕೆಲವು ನಿಯಮಗಳ ಸಡಿಲಿಕೆ ಆಗಬೇಕು; ಆಹಾರ ನಿಗಮದಿಂದ ಸಕ್ಕರೆ ಖರೀದಿ ಮಾಡಿ ರೈತರಿಗೆ ಖರ್ಚು ಉಳಿತಾಯ ಮಾಡಬೇಕು; ಸಕ್ಕರೆ ಕಾರ್ಖಾನೆಗಳು ಏನೇ ಕಾರಣಕ್ಕೂ ಕಬ್ಬು ಅರೆಯುವಿಕೆಯನ್ನು ನಿಲ್ಲಿಸಬಾರದು; ಸಂಕಷ್ಟದಲ್ಲಿರುವ ರೈತರು ಆತ್ಮಹತ್ಯೆಗೆಳೆಸುವಂತೆ ಮಾಡಬಾರದು. ಸಕ್ಕರೆ ರಫ್ತಿಗೆ ಅವಕಾಶವಾಗಬೇಕು ಎಂದಿದ್ದಾರೆ.

ಹೆಚ್ಚಿನ ಸ್ಟಾಕ್ ಸಮಸ್ಯೆ, ಮಾರಾಟ ಸಮಸ್ಯೆ, ರೈತರಿಗೆ ಕಬ್ಬಿನ ದರವನ್ನು ಅವರು ಬೇಡಿಕೆಯಂತ ಕಾರ್ಖಾನೆಯು ಕೊಡಲು ಸಮಸ್ಯೆಗಳಿವೆ ದಿಟ. ಇದಕ್ಕೆ ಕೃಷಿ ವಿಶ್ವ ವಿದ್ಯಾಲಯದ ಕೃಷಿ ಅರ್ಥಶಾಸ್ತ್ರ ತಜ್ಞ ಡಾ॥ ಎಂ.ಜಿ.ಚಂದ್ರಕಾಂತ ಅವರೊಡನೆ ಮಾತನಾಡಿದಾಗ ಅವರು ಸೂಚಿಸುವ ಪರಿಹಾರಗಳು ಗಮನಾರ್ಹವಾಗಿವೆ. ಕಬ್ಬಿನಿಂದ ಎಥೆನಾಲ್ ಅನ್ನು ತಯಾರಿಸಿ ಜೈವಿಕ ಇಂಧನವಾಗಿ ಬಳಸುವುದು ಒಂದು. ಬ್ರೆಜಿಲ್, ಕಬ್ಬಿನಿಂದ ಎಥೆನಾಲ್ ಪಡೆದು ಪೆಟ್ರೋಲ್‌ನೊಡನೆ ಬ್ಲೆಂಡ್ (ಹೊಂದಿಸಿ) ಮಾಡಿ ವಾಹನಗಳಿಗೆ ಇಂಧನ ಬಳಸಿ ಯಶಸ್ವಿಯಾಗಿದೆ.

ಅಲ್ಲದೆ ಎಥೆನಾಲ್ ಅನ್ನು ನೇರವಾಗಿಯೇ ಬಳಸುವ ತಂತ್ರಜ್ಞಾನವನ್ನು ಅಭಿವೃದ್ಧಿಗೊಳಿಸಿದೆ. ಅಂಥ ರಾಸಾಯನಿಕ ಕ್ರಿಯೆಗೆ ಹೊಂದಿಕೊಳ್ಳುವ ವಾಹನ ಯಂತ್ರ ವಿನ್ಯಾಸವನ್ನು ಅಲ್ಲಿ ರೂಪುಗೊಳಿಸಲಾಗಿದೆಯಂತೆ. ಪೆಟ್ರೋಲಿಯಮ್‌ನೊಡನೆ ಎಥೆನಾಲ್ ಹಾಗೂ ಇನ್ನಿತರ ಸೂಕ್ತ ಎಣ್ಣೆಗಳನ್ನು ಶೇ. 15 ರಷ್ಟು ಬ್ಲೆಂಡ್ ಮಾಡಿ ಬಳಸಲು ಕಾನೂನಿನಲ್ಲಿ ಅವಕಾಶ ಮಾಡಿಕೊಡಲಾಗಿದೆ. ಪೆಟ್ರೋಲ್ ಬೆಲೆ ಲೀಟರ್‌ಗೆ 50 ರೂ ಇದ್ದು, ಎಥೆನಾಲ್ ಬೆಲೆ 30 ರೂ ಇರುವಲ್ಲಿ ಆರ್ಥಿಕವಾಗಿಯೂ ಈ ಬಳಕೆ ಲಾಭದಾಯಕವಾಗುತ್ತದೆ; ಹಾಗೂ ಪರಿಸರ ಮಾಲಿನ್ಯವೂ ಕಡಿಮೆಯಾಗುವುದೆಂದು ಹೇಳಲಾಗಿದೆ. ಪೂರ್ಣವಾಗಿ ಎಥೆನಾಲ್ ಅನ್ನು ಬಳಸುವುದಾದರೆ ಪೆಟ್ರೋಲ್ ಮೇಲೆ ಅವಲಂಬನೆ ಕಡಿಮೆಗೊಳ್ಳುತ್ತದೆ. ಪೆಟ್ರೋಲ್ ಡೀಸೆಲ್ ಬಳಕೆಯಲ್ಲಿ ಉಂಟಾಗುವ ಪರಿಸರ ಮಾಲಿನ್ಯದ ಮಟ್ಟ ಇಳಿಯುತ್ತದೆ. ರೈತರು ಬೆಳೆದ ಕಬ್ಬನ್ನು ಖರೀದಿಸಿ ಸಕ್ಕರೆ, ಕಾಕಂಬಿಗೆ ಬಳಸಿ ಉಳಿದದ್ದನ್ನು ಇಡಿಯಾಗಿ ಎಥೆನಾಲ್ ತಯಾರಿಸಲು ಉಪಯೋಗಿಸಿದರೆ ಸಮಸ್ಯೆ ಪರಿಹಾರಕ್ಕೆ ಹಾದಿಯಾಗುತ್ತದೆ, ರೈತರಿಗೂ ಕಬ್ಬು ಖರೀದಿಗೊಂಡು ಆರ್ಥಿಕ ಲಾಭ ದೊರೆಯುತ್ತದೆ. ಆದರೆ ಈ ಎಥೆನಾಲ್ ತಯಾರಿಕೆಗೆ ಹಾಗೂ ಬಳಕೆಗೆ ಅನುಗುಣವಾಗಿ ಯಂತ್ರೋಪಕರಣಗಳನ್ನು ಸಿದ್ಧಗೊಳಿಸಬೇಕಾಗುತ್ತದೆ. ಸಮಸ್ಯೆಗೆ ಇದು ಪರಿಹಾರ ಮಾರ್ಗವಾದರೆ ಸ್ವಾಗತಾರ್ಹವಲ್ಲವೆ!

ಜೂನ್ 2007ರಲ್ಲಿ ಬ್ರೆಜಿಲ್‌ನ ಸಾವೋಪಾಲ್ ಪಟ್ಟಣದಲ್ಲಿ ನಡೆಯಲಿರುವ ಎಥೆನಾಲ್ ಸಮ್ಮೇಳನದಲ್ಲಿ ಈ ಬಗೆಗೆ ಹೆಚ್ಚಿನ ವಿಶ್ಲೇಷಣೆ ಆಗಲಿದೆ. ಇದು ಭಾರತದ ದೃಷ್ಟಿಯಿಂದಲೂ ಗಮನಾರ್ಹ.

ವಿಶೇಷತ : ಮುಂದಿನ ವರ್ಷದಿಂದ ಪೆಟ್ರೋಲ್‌ನಲ್ಲಿ ಶೇ.5 ರಷ್ಟು **ಎಥೆನಾಲ್** ಬಳಸುವುದನ್ನು ಕಡ್ಡಾಯಗೊಳಿಸಲು ಕೇಂದ್ರ ಸರ್ಕಾರ ನಿರ್ಧರಿಸಿದೆ. ಇದರಿಂದಾಗಿ ಸಕ್ಕರೆಯ ಉತ್ಪಾದನಾ ಸಂದರ್ಭದಲ್ಲಿ ಉಪಉತ್ಪನ್ನವಾಗಿ ದೊರೆಯುವ ಎಥೆನಾಲ್‌ಗೆ ಭಾರಿ ಬೇಡಿಕೆ ಒದಗಲಿದೆ. ಎಥೆನಾಲ್‌ಗೆ ಉತ್ತಮ ಬೆಲೆ ದೊರೆತರೆ ಸಕ್ಕರೆ ಉತ್ಪಾದನಾ ಕಂಪನಿಗೆ ಸಾಕಷ್ಟು ಅನುಕೂಲವಾಗಲಿದೆ. ಸಂಕಷ್ಟದಲ್ಲಿರುವ ಕಬ್ಬು ಉದ್ಯಮಕ್ಕೆ ಚೇತರಿಕೆ, ಒದಗುತ್ತದೆ. ಇದು ಕೇಂದ್ರ ಸಂಪುಟದ ಸಭೆಯಲ್ಲಿ ಕೈಗೊಂಡ ನಿರ್ಧಾರವಾಗಿದೆ. ಭತ್ತಕ್ಕೆ ಬೆಂಬಲ ಬೆಲೆಯನ್ನು ಪ್ರತಿಕ್ವಿಂಟಾಲಿಗೆ 50 ರೂ. ನಿಂದ 100 ರೂ.ವರೆಗೆ ಹೆಚ್ಚಿಸಿರುವುದು ಭತ್ತದ ಬೆಳೆಗಾರರಿಗೆ ಸಿಹಿ ಸುದ್ದಿ ಎಂದು ಪಿ.ಟಿ.ಐ. ವಾರ್ತಾ ಸಂಸ್ಥೆ ವರದಿ ಮಾಡಿದೆ (10.10.2007)

*ಕೃಷಿವಲಯವೂ ಒಂದು ಅಗತ್ಯ ಕೈಗಾರಿಕೆ ಎನಿಸಬೇಕು ಎಂದು ನ್ಯಾಯಾಲಯದ ಈಚಿನ (ಏಪ್ರಿಲ್ 2007) ಒಂದು ತೀರ್ಪಿನಲ್ಲಿ ಪ್ರಕಟವಾಗಿದೆ; ಕೃಷಿಕರ ದನಿಯಲ್ಲಿ ಸೂರಿನ ಹಕ್ಕು, ಹೊಟ್ಟೆಪಾಡು ಇರುವುದು, ಮುಖ್ಯ ವಿಷಯವಾಗಿದೆ. ಭೂಸ್ವಾಧೀನ ವಿಷಯದಲ್ಲಿ ಗ್ರಾಮಗಳ, ಗ್ರಾಮಸ್ಥರೆ ಎತ್ತಂಗಡಿ ಮಾಡುವುದು ಸರಿಯಲ್ಲ ಎಂದು ಹೇಳಿರುವುದೂ ವರದಿಗೊಂಡಿದೆ. ಈ ಮಾತುಗಳಲ್ಲಿ ನಮ್ಮ ಗ್ರಾಮೀಣರ ಬದುಕಿಗೆ ಹದನಾಗುವ ಭಾಷ್ಯದ ಮುನ್ನುಡಿ ಇಟ್ಟಂತೆ ಕಾಣುತ್ತದೆ. ಇಂಥ ಸವಲತ್ತುಗಳ ಒದಗಣೆ, ಮಾನದಿಂದ ಬಾಳುವೆಯ ಅವಕಾಶ, ಬೆಳೆದ ಬೆಳೆಗೆ ಸೂಕ್ತ ಬೆಲೆ ಬಂದು ಬದುಕಿನ ಚಲನೆಗೆ ಅನುಕೂಲವಾಯಿತೆಂಬ ನೆಮ್ಮದಿ ಒದಗಿ, ರೈತರ ಆತ್ಮಹತ್ಯೆಯಂಥ ಪ್ರಕರಣಗಳಿಗೆ ಒಡ್ಡು ಹಾಕುತ್ತದೆ.*

## ರೈತರ ಸಂಕಷ್ಟಗಳ ಕಾರಣ ಆತ್ಮಹತ್ಯೆಯ ಪ್ರಕರಣಗಳು : ಸರ್ಕಾರದ ಒಂದು ಸಾಂತ್ವನ ಮುಖಿ ಸಂವಾದ ಕಾರ್ಯಕ್ರಮ (14.6.07)

ರೈತರ ಆತ್ಮಹತ್ಯೆಗೆ ತಡೆಯೊಡ್ಡುವ ಬಗ್ಗೆ ಪ್ರತ್ಯಕ್ಷವಾಗಿ ರೈತರು, ರೈತನಾಯಕರು, ಪ್ರಗತಿಪರ ರೈತರು, ವಿಧಾನ ಮಂಡಲದ ಉಭಯಸದನಗಳ ಸರ್ವಪಕ್ಷ ನಾಯಕರು, ಕೃಷಿ ವಿಶ್ವವಿದ್ಯಾಲಯದ ವಿಜ್ಞಾನಿಗಳು, ಕೃಷಿ, ತೋಟಗಾರಿಕೆ ಹಣಕಾಸು ತತ್ಸಂಬಂಧೀ ಇಲಾಖೆಗಳ ಹಿರಿಯ ಅಧಿಕಾರಿಗಳು ಪಾಲ್ಗೊಂಡು ಸಭೆಯಲ್ಲಿ ಮಾನ್ಯ ಮುಖ್ಯ ಮಂತ್ರಿ ಶ್ರೀ ಎಚ್.ಡಿ. ಕುಮಾರ ಸ್ವಾಮಿಯವರು ಸಂವಾದ ಕಾರ್ಯಕ್ರಮಗಳನ್ನು 14.6.07ರ ಗುರುವಾರ ಬೆಳಗ್ಗೆಯಿಂದ ಸಂಜೆಯವರಿಗೆ ಬೆಂಗಳೂರಿನ ವಿಶ್ವ ವಿದ್ಯಾಲಯದ ಜ್ಞಾನಜ್ಯೋತಿ ಸಭಾಂಗಣದಲ್ಲಿ ಸರ್ಕಾರಿ ಕಾರ್ಯಕ್ರಮವಾಗಿ ವ್ಯವಸ್ಥೆಗೊಳಿಸಿದ್ದರು. ಹೀಗೆ ರೈತರೊಡನೆ ಸಾರ್ವಜನಿಕವಾಗಿ ಸರ್ಕಾರ ಸಂವಾದ ನಡೆಸಿದ ಕಾರ್ಯಕ್ರಮ ಮೊಟ್ಟ ಮೊದಲಿನದಾಗಿ ವಿಶೇಷತಃ ಆತ್ಮಹತ್ಯೆಯ ಕುರಿತಾದ ಕಾಳಜಿಯದಾಗಿತ್ತು. ರೈತರ ಆತ್ಮಹತ್ಯೆ ನಿಲ್ಲಿಸುವ ಬಗ್ಗೆ ಬರೀ ಚರ್ಚೆ ಆಗದೆ, ಬಂದ ಸಲಹೆಗನುಗುಣವಾಗಿ ಸೂಕ್ತ ಕ್ರಮ ತೆಗೆದುಕೊಳ್ಳಬೇಕೆಂಬ ಆಶಯವಲ್ಲಿತ್ತು. ಮುಖ್ಯಮಂತ್ರಿಗಳು ಒಳಗೊಂಡಂತೆ ರಾಜಕೀಯ ಮುಖಂಡರು, ಪ್ರತಿಪಕ್ಷನಾಯಕರು ಪ್ರೇಕ್ಷಕ ಶ್ರೋತೃಗಳಾಗಿ, ಸಭೆಯಲ್ಲಿ ಕುಳಿತಿದ್ದರು. ವೇದಿಕೆಯ ಮೇಲೆ ರೈತರ ಮಾತಿಗೆ ಅವಕಾಶ ತಮ್ಮ ತಮ್ಮ ಜಿಲ್ಲೆಯಲ್ಲಿ ಆತ್ಮಹತ್ಯೆಗೆ ಕಾರಣವಾದದ್ದೆನ್ನಲಾದ ಸಮಸ್ಯೆಗಳನ್ನು ವೇದಿಕೆಯ ಮೂಲಕ ಮುಂದಿಟ್ಟು ಸರ್ಕಾರದ ಗಮನ ಸೆಳೆಯುವ ಸಂವಾದ ಕಾರ್ಯಕ್ರಮ ನಡೆದಿತ್ತು. ಬೆಂಗಳೂರು ದೂರದರ್ಶನದ ಮೂಲಕ ರಾಜ್ಯದಾದ್ಯಂತ ನೇರ ಪ್ರಸಾರಕ್ಕೆ ಅವಕಾಶ ಮಾಡಲಾಗಿತ್ತು. ದೂರವಾಣಿ ಮೂಲಕವೂ ರೈತರು ನೇರ ಸಂವಾದದಲ್ಲಿ ಪಾಲ್ಗೊಳ್ಳಲು ಅವಕಾಶ ಕಲ್ಪಿಸಲಾಗಿತ್ತು.

ಮರಣೇಚ್ಛೆ ಮತ್ತು ಜೀವನೋತ್ಸಾಹಗಳ ನಡುವೆ ಸಂವಾದ ಮಾಡಿಕೊಂಡು ಆತ್ಮಹತ್ಯೆ ಮಾಡಿಕೊಂಡವರ ಬದುಕು ನಡೆದು ಬಂದಿರುತ್ತದೆ. ಇಲ್ಲಿ ಇಚ್ಛೆಗಿಂತ ಹತಾಶೆಯೇ ಹತ್ಯೆಗೆ ಪ್ರೇರಕವಾಗುತ್ತದೆ. ಈ ಹತಾಶೆ ಒದಗಲು ಕಾರಣವೇನು? ಈ ಹತಾಶೆಯಿಂದ ಮಾತ್ರವೇ ರೈತರು ಆತ್ಮಹತ್ಯೆ ಮಾಡಿಕೊಳ್ಳುವರೆ? ಅನ್ಯಕಾರಣಗಳೂ ಇರಬಲ್ಲುದೆ? ಎಂಬುದರ ವಿಚಾರ ಇಲ್ಲಿ ಹರಡಿಕೊಂಡಿತ್ತು. ಆತ್ಮಹತ್ಯೆಯೂ ಹತಾಶ ಪ್ರತಿಭಟನೆಯಾಗಿ, ಕೈಯಾರೆ ಉಣ್ಣುವ ಸಾವಾಗಿ ಸಮಾಜಕ್ಕೆ, ಆಡಳಿತಕ್ಕೆ ಪ್ರಶ್ನಾ ಸವಾಲಾಗಿ ಕಾಡಿದೆಯೆ? ಸಾವಿನ ಮೂಲಕ ದುರಂತ ಹೋರಾಟದ ಸಾಕ್ಷಿಯೆ? ಎಂಬುದೆಲ್ಲ ಚಿಂತನೆಗೆ ಗ್ರಾಸವಾಗಿ, ಸೂಕ್ತ ಪರಿಹಾರಕ್ಕೆ ಹಾಗೂ ಇಂಥ ರೈತ ಆತ್ಮಹತ್ಯೆಯ ತಡೆಗೆ ಒದಗುವ ಸಲಹೆಗಳನ್ನು ಗಮನಿಸಿ ಕಾರ್ಯಪ್ರವೃತ್ತವಾಗುವುದೇ ಇಂಥ ಸರ್ಕಾರಿ ಕಾರ್ಯಕ್ರಮಗಳ ಉದ್ದೇಶ ಎಂದು ಸಾರುವುದೂ ಇಲ್ಲಿತ್ತು. ಇಂಥದಕ್ಕೆ ವಿರೋಧ ಪ್ರತಿಕ್ರಿಯೆಗಳು, ವಿಘ್ನ ಸಂತೋಷಿಗಳೂ, ಸಹಜ ಟೀಕೆಗಳೂ ಇರಲಿಲ್ಲವಂತಲ್ಲ, ಹೀಗಾಗಿ ಬೆಳಗಿನಿಂದ ಸಂಜೆಯವರೆಗೆ ಮಂಥನ, ಸಂವಾದ ಗಮನಾರ್ಹವಾಗಿತ್ತು. ರಾಜ್ಯದ 27 ಜಿಲ್ಲೆಗಳಿಂದಲೂ ರೈತರು ಬಂದಿದ್ದು, ಪ್ರತಿ ಜಿಲ್ಲೆಯ ಆಯ್ದ ರೈತರಿಗೆ ಪ್ರಾತಿನಿಧಿಕವಾಗಿ ಮಾತನಾಡಲು ತುಂಬಿದ ರೈತ ಸಾಗರದ ನಡುವೆ ಅವಕಾಶ ಮಾಡಲಾಗಿತ್ತು. ಮಾನ್ಯ ಮುಖ್ಯಮಂತ್ರಿಯವರು ಪ್ರಾಸ್ತಾವಿಕ ನುಡಿಗಳಲ್ಲಿ ಆತ್ಮಹತ್ಯೆಯ ಕಾರಣಗಳನ್ನು ಸೂಕ್ತವಾಗಿ ಸಮುಚಿತವಾಗಿ, ಸಾಮಯಿಕವಾಗಿ ಮಂಡಿಸಲು ಹೇಳಿದರು. ಆತ್ಮಹತ್ಯೆಗೊಳಗಾದವರ ಕುಟುಂಬದವರನ್ನು ಕರೆಸಿಕೊಂಡಿದ್ದು ಅವರ ಅನುಭವಗಳನ್ನು ತಿಳಿಸಲು ಹೇಳಿದರು. ಆ ನಂತರ ರೈತರು ತಮ್ಮ ಸರದಿಯ 5–10 ನಿಮಿಷಗಳಲ್ಲಿ ಸಂಕಷ್ಟಗಳನ್ನು ತೆರೆದಿಟ್ಟರು.

**ಬೀದರ್ ಜಿಲ್ಲೆಯ** ಶ್ರೀ ಬಸವರಾಜ ತಂಬಾಕೆ ಮತ್ತು ಶ್ರೀ ವಿಶ್ವನಾಥ್ ಪಾಟೀಲ್ ಅವರು : ಆತ್ಮಸ್ಥೈರ್ಯ ತುಂಬಿಕೊಳ್ಳಬೇಕು ಅಂತೀರಿ. ಆದರೆ ಸಮಸ್ಯೆಗಳ ಜಾಲದಲ್ಲಿ ಸಿಕ್ಕಿ ನರಳುವ ರೈತನ ಸಂಕಷ್ಟಗಳು ತವಿದಿಲ್ಲ. ಇದು ಇಂದಿಗೆ ತತ್‌ಕ್ಷಣ ಸಮಸ್ಯೆ ಅಷ್ಟೇ ಕಾರಣ ಅಲ್ಲ. 1979 ರಿಂದಲೂ ಬರಗಾಲ ಇತ್ಯಾದಿ ಒಂದಲ್ಲ ಒಂದು ಕಾರಣದಿಂದ ಆತ್ಮಹತ್ಯೆ ನಡೆದು ಬಂದಿದೆ. ಅದನ್ನು ಅಷ್ಟಾಗಿ ಗಮನಿಸಿರಲಿಲ್ಲ. ಆದರೆ ಈಗ ಬೆಳೆ ಕೈಗೆ ಸಿಗದೆ, ಬೆಳೆ ಹಾನಿ, ಬೆಳೆ ವೈಫಲ್ಯ ಮಾರುಕಟ್ಟೆ ಬೆಲೆ ಕುಸಿತ, ಶೇ.3 ಅಥವಾ 4 ಪರ್ಸೆಂಟ್‌ಗೆ ಸಾಲ ಸಿಗದಿರುವುದು ರೈತನಿಗೆ ಸಂಕಷ್ಟಗಳನ್ನು ತಂದಿವೆ. ರೈತನಿಗೆ ಮನೆ ನಿರ್ವಹಣೆ, ಮಕ್ಕಳ ಮದುವೆ ಇತ್ಯಾದಿಗಳಿಗೆ ಬೇಕಾಗುವ

ಹಣ ಅವನ ಕೃಷಿಕ ಬದುಕಿನ ಅಂಗವೆ ಆಗಿದೆ. ಕೇವಲ ಬೆಳೆ ಉತ್ಪನ್ನಕ್ಕೆ ತಗಲುವ ಖರ್ಚನ್ನಷ್ಟೆ ಲೆಕ್ಕ ಹಾಕುವುದಲ್ಲ, ಉಪಕಸಬುಗಳು, ಪರ್ಯಾಯ ಬೆಳೆಗಳ ಬೆಳೆಗೆ ಅವಕಾಶ ಲಭ್ಯವಾಗಬೇಕು, ಅಂಥ ಪರಿಸರ ಒದಗಿಸಬೇಕು. ಇಸ್ರೇಲ್‌ನಂಥ ಒಣಪ್ರದೇಶದಲ್ಲಿ ಅಳಣ್ಯ, ತೋಟಗಾರಿಕೆ ಪ್ರಗತಿಗೆ ಬಳಸಿರುವ ವಿಧಾನಗಳು, ಸಾವಯವ ಕೃಷಿಯ ಪ್ರಾಚುರ್ಯ, ಜಲಪುನಶ್ಚೇತನ, ಕೃಷಿ ಬೆಳೆಗಳ ಸಲಹಾಸಮಿತಿ, ರಾಜ್ಯ ಮಟ್ಟದ ಬೆಲೆ ಅಯೋಗ, ಶಾಸನ ಸಭೆಗೆ ರಾಜ್ಯ ರೈತ ಚಳುವಳಿಗಳ ಪ್ರತಿನಿಧಿಗಳ ನಾಮಕರಣ, ರೈತಹಿತ ಪರ, ರೈತ ಸಂಘಟನೆಗಳಿಗೆ ಪ್ರೋತ್ಸಾಹ, ರೈತರ ಲಾಬಿಯನ್ನು ಪ್ರಬಲಗೊಳಿಸುವುದು, ರೈತರ ಪ್ರತಿನಿಧಿಗಳೊಡನೆ ಚರ್ಚಿಸಿ ನಿರ್ಧಾರಗಳನ್ನು ತೆಗೆದುಕೊಳ್ಳಬೇಕಿರುವುದು, ಎಂ.ಎಸ್.ಸ್ವಾಮಿನಾಥನ್ ವರದಿ ಅನ್ವಯಿಸಿ, ಕೃಷಿ ಉತ್ಪನ್ನದ ಖರ್ಚಿಗೆ ಶೇ.50 ರಷ್ಟು ಸೇರಿಸಿ ಬೆಳೆ ಬೆಲೆಯನ್ನು ಕೊಡಬೇಕಿರುವುದು. ರೈತರ ಬೆಳೆ ಸಾಲವನ್ನು, ರಾಷ್ಟ್ರೀಕೃತ ಬ್ಯಾಂಕಿನಲ್ಲಿಯ ರೈತನ ಸಾಲ ಮನ್ನಾ, ತಮ್ಮ ಖರ್ಚಿನಿಂದ ನೀರಾವರಿ ಮಾಡಿರುವ ರೈತರ ಉಚಿತ ವಿದ್ಯುತ್ ನೀಡುವುದು, ಆವರ್ತನಿಧಿಯಿಂದ ಉತ್ಪನ್ನಗಳಿಗೆ ಸೂಕ್ತ ಬೆಲೆ ನೀಡುವುದು; ಈಕಾರಣಗಳಿರುವಲ್ಲಿ ಗುಜರಾತ್‌ನಲ್ಲಿ ಆತ್ಮಹತ್ಯೆ ನಡೆದಿಲ್ಲ; ಕಬ್ಬಿನ ಬೆಲೆ ಟನ್‌ಗೆ 1700 ರೂ. ಕೊಡುವಷ್ಟು ಅಲ್ಲಿ ವ್ಯವಸ್ಥೆ ಇರುವಲ್ಲಿ ನಮ್ಮಲ್ಲೂ ಅಂಥ ವ್ಯವಸ್ಥೆ ತಂದುಕೊಳ್ಳಬೇಕು. ಎಂದೆಲ್ಲ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು. ಹೀಗೆಲ್ಲ ಆದರೆ ರೈತನಿಗೆ ನೆಮ್ಮದಿಯ ಬದುಕು ಒದಗುತ್ತದೆ. ಅವನ ಕುಟುಂಬದ ನಿರ್ವಹಣೆ ನೆಮ್ಮದಿಯಿಂದ ಆದಾಗ ಅವನ ಆತ್ಮವಿಶ್ವಾಸ ವೃದ್ಧಿಸಿ ಆತ್ಮಹತ್ಯೆಯತ್ತ ಮನಸ್ಸು ಮಾಡುವುದಿಲ್ಲ ಎಂಬ ಧ್ವನಿ ಅವರ ಮಾತಿನ ಸಾರದಲ್ಲಿತ್ತು.

**ಗುಲ್ಬರ್ಗ ಜಿಲ್ಲೆಯ** ಶ್ರೀ ಸಿದ್ದರಾಮಪ್ಪ ಮತ್ತು ಶ್ರೀ ಪಾಟೀಲ್ ಅವರು ಮಾತನಾಡಿ! ಆರ್ಥಿಕ ಭದ್ರತೆ, ಸಾಮಾಜಿಕ ಭದ್ರತೆಯನ್ನು ಸರ್ಕಾರ ರೈತರಿಗೆ ಒದಗಿಸಬೇಕು; ಫಲಾನುಭವಿಗಳನ್ನಾಗಿಸಬೇಕು. ರೈತರ ನಿಸ್ವಾರ್ಥ ಸೇವೆ ಗಮನಿಸಿ 'ಪದ್ಮಶ್ರೀ' ಪ್ರಶಸ್ತಿಗಳನ್ನು ಕೊಡಬೇಕು. 12 ತಾಸು ನಿರಂತರ ದುಡಿವ ರೈತನಿಗೆ, ಭೂಮಿಯನ್ನೆ ನಂಬಿ ಬದುಕುವ ರೈತನಿಗೆ ಜೀವನ ಭದ್ರತೆ ಒದಗಿದಾಗ ಮಾತ್ರ ಅವನಲ್ಲಿ ಧೈರ್ಯ ಬರ್ತದೆ. ರಸಗೊಬ್ಬರ, ಬಿತ್ತನೆಬೀಜ, ವಿದ್ಯುತ್ತು, ಶಿಕ್ಷಣ, ಆರೋಗ್ಯ ಸೌಕರ್ಯ ಇತ್ಯಾದಿಗಳನ್ನು ಅವನಿಗೆ ಒದಗಿಸಿದರೆ ಆತ್ಮವಿಶ್ವಾಸ ಮೂಡುತ್ತದೆ. ಸುಲಭ ಶರತ್ತುಗಳೊಡನೆ ಅವನಿಗೆ ಅಗತ್ಯಬಿದ್ದಾಗ ಹಣ ಸಾಲ ದೊರೆಯಬೇಕು. ನೀರಾವರಿ ಯೋಜನೆಗಳು ರೈತಾನುಕೂಲವಾಗಿರಬೇಕು. ಮನೆಗೊಂದು ಹಸು, ಉಳಲು ಎತ್ತು, ಬಳಸಲು ವಿದ್ಯುತ್ತು, ಅವನಿಗಿರಬೇಕು.

ಕಬ್ಬಿನ ಸಮಸ್ಯೆಯಿಂದಾಗಿ ಆತ್ಮಹತ್ಯೆಗಳು ಹೆಚ್ಚಿವೆ. ಫ್ಯಾಕ್ಟರಿಯವರ ಧೋರಣೆ ರೈತರನ್ನು ಕಂಗೆಡಿಸುತ್ತಿದೆ. ಮುಖ್ಯಮಂತ್ರಿಯವರು ವಿರೋಧ ಪಕ್ಷದ ನಾಯಕರು, ಕೃಷಿ ಸಚಿವರು ಸಲಹೆ ನೀಡಿದರೂ ಅವರು ಮಾನ್ಯ ಮಾಡಿಲ್ಲ. ಅವರ ಭಂಡತನವನ್ನು ತಪ್ಪಿಸಬೇಕು. ಟನ್ ಕಬ್ಬಿಗೆ 1 ಸಾವಿರ ರೂ. ಕೊಡುತ್ತೇವೆಂದರೆ ಎಕರೆಗೆ 10 ಸಾವಿರ ರೂ. ಖರ್ಚು ಆಗಿರುವಲ್ಲಿ ರೈತನಿಗೆ ಗಿಟ್ಟುವುದೆಲ್ಲಿ. ಸರ್ಕಾರ ಅಂತಲ್ಲಿ ಪ್ರತಿ ಎಕರೆಗೆ 20 ಸಾವಿರ ಪರಿಹಾರ ಧನ ಕೊಡಬೇಕು. ಬೆಳೆ ವಿಮೆ ಬಗ್ಗೆ ಸರ್ಕಾರ ಗಂಭೀರವಾಗಿ ಚಿಂತಿಸಿಲ್ಲ. ಬೆಳೆ ವಿಮೆ ರೈತರ ಹಕ್ಕು. ಸಾಲ ಮನ್ನಾ ಮಾಡಿದಂಥ ರೈತರಿಗೆ ಬೆಳೆ ವಿಮೆ ಇಲ್ಲ ಎಂದರೆ ಅದಕ್ಕೆ ಅರ್ಥ ಬರುವುದಿಲ್ಲ. ಅಂಥವರಿಗೂ ಬೆಳೆ ವಿಮೆ ಘೋಷಣೆ ಮಾಡಬೇಕು, ಎಂದೆಲ್ಲ ನುಡಿದರು. ಬದುಕುವ ಹಕ್ಕು ಇರುವ ರೈತನಿಗೆ, ಅವನ ದುಡಿಮೆಗೆ ಮೌಲ್ಯ ಹೆಚ್ಚುಗೊಂಡರೆ ಆತ್ಮವಿಶ್ವಾಸ ಕುದುರುತ್ತದೆ ಎಂಬ ಧ್ವನಿ ಇಲ್ಲಿದೆ.

**ರಾಯಚೂರು ಜಿಲ್ಲೆಯ** ಸಿಂಧನೂರಿನ ಡಿ.ಎಸ್.ಕಲ್ಮಠ್ ಅವರು ಮಾತನಾಡಿ : ರೈತರಿಗೆ ಶಿಕ್ಷಣ, ಆರೋಗ್ಯ ನಿರ್ವಹಣೆ ಎಲ್ಲದಕ್ಕೂ ಹಣ ಕಟ್ಟಲು ಸಾಧ್ಯವಾಗುವಂತೆ ನೋಡಿಕೊಳ್ಳಬೇಕು. ಹೀಗೆ ಹಣ ಕಟ್ಟಲು ಸಾಧ್ಯವಿಲ್ಲದಾದಾಗ ಆತ್ಮಹತ್ಯೆ ಮಾಡಿಕೊಂಡವರಿದ್ದಾರೆ. ರೈತ ಸ್ತ್ರೀಯರೂ ಆತ್ಮಹತ್ಯೆಗೆ ಒಳಗಾಗಿದ್ದಾರೆ. ಹೈನುಗಾರಿಕೆಗೆ ಉತ್ತೇಜನ ಕಡಿಮೆಯಾಗಿದೆ. ಅಪ್ಪರ್ ಕೃಷ್ಣಾ ಯೋಜನೆ ನೀರಾವರಿ ಯೋಜನೆಯಲ್ಲಿ ಸಂತ್ರಸ್ತರಿಗೆ ಎರಡು ಮೂರು ಸಾವಿರ ರೂ.ಗಳ ಪರಿಹಾರ ಕೊಟ್ಟರೆ ಅದು ಸರಿಯಾದ ಪರಿಹಾರ ಅಲ್ಲ. ಹೆಚ್ಚಿನ ಜನ ಜಿಲ್ಲೆಯಿಂದ ಬೆಂಗಳೂರಿಗೆ ಗುಳೇ ಬರುತ್ತಾರೆ. ನೀರಾವರಿ ಪ್ರದೇಶದ ಟೇಲ್ ಎಂಡರ್ಸ್‌ಗೆ ನೀರು ಬರದೆ, ಅಲ್ಲಿನ ರೈತರ ಮಕ್ಕಳು ನಕ್ಸಲ್ ಪ್ರಭಾವಕ್ಕೆ ಸಿಲುಕಿದ್ದಾರೆ. ಕಾಲುವೆ ದುರಸ್ತಿ ಆಗಿಲ್ಲ. ಬೀಜದ ಬಗ್ಗೆ ಹೇಳುವುದಾದರೆ ಕಾರ್ಗಿಲ್ ಸೀಡ್ಸ್ ಬಿತ್ತಿದರೂ ಕಾಳು ಆಗಲಿಲ್ಲ. 7300 ಎಕರೆಯಲ್ಲಿ ಜಾಲಿಗಿಡ ಬೆಳೆದು ಬಂತು. ಭತ್ತದ ಬೆಲೆ ಕುಸಿದಾಗ ಆತ್ಮಹತ್ಯೆಗೆ ಕಾರಣವಾಯಿತು. ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿಯೂ ರೈತರ ಸಾಲಮನ್ನಾ ಆಗಬೇಕು. ಏರ್‌ಕಂಡಿಷನ್‌ಗೆ ಕರೆಂಟ್ ಕೊಡ್ತಾರೆ. ಆದರೆ ಆರು ಎಕರೆ ಇರುವ ರೈತನಿಗೆ ಕರೆಂಟ್ ಕೊಟ್ಟಿಲ್ಲ! ಎಂದೆಲ್ಲ ನುಡಿದರು. ಬೇ–ಬಾಕಿ ಸರ್ಟಿಫಿಕೇಟ್ ಪಡೆಯಲು 3–4 ತಿಂಗಳ ಕಾಲ ಹಿಡಿಯುತ್ತದೆ. ಸಂಬಂಧ ಪಟ್ಟ ಮಂತ್ರಿಯು ಪ್ರತಿಜಿಲ್ಲೆಗೆ ಬಂದು ಇದೇ ರೀತಿ ಸಂವಾದ ಸಂಬಂಧವನ್ನು ಏರ್ಪಡಿಸಬೇಕು ರೈತ ಸಂವಾದ ನಡೆಯಬೇಕು, ಎಂದಿರುವ ಮಾತುಗಳಲ್ಲಿ ರೈತನ ಸಂಕಷ್ಟಗಳ ಪರಿಚಯ ಮಾಡಿಕೊಡಲಾಗಿದೆ.

ಆತ್ಮಹತ್ಯೆಯ ಕಾರಣವನ್ನು ವಿಶ್ಲೇಷಿಸಿ ಹೇಳಿದಂತಿದೆ. **ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನ ಹಳ್ಳಿಯ** ಶ್ರೀ ಪಾಪರೆಡ್ಡಿ ಹಾಗೂ ಶ್ರೀ ಹುಲಮನಿ ಅವರು ತಮ್ಮ ಮಾತುಗಳಲ್ಲಿ ಅತಿ ರಾಸಾಯನಿಕದ ಬಳಕೆಯಿಂದ ಮಣ್ಣಿನಲ್ಲಿ ಜೈವಿಕ ಕ್ರಿಯೆ ಸ್ಥಗಿತವಾಗಿದೆ. ಭೂಮಿಗೆ ಜೀವಾಣುಗಳನ್ನು ಸೇರಿಸಿ ಸಾವಯವಗೊಳಿಸಬೇಕಿದೆ. ಆಕಳಗೊಬ್ಬರ ಜೀವಾಮೃತ ಪಂಚಗವ್ಯ ಬಳಸಿ ಫಲವತ್ತು ಮಾಡಿ ಸಹಜ ಕೃಷಿಯನ್ನು ಮಾಡಬೇಕು. ನಾಟಿ ಹಸು ಸಾಕಲು ಸಬ್ಸಿಡಿಬೇಕು. ಹಾಲು, ತುಪ್ಪ ಪ್ರತಿ ರೈತನ ಮನೆ ಸೊತ್ತಾಗಬೇಕು. ಅಂತರ್ಜಲ ಪೂರಣದ ಕಾರ್ಯಕ್ರಮ ಹಾಕಿಕೊಳ್ಳಬೇಕು. ಕೃಷಿ ಹೊಂಡ ನಿರ್ಮಾಣ ಕುರಿತ ತರಬೇತಿ ನೀಡಬೇಕು. ಸುವರ್ಣ ಕೃಷಿ ಹೊಂಡ ಯೋಜನೆಯು ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಸೀಮಿತಗೊಂಡಿದೆ. ಅವರ ಜಮೀನಿನ ನೆರೆಗಿರುವ ದೊಡ್ಡ ರೈತರಿಗೂ ಹಾಗೆಯೇ ಪ್ರೋತ್ಸಾಹ ಕೊಡಬೇಕು. ಕೆರೆ, ಗೋಮಾಳಗಳನ್ನು ಮುಚ್ಚದಂತೆ, ಆಕ್ರಮಿಸದಂತೆ ಹೊಸ ಕೆರೆ ನಿಯಮಗಳನ್ನು ಜಾರಿಗೆ ತರಬೇಕು.

ಆದಾಯಕ್ಕಿಂತ ಖರ್ಚಿನ ಬಾಬ್ತು ಹೆಚ್ಚಿದ ಕಾರಣ ಆತ್ಮಹತ್ಯೆ ಮಾಡಿಕೊಳ್ಳುವವರು ನೀರಾವರಿ ರೈತರಲ್ಲಿಯೇ ಹೆಚ್ಚು ಕಾಣಬರುತ್ತಿದೆ. ಅಂದರೆ ಕೊಂಡ ಬೀಜ, ಔಷಧಿ, ಗೊಬ್ಬರದ ಗುಣಮಟ್ಟದಲ್ಲಿ ಮೋಸವಾಗಿ ಬೆಳೆ ನಷ್ಟದ ಬಾಧೆ ತಾಳಲಾರದೆ ಆತ್ಮಹತ್ಯೆ ಮಾಡಿಕೊಂಡವರಿದ್ದಾರೆ. ಬೆಳೆ ಬಂತೆಂದರೆ ಅದಕ್ಕೆ ತಕ್ಕ ಧಾರಣೆ ಒದಗಿಸಲು ಪರರು ನಿರ್ಧರಿಸುವಂತಾದರೆ ಪರಾವಲಂಬಿತನ ರೈತರನ್ನು ಕಾಡುತ್ತದೆ. ಅಂತಾಗಿ ರೈತ ತಾನು ಬೆಳೆದ ಬೆಳೆಗೆ ತಾನೇ ಧಾರಣೆ ನಿಗದಿ ಮಾಡಲು ಸರ್ಕಾರ ಅವಕಾಶ ಮಾಡಬೇಕು. ವೈಜ್ಞಾನಿಕ ರೀತಿಯಲ್ಲಿ ಬೆಲೆ ನಿಗದಿ ಆಗಬೇಕು, ದೇಸೀ ಬೀಜದ ತಳಿ ಸುಧಾರಣೆ ಮಾಡಿ ರೈತರಿಗೆ ಸರಿಯಾಗಿ ಹಂಚಿಕೆ ಆಗಬೇಕು. ಪ್ರತಿಗ್ರಾಮದಲ್ಲಿ **ಬೀಜ ಬ್ಯಾಂಕ್** ಅನ್ನು ಸ್ಥಾಪಿಸಬೇಕು. ರೈತರು ಬೆಳೆದದ್ದರಿಂದ ಒದಗಿದ ಬೀಜಗಳನ್ನು ಅಲ್ಲಿ ಡಿಪಾಸಿಟ್ (ಸಂಗ್ರಹಿಸಿಡಬೇಕು) ಮಾಡಬೇಕು. ಪ್ರತಿ ಗ್ರಾಮಕ್ಕೆ ಕೆರೆಯು ಅವಶ್ಯಕವಾಗಿ ನಿರ್ಮಾಣವಾಗಬೇಕು. ಕಂಪೆನಿ ಮತ್ತು ಅಧಿಕಾರಿಗಳು ಹೊಣೆ ಅರಿತು ಸಬ್ಸಿಡಿಯಲ್ಲಿ ಮೋಸವಾಗದಂತೆ ನೋಡಿಕೊಳ್ಳಬೇಕು, ಎಂದೆಲ್ಲ ಹೇಳಿದರು. ಈರ್ವರ ಮಾತಿನಲ್ಲಿ ಸ್ವಾವಲಂಬನೆಯ ಅವಕಾಶಗಳನ್ನು ಒದಗಿಸಿಕೊಡಬೇಕೆಂಬ ಹಂಬಲ ಕಾಣುತ್ತದೆ.

**ಬೆಳಗಾವಿ ಜಿಲ್ಲೆಯ** ಶ್ರೀ ಲಿಂಗರಾಜ ಪಾಟೀಲ ಹಾಗೂ ಶ್ರೀ ರೆಡ್ಡಿ ಅವರು ಈವೊತ್ತಿನ ಕೃಷಿ ತಂತ್ರಜ್ಞಾನ ರೈತರಿಗೆ ನೇರವಾಗಿ ನೆರವಾಗುವಂತೆ ತಲುಪಬೇಕು. ಹೆಚ್ಚಿನ ಆದಾಯ ಬರುವಂತೆ ನೋಡಬೇಕು. ಅನ್ಯದೇಶಗಳಿಂದ ಕಾಳು, ಹಣ್ಣುಗಳ

ಆಮದು ಪರಾತವನ್ನು ಎದುರಿಸಲು ನಮ್ಮ ಸಾಮಾನ್ಯ ರೈತರನ್ನು ಸಿದ್ಧ ಪಡಿಸಬೇಕು ನಮ್ಮ ದಾಳಿಂಬೆ, ಉಳ್ಳಾಗಡ್ಡಿಯನ್ನು ರಫ್ತು ಮಾಡುವ ಶಕ್ತಿ ಅವನಿಗೆ ಒದಗುವಂತಾಗಬೇಕು. ರಾತ್ರಿವೇಳೆ 3–4 ಗಂಟೆಗಳ ಕಾಲವೂ ವಿದ್ಯುತ್ ಸರಬರಾಜು ಆಗುತ್ತಿಲ್ಲ. ಬೆಳೆದ ಕಬ್ಬಿಗೆ ಬೆಲೆ ಸಿಗದೆ, ಹತಾಶೆಗೊಂಡ ನಮ್ಮ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ ಎಂದರು. ರೈತರು ನೆಲೆಗೊಂಡಿರುವ ಹಳ್ಳಿಗಾಡಿನಲ್ಲಿ ಸಮದರ್ಶಿಯಾಗಿ ರೈತರಿಗೆ ಮೂಲಭೂತ ಸೌಲಭ್ಯ ಒದಗಬೇಕು. ಸ್ವಾವಲಂಬನೆಗೆ ಶಕ್ತಿ ತುಂಬಬೇಕು ಎಂಬ ಆಕಾಂಕ್ಷೆ ಇಲ್ಲಿ ಕಾಣುತ್ತದೆ.

**ಬಿಜಾಪುರ ಜಿಲ್ಲೆಯ** ಬಸವನಗೌಡ ಪಾಟೀಲ ಮತ್ತು ಸಂಗಡಿಗರು, ಹಾಗೂ ಮುದ್ದೆ ಬೀಹಾಳದ ಶ್ರೀ ವಿಜಯ ಅವರುಗಳ ಮಾತಿನಲ್ಲಿ: ಸಮಗ್ರ ನೀರಾವರಿ ಆಗಬೇಕು, ಏತ ನೀರಾವರಿ ಹಾಗೂ ಕೆರೆ ತುಂಬಿಸುವ ಯೋಜನೆಗಳು ಆಗಬೇಕು. ಬೆಳೆ ಸಾಲದ ಮೇಲಿನ ಬಡ್ಡಿಯನ್ನು ಇಳಿಸಬೇಕು. ಬೆಂಬಲ ಬೆಲೆಯು ಮಾರುಕಟ್ಟೆಯ ಬೆಲೆಗೆ ಹೆಚ್ಚು ಕಡಿಮೆ ಸಮ ಇರಬೇಕು. ಗೊಬ್ಬರ ಮಾರಾಟ ಮಾಡುವ ಕೇಂದ್ರಗಳಲ್ಲಿ ಕೃಷಿ ಪದವೀಧರರ ನಿರ್ವಹಣೆ ಇರಬೇಕು. ಖಾಸಗಿ ಸಾಲದಿಂದಾಗಿ ಆತ್ಮಹತ್ಯೆ ಪ್ರಕರಣಗಳು ನಡೆದಿವೆ. ಈ ಸಾಲ ಆಗದಂತೆ ರೈತರಿಗೆ ಅನುಕೂಲಗಳನ್ನು ಒದಗಿಸಬೇಕು. ಜಲಸಂವರ್ಧನ ಕಾರ್ಯಕ್ರಮ, ಭಾವಿ ನೀರಿನಿಂದ ಪಂಪ್‌ಸೆಟ್ ನೀರಾವರಿಗೆ ಬಳಕೆ ಆಗುವಲ್ಲಿ ಸ್ವಂತ ನೀರಾವರಿ ಎಂದು ಪರಿಗಣಿಸಿ ಉಚಿತ ವಿದ್ಯುತ್ ನೀಡಬೇಕು. ರೈತರ ಸಮಗ್ರ ಸಾಲವನ್ನು ಮನ್ನಾ ಮಾಡಿದರೆ, ಕಾಟ ಕಳೆದು ಆತ್ಮಹತ್ಯೆಯತ್ತ ರೈತರ ಗಮನ ಹೋಗುವುದಿಲ್ಲ, ಎಂಬ ಸಲಹೆಗಳು ಬಂದುವು.

ಸರ್ಕಾರವು ರೈತರ ಜೊತೆ ಸಂವಾದವನ್ನು ಆತ್ಮಹತ್ಯೆ ಕುರಿತು ಏರ್ಪಡಿಸಿರುವಂತೆ, ಅಧಿಕಾರಿಗಳ ಜೊತೆಯೂ ಸಂವಾದಗಳು ಏರ್ಪಡಬೇಕು. ಕಾರಣ ಸರ್ಕಾರ ಘೋಷಿಸಿರುವ ಹಾಗೂ ಕೊಡುವ ಸೌಲಭ್ಯ ಆ ಬಗೆಗಿನ ಮಾಹಿತಿ ರೈತರಿಗೆ ತಲುಪುತ್ತಿಲ್ಲ. ಯಾವ ಬೆಳೆಗೆ ವಿಮೆ ದೊರೆಯುತ್ತದೆ ಎಂಬ ಮಾಹಿತಿಯನ್ನು ನೀಡುತ್ತಿಲ್ಲ. ಮೂರು ಗಂಟೆಗಳ ಕಾಲ ಕಛೇರಿಯಲ್ಲಿ ಕಾದು ನಿಂತರೂ ಕೃಷಿ ಇಲಾಖೆಯಿಂದ ರೈತರಿಗೆ ಮಾಹಿತಿ ದೊರಕುತ್ತಿಲ್ಲ. ಗ್ರಾಮ ಸೇವಕರೂ ರೈತರಿಗೆ ಕೃಷಿ ಮಾಹಿತಿಯನ್ನು ಒದಗಿಸಬೇಕು. ಸೌಲಭ್ಯಗಳನ್ನು ಒದಗಿಸಲು ಅಧಿಕಾರಿಗಳು ಮನಸ್ಸು ಮಾಡಬೇಕು, ಎಂದೆಲ್ಲ ಶ್ರೀ ಚಿಮ್ಮಲಗಿ ಮನವಿ ಇಟ್ಟರು.

ಈ ನಡುವೆ **ಚಿಕ್ಕಮಗಳೂರು** ಜಿಲ್ಲೆ ಮೂಡಿಗೆರೆ ತಾ.ಹೊಸಳ್ಳಿ ಗ್ರಾಮದ ಕರುಣಾಕರ್ ಎಂಬಾತ ವಿಜಯ ಬ್ಯಾಂಕಿನಲ್ಲಿ ಒಂದು ಲಕ್ಷ ಅರವತ್ತು ಸಾವಿರ ಸಾಲ ಪಡೆದಿದ್ದ, ಬ್ಯಾಂಕ್ ಸಾಲ ತೀರಿಸಲಾಗದೆ ಬಡ್ಡಿಯೂ ಏರಿತ್ತು. ಬ್ಯಾಂಕಿನ ಸಾಲ ತೀರಿಸಲು ತಗಾದೆ ಆಗುತ್ತಿತ್ತು, ನಾಲ್ಕು ಜನ ಹೆಣ್ಣು ಮಕ್ಕಳು. ಇಬ್ಬರಿಗೆ ಆರೋಗ್ಯ ಸರಿಯಿಲ್ಲ. ಬೇರೆಯವರಿಂದಲೂ ಸಾಲ ಪಡೆಯಬೇಕಾಗಿ ಬಂದು ಸಾಲ ತೀರಿಸಲು ಆಗಿರಲಿಲ್ಲ. ಇದೆಲ್ಲ ಸೇರಿ ಸಂಕಷ್ಟ ತಾಳಲಾರದೆ ಆತ್ಮಹತ್ಯೆ ಮಾಡಿಕೊಂಡ; ಇನ್ನೊಬ್ಬಾತ ರಾಮಚಂದ್ರ ಅಂತ. ಬೇರೆ ಬೇರೆ ಜನರಿಂದ ಸಾಲ ಪಡೆದು ಅದನ್ನು ಬಳಸಿ ಮಾವು ಬೆಳೆದರು. ಮಾವಿಗೆ ಬೆಲೆ ಬರಲಿಲ್ಲ. ಸಾಲ ತೀರಿಸಲಾಗದೆ ಆತ್ಮಹತ್ಯೆಗೆ ಶರಣಾಗಿದ್ದ. ಹೀಗೆ ಆತ್ಮಹತ್ಯೆ ಮಾಡಿಕೊಂಡ ಈರ್ವರ ಕುಟುಂಬದವರೂ ಬಂದು ವೇದಿಕೆಯಲ್ಲಿ ಅಳಲು ತೋಡಿಕೊಂಡರು. ಇಡೀ ಸಭೆ ಸಾಂತ್ವನ ಸೂಚಿಸಿತು.

**ಚಿತ್ರದುರ್ಗ ಜಿಲ್ಲೆಯ** ನಟರಾಜ್ ಹಾಗು ಸಂಗಡಿಗ ರೈತರು ಮಾತನಾಡಿ ಸಬ್ಸಿಡಿಯಿಂದ ಶ್ರೀಮಂತ ರೈತರಿಗೆ ಅನುಕೂಲ ಆಗುವಂತೆ ಸಾಮಾನ್ಯ ರೈತರಿಗೂ ಅನುಕೂಲಿಸಬೇಕು. ಸಬ್ಸಿಡಿಯಲ್ಲದೆ, ಬಡ್ಡಿ ಮನ್ನಾ, ಸಾಲಮನ್ನಾ ಎಲ್ಲ ವರ್ಗದ ರೈತರಿಗೂ ಆಗಬೇಕು. ಲಾಟರಿ ನಿಲ್ಲಬೇಕು. ಬೇಸಾಯಕ್ಕೆ ನೀರು ಸೌಲಭ್ಯ. ಬೆಳೆಯಲು ಉತ್ತಮಬೀಜ, ಬಂದ ಬೆಳೆಗೆ ಉತ್ತಮ ಮಾರಕಟ್ಟೆ ಬೇಕೆಂದು ರೈತರ ಅಪೇಕ್ಷೆಯಾಗಿದೆ. ನೂರಕ್ಕೆ ಶೇ.40% ಜನ ಬೇಸಾಯ ಮಾಡುತ್ತಿರುವವರಲ್ಲಿ ನೀರಾವರಿ ಈವರೆಗೆ ಆಗಿರುವುದು ಶೇ 48 ರಷ್ಟು ಮಾತ್ರ. ಕೃಷಿ ವಿಶ್ವವಿದ್ಯಾಲಯದ ಸಂಶೋಧನೆಯಲ್ಲಿ ಮಳೆ ಆಶ್ರಯದ ನೀರಿನಿಂದ ಬೆಳೆದ ಬಾಳೆಯ ಬೀಜವನ್ನು ಕಂಡು ಹಿಡಿಯಬೇಕು. ಸರ್ಕಾರದ ಯೋಜನೆಗಳು ರೈತರಿಗೆ ತಲುಪಬೇಕು. ಆಗಲೆ ಆತ್ಮಹತ್ಯೆಗಳಿಗೆ ತಡೆ ಬಂದೀತು, ಎಂದರು. ಇವರ ಮಾತಿನಲ್ಲಿ ರೈತರಿಗೆ ಪಕ್ಷಪಾತ ಮಾಡದೆ ಸೌಕರ್ಯ ನೀಡಿ ಎಂಬ ಬೇಡಿಕೆ ಇತ್ತು. **ತುಮಕೂರು ಜಿಲ್ಲೆಯ** ವರ್ತಕ ಶ್ರೀ ಕೆಂಪರಾಜ ಮತ್ತು ಶ್ರೀ ರಂಗಸ್ವಾಮಿ ಅವರು ; ರೈತರಿಗೆ ಬೆಲೆ ಸ್ಥಿರತೆ ಕಾಪಾಡಬೇಕು. ಅವರ ಮಕ್ಕಳಿಗೂ ಶಿಕ್ಷಣವು ಒಳ್ಳೆಯ ಮಟ್ಟದಲ್ಲಿ ಸಿಗುವಂತಾಗಬೇಕು. ಬೇರೆಯವರದಂತೆ ಸುಖದ ಬದುಕು ತಮ್ಮದೂ ಆಗಬೇಕೆಂದುಕೊಂಡು ಸಾಲ ಮಾಡಿಕೊಂಡು ತೀರಿಸಲಾಗದಿದ್ದಾಗ ಆತ್ಮಹತ್ಯೆಗೆ ಪ್ರೇರಣೆ ಆಗುತ್ತದೆ. ಸರ್ಕಾರ ರೈತನಿಗೆ ಕೊಡುವ ಸಾಲ, ರೈತೇತರ ವರ್ಗಕ್ಕೆ ಬೆಳೆದು ಸರಬರಾಜು ಮಾಡುವುದಕ್ಕಷ್ಟೆ ಸೀಮಿತಗೊಂಡಿದೆಯೆ? ಉತ್ಪಾದನೆಗೆ ತಕ್ಕಂತೆ ಬೆಲೆ ಕೊಡದಿದ್ದರೆ ಹೇಗೆ? ವಿದ್ಯುತ್

ನಮಗೆ ಸಂವಿಧಾನಾತ್ಮಕ ಹಕ್ಕಾಗಿ ನ್ಯಾಯಾಲಯ ತೀರ್ಪು ನೀಡಿದ್ದರೂ ಸರಿಯಾಗಿ ನಮಗೆ ವಿದ್ಯುತ್ ಸರಬರಾಜಿಲ್ಲ. ಬೇರೆಯವರ ಸುಖದ ಬದುಕಿನಂತೆ ರೈತನಿಗೂ ನೆಮ್ಮದಿಯ ಬದುಕು ಒದಗದಿದ್ದಾಗ ಆತ್ಮಹತ್ಯೆಗೆ ಪ್ರೇರಣೆ ಇಂದಿನ ಪರಿಸರದಲ್ಲಿ ಆಗುತ್ತಿರುವುದು ಕಾಣಬರುತ್ತಿದೆ ಎಂದರು. ಇವರ ಮಾತುಗಳಲ್ಲಿ ರೈತರು ದುಡಿದುಕೊಟ್ಟಾಗ ಅವನಿಗೆ ಸುಖದ, ನೆಮ್ಮದಿಯ ಬಾಳುವೆ ಸಿಗದಿದ್ದಾಗ ಹತಾಶೆಯಿಂದ ಸಾವಿಗೆ ಶರಣಾಗುತ್ತಾನೆ ಎಂದಿತ್ತು. ಸಾಮಾಜಿಕ ಪ್ರಜ್ಞೆ, ಆಡಳಿತದ ಹೊಣೆ ಇಲ್ಲಿ ಅಗತ್ಯವಿದೆ ಎಂಬ ಭಾವ ಅವರ ಮಾತಿನಲ್ಲಿ ಕಾಣುತ್ತಿತ್ತು.

**ಕೊಡಗು ಜಿಲ್ಲೆಯ** ಶ್ರೀ ಮಹಂತಸ್ವಾಮಿ ಕಲ್ಮಠ ಅವರು ಮಾತನಾಡಿ ಸೋಮವಾರ ಪೇಟೆ ತಾಲೂಕಿನಲ್ಲಿ ಕಾಫಿ, ಏಲಕ್ಕಿ, ಬಾಳೆ ಮುಖ್ಯ ಬೆಳೆಗಳಾಗಿವೆ. ಕಾಫಿಗೆ ಬೆಲೆ ಸಿಗದೆ ರೈತರು ಕಂಗಾಲಾಗಿದ್ದಾರೆ. ಎಕರೆ ಕಾಫಿಗೆ ಲಕ್ಷಗಟ್ಟಲೆ ಸಾಲ ಮಾಡಿ ಹಾಕಿದರೆ ಕಾಫಿಯು ಕಾಂಡ ಕೊರೆತದ ರೋಗಕ್ಕೆ ಬಲಿಯಾಗಿ ಬೆಳೆ ನಷ್ಟವಾಗಿ ದಿಕ್ಕು ತೋಚದ ಪರಿಸ್ಥಿತಿ ಅವರದು. ಅರಿಶಿನದ ಬೆಳೆಗೂ ನಿಗದಿತ ಬೆಲೆ ದಕ್ಕಿಲ್ಲ. ಮಧ್ಯವರ್ತಿಗಳು ಬೆಲೆ ಏರಿಕೆಗೆ ಕಾರಣರಾಗಿ ರೈತರು ಸಂಕಷ್ಟಕ್ಕೀಡಾಗಿದ್ದಾರೆ. ಸಾಲದ ಬಾಧೆ ನಿತ್ಯದ ತಗಾದೆ ಆಗಿದೆ. ಇಂತಿರುವಲ್ಲಿ ಇವೆಲ್ಲ ಆತ್ಮಹತ್ಯೆಗೆ ಪ್ರಚೋದಕ ಆಗುತ್ತವೆ ಎಂಬ ಅಭಿಪ್ರಾಯದಲ್ಲಿ ಹೇಳಿದರು.

ನಾಗೇಶ್ ಕುಂದಲಪಾಡಿ ಅವರು; ರೈತರು, ಚಿನ್ನ, ಆಸ್ತಿ ಅಡವಿಟ್ಟು ರೈತರು ಕೈ ಸಾಲ ಪಡೆಯುತ್ತಾರೆ. ಬೇರೆ ಸಂಸ್ಥೆಗಳಲ್ಲಿಯೂ ಸಾಲ ಪಡೆದಿರುತ್ತಾರೆ ಇಲ್ಲೆಲ್ಲ ಸಾಲ ಮನ್ನಾ ಆಗುವಂತೆ ವ್ಯವಸ್ಥೆ ಆಗಬೇಕು. ಮಾರುಕಟ್ಟೆ ಜಾಲದಲ್ಲಿ ರೈತರು ನಲುಗಬಾರದು. ನಿಗದಿ ಮಾಡಿದ ಬೆಲೆಗಿಂತ ಮಾರುಕಟ್ಟೆಯಲ್ಲಿ ರೈತನಿಗೆ ಬೆಲೆ ಕಡಿಮೆ ಆಗಬಾರದು. ಜಮ್ಮಾ ಬಾಣೆ ಸಮಸ್ಯೆಯಿಂದಾಗಿ, ಕೃಷಿ ಮಾಡಿದ ಭೂಮಿಯ ಒಡೆತನವನ್ನು ಕಸಿಯಲಾಗಿದೆ. ಇದೆಲ್ಲ ಆತ್ಮಹತ್ಯೆಗೆ ಕಾರಣವಾಗುತ್ತಿದೆ ಎಂದರು. ಉತ್ಪನ್ನಕ್ಕೆ ತಕ್ಕ ಬೆಲೆಯಿಲ್ಲದ ಸಂಕಷ್ಟ, ಉಳುವ ಭೂಮಿಗೂ ಸಂಚಕಾರವೆಂದರೆ ಬದುಕಲು ರಹ ಎಲ್ಲಿ! ಎಂಬ ನಿರಾಶೆಯೇ ಆತ್ಮಹತ್ಯೆಗೆ ಪ್ರೇರಕವಾಗುತ್ತಿದೆ ಎಂಬ ಭಾವನೆ ಇಟ್ಟು ನುಡಿದರು.

**ಮೈಸೂರು ಜಿಲ್ಲೆಯ ಶ್ರೀ ಕುರುಬೂರು ಶಾಂತಕುಮಾರ್** (ಕಬ್ಬು ಬೆಳೆಗಾರರ ಸಂಘದ ಅಧ್ಯಕ್ಷರು) ಮಾತನಾಡುತ್ತ, ಆತ್ಮಹತ್ಯೆಯ ತಡೆಗೆ ಸರ್ಕಾರ ಮಾಡುವ ಚಿಂತನೆಗಳು ಕಾರ್ಯಾನ್ವಯವಾದರೆ ಕಾರ್ಯಗತವಾದರೆ ರೈತರಲ್ಲಿ ಭರವಸೆ

ಮೂಡುತ್ತದೆ. ಸಮಸ್ಯೆಯ ಪರಿಹಾರಕ್ಕೆ ಉನ್ನತ ಮಟ್ಟದ ಸಮಿತಿಯನ್ನು ರೂಪಿಸಿ ಸಲಹೆಗಳನ್ನು ಪಡೆಯಬೇಕು. ಬೆಳೆ ಉತ್ಪನ್ನಗಳಿಗೆ ಸೂಕ್ತವಾದ, ಅನುಕೂಲಕರವಾದ ಬೆಲೆಯನ್ನು ಘೋಷಿಸಬೇಕು. ಕೇಂದ್ರ ಸರ್ಕಾರವು ಸಕ್ಕರೆಗೆ ಬೆಲೆ ನಿಗದಿ ಮಾಡಿದಂತೆ, ಫ್ಯಾಕ್ಟರಿಗಳು ಅದನ್ನು ಅನುಸರಿಸುವಂತೆ ಮಾಡಿ ರೈತರಿಗೆ ನ್ಯಾಯ ಒದಗಿಸಬೇಕು. ವೈಜ್ಞಾನಿಕ ಬೆಲೆ ನಿಗದಿಯಾಗಬೇಕು. ಶೇ.4 ಪರ್ಸೆಂಟ್ ಇರುವ ನೌಕರರಿಗೆ 5ನೇ ವೇತನ ಅಯೋಗವನ್ನು ರೂಪಿಸಲಾಗಿದೆ. ಅದೇ ಶೇ.70 ರಷ್ಟು ಇರುವ ರೈತರಿಗೆ ಕೃಷಿ ಬೆಲೆ ನಿಗದಿ ಮಾಡಲು ಏಕೆ ಆಗುವುದಿಲ್ಲ? ಎಂದರು. ಈ ಸಭೆಯಂತೆಯೇ ಪ್ರತಿ ಜಿಲ್ಲೆಯಲ್ಲೂ ರೈತರ ಸಮಸ್ಯೆಗಳನ್ನು ಅರಿಯಲು ಕಾರ್ಯಪ್ರವೃತ್ತರಾಗಬೇಕು ಎಂದರು.

ಶ್ರೀ ರಾಜೇಂದ್ರ ಅವರು, ರೈತರು ಕೃಷಿಯಲ್ಲದೆ ಕೌಟುಂಬಿಕ ನಿರ್ವಹಣೆಗಾಗಿ ಸಾಲ ಮಾಡುತ್ತಾರೆ. ದಿಟ. ಅದನ್ನು ತೀರಿಸಲಾಗದೆ ಆತ್ಮಹತ್ಯೆಗೆಳೆಸಿರುವುದುಂಟು. ಆದರೆ ತುತ್ತು ಬೆಳೆದು ನಾಡಿಗೆ ಕೊಡುವ ರೈತನ ಕುಟುಂಬವೂ ನೆಮ್ಮದಿ ಇಂದ ಇರಬೇಕಲ್ಲವೆ! ಅಪನ ಮಕ್ಕಳಿಗೆ ಓದು ಬರಹ, ಮದುವೆಗಾಗಿ ಮಾಡುವ ಖರ್ಚು ಕೂಡ ಬೇಸಾಯದಿಂದಲೇ ಹುಟ್ಟಬೇಕು. ಅದು ಸಾಲದಿದ್ದಾಗ ಸಾಲಕ್ಕೆ ಸಿಕ್ಕಿಕೊಳ್ಳುತ್ತಾನೆ. ಅಂತಾಗಿ ಬೆಳೆ ಹಾನಿಯಿಂದ ಅವನ ಆಶೆ ಕುಸಿಯುತ್ತದೆ. ಸರ್ಕಾರದ ಸಹಾಯ ಶೇ.10 ರಷ್ಟು ಮಾತ್ರ ಅವನಿಗೆ ತಲುಪುತ್ತಿದೆ. ಶೇ.50ರಷ್ಟು ತಲುಪಿದರೂ ಸಾಕು. ಅವನು ಆತ್ಮಹತ್ಯೆಗೆಳೆಸಲಾರ. ರೈತ ಕೇವಲ ವ್ಯಾಪಾರದ ಸಲುವಾಗಿ ಬೆಳೆಯುವುದಿಲ್ಲ. ತಾನೂ ಬದುಕಿ ಇತರರೂ ಬದುಕಲೆಂದು ಬೆಳೆಯುತ್ತಾನೆ. ಹೀಗಾಗಿ ಎಲ್ಲರೂ ನಿಜವಾಗಿ ಸೇರಿ ಹತಾಶಗೊಂಡ ರೈತರ ಆತ್ಮಹತ್ಯೆ ತಪ್ಪಿಸಿ ಬದುಕಿಸಲು ಪ್ರಯತ್ನ ಮಾಡಬೇಕು. ಜಿಲ್ಲೆಯ ಕೆರೆಗಳು ಒತ್ತುವರಿ ಇತ್ಯಾದಿಗಳಿಂದ ನಾಶವಾಗಿವೆ. ಕಬಿನಿಯ ನೀರನ್ನು ಹೆಚ್ಚಿಗೆ ತಮಿಳುನಾಡಿಗೆ ಬಿಡುವಂತಾಗಿದೆ. ಇನ್ನು ಆತ್ಮಹತ್ಯೆ ಮಾಡಿಕೊಂಡ *ಮೇಲೆ ಸತ್ತದ್ದೇಕೆ? ಎಂದು ಕೇಳುವುದೇ ಹೆಚ್ಚು, ಆತ್ಮಹತ್ಯೆಗೆ (ಸಾಯುವಂಥ ಸ್ಥಿತಿಗೆ ತಲುಪುವ ಮೊದಲೇ) ಮೊದಲೇ ರೈತನ ಸಂಕಷ್ಟವನ್ನು ಕೇಳುವ, ಹತಾಶೆಯನ್ನು ಹೋಗಲಾಡಿಸುವಂಥ ವಿಚಾರ ಮಾಡಬೇಕು. ಆಗ ಆತ್ಮಹತ್ಯೆ ನಿಂತೀತು. ಬದುಕಿರುವಾಗಲೇ ಬದುಕಿಸುವಂಥಾದ್ದಾಗಬೇಕು.* ಕೋಮಾ ಹಂತಕ್ಕೆ ಹೋಗುವುದನ್ನು ತಪ್ಪಿಸಬೇಕು, ಎಂದೆಲ್ಲ ತಮ್ಮ ವಿಚಾರವನ್ನು ಮುಂದಿಟ್ಟರು.

ಈ ಉಭಯತ್ತರ ಮಾತಿನಲ್ಲಿ ವಾಸ್ತವ ಪರಿಸ್ಥಿತಿಯ ಚಿತ್ರಣವಿದೆ. ಹಾಗೂ ಪರಿಹಾರ ಸೂಚಕ ಚಿಂತನೆಗಳೂ ಕಾಣಬರುತ್ತವೆ. ಮಾತುಗಳ ಹಿಂದಿರುವ ಸ್ವಾನುಭವದ ನೋವು, ರೈತನ ಕಾಳಜಿ ಗಟ್ಟಿಯಾಗಿಯೆ ಕೇಳಿಸುತ್ತದೆ.

**ಮಂಡ್ಯ ಜಿಲ್ಲೆಯ** ಶ್ರೀ ನಂಜುಂಡೇಗೌಡ (ರಾಜ್ಯ ರೈತ ಸಂಘದ ಪದಾಧಿಕಾರಿ) ಅವರು ತಮ್ಮ ಚಿಂತನೆಗಳನ್ನು ಮುಂದಿಟ್ಟು; ರೈತರ ಉತ್ಪನ್ನಗಳಿಗೆ ಕೇಂದ್ರ ಹಾಗು ರಾಜ್ಯ ಸರ್ಕಾರಗಳು ಸೂಕ್ತ ವೈಜ್ಞಾನಿಕ ಬೆಲೆಯನ್ನು ನೀಡದೆ ರೈತರು ಶೋಷಣೆಗೊಳಗಾಗಿದ್ದಾರೆ. ರೈತರ ಲಾಬಿಯೇ ಇಲ್ಲ. ಹತ್ತು–ಇಪ್ಪತ್ತು ಎಕರೆ ಇರುವ ರೈತನಿಗೆ ಯಾರೂ ಹೆಣ್ಣು ಕೊಡಲು ಇಂದು ಮುಂದು ಬರದಿರುವ ಸ್ಥಿತಿ ಅವನಿಗೊದಗಿದೆ. ದೇಶಕ್ಕೆ ರೈತ ಅನ್ನ ಕೊಟ್ಟ. ಅವನ ಬಗ್ಗೆ ಯಾರಿಗೂ ಗಮನ ಬೇಡವೇ? ಎಂದು ಪ್ರಶ್ನೆ ಇಟ್ಟರು.

**ಶ್ರೀಮತಿ ಸುನಂದ ಜಯರಾಂ** ಅವರು ಮಾತನಾಡಿ ಕಳೆದ ಅರವತ್ತು ವರ್ಷಗಳಿಂದ ರೂಪಿಸಿರುವ ಯೋಜನೆ ಮತ್ತು ನೀತಿಗಳು ರೈತನ ಆತ್ಮಹತ್ಯೆಯನ್ನು ತಡೆಯಲಾರದೆ ಹೋಗಿವೆ. ಅವನ ಬದುಕಿಗೆ ಬೆಲೆ ಕೊಡಲು ಅವಕ್ಕೆ ಆಗಿಲ್ಲ. ಬೆಳೆ ಬೆಳೆದರೂ ನಷ್ಟವೊಂದೇ ಅವನ ಪಾಲಿನ ಬುತ್ತಿ. ಕೂಲಿಯೂ ಸಿಗದಂಥ ಸನ್ನಿವೇಶ ಅವನಿಗಾಗಿದೆ. ಯಾವ ನೋವಿಗೂ ಪರಿಹಾರ ಸಿಗಲಿಲ್ಲ. ಅಧಿಕಾರಿಗಳು ಯೋಜನೆಯ ಅನುಷ್ಠಾನ ಮಾಡಲು ಅವಕಾಶವಿದ್ದರೂ ಹಾಗು ಸಾಲದ ನೀತಿ, ಕೃಷಿ ನೀತಿ ಇದ್ದರೂ ರೈತರ ಆತ್ಮಹತ್ಯೆ ನಿಂತಿಲ್ಲ. ಮಣ್ಣಿನ ಮಕ್ಕಳಿಗೆ ನ್ಯಾಯ ಸಿಕ್ಕಿಲ್ಲ. 1990 ರಲ್ಲಿ ರೈತರ ಬೃಹತ್ ಸಮಾವೇಶವು ನಡೆಯಿತು ಡಬ್ಲ್ಯುಟಿಓ ಬಗ್ಗೆ ಚರ್ಚೆ ಆಯಿತು. ಆದರೆ ರೈತರ ಸಾವೂ ಆಯಿತು. ಇದರಿಂದ ರೈತರಿಗೆ ಮಾನ್ಯತೆ ಸಿಕ್ಕಿದಂತಾಯಿತೇ? ಬದುಕುವ ಹಕ್ಕು ಇರುವ ಅವನಿಗೆ ದೊರೆತ ಸಮಾಧಾನವೇನು? ಹಾಲು ಹಾಗೂ ರೇಷ್ಮೆ ಬೆಳೆಗಳಿಗೆ ಸೂಕ್ತ ಬೆಲೆ ದೊರೆಯಬೇಕು. ಸಮಸ್ಯೆಗೆ ಆಗ ಸಾಕಷ್ಟು ಪರಿಹಾರ ದೊರೆತೀತು ಎಂಬ ಅಭಿಪ್ರಾಯವಿಟ್ಟರು. ನಮ್ಮ ಕೃಷಿ ನೀತಿ ರೈತರ ಹತಾಶೆಗೆ, ಜುಗುಪ್ಸೆಗೆ ಉತ್ತರ ಕೊಟ್ಟಿಲ್ಲ ಎಂಬ ಭಾವ ಅವರ ಮಾತಿನಲ್ಲಿತ್ತು.

ಶ್ರೀ ರಮೇಶ್ ರಾಜ ಅವರು : ನೈಸರ್ಗಿಕ ಕೃಷಿ ಕ್ರಮ ಅನುಸರಿಸಿ, ಈಗಿನ ಕೃಷಿ ಪದ್ಧತಿಯಲ್ಲಿ ಬದಲಾವಣೆ ತರಬೇಕು. ಬಂಡವಾಳ ಇಲ್ಲ, ಬೇಸಾಯ ಇಲ್ಲ ಎಂಬ ಪರಿಸ್ಥಿತಿ ಉಂಟಾಗಬಾರದು. ಹಿಂದೆ ಶೂನ್ಯ ಬಂಡವಾಳದೊಡನೆ ಚೆನ್ನಾದ ಬೇಸಾಯ ನಡೆಸುತ್ತಿದ್ದರು. ಸರ್ಕಾರ ಹಾಗೂ ಕಂಪೆನಿಗಳೂ ನೈಸರ್ಗಿಕ

ಕೃಷಿ ಪದ್ಧತಿಗೆ ಪ್ರಚಾರ ಕೊಡಬೇಕು. ರೈತರೂ ಕೊಡಬೇಕು. ಚುನಾವಣೆ ಸಮಯದಲ್ಲಿ ಕೃಷಿ ಕೂಲಿ ಸಮಸ್ಯೆ ಒದಗುತ್ತದೆ. ಈ ಬಗ್ಗೆ ಎಲ್ಲರೂ ಗಮನಿಸಬೇಕು, ಎಂದರು.

ಇವರ ಮಾತಿನಲ್ಲಿ ಬಂಡವಾಳ ಹಾಕಿದಷ್ಟೂ ಕೃಷಿವೆಚ್ಚ ಹೆಚ್ಚಿ, ಸಾಲದ ತೆಕ್ಕಗೆ ಬಿದ್ದು ಸಂಕಷ್ಟಕ್ಕೊಳಗಾಗುವ ಬದಲು ನೈಸರ್ಗಿಕ ಕೃಷಿ ಅನುಸರಿಸಿದರೆ ಇಂಥ ತೊಂದರೆ ಇರದೆ ಆತ್ಮಹತ್ಯೆಗೆ ಅವಕಾಶವಾಗದು ಎಂಬ ಅಭಿಪ್ರಾಯ ಕಾಣುತ್ತದೆ.

ರೈತ ನಾಯಕ **ಹಾಸನ ಜಿಲ್ಲೆಯ ಕೋಡಿಹಳ್ಳಿ ಚಂದ್ರಶೇಖರ್** ಅವರು : ರೈತನಿಗೆ ಜೀವನದ ಭದ್ರತೆ ಇಲ್ಲ. ಮಾರುಕಟ್ಟೆಗೆ ತನ್ನ ಉತ್ಪನ್ನವನ್ನು ತಂದು ಮಾರಲು ಸೂಕ್ತ ಸೌಕರ್ಯವಿಲ್ಲ. ನಿಗದಿತ ಬೆಲೆ ದೊರಕುತ್ತಿಲ್ಲ. ರೈತರಿಗಾಗುವ ಎಲ್ಲ ಖರ್ಚು ವೆಚ್ಚ ಕಳೆದು ಅವನ ಆದಾಯದ ಲೆಕ್ಕ ಹಿಡಿಯಬೇಕು. ಬೆಲೆ ನೀತಿ ಕಂದಾಯ ನೀತಿ ಸರಿಯಿಲ್ಲ. ಪೇಟೆಂಟ್ ಕಾಯಿದೆಯನ್ನು ಬದಲಾಯಿಸಬೇಕಿದೆ. ಹೀಗಾಗಿ ರೈತರಿಗೆ ಬದುಕಿನ ನೆಮ್ಮದಿ ಹೋಗಿ ಆತ್ಮಹತ್ಯೆಗೆ ಶರಣಾಗುತ್ತಿರುವುದಾಗಿದೆ, ಎಂದರು;

**ರೈತ ಮಹಿಳೆ ಶ್ರೀಮತಿ ದೇವಮ್ಮನವರು** ತಮ್ಮ ನುಡಿಗಳನ್ನಿಟ್ಟು: ಬೆಳೆಯುವ ಬೆಳೆಗೆ ಮುಂಚಿತವಾಗಿ ಬೆಲೆ ನಿಗದಿ ಆಗಬೇಕು. ಮಾರುಕಟ್ಟೆಯಲ್ಲಿ ಮಧ್ಯವರ್ತಿಗಳು ಕಾಟ ತಪ್ಪಬೇಕು. ಬೆಳೆ ಸಾಲವನ್ನು ಏಪ್ರಿಲ್–ಮೇ ತಿಂಗಳಲ್ಲಿಯೆ ಕೊಡಬೇಕು. ಅದರಿಂದ ಲೇವಾದೇವಿದಾರರ ಬಳಿ ಹೋಗುವುದು ತಪ್ಪುತ್ತದೆ. 'ಪಹಣಿ'ಗೆ ನಿಗದಿಗೊಳಿಸಿರುವ ಬಡ್ಡಿ (15ರೂ) ಜಾಸ್ತಿ ಎನಿಸುತ್ತದೆ. ರೈತರಿಗೆ ಪಾಸ್ ಬುಕ್ ಕೊಡಬೇಕು. ವಿದ್ಯುತ್ ಅನ್ನು ನಿರಂತರವಾಗಿ ಬೆಳಗಿನವರೆಗೂ ಕೊಡಬೇಕು. ಕೆರೆಕಟ್ಟೆಗಳ ಒತ್ತುವರಿ ತಪ್ಪಿಸಿ ಅಂತರ್ಜಲ ಹೆಚ್ಚಲು ಕ್ರಮ ಕೈಗೊಳ್ಳಬೇಕು. ಸಾಲ ತೆಗೆದುಕೊಳ್ಳದ ರೈತರಿಗೂ ಬೆಳೆ ವಿಮೆ ಕಟ್ಟಲು ಅವಕಾಶವಿರಬೇಕು. ಕೃಷಿ ಕಾರ್ಮಿಕರ ಕೊರತೆ ಹೆಚ್ಚುತ್ತಿದೆ. ಇದಕ್ಕೆ ಪರಿಹಾರವನ್ನು ಸೂಚಿಸಬೇಕು. ರಾಷ್ಟ್ರೀಕೃತ ಬ್ಯಾಂಕುಗಳಲ್ಲಿಯೂ 4% ಬಡ್ಡಿಗೆ ಸಾಲ ದೊರೆಯುವಂತೆ ಮಾಡಬೇಕು. ಸ್ತ್ರೀಶಕ್ತಿ ಸಂಘಗಳಿಗೆ ನೆರವನ್ನು ಹೆಚ್ಚಾಗಿ ಕೊಡಬೇಕು, ಎಂದೆಲ್ಲ ಆತ್ಮಹತ್ಯೆ ಪರಿಹಾರಕ ಸೂತ್ರಗಳೆನ್ನುವಂತೆ ತಮ್ಮ ಅಭಿಪ್ರಾಯಗಳನ್ನು ಅನುಭವದ ಹಿನ್ನೆಲೆಯಲ್ಲಿ ಮಂಡಿಸಿದರು.

ರೈತ ನಾಯಕ **ಶಿವಮೊಗ್ಗ ಜಿಲ್ಲೆಯ ಶ್ರೀ ಕೆ.ಟಿ.ಗಂಗಾಧರ** ಅವರು, ಕೃಷಿ ನೀತಿಯ ಜಾರಿಯಲ್ಲಿ ನ್ಯೂನ್ಯತೆಯಿಂದಾಗಿ ರೈತರ ಮೇಲೆ ಕೃಷಿಯ ಒತ್ತಡ

ಬಿದ್ದಿರುವುದೇ ಕಾರಣವಾಗಿದೆ. ಕೃಷಿ ಉತ್ಪನ್ನಗಳ ಮೌಲ್ಯ ವರ್ಧನೆಗೆ ಗಮನ ಹರಿಸಿಲ್ಲ. ರೈತರ ಬಿಕ್ಕಟ್ಟಿಗೆ ಅದೂ ಮೂಲಕಾರಣವಾಗಿದೆ. ಕಬ್ಬಿಗೆ ದಕ್ಕುವ ಬೆಲೆ, ಸಕ್ಕರೆಗೆ ಒದಗಿದ ಬೆಲೆಯ ಅರ್ಧದಷ್ಟು ಮಾತ್ರವಾಗಿದೆ. ಅಂತಾಗಿ ಅದರ ಉಪಉತ್ಪನ್ನಗಳಿಂದ ಕಬ್ಬು ಬೆಳೆಗಾರನಿಗೆ ಲಾಭಾಂಶವು ಸೇರಬೇಕು. ಬಗರ್ ಹುಕುಮಿಗೆ ಹಕ್ಕು ಪತ್ರವಿಲ್ಲದೆ ರೈತರು ನಾಗರಿಕ ಹಕ್ಕುಗಳಿಂದ ವಂಚಿತರಾಗಿದ್ದಾರೆ. ಇಲಾಖೆಯಿಂದ ಒಕ್ಕಲೆಬ್ಬಿಸುವ ಪ್ರಯತ್ನವಾಗುತ್ತಿದೆ. ಅದಾಗಿ ಯಾವ ಕಾಲಕ್ಕೆ ಏನೋ ಎಂದು ರೈತನ ಬದುಕಿಗೆ ಅಭದ್ರತೆ ಕಾಡುತ್ತದೆ. ರೈತರ ಬೆಳೆಯ ಆಣೆವಾರಿ ಲೆಕ್ಕಾಚಾರದಲ್ಲಿ ಸರ್ಕಾರಿ ಅಧಿಕಾರಿಗಳು ರೈತರ ಅಳಲನ್ನು ಗಮನಿಸಬೇಕು. ಸಾಲ ನೀತಿಯೂ ಬಹಳ ಕ್ರೂರವೆನಿಸುತ್ತದೆ. ಬ್ಯಾಂಕ್‌ಗಳು 12 ರಿಂದ 12 1/2 ಪರ್ಸೆಂಟ್ ಬಡ್ಡಿ ಹಾಕಿದರೆ ರೈತರ ಪಾಡು ಏನಾಗಬೇಕು. ಪದವಿವರೆಗೆ ಓದಿದ್ದ ರೈತ, ಸೋದರಿಯರ ಮದುವೆ, ಮಕ್ಕಳ ಮದುವೆಗೆ ಮಾಡಿದ ಸಾಲ ತೀರಿಸಲಾಗದೆ, ಹೆಂಡತಿಯನ್ನು ಕೆಲಸಕ್ಕೆ ಕಳುಹಿಸಬೇಕಾಯಿತು. ಸಾಮಾಜಿಕ ಒಂಟಿತನ ಇಂತಲ್ಲಿ ರೈತನನ್ನು ಕಾಡುತ್ತದೆ. ಆತ್ಮಬಲ ಸಿಗುವಂತಹ ಸಾಮಾಜಿಕ ವ್ಯವಸ್ಥೆ ಇಂದಿಲ್ಲ. ಕಾರ್ಯಾಂಗ ಚುರುಕಾಗಬೇಕು. ಅಧಿಕಾರಿಯ ದುಡಿಮೆಗೆ ಸಿಗುವ 35 ಸಾವಿರವನ್ನು ರೈತನಿಗೆ ದಿನಕ್ಕೆ 10 ರೂ ಸಿಗುವುದಕ್ಕೆ ಹೋಲಿಸಿದರೆ ಆದಾಯದ ತಾರತಮ್ಯ ಹೆಚ್ಚು ಎದ್ದು ಕಾಣುತ್ತದೆ. ವಿದ್ಯಾವಂತ ರೈತ ಮಕ್ಕಳಿಗೆ, ನಿರಾಸೆ ಕಾಡುತ್ತದೆ. ಒಕ್ಕಲುತನದಿಂದ ಜೀವನ ಸಾಧ್ಯವಿಲ್ಲ ಎಂದು ಆತ್ಮಹತ್ಯೆಗೆ ಎಳೆಸುವುದು ಆಗುತ್ತಿದೆ. ಸರ್ಕಾರ ಆತ್ಮವಿಶ್ವಾಸ ಮೂಡಿಸುವ ಕಾರ್ಯವನ್ನು ಕೈಗೊಳ್ಳಬೇಕು. Borrowing capacity ಗಮನಿಸಿ ಸಾಲ ಪಡೆದರೆ ವಿಷ ಕುಡಿಯುವ ಅಗತ್ಯ ಬರದು ಎಂದೆಲ್ಲ, ರೈತರ ಸಂಕಷ್ಟ ಹಾಗೂ ಆತ್ಮಹತ್ಯೆಯ ಸಂದರ್ಭಗಳನ್ನು ಮನೋವೈಜ್ಞಾನಿಕ ಚಿಂತನೆಯ ಸ್ಪರ್ಶವಿಟ್ಟು ಹೇಳಿದರು.

ಜಿಲ್ಲೆಯ ಮತ್ತೋರ್ವ ಪ್ರತಿನಿಧಿಯು, ಬೆಳೆ ವಿಮೆ, ಬೆಂಬಲ ಬೆಲೆಯನ್ನು ಅನುಷ್ಠಾನಗೊಳಿಸಿರುವ ರೀತಿ, ತೋರಿಕೆಯದಾಗಿದೆ. ಯಾವುದೇ ರೈತನ ಬೆಳೆ ಹಾಳಾದರೆ ಅವನಿಗೇ ಬೆಳೆ ವಿಮೆ ಸಿಗಬೇಕು. ಭದ್ರತೆ ಸಿಗಬೇಕು. ಈ ಬಗೆಗಿನ ನಿಯಮಗಳನ್ನು ಸೂಕ್ತವಾಗಿ ಬದಲಾಯಿಸಬೇಕು. ಬೆಲೆ ಏರಿಕೆಗೆ ತಕ್ಕಂತೆ ರೈತನಿಗೆ ಬೆಂಬಲಬೆಲೆ ಸೂಚಿತವಾಗಬೇಕು. ಇಂಥ ಅವಕಾಶಗಳು ರೈತನಿಗೆ ತಪ್ಪಿದರೆ ಭರವಸೆ, ಭದ್ರತೆ ಕಾಣದ ರೈತ ಆತ್ಮಹತ್ಯೆಗೆಳೆಸುತ್ತಾನೆ ಎಂಬ ಅಭಿಪ್ರಾಯವನ್ನು ವ್ಯಕ್ತ ಮಾಡಿದರು.

ರೈತ ನಾಯಕ ಶ್ರೀ **ಎಚ್.ಆರ್.ಬಸವರಾಜಪ್ಪ** ಅವರು ಮಾತನಾಡಿ ಹೊಲದಲ್ಲಿ ದುಡಿಯುವ ಮಗ ಸತ್ತರೆ ಅದೊಂದು ದುರಂತ ಹಾಗೂ ಅದೊಂದು ವ್ಯವಸ್ಥಿತ ಕೊಲೆ ಅನ್ನಬಹುದು. ರೈತ ಯಾರಿಗಾದರೂ ದಗಲ್ಬಾಜಿ ಮೋಸ ಕೊಲೆ ಮಾಡಿದ್ದಾನೆಯೆ? ಹಗಲು ರಾತ್ರಿ ದುಡಿದ ರೈತನಿಗೆ ನ್ಯಾಯಸಿಗದೆ ಬದುಕಿನ ಅಭದ್ರತೆ ಉಂಟಾದರೆ, ಅವನ ಆತ್ಮಹತ್ಯೆಯ ಹಾದಿ ವ್ಯವಸ್ಥಿತ ಕೊಲೆಯೆಂತೆಯೆ ಆಗುತ್ತದೆ. ರೈತನ ಉತ್ಪನ್ನಗಳಿಗೆ ಬೆಲೆ ಕಡಿಮೆ ಆಗುತ ಬಂದಾಗ ಕುಟುಂಬದ ಜೀವನ ವೆಚ್ಚವನ್ನು ಭರಿಸಲಾಗದೆ, ಆತ್ಮಾಭಿಮಾನಕ್ಕೆ ಕುಂದು ತಾಗಿ, ಆತ್ಮಹತ್ಯೆಗಳು ಘಟಿಸುತ್ತವೆ. ಡಬ್ಲ್ಯೂ.ಟಿ.ಓ ಸಂದರ್ಭದಲ್ಲಿ ಕೇಂದ್ರವು ರೈತರ ಪರ ನೀತಿ ರೂಪುಗೊಳ್ಳುವಂತೆ ಮಾರ್ಪಾಡಿಗೆ ಶ್ರಮಿಸಬೇಕು. ಖಾಸಗಿ ಲೇವಾದೇವಿದಾರನೊಬ್ಬನಿಂದ ಹಲ್ಲು ಮುರಿಸಿಕೊಂಡ ರೈತ, ಕಂಪ್ಲೇಂಟ್ ಕೊಡಲಿಕ್ಕೂ ಹೋಗಲಿಲ್ಲ. ಕಾರಣ ತನ್ನ ಹಳ್ಳಿಯಲ್ಲಿ ಬೇಸಾಯಕ್ಕೆ ಸಾಲ ಮಾಡಿಕೊಂಡೇ ಬದುಕಬೇಕಾದ ಅನಿವಾರ್ಯಸ್ಥಿತಿ. ಬಹುರಾಷ್ಟ್ರೀಯ ಕಂಪೆನಿಗಳೂ ರೈತನ ತಲೆಯನ್ನು ಬೋಳಿಸುತ್ತವೆ. ಇಂಥ ಸಂದರ್ಭಗಳಿಂದಾಗಿ ರೈತರ ಆತ್ಮಹತ್ಯೆಗೆ ಕಾರಣಗಳಾಗುತ್ತಿವೆ ಎಂದು ಅಭಿಪ್ರಾಯಪಟ್ಟರು. ಅಂದರೆ ಬೌದ್ಧಿಕ ದುಂದುಗಾರಿಕೆ, ಬೌದ್ಧಿಕ ಮೋಜುಗಳು ರೈತರ ಮೇಲೆ ದಾಳಿ ಮಾಡುತ್ತಿವೆ ಎಂಬ ಧ್ವನಿ ಅವರ ಮಾತುಗಳಲ್ಲಿ ಸೂಚನೆಗೊಂಡಿತ್ತು. ದಾವಣಗೆರೆ ಜಿಲ್ಲೆಯ ತೇಜಸ್ವಿ ಪಟೇಲ್ (ಚನ್ನಗಿರಿ ತಾ) ಅವರು, ಕೃಷಿ ಇಲಾಖೆಯ ಮಾರ್ಗದರ್ಶನ, ಡೊಮೆಸ್ಟಿಕ್ ಮಾರ್ಕೆಂಟಿಗ್ ವ್ಯವಸ್ಥೆ, ಗ್ರಾಮಗಳಿಗೆ ಅಧಿಕಾರಿಗಳ ನಿರಂತರ ಭೇಟಿ, ಸಾಲದ ಮರುಪಾವತಿಗೆ ಸಾಕಷ್ಟು ಅವಧಿ ನೀಡಿ, ಬ್ಯಾಂಕ್‌ಗೆ ಸಾಲ ಕಟ್ಟುವ ಅನುಕೂಲ, ಲೇವಾದೇವಿದಾರರನ್ನು ನಿಯಂತ್ರಿಸುವಿಕೆ, ರೈತರಿಗೆ ಹಿಂಸೆ ಕೊಡುವ ಲೇವಾದೇವಿದಾರರನ್ನು ಅಸ್ಪೃಶ್ಯಗೊಳಿಸುವುದು, ಇತ್ಯಾದಿ ಸಲಹೆಗಳನ್ನು ಮಂಡಿಸಿ ರೈತರಿಗೆ ಭರವಸೆಯ ಬದುಕು ಒದಗಿದಷ್ಟೂ ಆತ್ಮಹತ್ಯೆಯ ಯೋಚನೆ ಬರುವುದಿಲ್ಲ ಎಂಬ ಅಭಿಪ್ರಾಯವನ್ನು ಸೂಚಿಸಿದರು. ಶ್ರೀ ಕೆ.ಜಿ.ಅಜ್ಜನಗೌಡ ಅವರು (ಹರಪನಹಳ್ಳಿ) ರೈತರ ಬೆಳೆಗೆ ಸೂಕ್ತ ಬೆಲೆ ಒದಗಬೇಕು ಕೃಷಿ ಹೊಂಡ ರೂಪಿಸಬೇಕು. ಗ್ರಾಮ ಪಂಚಾಯಿತಿಯ ಗೋಡೌನ್ ಮಾಡಿ, ಒಳ್ಳೆ ಬೆಲೆ ಬಂದಾಗ ಮಾರುವ ಅವಕಾಶ ಆಗಬೇಕು. ಇಂಥ ಸೌಕರ್ಯಗಳು ರೈತನು ಬದುಕುವ ಮಾರ್ಗದಲ್ಲಿ ಚೇತನ ತುಂಬುತ್ತವೆ. ಆತ್ಮಹತ್ಯೆಗೆ ಅವಕಾಶವಾಗುವುದಿಲ್ಲ ಎಂಬ ಸೂಚನೆಗಳನ್ನು ಇಟ್ಟರು.

**ಕೊಪ್ಪಳ ಜಿಲ್ಲೆಯ** ಶ್ರೀ ಶಂಕರಪಾಟೀಲ್ ಹಾಗೂ ಜಗದೀಶ್ ಅವರುಗಳು ಮಾತನಾಡಿ 2003–07ರ ಅವಧಿಯಲ್ಲಿ 63 ಜನ ರೈತರು ಈ ಜಿಲ್ಲೆಯಲ್ಲಿ ಆತ್ಮಹತ್ಯೆ ಮಾಡಿಕೊಂಡಿರುವುದನ್ನು ತಿಳಿಸಿದರು. ನಂಜುಂಡಪ್ಪ ವರದಿ ಕೂಡ ಈ ಜಿಲ್ಲೆ ಹೈದರಾಬಾದ್ ಕರ್ನಾಟಕ ಪ್ರದೇಶದ ಅತಿ ಹಿಂದುಳಿದ ಜಿಲ್ಲೆ ಎಂದು ಹೇಳಿದೆ. ಬಿ.ಸ್ಕೀಮ್ ಅನ್ನು ಅನುಷ್ಠಾನಕ್ಕೆ ತಂದರೆ ಈ ಜಿಲ್ಲೆಯ ತಾಲೂಕುಗಳಿಗೆ ಅನುಕೂಲ ಆಗ್ತದೆ. ಕಳೆದ 4–5 ವರ್ಷಗಳಿಂದ ಬರಗಾಲ ಈ ಜಿಲ್ಲೆಯಲ್ಲಿ ಕಾಡಿದೆ. ಅಂತೇ ರೈತರು ಆತ್ಮಹತ್ಯೆಗಳೆಸಿದ್ದಾರೆ. ಬೆಳೆ ಬಾರದೆ, ಸಾಲ ತೀರಿಸಲಾಗದ ಆತ್ಮಹತ್ಯೆ ಮಾಡಿಕೊಂಡವರು ಅವರು. ಈ ತಾಲೂಕುಗಳಿಗೆ ಶೀಥಲೀಕರಣ ಘಟಕವನ್ನು ಒದಗಿಸಬೇಕು, ಬೋರ್‌ವೆಲ್‌ಗಳನ್ನು ಪುನಶ್ಚೇತನಗೊಳಿಸಿ ಜಲಪೂರಣಕ್ಕೆ ಅವಕಾಶವಾಗಬೇಕು. ಗ್ರಾಮಗಳಲ್ಲಿ ಕೆರೆಗಳ ನಿರ್ಮಾಣ ಆಗಬೇಕು. ಜಲಮಟ್ಟ ಹೆಚ್ಚಲು ಅದು ಅನುಕೂಲಿಸಿ, ಬರದ ಬೇಗೆಯನ್ನು ತಪ್ಪಿಸಲು ಅನುಕೂಲವಾಗುತ್ತದೆ. ಆಗ ಆತ್ಮಹತ್ಯೆಯತ್ತ ರೈತರ ಮನಸ್ಸು ಹೋಗುವುದಿಲ್ಲ, ಎಂದರು.

**ಚಿಕ್ಕಮಗಳೂರು ಜಿಲ್ಲೆಯ** ಶ್ರೀ ಕುಮಾರಸ್ವಾಮಿ ಅವರು, ಮಾತನಾಡುತ್ತ, ರೈತರ ಆತ್ಮಹತ್ಯೆಯನ್ನು ಮಾಧ್ಯಮಗಳು ವೈಭವೀಕರಿಸಿ, ಮಗದೊಬ್ಬ ರೈತನಿಗೆ ಅದು ಪ್ರೇರಕವಾಗುವಂತಾಗಬಾರದು. ನಿವಾರಣೋಪಾಯದ ಬಗ್ಗೆ ಚಿತ್ರಣಗಳನ್ನು ನೀಡಬೇಕು. ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಕೃಷಿ ವಿಜ್ಞಾನಿಗಳನ್ನು ಕಾರ್ಯ ದರ್ಶಿಗಳಾಗಿ ನೇಮಿಸಬೇಕು. ಅವರ ಕೃಷಿ ತಾಂತ್ರಿಕ ಜ್ಞಾನ ರೈತರಿಗೂ ದಕ್ಕಬೇಕು. ಕೃಷಿ ಹೊಂಡದ ಅಗತ್ಯ ನಿರ್ಮಾಣ, ದೇಶೀಯ ತಳಿಗಳಿಗೆ ಪ್ರೋತ್ಸಾಹ, ಸಾವಯವ ಕೃಷಿಯ ಆದ್ಯತೆಗೆ ಅವಕಾಶವಾಗಬೇಕು. ರೈತರಿಗೆ ನಿಮ್ಮ ಬೆಂಬಲಕ್ಕೆ ನಾವಿದ್ದೇವೆ ಎಂದು ಸರ್ಕಾರ ಆತ್ಮವಿಶ್ವಾಸ ಮೂಡಿಸಬೇಕು, ಎಂದರು. ಮೂಡಿಗೆರೆ ಬೆಳೆಗಾರರ ಸಂಘದ ಅಧ್ಯಕ್ಷರು ಮಾತನಾಡಿ, ದೇಶದ 28 ರಾಜ್ಯಗಳ ಮುಖ್ಯಮಂತ್ರಿಗಳು ಸೇರಿ ಕೃಷಿ ನೀತಿ ರೂಪಿಸಬೇಕು. ಸಾಲವನ್ನು ಫೆಬ್ರುವರಿ – ಏಪ್ರಿಲ್ ಮಾಹೆಗಳಲ್ಲಿ ರೈತರಿಗೆ ಅನುಕೂಲಕರವಾಗಿ ಕೊಡಬೇಕು. ಅಸಲು ಮನ್ನಾ ಯೋಜನೆಯೂ ಸೂಕ್ತವಾಗಿ ಜಾರಿಗೊಳ್ಳಬೇಕು ಹಿಂದೆ ಸಾಲ ತೀರಿಸದೆ ಡಿಫಾಲ್ಟರ್ ಆದವರಿಗೂ ಈ ಯೋಜನೆಯನ್ನು ಜಾರಿಗೊಳಿಸಿ ಅವರಿಗೂ ಸಾಲಕೊಟ್ಟರೆ ಅವರಲ್ಲಿ ಆತ್ಮಹತ್ಯೆಗೆ ತಡೆ ಆದೀತು ಎಂದರು. **ಧಾರವಾಡ ಜಿಲ್ಲೆಯ** ಶ್ರೀ ಬಸವರಾಜ ಕುಂದಗೋಳ ಅವರು, ನರಗುಂದ ನವಲುಗುಂದದ ರೈತ ಬಂಡಾಯದ ನಂತರ ಘೋಷಿತವಾದ ಪರಿಹಾರ ಇನ್ನು ರೈತರಿಗೆ ತಲುಪಿಲ್ಲ. ಅದು ಇನ್ನಾದರೂ ತಲುಪಲಿ. ವೈಜ್ಞಾನಿಕ

ಬೆಲೆಯನ್ನು ರೈತರಿಗೆ ಒದಗಿಸಿ ಕೊಡಬೇಕು. ಆತ್ಮಹತ್ಯೆಗೆ ತಡೆಹಾಕುವ ಮಾರ್ಗಗಳಿವು ಎಂದರು.

ಶ್ರೀ ಬಸವನಗೌಡ ಶಿರಗೋಳ್ ಅವರು, ಯಾವುದೇ ಸಮಸ್ಯೆಯನ್ನು ರಾಜಕೀಯಕರಣಗೊಳಿಸಿ ನೋಡುವುದಾಗಿದೆ. ಕಳಸ-ಬಂಡೂರಿ ನಾಲಾ ಯೋಜನೆಯು ರೈತರ ಕುಡಿಯುವ ನೀರಿಗಾಗಿ ಮಾಡಿದ ಯೋಜನೆ ಆಗಿದೆ. ಕೇಂದ್ರವು ಈ ಬಗ್ಗೆ ಸೂಕ್ತ ನಿರ್ಧಾರ ತೆಗೆದುಕೊಳ್ಳಲಿ. ಇನ್ನು ರಾಜ್ಯದ ಬೆಳೆ ವಿಮಾ ಯೋಜನೆ ಗೊಂದಲಮಯವಾಗಿದೆ. ಬೆಲೆ ನಿಗದಿ ಮಾಡುವ ಸಂದರ್ಭದಲ್ಲಿ ರೈತರ ಸಮೀಪಕ್ಕೆ ಐಎಎಸ್ ಅಧಿಕಾರಿಗಳು ಸುಳಿಯುವುದಿಲ್ಲ. ಹೀಗಾಗಿ ಬೆಳೆ ವಿಮೆ, ಬೆಲೆ ನಿಗದಿ ಸೂಕ್ತವಾಗಿ ಮಾಡಿದರೆ ರೈತರ ಆತ್ಮಹತ್ಯೆಗೆ ಅವಕಾಶವಿರದು ಎಂದರು.

**ಗದಗ ಜಿಲ್ಲೆಯ** ಶಿವನಗೌಡ ಹಾಗೂ ಅವರ ಸಂಗಡಿಗ ರೈತರು: ಎಲ್ಲ ರೈತರಿಗೂ ಕೃಷಿ ಯಂತ್ರೋಪಕರಣಗಳಿಗೆ ಸಬ್ಸಿಡಿ ಕೊಡಬೇಕು. ಶಾಸಕರ ರೈತರ ವೇದಿಕೆ ರೂಪುಗೊಳ್ಳಬೇಕು. ಶಾಸನ ಮಾಡುವಾಗ ರೈತರ ಸಮಸ್ಯೆ – ಪರಿಹಾರದ ಬಗ್ಗೆ ಹೆಚ್ಚು ನಿಖರವಾದ ಕಲ್ಪನೆ ಕೊಡಲು ಅದರಿಂದ ಅನುಕೂಲವಾಗುತ್ತದೆ. ಮಳೆ ಪ್ರಮಾಣಕ್ಕೆ ಅನುಗುಣ ಬೆಳೆ ಬೆಳೆಯಲು ಸರ್ಕಾರ ರೈತರಿಗೆ ಸೂಚನೆಗಳನ್ನು ನೀಡಬೇಕು, ಎಂದರು. ಶ್ರೀ ನೀರಲಗಿ ಅವರು ಮಾತನಾಡಿ ರೈತರ ಕಷ್ಟಕ್ಕೆ ಸಾಲಗಳನ್ನು ಸೂಕ್ತವಾಗಿ ಒದಗಿಸಿದಲ್ಲಿ ಆತ್ಮಹತ್ಯೆಗಳು ನಿಲ್ಲುತ್ತವೆ ಎಂದರು.

**ಚಾಮರಾಜನಗರ ಜಿಲ್ಲೆಯ** ಶ್ರೀ ವೈ.ಆರ್.ಖಾನ್ ಅವರು ಮಾತನಾಡುತ್ತ: ಜಿಲ್ಲೆಯಲ್ಲಿ ಯಾವ ನೀರಾವರಿ ಸೌಲಭ್ಯವೂ ಇಲ್ಲ. ಸ್ವಂತ ಭಾವಿ ತೆಗೆದು ಹರಿಶಿನ, ಕಬ್ಬು, ಬಾಳೆ ಬೆಳೆಯಲಾಗುತ್ತಿದೆ. ಒಕ್ಕಣೆ ಮಾಡಿ ಒಂದು ಕ್ವಿಂಟಾಲ್ ಬೆಳೆ ತಂದ ರೈತನಿಗೆ ಬೆಲೆ ಖರ್ಚಿನ ಅರ್ಧದಷ್ಟಕ್ಕೆ ಇಳಿದರೆ ಆತ್ಮಹತ್ಯೆ ಒಂದೇ ಅವನಿಗೆ ಉಳಿದ ದಾರಿ. ಪ್ರಮುಖ ಬೆಳೆಗಳಾದ ಕಬ್ಬು, ಭತ್ತಕ್ಕೆ ಪ್ರೋತ್ಸಾಹಕರ ಬೆಲೆ ಸಿಗಬೇಕು. ಚಾಮರಾಜನಗರದಲ್ಲಿಯೂ ಮಾರುಕಟ್ಟೆ ಸ್ಥಾಪನೆ ಆಗಬೇಕು. ಯಾವ ಉತ್ಪನ್ನಗಳಿಗೂ ಬೆಲೆ ಗಿಟ್ಟದೇ ಹೋದಾಗ ಆತ್ಮಹತ್ಯೆ ಮಾಡಿಕೊಳ್ಳದೆ ವಿಧಿ ಇಲ್ಲ ಎನ್ನುವಂತಾಗಿದೆ, ಎಂದೆಲ್ಲ ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿದರು.

ಶ್ರೀ ನಾಗರಾಜಪ್ಪ ಕೆ.ಎಸ್, ಅವರು ಮಾತನಾಡಿ, ವೈಜ್ಞಾನಿಕ ಬೆಲೆ ಅಂದರೆ ಬೆಳೆ ಬರಲು ಏನು ಖರ್ಚಾಗುತ್ತದೋ ಅಷ್ಟನ್ನು ಬೆಂಬಲ ಬೆಲೆಯಲ್ಲಿ

ಕೊಡಬೇಕು. 2007 ರವರೆಗೆ ಎಲ್ಲಾ ರೈತರು ಪಡೆದಿರುವ ಸಾಲವನ್ನು ಮನ್ನಾ ಮಾಡಬೇಕು. ಆತ್ಮಹತ್ಯೆ ಎಲ್ಲ ಸಮಸ್ಯೆಗಳಿಗೆ ಪರಿಹಾರವಲ್ಲ ಎಂದರು.

**ಉಡುಪಿ ಜಿಲ್ಲೆಯ** ರೈತ ನವೀನಚಂದ್ರ ಅವರು, ಜಿಲ್ಲೆಯಲ್ಲಿ ಅಷ್ಟೇನೂ ಆತ್ಮಹತ್ಯೆ ನಡೆದಿಲ್ಲ ಎಂದು ನಿರ್ಲಕ್ಷ್ಯ ಸಲ್ಲ. ಬೆಳೆದ ಬೆಳೆಗೆ ಬೆಲೆ ನಿರ್ಧಾರಕ್ಕೆ ಸಮಿತಿ ಮಾಡಿ – ಅಡಿಕೆ, ಬಾಳೆ, ಬೆಲ್ಲ ಇತ್ಯಾದಿಗಳು ಹಬ್ಬಗಳಲ್ಲಿ ಉತ್ಸವ ಬಳಕೆಗಿರುವಲ್ಲಿ – ದರ ನಿಗದಿ ಮಾಡಬೇಕು. ಯಾವ ರೀತಿಯ ಬೆಳೆ ಬೆಳೀಬೇಕು ಎಂದು ಸಮಿತಿ ಶಿಫಾರಸು ಮಾಡಬೇಕು. ಬ್ರಹ್ಮಾವರ ಸಕ್ಕರೆ ಕಾರ್ಖಾನೆಯಿಂದ 3 ಕೋಟಿ ರೂ. ಹಣ ರೈತರಿಗೆ ಬಾಕಿಇದೆ. ಹೀಗೆ ರೈತರನ್ನು ಸತಾಯಿಸಿದರೆ ಅವರು ಉಳಿಯುವುದೆಲ್ಲಿ? ಅಡಿಕೆಗೆ ಕೊಳೆರೋಗ ಬಂದು ನಷ್ಟವಾಗಿದೆ. ರೋಗ ಹತೋಟಿಗೆ ಏರ್ಪಾಡು ಮಾಡಬೇಕು.

ಶ್ರೀ ವಿಠಲ ಶೆಟ್ಟಿ ಅವರು, ಶೇ. 60 ರಷ್ಟು ಕೃಷಿ ನಾಶ ಆಗಿದೆ. ಮೊದಲಿಗೆ 50 ರೂ.ಗಳ ಕೂಲಿಗೆ ಬರುತ್ತಿದ್ದ ಕೃಷಿ ಕಾರ್ಮಿಕರು ಈಗ 150 ರೂ. ಕೇಳುತ್ತಾರೆ. ಪ್ರತಿ ಜಿಲ್ಲೆಯಲ್ಲಿಯೂ ಈ ಬಗ್ಗೆ ಸಮೀಕ್ಷೆ ಮಾಡಬೇಕು. ಸಂಕಷ್ಟ ಪರಿಹಾರ ಕ್ರಮ ಕೈಗೊಳ್ಳಬೇಕು. ಸರಿಯಾದ ಬೆಲೆ ರೈತ ಬೆಳೆದ ಬೆಳೆಗೆ ಸಿಗದಿದ್ದ ಕಾರಣ ಸಾಲವನ್ನು ಮಾಡುತ್ತಲೇ ಹೋದ. 2005ರ ಹಿಂದೆ ಸಾಲ ಮಾಡಿದವರಿಗೆ ಸಾಲ ಮನ್ನಾ ಬೆನಿಫಿಟ್ ಆಗಿಲ್ಲ. ಅಂಥವರಿಗೆ ಸಂಪೂರ್ಣ ಬಡ್ಡಿ. ಮನ್ನಾ ಮಾಡಿ ಸಾಲಕಟ್ಟಲು ಅವಕಾಶ ಆಗಬೇಕು. ವೈಜ್ಞಾನಿಕ ಬೆಂಬಲ ಬೆಲೆ ಕೊಡದಿದ್ದರೆ ರೈತರಿಗೆ ಬದುಕಲೂ ಕಷ್ಟವಾಗುತ್ತದೆ, ಎಂದರು.

**ಉತ್ತರ ಕನ್ನಡ** ಜಿಲ್ಲೆಯ ಶ್ರೀ ಪ್ರಮೋದ್ ಹೆಗ್ಗಡೆ ಮತ್ತು ಶ್ರೀ ಹಾಲಪ್ಪ ಅವರು : ರೈತನಿಗೆ ಕಷ್ಟ ಕೇಳೋದಿಲ್ಲ ಎಂಬ ಅನಾಥ ಪ್ರಜ್ಞೆಗೆ ದೂಡುವ ಬದಲು ನಿನ್ನ ಕಷ್ಟಕ್ಕೆ ನಾವಿದ್ದೇವೆ ಎಂದು ಆತ್ಮಸ್ಥೈರ್ಯ ತುಂಬಬೇಕು. ಆಗ ಅವನು ಆತ್ಮಹತ್ಯೆಗೆ ಹೋಗಲಾರ. ಕೃಷಿ ಸಾಲ ಶೇ.4 ಬಡ್ಡಿ ದರಕ್ಕೆ ನೀಡುವಲ್ಲಿ ದೀರ್ಘಾವಧಿ ಸಾಲವಾಗಿ ನೀಡಬೇಕು. ಅದನ್ನು ಅನುಷ್ಠಾನಕ್ಕೆ ತರುವಲ್ಲಿ ತಾಂತ್ರಿಕ ಕೊಕ್ಕೆ ಹಾಕಿ ವಿಳಂಬ ಮಾಡಿದರೆ ರೈತನ ಕಷ್ಟ ಪರಿಹಾರವಾಗದು. ಜಾಗತೀಕರಣದ ಹೆಸರಿನಲ್ಲಿ ಕಳಪೆ ಸರಕು ಸರಬರಾಜಿಗೆ ಅವಕಾಶವಾಗಬಾರದು. ರೈತರ ಭೂಮಿಯನ್ನು ಅಭಿವೃದ್ಧಿಗೊಳಿಸಿಕೊಡಬೇಕು. ರೈತರಿಗೆ ಶಾಸನಾತ್ಮಕ ರಕ್ಷಣೆಬೇಕು. ರೈತನ ಬೆಳೆ ಉತ್ಪನ್ನಗಳಿಗೆ ಮಾರುಕಟ್ಟೆಯ ಬೆಲೆ ಪರಿಹಾರಾತ್ಮಕವಾಗಿರಬೇಕು. ಬೆಲೆ ಪೈಪೋಟಿಯನ್ನು ರೈತ ಎದುರಿಸಲಾಗದ ಸಂದರ್ಭದಲ್ಲಿ ಬೆಂಬಲ ಬೆಲೆ ಸಿಗಬೇಕು ಎಂದರು.

ರೈತರೆಲ್ಲರ ಪರವಾಗಿ ರೈತ ನಾಯಕ ಶ್ರೀ **ಕೆ.ಎಸ್.ಪುಟ್ಟಣ್ಣಯ್ಯ** ಅವರು ಮಾತನಾಡುತ್ತ : ಕಳೆದ 13 ವರ್ಷಗಳಲ್ಲಿ 1ಲಕ್ಷದ 30 ಸಾವಿರ ರೈತರ ಆತ್ಮಹತ್ಯೆಗಳು ಘಟಿಸಿವೆ. ಯಾರು ಇದಕ್ಕೆ ಕಾರಣ ಎಂದು ವಿಶ್ವ ಮಾನವ ಹಕ್ಕುಗಳ ಆಯೋಗ ಕಂಡು ಹಿಡಿಯಲು ಒತ್ತಡ ಹಾಕಬೇಕು. ಆತ್ಮಹತ್ಯೆಗಳಿಗೆ ಕಾರಣಗಳನ್ನು ಸಾಲದ ನೀತಿಯಲ್ಲಿ ಬೆಲೆ ನೀತಿಯಲ್ಲಿ, ಬರಗಾಲದ ಕಾರಣದಲ್ಲಿ ಹುಡುಕಬೇಕು. ಬೆಳೆ ಸಾಲವನ್ನು 71 ಪರ್ಸೆಂಟ್ ರೈತರಿರುವಲ್ಲಿ 12 ಪರ್ಸೆಂಟ್‌ನಷ್ಟು ಮಾತ್ರ ಕೊಟ್ಟರೆ ರೈತರಿಗೆಷ್ಟು ಅನುಕೂಲವಾದೀತು? ರೈತರು ಬೆಳೆಯುವಷ್ಟು ಭೂಮಿಯ ಆಧಾರದ ಮೇಲೆ ಅವರಿಗೆ ಸಾಲ ದೊರಕಬೇಕು. ರೈತನ ಇಡೀ ಬದುಕಿಗೆ ಸಹಕಾರಿ ಕ್ಷೇತ್ರ ಬೆನ್ನೆಲುಬಾಗಿ ನಿಲ್ಲಬೇಕು. ಅಸಂಘಟಿತ ವರ್ಗವಾಗಿರುವ ರೈತರಿಗೆ ಆಗುವ ಮಾನಹಾನಿ ಪ್ರಾಣಹಾನಿಗೆಡೆಕೊಡುತ್ತದೆ. ಈ ಕಾರಣವಾಗಿ ಯಾವ ರೈತನೂ ಸಾಯದಂತೆ ನೋಡಿಕೊಳ್ಳಬೇಕು. ಎಲ್ಲಾ ಜಿಲ್ಲಾಕೇಂದ್ರಗಳಲ್ಲಿ ರೈತರೇ ಆತ್ಮಹತ್ಯೆ ಮಾಡಿಕೊಳ್ಳಬೇಡಿ. ನಿಮ್ಮ ಬೆಂಬಲಕ್ಕೆ ನಾವಿದ್ದೇವೆ ಎಂಬ ಘೋಷ ವಾಕ್ಯ ಬರೆದು ಬೋರ್ಡ್ ಹಾಕಬೇಕು. ಜಿಲ್ಲಾಧಿಕಾರಿಗಳು ರೈತರ ಸಭೆ ಕರೆದು ವಿಶ್ವಾಸ ತುಂಬಬೇಕು. ಖುಷ್ಕಿ ಪ್ರದೇಶ ಕೃಷಿ ನೀತಿ, ಸಂಪೂರ್ಣ ಬರಗಾಲ ನಿರ್ಮೂಲನ ಮಾಡುವಂತೆ ರೂಪಿಸಬೇಕು. ವಾಣಿಜ್ಯ ಬೆಳೆ ನೀತಿ, ತೋಟಗಾರಿಕೆ ಬೆಳೆ ನೀತಿ ರೂಪಿಸಿ ಕೃಷಿಗೆ ಪ್ರತ್ಯೇಕ ಬಡ್ಜೆಟ್ ಮಾಡಬೇಕು. ಇಡೀ ರೈತ ಕುಲವನ್ನು ರಕ್ಷಿಸುವ ಬಗ್ಗೆ ಪ್ರಯತ್ನಗಳಾಗಬೇಕು, ಎಂದೆಲ್ಲ ತಮ್ಮ ಅಭಿಪ್ರಾಯಗಳನ್ನಿಟ್ಟು ಸಲಹೆಗಳನ್ನು ಮಂಡಿಸಿದರು.

ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ **ಹೆಚ್.ಡಿ.ಕುಮಾರಸ್ವಾಮಿ** ಅವರು ಪ್ರಪ್ರಥಮವಾಗಿ ರೈತರ ಸಂಕಷ್ಟಗಳನ್ನು ಸರ್ಕಾರದೊಡನೆ ನೇರವಾಗಿ ತೋಡಿಕೊಳ್ಳುವಂಥ ಸಮಾವೇಶವನ್ನು ಇಲ್ಲಿ ಏರ್ಪಡಿಸಿದೆ. ಇಲ್ಲಿ ರೈತರು ಮುಂದಿಟ್ಟ (ವ್ಯಕ್ತ ಪಡಿಸಿದ) ಸಮಸ್ಯೆಗಳು, ಕೊಟ್ಟ ಸಲಹೆಗಳು, ವ್ಯಕ್ತ ಪಡಿಸಿದ ನಿರೀಕ್ಷೆಗಳು ಅವರ ಅನುಭವದ ಮೂಸೆಯಿಂದ ಬಂದಿವೆ. ರೈತರ ಆತ್ಮಹತ್ಯೆಗಳು ನಿಲ್ಲಬೇಕು ಎಂಬ ಕಾರಣಕ್ಕೆಯೆ ಈ ಸಮಾವೇಶವನ್ನು ಏರ್ಪಡಿಸಲಾಗಿದೆ. ರೈತರ ಸಾಲ ಮನ್ನಾ, ವೈಜ್ಞಾನಿಕ ಬೆಲೆ ನಿಗದಿ, ಮಾನಸಿಕ ಸ್ಥೈರ್ಯ ತುಂಬುವ ಘಟಕಗಳಾಗಿವೆ. ಅಧಿಕಾರಿಗಳಲ್ಲಿ ಪ್ರಾಮಾಣಿಕರಿದ್ದಾರೆ. ಆದರೆ ಕೆಲವು ಅಧಿಕಾರಿಗಳ ಅಸಡ್ಡೆ ಮನೋಭಾವ ಹೋಗದಿದ್ದರೆ ಬರಗಾಲದ ಕೆಲಸ ನಿಷ್ಕ್ರಿಯವಾಗುತ್ತದೆ. ನೀರಾ ಬಗ್ಗೆ ಪಾಲಿಸಿ ತರಲು ಸಾಧ್ಯವಾಗಿಲ್ಲ. ಸರ್ಕಾರ ಎಲ್ಲಿ ಎಡವಿದೆ? ಎಲ್ಲಿ ಮಾರ್ಪಾಟು

ಮಾಡಬೇಕಿದೆ? ಗ್ರಾಮ ಜೀವನವನ್ನು ಉತ್ತಮ ಪಡಿಸಿ ರೈತರ ಪರವಾಗಿ ಕಾರ್ಯಕ್ರಮ ತರಲು ಬದ್ಧವಾಗಿದೆ? ಸರ್ಕಾರದ ಬೆಳೆ ವಿಮೆ ಕಾರ್ಯಕ್ರಮದಲ್ಲಿ ದೋಷವಿರಬಹುದು ಆದರೆ ಅದರ ದುರುಪಯೋಗವಾಗಬಾರದು. 85 ಕೋಟಿ ರೂ. ನಷ್ಟು ಬೆಲೆಯನ್ನು ಈರುಳ್ಳಿಗೆ ಕೊಟ್ಟಿದ್ದು ಎಷ್ಟು ಮಟ್ಟಿಗೆ ರೈತರಿಗೆ ಹೋಯಿತು, ಎಂಬುದನ್ನು ನೋಡಬೇಕು. ಮಧ್ಯವರ್ತಿಗಳಿಗೆ ಅಲ್ಲಿ ಅವಕಾಶವಾಗಬಾರದು. ನಿಜವಾದ ರೈತರಿಗೆ ಲಾಭ ತಲುಪಬೇಕು.

ಹೊಲದಲ್ಲಿ ಕೆಲಸ ಮಾಡುವ ಕೃಷಿ ಪಂಡಿತರಾದ ರೈತರ ಸಮೂಹವನ್ನು ಈ ದಿನ ಗುರುತಿಸಲಾಗಿದೆ. ಅದಾಗಿ ಅವರಿಂದ ಇಲ್ಲಿ ಸಲಹೆಗಳನ್ನು ಪಡೆಯಲಾಗಿದೆ. ಸಲಹೆ ಪ್ರಕಾರ ಗ್ರಾಮಪಂಚಾಯಿತಿಗೆ ಕೃಷಿತಜ್ಞರನ್ನು ನೇಮಕಕ್ಕೆ ತೀರ್ಮಾನಿಸಲಾಗಿದೆ. ಕಬ್ಬಿನ ವಿಷಯದಲ್ಲಿ, ಕಬ್ಬು ಬೆಳೆಗಾರರು ಮತ್ತು ಕಾರ್ಖಾನೆ ಮಾಲೀಕರ ಸಭೆ ಕರೆದು ಬೆಲೆಯನ್ನು ನೆರೆ ರಾಜ್ಯದವರಷ್ಟೆ ನೀಡಲು, ಕಬ್ಬು ಅರೆಯುವ ವ್ಯವಸ್ಥೆ ಮಾಡಲಾಗಿದೆ.

ಖಾಸಗಿ ಲೇವಾದೇವಿದಾರರ ಬಗ್ಗೆ ಕಟ್ಟುನಿಟ್ಟು ನಿಯಮಗಳನ್ನು ತರಲಾಗುವುದು ಭೂಮಿಯನ್ನು ಸ್ವೇಚ್ಛಾಚಾರವಾಗಿ ಹಂಚಲಾಗದು. ಸಾಲ ಮನ್ನಾ ಅಷ್ಟೇ ಅಲ್ಲ. ಶಾಶ್ವತವಾಗಿ ನಮ್ಮ ರೈತರ ಬದುಕಿಗೆ ಒಳಿತು ಮಾಡಲು, ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಡಲಾಗುವುದು. ಬೆಳೆ ಸಾಲಮನ್ನಾ ಬಳಿಕವೂ ರೈತರ ಆತ್ಮಹತ್ಯೆ ಮುಂದುವರಿದಿದೆ. ರೈತರು ಆತ್ಮಹತ್ಯೆ ಮಾಡಿಕೊಳ್ಳಬಾರದು ಎಂದು ಬೇಡಿಕೊಳ್ಳುತ್ತೇನೆ ಎಂದರು.

ರೈತರೊಡನಾದ ದಿನವಿಡೀ ಸಂವಾದವನ್ನು ಹೀಗೆ ನಡೆಸಿದ ಮರುದಿನವೇ ರೈತರ ಸಮಸ್ಯೆಗಳ ಕುರಿತು ವೈಜ್ಞಾನಿಕವಾಗಿ ಪರಿಶೀಲಿಸಿ ಸಂಕಷ್ಟ ಪರಿಹಾರ ಸೂತ್ರ ರೂಪಿಸಲು ಮುಖ್ಯ ಕಾರ್ಯದರ್ಶಿಗಳ ನೇತೃತ್ವದಲ್ಲಿ ಉನ್ನತ ಮಟ್ಟದ ಸಮಿತಿಯನ್ನು ಮುಖ್ಯಮಂತ್ರಿ ಶ್ರೀ ಎಚ್.ಡಿ.ಕುಮಾರಸ್ವಾಮಿ ಅವರು ರಚಿಸಿದರು. ರೈತರ ಸಂವಾದ ಕಾರ್ಯಕ್ರಮದಲ್ಲಿ ವ್ಯಕ್ತವಾದ ಸಲಹೆ ಸೂಚನೆಗಳ ಬಗ್ಗೆ ವಿಶಾಲವಾದ ಕಾರ್ಯಕ್ರಮ ರೂಪಿಸುವುದೂ ಅವರ ಗಮನದಲ್ಲಿತ್ತು. ಆ ಸಮಿತಿಯಲ್ಲಿ ಕೃಷಿ, ತೋಟಗಾರಿಕೆ, ಪಶುಸಂಗೋಪನ, ಇಂಧನ, ಜಲಸಂಪನ್ಮೂಲ, ಸಹಕಾರ ಇಲಾಖೆಗಳ ಮುಖ್ಯಸ್ಥರು, ಕರ್ನಾಟಕ ಹಾಲು ಒಕ್ಕೂಟದ ವ್ಯವಸ್ಥಾಪಕ ನಿರ್ದೇಶಕರು ಇವರನ್ನೆಲ್ಲ ಸೇರಿಸಲಾಗಿತ್ತು.

ರೈತ ಸಂವಾದ ನಡೆದ ಮರುದಿನ 15.6.07 ರಂದು ಧಾರವಾಡ ತಾಲೂಕಿನ ಹೆಬ್ಬಳ್ಳಿ ಗ್ರಾಮದ ರೈತ ಈರಪ್ಪ ಲಕ್ಕಪ್ಪ ಲಕ್ಕಮ್ಮನವರ (42) ಮರಕ್ಕೆ ನೇಣುಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡ. 2005ರಲ್ಲಿ ಬ್ಯಾಂಕ್ ಆಫ್ ಇಂಡಿಯಾ ದಿಂದ ಸಾಲ ಪಡೆದಿದ್ದ. ಹಳೆ ಸಾಲ ತೀರಿಸಿದ ನಂತರವೆ ಹೊಸ ಸಾಲ ಕೊಡುವುದು ಎಂದ ಬ್ಯಾಂಕಿನ ಮಾತನ್ನು ಮನಸ್ಸಿಗೆ ಹಚ್ಚಿಕೊಂಡು ಆತ್ಮಹತ್ಯೆ ಮಾಡಿಕೊಂಡವ ಈ ರೈತ. ಅಂದರೆ ಈ ಸಂಕಷ್ಟಗಳನ್ನು ತಡೆಯುವ ಬಗ್ಗೆ ಸರ್ಕಾರದ ಪ್ರಯತ್ನದ ಬಗ್ಗೆ ರೈತರಿಗೆ ಅರಿವಿಗೆ ಬರದಿರುವ ಫಲವಿದಾಗಿದೆ.

ಖಾಸಗಿ ಲೇವಾದೇವಿದಾರರನ್ನು ನಿಯಂತ್ರಣದಲ್ಲಿಡಲು ಕಾಯ್ದೆ, ರೈಲ್ವೆ ಬಜೆಟ್ ಮಾದರಿಯಲ್ಲಿ ಕೃಷಿ ಬಜೆಟ್ ಪರಿಶೀಲನೆ, ಸಾಲಕ್ಕಾಗಿ ಭೂಮಿಯನ್ನು ಬಲವಂತವಾಗಿ ಕಸಿದುಕೊಳ್ಳಲು ಅವಕಾಶ ಕೊಡದಿರುವುದು, ಕೃಷಿ ಉತ್ಪನ್ನಗಳಿಗೆ ವೈಜ್ಞಾನಿಕ ಬೆಲೆ ಒದಗಿಸುವುದು ಸರ್ಕಾರದ ಚಿಂತನೆಯಲ್ಲಿರುವುದು ಮುಖ್ಯಮಂತ್ರಿಗಳಿಂದ ವ್ಯಕ್ತವಾಯಿತು.

ವಿಪರ್ಯಾಸವೆಂದರೆ ರೈತರೊಂದಿಗೆ ಬೆಂಗಳೂರಿನಲ್ಲಿ ಮುಖ್ಯಮಂತ್ರಿಗಳ ಸಂವಾದವಿದೆ ಎಂದು ತಿಳಿದರೂ(!) 14.6.07 ರಂದೇ ರಾಜ್ಯದಲ್ಲಿ ನಾಲ್ವರು ರೈತರು ಆತ್ಮಹತ್ಯೆ ಮಾಡಿಕೊಂಡುದುದಾಗಿದೆ. ಬೀದರ್ ಜಿಲ್ಲೆ ಕುಂದಗೋಳ ಗ್ರಾಮದ ಶಿವರಾಜ್ ಈರಪ್ಪ ಬಳ್ಳೂರ್ (40), ಬಿಜಾಪುರ ಜಿಲ್ಲೆ ಹಲಸಂಗಿ ಗ್ರಾಮದ ದೇವಣ್ಣ ಗುಂಡಪ್ಪ ಶಿರಹಟ್ಟಿ (47), ಶಿವಮೊಗ್ಗ ಜಿಲ್ಲೆ ಕೆಂಚಗೊಂಡನ ಕೊಪ್ಪದ ಬೀರಪ್ಪ (40), ಮಂಡ್ಯ ತಾ. ಕಾಗೇಹಳ್ಳ ದೊಡ್ಡಿ ಗ್ರಾಮದ ಶಂಭು ಲಿಂಗೇಗೌಡ (30) ಆತ್ಮಹತ್ಯೆ ಮಾಡಿಕೊಂಡರು. ರೈತರ ಆತ್ಮಹತ್ಯೆಗೆ ಲೇವಾದೇವಿಗಾರರಿಂದ ಪಡೆದ ಸಾಲದ ಶೂಲವೇ ಕಾರಣ ಎಂದು ಆತ್ಮಹತ್ಯೆಗೊಳಗಾದ ರೈತರ ಸಂಬಂಧಿಗಳು ಹೇಳುವ ವಿಷಯವಾಗಿದೆ.

ಒಟ್ಟಾರೆ ಸಾಲಸೌಲಭ್ಯ, ಬಿತ್ತನೆಗೆ ಮುನ್ನ ಬೆಳೆಸಾಲ, ಪಾಸ್‌ಬುಕ್‌ನಲ್ಲಿ ರೈತರ ಜಮೀನಿನ ದಾಖಲೆಯ ನಮೂದನೆ, ಕೃಷಿ ವಿಷಯ ಪಠ್ಯದಲ್ಲಿ ಸೇರ್ಪಡೆ, ರಾಷ್ಟ್ರೀಯ ಬ್ಯಾಂಕುಗಳಲ್ಲಿಯೂ ಶೇ.4 ಬಡ್ಡಿ ದರ ಸಾಲದ ಸೌಲಭ್ಯ, ವೃತ್ತಿ ಪರ ತರಬೇತಿಗೆ ರೈತರ ಮಕ್ಕಳಿಗೆ ಮೀಸಲಾತಿ, ಕೃಷಿ ಯೋಜನೆಗಳ ಅನುಷ್ಠಾನಕ್ಕೆ ಅಧಿಕಾರಶಾಹಿಗಳ ತಡೆ ನಿವಾರಣೆ, ರೈತರ ಎಲ್ಲಾ ಸಾಲ ಮನ್ನಾ ಕುರಿತೆಲ್ಲ ಹಕ್ಕೊತ್ತಾಯವಾದವು. ದೂರವಾಣಿ ಹಾಗೂ ಇ–ಮೇಲ್‌ಗಳಲ್ಲಿ ಬೆಂಬಲ ಬೆಲೆ, ವಿದ್ಯುತ್ ಸಮರ್ಪಕ ಸರಬರಾಜಿನ ಬಗ್ಗೆಯೂ ಕೋರಿಕೆ ಬಂದುವು. ಅಂತು

ರೈತರೊಡನೆಯ ಸಂವಾದ ಒಂದು ಹೊಸ ಪ್ರಯತ್ನ. ಅದರಿಂದ ತಮ್ಮನ್ನು ಕೇಳುವ ಸರ್ಕಾರ ಇದೆ ಎಂಬ ಭಾವನೆ ಮೂಡಿರಲೂ ಸಾಕು.

ಪ್ರಧಾನಿಯವರಿಂದ ಕೃಷಿ ಕ್ಷೇತ್ರದ ಅಭಿವೃದ್ಧಿಗೆ 25 ಸಾವಿರ ಕೋಟಿ ಅನುದಾನದ ಪ್ರಕಟಣೆ, ಕಬ್ಬಿನ ಬೆಲೆ ಕುಸಿತದ ಸಂಕಷ್ಟದ ರೈತರಿಗೆ ಪ್ರತ್ಯೇಕ ಪ್ಯಾಕೇಜ್ ಅನುಷ್ಠಾನ ಗೊಂಡಿಲ್ಲದಿರುವುದೂ ರೈತರ ಮುಂದುವರಿದ ಆತ್ಮಹತ್ಯೆಗೆ ಕಾರಣವಾಗಿರುವಂತಿದೆ. ಏರುತ್ತಿರುವ ಜಾಗತಿಕ ತಾಪಮಾನವು ರೈತರ ಆತ್ಮಹತ್ಯೆಗೆ ಪರೋಕ್ಷವಾಗಿ ಕಾರಣವಾಗುತ್ತಿದೆ ಎಂಬ ಅಭಿಪ್ರಾಯವೂ ಇದೆ. ರೈತರಿಗೆ ಶಾಶ್ವತ ಕೃಷಿ ನೀತಿಯನ್ನು ಕೇಂದ್ರ ಸರ್ಕಾರ ಜಾರಿ ಮಾಡಿದೆ ಈ ಸಮಸ್ಯೆ ಬಗೆಹರಿಯುತ್ತಿದೆ ಎಂಬ ಸಲಹೆಗಳೂ ಬಂದಿವೆ.

ಬ್ಯಾಂಕ್ ಸಿಬ್ಬಂದಿ ಸಾಲ ವಸೂಲಿಗೆ ಮನೆಗೆ ಬರಲು ಅವಮಾನ ತಡೆಯಲಾಗದೆ ಸ್ನಾನದ ಮನೆಯಲ್ಲಿ ವಿಷಸೇವಿಸಿ ಆತ್ಮಹತ್ಯೆ ಮಾಡಿಕೊಂಡ ಎಸ್.ಆರ್.ಮರುಳಸಿದ್ದಪ್ಪ (30); ಪಾಂಡವಪುರದ ಚಲ್ಲದ ಹಳ್ಳಿ ಕೊಪ್ಪಲಿನ ಶಂಕರೇಗೌಡ ಬ್ಯಾಂಕ್ ಹಾಗೂ ಗಿರವಿ ಅಂಗಡಿ ಸಾಲ 1.5 ಲಕ್ಷ ಇರಲಾಗಿ ಗದ್ದೆ ಬಳಿಯ ಹಲಸಿನ ಮರಕ್ಕೆ ನೇಣು ಹಾಕಿಕೊಂಡದ್ದು; ತಿಪಟೂರು ತಾ. ಮತ್ತಿ ಹಳ್ಳಿ ಗೊಲ್ಲಹಳ್ಳಿಯ ಹಿರಿಯ ರೈತ ಸಣ್ಣೇಗೌಡ (90) ಸಾಲದ ಬಾಧೆಯಿಂದ ವಿಷ ಸೇವಿಸಿ ಸತ್ತದ್ದು; ನಾಕೂರು ಶಿರಂಗಾಲದ ರೈತ ರವಿ (36) ಬ್ಯಾಂಕ್‌ನ 2 ಲಕ್ಷ ರೂ. ಸಾಲವನ್ನು ಮರಳಿಸಲಾಗದೆ ಆತ್ಮಹತ್ಯೆ ಮಾಡಿಕೊಂಡದ್ದು; ಇಂಡಿ ತಾ. ಬರಡೋಲ ಗ್ರಾಮದ ಗುರುರಾಜ ಮಂಡಲೀಕ ದಶವಂತ ಖಾಸಗಿ ಸಾಲ ಮಾಡಿ ಭಾವಿ ತೋಡಿಸಿದರೂ ನೀರು ಕಡಿಮೆ ಆಗಿ ಬೆಳೆ ಒಣಗಿ, ಸಾಲ ತೀರಿಸಲಾಗದೆ ತನ್ನ ಜಮೀನಿನ ಮರಕ್ಕೆ ನೇಣು ಹಾಕಿಕೊಂಡದ್ದು; ಹುಬ್ಬಳ್ಳಿಯ ಛಬ್ಬಿ ಗ್ರಾಮದ ರೈತ ಶಂಕರಪ್ಪ ರುದ್ರಪ್ಪ ಹಣ್ಣೆ (48) ಬ್ಯಾಂಕ್‌ಗಳಲ್ಲಿ ಮಾಡಿದ್ದ 1.50 ಲಕ್ಷ ರೂ. ಸಾಲದ ತಗಾದೆ ತಾಳಲಾರದೆ ವಿಷ ಸೇವಿಸಿ ಆತ್ಮಹತ್ಯೆ ಮಾಡಿಕೊಂಡದ್ದು; ಹಾಸನ ಜಿಲ್ಲೆ ಹಿರೀಸಾವೆ ಗ್ರಾಮದ ಸೋಮಶೇಖರ ಎಂಬ ರೈತ, ಸಾಲಗಾರರ ಕಾಟದಿಂದ ಮುಕ್ತಿಗೊಳ್ಳಲು ಮಂತ್ರಿಗಳ ನಿವಾಸಕ್ಕೆ ಅಲೆದರೂ ಪರಿಹಾರ ಕಾಣದೆ ಶ್ರೀ ಎಚ್.ಡಿ.ದೇವೇಗೌಡರ ಮನೆ ಮುಂದೆ ವಿಷಸೇವಿಸಿ ಆತ್ಮಹತ್ಯೆಗೆ ಪ್ರಯತ್ನಿಸಿ ಕೊನೆಗೆ ಪೋಲೀಸರ ನೆರವಿನಿಂದ ಆಸ್ಪತ್ರೆಗೆ ದಾಖಲಾಗಿ ಚಿಕಿತ್ಸೆಗೊಂಡದ್ದು (ಹೇಮಾವತಿ ಸಕ್ಕರೆ ಕಾರ್ಖಾನೆ ಕೊಳ್ಳದೆ ಹೋದ ದಾಖಲಿಸದೆ ಹೋದ) ಬೆಳೆದ ಕಬ್ಬನ್ನು ನುರಿಸಲಾಗದೆ ಅದು ಬೆಂಕಿಗಾಹುತಿ ಆದದ್ದು, 1 ಲಕ್ಷ ರೂ. ಸಾಲ ಮಾಡಿ ಬೆಳೆದ

ರೊಬೆಸ್ಟೊ ತಳಿ ಬೆಳೆಗೆ ರೋಗ ತಗುಲಿ ನಾಶ ಆದದ್ದು, 40 ಸಾವಿರ ಸಾಲ ನೀಡಿ ಲಕ್ಷಕ್ಕೆ ಪತ್ರಕ್ಕೆ ಬರೆಸಿಕೊಂಡು ರಸ್ತೆಯಲ್ಲಿ ಟ್ರ್ಯಾಕ್ಟರ್ ಮೇಲೆ ಕರೆದುಕೊಂಡು ಹೋಗಿ ಹಲ್ಲೆ ನಡೆಸಿ ಟ್ರ್ಯಾಕ್ಟರ್ ಕಿತ್ತು ಕೊಂಡದ್ದು, ಟ್ರ್ಯಾಕ್ಟರ್ ಕೊಂಡ ಬಾಬ್ತು 60 ಸಾವಿರ ರೂ. ಸಾಲವನ್ನು ನೀಡಿದ್ದ ಹಣಕಾಸು ಸಂಸ್ಥೆಗೆ ತೀರಿಸಲಾಗದಿದ್ದುದು, ಕೊನೆಗೆ ದಿಕ್ಕುಗಾಣದೆ ಕುಟುಂಬ ಸಹಿತ ಆತ್ಮಹತ್ಯೆಗೆ ನಿರ್ಧರಿಸಿದ್ದ ಈ ರೈತನಿಗೆ ಎಲ್ಲಿಯೂ ಪರಿಹಾರ ದೊರಕದೆ, ಮೂರು ಲಕ್ಷ ರೂ. ಸಾಲ ತೀರಿಸಲಾಗದೆ ಮುಟ್ಟಿದ್ದೆಲ್ಲ ಮಣ್ಣಾದಾಗ ವಿಷಸೇವನೆ ಮಾಡಿದ್ದ); ರಾಣೆಬೆನ್ನೂರು ತಾ.ನ ಎರೆಕೊಪ್ಪ ಗ್ರಾಮದ ಹನುಮರೆಡ್ಡಿ ಹೇಮಪ್ಪ ಬತ್ತಲ (63), ಬೇಸಾಯಕ್ಕಾಗಿ ಹೆಂಡತಿ ಹೆಸರಿನಲ್ಲಿ ಮಾಡಿದ್ದ 50 ಸಾವಿರ ರೂ. ಸಾಲದ ಬಾಧೆ ತಾಳದೆ ಹೊಲದಲ್ಲಿ ವಿಷಸೇವಿಸಿ ಆತ್ಮಹತ್ಯೆ ಮಾಡಿಕೊಂಡದ್ದು; ಶಿಗ್ಗಾಂವಿ ತಾ. ಶ್ಯಾಡಂಬಿ ಗ್ರಾಮದ ಹನುಮಂತಪ್ಪ ಎ.ಸುಣಗಾರ (45) ಮಗನ ವಿದ್ಯಾಭ್ಯಾಸ, ಮಗಳ ಮದುವೆ, ಕೃಷಿಗಾಗಿ ಮಾಡಿದ್ದ ಸಾಲ ತೀರಿಸಲಾಗದೆ ನೇಣು ಹಾಕಿಕೊಂಡು ಸತ್ತದ್ದು; ಬಿಜಾಪುರ ಜಿಲ್ಲೆ ಉಕ್ಕಲಿ ಗ್ರಾಮದ ರಾಜುಗೌಡ ಅಣ್ಣಪ್ಪ ಪಾಟೀಲ (42) ಸಾಲದ ಬಾಧೆಯಿಂದ ವಿಷ ಕುಡಿದು ಸತ್ತದ್ದು; ಜೇವರ್ಗಿ ತಾಲೂಕಿನ ಕುರಹಳ್ಳಿ ಹಣಮಂತರಾಯ ಅಂದನಗೌಡ ನಾಗಾವಿ ನೇಣುಹಾಕಿ ಕೊಂಡು ಆತ್ಮಹತ್ಯೆ ಮಾಡಿಕೊಂಡದ್ದು – ಇವೆಲ್ಲ ರೈತರೊಡನೆ ಸಂವಾದದ ನಂತರವೂ 16.6.07 ರಿಂದ 28.6.07ರ ಅವಧಿಯಲ್ಲಿ ನಡೆದದ್ದು ವಿಪರ್ಯಾಸ. ಪ್ರಧಾನಿಯವರು ವಿದರ್ಭ ಪ್ಯಾಕೇಜ್ ಪ್ರಕಟಿಸಿದ ಮೇಲೂ ಆತ್ಮಹತ್ಯೆಗಳೂ ಜರುಗಿದುವಲ್ಲ. ಅದಕ್ಕೆ ಕಾರಣಗಳನ್ನು ವಿಶ್ಲೇಷಿಸಿ ಪರಿಹಾರ ತಲುಪುವ ಪ್ರಕ್ರಿಯೆಗಳ ಬಗ್ಗೆಯೂ ಗಮನಿಸಬೇಕಾಗುತ್ತದೆ. ರೈತರ ಬೇಡಿಕೆಗಳಿಗೆ ರಾಜಕಾರಣಿಗಳು ಸರ್ಕಾರ, ಅಧಿಕಾರಿಗಳು ಸ್ಪಂದಿಸದಿದ್ದರೆ ಆತ್ಮಹತ್ಯೆ ಪ್ರಕರಣಗಳಿಗೆ ಕೊನೆ ಬರುವುದಿಲ್ಲ.

ರೈತರು ತಾವು ಬೆಳೆದ ಬೆಳೆಗಳನ್ನು ಖರೀದಿದಾರು ನಿಗದಿ ಮಾಡಿದ, ಅಥವಾ ಕೇಳಿದ ಬೆಲೆಗೆ ಅನಿವಾರ್ಯವಾಗಿ ಮಾರಿ, ತಮ್ಮ ಉತ್ಪನ್ನ ವೆಚ್ಚವಿರಲಿ, ಅಸಲು ಹಣಕ್ಕೂ ಸಂಚಕಾರ ತಂದು ಕೊಳ್ಳುವ ಸನ್ನಿವೇಶವನ್ನು ಖರೀದಿದಾರರು ನಿರ್ಮಿಸಿದ್ದಾರೆ. ಇಂಥ ಹಳ್ಳಿ ಮಾರಾಟದ ಅಕ್ರಮವನ್ನು ತಡೆಯಲು ಎ.ಪಿ.ಎಂ.ಸಿ ಗಳು ಬಹುತೇಕವಾಗಿದ್ದರೂ ಫಲಕಾರಿ ಆಗಬೇಕಿದೆ. ರೈತರ ಮಕ್ಕಳು ಶಾಲೆಗೆ ಚಕ್ಕರ್ ಹೊಡೆದು ಅನಿವಾರ್ಯವಾಗಿ ಹೊಲದಲ್ಲಿ ಹಾಗೂ ದನಕಾಯುವಲ್ಲಿ ಬಾಲ ಕಾರ್ಮಿಕರಂತಾಗಿದ್ದಾರೆ, ಎಂಬುದು, ಬಿ.ಜಿ.ಬಣಕಾರರ ಅಭಿಮತ. ಆದರೆ ಕೂಲಿಯಾಳುಗಳಿಗೆ ಹೆಚ್ಚಿದ ಸಂಭಾವನೆ ಕೊಡಲು ಶಕ್ತಿ ಇಲ್ಲದ ಕುಟುಂಬಗಳು,

ದುಡಿಯುವ ವ್ಯಕ್ತಿಗಳು, ಕುಟುಂಬದಲ್ಲಿ ಬೇರೆ ಇಲ್ಲದಿದ್ದಾಗ, ಮಕ್ಕಳೇ ಮನೆಕೆಲಸ ಮಾಡಬೇಕಾದ ಅನಿವಾರ್ಯವಾದಾಗ ಅವರ ಬದುಕಿನ ಉಳಿವಿವಾಗಿ ಅದನ್ನು ಕೈಗೊಳ್ಳುತ್ತಾರೆ. ನೆರೆಯವರಿಗೆ ಭಾರ ಹೆಚ್ಚಿದ್ದಾಗ ಬೇರೆಯವರಿಗೆ ಎಷ್ಟೊಂದು ನೆರವಾಗಬಲ್ಲರು! ಅಲ್ಲಿ ಅತಿ ನಿರೀಕ್ಷೆಯೂ ಸಲ್ಲ.

*ರೈತರ ಆತ್ಮಹತ್ಯೆ ಪ್ರಕರಣಗಳು ಹೆಚ್ಚಿರುವ ಆಂಧ್ರಪ್ರದೇಶದ 16 ಜಿಲ್ಲೆ ವಿದರ್ಭದ 6 ಜಿಲ್ಲೆ, ಕರ್ನಾಟಕದ 6 ಜಿಲ್ಲೆ, ಕೇರಳದ 3 ಜಿಲ್ಲೆಗಳು ಸೇರಿದಂತೆ ಒಟ್ಟು ನಾಲ್ಕು ರಾಜ್ಯಗಳ 31 ಜಿಲ್ಲೆಗಳಿಗೆ ಪ್ರಧಾನಿಗಳ ವಿದರ್ಭ ಪ್ಯಾಕೇಜ್ ಅನ್ವಯಿಸುವುದು. ಆ ಯೋಜನೆಯ ರೀತ್ಯಾ 2006ರ ಜುಲೈ 1 ರೊಳಗಾಗಿ ವಾಣಿಜ್ಯ ಬ್ಯಾಂಕುಗಳಲ್ಲಿ ತೆಗೆದುಕೊಂಡಿರುವ ರೈತರ ಎಲ್ಲಾ ಸಾಲದ ಮೇಲಿನ ಬಡ್ಡಿ ಮನ್ನಾ; ಆ ನಂತರದ ರೈತರ ಸಾಲದ ಮೊತ್ತವನ್ನು ದೀರ್ಘಾವಧಿ ಸಾಲವನ್ನಾಗಿ ಪರಿವರ್ತಿಸಲಾಗುವುದು. ಬರುವ 10 ವರ್ಷಗಳಲ್ಲಿ ಕರ್ನಾಟಕದ 60 ಸಾವಿರ ಹೆಕ್ಟೇರ್ ಪ್ರದೇಶದಲ್ಲಿ ಕಾಫಿ ಸಸಿಯನ್ನು ಮರುನಾಟಿ ಮಾಡುವ ಗುರಿ ಇದೆ; 2 ಹೆಕ್ಟೇರ್ ವರೆಗಿನ ಬೆಳೆಗಾರರಿಗೆ ಶೇ.60, 2 ರಿಂದ 4 ಹೆಕ್ಟೇರ್‌ವರೆಗೆ ಶೇ.50, 4 ರಿಂದ 10 ಹೆಕ್ಟೇರ್‌ವರೆಗೆ ಶೇ.40, 10 ಹೆಕ್ಟೇರಿಗಿಂತ ಹೆಚ್ಚಿನ ದೊಡ್ಡ ಬೆಳೆಗಾರರಿಗೆ ಶೇ.25 ಸಹಾಯದನ ನೀಡಲು ಕೇಂದ್ರ ಉದ್ದೇಶಿಸಿದೆ ಎನ್ನಲಾಗಿದೆ (15.7.07). ಅಲ್ಲದೆ ರೈತರ ಆತ್ಮಹತ್ಯೆಯ ಹಿನ್ನೆಲೆಯಲ್ಲಿ ಕೇಂದ್ರದ ಘೋಷಿಸಿದ 'ವಿದರ್ಭ ಪ್ಯಾಕೇಜ್' ಅನುಷ್ಠಾನದ ಪ್ರಗತಿ ಪರಿಶೀಲನೆಯನ್ನು ಆಗಸ್ಟ್ 3, 2007 ಖುದ್ದು ಪ್ರಧಾನಿಯವರೇ ಪರಿಶೀಲಿಸುವ ಸಲುವಾಗಿ ಬಂದರು. ಈ ಪ್ಯಾಕೇಜ್ ಅಡಿ ರಾಜ್ಯಕ್ಕೆ 2689 ಕೋಟಿ ರೂ.ಗಳನ್ನು ಮೂರು ವರ್ಷಕ್ಕೆ ಪ್ರಕಟಿಸಿದೆ. ರೈತರ ಆತ್ಮಹತ್ಯೆ ಹೆಚ್ಚಿರುವ ಆರು ಜಿಲ್ಲೆಗಳಾದ ಹಾಸನ, ಕೊಡಗು, ಬೆಳಗಾವಿ, ಶಿವಮೊಗ್ಗ, ಚಿತ್ರದುರ್ಗ ಜಿಲ್ಲೆಗಳಿಗೆ ಈ ಪ್ಯಾಕೇಜ್ ಅಡಿ ಸೌಲಭ್ಯ ಕಲ್ಪಿಸಲಾಗಿದೆ. ರಾಜ್ಯ ಸರ್ಕಾರವು ರೈತರ ಆತ್ಮಹತ್ಯಾ ಪ್ಯಾಕೇಜ್‌ಗೆಂದು ಕಳುಹಿಸಿದ 10 ಇಲಾಖೆಗಳ ಪ್ರಸ್ತಾವನೆಗಳ ಪೈಕಿ, ತೋಟಗಾರಿಕೆ, ಪಶು ಸಂಗೋಪನೆ, ಮೀನುಗಾರಿಕೆ ಮತ್ತು ಬಿತ್ತನೆ ಬೀಜ ಸಂಬಂಧದ ಪ್ರಸ್ತಾವನೆಗಳಿಗೆ ಒಪ್ಪಿಗೆ ನೀಡಿದೆ. ಹೀಗೆ ಪ್ಯಾಕೇಜ್ ಪ್ರಕಟಣೆ, ರಾಜ್ಯದ ಮುಖ್ಯಮಂತ್ರಿಗಳು ಆತ್ಮಹತ್ಯೆ ತಡೆಯಲು ಪುನಃ ಪುನಃ ಮನವಿ ಮಾಡುತ್ತಲೇ ಇದ್ದರೂ ರೈತರ ಆತ್ಮಹತ್ಯೆಗಳು ಮುಂದುವರೆದಿವೆ. ಜುಲೈ 2007ರ ಮುನ್ನಿನ 9 ತಿಂಗಳಲ್ಲಿ ಚಿಕ್ಕಮಗಳೂರು ಜಿಲ್ಲೆಯಲ್ಲಿ 31, ಹಾಸನ ಜಿಲ್ಲೆಯಲ್ಲಿ 26, ಕೊಡಗು ಜಿಲ್ಲೆಯಲ್ಲಿ 4 ಜನ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಅಂದರೆ ರೈತರ ಸರಣಿ ಆತ್ಮಹತ್ಯೆ ಮುಂದುವರಿಯುತ್ತಿದೆ ಎಂದಾಯಿತು. ಇದಕ್ಕೆ ಕೇವಲ ಆರ್ಥಿಕ ನೆಲೆಯಲ್ಲಿಯೇ ಮಿತಿಗೊಳಿಸಿಕೊಳ್ಳದೆ ಸಾಮಾಜಿಕ ನೆಲೆಯಲ್ಲಿಯೂ*

ಪರಿಹಾರಗಳನ್ನು ಕಂಡುಕೊಳ್ಳಬೇಕು. ಈ ಸಂದರ್ಭದಲ್ಲಿ ಸಾಲಬಾಧಿತ ರೈತರ ಸಹಾಯಕ್ಕಾಗಲಿ ಎಂದು ನೀಡಿದ ಚೆಕ್‌ಗಳೂ ಬೌನ್ಸ್ ಆದ ಘಟನೆ ಕಣ್ಣು ತೆರೆಸಬೇಕಾಗಿದೆ.

ಹಿವ್ರಾಲಾಹೆ ಗ್ರಾಮದ ಬಾಹುರಾವ್ ಸಖಾರಾಮ್ ಇಂಗೋಲೆಗೆ 350 ರೂ.ಗಳ ಮೂರು ಚೆಕ್‌ಗಳನ್ನು ನೀಡಲಾಗಿತ್ತು. ಅದು ಮೂರು ಬಾರಿಯೂ ಬೌನ್ಸ್ ಆಯಿತು; ವಿರ್ಗವಾನ್ ಗ್ರಾಮದ ಮಾಣಿಕ್ ಶಾಲಿಗ್ರಾಮ ಲಾಸನ್ ಕುಟೆ-ಎತ್ತಿನಗಾಡಿ ಕೊಳ್ಳಲೆಂದಿದ್ದ ಅವರಿಗೆ, ತಾಲೂಕು ಕೃಷಿ ಅಧಿಕಾರಿಗಳು ಜುಲೈ 13 ರಂದು 15 ಸಾವಿರ ರೂ. ಚೆಕ್ ನೀಡಿದ್ದರು. ಅವರು ತಮ್ಮ ಬ್ಯಾಂಕ್ ಖಾತೆಗೆ ಚೆಕ್ ಜಮಾ ಮಾಡಿ ಆಗಸ್ಟ್ 21 ರಂದು ಹಣ ಪಡೆಯಲು ಹೋದಾಗ ಚೆಕ್ ಬೌನ್ಸ್ ಆಗಿದ್ದುದು ತಿಳಿಯಿತು ಎಂದು ಅಂಕೋಲಾದ ವರದಿಯೊಂದು (31.8.07) ತಿಳಿಸುತ್ತದೆ. ಇದರ ಅರ್ಥವೇನು? ಆಗಸ್ಟ್ ಅಂತ್ಯದ ವೇಳೆಗೆ ಪ್ರಧಾನಿಯವರು ವಿಶೇಷ ಪ್ಯಾಕೇಜ್ ಅನುಷ್ಠಾನದ ಪರಿಶೀಲನೆಗೆ ಬರುವ ಬಗ್ಗೆ ಆಗಸ್ಟ್ ತಿಂಗಳಲ್ಲಿ ವ್ಯವಸ್ಥೆ ಆಗಿತ್ತು. ಕೃಷಿ ವಾಣಿಜ್ಯಕ್ಕೆ ಮಹತ್ವ ನೀಡಲು, ಕೃಷಿ ಕ್ಷೇತ್ರದಲ್ಲಿ ಹೆಚ್ಚಿನ ಬಂಡವಾಳ ಹೂಡಲು. 11ನೇ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿ ಬೆಳವಣಿಗೆಯನ್ನು ಶೇ.4 ರಷ್ಟು ಹೆಚ್ಚಿಸಲು ರಾಜ್ಯಕ್ಕೆ ಸಲಹೆ ನೀಡುವುದು ರಾಜ್ಯದ ಕೃಷಿ ಬೆಳವಣಿಗೆಯ ಪ್ರಧಾನಿಯವರ ಪರಾಮರ್ಶೆಯ ಹಿನ್ನೆಲೆಯಲ್ಲಿತ್ತು. ಆದರೆ ಆ ಸಂದರ್ಭದಲ್ಲಿಯೇ ರೈತರು ಒಂದೇ ವಾರದಲ್ಲಿ ರೈತರು 10 ಜನ ನೇಣು ಹಾಕಿಕೊಂಡದ್ದು ವರದಿಯಾಯಿತು. ಅಂದರೆ ಚೆಕ್ ಬೌನ್ಸ್, ಇತ್ಯಾದಿಗಳಿಂದ ನೆರವಿನ ಹಣವು ರೈತರಿಗೆ ತಲುಪದಿರುವುದೇ ಪ್ಯಾಕೇಜ್ ಘೋಷಣೆಯ ನಂತರವೂ ಆತ್ಮಹತ್ಯೆ ಆಗುತ್ತಿರುವುದಕ್ಕೆ ಕಾರಣವಾಗಿ ಇಲ್ಲಿ ಕಾಣುತ್ತದೆ. ಆದ್ದರಿಂದ ರೈತರ ಆತ್ಮಹತ್ಯೆ ತಡೆಯಲು ಕೇಂದ್ರವು ಪ್ರಕಟಿಸಿರುವ ಬೃಹತ್ ಮೊತ್ತದ ಪ್ಯಾಕೇಜ್ ಕೂಡ ಬಡ ರೈತರಿಗೆ ತಲುಪುವಲ್ಲಿ, ಬೌನ್ಸ್ ಆಗಬಾರದು. ನೆರೆಹೊರೆಯವರ ಮುಂದೆ ಸಾಲದಿಂದಾಗಿ ಮಾನಹೋಗಿಸಿಕೊಳ್ಳಬಾರದೆಂಬ ರೈತರ ಸಾಂಸ್ಕೃತಿಕ ಇಚ್ಛೆಗೆ ಅಡ್ಡಿಯಾಗಿ ಹತಾಶೆಗೊಂಡು ಆತ್ಮಹತ್ಯೆಗೀಡಾಗುವ ರೈತರನ್ನು ನೈತಿಕ, ಸಾಮಾಜಿಕ ಸೌಹಾರ್ದದಿಂದ ಬದುಕಿನ ಹಾದಿಗೆ ಹಚ್ಚುವ ಹೊಣೆ ಕೇವಲ ಸರ್ಕಾರದ್ದಲ್ಲ, ಸಾಮಾಜಿಕರ, ಹಾಗೂ ಅಧಿಕಾರಿಗಳ ಹೊಣೆಯೂ ಆಗಿದೆ.

ನಮ್ಮ ಜನನಾಯಕರೂ ಹಾಗೂ ಅಧಿಕಾರಿಗಳು ತಮ್ಮ ಜೀವನ ಶೈಲಿಯ ಹೊರತಾಗಿ ಭಾರತೀಯ ರೈತನ ಬಡತನ ರೇಖೆಯ ಕೆಳಗಿನ ಜೀವನದ ಅನುಭವವನ್ನು ತಿಳಿದುಕೊಂಡರೆ ಮಾತ್ರ ರೈತರ ಸಮಸ್ಯೆಗಳ ಸಾಂತ್ವನಕ್ಕೆ ಅನುಕೂಲವಾದೀತು.

O-1004-12

# ಅಧ್ಯಾಯ – 21

## ರೈತ ಚಳವಳಿ ಸಾಂತ್ವನ ಪ್ರಕ್ರಿಯೆಗಳು

**ವಿಷಯ 1:** ರೈತ ಸೌಕರ್ಯ ಸ್ವರೂಪಗಳು

ವ್ಯಕ್ತಿಯು, ಸಮುದಾಯದ ಅವಲತ್ತುಗಳಿಗೆ ಧಕ್ಕೆ ಬಂದಾಗ, ಅನ್ಯಾಯವಾದಾಗ ಅದಕ್ಕೆ ಎದುರಾಗಿ ಹೋರಾಡಿ, ಪ್ರತಿಭಟಿಸಿ ನ್ಯಾಯ ಒದಗಿಸಿಕೊಳ್ಳುವುದು ಒಂದು ಹಕ್ಕು; ಪ್ರಜಾಪ್ರಭುತ್ವದಲ್ಲಿ ಬದುಕುವವರ ಹಕ್ಕು. ಈ ದೃಷ್ಟಿಯಿಂದ ಚಳುವಳಿ ಮಾಡಿ ನ್ಯಾಯ ದಕ್ಕಿಸಿಕೊಳ್ಳುವುದೂ ಒಂದು ಹಕ್ಕು. ಹೀಗೆಯೇ ಬಾಧ್ಯತೆಯೂ ವ್ಯಕ್ತಿ ಹಾಗು ಸಮುದಾಯಕ್ಕೆ ಉಂಟು. ಇವನ್ನೆಲ್ಲ ಸಮರ್ಪಕಗೊಳಿಸಲು ಸಾಂತ್ವನ ಪ್ರಕ್ರಿಯೆಗಳೂ ನಡೆಯಬೇಕು. ಪ್ರಮುಖವಾಗಿ ರೈತ ಚಳುವಳಿಯ ಸಂದರ್ಭಗಳಲ್ಲಿ ಇದು ಹೇಗೆ ಒದಗಿವೆ ಎಂಬುದರ ಪರಾಮರ್ಶೆಯೂ ಬೇಕು.

ಚಳುವಳಿ ನಿರಂತರ ನವನವೋನ್ಮೇಷ ಅಭಿವ್ಯಕ್ತಿಯಾದುದರಿಂದ ಅದಕ್ಕೆ ಅವಕಾಶಕೊಡುವುದೂ ಒಂದು ಮುಖ್ಯವಾದ ಸಾಂತ್ವನ ಕ್ರಿಯೆ. ಅನ್ಯಾಯದ, ಹಕ್ಕು ಪೂರೈಕೆ ನಿರ್ಲಕ್ಷ್ಯದ ವಿರುದ್ಧ ಅದುಮಿಟ್ಟುಕೊಂಡಿದ್ದ ಭಾವನೆಗಳ ಪ್ರಕಟನೆಗೆ ಚಳುವಳಿ ಒಂದು ಮಾಧ್ಯಮವೆ. ಸರ್ಕಾರ ಹಾಗೂ ಅಧಿಕಾರಿವಲಯದ್ದು ಇಲ್ಲಿ ಶಮನಗೊಳಿಸುವ ಪಾತ್ರ, ರೈತರಿಗೆ ನೀರು ಸರಬರಾಜು, ಕೃಷಿ ಪರಿಕರಗಳ ಒದಗಣೆ, ಮೂಲಭೂತ ಸೌಕರ್ಯ, ಬೆಳೆನಷ್ಟಕ್ಕೆ ಪರಿಹಾರ, ಕೃಷಿ ಉತ್ಪನ್ನಗಳಿಗೆ ವೈಜ್ಞಾನಿಕ ಬೆಲೆ, ಬೆಲೆ ಕುಸಿದಾಗ ಬೆಂಬಲ ಬೆಲೆ, ಬೆಳೆ ಬಂಪರ್ ಅದಾಗ ಖರೀದಿ ಕೇಂದ್ರ, ಉಗ್ರಾಣವ್ಯವಸ್ಥೆ, ಶೀತಲಗೃಹ ವ್ಯವಸ್ಥೆ, ಮಾರುಕಟ್ಟೆ ನಿಯಂತ್ರಣ, ಒದಗಿಸಿದ ಮಾಲಿಗೆ ವಿಳಂಬವಿಲ್ಲದೆ ಧನ ನೀಡಿಕೆ, ಸಾಲಸೌಲಭ್ಯ, ಸಾಂದರ್ಭಿಕವಾಗಿ ಸಾಲದ ಬಡ್ಡಿ ಮನ್ನಾ, ನಿರಂತರ ವಿದ್ಯುತ್ ಸೌಲಭ್ಯ ಕೃಷಿ ತರಬೇತಿ, ಜಾಗತಿಕ ಸ್ವರ್ಧೆಗೆ ಸಿದ್ಧಪಡಿಸುವಿಕೆ, ಸಾಮಾಜಿಕ ಆದರ ಬದುಕಿಗೆ ವಿಶ್ವಾಸ ತುಂಬುವ ಪರಿಸರ, ನೆರೆ ಹೊರೆಯವರ ಬಾವಣಿಕೆ, ಇತ್ಯಾದಿಗಳೆಲ್ಲ ಸಾಂತ್ವನ ಪ್ರಕ್ರಿಯೆಯ ಘಟಕಗಳಾಗಿವೆ.

**ರಾಷ್ಟ್ರೀಯ ರೈತ ಜೀವ ವಿಮಾ ನಿಗಮ ಸ್ಥಾಪನೆ;** ಕೃಷಿ ಸಂಬಂಧಿತ ಉದ್ಯಮ ವ್ಯವಹಾರ ನಡೆಸಲು ಕೃಷಿ ಪದವೀಧರರಿಗೆ ಅಗ್ರಿಕ್ಲಿನಿಕ್‌ಗಳಲ್ಲಿ ತರಬೇತಿ; ಕೃಷಿ ಸಾಲದ ಮೇಲಿನ ಸುಲಭ ಬಡ್ಡಿ ದರ; ಕೃಷಿ ಪಂಡಿತ್ ಪ್ರಶಸ್ತಿ ಹಾಗೂ ಕೃಷಿ ಉತ್ಪನ್ನ ಪ್ರಶಸ್ತಿ ಸ್ಥಾಪನೆ; ಬರಿ ಬೆಳೆ ನಾಶವಾದ ರೈತರಿಗಷ್ಟೇ ಅಲ್ಲದೆ ರೈತ

ಅನುಭವಿಸುವ ಬೇರೆ ರೀತಿಯ ನಷ್ಟಗಳಿಗೂ ಪರಿಹಾರ ಒದಗಿಸಲು ಪ್ರಸಕ್ತ ಬೆಳೆವಿಮೆ ನೀತಿಯಲ್ಲಿ ಸುಧಾರಣೆ; ರೈತರು ಆಕಸ್ಮಿಕ ಮರಣವಾದಾಗ, ಅಂಗಹೀನರಾದಾಗ, ಶಾಶ್ವತ ಅಸಮರ್ಥತೆಗೀಡಾದಾಗ, ದೃಷ್ಟಿವಿಹೀನರಾದಾಗ ಗರಿಷ್ಠ 1 ಲಕ್ಷ ರೂ. ದೊರಕುವಂಥ ರಸಗೊಬ್ಬರ ಕಂಪೆನಿಗಳ ರೈತ ವಿಮಾಯೋಜನೆ ಹಾಗೂ ಸ್ವಾಭಾವಿಕ ಮರಣ ಹೊಂದಿದ ರೈತರ ಕುಟುಂಬಕ್ಕೆ 20 ಸಾವಿರ, ಅಪಘಾತದಲ್ಲಿ ಸತ್ತ, ರೈತರ ಕುಟುಂಬಕ್ಕೆ 50 ಸಾವಿರ ರೂ. ನೀಡುವ 'ಜನಶ್ರೀ' ವಿಮಾ ಯೋಜನೆ, ರಾಷ್ಟ್ರೀಯ ಕೃಷಿ ವಿಮಾ ಯೋಜನೆ ಮೂಲಕ, ಕೀಟ ಹಾಗೂ ರೋಗಗಳಿಂದ ಬೆಳೆ ನಷ್ಟವಾದಾಗ ವಿಮಾ ರಕ್ಷಣೆ ಹಾಗೂ 'ಬೆಲೆ ವಿಮೆ' ಹಣಕಾಸು ನೆರವು, ಪ್ರಗತಿಪರ ಕೃಷಿ ಪದ್ಧತಿ, ತಂತ್ರಜ್ಞಾನದ ಅಳವಡಿಕೆಗೆ ಉತ್ತೇಜನ ನೀಡುವುದು, ಇತ್ಯಾದಿಗಳು ರೈತರ ಹಿತಕ್ಕೆ ಪೂರಕವಾದಂಥವು. ಸರ್ಕಾರವು ಈ ದೃಷ್ಟಿಯಿಂದ 15.12.2006 ರಂದು ಕೃಷಿ ನೀತಿಯಲ್ಲಿ ರೈತಾಭ್ಯುದಯ ಪಂಚ ಸೂತ್ರಗಳನ್ನು ಪ್ರಕಟಿಸಿರುವುದನ್ನು ಗಮನಾರ್ಹ; 20.12.2006 ರಂದು ನಡೆದ ವಿಶ್ವ ರೈತರ ದಿನಾಚರಣೆಯಲ್ಲಿ 'ಕೃಷಿ ಪಂಡಿತ್' ಮತ್ತು 'ಕೃಷಿ ಪ್ರಶಸ್ತಿ' ಯನ್ನು ರೈತರಿಗೆ ನಿಧಿ ಮೂಲಕ ವಿತರಿಸಿದ್ದು ಸ್ವಾಗತಾರ್ಹ.

ಸ್ವಾವಲಂಬನೆ ಮತ್ತು ಆಹಾರ ಭದ್ರತೆಯ ಮೂಲಕ ಜಾಗತಿಕ ನೆಲೆಯಲ್ಲಿ ಸ್ಪರ್ಧೆ ನೀಡುವ ಶಕ್ತಿ ಬೆಳೆಯಬೇಕು. ಇನ್ನು ವೀಟ್‌ನೆಟ್‌ವರ್ಕ್ ಯೋಜನೆ, ಅಕ್ಕಿಯಲ್ಲಿ ವಂಶವಾಹಿ ನಕ್ಷೆಯ ವಿನ್ಯಾಸ ಮತ್ತು ಬೀಟಾ ಕ್ಯಾರಟೋನ್ ಅನ್ನು ಸಂಯುಕ್ತಗೊಳಿಸಿ ಜೈವಿಕ ತಂತ್ರಜ್ಞಾನದಲ್ಲಿ ಭಾರತ ಮುಂದಡಿ ಇರುತ್ತದೆ. ಜೊತೆಗೆ ಬೆಳೆ ಸಂರಕ್ಷಣೆಯನ್ನು ಅದು ಗಮನಿಸಬೇಕು.

ರಾಜ್ಯದಲ್ಲಿ ಬಾಗಲಕೋಟೆ ಹಾಗು ಮಾಲೂರಿನಲ್ಲಿ ಆಹಾರ ಸಂಸ್ಕರಣೆಯ ಪಾರ್ಕ್ (food park) ಸ್ಥಾಪಿಸಲು ಕೇಂದ್ರ ಸರ್ಕಾರ ಅನುಮತಿಸಿದೆ. ಮದ್ದೂರು, ಬೆಳಗಾವಿ ಹಾಗು ಚಿತ್ರದುರ್ಗದಲ್ಲೂ ಇಂಥ ಪಾರ್ಕ್ ಸ್ಥಾಪನೆಗೆ ಅನುಮತಿ ಸಿಗುವ ಸಂದರ್ಭವಿದೆ. ಇದರಲ್ಲಿ ಬಂಡವಾಳ ಹೂಡಿಕೆದಾರರಿಗೆ ಶೇ 25ರಷ್ಟು ಸಬ್ಸಿಡಿಯನ್ನು ಗರಿಷ್ಠ 50 ಲಕ್ಷ ರೂ. ಮಿತಿಯಲ್ಲಿ ಒದಗಿಸಲು ಕೇಂದ್ರ ಸಿದ್ಧವಿದೆ. ಅನುಬಂಧೀ ಅಥವಾ ಮೂಲಭೂತ ಸೌಕರ್ಯಗಳಾದ ಶೈತ್ಯಾಗ್ರಹ, ಉಗ್ರಾಣ, ಸಂಸ್ಕರಣೆಯ ಗುಣಮಟ್ಟ ನಿಯಂತ್ರಣ ವ್ಯವಸ್ಥೆ, ಪ್ರಯೋಗಶಾಲೆ, ಸತತ ವಿದ್ಯುತ್ ಸರಬರಾಜು, ನೀರು ಸರಬರಾಜು, ರಸ್ತೆ ಸೌಲಭ್ಯ ಇತ್ಯಾದಿಗಳು ಫುಡ್‌ಪಾರ್ಕ್ ಪ್ರತಿಷ್ಠಾನದಡಿ ಬರುತ್ತವೆ. ಈ ಆಹಾರ ಸಂಸ್ಕರಣ ಪಾರ್ಕುಗಳಿಂದ ಉದ್ಯೋಗ

ಲಭ್ಯತೆ ಅಲ್ಲದೆ, ಭಾರಿ ಉದ್ಯಮಗಳ ಬೇಡಿಕೆಗಳು ಒಂದೆಡೆ; ಸಣ್ಣ, ಮಧ್ಯಮ ಹಾಗು ಮೂಲ ಕೃಷಿ ಉತ್ಪನ್ನಗಳ ಪೂರೈಕೆ ಇನ್ನೊಂದೆಡೆ, ಇವುಗಳ ನಡುವೆ ಚಾಲನ ಶಕ್ತಿಯಾಗಿ ಕೆಲಸ ಮಾಡಲನುಕೂಲವಾಗುತ್ತದೆ.

ಕರ್ನಾಟಕ ಸರ್ಕಾರವು ತೋಟಗಾರಿಕಾ ಬೆಳೆಗಳ ಜಿಲ್ಲೆಗಳನ್ನು ಗುರುತಿಸಿ, ತೋಟಗಾರಿಕಾ ವಾಣಿಜ್ಯ ಬೆಳೆಗಳನ್ನು ಬೆಳೆಯಲು ಎಲ್ಲ ಬಗೆಯ ಸವಲತ್ತುಗಳನ್ನು ಪ್ರಕಟಿಸಿದೆ. ಇದಲ್ಲದೆ ಕಾಫಿ ಬೆಲೆ ಕುಸಿತದಿಂದ ಕಾಫಿ ಬೆಳೆಗಾರರು ಪರ್ಯಾಯ ಕಂಡುಕೊಳ್ಳಲು ವೆನಿಲ್ಲಾ, ಆಂಥೋರಿಯಂ, ಶುಂಠಿ, ಕಾಳು ಮೆಣಸು, ಪಚೋಲಿ, ಗ್ಲೋರಿಯೇಸ, ಹಿಪ್ಪಳಿ, ಸಿಟ್ರೋನೆಲ್ಲಾ ಹುಲ್ಲು, ಪಾಮರೋಸ ಹುಲ್ಲು, ಲೆಮನ್ ಗ್ರಾಸ್ ಇತ್ಯಾದಿ ಪರ್ಯಾಯ ಬೆಳೆ ಬೆಳೆಯಲು ನೆರವನ್ನು ಕೇಂದ್ರದ ಯೋಜನೆಯಡಿ ಪ್ರಕಟಿಸಿದೆ. ಇದಲ್ಲದೆ ನೆರಳುಭಾವಣಿ ಯೋಜನೆ, ಹನಿನೀರಾವರಿ ಇತ್ಯಾದಿ ಸೌಕರ್ಯಗಳನ್ನು ಒದಗಿಸಿ ಆರ್ಥಿಕ ಶಕ್ತಿ ಗಟ್ಟಿಗೊಳ್ಳಲು ಮಾಡಿದೆ. ತೆಂಗಿಗೆ ನುಸಿಪೀಡೆ ಬಡಿದು ತತ್ತರಿದ್ದ ತೆಂಗಿನ ಬೆಳೆಗಾರರಿಗೆ ವಿಶೇಷತ: ಹಿತಕರ ಉಷ್ಣಾಂಶವಿರುವ ಪ್ರದೇಶಗಳಲ್ಲಿ ಆರ್ಥಿಕ ಬೆಳೆ ಶೋಧವಾಗಿ ವೆನಿಲ್ಲಾ ಕಾಣಿಸಿಕೊಂಡಿರುವುದು ಒಂದು ವರದಾನ. 20 ವರ್ಷಗಳ ಕಾಲ ಇಳುವರಿ ನೀಡಬಲ್ಲ ಆ ಬೆಳೆಗೆ ಜನತ್ತಿನಾದ್ಯಂತ ಬೇಡಿಕೆ ಹೆಚ್ಚಿದೆ. ಚಾಕೋಲೇಟ್, ಐಸ್‌ಕ್ರೀಮ್ ಇತ್ಯಾದಿ ತಯಾರಿಕೆಯ ಉದ್ಯಮಗಳಲ್ಲಿ ರಾಸಾಯನಿಕ ವೆನಿಲ್ಲಾ ಬಳಸಲಾಗುತ್ತಿತ್ತು. ಈಗ ಸಾವಯವ ಕೃಷಿಯಿಂದ ಸ್ವಾಭಾವಿಕವಾಗಿ ಬೆಳೆಯುವ ವೆನಿಲ್ಲಾಗೆ ಪ್ರಾಧಾನ್ಯತೆ ಒದಗಿದೆ. ಇದು ನೆರಳಿನ ಆಸರೆಯಲ್ಲಿ ಬೆಳೆಯುವ ಬೆಳೆ. ತೆಂಗು ಮತ್ತು ಅಡಿಕೆ ಬೆಳೆಗಾರರು ಇದನ್ನೂ ಬೆಳೆಯಲು ಶುರುಮಾಡಿರುವಲ್ಲಿ ರಫ್ತು ವಲಯ ಯೋಜನೆ ಜಾರಿಗೆ ಬಂದರೆ ಕಂಗೆಟ್ಟ ರೈತರು ಬದುಕಿಕೊಂಡಾರು. ಯೋಜನೆ ಅನುಷ್ಠಾನದ ಬಗ್ಗೆ ಕರ್ನಾಟಕ ಕೃಷಿ ಉತ್ಪನ್ನ ರಫ್ತು ನಿಗಮವು ವೆನಿಲ್ಲಾ ಅಭಿವೃದ್ಧಿ ಟ್ರಸ್ಟ್‌ನಂತೆ ರೈತ ಸಮುದಾಯದೊಡನೆ ಪ್ರಯತ್ನ ಕಾತುರವಾಗಿದೆ, ಎಂಬುದು ತಿಳಿದು ಬಂದಿದೆ. ಇದು ಸಾಂತ್ವನ ಹಾದಿಯಲ್ಲಿ ಕಾಣಬರುವ ಒಂದು ಸತ್‌ಪ್ರಯತ್ನವೆ.

**'ರೈತ ಕಾಯಕ ಕೆರೆ** ಎಂಬ ಕೆರೆಗಳನ್ನು ಪುನಶ್ಚೇತನಗೊಳಿಸುವ ಯೋಜನೆಯಲ್ಲಿ ಹೋಬಳಿಗೊಂದು ಕೆರೆ ಹೂಳೆತ್ತುವ ಕಾರ್ಯಕ್ಕೆ 195 ಕೋಟಿ ರೂ.ಗಳಲ್ಲಿ ಸದ್ಯ 30 ಕೋಟಿ ರೂ.ಗಳನ್ನು ಒದಗಿಸಿದೆ. ಒಟ್ಟು 745 ಕೆರೆಗಳ ಹೂಳು ತೆಗೆಯುವ ಕಾರ್ಯಕ್ರಮವಿಲ್ಲಿದೆ. ಇದರಲ್ಲಿ ಕರ್ನಾಟಕ ನೀರಾವರಿ ನಿಗಮದ ಭಾಗ 20 ಕೋಟಿ. ರಾಜ್ಯ ಸರ್ಕಾರದ ಭಾಗ 10 ಕೋಟಿ ರೂ. ಆರಂಭಕ್ಕಿದೆ. ಉಳಿದದ್ದು

ನಬಾರ್ಡ್ ಭರಿಸುತ್ತದೆ. ಕೆರೆಯ ಹೂಳೆತ್ತುವ ಖರ್ಚಿನ ಶೇಕಡ 15 ಭಾಗವನ್ನು ಹಣ ಮತ್ತು ಶ್ರಮದಾನದ ಮೂಲಕ ಆ ಪ್ರದೇಶದ ರೈತರು ಭರಿಸಬೇಕು. ಈ ರೈತ ಕಾಯಕಕೆರೆ ಯೋಜನೆ ರೈತರಿಂದ ರೈತರಿಗಾಗಿ ರೈತರೇ ಪಾಲ್ಗೊಳ್ಳುವ ಗ್ರಾಮೀಣ ಪ್ರಜಾಪ್ರಭುತ್ವ ಯೋಜನೆಯಂತಿದೆ. ಇಲ್ಲಿ **ಸಣ್ಣ ನೀರಾವರಿ ನೀರು ಬಳಕೆದಾರರ ಸಂಘ**ವನ್ನು ರೂಪಿಸಿಕೊಂಡು, ನೀರು ಸರಬರಾಜು ಕಾಲುವೆ ವ್ಯವಸ್ಥೆ, ದುರಸ್ತಿಗಳನ್ನು ನಿರ್ವಹಿಸುವ ಹೊಣೆ ಹೊರಬೇಕು. ನೀರಿನ ದರ ಹಾಗೂ ಸೇವಾ ಶುಲ್ಕ ನಿಗದಿ ಮತ್ತು ವಸೂಲಿ, ರೈತರಿಗೆ ತರಬೇತಿಯನ್ನು ನೀರಿನ ಸಮರ್ಪಕ ಮತ್ತು ಮಿತಿವ್ಯಯದ ಉಪಯೋಗ ಕುರಿತು ನೀಡಬೇಕು. ಸಣ್ಣ ನೀರಾವರಿ ಇಲಾಖೆಗೆ ಸಹಕಾರಿ ನೀಡುವುದು, ಟ್ರಾಕ್ಟರ್, ನೇಗಿಲು ಸಾಲು, ಬೀಜ, ಗೊಬ್ಬರ, ಕ್ರಿಮಿನಾಶಕ ಹಾಗು ಕೃಷಿ ಉಪಕರಣಗಳನ್ನೂ ಸೂಕ್ತದರದಲ್ಲಿ ಒದಗಿಸಿಕೊಡುವುದು, ಕೃಷಿ ಉತ್ಪನ್ನಗಳನ್ನು ಯೋಗ್ಯ ಬೆಲೆಗೆ ಮಾರಾಟ ಮಾಡಲು ವ್ಯವಸ್ಥೆ, ಕೆರೆ, ಬ್ಯಾರೇಜ್‌ಗಳಲ್ಲಿ ಮೀನು ಸಾಕುವಿಕೆ ಮತ್ತು ಮಾರಾಟ ವ್ಯವಸ್ಥೆ, ಅಚ್ಚುಕಟ್ಟಿನ ಕೆರೆಗಳ ವಿವರಗಳ ಪ್ರದರ್ಶನ ಇತ್ಯಾದಿಗಳೆಲ್ಲದರ ಹೊಣೆ ಈ ಸಂಘಕ್ಕಿದೆ. ಇದರಲ್ಲಿ ನಿರಾವರಿ ಇಲಾಖೆಯ ಎಂಜನಿಯರ್ ಕೃಷಿ, ತೋಟಗಾರಿಕೆ, ಮೀನುಗಾರಿಕೆ, ಅರಣ್ಯ ಇಲಾಖೆ ಅಧಿಕಾರಿಗಳು, ಹೊಲಗಳ ಮಾಲೀಕರು, ಕೆರೆ ಇರುವ ಊರಿನ ವ್ಯಕ್ತಿ ಎಲ್ಲ ಸೇರಿ 9 ಜನರಿರುವ ಸಂಘವಿದಾಗಿದೆ. ಇದೊಂದು ರೀತಿ ಗ್ರಾಮಾಭಿವೃದ್ಧಿ ಚಾಲನಾ ಸಂಸ್ಥೆಯಾಗಿ ಕೆಲಸ ಮಾಡುತ್ತದೆ ಎನ್ನಬೇಕು. ಈ ನಿಟ್ಟಿನಲ್ಲಿ ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕಿನ ಕೃಷ್ಣಾತೀರದ ರೈತರು ಈ ಹಿಂದೆ ಸ್ವಯಂ ಶ್ರಮದಾನದ ಮೂಲಕ ಚಿಕ್ಕಪಡಸಲಗಿ ಬ್ಯಾರೇಜ್ ನಿರ್ಮಿಸಿದ ಘಟನೆ ಸಾರ್ವತ್ರಿಕ ವೇದ್ಯವಾಗಿದೆ. ಇಂಥ ಪ್ರಯತ್ನಗಳಿಗೆ ಉತ್ತೇಜನಗಳು ದೊರೆತಷ್ಟೂ ರೈತರ ಗಮನ ಸ್ವಯಂ ಗ್ರಾಮಾಭಿವೃರ್ದಧಿಯ ಕಡೆಗೆ ಹರಿಯುತ್ತದೆ. 'ಕರ್ನಾಟಕ ವಾರ್ತೆ'ಯ ರೀತ್ಯಾ, ಈ ಯೋಜನೆಯಡಿ 1500 ಕೆರೆಗಳವ ಹೂಳೆತ್ತುವ ಕಾಮಗಾರಿ ಚಾಲನೆಗೊಂಡಿದೆ. 'ಕರ್ನಾಟಕ ವಿಕಾಸ' ಪತ್ರಿಕೆಯೂ ಇದನ್ನೆಲ್ಲ ಸಚಿತ್ರ ವಿವರಿಸಿದೆ.

ಆಂಧ್ರದಲ್ಲಿ 'ರೈತ ಬಜಾರ್' ಇರುವಂತೆ ಕರ್ನಾಟಕದಲ್ಲಿ 'ರೈತಸಂತೆ' ಯೋಜನೆಯನ್ನು ಜಾರಿಗೆ ತರಲಾಗಿದೆ. ಮಧ್ಯವರ್ತಿಗಳ ಹಾವಳಿಯಿಂದ ರೈತರನ್ನು ಮುಕ್ತವಾಗಿಸಲು ಬೆಂಗಳೂರು ಹಾಗು ಹುಬ್ಬಳ್ಳಿಯಲ್ಲಿ ಈ ಯೋಜನೆಯನ್ನು ಪ್ರಾಯೋಗಿಕವಾಗಿ ಸರ್ಕಾರ ಆರಂಭಿಸಿದೆ. ಆದುದರಿಂದ ಬೆಂಗಳೂರಿನ ಯಲಹಂಕದಲ್ಲಿ 90 ಲಕ್ಷ ರೂ ವೆಚ್ಚದಲ್ಲಿವ ರಾಜ್ಯದ ಪ್ರಪ್ರಥಮದ ಸುಸಜ್ಜಿತ

ರೈತಸಂತೆ ಉದ್ಘಾಟನೆಯೂ ನಡೆದಿದೆ. ದೂರದ ತಮ್ಮ ಹಳ್ಳಿಯಿಂದ ತಂದ ಉತ್ಪನ್ನವನ್ನು ಅದೇ ದಿನ ಮಾರಾಟ ಮಾಡಲಾಗದಿದ್ದರೆ ದಾಸ್ತಾನಿಡಲು ಮಾರುಕಟ್ಟೆಯಲ್ಲಿ ವ್ಯವಸ್ಥೆ ನೇರ್ಪುಗೊಂಡಿಲ್ಲ. ಈ ಬಗೆಯ ಸಮಸ್ಯೆಗೆ ಒಂದು ಪರಿಹರ ರೈತ ಸಂತೆಯೆ. ಮೊದಲು ಬಂದು ಗುರುತಿನ ಚೀಟಿ ಪಡೆದ ರೈತರಿಗೆ ಆದ್ಯತೆ ಕೊಟ್ಟು ಸಂತೆ ಸ್ಥಳಾವಕಾಶವನ್ನು ಮಾಡಲಾಗುತ್ತದೆ. ಸರ್ಕಾರವು ನಬಾರ್ಡ್ ನೆರವಿನಿಂದ ಒದಗಿರುವ ಹಣದಿಂದ, ಇನ್ನೂರಕ್ಕೂ ಹೆಚ್ಚಿನ ಸಂತೆಗಳನ್ನು, ವಿಶೇಷತಃ ಗ್ರಾಮೀಣ ಸಂತೆಗಳ ಸಮಗ್ರ ಅಭಿವೃದ್ಧಿ ಮಾಡುತ್ತಿದೆ. ಕೃಷಿ ಮಾರಾಟ ವಾಹಿನಿ ವೆಬ್‌ಸೈಟಿನಿಂದ ರೈತರಿಗೆ ಕೃಷಿ ಉತ್ಪನ್ನಗಳ ಬೆಲೆಯನ್ನು ಮಾರುಕಟ್ಟೆಗಳಲ್ಲಿ ಸುಲಭವಾಗಿ ತಿಳಿಯುವಂತೆ ಮಾಡಿದೆ. ರೈತರು ಬೆವರು ಸುರಿಸಿ ಬೆಳೆದ ಧಾನ್ಯ, ತರಕಾರಿ ಇತ್ಯಾದಿ ಎಲ್ಲ ಕೃಷಿ ಉತ್ಪನ್ನಗಳನ್ನು ನೇರವಾಗಿ, ನ್ಯಾಯಬೆಲೆ ನಿರ್ಧರಿಸಿ ಮಾರುವ ಅವಕಾಶ ಅವರಿಗೆ ಇದರಿಂದ ಸಿಕ್ಕಂತಾಗಿದೆ. ಗ್ರಾಮೀಣ ಮಾರುಕಟ್ಟೆ ಎಂದರೆ ವಾರಕ್ಕೊಮ್ಮೆ ಹಳ್ಳಿಗಳಲ್ಲಿ ಸೇರುತ್ತಿದ್ದ ಸಂತೆಯೆ ಆಗಿದೆ. ಅಂತಾಗಿ ಶನಿವಾರಸಂತೆ, ಸೋಮವಾರಪೇಟೆ ಇತ್ಯಾದಿ ಹೆಸರುಗಳು ಬರಲೂ ಕಾರಣವಾಯಿತು. ಅಂತಾಗಿ ಹಳ್ಳಿಯ ಸಂತೆ ಇಂದಿಗೂ ಗ್ರಾಮೀಣ ಮಾರುಕಟ್ಟೆಯೆ. ಈ ಪಾರಂಪರಿಕ ರೂಪದ ಸಂತೆಯೆ ಇಂದು ಕೃಷಿ ಕ್ಷೇತ್ರದಲ್ಲಿ ಭರಾಟೆಯ ಪೈಪೋಟಿಯನ್ನು ಎದುರಿಸಲು ಸಿದ್ಧವಾಗಿದೆ; ರೈತರಿಗಾಗಿ ಮಾಹಿತಿ ತಂತ್ರಜ್ಞಾನದ ಬಳಕೆಯ ಕಂಪ್ಯೂಟರ್ ಜಾಲದ ನಿರ್ಮಾಣದ ಮೂಲಕ ಸ್ಪರ್ಧಾತ್ಮಕವಾಗಿ, ಸ್ವಾವಲಂಬಿ ಸಂಕೇತವಾಗಿ ನಗರಗಳ ಹೆಬ್ಬಾಗಿಲ ಬಳಿ 'ರೈತ ಸಂತೆ' ಎಂಬ ಹೆಸರಿನಲ್ಲಿ ಅಸ್ತಿತ್ವಗೊಳ್ಳಲಾರಂಭಿಸಿದೆ.

ರೈತರ ಸಾಗುವಳಿ, ಒಕ್ಕಲುತನ ಇತ್ಯಾದಿ ವಿವರಗಳನ್ನು ಗ್ರಾಮೀಣ ಕೃಷಿಕರಿಗೆ ತಕ್ಷಣ ಒದಗಿಸುವ ದೃಷ್ಟಿಯಿಂದ 176 ತಾಲೂಕುಗಳಲ್ಲಿ **'ಭೂಮಿ'** ಯೋಜನೆ ಎಂದು ಜಾರಿಗೆ ತರಲಾಗಿದೆ. ಇದೊಂದು ಭೂ ದಾಖಲೆಗಳನ್ನು ಗಣಕೀಕರಿಸುವ ಬೃಹತ್ ಯೋಜನೆಯಾಗಿದೆ. ರೈತರ ಪಹಣಿಗಳು ಈ ಯೋಜನೆಯ ರೀತ್ಯ ಕಂಪ್ಯೂಟರೀಕರಣಗೊಂಡಿರುವುದರಿಂದ ಅವರು ಪಹಣಿಗಾಗಿ ದಿನಗಟ್ಟಲೆ ರೀತ್ಯ 67 ಲಕ್ಷ ರೈತರಿಗೆ ಸೇರಿದ 2 ಕೋಟಿ ದಾಖಲೆಗಳು ರಾಜ್ಯದ ತಾಲ್ಲೂಕುಗಳ ಕಂಪ್ಯೂಟರ್‌ಗಳಲ್ಲಿ ದಾಖಲಾಗಿವೆ. ಮಧ್ಯವರ್ತಿಗಳ ಹಾವಳಿ, ಅನಗತ್ಯ ಕಟ್ಟಳೆಗಳ ಕಿರಿಕಿರಿ ಇದರಿಂದ ತಪ್ಪಿದೆ. ರೈತರ ಮನೆಬಾಗಿಲಿಗೆ ಉಚಿತವಾಗಿ ಕಳುಹಿಸುವ ಈ ಗಣಕೀಕೃತ ದಾಖಲೆ ಕರ್ನಾಟಕ ವಾರ್ತೆಯ ರೀತ್ಯಾ ರೈತ ಜನಸಮುದಾಯಕ್ಕೆ

ಒದಗಿರುವ ಮಾಹಿತಿ ತಂತ್ರಜ್ಞಾನ ಯೋಜನೆ, ಆಗಿದೆ. ಭೂದಾಖಲೆಗಳ ತಿದ್ದುವಿಕೆಗೆ ಅವಕಾಶವಿಲ್ಲ. ಅಧಿಕಾರಿಗಳ ಮರ್ಜಿ ಇಲ್ಲದೆಯೆ ಕಿಯೋಸ್ಕನಲ್ಲಿ ದಾಖಲೆ ಪತ್ರ ನೋಡುವ ಅವಕಾಶ ಇಲ್ಲಿದೆ. ಕೃಷಿ ಸಾಲವು ಸುಲಭವಾಗಿ, ಬೇಗನೆ ಒದಗುವ ಅನುಕೂಲದ ಬ್ಯಾಂಕ್ ಸಂಪರ್ಕದ ವ್ಯವಸ್ಥೆ ಭೂವಿವಾದ ಪ್ರಕರಣಗಳ ಶೀಘ್ರ ವಿಲೇವಾರಿಗೆ ನ್ಯಾಯಾಲಯ ಸಂಪರ್ಕ ಕಲ್ಪಿಸುವ ಯೋಜನೆ ಇದಾಗಿದೆ.

ರೈತರು ಸಾಗುವಳಿ ಮಾಡುವಾಗ, ರೈತ ಬೆಳೆದ ಬೆಳೆ ಸಾಗಿಸುವಾಗ, ಕೃಷಿ ಮಾರುಕಟ್ಟೆಯಲ್ಲಿ ಅಪಘಾತಕ್ಕೀಡಾದಾಗ, ಅಂಗವಿಕಲರಾದಾಗ ಪರಿಹಾರವಾಗಿ ಅಂಥ ರೈತರ ಕುಟುಂಬಗಳಿಗೆ ಆರ್ಥಿಕ ನೆರವನ್ನು ನೀಡಲು 6 ಸಾವಿರದಿಂದ 25 ಸಾವಿರದವರೆಗೆ **'ರೈತ ಸಂಜೀವಿನಿ'** ಎಂಬ ವಿಮಾಯೋಜನೆಯನ್ನು ಜಾರಿಗೆ ಕೊಟ್ಟಿದೆ. ಕೃಷಿ ಉತ್ಪನ್ನಗಳನ್ನು ಬೆಲೆ ಕುಸಿದಾಗ ಕೃಷಿ ಮರುಕಟ್ಟೆಗಳಲ್ಲಿ ಅಡವಿಟ್ಟು ಸೂಕ್ತ ಬೆಲೆ ಬಂದಾಗ ಮಾರಲು ಅಡಮಾನ ಸಾಲ ಯೋಜನೆಯನ್ನು ರಾಜ್ಯ ಕೃಷಿ ಮಾರಾಟ ಇಲಾಖೆ ಜಾರಿಗಿಟ್ಟಿರುವುದೂ, ತಿಳಿದು ಬರುತ್ತದೆ (ವಾಣಿಜ್ಯ ವಿಜಯ, 10.7.2002). ಕಡಿಮೆ ಬಡ್ಡಿ ದರದಲ್ಲಿ ಸಾಲವನ್ನು ಪಡೆಯಲನುಕೂಲಿಸುವ ಕಿಸಾನ್ ಕ್ರೆಡಿಟ್ ಕಾರ್ಡ್‌ಗಳನ್ನು ಬಳಸುವ ರೈತರ ಸಂಖ್ಯೆ ಕಡಿಮೆ ಇದೆ. ಸಹಕಾರಿ ಬ್ಯಾಂಕ್ ಸರ್ಕಾರಿ ಹಾಗು ಖಾಸಗಿ ಹಣಕಾಸು ಸಂಸ್ಥೆಗಳಲ್ಲಿ ರೈತರಿಗೆ ಕಡಿಮೆ ಬಡ್ಡಿದರದಲ್ಲಿ ಸುಲಭವಾಗಿ ಸಾಲ ಸೌಲಭ್ಯ ಪಡೆಯಲು ಅನುವಾಗುವಂತೆ ಮುಂದಿನ ವರ್ಷದಿಂದ ಎಲ್ಲ ರೈತರಿಗೂ **'ಕಿಸಾನ್ ಕ್ರೆಡಿಟ್ ಕಾರ್ಡ್'** ನೀಡುವ ಯೋಜನೆ ಆರಂಭಿಸುವ ಬಗ್ಗೆ ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರು ಹೇಳಿರುವ ಬಗ್ಗೆ ವರದಿಯಾಗಿದೆ. **'ಕೃಷಿ ಪಾಸ್ ಪುಸ್ತಕ'** ನೀಡಿಕೆಯೂ ಇದೆ.

2004ನೇ ವರ್ಷದಲ್ಲಿ ಸ್ಥಳೀಯ ಸಂಪನ್ಮೂಲ, ಮಾರುಕಟ್ಟೆ ವ್ಯವಸ್ಥೆ, ಮಣ್ಣಿನ ಲಕ್ಷಣ, ಹವಾಮಾನ ಉದ್ಯೋಗ ಸೃಷ್ಟಿ ಇವುಗಳಿಗನುಣವಾಗಿ ಬೆಳೆ ತೆಗೆಯುವುದು; ಅರ್ಧಭಾಗದಲ್ಲಿ ಹೈನುಗಾರಿಕೆ, ಜೇನುಸಾಕಾಣಿಕೆ ಕೋಳಿ ಸಾಕಾಣಿಕೆ, ಸಾವಯವ ಕೃಷಿ ಇತ್ಯಾದಿಗಳಿಗೆ ಉತ್ತೇಜನ ನೀಡಿ ಗ್ರಾಮೀಣ ಯುವ ಸಮುದಾಯವು ಸ್ವಯಾಭಿವೃದ್ಧಿ ಹೊಂದುವ ತರಬೇತಿ ನೀಡಿಕೆ ಇತ್ಯಾದಿಗಳ ಗುರಿ ಇತ್ಯಾದಿಗಳ ಗುರಿ ಇರುವ **'ಜಿಲ್ಲಾ ಕೃಷಿ ನೀತಿ'** ಯ ಯೋಜನೆಯನ್ನು ತಜ್ಞರಿಂದ ಸಿದ್ಧಪಡಿಸಿ ಜಾರಿಗೆ ತರುವ ಸರ್ಕಾರದ ಪ್ರಯತ್ನವೂ ನಡೆಯುತ್ತಿರುವ ಬಗ್ಗೆ ತಿಳಿದು ಬಂದಿದೆ. ನೀರು ಬಳಕೆದಾರರ ಸಹಕಾರಿ ಸಂಘಗಳ ಮೂಲಕ ಅಭಿವೃದ್ಧಿ ಕಾಮಗಾರಿ ಹಾಗು ನೀರು ಬಳಕೆಯ ಹಕ್ಕು ಚಾಲನೆಯ ಮಾಡಲು ಕೃಷ್ಣಾ–ಕಾಡಾ ಅಚ್ಚುಕಟ್ಟು

ಪ್ರಾಧಿಕಾರವೂ ತನ್ಮಯವಾಗಿರುವುದು ಕೃಷ್ಣಾ ಮೇಲ್ದಂಡೆ ಯೋಜನೆಯಲ್ಲಿ ನೀರಿನ ಫಲಾನುಭವಿಗಳಿಗೆ ಒದಗಿದ ನೆಮ್ಮದಿ ಎನ್ನಬೇಕು; ಸತತ ಬರದಿಂದ ತತ್ತರಿಸಿರುವ ರಾಜ್ಯಕ್ಕೆ 'ಪ್ರಾಜೆಕ್ಟ್ ವರುಣಾ' ಮೋಡ ಬಿತ್ತನೆಯೂ ಒಂದು ಸೂಕ್ತ ಪ್ರಯತ್ನವೆ. ಅದರಿಂದಾಗಿ ಅನೇಕ ಕಡೆ ಮಳೆ ಬಿದ್ದಿದೆ.

1960ರಲ್ಲಿ ಭಾರತೀಯ ರೈತರು ರಾಸಾಯನಿಕ ಗೊಬ್ಬರಕ್ಕೆ ಮನಗೊಟ್ಟರು. 1966–67 ರಲ್ಲಿ ದೇಶದಲ್ಲಿ 11 ಲಕ್ಷ ಟನ್ ಗೊಬ್ಬರ ಬಳಕೆಯಾಗುತ್ತಿದ್ದು ಅಲ್ಲಿಂದ 2 ವರ್ಷಗಳಿಂದ 500 ಲಕ್ಷ ಟನ್‌ಗೆ ಈ ಗೊಬ್ಬರದ ಬಳಕೆ ಜಿಗಿದಿತು. ಗೊಬ್ಬರ ಕಾರ್ಖಾನೆಗಳು ಹೆಚ್ಚಿ ಇಂದು ಆ ಕಾರ್ಖಾನೆಗಳ ರಾಸಾಯನಿಕ ಗೊಬ್ಬರವಿಲ್ಲದೆ ಸಾಗುವಳಿ ನಡೆಯುವಂತಿಲ್ಲ ಎಂದಾಗಿ ಅಲ್ಲಿಂದ ಜೈವಿಕ ತಂತ್ರಜ್ಞಾನಕ್ಕೆ ಜಿಗಿದಿದೆ. ಹಸಿರು ಕ್ರಾಂತಿಯ ಅವಸರದಲ್ಲಿ ಸಾವಯವ ಕೃಷಿಯ ವಿಸ್ತರಣಾ ಕಾರ್ಯ ಹಿಂದೆ ಬಿತ್ತು. ಇಂದು ಕೆಲವೆಡೆ ರೈತರು ಸಾವಯವ ಕೃಷಿಗೆ ತೊಡಗುತ್ತಿರುವುದು, ಹಾಸನ, ಚಾಮರಾಜನಗರ, ಚನ್ನಪಟ್ಟಣ, ಮೈಸೂರು ದಾವಣಗೆರೆ ಮುಂತಾದ ಕಡೆ ಕಾಣಬರುತ್ತಿದೆ. 'ತುಮಕೂರು ಜಿಲ್ಲಾ ಸುಸ್ಥಿರ ಕೃಷಿಕರ ಸಂಘಟನೆ'ಯು ಕೃಷಿ ವಿಸ್ತರಣೆಯ ಅಂಗವಾಗಿ ಸಹಜ ಮತ್ತು ಸಾವಯವ ಕೃಷಿ ಪದ್ಧತಿಗಳನ್ನು ಅಳವಡಿಸಿಕೊಂಡು ತಿಂಗಳ 3ನೇ ಭಾನುವಾರ ರೈತರ ಸಭೆ ಸೇರಿಸಿ ಕೃಷಿ ಕುರಿತ ಚರ್ಚೆ, ತಮ್ಮಲ್ಲಿನ ಅಪರೂಪದ ಬೀಜ ಮತ್ತು ಸಸಿಗಳನ್ನು ವಿನಿಮಯ ಮಾಡಿಕೊಳ್ಳುವಂತೆ, ಕಡಿಮೆ ಉತ್ಪನ್ನ ವೆಚ್ಚದಲ್ಲಿ ಹೆಚ್ಚು ಆದಾಯ ಒದಗಿಸುವ ಕೃಷಿ ತಂತ್ರಜ್ಞಾನಗಳತ್ತ ಹಾಗು ಆಗ್ರೋಫಾರೆಸ್ಟರಿಯತ್ತ ಗಮನಕೊಡುವಂತೆ ರೈತರನ್ನೂ ಉತ್ತೇಜಿಸುತ್ತಿರುವ ಬಗ್ಗೆ ಶ್ರೀ ಎಂ.ಎಸ್. ಕುಲಕರ್ಣಿ ಅವರು 'ರೈತರಿಂದ ರೈತರಿಗೆ ಕೃಷಿ ವಿಸ್ತರಣೆಗೆ' ಎಂದು ತಮ್ಮ ಲೇಖನವೊಂದರಲ್ಲಿ ಗಮನ ಸೆಳೆದಿದ್ದಾರೆ (ಪ್ರಜಾವಾಣಿ.15.8.2001). ಕೃಷಿ ವಿಜ್ಞಾನಿ ಡಾ. ಆರ್. ದ್ವಾರಕಾನಾಥ್ ಅವರು, ಸುಮಾರು 30 ವರ್ಷಗಳ ಕಾಲ ರಾಸಾಯನಿಕ ಪೋಷಕಾಂಶಗಳನ್ನು ಬಳಸಿಬಳಸಿ ಭೂಮಿಯಲ್ಲಿ ಸತ್ವವೇ ಇಲ್ಲವಾಗಿದೆ. ಉತ್ಪಾದನೆ ಸ್ಥಗಿತಗೊಳ್ಳಲು ಭೂಮಿಯಲ್ಲಿನ ದಣಿವು ಕಾರಣವಾಗಿದೆ. ಈ ಭೂಮಿಯಲ್ಲಿ ಒಂದೇ ಸಮನೆ ಭತ್ತ ಬೆಳೆಯುವುದಕ್ಕಿಂತ, ಅರ್ಧ ಭಾಗ ಭತ್ತ, ಉಳಿದ ಅರ್ಧಭಾಗದಲ್ಲಿ ಪರ್ಯಾಯ ಬೆಳೆ ಬೆಳೆಯಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತ ಮಾಡಿದ್ದಾರೆ (ಕನ್ನಡ ಪ್ರಭ 18.12.2001). ಈ ಮಾತು ಮೇಲಿನ ಕೃಷಿಕರ ಪ್ರಯತ್ನಗಳನ್ನು ಎತ್ತಿ ಹಿಡಿಯುವಂಥ ಬೆನ್ನುಡಿಯಂತಿದೆ.

ದಾವಣಗೆರೆ ಜಿಲ್ಲೆ ಹರಪನಹಳ್ಳಿ ತಾ. ಹಲವಾಗಲು ಗ್ರಾಮದ 12 ಜನ ರೈತರು: 13 ಎಕರೆ ಜಮೀನಿನಲ್ಲಿ ಮೆಣಸಿನಕಾಯಿ ಬೆಳೆಯ ಅಧಿಕ ಇಳುವರಿ ಬರುವುದಾಗಿ ಹೇಳಿ ಕಳಪೆ ಬೀಜ ವಿತರಿಸಿದ್ದ ಅಗ್ರೋ ಬಯೋಕೆಮಿಕಲ್ಸ್ (ಇಂಡಿಯಾ ಪ್ರೈ.ಲಿ.) ಕಂಪೆನಿಯ ಆಶ್ವಾಸನೆಯಂತೆ ಇಳುವರಿ ಬರದ ಕಾರಣ ಆ ರೈತರು ಬೆಳೆದ ಬೆಳೆ ನಷ್ಟಕ್ಕೆ 92 ಸಾವಿರ ರೂ. ಪರಿಹಾರ ಕೇಳಿದಾಗ, ಕಂಪೆನಿಯು ನೆಪ ಹೇಳಿ ಪರಿಹಾರ ನೀಡುವುದಿಲ್ಲ ಎಂದಿತು. ಆಗ **ರಾಜ್ಯ ರೈತಸಂಘವು** ಕಂಪೆನಿ ಕಛೇರಿ ಎದುರು **ಧರಣಿಯನ್ನು** ಆ ರೈತರೊಡನೆ ನಡೆಸಿತು. ರೈತಸಂಘದ ಮುಖಂಡರ ಜೊತೆ ಮಾತುಕತೆಯ ನಂತರ ಕಂಪೆನಿಯು 92 ಸಾವಿರ ರೂ.ಗಳ ಪರಿಹಾರವನ್ನು ಆ ರೈತರಿಗೆ ಕೊಟ್ಟಿತು. (ಕ.ಪ್ರ.ವಾರ್ತೆ.14.12.2001). ರೈತರ ಸಂದರ್ಭದಲ್ಲಿ ಗ್ರಾಹಕ ಕಾಯ್ದೆ ಅನ್ವಯವೆಂದರೆ ಕೃಷಿ ಬಿತ್ತನೆಗೆ ಬಳಸುವ ಬೀಜವನ್ನು ಖರೀದಿಸುವಲ್ಲಿ ಆಗುತ್ತದೆ. ಮಾರಿದವರು ಕೊಟ್ಟ ಬೀಜ ಕಳಪೆ ಎಂದು ಸಾಧಿಸಬೇಕಾದರೆ ಮೊದಲೇ ಸೂಕ್ತ ರಸೀದಿ, ಬಿತ್ತನೆ ಬೀಜದ ಬ್ಯಾಚ್ ಸಂಖ್ಯೆಯ ನಮೂದು ಅದರಲ್ಲಿರಬೇಕು. ಬೀಜವನ್ನು ಪರೀಕ್ಷೆ ಮಾಡಿಸಿ ಅಧಿಕೃತ ಪ್ರಮಾಣ ಪತ್ರ ಪಡೆದಿರಬೇಕು. ಹೀಗೆಯೇ ಕ್ರಿಮಿನಾಶಕ, ರಸಗೊಬ್ಬರ ಇತ್ಯಾದಿಗಳಲ್ಲಿ ನಕಲಿ ಮಾಲು ಎಂದು ಸಾಧಿಸಲೂ ಪ್ಯಾಕೆಟ್ ಮೇಲೆ ಮುದ್ರಿಸಿರುವ ಮಾಹಿತಿಯ ತಿಳುವಳಿಕೆ ಬೇಕು. ಸರಕಿನ ಮೇಲೆ ಭಾರತೀಯ ಮಾನಕ ಬ್ಯೂರೋ ಮತ್ತು ಆಗ್‌ಮಾರ್ಕ್ ಗುರುತು ಇರುವುದನ್ನೇ ಖರೀದಿಸಿರಬೇಕು. ಟ್ರಾಕ್ಟರ್ ಕಂಪೆನಿಯೂ ವಿಳಂಬವಾಗಿ ವಿತರಿಸುತ್ತ ಹೆಚ್ಚು ಬೆಲೆ ಕೇಳಿದರೆ ಅದು ಕಾನೂನು ಬಾಹಿರ ಎಂದು ಶ್ರೀ ವೈ.ಜಿ.ಮುರುಳೀಧರ ಅವರು ಎಚ್ಚರಿಸಿ, ಇಂಥ ಸಂದರ್ಭದಲ್ಲೆಲ್ಲ ಗ್ರಾಹಕ ವೇದಿಕೆಗೆ ಮನವಿಸಲ್ಲಿಸಿದರೆ ಕ್ರಮ ಕೈಗೊಳ್ಳುತ್ತದೆ ಎನ್ನುತ್ತಾರೆ. ರೈತರಿಗೆ ಒದಗುವ ಗ್ರಾಹಕ ಕಾಯ್ದೆಯ ಸೌಲಭ್ಯ ಇದಾಗಿದೆ. ಈ ಮೇಲಿನ ಸಂದರ್ಭಗಳ ಜೊತೆಗೆ 'ರೈತ ಸಂಪರ್ಕ' ಯೋಜನೆಯನ್ನು ಗಮನಿಸಿದರೆ, ಅಧಿಕಾರಿ ವಲಯ ಹಾಗು ಶಾಸಕರ ಉಭಯ ಸದನದ ಚರ್ಚೆಗಳು, ರೈತಸಂಘಟನೆಗಳ ಪ್ರಯತ್ನಗಳೆಲ್ಲವೂ ರೈತರ ಸಂಕಷ್ಟಗಳನ್ನು ಪರಿಹರಿಸುವ ಸಾಂತ್ವನ ಪ್ರಕ್ರಿಯೆಗಳೇ ಆಗಿವೆ.

ಅಧಿಕಾರಿಗಳಿಗೆ ಸರ್ಕಾರದ ನೀತಿಯನ್ನು ಅನ್ವಯಿಕವಾಗಿ ಜಾರಿಗೊಳಿಸಬೇಕಾದ ನಿಷ್ಠೆ, ಹೊಣೆ ಇರುತ್ತದೆ. ಕೆಲವಾರು ಅಧಿಕಾರಿಗಳು ತಪ್ಪು ಅಣೇವಾರಿ ಮಾಹಿತಿ ನೀಡಿರುವ ಕಾರಣ, ಹಣ್ಣು ವಾಣಿಜ್ಯ ಬೆಳೆಗಳ ಸಸಿ ಹಾಗು ಬಿತ್ತನೆ ಬೀಜ ಹಂಚಿಕೆಯಲ್ಲಿ ವಂಚಿಸಿರುವ ಕಾರಣ ಹಾಗು ವಿವಿಧ ಕಾರಣಗಳಿಂದ

ರೈತರನ್ನು ಸಂಕಷ್ಟಕ್ಕೀಡು ಮಾಡಿರುವುದನ್ನು ಶಾಸಕರು ಸದನಗಳಲ್ಲಿ ಮಾಡಿರುವ ಚರ್ಚೆ ಹಾಗು ಸುದ್ದಿ ಮಾಧ್ಯಮಗಳಿಂದ ತಿಳಿದು ಬರುತ್ತದೆ. ಆದರೆ ಅಧಿಕಾರಿಗಳಲ್ಲಿ ಪ್ರಾಮಾಣಿಕ ಕಾಳಜಿಯುಳ್ಳವರಿದ್ದಾರೆ, ನಿಷ್ಠರು ಇದ್ದಾರೆ. ಸಾಂದರ್ಭಿಕವಾಗಿ ಸಾರಾಸಾರ ವಿವೇಚನೆ ಇಲ್ಲದೆ ರೈತ ಸಂದರ್ಭಗಳಲ್ಲಿ ಕ್ರೂರವಾಗಿ ನಡೆದುಕೊಂಡು ಎಡವಿದವರೂ ಇದ್ದಾರೆ. ಎಡವಿದವರು ಸಾಮಾನ್ಯವಾಗಿ ಶಿಕ್ಷೆಯಿಂದ ಹೊರತಾಗಿಲ್ಲ. ಸಮಯಸ್ಫೂರ್ತಿ ಕೌಶಲ್ಯದಿಂದ ನಡೆದುಕೊಂಡವರು ಅಭಿನಂದಿಸಲ್ಪಡದೆ ಇಲ್ಲ. ಆದರೂ ಅವರ ಪರಿಸ್ಥಿತಿ ಎರಡೂ ಕಡೆ ಅಲಗು ಇರುವ ಕತ್ತಿಯ ಮೇಲೆ ನಡೆದಂತೆ ಇರುತ್ತದೆ. ಆದೇಶ ಮೀರಿದರೂ ಕಷ್ಟ, ಮೀರದಿದ್ದರೂ ಕಷ್ಟ ಎನ್ನುವಂತಿರುತ್ತದೆ. ಸರ್ಕಾರದ ಆಜ್ಞೆ ಪಾಲಿಸಬೇಕಾದ ಹೊಣೆ ಒಂದೆಡೆ. ರೈತ ಚಳುವಳಿಯ ಆಯಾಮಗಳಿಗೆ ಎದುರಾಗಬೇಕಾದ್ದು ಇನ್ನೊಂದೆಡೆ. ಇಂಥ ಸಂದರ್ಭಗಳಲ್ಲಿ ಅವರ ದಕ್ಷತೆ ಸಾಮರ್ಥ್ಯದ ಪರೀಕ್ಷೆ ಎಂದರೂ ಇಕ್ಕಟ್ಟಿನ ಪರಿಸ್ಥಿತಿಯೆ ಇರುತ್ತದೆ.

ಇದಕ್ಕೆ ಪ್ರೊ|| ಎಂ.ಡಿ. ನಂಜುಂಡಸ್ವಾಮಿ ಅವರ ಪ್ರತಿಕ್ರಿಯೆ ಎಂದರೆ: ಇಲ್ಲಿ ರೈತ ಚಳುವಳಿಯ ಅಧಿಕಾರಿಗಳ ಮೇಲೆ ಒತ್ತಡ ಎಂದರ್ಥವಲ್ಲ. ಕಾನೂನನ್ನು ಸರಿಯಾಗಿ ವ್ಯಾಖ್ಯಾನಿಸಲಿ. ನೇತ್ಯಾತ್ಮಕವಾಗಿ, ತಪ್ಪಾಗಿ ಅನ್ವಯಿಸಿ ರೈತರಿಗೆ ತೊಂದರೆ ಕೊಡುವುದಲ್ಲ, ಅಧಿಕಾರದ ಬಗೆ. ಕಾನೂನು ಸರಿಯಾಗಿಲ್ಲದಿದ್ದರೆ, ರೈತರ ಹಿತ ಕಾಯದಿದ್ದರೆ ಅದರ ವಿರುದ್ಧ ನಡೆಯುವುದೇ ಸತ್ಯಾಗ್ರಹ. ಕಾನೂನಿನ ಇತಿಮಿತಿಯನ್ನು ಪರಿಶೀಲಿಸಲು ಆಡಳಿತ ಕೇಂದ್ರದ ಎದುರೇ ನ್ಯಾಯಾಂಗ ಕೇಂದ್ರವಿದೆಯಲ್ಲ! ರೈತನದು ತಪ್ಪಿದ್ದರೆ ಅದು ನಿರ್ಧರಿಸುತ್ತದೆ. ದಾರಿ ತೋರಬೇಕಾದವರೇ ಅಧಿಕಾರ ಸ್ಥಾನದಿಂದ ಕಿರುಕುಳ ಕೊಟ್ಟರೆ ಹೇಗೆ ಸರಿ! ರೈತ ಕೊಡುವ ತೆರಿಗೆಗೆ ಸಮರ್ಪಕ ಸೇವೆ ಸಿಗಬೇಕಲ್ಲವೆ? ಸೇವೆ ಸಮರ್ಪಕವಿಲ್ಲದಿದ್ದಾಗ ತೆರಿಗೆಯನ್ನು ನಿರಾಕರಿಸಬೇಕಾಗುತ್ತದೆ. ಇದು ಅಧಿಕಾರವರ್ಗವನ್ನು, ಎಚ್ಚರಿಸುವ, ಪಳಗಿಸುವ ಕ್ರಮವಾಗಿದೆ. ಒಂದು ರೀತಿ Taming the bureocracy - ಕಿರುಕುಳದ ಎದುರು ಎದ್ದು ನಿಲ್ಲುವ ಪ್ರಯತ್ನ. ರೈತರಿಂದ ಲಂಚ ವಸೂಲಿ ಮಾಡಿಕೊಂಡ ಕೆಲವು ಭ್ರಷ್ಟ ಅಧಿಕಾರಿಗಳಿಂದ ರೈತ ಸಂಘಟನೆಗಳು ಮರುವಸೂಲಿ ಮಾಡಿ ರೈತರಿಗೆ ಕೊಡಿಸಿಕೊಟ್ಟಿವೆ. ಇದೆಲ್ಲ ಕಾನೂನನ್ನು ಕೈಗೆ ತೆಗೆದುಕೊಂಡದ್ದು ಎಂದು ನಾವು ಭಾವಿಸುವುದಿಲ್ಲ. ಒಂದು ಸಾಮಾಜಿಕ ಎಚ್ಚರಿಕೆ ಅಷ್ಟೆ. ಹೊಟ್ಟೆಯ ಹಸಿವು ಎಲ್ಲವನ್ನು ಮೀರಿ ನಡೆದು ಬಿಡುತ್ತದೆ. ಇದನ್ನು ಭ್ರಷ್ಟಾಚಾರದ ಅಧಿಕಾರಿಗಳು ಗಮನಿಸಬೇಕು, ಎಂದೆಲ್ಲ ಶ್ರೀ ಎಂ.ಡಿ.ಎನ್. ಅವರ ಪ್ರತಿಕ್ರಿಯೆಯಲ್ಲಿ ವ್ಯಕ್ತವಾಗಿದೆ. ಅಂದರೆ ಅಧಿಕಾರಿಗಳಿಗೆ ಸಮಯ ವರ್ತನಾ ಕೌಶಲ್ಯ ಅವರಿಗೊಂದು ರಕ್ಷಣೆ; ಪ್ರಾಮಾಣಿಕತೆ,

ಮಾನವೀಯ ನಿಷ್ಠೆ, ಸೇವಾಕಾಳಜಿ ಅವರಿಗಿರುವ ಹೊಣೆ, ಎಂದಾಗುತ್ತದೆ. ಇವೆಲ್ಲ ಸೂಕ್ತವಾಗಿ ಕೃತಿಯಲ್ಲಿ ಬಂದಾಗಲೆ ಸಾಂತ್ವನ ಪ್ರಕ್ರಿಯೆಯ ಫಲ ಒದಗೀತು.

'ರೈತ ಮಿತ್ರ' ಎಂಬ ಯೋಜನೆಯು 2001-02ನೇ ಸಾಲಿನಲ್ಲಿ ಜಾರಿಗೆ ಬಂದಿತು. ರೈತರಿಗೆ ಅಗತ್ಯವಾದ ಕೃಷಿ ಕಾರ್ಯಗಳ ಕುರಿತಾದ ಸಮಗ್ರ ಮಾಹಿತಿಯನ್ನು ನೀಡುವುದೇ ಅದರ ಉದ್ದೇಶ. ರಾಜ್ಯಾದ್ಯಂತ, ಹೋಬಳಿಗೊಂದರಂತೆ ರೈತ ಸಂಪರ್ಕ ಕೇಂದ್ರಗಳು ಈ ದಿಸೆಯಲ್ಲಿ ಕಾರ್ಯೋನ್ಮುಖವಾಗಿವೆ. ಈ ಕೇಂದ್ರಗಳ ಮೂಲಕ ಕೃಷಿ ಚಟುವಟಿಕೆಗಳ ಬಗ್ಗೆ ಅಧುನಿಕ ತಂತ್ರಜ್ಞಾನದ ಮಾಹಿತಿ, ಸಲಹೆ, ಕೃಷಿ ಪರಿಕರಗಳ ಕೊಳ್ಳುವಿಕೆ, ಮಣ್ಣು ಮತ್ತು ಬೀಜ ನೀರು ಪರೀಕ್ಷಾ ಸೌಲಭ್ಯ, ತಳಿಗಳ ಪ್ರಾತ್ಯಕ್ಷಿಕೆ, ಬೆಳೆ ವಿಮೆ, ಬೆಳೆ ಸಾಲ ಕುರಿತ ಮಾಹಿತಿ ಒದಗಿಸಲಾಗುತ್ತದೆ. ಈ ಕೇಂದ್ರಗಳಿಗೆ ಕಂಪ್ಯೂಟರ್ ಹಾಗು ದೂರವಾಣಿಗಳನ್ನು ಒದಗಿಸಲಾಗಿದೆ. ರೈತರಿಗೆ ಇಲ್ಲಿ ನೀಡುವ ಬೆಂಬಲ ಸೇವೆಗಾಗಿ ಕನಿಷ್ಠ ಸೇವಾ ಶುಲ್ಕವನ್ನು ಪಡೆದು, ಬ್ಯಾಂಕ್ ಖಾತೆಯಲ್ಲಿಟ್ಟು ರೈತ ಸಂಪರ್ಕ ಕೇಂದ್ರದ ಅಭಿವೃದ್ಧಿಗಾಗಿ ವಿನಿಯೋಗಿಸಲಾಗುತ್ತದೆ. ಗ್ರಾಮ ಪಂಚಾಯಿತಿ ಮಟ್ಟದಲ್ಲಿಯೂ ಇಂಥ ಕೇಂದ್ರಗಳ ಅಗತ್ಯವಿದೆ; ಸಾಂತ್ವನ ಕ್ರಿಯೆಗೆ ಇವೆಲ್ಲ ಪೋಷಕವೆ. ರೈತರ ಪ್ಯಾಕೇಜ್ ಕೂಡ ಸೂಕ್ತ ಅನ್ವಯವಾದರೆ ಸಂಕಷ್ಟಕ್ಕೆ ಸಾಂತ್ವನವೆ ಆಗುತ್ತದೆ.

ರೈತರಿಗೆ ಆರೋಗ್ಯ ವಿಮಾ ಯೋಜನೆಯಾಗಿ 2002 ರ ಅಂತ್ಯ ಭಾಗದಲ್ಲಿ 'ಯಶಸ್ವಿನಿ' ವಿಮಾ ಯೋಜನೆಯನ್ನು ಜಾರಿಗೆ ತರಲಾಯಿತು. ಯಾವುದೇ ರೈತ ತಿಂಗಳಿಗೆ 5 ರೂ. ನಂತೆ ವರ್ಷಕ್ಕೆ 60 ರೂ. ಕಟ್ಟಿದರೆ ಯೋಜನೆಯ ಪ್ರೀಮಿಯಂ ಪಡೆಯುವುದಾಗಿದೆ. ಬದುಕುವವರೆವಿಗೆ ಆರೋಗ್ಯ ಸಂರಕ್ಷಣೆ ಪಡೆಯುವ ಒಂದು ಉತ್ತಮ ಅವಕಾಶದ ಯೋಜನೆ ಇದು ರೈತರಿಗೆ ಸೀಮಿತ. ಈ ಯೋಜನೆಯಲ್ಲಿ ಒಳಗೊಂಡ ರೈತರಿಗೆ, ತಜ್ಞ ವೈದ್ಯರ ಸಲಹೆ, ಚಿಕಿತ್ಸೆ ಉಪಚಾರ ರಿಯಾಯಿತಿ ದರದಲ್ಲಿ ಒದಗುತ್ತದೆ. ಅಕ್ಟೋಬರ್ 2003 ವರೆಗಿನ ಮಾಹಿತಿ ರೀತ್ಯಾ 16 ಲಕ್ಷ ರೈತ ನೋಂದಣಿಯಾಗಿ ಯೋಜನೆಯ ಸೌಲಭ್ಯ ಒದಗಿಸಬೇಕೆಂಬುದು ಸರ್ಕಾರದ ಗುರಿ ಎನ್ನಲಾಗಿದೆ. ಅನುಷ್ಠಾನವೂ ಅಷ್ಟೇ ಯಶಸ್ಸಿನಿಂದ ಸಾಗಬೇಕು. ವೈಯಕ್ತಿಕ ಅಪಘಾತ ವಿಮಾ ಯೋಜನೆ ಹಾಗು ಅದರ ಕಂತುಗಳನ್ನು ಭರಿಸುವ ಬಗ್ಗೆ ಪ್ರಯತ್ನಗಳಾಗಿರುವುದು ರೈತರಿಗೊಂದು ಸಾಂತ್ವನ ಯೋಜನೆ ಎನ್ನಬಹುದು.

ಇಷ್ಟೆಲ್ಲ ಉದಾಹರಣೆಗಳನ್ನು ವಿವೇಚಿಸಿದರೆ ಸರ್ಕಾರವನ್ನು ರೈತ ಚಳುವಳಿಯ ಇತಿಹಾಸದಲ್ಲಿ ರೈತರ ಸಂಕಷ್ಟಗಳಿಗೆ ಸ್ಪಂದಿಸಿದ ಸಂದರ್ಭಗಳೆಲ್ಲ

ಸಾಂತ್ವನದ ಪ್ರಕ್ರಿಯೆಯಲ್ಲಿ ಬರುತ್ತದೆ. ಇದಕ್ಕೆ ಶಾಸಕರು, ರೈತ ಸಂಘಟನೆಗಳು, ಸಾಮಾಜಿಕರು, ಗ್ರಾಹಕರು ಎಲ್ಲರೂ ಪಾಲುದಾರರೆ. ಬರಿ ರೈತ ಪರವಾಗಿಯೇ ಎದೆಲ್ಲವನ್ನು ಯೋಚಿಸಲಾಗಿದೆ ಎನ್ನುವಂತಿಲ್ಲ. ಗ್ರಾಹಕರು ಹಾಗು ಬೆಳೆಗಾರರು ಪರಸ್ಪರ ಅವಲಂಬಿತರೆ. ಮೂಲಭೂತವಾಗಿ ರೈತ ಬೆಳೆದ ಉತ್ಪನ್ನವನ್ನು ಇನ್ನೊಬ್ಬರಿಗೆ ಮಾರಿ ಅವರಲ್ಲಿರುವ ತನಗೆ ಅಗತ್ಯವಿರುವ ವಸ್ತುವನ್ನು ಕೊಳ್ಳುವಾಗ ಗ್ರಾಹಕನೆನಿಸುತ್ತಾನೆ. ಗ್ರಾಮೀಣ ಮಾರುಕಟ್ಟೆಯಾದ 'ಸಂತೆ' ಇದಕ್ಕೊಂದು ಅತ್ಯುತ್ತಮ ಉದಾಹರಣೆ. ರೈತರಿಗೆ ಲಾಭ ಬೇಕು; ನ್ಯಾಯವಾದ ಬೆಲೆಯಾದರೂ ಬೆಳೆದ ಬೆಳೆಗೆ ಬೇಕು. ಗ್ರಾಹಕನಿಗೆ ಅಗ್ಗವಾಗಿ ಆಹಾರಧಾನ್ಯಬೇಕು. ಇಲ್ಲಿಯೇ ಸುವರ್ಣ ಮಾಧ್ಯಮದ ಅಗತ್ಯವಿರುವುದು. ರೈತರ ಹಾಗು ಗ್ರಾಹಕರ ಹಿತಸೇತುವಾಗಿ ಯಾವುದೇ ಪ್ರಯತ್ನಗಳು ನಡೆಯುವಲ್ಲಿ ಅವು ಸಾಂತ್ವನ ನೆಲೆಯ ಪ್ರಕ್ರಿಯೆ ಆಗಿರುತ್ತವೆ. ಅಂದರೆ ಬೇಡಿಕೆ, ಪೂರೈಕೆಗಳ ನಡುವಣ ಪ್ರಕ್ರಿಯೆ ಇದಾಗಿರುತ್ತದೆ. ಚಳುವಳಿಯ ಪಾತ್ರವೂ ಇರುವುದೂ ಇಲ್ಲಿಯೆ. ಆರ್ಥಿಕ ದೃಷ್ಟಿಯಿಂದ ನೋಡಿದರೆ **ಚಳವಳಿ,** ಬೇಡಿಕೆ ಮತ್ತು ಪೂರೈಕೆಗಳ ನಡುವಣ ಸ್ಥಗಿತತೆ ಹಾಗು ಜಡತೆಯನ್ನು ಹೋಗಿಸಬೇಕೆನ್ನುವ ಚಲನಶಕ್ತಿಯಾಗುತ್ತದೆ; ಸಾಮಾಜಿಕ ದೃಷ್ಟಿಯಿಂದ ಹಕ್ಕೊತ್ತಾಯದ ಸಂಘಟಿತ ಚಲನೆ ಎನಿಸುತ್ತದೆ; ಇತಿಹಾಸದ ದೃಷ್ಟಿಯಿಂದ ವಿಕಸಿತ ಸಂಕೀರ್ಣಚಲನೆ ಎನಿಸುತ್ತದೆ; ಸಾಂಸ್ಕೃತಿಕ ದೃಷ್ಟಿಯಿಂದ ಹೋರಾಟದ ಹೊಂದಾಣಿಕೆಯ ಸತತ ಚಲನೆ ಎನಿಸುತ್ತದೆ; ಆಧುನಿಕ ಸನ್ನಿವೇಶದಲ್ಲಿ ಹಿಂದಿನ ಸಾಂತ್ವನ ಪ್ರಕ್ರಿಯೆಗಿಂತ ಇಂದಿನ ಸಾಂತ್ವನ ಪ್ರಕ್ರಿಯೆಯನ್ನು ಚಳುಚಳಿಯು ಬಹಳ ಸಂಕೀರ್ಣವಾಗಿಸಿದೆ. ಜಾಗತಿಕ ಜನತ್ತಿನ ಹೊಸ ಸವಾಲುಗಳು ಹುಟ್ಟಿಬಂದಂತೆ ಅದನ್ನೆದುರಿಸಿ ನೆಮ್ಮದಿ ನೀಡಿದ ಸಾಂತ್ವನ ಪ್ರಕ್ರಿಯೆಯನ್ನು ಹೊಸ ಸವಾಲಿನ ಸಾಧಕ ರೂಪವೆಂಬಂತೆ ಚಳವಳಿ ನಿರಂತರ ಜಂಗಮಕ್ರಿಯೆಯಾಗಿ ಬೇರುಗೊಂಡಿದೆ. ಇದು ಇಂದಿನ ಜಗತ್ತಿನ ಬೇಕಾದ ಕ್ರಿಯಾತ್ಮಕ ರೀತಿ. ಇದಕ್ಕೊಂದು ಸ್ಪಷ್ಟ ಸಂಕೇತವಾಗಿ ಪ್ರಧಾನಿಗಳ ಮಾತೊಂದು ಈಗ ಕಾಣಬಂದಿದೆ.

13.7.2002 ರಂದು ದೆಹಲಿಯಲ್ಲಿ ಆರ್ಥಿಕ ಸಲಹಾ ಮಂಡಲಿ ಸಭೆ ಸೇರಿತ್ತು. ಅಲ್ಲಿ 8 ಪ್ರಮುಖ ಅಂಶಗಳ ಆರ್ಥಿಕ ಕಾರ್ಯಸೂಚಿಯನ್ನು ಬಿಡುಗಡೆ ಮಾಡಿ, ಪ್ರಧಾನಿ ಶ್ರೀ ಅಟಲ್ ಬಿಹಾರಿ ವಾಜಪೇಯಿ ಅವರು, ವಿವಿಧ ಸಬ್ಸಿಡಿ ದರ ಪರಿಷ್ಕರಣೆ ಮತ್ತು ಕಡಿತ, ಗುರಿಯನ್ನು ಸ್ಪಷ್ಟಗೊಳಿಸುವ ನಿಯಂತ್ರಣ ಪ್ರಕ್ರಿಯೆಗಳ ಬಗ್ಗೆ ನುಡಿಯುತ್ತ, ಸಬ್ಸಿಡಿ ಅವಶ್ಯಕವಿರುವ ಕೆಲವರನ್ನು ಹೊರತುಪಡಿಸಿ ಉಳಿದ

ಜನತೆ ತಾವು ಅನುಭೋಗಿಸುವಂಥ ಸಂಗತಿಗಳಿಗೆ ತಕ್ಕ ಪ್ರತಿಮೌಲ್ಯ ಸಂದಾಯ ಮಾಡುವ ಪ್ರವೃತ್ತಿಯನ್ನು ಮೈಗೂಡಿಸಿಕೊಳ್ಳಬೇಕು. ದೇಶದಲ್ಲಿ ಇಂಥ ಸಂಸ್ಕೃತಿಯನ್ನು ಬೆಳೆಸುವುದು ತೀರ ಅಗತ್ಯವಾಗಿದೆ. ಮಾರುಕಟ್ಟೆಗಳನ್ನು ನಿಯಂತ್ರಣ ಮಾಡುವಲ್ಲಿ ಸರ್ಕಾರ ಹೆಚ್ಚಿನ ಗಮನ ಹರಿಸುತ್ತದೆ. ಅದನ್ನು ಮತ್ತಷ್ಟು ಹೆಚ್ಚು ಸ್ಪರ್ಧಾತ್ಮಕವಾಗಿ ಸ್ವಾವಲಂಬಿಯಾಗಿ ನಡೆಯುವಂತೆ ಮಾಡುತ್ತೇವೆ, ದೇಶ ತನ್ನದೇ ಆದ ಸುಸ್ಪಷ್ಟ ಮಾರುಕಟ್ಟೆ ಆರ್ಥಿಕ ನೀತಿಯನ್ನು ಹೊಂದುವುದು ಬಹಳ ಅಗತ್ಯವಾಗಿದೆ. ಆರ್ಥಿಕ ನೀತಿ ಅನುಷ್ಠಾನ, ಕೇಂದ್ರ ಹಾಗು ರಾಜ್ಯಗಳೆರಡಕ್ಕೂ ಸವಾಲು ಆಗಿದ್ದು ತೊಡಕಾಗಿರುವ ಈ ದಿಸೆಯ ನಿಯಮಗಳ ಸಮಗ್ರ ಪರಾಮರ್ಶೆಗೆ ಸರ್ಕಾರ ಮುಂದಾಗಿದೆ' ಎಂದಿದ್ದಾರೆ. ಈ ಮಾತಿನಲ್ಲಿ ಜಾಗತಿಕ ಜಗತ್ತಿನ ಪೈಪೋಟಿಯಲ್ಲಿ ದೇಶೀಕರಣ ಯಾ ಸ್ಥಳೀಕರಣದ ಅಸ್ತಿತ್ವದ ಘೋಷವು ಪ್ರಭಾವಯುಕ್ತವಾಗಿ ಬಂದಿದೆ ಎಂದೆನಿಸುತ್ತದೆ; ವಾಸ್ತವ ಇತಿಮಿತಿಯನ್ನೂ ಗುರುತಿಸಿ, ಸಾಂಸ್ಕೃತಿಕ ಸವಾಲುಗಳನ್ನೆದುರಿಸುವ ಹೊಣೆಬೇಕು. ದೇಶಕೊಟ್ಟ ಸೌಕರ್ಯಕ್ಕೆ ಫಲಾನುಭವಿಗಳಾದ ಮೇಲೆ ದೇಣಿಗೆಯನ್ನು ನೀಡುವ ಸ್ವಯಂಪ್ರೇರಣೆ ಬೇಕು. ಸ್ವಾವಲಂಬನದ ಸೆಲೆ ಜಾಗತಿಕ ಜನತ್ತಿನೆದುರು ಅಸ್ತಿತ್ವ ತೋರಿಕೊಳ್ಳಬೇಕು ಎಂಬ ಧ್ವನಿ ಈ ಮಾತುಗಳಲ್ಲಿದೆ. ಅಂದರೆ ಸಾಂತ್ವನ ಪ್ರಕ್ರಿಯೆ ಫಲಶ್ರುತಿಯಾದಾಗ ಮುದಗೊಳ್ಳುವುದು ನಮ್ಮ ಪಾಲಿಗೆ ಭಾಗವಾಗುತ್ತದೆ. ಚಳುವಳಿಗಳಿಗೆ ದೊರಕಬೇಕಾದ ಸಾಂತ್ವದ ಪ್ರಕ್ರಿಯೆಯ ಸೌಷ್ಠವ ಇದು.

ಸಾಮಾನ್ಯವಾಗಿ ರೈತರ ಕುರಿತ ನಗರದ ಅನೇಕ ವಿಚಾರ ಸಂಕಿರಣಗಳಲ್ಲಿ ರೈತರ ಅನುಭವ, ಸಮಸ್ಯೆಗಳ ಬಗ್ಗೆ ವಕ್ತಾರರು ಮಾತನಾಡುವುದೇ ಹೆಚ್ಚು. ಅವನ ಮಾತುಗಳ ನೇರ ಮಂಡನೆಗೆ ಅವಕಾಶವಾಗುತ್ತಿಲ್ಲ. ಹೀಗಾಗಿ ವಿಚಾರಸಂಕಿರಣದಲ್ಲಿ ಸದ್ದುಗದ್ದಲವಿಲ್ಲದೆ, 'ಷೋ ಪೀಸ್' ಆಗಿಯೇ, ಮಾತುಗಲ್ಲಿ ಮಾಹಿತಿಗಳನ್ನು ರೈತನು ಕೇಳಿಸಿಕೊಂಡು ಹೋಗುವುದೇ ಹೆಚ್ಚು. ಆದರೆ ಮಾತು, ಮಂಡನೆ ಹೇಗೆ ಇರಲಿ ಕೇಳಿಸಿಕೊಳ್ಳುವ ವ್ಯವಧಾನ ನಮಗಿರಬೇಕು. ಸಾಹಿತ್ಯ ಸಮ್ಮೇಳನವಿರಲಿ, ಸನ್ಮಾನ ಸಮಾರಂಭಗಳಿರಲಿ, ಸ್ಮರಣ ಸಂಚಿಕೆಗಳಿರಲಿ, ಸಾಂಸ್ಕೃತಿಕ ಕಾರ್ಯಕ್ರಮಗಳಿರಲಿ, ನೆಲ ಜಲ ಸಮಸ್ಯೆಗಳನ್ನು ಎತ್ತಿ ಪ್ರಸ್ತಾಪಿಸುವಲ್ಲಿ ರೈತರಿಗೆ ಪ್ರಾತಿನಿಧ್ಯವೇ ಕಾಣುವುದಿಲ್ಲ. ಅವರ ಅನುಭವಗಳ ಹಂಚಿಕೆಗೆ ವೇದಿಕೆ ಅವರಿಗೆ ಸಿಗುತ್ತಿಲ್ಲ. ಇದು ಸಾಮಾಜಿಕ ಸಾಂಸ್ಕೃತಿಕ ನಿರ್ಲಕ್ಷ್ಯವೆನಿಸುತ್ತದೆ. ರಾಜ್ಯೋತ್ಸವ ಪ್ರಶಸ್ತಿ, ಸಾಹಿತ್ಯ ಸಮ್ಮೇಳನಗಳಲ್ಲಿ ಸೇವಾ ಸನ್ಮಾನಗಳೂ ಅರ್ಹ ಸಾಮಾನ್ಯ ರೈತರಿಗೆ ದಕ್ಕಬೇಕು. ಸಮ್ಮೇಳನ ಸ್ಮರಣ ಸಂಚಿಕೆಗಳಲ್ಲಿ ಹಾಗು ಕರ್ನಾಟಕ ಗ್ಯಾಸೆಟಿಯರ್‌ಗಳಲ್ಲಿ,

ಆಯಾ ಜಿಲ್ಲೆಯಾ ರೈತರ ಸಮಸ್ಯೆಗಳ ಹಾಗು ಚಳುವಳಿಗಳ, ಸಾಂತ್ವನ ಕ್ರಿಯೆಗಳ ಕುರಿತು ಲೇಖನಗಳಿರಬೇಕು; ಸ್ಮರಣಸಂಪುಟಗಳಲ್ಲಿ ಪಠ್ಯಪುಸ್ತಕಗಳಲ್ಲಿ ರೈತರ ಸಮಸ್ಯೆಗಳ ವರ್ತಮಾನಪ್ರಕ್ರಿಯೆಗಳ, ಪರಿಹಾರಗಳ ಬಗ್ಗೆ ವಿವೇಚನೆಯ ಲೇಖನಗಳಿರಬೇಕು.

ಗ್ರಾಮೀಣ ಪ್ರದೇಶಗಳಲ್ಲಿ 'ಗುರುಕುಲ'ದ ಬಗೆಯಲ್ಲಿ 'ಗ್ರಾಮಕುಲ ಅಥವಾ ರೈತಕುಲ' ವ್ಯವಸ್ಥೆ ಮಾಡಿ ಕೃಷಿ ಸಂಬಂಧದ ಅಧುನಿಕ ತಂತ್ರಜ್ಞಾನ, ಮಾಹಿತಿಗಳನ್ನು ನೀಡಬೇಕು. ಹಿರಿಯ ರೈತರಿರಲಿ, ಅಸಹಾಯಕ, ಶಕ್ತಿ ಹೀನ ರೈತರಿರಲಿ, ಅಂಥವರಿಗೆಲ್ಲ 'ರೈತಾಶ್ರಮ'ಗಳನ್ನು ತೆರೆದು ನೆಮ್ಮದಿಯಿಂದ ಉಳಿದ ಬಾಳನ್ನು ಬಾಳುವಂತೆ ಮಾಡಬೇಕು. ಇಂಥ ನೆರವುಗಳೂ, ಚಳಿವಳಿಗಳ ಆಶಯಕ್ಕೆ ಉತ್ತರ ನೀಡಿ ಸಾಂತ್ವನ ತರಬಲ್ಲವು.

## ರೈತ ಸಂಕಷ್ಟಗಳ, ಸಮಸ್ಯೆಗಳ ಪರಿಹಾರೋಪಾಯಗಳು:ಶಾಸನ ಸಭೆಯ ಚರ್ಚೆಗಳು

**ವಿಷಯ 2:** ಸಮರ್ಪಕ ಜಲಯೋಜನೆ; ನೀರಿನ ಅಪವ್ಯಯಕ್ಕೆ ತಡೆ

20.4.2000 ದ ವಿಧಾನ ಪರಿಷತ್ತಿನ ಅಧಿವೇಶದಲ್ಲಿ[1] **ಡಾ. ವಿ.ಎಸ್. ಆಚಾರ್ಯ** ಅವರುರಾಜ್ಯದ ಪಶ್ಚಿಮ ಮುಖಿ ನದಿಗಳ 2 ಸಾವಿರ ಟಿ.ಎಂ.ಸಿ ನೀರನ್ನು ಸೂಕ್ತವಾಗಿ ಬಳಸಿಕೊಳ್ಳುವ ಬಗ್ಗೆ ನೀರಾವರಿ ಸಚಿವರ ಗಮನ ಸೆಳೆದು ಹೇಳಿದರು.

ಸಚಿವ ಶ್ರೀ ಎಚ್.ಕೆ ಪಾಟೀಲ್ ಅವರು ರಾಜ್ಯದ ಪಶ್ಚಿಮಾಭಿಮುಖಿ ಹರಿವ ನದಿಗಳಲ್ಲಿಯ 2 ಸಾವಿರ ಟಿ.ಎಂ.ಸಿ ನೀರಿನ ಲಭ್ಯತೆ, ಈ ಜಲಾನಯನ ಪ್ರದೇಶದಲ್ಲಿ ಇಲ್ಲದಿರುವ ಭಾರಿ ಮತ್ತು ಮಧ್ಯಮ ನೀರಾವರಿ ಯೋಜನೆ ನೀರಾವರಿ ಇಲಾಖೆ 9 ಯೋಜನೆಗಳ ತನಿಖಾ ಕಾರ್ಯವನ್ನು ಗುರುಪುರ ಮುಲ್ಕಿ ಕೊಲ್ಲೂರು ಪಯಸ್ವಿನಿ, ಶರಾವತಿ ನೆರಿಯಾಹೊಳೆ ಕಾಳಿನದಿ, ಶಾಲಾ ನದಿ ನೀರಾವರಿ ಯೋಜನೆ ಬೇಡ್ತಿ– ಅಘನಾಶಿನಿಯನ್ನು ವರದಾನದಿಗೆ ತಿರುಗಿಸುವಿಕೆ ನೇತ್ರಾವತಿ, ಹೇಮಾವತಿ ಜೋಡಣೆ, ಬರಪ್ಪೊಳೆಯ ಲಕ್ಷ್ಮಣತೀರ್ಥಕ್ಕೆ ತಿರುಗು, ಮಹಾದಾಯಿಯನ್ನು ಮಲಪ್ರಭಾಗೆ ತಿರುಗು ನೀರಾವರಿ ಯೋಜನೆಗಳ ಸಂಬಂಧ ಕಾರ್ಯ ಮಾಡುತ್ತಿರುವುದು, ಈ ದಿನಗಳ ಉಪಯುಕ್ತ ಬಳಕೆಯ ಪರಿಶೀಲನೆಗಾಗಿ ತಜ್ಞರ ಸಮಿತಿಯಿಂದ ಅಧ್ಯಯನ ಮಾಡಿಸುವುದು, ಪಶ್ಚಿಮಾಭಿಮುಖಿ ನದಿಗಳ ಜಲಾನಯನ

1. ವಿಧಾನ ಪರಿಷತ್ತಿನ ನಡವಳಿಕೆಗಳು, ಸಂಪುಟ 294 (5.6). ಭಾಗ II (20.4.2000) ಪು. 1280–1291

ಪ್ರದೇಶ 24.53 ಸಾವಿರ ಚದರ ಕಿ.ಮೀ ( ಅಂದರೆ ಇಡಿ ರಾಜ್ಯದ ಶೇ 12.88 ರಷ್ಟು) ಇರುವುದು, ರಾಜ್ಯದಲ್ಲಿ ಒಟ್ಟು ಶೇ 58.14 ರಷ್ಟು ನೀರಿನ ಸಂಪನ್ಮೂಲವಿದ್ದರೂ ಶೇ 1ರಷ್ಟೂ ಬಳಕೆ ಸಾಧ್ಯ ಮಾಡಲಾಗಿಲ್ಲದಿರುವುದು, ಪಶ್ಚಿಮವಾಹಿನಿ ನದಿಗಳ ಬಳಕೆ ಮಾಡಿಕೊಂಡರೆ ಶೇ 60–70 ರಷ್ಟು ನೀರಾವರಿ ಸಾಧ್ಯವಾಗುವುದು, ಬರಪೀಡಿತ ಪ್ರದೇಶಗಳಿಗೆ ನದಿಗಳನ್ನು ತಿರುಗಿಸುವುದು, ಗೋವಾ ಸರ್ಕಾರದ ತಕರಾರು ಇದ್ದರೂ  ಬಹಳಷ್ಟು ಮಹದಾಯಿ ಪ್ರದೇಶ ನಮ್ಮ ಕಳಸದ ಕೊನೆಯವರಿವಿಗೂ ಸೇರಿದಂತೆ ಕರ್ನಾಟಕ ಪ್ರದೇಶದಲ್ಲಿ ಬರುವಲ್ಲಿ, ಆ ಯೋಜನೆ ಕೈಗೊಳ್ಳುವ ಮಲಪ್ರಭಾ ಜಲಾನಯನ ಪ್ರದೇಶದ ರೈತರ ಒತ್ತಾಯ, ಹಾಗಾಗಿ ಆ ದಿಸೆಯಲ್ಲಿ, ನಡೆದಿರುವ ಸರ್ಕಾರದ ಚಿಂತನೆ ಕುರಿತೆಲ್ಲ ಹೇಳಿದರು, ಸಣ್ಣ ನೀರಾವರಿ ಮತ್ತು ಬ್ಯಾರೇಜು ಯೋಜನೆ ಕಡಿದಾದ ಪಶ್ಚಿಮಘಟ್ಟ ಪ್ರದೇಶದಲ್ಲಿ ಜಲವಿದ್ಯುತ್ ತಯಾರಿಕೆ ಕುರಿತೂ ಹೇಳಿದರು.

ಸಚಿವ **ಶ್ರೀ ವಿ.ಎಸ್ ಆಚಾರ್ಯ** ಅವರು ಸಚಿವರ ಉತ್ತರಕ್ಕೆ ಸಮಾಧಾನ ವ್ಯಕ್ತಪಡಿಸಿ ಕೃಷ್ಣಾ, ಕಾವೇರಿಯಿಂದ 1400 ಟಿ.ಎಂ.ಸಿ ಇದ್ದರೆ, ಪಶ್ಚಿಮಾಭಿಮುಖಿ ನದಿಗಳಿಂದ 2 ಸಾವಿರ ಟಿ.ಎಂ.ಸಿ ನೀರು ಹರಿದು ಹೋಗುವುದು, ಅಂದರೆ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ 12  ನದಿಗಳಯ, ಉ.ಕನ್ನಡ ಜಿಲ್ಲೆಯ 34 ನದಿಗಳಿಂದೆಲ್ಲ ಸೇರಿ  2 ಸಾವಿರ ಟಿ.ಎಂ.ಸಿ ನೀರು ಹರಿದು ಹೊದರೂ ವರ್ಷದ ಕೊನೆಯ ನಾಲ್ಕು ತಿಂಗಳಲ್ಲಿ ಕುಡಿಯಲೂ ನೀರಿಲ್ಲದಿರುವುದು, ಈ ಕಾರಣ ದ. ಕನ್ನಡ ಉಡುಪಿ, ಉತ್ತರ ಕನ್ನಡ ಜಿಲ್ಲೆಗಳಿಗೆ ಸಂಬಂಧಿಸಿದಂತೆ ತಲಾ 250 ವೆಂಟೆಡ್ ಡ್ಯಾಮ್ ಅನ್ನು ಯೋಗ್ಯ ರೀತಿಯಲ್ಲಿ ಮಾಡುವುದು ಅದಕ್ಕೆ ಒಟ್ಟು 450 ಕೋಟಿ ವೆಚ್ಚವಾಗುವುದು, ಅದನ್ನು ಪ್ಲಾನ್ ಪಿರಿಯಡ್‌ನಲ್ಲಿ ಬಜೆಟ್‌ನಿಂದ ಅರ್ಧಾಂಶ ಸಾಲ ತೆಗೆದುಕೊಂಡು ಮಾಡಿದರೆ, ಕುಡಿಯುವ ನೀರಿನಲಭ್ಯತೆ ಹಾಗು ಏರುವ ನೀರಿನ ಮಟ್ಟ, ರೈತರು ಶತಮಾನಗಳ ಹಿಂದೆ ಸೌದೆ ಹಾಗು ಎಲೆಗಳನ್ನು ಹಾಕಿ ಮಾಡುತ್ತಿದ್ದ **ಅಡರಕಟ್ಟೆ** ದಿಂದ ನೂರಾರು ಎಕರೆ ಕ್ಯಾಚ್‌ಮೆಂಟ್ ಕೆಳಗಿನ ಗದ್ದೆಗಳಿಗೆ ನೀರು ಒದಗಿಸುತ್ತಿದ್ದುದು ರೈತರು ಈ ಅನುಭವದಿಂದ ಇಂಥ ಜಾಗವನ್ನು ನಿಶ್ಚಯ ಮಾಡಿ ನೀರನ್ನು ತಡೆದು ಇಟ್ಟುಕೊಳ್ಳುವಂಥ ಶಕ್ತಿಯನ್ನು ಸೂಕ್ತವಾಗಿ ಬಳಕೆ ಮಾಡಿಕೊಳ್ಳುತ್ತಿದ್ದುದು, ಇಂದಿನ ಎಂಜಿನಿಯರುಗಳಿಗೆ ಇದೆಲ್ಲ ಹಿಡಿಸದಿರುವುದು, ( ವಾಹನ ಸಂಚಾರಕ್ಕೆ ಕಷ್ಟ, ಎಂಬ ನೆಪದಿಂದ ), ವೆಂಟೆಂಡ್ ಡ್ಯಾಮ್ಗೆ ಆಗಿರುವ ಮಾಸ್ಟರ್ ಪ್ಲಾನ್ ಪ್ರಕಾರ ಪ್ರಯೋಜನ ಇಲ್ಲದಿರುವುದು, 38

ಸಾವಿರ ಎಕರೆ ನೀರಾವರಿ ಅಗತ್ಯವಿಲ್ಲ ಎಂದು 1991–92ರ ಬೃಹತ್ ನೀರಾವರಿ ಸಚಿವರು ಕೊನೆಗೆ ಏತನೀರಾವರಿ ಎಂದು ಮಾಡಿ 6 ಸಾವಿರ ಎಕರೆಗೆ ಪ್ರದೇಶಕ್ಕೂ ನೀರನ್ನು ಕೊಡುವಂಥ ಕೆಲಸ ಆಗಿಲ್ಲದಿರುವುದು ವರಾಹಿ ಬೃಹತ್ ಏತ ನೀರಾವರಿ ಯೋಜನೆಯ ಬಗ್ಗೆ ಸರ್ಕಾರದ ಅಸಡ್ಡೆ, ಗುಂಡೂರಾವ್ ಮತ್ತು ವೀರಪ್ಪ ಮೊಯ್ಲಿ ಅವರ ಕಾಲದಲ್ಲಿ ಸಿದ್ದಾಪುರದ ಬಳಿಯ ಪರಿಹಬ್ಬೆ ಎಂಬಲ್ಲಿ ಶಂಕುಸ್ಥಾಪನೆ ಮಾಡಿದ 38 ಸಾವಿರ ಎಕರೆಗಳಿಗೆ ನೀರು ಕೊಡುವಂಥ ಆ ಮೂಲ ಯೋಜನೆಯನ್ನು ಕೈಗೆತ್ತಿಕೊಳ್ಳುವುದು, ದ. ಕನ್ನಡ ಜಿಲ್ಲೆಯ ಸಮಾರು 22 ನದಿಗಳಲ್ಲಿ ಹರಿಯುತ್ತಿರುವ 29561 ಮಿಲಿಯನ್ ಕ್ಯೂಸೆಕ್ ಲೀಟರ್ ಸರ್‌ಫೇಸ್ ನೀರಿನಲ್ಲಿ ಶೇ 2.5 ರಷ್ಟು ಸಹ ಉಪಯೋಗಿಸಿಕೊಳ್ಳದಿರುವುದು, ಇಡೀ ದ. ಕನ್ನಡ ಜಿಲ್ಲೆ ಉಡುಪಿ ಜಿಲ್ಲೆಗಳಲ್ಲಿ ಸುಮಾರು 78 ಸಾವಿರ ಪಂಪ್‌ಸೆಂಟ್ ಇದ್ದು ವಿದ್ಯುಚ್ಛಕ್ತಿ ಅಭಾವದಿಂದ ಅವು ಕೆಲಸ ನಿಲ್ಲಿಸಿರುವುದು, ಈ ಜಿಲ್ಲೆಗಳಲ್ಲಿ ಗ್ರಾವಿಟಿಯಿಂದ ಹರಿದು ಬರುವ ನೀರಿನಿಂದ ಪೈಪ್‌ಗಳ ನೆರವಿನಿಂದ ಸಣ್ಣ ಪ್ರಮಾಣದಲ್ಲಿ ( 25 ಕಿ. ವ್ಯಾಟ್, 1 ಮೆಗಾವ್ಯಾಟ್) ವಿದ್ಯುತ್ ಉತ್ಪಾದನೆ ಮಾಡಬಹುದಾದುದು, ಕಾಲುವೆಗಳ ಮೂಲಕ ನದಿಗಳನ್ನು ಕೊಡಿಸಿದರೆ, ಸಹ್ಯಾದ್ರಿ ಬೆಟ್ಟದ ಬುಡದಲ್ಲಿಯ ಅಂತರ್ಜಲವನ್ನು ಕಾಲುವೆ ಮೂಲಕ ಬಳಸಿದರೆ ಉಭಯ ಜಿಲ್ಲೆಗಳಿಗೆ ಆಗುವ ಉಪಯೋಗ ಸಾಲ್ಟ್‌ವಾಟರ್ ಎಕ್ಸ್‌ಕ್ಲ್ಯೂಷನ್ ಡ್ಯಾಂನಂಥ ಇಂದಿನ ರೀತಿಯ ಬದಲು ಟೋಪೊಗ್ರಫಿ ಜ್ಞಾನ ಪಡೆದ, ವೆಂಟೆಂಡ್ ಡ್ಯಾಂ ಬಗ್ಗೆ ಹೆಚ್ಚು ಅಧ್ಯಯನ ಮಾಡಿ ಹೈಟೈಡ್‌ನ ನೀರು ಹೋಗುವ ಎತ್ತರವನ್ನು ಗಮನಿಸಿ ಪರಿಹಬ್ಬೆಯಲ್ಲಿ ಡ್ಯಾಂ ಕಟ್ಟುವುದು ಇದನ್ನು 2–3 ವರ್ಷಗಳೊಳಗೆ ಸರ್ಕಾರ ಮಾಡಿ ತೋರಿಸುವುದು ಕುರಿತೆಲ್ಲ ನುಡಿದರು.

**ಶ್ರೀ ಪಿ ರಾಮಯ್ಯನವರು,** ಶ್ರೀ ವಿ.ಎಸ್. ಆಚಾರ್ಯ ಅವರ ಸಲಹೆಗಳನ್ನು ಮೆಚ್ಚಿ ಅದರಿಂದ ಅಂದರೆ ಚಿಕ್ಕ –ಚಿಕ್ಕ ಡ್ಯಾಂಗಳನ್ನು ಕಟ್ಟಿ ಆಗಾಗ ಉಂಟಾಗುವ ಫ್ಲಡ್ ಡ್ಯಾಮೇಜ್ ತಡೆಯಲು ಅನುಕೂಲವಾಗುವಲ್ಲಿ, ಸರ್ಕಾರ ಈ ದಿಸೆಯಲ್ಲಿ ಗಮನ ಹರಿಸಲಿ ಎಂದರು.

**ಶ್ರೀ ಬಿ.ಎ ಮೊಹಿದ್ದೀನ್** ಅವರು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಳೆಗಾಲದಲ್ಲಿ 2000 ಟಿ.ಎಂ.ಸಿ ನೀರು ವ್ಯರ್ಥವಾಗಿ ಸಮುದ್ರಕ್ಕೆ ಹೋಗುವುದು, ಬಂಟವಾಳ ಪ್ರದೇಶದಲ್ಲಿ ನೀರಿದ್ದರೂ ಕುಡಿಯಲು ಯೋಗ್ಯವಿಲ್ಲದಿರುವುದು ಕರಪಾಡಿ ಡ್ಯಾಂಅನ್ನು ನೇತ್ರಾವತಿಗೆ ಅಡ್ಡಲಾಗಿ ಕಟ್ಟಿದರೆ ಸುಮಾರು 1.5 ಲಕ್ಷ ಎಕರೆಗೆ ನೀರು ರೀಚಾರ್ಜ್ ಆಗುವುದು. ಎಲ್ಲ ತೆರೆದ ಭಾವಿಗಳಲ್ಲಿ ನೀರು ಬರುವುದು. ಜಿಲ್ಲಾ ಪಂಚಾಯ್ತಿಗಳಿಗೆ

ಹಣವನ್ನು ಸಾಲದ ರೂಪದಲ್ಲಿ ಪಡೆದುಕೊಳ್ಳಲು ಕಾನೂನಿನಲ್ಲಿ ಅವಕಾಶವಿಲ್ಲದಿರುವುದರಿಂದ ಡ್ಯಾಂ ಕಟ್ಟಿ ವಾಟರ್ ಶೆಡ್ ಪ್ರೋಗ್ರಾಂ ರೀತಿಯಲ್ಲಿ ನೀರನ್ನು ರೀಚಾರ್ಜ್ ಮಾಡಲನುಕೂಲವಾಗುತ್ತಿದ್ದುದು, ನದಿ ನೀರನ್ನು ಡೈವರ್ಟ್ ಮಾಡುವಂಥ ಶಿಫಾರಸ್ಸು ಇದ್ದುದನ್ನು ಸರ್ಕಾರ ತಳ್ಳಿ ಹಾಕಿದುದು, ಸಣ್ಣ ಡ್ಯಾಂನಿಂದ ಪವರ್ ಜನರೇಷನ್ ಮಾಡಿಕೊಳ್ಳುವುದು ಕುರಿತೆಲ್ಲ ತಮ್ಮ ಸಲಹೆಗಳನ್ನು ನೀಡಿದರು.

**ಡಾ. ವಿ.ಎಸ್. ಆಚಾರ್ಯ** ಅವರು, ತಮ್ಮ ಬೇಡಿಕೆಯಾದ ವಾರಾಹಿ ಯೋಜನೆಯಿಂದ 18 ರಿಂದ ಮೆಗಾವ್ಯಾಟ್ ವಿದ್ಯುಚ್ಛಕ್ತಿ ಒದಗುವುದು ಕಾವೇರಿ ಡಿಸ್ಪ್ಯೂಟ್ ಮುಗಿದ ನಂತರ ನದಿ ಡೈವರ್ಟ್ ಬಗ್ಗೆ ಗಮನಿಸುವ ವಿಷಯ 4 ಸಾವಿರ ಮಿಲಿ ಮೀಟರ್ ಮಳೆ ಬರುವಂಥ ಪ್ರದೇಶದಲ್ಲಿ ಸಿಹಿನೀರು ರಕ್ಷಣೆಗೆ ತೆಗೆದುಕೊಳ್ಳಬೇಕಾದ ಕ್ರಮ ಕುರಿತು ಮಾತನಾಡಿದರು.

**ಸಚಿವ ಶ್ರೀ ಹೆಚ್. ಕೆ. ಪಾಟೀಲ್** ಅವರು ವರಾಹಿ ಯೋಜನೆ, ವೆಂಟೆಡ್ ಡ್ಯಾಂ ಹಾಗು ಕಾಲುವೆ ಯೋಜನೆ ಕುರಿತು ಸದಸ್ಯರ ಕಾಳಜಿಯನ್ನು ಗಮನಿಸಿರುವ ಬಗ್ಗೆ ಹೇಳುತ್ತ. ಕ್ಯಾಪ್ಟನ್ ರಾಜಾರಾಂ ನೇತೃತ್ವದ ಸಮಿತಿ ರಚನೆ ಕಾರ್ಯಕ್ರಮಗಳ ರೂಪರೇಷೆಗಳ ಬಗ್ಗೆ ಚಿಂತನೆ ಪಶ್ಚಿಮ ವಾಹಿನಿ ನದಿಗಳನ್ನು ರಾಜ್ಯದ ಅಭಿವೃದ್ಧಿಗೆ ಬಳಸಿಕೊಳ್ಳುವ ಬಗ್ಗೆ ಸರ್ಕಾರದ ಗಂಭೀರ ಚಿಂತನೆ, ಬರಸಂಭವನೀಯ ಪ್ರದೇಶಗಳಿಗೆ ನೀರೊದಗಿಸುವ ಯೋಜನೆ ಕುರಿತೆಲ್ಲ ಹೇಳಿದರು.

**ವಿಷಯ 3:** ರೈತರ ಸಾಲದ ಮೇಲಿನ ಬಡ್ಡಿ ಮನ್ನಾ

23.7.2001 ರ ವಿಧಾನ ಸಭಾಧಿವೇಶನದಲ್ಲಿ[2] ವಿರೋಧ ಪಕ್ಷಗಳಾದ ಭಾರತೀಯ ಜನತಾಪಕ್ಷ ಜನತಾದಳ (ಎಸ್) ಜನತಾದಳ (ಯು) ಪಕ್ಷಗಳ ಸದಸ್ಯರು ಸಭಾಧ್ಯಕ್ಷ ಪೀಠದ ಮುಂದಿನ ಆವರಣದಲ್ಲಿ ಧರಣಿ ಕುಳಿತಿದ್ದ ಸಂದರ್ಭದಲ್ಲಿ ವಿರೋಧ ಪಕ್ಷದ ನಾಯಕರಾದ ಶ್ರೀ **ಜಗದೀಶ್ ಶೆಟ್ಟರ್** ಅವರು ಮಾತನಾಡಿ, ರಾಜ್ಯದ ಭೀಕರ ಬರಗಾಲದ ಕಾರಣ ರೈತರ ಪರಿಸ್ಥಿತಿ, ಕಷ್ಟನಷ್ಟ ಸಾಲ ಹಾಗು ಬಡ್ಡಿ ಮಾರುಪಾವತಿಗಿರುವ ಅವರ ಕಷ್ಟ ಕಾರ್ಪಣ್ಯಾ ಈ ಕಾರಣ ಬಡ್ಡಿ ಮನ್ನಾದ ಅಗತ್ಯ ಅಲ್ಪಾವಧಿ ಸಾಲವನ್ನು ದೀರ್ಘಾವಧಿ ಸಾಲಕ್ಕೆ ಮಾರ್ಪಾಟು ಸಾಲ ವಸೂಲಾತಿ ನಿಲುಗಡೆ, ಪಂಪುಸೆಟ್ಟುಗಳಿಗೆ ವಿದ್ಯುತ್ ಸಂಪರ್ಕ ಕಡಿತ ಹಾಗು ದಂಡ ವಸೂಲಿ ನೆವದಲ್ಲಿ ರೈತರ ಮೇಲೆ ದಬ್ಬಾಳಿಕೆ, ಭೂಕಂದಾಯ ವಸೂಲಾತಿ

2.ವಿಧಾನ ಸಭಾ ನಡವಳಿಕೆಗಳು; ಸಂಪು6(1–2) ಭಾಗ–1,(23.7.2001) ಪು.1–18.

ಹೆಸರಿನಲ್ಲಿ ಬಡ್ಡಿ ಮತ್ತು ಸಾಲ ವಸೂಲಾತಿಗೆ ಜಂಗಲ್ ಮಾಲ್ ಜಪ್ತಿ ಮಾಡಿ ರೈತರನ್ನು ಜೈಲಿಗೆ ಕಳುಹಿಸುವುದು, ಹೀಗಾಗಿ ನವಲುಗುಂದ ಮತ್ತು ನರಗುಂದ ತಾಲೂಕಿನ 30–40 ಜನ ರೈತರು ಜೈಲಿನಲ್ಲಿರುವುದು, ಸಾಲತುಂಬಿಲ್ಲವೆಂದು ಮುಟ್ಟುಗೋಲು ಹಾಕಿ ಲೀಲಾವು ತೆಗೆಯುವ ನೆಪದಲ್ಲಿ ರೈತರು ಜಮೀನಿನ ಮಾಲೀಕ ಹಕ್ಕನ್ನು ಕಸಿಯುವ ಸರ್ಕಾರದ ಕ್ರಮ, ತತ್ಫಲವಾಗಿ ರೈತನ ಹೆಸರು ರೆಕಾರ್ಡಿನಲ್ಲಿಲ್ಲದ ಸಾಲವೇ ದೊರೆಯಲಾಗದಿರುವುದು, ಮೆಕ್ಕೆಜೋಳದ ಹಣವನ್ನು ರೈತರಿಗೆ ಇಂದಿಗೂ ಕೊಟ್ಟಿಲ್ಲದಿದ್ದರೂ, ಕೊಟ್ಟಿದೆ ಎಂದು ಸದನಕ್ಕೆ ಸುಳ್ಳು ಮಾಹಿತಿ ನೀಡಿರುವುದು, ಕುರಿತೆಲ್ಲ ಹೇಳಿದರು. ರೈತರ ಸಂಕಷ್ಟಕ್ಕೆ ಸ್ಪಂದಿಸಲು ಅವರ ಪರವಾಗಿ ನಾವು ಧರಣಿ ಕೂರಬೇಕಾಗಿದೆ; ಆಗ ಸಭಾಧ್ಯಕ್ಷರು ಸರ್ಕಾರ ಈ ಬಗ್ಗೆ ಯೋಚನೆ ಮಾಡುವುದಕ್ಕೆ ಸಮಯ ಕೊಡಿ ಎಂದರು.

**ಶ್ರೀ ಪಿ.ಜಿ.ಆರ್.ಸಿಂಧ್ಯಾ** ಅವರು, ಬರಗಾಲದ ಪರಿಸ್ಥಿತಿ ಎದುರಿಸಲು ರಾಜ್ಯದ ಸಿದ್ಧತೆ, ನುಸಿರೋಗದ ಹಾನಿ ತಡೆಯಲು ನೀರಾ ಇಳಿಕೆಗೆ ರೈತರು ಕೇಳಿರುವ ಅವಕಾಶ, ಬೋರ್‌ವೆಲ್ ಸಿದ್ಧತೆ ಹಾಗೂ ವಿದ್ಯುತ್ ಸಂಪರ್ಕದ ಒದಗಣೆಗೆ ಆದೇಶ ಇಲ್ಲದಿರುವುದು, ಬಡ್ಡಿ ಮನ್ನಾ, ಪಂಪ್‌ಸೆಟ್ ಕನೆಕ್ಷನ್ ಬದಲು ಡಿಸ್‌ಕನೆಕ್ಷನ್ ಡ್ರೈವ್ ಜಾಲ್ತಿ ಆಗಿರುವುದು, ಶ್ರೀ ಭೈರೆಗೌಡರು ಡಾರ್ಕ್ ಏರಿಯಾ, ಗ್ರೇ ಏರಿಯಾ ಬಗ್ಗೆ ಮಾಡಿದ ಪ್ರಸ್ತಾಪವನ್ನು ಉದ್ಧೃತಮಾಡಿ ಬೋರ್‌ವೆಲ್‌ನಲ್ಲಿ ನೀರು ಬಿದ್ದಿದ್ದರೂ ವಿದ್ಯುತ್ ಸಂಪರ್ಕ ಕೊಡಲು ಇರುವ ನಿರಾಸಕ್ತಿ ಕುರಿತು ಹೇಳಿದರು. **ಶ್ರೀ ಸಿ.ಭೈರೇಗೌಡರು** ಡಾರ್ಕ್ ಏರಿಯಾದಲ್ಲಿ ಎನ್‌ರ್‌ಜೈಸ್ ಮಾಡಕೂಡದು ಎಂದು ಕೆಪಿಟಿಸಿಎಲ್‌ಗೆ ರಾಜ್ಯ ಸರ್ಕಾರವೇ ನಿರ್ದೇಶನ ನೀಡಿದೆ ಎಂದರು. ಶ್ರೀ ಪಿ.ಜಿ.ಆರ್.ಸಿಂಧ್ಯಾ ಅವರು ಮಾತು ಮುಂದುವರಿಸಿ, ಕುಡಿಯುವ ನೀರಿಗೆ ತೊಂದರೆಯಾಗಿ ರೈತರು ಶಾಪ ಹಾಕುತ್ತಿದ್ದಾರೆ. ಹಣ ಬಿಡುಗಡೆ ಮಾಡಿ, ಕುಡಿಯುವ ನೀರಿಗೆ, ಕೂಲಿ ಕೆಲಸಕ್ಕೆ ಅವಕಾಶ ಮಾಡಿಕೊಡಿ ಎಂದು ನಾವು ಧರಣಿ ಮಾಡಿದ್ದೇವೆ, ಸರ್ಕಾರ ಸ್ಪಂದಿಸಲಿ ಎಂದು ಸಹಕಾರ ಮಾಡುತ್ತೇವೆ ಎಂದರು.

**ಶ್ರೀ ಸಿ.ಚೆನ್ನಿಗಪ್ಪ** ಅವರು ಮಾತನಾಡುತ್ತ, ಕಳೆದ 8 ತಿಂಗಳಿಂದ ಮಳೆ ಬೀಳದೆ ರೈತರು ಉತ್ತಿಲ್ಲ, ಬಿತ್ತಿಲ್ಲ ಎಂಬುದು ಸರ್ಕಾರಕ್ಕೆ ಗೊತ್ತಿದೆ. ಆದರೂ ಸಾಲದ ಕಾರಣ ಅವರುಗಳ ಮನೆ ಜಪ್ತಿ ಆಗುತ್ತಿದೆ. ಬ್ಯಾಂಕಿನಿಂದ ಸಾಲ ವಸೂಲಿಯನ್ನು ಕೂಡಲೇ ನಿಲ್ಲಿಸಿ ಬಡ್ಡಿ ಮನ್ನಾ, ಸಾಲ ಮನ್ನಾ ಮಾಡಬೇಕು. ಸರ್ಕಾರ ರೈತರಿಗೆ ಈ ಅನುಕೂಲಗಳನ್ನು ಕಲ್ಪಿಸುವವರೆವಿಗೆ ನಾವು ಧರಣಿ

ಮಾಡುತ್ತೇವೆ ಎಂದರು. ಶ್ರೀ ಸಿ.ಬೈರೆಗೌಡರು ಹಳ್ಳಿಗಳಲ್ಲಿ ಕುಡಿಯುವ ನೀರಿನ ತೊಂದರೆಯನ್ನೂ ವಿವರಿಸಿ, ಕೋಲಾರ ಡಿವಿಜನ್ನಿನಲ್ಲಿ 435 ಗ್ರಾಮಗಳ ಪೈಕಿ 108 ಗ್ರಾಮಗಳಲ್ಲಿ ಮಾತ್ರ ನೀರು ಸರಬರಾಜಿಗೆ ಕ್ರಮ ಕೈಗೊಳ್ಳಲಾಗಿದೆ. ಕೇಳಿರುವುದು 9.71 ಕೋಟಿ ರೂ. ಗಳಲ್ಲಿ ಬಿಡುಗಡೆ ಮಾಡಿರುವುದು ಒಂದುವರೆ ಕೋಟಿ ಮಾತ್ರ ಎಂದರು.

ರೈತರ ಸಾಲದ ಮೇಲಿನ ಬಡ್ಡಿ ಮನ್ನಾ ಬಗೆಗಿನ ಚರ್ಚೆಗೆ ಉತ್ತರ ನೀಡುತ್ತ ಸಚಿವ **ಶ್ರೀ ಡಿ.ಬಿ.ಚಂದ್ರೇಗೌಡ** ಅವರು, ಇಲ್ಲಿ ಧರಣಿ ನಡೆಯುತ್ತಿರುವ ಕಾರಣ, ಬರಗಾಲ ಪ್ರದೇಶದ ತಮ್ಮ ಕ್ಷೇತ್ರಗಳಿಗೂ ಹೋಗಲಾಗದೆ, ಶಾಸನ ಸಭೆಯಲ್ಲೂ ಕೆಲಸ ಮಾಡಲಾಗುತ್ತಿಲ್ಲ ಎಂಬ ಶಾಸಕರ ನಿವೇದನೆ, ಬರಗಾಲ ಪರಿಸ್ಥಿತಿಗೆ ಕೊಡಬೇಕಾದ ಕೇಂದ್ರದ ಪರಿಹಾರಯುತ ನೆರವು, ಬರಗಾಲ ಪರಿಸ್ಥಿತಿ ನಿಭಾಯಿಸಲು 15 ಅಂಶಗಳ ಕಾರ್ಯಸೂಚಿಯ ಮಂಡನೆ, ಆವರ್ತನಿಧಿಯಿಂದ ಮೆಕ್ಕೆಜೋಳದ ಖರೀದಿಗೆ 80 ಕೋಟಿ ರೂ ಕೊಟ್ಟಿರುವುದು, ಒಟ್ಟಾರೆ 170 ಕೋಟಿ ರೂ. ಮೌಲ್ಯದ ಮೆಕ್ಕೆಜೋಳವನ್ನು ಖರೀದಿಸಿರುವುದು, ಕೇಂದ್ರ ಸರ್ಕಾರ 100ಕೋಟಿ ರೂ. ಮಾತ್ರ ಬಿಡುಗಡೆ ಮಾಡಿರುವುದು, 10ಕೋಟಿ ರೂ. ಹ್ಯಾಂಡ್ಲಿಂಗ್ ಛಾರ್ಜಸ್ ಸೇರಿ 74 ಕೋಟಿ ರೂ.ಗಳನ್ನು ಕೇಂದ್ರವು ಇನ್ನು ಬಿಡುಗಡೆ ಮಾಡಬೇಕಿರುವುದು, ರಾಜ್ಯವೇ ಬಾಕಿ ಇದ್ದ 5 ಕೋಟಿ 82ಲಕ್ಷ ರೂ.ಬಿಡುಗಡೆಗೆ ಮುಖ್ಯಮಂತ್ರಿಗಳ ಆದೇಶವಾಗಿರುವುದು, ಕುಡಿಯುವ ನೀರು ಹಾಗು ಬರ ಪರಿಹಾರ ಕಾಮಗಾರಿಗಳ ನಿರ್ವಹಣೆಗಾಗಿ, ಕಾಲಮಿತಿ ಇಲ್ಲದೆ ಸರ್ಕಾರ 100 ಕೋಟಿ ರೂ. ಗಳನ್ನು ವಿರೋಧ ಪಕ್ಷದವರು ಹೇಳಿದಂತೆ ಬಿಡುಗಡೆ ಮಾಡಲು ಸಿದ್ಧವಿರುವುದು, ಅನಧಿಕೃತ ಪಂಪ್‌ಸೆಟ್‌ಗಳ ಅಕ್ರಮ ಅಸ್ತಿತ್ವವನ್ನು ಸಕ್ರಮಗೊಳಿಸಲು ಡಾರ್ಕ್ ಮತ್ತು ಗ್ರೇ ಏರಿಯಾಗಳಲ್ಲಿ ಇನ್ನೂ ಮುಂದೆ ಅವಕಾಶ ಮಾಡಿಕೊಡಲು ಹೊಸ ಯೋಜನೆ ತಯಾರು ಮಾಡಿರುವುದು, ಈ ಸಂಬಂಧ **'ತತ್ಕಾಲ್ ಯೋಜನೆ'** ಯೊಳಗೆ 25 ಸಾವಿರ ರೂ.ಗಳನ್ನು ಸಕ್ರಮ ಮಾಡಿಕೊಳ್ಳಲು ಅವಕಾಶ ಬೇಡವೆಂದ ಸದಸ್ಯರ ಇಚ್ಛೆಯಂತೆ ತೆಗೆದುಹಾಕಿರುವುದು, ನ್ಯಾಯವಾಗಿ ಪಂಪ್‌ಸೆಟ್ ಇದ್ದು, ಹಾಗೂ ಸಕ್ರಮಗೊಂಡಿರುವೆಡೆ ಯಾವ ಕಾರಣಕ್ಕೂ ವಿದ್ಯುಚ್ಛಕ್ತಿ ತೆಗೆಯಬಾರದೆಂಬ ಆದೇಶ ಕೊಟ್ಟಿರುವುದು, ಬಳಸಿದ ವಿದ್ಯುತ್‌ಗೆ ಬಾಕಿಯ ಹಣ ಉಳಿಸಿಕೊಂಡ ರೈತರ, ಅಸಲು ಕೊಟ್ಟರೆ ಪೂರ್ತಿ ಬಡ್ಡಿಯನ್ನು ಮನ್ನಾ ಮಾಡಿದ್ದುದು, ಕುರಿತೆಲ್ಲ ಹೇಳಿದರು.

ಶ್ರೀ ಜಗದೀಶ್ ಶೆಟ್ಟರ್ ಅವರು ಮಾತನಾಡಿ, ಸರ್ಕಾರ ಎಲ್ಲಾ ಹಣ ಬಿಡುಗಡೆ ಮಾಡಲಾಗಿದೆ ಎಂದಿದೆ. ಆದರೆ ನವಲುಗುಂದ, ನರಗುಂದ ತಾಲ್ಲೂಕು ರೈತರು ಹಾಗೂ ದಾವಣಗೆರೆ, ಚಿತ್ರದುರ್ಗದ ಶಾಸಕರು ಇನ್ನೂ ಹಣ ಬಂದಿಲ್ಲವೆಂದಿದ್ದಾರೆ. ರೈತರು ತೀರ ಕಂಗಾಲಾಗಿರುವ ಕಾರಣ ಇನ್ನು 2–3 ದಿನಗಳಲ್ಲಿ ರೈತರಿಗೆ ಹಣ ಮುಟ್ಟುವ ವ್ಯವಸ್ಥೆ ಆಗಬೇಕೆಂಬುದು ನಮ್ಮ ಕಳಕಳಿ. ವಿದ್ಯುತ್ ಸಂಪರ್ಕ ಕಡಿತವನ್ನು ನಿಲ್ಲಿಸಬೇಕೆಂಬ ನಮ್ಮ ಒತ್ತಾಯಕ್ಕೆ ಸರ್ಕಾರ ಸ್ಪಂದಿಸಿ, ಅನಧಿಕೃತ ಪಂಪ್‌ಸೆಟ್‌ಗಳ ಸಕ್ರಮಕ್ಕೆ ಸ್ಕೀಮ್ ಮಾಡಿರುವುದಕ್ಕೆ ಸ್ವಾಗತವಿದೆ. ಕೆರೆಗಳು ಬತ್ತುತ್ತಿರುವಲ್ಲಿ, ದನಗಳು ಕಸಾಯಿಖಾನೆಗೆ ಹೋಗುವುದನ್ನು ನಿಲ್ಲಿಸಲು, ರೈತರಿಗೆ ಮನಸ್ಥೈರ್ಯ ತುಂಬಲು ಕಾರ್ಯಕ್ರಮ ಹಮ್ಮಿಕೊಳ್ಳುವುದು, ಗೋಶಾಲೆಗಳನ್ನು ತೆಗೆದು, ದನಕರುಗಳಿಗೆ ಮೇವು ಕೊಡಬೇಕಾದುದು, ಸಾಲದ ಅವಧಿಗಳ ಹೆಚ್ಚಳ, ಮುಂಗಾರು ವಿಫಲವಾಗುವ ಸಂದರ್ಭವಿದ್ದು, ಬರಗಾಲ ಸಂಭವವಾಗುವಲ್ಲಿ, ಕಾಮಗಾರಿಗಳನ್ನು ಹೆಚ್ಚಿಸಬೇಕಿರುವುದು, ಬಡ್ಡಿ ಮನ್ನಾ ಮಾಡುವ ಬೇಡಿಕೆಯನ್ನು ಈಡೇರಿಸುವುದು, ಕುರಿತೆಲ್ಲ ವಿಷಯಗಳನ್ನು ಮಂಡಿಸಿದರು.

ಶ್ರೀ ಪಿ.ಜಿ.ಆರ್.ಸಿಂಧ್ಯಾ ಅವರು, ಸರ್ಕಾರವು ತಮ್ಮ ಬೇಡಿಕೆಗಳಿಗೆ ಕೆಲ ಮಟ್ಟಿಗೆ ಸ್ಪಂದಿಸಿರುವ ಬಗ್ಗೆ ಹೇಳಿ ಮುಂದುವರಿದು, ಸಾಲದ ಮೇಲಿನ ಬಡ್ಡಿಯ ಪೂರ್ಣ ಮನ್ನಾ, ರೈತರಿಗೆ ತೀರ ಕಷ್ಟವಾಗಿರುವ ಕಾರಣ, ಸಾಲದ ಅವಧಿ ಪರಿವರ್ತನೆ ಕುರಿತು ನುಡಿದು ಸದನದ ಕಾರ್ಯಕಲಾಪವನ್ನು ಮುಂದುವರಿಸಲು ಅವಕಾಶ ಕೊಟ್ಟಿದ್ದಕ್ಕೆ ಅಭಿನಂದನೆ ಸಲ್ಲಿಸಿ ಧರಣಿ ಮಾಡಿದ ಕಾರಣವನ್ನು ತಿಳಿಸಿದರು. ಶ್ರೀ ಸಿ.ಚನ್ನಿಗಪ್ಪನವರು ಇದಕ್ಕೆಲ್ಲ ದನಿಗೂಡಿಸಿದರು.

**ವಿಷಯ 4:** ರೈತರ ವಿವಿಧ ಸಮಸ್ಯೆಗಳಿಗೆ ಪರಿಹಾರಗಳ ಕುರಿತ ಚರ್ಚೆ

26.7.2001 ರ ವಿಧಾನಸಭಾಧಿವೇಶನದಲ್ಲಿ[3] ಶ್ರೀ ಎಸ್.ಎಚ್.ಮಹದೇವ ಪ್ರಸಾದ್ ಅವರು ಚರ್ಚೆಯನ್ನು ಪ್ರಾರಂಭಿಸುತ್ತ. ಬರಗಾಲದಿಂದಾಗಿ ಒದಗಿರುವ ಕುಡಿಯುವ ನೀರಿನ ಸಮಸ್ಯೆ; ಪಂಚಾಯಿತಿ ಕಾಯ್ದೆ ಪ್ರಕಾರ ಗ್ರಾಮ ಪಂಚಾಯಿತಿಗಳಿಗೆ ಓವರ್‌ಹೆಡ್ ಟ್ಯಾಂಕ್‌ನ ನೀರು ಸರಬರಾಜು ವ್ಯವಸ್ಥೆ; ಬೋರ್‌ವೆಲ್ ಕೆಟ್ಟರೆ ತಾಲ್ಲೂಕು ಪಂಚಾಯಿತಿಗಳಿಂದ ರಿಪೇರಿ ಮಾಡಿಸುವ ಕೆಲಸ ಸರಿಯಾಗಿ ನಡೆಯದಿರುವುದು; ಸಣ್ಣ ನೀರಾವರಿ ಪ್ರದೇಶದ ಕೆರೆಕಟ್ಟೆಗಳ ಅಭಿವೃದ್ಧಿಗೆ ನೀರಾವರಿ

3 . ವಿಧಾನಸಭಾ ನಡವಳಿಕೆಗಳು., ಸಂಪುಟ 6, ಭಾಗ–2, (26–7–2001) ಪು. 1237–1249

ಯೋಜನೆ ವಂಚಿತ ತಾಲೂಕುಗಳಿಗೆ ಹೆಚ್ಚಿನ ಅನುದಾನ ನೀಡುವುದು; ನೀರಾವರಿ ಯೋಜನೆಗೆ ಒಳಪಡದ ತಾಲ್ಲೂಕುಗಳಲ್ಲಿ **ಗಂಗಾ ಕಲ್ಯಾಣ** ಯೋಜನೆಯ ರೀತಿಯಲ್ಲಿ ಪ್ರತಿಗ್ರಾಮದಲ್ಲಿ 10–15 ಜನ ವ್ಯವಸಾಯಗಾರರನ್ನು ಒಟ್ಟುಗೂಡಿಸಿ ಸರ್ಕಾರ ಕೊಳವೆಭಾವಿ ಮೋಟಾರನ್ನು ಅಳವಡಿಸಿ ನೀರಾವರಿ ವ್ಯವಸ್ಥೆ ಮಾಡುವುದು; ಆನೆಗಳಿಂದ ಹಾಗೂ ಬೇರೆ ಕಾರಣಗಳಿಂದ ಬೆಳೆ ಹಾನಿಯಾದಾಗ ರೈತರಿಗೆ ಪರಿಹಾರದ ಮೊತ್ತವನ್ನು, ಅವರು ಅರ್ಜಿಕೊಟ್ಟ 12–20 ದಿವಸಗಳಲ್ಲಿ ಒದಗಿಸುವುದು; ಆ ಮೊತ್ತ ಬಹಳ ಕಡಿಮೆ ಇರುವುದು; ಅರಣ್ಯದ ಅಂಚಿನ ಪ್ರದೇಶಗಳಲ್ಲಿ ಆನೆತಡೆ ಕಂದಕ ನಿರ್ಮಾಣ ಹಾಗೂ ಸೋಲಾರ್ ಫೆನ್ಸಿಂಗ್ ಹಾಕಿ ಕಾಡುಪ್ರಾಣಿಗಳು ಕೃಷಿಭೂಮಿಕಡೆ ಬರದಂತೆ ವ್ಯವಸ್ಥೆ ಮಾಡುವುದು; ಇದಕ್ಕಾಗಿ ಅರಣ್ಯ ಇಲಾಖೆಯಲ್ಲಿ ಸ್ಕೀಂಗಳನ್ನು ಮಂಜೂರು ಮಾಡುವುದು; ಬೇಸಿಗೆಯಲ್ಲಿ ಅರಣ್ಯದಲ್ಲಿ 20–30 ವರ್ಷಗಳ ಹಿಂದೆಯೇ ಬಿದ್ದುಹೋಗಿ ಒಣಗಿದ ಮರಗಳ ಕಾರಣ ಕಾಡ್ಗಿಚ್ಚು ಏಳದಿರಲು, ಆ ಮರಗಳನ್ನು ಹೊರಗೆ ಸಾಗಿಸುವ ವ್ಯವಸ್ಥೆ ಮಾಡುವುದು, ಗ್ರಾಮೀಣ ಇಂಧನಶಕ್ತಿಯನ್ನು ಸೀಮಿತ ರೀತಿಯಲ್ಲಿರಿಸದೆ ಹೆಚ್ಚಿನ ಮಹತ್ವ ಕೊಡಬೇಕಿರುವುದು ಕುರಿತೆಲ್ಲ ಸರ್ಕಾರದ ಉತ್ತರ ಬಯಸಿ ತಮ್ಮ ಮಾತನ್ನು ಮುಗಿಸಿದರು.

**ಶ್ರೀ ಎಚ್.ಎಂ.ಚಂದ್ರಶೇಖರಯ್ಯ** ಅವರು : ಕೆರೆಯ ಹೂಳನ್ನು ತೆಗೆಸಿ ಮಳೆ ನೀರು ಸಂಗ್ರಹಿಸಿ, ರೈತರಿಗೆ ನೆರವಾಗುವಿಕೆ; ಗ್ರಾಮೀಣ ರಸ್ತೆಗಳ ಡಾಂಬರೀಕರಣ; ಪಾಮ್ ಆಯಿಲ್ ಮರಗಳನ್ನು ರೈತರು ಇಂದು ಕೀಳುವುದನ್ನು ತಪ್ಪಿಸಿ, ಆ ಮರಗಳ ಬೆಳೆಸುವಿಕೆ, ಸರ್ಕಾರ ಅಡಿಕೆ ಧಾರಣೆಯನ್ನು ಉಳಿಸಿಕೊಟ್ಟಿರುವಿಕೆ; ಮಲೆನಾಡಿನಲ್ಲಿ ಮಂಗನ ಖಾಯಿಲೆ ಸಂಶೋಧನೆಯನ್ನು ಮುಂದುವರಿಸುವಿಕೆ; ಬಗರ್‌ಹುಕುಂ 1–2, ಎಕರೆ ಸಾಗುವಳಿ ಮಾಡುತ್ತಿರುವ ರೈತರಿಗೆ ಪಟ್ಟಾ ಮಾಡಿ ಕೊಡುವಿಕೆ, ಅಕ್ಕ ಪಕ್ಕದಲ್ಲಿಯೇ ಬೋರ್ ಹಾಕುತ್ತಿರುವ ರೈತರಿಗೆ ನಿಯಮದ ಕಡಿವಾಣವನ್ನು ಅಂತರ್ಜಲ ನಿರ್ವಹಣೆಗೆ ಅನುಕೂಲಿಸುವಂತೆ ಅಂತರವನ್ನು ಕಾಪಾಡುವುದಕ್ಕೆ ಹಾಕುವುದು; ರೈತರ ಸಾಕ್ಷರತೆಗೆ ಪ್ರೋತ್ಸಾಹ, ತಾಲೂಕುಗಳಲ್ಲಿ ಹಣ್ಣು ಸಂಸ್ಕರಣಾ ಕೇಂದ್ರ ನಿರ್ವಹಿಸುವಿಕೆ; ರೈತ ಬೆಳೆದ ಉತ್ಪನ್ನಕ್ಕೆ ಎಪಿಎಂಸಿ ಯಾರ್ಡ್‌ನಲ್ಲಿ ನಿಜವಾದ ಬೆಲೆ ದೊರಕಿಸುವುದು; ಕಪ್ಪುಹುಳು ರೋಗ, ನುಸಿರೋಗ ಇತ್ಯಾದಿ ಬೆಳೆ ರೋಗಗಳನ್ನು ನಿಯಂತ್ರಿಸುವ ಕಾರ್ಯ; ಗಾಜನೂರು ಡ್ಯಾಂ ಅನ್ನು ಉನ್ನತಗೊಳಿಸುತ್ತಿರುವುದು ಕುರಿತೆಲ್ಲ ಹೇಳಿ ತಮ್ಮ ಮಾತನ್ನು ಮುಗಿಸಿದರು.

**ಶ್ರೀ ಎಂ.ಎಸ್.ಆತ್ಮಾನಂದ** ಅವರು ಮಾತನಾಡುತ್ತ, 2 ಲಕ್ಷ ಎಕರೆಗಳ ವಿಶ್ವೇಶ್ವರ ನಾಲಾ ಅಚ್ಚುಕಟ್ಟು ಪ್ರದೇಶದ ನಿರ್ವಹಣಾ ಕಾಮಗಾರಿಗಳ ಅಸಮರ್ಪಕತೆಯಿಂದಾಗಿ ನಾಲೆಯ ಕೊನೆಯ ಭಾಗದ ರೈತರಿಗೆ ನೀರಿನ ಕೊರತೆಯಾಗಿರುವುದು; ನಾಲೆಯ ದುರಸ್ಥಿಗೆ ನೀಡಿರುವ ತಲಾನುದಾನ ಕಡಿಮೆ ಇದ್ದು; ನಾಲಾ ಕೊನೆಭಾಗದ ರೈತರಿಗೆ 5 ಕೋಟಿ ರೂ. ವೆಚ್ಚದ 17–18 ಏತ ನೀರಾವರಿ ಕಾಮಗಾರಿ ತುಂಬಾ ನಿಧಾನಗತಿಯಲ್ಲಿ ನಡೆಯುತ್ತಿದ್ದು ಅನಾನುಕೂಲ ತಪ್ಪಿಲ್ಲದಿರುವುದು, ಅನುದಾನದ ಕೊರತೆಯಿಂದ ಏತ ನೀರಾವರಿ, ಕೆರೆಗಳ ದುರಸ್ತಿ ಕಾರ್ಯವು ಮಂಡ್ಯ ಜಿಲ್ಲೆಯಲ್ಲಿ ಅಪೂರ್ಣವಾಗಿರುವುದು; ನೀರಾವರಿ ಸಹಕಾರ ಸಂಘಗಳ ಮೂಲಕ ರೈತರ ನೀರಿನ ನಿರ್ವಹಣೆಯ ಸಮರ್ಪಕತೆಗೆ ಸರ್ಕಾರದ ಪ್ರಯತ್ನವಾಗಿರುವುದು; ನೀರಾವರಿ ಸಹಕಾರ ಸಂಘಗಳನ್ನು ಹೆಚ್ಚಿಸಬೇಕಿರುವುದು; ಈ ಜಲಸಂವರ್ಧನ ಕಾರ್ಯಕ್ರಮದಡಿಯಲ್ಲಿ ವಿಶ್ವೇಶ್ವರಯ್ಯ ನಾಲಾ ಅಚ್ಚುಕಟ್ಟು ಪ್ರದೇಶದ ಕೆರೆಗಳನ್ನು ತೆಗೆದುಕೊಳ್ಳುವುದು; ಕಾವೇರಿ ಜಲಾನಯನ ಪ್ರದೇಶದ ಕಾಮಗಾರಿಗಳನ್ನು ಜಾಗೃತಗೊಳಿಸುವುದು; ಕೃಷ್ಣಾ ಜಲ ಭಾಗ್ಯ ನಿಗಮವಿರುವಂತೆ ಕಾವೇರಿ ಜಲ ಭಾಗ್ಯ ನಿಗಮವನ್ನು ಪ್ರಾರಂಭಿಸುವುದು; **ವರುಣಾ ಹಾಗು ವಿಶ್ವೇಶ್ವರಯ್ಯ ನಾಲಾ ಪ್ರದೇಶದ ರೈತರಿಗೆ ಕ್ರಾಪಿಂಗ್ ಪ್ಯಾಟ್ರನ್,** ನೀರಿನ ಅಗತ್ಯತೆ ಹಾಗೂ ನೀರು ಬಿಡುವ ಸರದಿಗಳು ಈ ಬಗ್ಗೆ ಗಮನಿಸಲು ಉಸ್ತುವಾರಿ ಸಮಿತಿ ನೇಮಕ ಹಾಗೂ ಅದಕ್ಕೆ ಸ್ಟ್ಯಾಟ್ಯುಟರಿ ಪವರ್ಸ್ ನೀಡಿಕೆ; ರಾಷ್ಟ್ರೀಯ ಜಲನೀತಿಯಡಿಯಲ್ಲಿ ಕಾವೇರಿ ಜಲವಿವಾದದ ಪರಿಸಮಾಪ್ತಿ ಆಗಬೇಕಿರುವುದು; ತೋಟಗಾರಿಕಾ ಉತ್ಪನ್ನಗಳಿಗೆ ಏಕರೂಪದ ಮಾರುಕಟ್ಟೆ ವ್ಯವಸ್ಥೆ ಒದಗಿಸುವುದು; ತತ್ಫಲವಾಗಿ ರೈತರು ಮತ್ತು ಸಂಸ್ಥೆಗಳ ನಡುವೆ ಸಹಕಾರ ಸಾಮರಸ್ಯ ಬೆಳೆದ ಮಾರುಕಟ್ಟೆಯ ಸೌಲಭ್ಯ ಉತ್ತಮವಾಗುವುದು; ಆವರ್ತನಿಧಿ ಸ್ಥಾಪಿಸಿ ರೈತರ ನೆರವಿಗಾಗಿರುವಂತೆ ಸಕ್ಕರೆ ಉದ್ಯಮದ ನೆರವಿಗೆ ಪೂರಕ ನಿಧಿ ಸ್ಥಾಪಿಸುವ ಬಗ್ಗೆ ಸರ್ಕಾರ ಮಾಡಬೇಕಾದ ಪ್ರಯತ್ನ; ಸಕ್ಕರೆ ಉತ್ಪಾದನಾ ವೆಚ್ಚವನ್ನು ತಗ್ಗಿಸಿ ರೈತರಿಗೆ ಬೆಲೆ ಕೊಡಲು ಅನುಕೂಲಿಸುವುದು; ಉಪ ಉತ್ಪನ್ನಗಳಿಗೆ ಪ್ರೋತ್ಸಾಹ, ಕೋ ಜನರೇಷನ್ ಘಟಕ ಸ್ಥಾಪನೆಯಿಂದ ವಿದ್ಯುತ್ ಉತ್ಪಾದಿಸಿ ರಾಜ್ಯದ ಗ್ರಿಡ್‌ಗೆ ನೀಡಿ ಕಾರ್ಖಾನೆಗಳ ಸ್ವಾವಲಂಬನೆಗೆ ನೆರವಾಗುವುದು; ಕೃಷಿಗೆ ಕೈಗಾರಿಕೆಯ ಸ್ಥಾನ ನೀಡುವುದು; ಬೆಳೆಯು ಬೆಲೆ ಸ್ಥಗಿತವಾಗಿ, ಸಾಲದ ಹೊರೆ ಹೆಚ್ಚಾಗಿ ರೈತರ ಆತ್ಮ ಹತ್ಯೆಯಾಗುತ್ತಿರುವುದು; ಸರ್ಕಾರ ಕೃಷಿ ಬೆಲೆ ಆಯೋಗವನ್ನು ರಚಿಸಿ, ಕಾರ್ಯೋನ್ಮುಖವಾಗಿರುವುದು; ರೈತನಿಗೆ ತಾನು ಬೆಳೆವ ಬೆಳೆಯ ಬೆಲೆ ನಿಗದಿ

ಮಾಡುವ ಸ್ವಾತಂತ್ರ್ಯದ ವ್ಯವಸ್ಥೆ ಮಾಡಬೇಕಿರುವುದು; ಎಪಿಎಂಸಿಗಳಲ್ಲಿ ಎಲೆಕ್ಟ್ರಾನಿಕ್ ತೂಕದ ಯಂತ್ರದ ವ್ಯಾಪಕ ಬಳಕೆ ಬೇಕಿರುವುದು ಈ ಕುರಿತೆಲ್ಲ ಹೇಳಿ ತಮ್ಮ ಮಾತನ್ನು ಮುಗಿಸಿದರು.

**ವಿಷಯ 5:** ನದಿ ನೀರೆತ್ತುವ ಮೋಟಾರುಗಳಿಗೆ ವಿಧಿಸುವ ದುಬಾರಿದರ

28.1.2002ರ ವಿಧಾನಪರಿಷತ್ತಿನ ಅಧಿವೇಶನದಲ್ಲಿ[4] **ಡಾ.ಎಂ.ಆರ್.ತಂಗಾ** ಅವರು, ರೈತರಿಗೆ ಬಹಳ ಮಹತ್ವದ (ಮೂಲ ವಸ್ತು) ಇನ್‌ಪುಟ್ ಆಗಿರುವ ನೀರು, ಕೃಷ್ಣಾ ನದಿ ದಂಡೆಯ ಬೆಳಗಾವಿ ಜಿಲ್ಲೆಯ ರೈತರಿಗೆ ಅದನ್ನು ಒದಗಿಸುವ ಡ್ಯಾಮ್ ಇತ್ಯಾದಿ ವ್ಯವಸ್ಥೆ ಇಲ್ಲ; ಬೆಳಗಾವಿ ಜಿಲ್ಲೆಯ ರೈತರು ದೊಡ್ಡ ಸಾಹಸ ಮಾಡಿ ಸುಮಾರು 20-30 ಜನ ಸೇರಿ ಸೊಸೈಟಿ ರೂಪಿಸಿಕೊಂಡು ರಿಜಿಸ್ಟ್ರಿ ಮಾಡಿಸಿಕೊಂಡಿರುವುದು ಬಹು ಶ್ಲಾಘನೀಯ. ಸುಮಾರು 20 ಕಿ.ಮೀ.ವರೆಗೆ ತಮ್ಮ ಸೊಸೈಟಿಯ ವತಿಯಿಂದ ಪೈಪ್‌ಲೈನ್ ಹಾಕಿಕೊಂಡು ಮಾಡಿರುವ ನದಿಯಿಂದ ನೀರನ್ನೆತ್ತುವಂಥ ಪ್ರಯತ್ನ; ಬೆಳಗಾವಿ ಜಿಲ್ಲೆ ಕೃಷ್ಣಾ ನದಿ ತೀರದಲ್ಲಿ ಇಂಥ ಅನೇಕ ಸೊಸೈಟಿಗಳಿರುವುದು; 2 ರಿಂದ 5 ಕೋಟಿ ರೂ.ಗಳ ವೆಚ್ಚದಲ್ಲಿ 15 ಕಿ.ಮೀ.ವರೆಗೆ ಪೈಪ್‌ಲೈನ್ ತೆಗೆದುಕೊಂಡು ಪಂಪ್‌ಸೆಟ್ ಮುಖಾಂತರ ಕೃಷ್ಣಾ ನದಿ ನೀರನ್ನು ತಮ್ಮ ಭೂಮಿ ಬೇಸಾಯಕ್ಕೆ ಹಾಯಿಸಿಕೊಂಡಿರುವುದು; ಅವರವರ ಜಮೀನಿಗೆ ಎಕರೆಗೆ ಇಂತಿಷ್ಟು ನೀರು ಎಂದು ಪ್ರಮಾಣಾನುಸಾರ ಪಾಳಿಯಲ್ಲಿ ಹಂಚಿಕೊಂಡಿರುವುದು; ಹಾಯಿಸುವ ಕಾಲದ ಪರಿಮಾಣವನ್ನು ನಿಬಂಧನೆ ಪ್ರಕಾರ ನಿರ್ಧರಿಸಿಕೊಂಡಿರುವುದು; ಅಗತ್ಯವಿರುವ ಅಶ್ವಶಕ್ತಿ ಸಾಮರ್ಥ್ಯದ ಪಂಪ್‌ಸೆಟ್‌ಗಳ ಅಳವಡಿಕೆಯಂಥ ಮಹತ್ವದ ವ್ಯವಸ್ಥೆ ಇರುವುದು (ಸುಮಾರು 200 ಅಶ್ವ ಸಾಮರ್ಥ್ಯ); ಈ ಕಾರಣ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮದವರು ಅವರನ್ನು ಹೈ ಟೆನ್‌ಷನ್ ಕನ್‌ಸುಮರ್ (High tension Consumer) ವರ್ಗಕ್ಕೆ ಸೇರಿಸಿ ದುಬಾರಿ ದರ ವಿಧಿಸಿರುವ; ರೈತರು ಈಗಾಗಲೇ ಕೋಟ್ಯಾಂತರ ರೂ.ಗಳನ್ನು ಸರ್ಕಾರ, ಬ್ಯಾಂಕ್‌ಗಳಿಂದ ಸಾಲ ಪಡೆದು ವ್ಯವಸ್ಥೆ ರೂಪಿಸಿಕೊಂಡಿರುವಲ್ಲಿ ಕೆಪಿಟಿಸಿಎಲ್ ವಿಧಿಸಿರುವ ವರ್ಗದಿಂದಾಗಿ ತಗುಲುವ ದುಬಾರಿ ವಿದ್ಯುತ್ ಬಿಲ್ ತುಂಬುವುದಾಗಲಿ ಸಾಲ ಹಾಗು ಬಡ್ಡಿಯನ್ನು ವಾಪಸ್ ಮಾಡುವುದಾಗಲಿ ಸಾಧ್ಯವಾಗದಿರುವುದು; ರೈತರು ತಮ್ಮ ಜಮೀನು ಮಾರಿದರೂ ವಿದ್ಯುತ್ ಬಿಲ್ ಪಾವತಿ ಮಾಡಲು ಸಾಧ್ಯವಿಲ್ಲದಿರುವುದು; ಸರ್ಕಾರ ಕರ್ನಾಟಕದ ಇತರ ಭಾಗಗಳಲ್ಲಿ 5 ಅಶ್ವ ಶಕ್ತಿ

4. ವಿಧಾನ ಪರಿಷತ್ತಿನ ನಡವಳಿಕೆಗಳು; ಸಂಪು 308(5.7);(28.1.2002)ಪು.1047-53

ಸಾಮರ್ಥ್ಯದ ಪಂಪ್‌ಸೆಟ್ಟುವರಿಗೆ ವರ್ಷಕ್ಕೆ ಪ್ರತಿ ಅಶ್ವಶಕ್ತಿಗೆ 300 ರೂ ನಂತೆ 10 ಅಶ್ವಶಕ್ತಿ ಸಾಮರ್ಥ್ಯದವರೆಗೆ ವಿದ್ಯುತ್ ದರ ವಿಧಿಸುತ್ತಿರುವಂತೆ ಇಲ್ಲಿನ ರೈತರ ಸ್ವಯಂ ಸಾಧನೆಗಳನ್ನು ಗಮನಿಸಿ ಮುನ್ನೂರು ಅಥವಾ ಐನೂರು ರೂ. ದರವನ್ನು ವಿಧಿಸುವ ವ್ಯವಸ್ಥೆಯ ಅಗತ್ಯವಿರುವುದು, ಅವೈಜ್ಞಾನಿಕ ಕ್ರಮದಲ್ಲಿ ಹೆಚ್ಚು ದರ ವಿಧಿಸದೆ ರೈತರ ಬದುಕು ಕಷ್ಟಕ್ಕೆ ಸಿಲುಕದಂತೆ ಮಾಡುವುದು; ಕೆ.ಪಿ.ಟಿ.ಸಿ ಎಲ್. ನೌಕರರೂ ಕೆಲವೆಡೆ ಶಾಮೀಲಾಗಿ ಪರೋಕ್ಷ ಹಣ ಪಡೆಯದಂತೆ ಮಾಡಿ ಸರ್ಕಾರದ ಆದಾಯದ ಮೂಲವನ್ನು ಸೂಕ್ತವಾಗಿ ನಿರ್ವಹಿಸುವುದು; ನೀರಾವರಿ ಸೌಲಭ್ಯವಿಲ್ಲದೆಡೆ 10 ಅಶ್ವಶಕ್ತಿ ಸಾಮರ್ಥ್ಯದವರಿಗೆ ನಿಗದಿಗೊಳಿಸಿರುವ ವಿದ್ಯುತ್ ದರವನ್ನು ಇಲ್ಲಿನ ರೈತರಿಗೂ ನಿಗದಿ ಮಾಡುವುದು; ಇತ್ಯಾದಿ ವಿಷಯಗಳನ್ನು ಮಂಡಿಸಿದರು.

**ಸಚಿವ ಶ್ರೀ ಕೆ. ಎಚ್ ರಂಗನಾಥ್** ಅವರು. ಶ್ರೀ ತಂಗಾ ಅವರ ವಿಷಯ ಮಂಡನೆಯನ್ನು ಮೆಚ್ಚುತ್ತ; ರೈತರು ಮಾಡಿಕೊಂಡಿರುವ 200 ಜನ ರೈತ ಸೊಸೈಟಿಯು 200 ಅಶ್ವ ಶಕ್ತಿ ಸಾಮರ್ಥ್ಯದ ಪಂಪ್‌ಸೆಟ್ ಅಳವಡಿಸಿ ಕೊಂಡಿರುವ ಕಾರಣ ಹೈಟೆನ್‌ಷನ್ ಕನ್ಸೂಮರ್ ದರವನ್ನು ಅವರ ಮೇಲೆ ಹಾಕಲಾಗಿದೆ. ಅಂತಾಗಿ ದೊಡ್ಡ ಪ್ರಮಾಣದ ಬಿಲ್ ಪಾವತಿಸಬೇಕಾದ ಸಂದರ್ಭವಾಗಿದೆ. ರೈತರಾದರೋ ವ್ಯವಸಾಯಕ್ಕಾಗಿ ಅಶ್ವಶಕ್ತಿ ಸಾಮರ್ಥ್ಯವನ್ನು ಬಳಸುತ್ತಿದ್ದಾರೆ. ಇನ್ನೂರು ಅಶ್ವ ಶಕ್ತಿ ಸಾಮರ್ಥ್ಯನ್ನು ತಲಾ ಒಬ್ಬ ರೈತನಿಗೆ ಒಂದು ಅಶ್ವ ಶಕ್ತಿ ಸಾಮರ್ಥ್ಯದಂತೆ ಲೆಕ್ಕ ಹಾಕಿದರೆ ಒಬ್ಬೊಬ್ಬ ರೈತ ಒಂದೊಂದು ಅಶ್ವ ಶಕ್ತಿ ಸಾಮರ್ಥ್ಯವನ್ನು ಬಳಕೆ ಮಾಡಿದಂತಾಗುತ್ತದೆ ಈ ದೃಷ್ಟಿಯಿಂದ ಸರ್ಕಾರ ಹಾಗು ಮಾನ್ಯ ಸದಸ್ಯರು ಕೂಡ ಈ ಬಗ್ಗೆ ಯೋಚನೆ ಮಾಡಬೇಕಾದ ವಿಚಾರವಾಗಿದೆ, ಎಂದರು. **ಶ್ರೀ ವೀರಕುಮಾರ್ ಎ. ಪಾಟೀಲ್** ಅವರು ಈ ವಿಷಯವು ಕೆ. ಇ ಆರ್. ಸಿ (KEERC) ಮುಂದೆ ಇರುವುದರಿಂದ ಸದನ ಈ ಬಗ್ಗೆ ಮಾತನಾಡಲಾಗುವುದಿಲ್ಲ ಎಂದರು.

**ಅಧ್ಯಕ್ಷ ಪೀಠದಲ್ಲಿದ್ದ ಶ್ರೀ ಯು.ಆರ್. ಸಭಾಪತಿಯವರು,** ಶಾಸನ ಸಭೆಯ ವೇದಿಕೆಯನ್ನು ಮೀರಿದ ಯಾವ ವೇದಿಕೆಯಾ ಇಲ್ಲ ಮಾನ್ಯ ಶಾಸಕರು ಪ್ರಸ್ತಾಪಿಸಿರುವ ವಿಷಯ ಅವರ ಹಕ್ಕಿನ ವ್ಯಾಪ್ತಿಯೊಳಗಿದೆ. KERC ಅವರು ತೀರ್ಮಾನ ಮಾಡುವಂಥ ಸಂದರ್ಭದಲ್ಲಿ ಶಾಸನ ಸಭೆಯಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳನ್ನು ಗಮನದಲ್ಲಿಟ್ಟುಕೊಂಡು ತೀರ್ಮಾನ ಮಾಡಬೇಕಾಗುತ್ತದೆ. ಮಾನ್ಯ ಶಾಸಕರು ಜನರ ಪರವಾಗಿ ಮಾತನಾಡಿದ್ದಾರೆ ಎಂದರು. ಶ್ರೀ ವೀರಕುಮಾರ್ ಎ. ಪಾಟೀಲ್

ಅವರು ಸಬ್ಸಿಡಿ ಪಡೆದುಕೊಳ್ಳುವ ಕೆಟಗರಿಯಲ್ಲಿ ಲಿಫ್ಟ್ ಇರಿಗೇಶನ್ ಕೆಟಗಿರಿ ಇಲ್ಲ; ಸಬ್ಸಿಡಿ ನೀಡಲು ಸರ್ಕಾರ ವಿಚಾರ ಮಾಡುತ್ತದೆ ಎಂದರು ಆಗ ಸಭಾಪತಿಯವರು ಸಹಕಾರಿ ಕೃಷಿಗೆ ಪ್ರೋತ್ಸಾಹ ಕೊಡುವ ದೃಷ್ಟಿಯಿಂದ, ಕೆ,ಇ.ಆರ್.ಸಿ ಯು ನಮ್ಮ ಸದನದ (creation) ಆದ್ದರಿಂದ ವಿಶೇಷ ರೀತಿಯಲ್ಲಿ ವಿಶೇಷ ಪ್ರಕರಣ ಎಂದು ಪರಿಗಣಿಸಿ ಅವಶ್ಯಕತೆ ಬಿದ್ದರೆ ಕಾನೂನಿನಲ್ಲಿ ತಿದ್ದುಪಡಿಮಾಡಿ ಅವಕಾಶ ಮಾಡುವುದು ಸಬ್ಸಿಡಿ ಕೊಡುವುದಕ್ಕಿಂತಲೂ ದೊಡ್ಡದು ಎಂದು.

ಡಾ.ಎಂ.ಆರ್ ತಂಗಾ ಅವರು; ಒಂದು ಎಕರೆ ನೀರಾವರಿ ಮಾಡಲು 300ರೂ. ಟಾಕ್ಸ್ ರೈತರಿಗೆ ಹಾಕುತ್ತಾರೆ ಆದರೆ ನಮ್ಮ ಪ್ರಯತ್ನದಿಂದ ವಿದ್ಯುಚ್ಛಕ್ತಿ ಮುಖಾಂತರ ಮಾಡಿದರೆ, ಬಿಲ್ ಕೊಟ್ಟು ಎಲ್ಲಾ ಬಡ್ಡಿ ತುಂಬಿದರೆ ನಮಗೆ ಎಕರೆಯೊಂದಕ್ಕೆ 2 ಸಾವಿರ ಆಗುತ್ತದೆ. ಇಂಥ ವ್ಯತ್ಯಾಸವನ್ನು ಗಮನದಲ್ಲಿಟ್ಟು ಕೊಳ್ಳಬೇಕು. ನಮಗೆ ಸಬ್ಸಿಡಿ ಬೇಡ, ಭಿಕ್ಷೆ ಬೇಡ ನ್ಯಾಯಬೇಕು. ಕರ್ನಾಟಕದ ಇತರ ರೈತರಿಗೆ ಎಕರೆಗೆ ಹೆಚ್. ಪಿ ಒಂದಕ್ಕೆ ಪ್ರತಿ ವರ್ಷ 300 ರೂ. ಛಾರ್ಜ್ ಮಾಡುವ ದರದಂತೆ ನಮಗೂಬೇಕು. ಸಬ್ಸಿಡಿ ಬೇಡ. ಅದು ಕೊಟ್ಟಿದ್ದೇವೆ ಎಂದು ಹೇಳುವ ಅವಶ್ಯಕತೆಯೂ ಇಲ್ಲ ಎಂದರು. ಶ್ರೀ ವೀರಕುಮಾರ್ ಎ. ಪಾಟೀಲ್ ಅವರು ಕೆ.ಪಿಟಿಸಿಎಲ್‌ಗ ಸರ್ಕಾರ ಕೊಡುತ್ತಿರುವ ಸಬ್ಸಿಡಿ ಬಗ್ಗೆ ನನ್ನ ಮಾತೇ ವಿನಹ ರೈತರ ಸಬ್ಸಿಡಿದರದಲ್ಲಿ ಸಬ್ಸಿಡಿ ಸ್ಕೀಮ್‌ನಡಿ ಲಿಫ್ಟ್ ಇರಿಗೇಷನ್ ಕೆಟಗರಿ ಬರುವುದಿಲ್ಲ. ಈ ಸ್ಕೀಮ್‌ನಡಿ ಅದನ್ನು ತಂದ ಮೇಲ ರೈತರಿಗೆ ಪರಿಹಾರ ಅಥವಾ ರಿಯಾಯಿತಿ ದರ ಕೊಡಲು ಸಾಧ್ಯವಾಗುತ್ತದೆ, ಎಂದರು. ಆಗ ಡಾ. ಎಂ. ಆರ್. ತಂಗಾ ಅವರು ಯಾವ ಮೊಡಾಲಿಟಿ ಆಗಲಿ ರೈತರಿಗೆ ಬೆನಿಫಿಟ್ ಸಿಗಬೇಕು ಅಷ್ಟೆ ಎಂದರು. ಸಚಿವರು ಪರಿಶೀಲಿಸುವ ಬಗ್ಗೆ ಹೇಳಿದರು.

ಸಚಿವ ಶ್ರೀ **ಆರ್. ವಿ ದೇಶಪಾಂಡೆ** ಅವರು ಮಾತನಾಡಿ ರೈತರಿಗೆ 300 ಹೆಚ್. ಪಿಯನ್ನು ಅದಕ್ಕೆ ಇರುವ ಟ್ಯಾರಿಫ್ ಕೆಟಗರಿಯಡಿ ನೀಡಲಾಗುತ್ತಿದೆ. ಈ ಕೆಟಗರಿಯಿಂದ ಕೆ.ಪಿಟಿ.ಸಿ.ಎಲ್‌ಗೆ ಪ್ರತಿ ವರ್ಷ 2300 ಕೋಟಿ ರೂ.ಗಳನ್ನು ಸರ್ಕಾರ ಕೊಡುತ್ತಿದೆ. ರೈತರಿಗೆ ಬೇರೆ ಸಬ್ಸಿಡಿ ಭಾಗ್ಯಜ್ಯೋತಿ, ಕುಟೀರಜ್ಯೋತಿ ಇವುಗಳಿಗೆ ಕೊಡಲಾಗುತ್ತಿದೆ. The responsibility of fixing The tariff is of Karnataka *Eletricity Regulatary* Commission. Govt. rule is limited. still suitable direction will be givin to KPTCL to see this irregation Category is brought under the subsidised Category and Solve The problem of the farmers, ಎಂದೆಲ್ಲ ಹೇಳಿದರು.

**ವಿಷಯ 6:** ರೈತ ಕೃಷಿ ಕಾರ್ಯಸೂಚಿ ಇಲಾಖೆಗಳಿಗೆ ಆದ್ಯತೆ

17.7.2002ರ ವಿಧಾನಸಭಾಧಿವೇಶನದಲ್ಲಿ[5] ಶ್ರೀ ಬೆಲ್ಲದ್ ಚಂದ್ರಕಾಂತ ಗುರಪ್ಪ ಅವರು ವಿಷಯಗಳನ್ನು ಮಂಡಿಸುತ್ತ : ರೈತನ ಕಸುಬಾದ ಕೃಷಿ, ತೋಟಗಾರಿಕೆ, ಪಶು ಸಂಗೋಪನೆ, ಹಿಪ್ಪು ನೇರಳೆ (ರೇಷ್ಮೆ) ಇತ್ಯಾದಿ ಮಹತ್ವದ ಕಾರ್ಯದಲ್ಲಿ ತೊಡಗಿರುವ ರೈತರಿಗೆ ನೈಸರ್ಗಿಕ ಸಂಪನ್ಮೂಲಗಳ ಸೂಕ್ತ ಬಳಕೆಗೆ ಅವಕಾಶ, ಅದರ ಅಭಿವೃದ್ಧಿ ವ್ಯಾಪ್ತಿಗೆ ಬರುವ ಇಲಾಖೆಗಳಿಗೆ ಕೊಡಬೇಕಿರುವ ಆದ್ಯತೆ, ಆಹಾರದ ಬೆಳೆಗಳು, ಹಣಕಾಸಿನ ಬೆಳೆಗಳು ಮಸಾಲೆ ಬೆಳೆಗಳು, ತೋಟಗಾರಿಕೆ ಬಹಳ ಕಡಿಮೆ ಆಗಿರುವುದು ಅಂತಾಗಿ ಕೆರೆ ಕಟ್ಟೆಗಳಲ್ಲಿ ಹೂಳು ತೆಗೆಸಬೇಕಿರುವಲ್ಲಿ ಸರ್ಕಾರ ಸರಿಯಾದ ಪ್ರಯತ್ನ ಮಾಡಬೇಕಿರುವುದು, 40 ಸಾವಿರಕ್ಕಿಂತ ಹೆಚ್ಚು ಕೆರೆಗಳು ಇರುವಲ್ಲಿ 25 ಸಾವಿರ ಕೆರೆಗಳಲ್ಲಾದರೂ ಹೂಳು ಎತ್ತ ಬೇಕೆನ್ನುವಲ್ಲಿ ಈ ವರ್ಷ 5 ಸಾವಿರ ಕೆರೆಗಳ ಹೂಳು ಎತ್ತುವ ಕಾರ್ಯ ಕೈಗೊಳ್ಳುತ್ತೇವೆ ಎಂಬ ಸೂಕ್ತವಾದ ಘೋಷಣೆಯಾದರೂ ಬರಗಾಲ ಕಾಲದಲ್ಲಿ ಜಿಲ್ಲೆಯಲ್ಲಿನ ಕೆರೆಗಳ ನಿಂಗಡನೆ, ಅಚ್ಚುಕಟ್ಟು ಸರಿಪಡಿಸುವಿಕೆ ಜಲಾನಯನ ಪ್ರದೇಶದ ಬೆಳವಣಿಗೆ ಮಾಡುವ ಕಾರ್ಯವಲ್ಲದೆ ಹೂಳು ತೆಗೆಸುವ ಕಾರ್ಯವನ್ನು ಆದ್ಯತೆಯಲ್ಲಿ ತೆಗೆದುಕೊಳ್ಳಬೇಕಾಗಿತ್ತು, ಎಂಬ ಬಗೆಗೆಲ್ಲ ಹೇಳಿದರು. ಅವರು ಮುಂದುವರಿದು, ರಾಜ್ಯದಲ್ಲಿ ಬರಗಾಲ ಅನುಭವಿಸುತ್ತಿರುವಾಗ ಒಣಗಿದ ಕೆರೆಗಳಲ್ಲಿ ಹೂಳು ತೆಗೆಸುವ ಅಚ್ಚುಕಟ್ಟು ಸರಿಪಡಿಸುವ, ಕಾಲುವೆಗಳನ್ನು ಸರಿಪಡಿಸುವ ಕೆಲಸ ನಡೆದಿಲ್ಲ. ಮಲಪ್ರಭಾ ಘಟಪ್ರಭಾ ಜಲಾಶಯಗಳಲ್ಲಿಯೂ ಸರಿಯಾಗಿ ನೀರು ಬರದಿರುವಲ್ಲಿ, ಆ ಅಣೆಕಟ್ಟುಗಳಲ್ಲಿ ಶೇಖರವಾದ ಹೂಳು ತೆಗೆಯಬೇಕಾಗಿದ್ದುದು, ಎಣ್ಣೆ ಕಾಳು, ಜೋಳ, ಗೋವಿನ ಜೋಳ ಹತ್ತಿ ಇತ್ಯಾದಿ ಬೆಳೆಗಳು ಕೀಟಬಾಧೆ ಪ್ರತಿಕೂಲ ಹವಾಮಾನದಿಂದ ಅವುಗಳ ಉತ್ಪಾದನೆ ಕಡಿಮೆಯಾಗಿರುವುದು, ಜೊತೆಗೆ ಭೂಮಿಯ ಫಲವತ್ತತೆ ಜಲಾನಯನ ಪ್ರದೇಶದಲ್ಲಿ ಹಾಳಾಗಿರುವುದು, ಅದಕ್ಕಾಗಿ ಸರಿಯಾದ ತಾಂತ್ರಿಕ ಜ್ಞಾನ ನೀಡಿ ಅಥವಾ ಸುಧಾರಣೆ ಮಾಡಿ ರೈತರ ಬವಣೆಯನ್ನು, ಕೃಷಿ ವಿಶ್ವವಿದ್ಯಾಲಯಗಳು ನೀಗಿಸಬೇಕಿರುವುದು ಎಲ್ಲಾ ಬೆಳೆಗಳನ್ನು, ಎಲ್ಲಾ ಪ್ರದೇಶದಲ್ಲಿ ಬೆಳೆಯುವ ಬದಲು ಕೆಲವು ಬೆಳೆಗಳನ್ನು ಬೆಳೆಯಲು ಪ್ರಾದೇಶಿಕ ನಿರ್ಬಂಧವನ್ನು ಒಡ್ಡಬೇಕಿರುವ, ಕೆಲವು ವಲಯಗಳನ್ನು ಕೆಲವು ಬೆಳೆಗಳಿಗಾಗಿಯೇ ನಿರ್ದಿಷ್ಟವಾಗಿ ಗುರುತು ಹಚ್ಚುವುದನ್ನು, ಕೃಷಿ ವಿಶ್ವವಿದ್ಯಾಲಯ ಹಾಗು ಕೃಷಿ ಇಲಾಖೆ

5. ವಿಧಾನ ಸಭಾ ನಡವಳಿಕೆಗಳು, ಸಂಪುಟ 5 (3.5) ಭಾಗ.2(17.7.2002) ಪು.591-605

ಮಾಡಬೇಕಿರುವುದು, ಕೃಷಿ ವಿಸ್ತರಣಾ ಇಲಾಖೆಯ ಅಧಿಕಾರಿಗಳು ಗ್ರಾಮಗಳಿಗೆ ಹೋಗಿ, ಬೆಳೆ ವಿಜ್ಞಾನದ ಮಾಹಿತಿ ಬೆಳೆಯುವ ಬೆಳೆಗಳಿಗೆ ಸೌಲಭ್ಯ ಒದಗಿಸುವಿಕೆ ಅಥವಾ ಜ್ಞಾನದ ತರಬೇತಿ ನೀಡುವ ಕಾರ್ಯ ಮಾಡುತ್ತಿಲ್ಲದಿರುವುದು ಕೃಷಿ ಇಲಾಖೆಯಲ್ಲಿ, ಯಾವ ಬೆಳೆ ಎಷ್ಟು ಪ್ರಮಾಣದಲ್ಲಿ ರಾಜ್ಯದಲ್ಲಿ ಬೆಳೆಯುತ್ತಿರುವ ಬಗ್ಗೆ ಯಾವ ವಲಯದಲ್ಲಿ ಯಾವ ಬೆಳೆ ಹೆಚ್ಚು ಬೆಳೆಯಲು ಅನುಕೂಲ ಎಂಬ ಬಗ್ಗೆ ಅಂಕಿ ಅಂಶಗಳಿಲ್ಲದಿರುವುದು, ಅದರಿಂದ ಬೇರೆ ಬೇರೆ ಬೆಳೆಗಳನ್ನು ಬೆಳೆದು ರೈತ ಕೈಸುಟ್ಟುಕೊಂಡಿರುವುದು, ಪ್ರಾತ್ಯಕ್ಷಿಕೆ ಮಾಡಿ ರೈತರು ಹೆಚ್ಚು ಲಾಭದಾಯಕವಾಗಿ ಬೆಳೆಯಲು ಏನು ಮಾಹಿತಿ ಕೊಡಬೇಕು ಎಂಬಂಥ ಕಾರ್ಯವನ್ನು ಮಾಡಿ ಫಾರಂಗಳ ಮೂಲಕ ರೈತರಿಗೆ ತೋರದೆ ಕೃಷಿ ಇಲಾಖೆ ನೆರವಾಗದಿರುವುದು, ಫಾರಂಗಳ ಅಭಿವೃದ್ಧಿ ಹಾಗು ಹೊಸ ಹೊಸ ಸಂಶೋಧನೆಗಳ ಮೂಲಕ ಸಂಸ್ಕರಣೆ ಮಾಡಿದಂಥ ತಳಿಗಳನ್ನು ಒದಗಿಸಲು ಕೃಷಿ ವಿಶ್ವವಿದ್ಯಾಲಯಗಳಿಗೆ ಎಲ್ಲ ಫಾರಂಗಳನ್ನು ಒಪ್ಪಿಸಬೇಕಾದುದು, ಸಬ್ಸಿಡಿ ಹಾಗು ಗೊಬ್ಬರದ ಬೀಜ ಕೀಟನಾಶಕಗಳನ್ನು ರೈತರಿಗೆ ಕೊಡುವ ದಿಕ್ಕಿನಲ್ಲಿ ಕೃಷಿ ಇಲಾಖೆ ಸರಿಯಾಗಿ ಕೆಲಸ ಮಾಡದಿರುವುದು ರೈತರಿಗೆ ಬೆಂಬಲ ಬೆಲೆಯನ್ನು ನೀಡಬೇಕೆಂದು ಸರ್ಕಾರ ಪ್ರಯತ್ನಿಸಿದಾಗ ಕೃಷಿ ಇಲಾಖೆಯು ಖೊಟ್ಟಿ ಅಂಕಿ ಅಂಶಗಳನ್ನು ಒದಗಿಸುವುದು ತತ್ಫಲವಾಗಿ ರೈತನೊಬ್ಬ ಬೆಳೆಯದಿರುವ ಬೆಳೆಯನ್ನು ಬೇರೆಯವರು ಅವನ ಹೆಸರಿನ ಮೇಲೆ ತೆಗೆದುಕೊಂಡು ಬರುವಂಥ ಪ್ರಸಂಗವಾಗುವುದು ಕುರಿತೆಲ್ಲ ಹೇಳಿದರು. ಈ ನಡುವೆ ಸಂಬಂಧಪಟ್ಟ ಸಚಿವರು ಬಂದಿಲ್ಲ. ಸಭೆಗೆ ಅವರನ್ನು ಕರೆಸುವ ವ್ಯವಸ್ಥೆ ಆಗಬೇಕೆಂದು ಕೆಲವಾರು ಸದಸ್ಯರು ಅಧ್ಯಕ್ಷರಲ್ಲಿ ಮನವಿ ಮಾಡಿದರು.

**ಶ್ರೀ ಚಂದ್ರಕಾಂತ ಬೆಲ್ಲದ್** ಅವರು ಮಾತು ಮುಂದುವರಿಸಿ ರೈತರು ತೊಡಗಿಸಿರುವ ಹಣ ಶ್ರಮ ಪಡೆದ ಉತ್ಪನ್ನಗಳು ಲಾಭದಾಯಕವಾದರೆ ಮಾತ್ರ ಶೇ 20ರಷ್ಟು ಗ್ರಾಮವಾಸಿಗಳಾಗಿರುವ ರೈತ ಕುಟುಂಬಗಳ ಉತ್ತಮ ಜೀವನಕ್ಕೆ ಸಾಧ್ಯವಾಗುತ್ತದೆ. ಬಹುತಃ ಅತೀ ಹೆಚ್ಚು ಸೇವಾ ಸಿಬ್ಬಂದಿಯನ್ನು ರಾಜ್ಯದಲ್ಲಿ ಹೊಂದಿರುವ ಕೃಷಿ ಇಲಾಖೆ ವಿಸ್ತರಣಾ ಕಾರ್ಯದಲ್ಲಿ ರೈತರಿಗೆ ಯಾವ ರೀತಿಯಲ್ಲಿ ಸಹಾಯ ಮಾಡುತ್ತಿದೆ? ರೈತರ ಅಭಿವೃದ್ಧಿ ದಿಶೆಯಲ್ಲಿ ಪಾಲ್ಗೊಳ್ಳುತ್ತಿದೆ? ಕೃಷಿ ಲಾಭದಾಯಕವಲ್ಲವೆಂದು ಹೇಳಿ ಅವರಲ್ಲಿನ ಯುವಕರು ನಗರ ಪ್ರದೇಶಗಳಿಗೆ ವಲಸೆ ಹೋಗುವ ದುಸ್ಥಿತಿ ಕಾಣುತ್ತಿದ್ದೇವೆ. ಆ ಕುಟುಂಬಗಳಲ್ಲಿ ವ್ಯವಸಾಯದ ಮೂಲಕ ಬದುಕಿನ ಸಂರಕ್ಷಣೆ ಆಗದೆ ಈ ವಲಸೆಗೆ ಕಾರಣವಾಗಿದೆ ಈ ನಿಟ್ಟಿನಲ್ಲಿ

ನಮ್ಮ ಕೃಷಿ ಇಲಾಖೆ ಬಹಳ ಸಮರ್ಥವಾಗಿ ಕೆಲಸ ಮಾಡಬೇಕಿದೆ. ಹೊಸ ಹೊಸ ಕೃಷಿ ವಿಜ್ಞಾನದ ಬೆಳವಣಿಗೆ ಬಗ್ಗೆ ಮಾಹಿತಿ ಸೂಕ್ತ ತರಬೇತಿ ಪ್ರಾದೇಶಿಕ ಲಾಭದಾಯಕ ಬೆಳೆ ಹಾರ್ವೆಸ್ಟ್ ಮಾಡುವ ವಿಧಾನ ಪ್ಯಾಕೇಜ್ ಮಾಡುವ ವಿಧಾನ ಸುಧಾರಿಸುವ ಕೃಷಿ ಪದ್ಧತಿ ಮಳೆ ಕಡಿಮೆಯಾರುತ್ತಿರುವ ಸಂದರ್ಭದಲ್ಲಿ ಭೂಸಾರ ಉಳಿಸಿಕೊಳ್ಳುವಂಥ ವಿಧಾನಗಳ ಅನುಸರಣೆ ಜಲಾನಯನ ಪ್ರದೇಶದ ಭೂಮಿಯಲ್ಲಿ ನೀರು ಇಂಗಿ, ನೀರಿನ ಪಾತಳಿ ಹೆಚ್ಚಿಸಲು ಬೇಕಾದ ವಿಧಾನ ಕುರಿತೆಲ್ಲ ರೈತರಿಗೆ ತಿಳುವಳಿಕೆ ಕೊಡಬೇಕು.

ರೈತರು ಪಸುಸಂಗೋಪನ ಮಾಡಿ, ಆರ್ಥಿಕ ಬೆಳವಣಿಗೆ ಅಗುವಂಥ ಪಶು ಸಂವರ್ಧನೆಗೆ ವಿಶ್ವವಿದ್ಯಾಲಯದ ಸೇವೆಯ ಅಗತ್ಯ, ವೈದ್ಯಕೀಯ ಪಶುಸಂಗೋಪನೆಯ ಬೆಳವಣಿಗೆ, ಹೈನುಗಾರಿಕೆಯ ಕುಟುಂಬದ ಯುವಕರಿಗೆ ನೆರವು ನೀಡಿಕೆ, ಉತ್ಪಾದನಾ ಸಹಕಾರ ಸಂಘಗಳ ಮೂಲಕ ಹಾಲನ್ನು ಪಡೆಯಲು ಕೊಡಬೇಕಾದ ಆದ್ಯತೆ, ರೈತನ ಕೃಷಿಗೆ ಪೂರಕವಾದಂಥ ಹಾಲು ಉತ್ಪಾದನಾ ಉದ್ಯೋಗ, ಲಭ್ಯತೆ ತತ್ಫಲವಾಗಿ ರೈತ ಕುಟುಂಬದ ರಕ್ಷಣೆಯ ಸಾಧ್ಯತೆ ಇದಕ್ಕೆ ಸರ್ಕಾರ ಕೊಡಬೇಕಾದ ಆದ್ಯತೆ, ಹೆಚ್ಚು ಹಾಲನ್ನು ಕೊಡುವಂಥ ತಳಿಗಳ ಉತ್ಪಾದನೆಯನ್ನು ಪಸುಸಂಗೋಪನ ವಿದ್ಯಾಲಯ ಮಾಡಬೇಕಿರುವುದು, ಹೈನು ಉತ್ಪಾದನೆಯ ಹೆಚ್ಚಳದ ಇತಿಮಿತಿಯುಗಳ ಪ್ರಾದೇಶಿಕ ತಳಿಗಳಿಂದ ಲಾಭದಾಯಕವಾಗಿ ಹಾಲಿನ ಉತ್ಪಾದನೆ, ಧಾರವಾಡದಲ್ಲಿ ಪಶು ವೈದ್ಯಕೀಯ ಮಹಾವಿದ್ಯಾಲಯದ ಸ್ಥಾಪನೆ, ಕರ್ನಾಟಕದ ತೋಟಗಾರಿಕೆಯಲ್ಲಿ ಅತಿ ಉತ್ತಮ ಹವಾಗುಣದ ಭೂ ಫಲವತ್ತತೆಯಿಂದಾಗಿ ಮಾವಿನ ಬೆಳೆಯ ಸಮೃದ್ಧಿಗೆ ಅವಕಾಶ ಬಾಳೆಯ ವ್ಯವಸಾಯ, ಬಿಜಾಪುರದ ದ್ರಾಕ್ಷಿ ದಾಳಿಂಬೆ ಬೆಳೆ, ಚಿತ್ರದುರ್ಗದ ಅಂಜೂರ ಇತ್ಯಾದಿ ತೋಟಗಾರಿಕೆ ಬೆಳೆಗಳಿಗೆ ಸಂಸ್ಕರಣಾ ಘಟಕಗಳ ಅವಶ್ಯಕತೆ ನಮ್ಮ ರೈತರಿಗೆ ಕನಿಷ್ಠ 50 ಪರ್ಸೆಂಟ್ ನಷ್ಟಾದರೂ ತೋಟಗಾರಿಕೆ ಸಸಿಗಳನ್ನು ಒಸಗಿಸಬೇಕಾದ ತೋಟಗಾರಿಕಾ ಇಲಾಖೆಯ ಫಾರ್ಮ್‌ಗಳ ದುಸ್ಥಿತಿ ತೆಂಗಿನ ಬೆಳೆ ನಾಶ ತಪ್ಪಿಸಲು ನುಸಿರೋಗ ನಿವಾರಣೆಗೆ ಸರ್ಕಾರದ ನಿರ್ಲಕ್ಷ್ಯ ದೊಡ್ಡ ರೈತರಿಗೆ ಕ್ರೆಡಿಟ್‌ಕಾರ್ಡ್ ಒದಗಿಸುವ ಹಣಕಾಸಿನ ಸಹಾಯ ಒದಗಿಸುವ ಕೇಂದ್ರದ ಯೋಜನೆ, ರೈತನ ಹಿಡುವಳಿಗೆ ತಕ್ಕಂತೆ ಪ್ರದೇಶದಲ್ಲಿ ಬೆಳೆಯುತ್ತಿರುವ ಬೆಳೆಗಳಿಗೆ ತಕ್ಕಂತೆ ಕೇಂದ್ರದ ನೀರಾವರಿ ಸಾಲ ಯೋಜನೆಯ ಪ್ರಯೋಜನ ಪಡೆಯುವಿಕೆ ಅದಕ್ಕೆ ಸಾಮಾಜಿಕರೆಲ್ಲರ ಸಹಾಯ ಪಶುಸಂಗೋಪನೆ ಕೃಷಿ ತೋಟಗಾರಿಕೆ

ಮೂರಕ್ಕೂ ಕೇಂದ್ರ ಸರ್ಕಾರ ಕೃಷಿ ಕ್ರೆಡಿಟ್ ಕಾರ್ಡ್ ತಂದಿರುವಂಥ ಅಭಿನಂದನೀಯ ಸಂಗತಿ; ಕೇಂದ್ರ ಸರ್ಕಾರ ತಂದ ಬೆಳೆವಿಮಾ ವಿಧಾನವನ್ನು ರೈತರಿಗೆ ರಾಜ್ಯ ಸರ್ಕಾರ ಮುಟ್ಟಿಸಿಲ್ಲದಿರುವುದು; ಬೆಳೆ ಹಾನಿಗೆ ಬರಬೇಕಾದ ವಿಮಾ ಹಣವನ್ನು ಸರಿಯಾದ ವೇಳೆಯಲ್ಲಿ ವಿತರಣೆ ಮಾಡದಿದ್ದುದು; ಉತ್ತರ ಕರ್ನಾಟಕದಲ್ಲಿ ರೇಷ್ಮೆ ವ್ಯವಸಾಯ ಬೆಳವಣಿಗೆ ಆಗಬೇಕಿದ್ದುದು; ಆಲೂಗಡ್ಡೆ ಖರೀದಿಗೆ ಬೆಲೆ ಕುಸಿತದ ಸಮಯದಲ್ಲಿ ಸರ್ಕಾರ ಮಧ್ಯ ಪ್ರವೇಶಿಸಿ ಪರಿಹಾರ ಕೊಡಬೇಕಿದ್ದುದು, ಕುರಿತೆಲ್ಲ ಹೇಳಿದರು.

ಇಲ್ಲಿ ಸಮಸ್ಯೆಗಳ ಚಿತ್ರಣಗಳಿವೆ. ಪರಿಹಾರದ ಸೂಚನೆ ಇದೆ. ಆದರೆ ವ್ಯವಸ್ಥೆಯ ಇತಿಮಿತಿಗಳನ್ನು ಗಮನಿಸುವಲ್ಲಿ, ಸರ್ಕಾರದವತಿಯಿಂದ ಆಗಬೇಕಾದ, ಆಗಿರುವ ಕೆಲಸಗಳಿಗಾಗಿ ಸದನದ ಸದಸ್ಯರು ಎಚ್ಚರಿಸುವ ಬಗೆ ಹಾಗೂ ಸೂಚಿಸುವ ಸಲಹೆಗಳು ರೈತರ ಸಾಂತ್ವನ ಕ್ರಿಯೆಗೆ ಚಾಲನಾಂಕಗಳೆನ್ನಬಹುದು.

**ವಿಷಯ 7:** ಸಿಂಧಗಿಯಲ್ಲಿ ರೈತ ಸಂಪರ್ಕ ಕೇಂದ್ರಗಳು

26.7.2002ರ ವಿಧಾನಸಭಾಧಿವೇಶನದಲ್ಲಿ[6] ಶ್ರೀ **ಸುಣಗಾರ ಶರಣಪ್ಪ ತಿಪ್ಪಣ್ಣ** ಅವರು, ತಮ್ಮ ಪ್ರಶ್ನೆಗಳಿಗೆ ಉತ್ತರ ಬಯಸುತ್ತ, ಸಿಂಧಗಿ ತಾಲೂಕಿನಲ್ಲಿ ಆರಂಭಿಸಿದ ರೈತ ಸಂಪರ್ಕ ಕೇಂದ್ರಗಳು, ಅವುಗಳಿಗೆ ಒದಗಿಸಿರುವ ಸಿಬ್ಬಂದಿಗಳು, ಕೇಂದ್ರದಿಂದ ರೈತರಿಗಾಗುವ ಲಾಭ ಕುರಿತೆಲ್ಲ ಪ್ರಶ್ನಿಸಿದರು. ಕೃಷಿ ಸಚಿವ ಶ್ರೀ ವಿ.ಎಸ್.ಕೌಜಲಗಿ ಅವರು ಉತ್ತರಿಸುತ್ತ, ಸಿಂಧಗಿ ತಾಲೂಕಿನ ಅಲಮೇಲ್, ದೇವರ ಹಿಪ್ಪರಗಿ, ಹಾಗೂ ಸಿಂದಗಿ ಹೋಬಳಿಗಳಲ್ಲಿ ರೈತ ಸಂಪರ್ಕ ಕೇಂದ್ರಗಳನ್ನು ಸ್ಥಾಪಿಸಿರುವುದು, ಅದರಿಂದ ಬೆಳೆ ಉತ್ಪಾದನಾ ಅವಕಾಶ-ಕ್ರಮ-ಮಾರುಕಟ್ಟೆ ಕುರಿತ ಇತ್ತೀಚಿನ ಮಾಹಿತಿ ಲಭ್ಯತೆ, ಕೃಷಿ ಪರಿಕರಗಳಾದ ಬೀಜ ಇತ್ಯಾದಿಗಳು, ಸ್ಥಳೀಯವಾಗಿ ದೊರೆಯುವಿಕೆ, ಬೀಜ ಮೊಳಕೆಯ ಗುಣಮಟ್ಟ ಪರೀಕ್ಷೆ, ಮಣ್ಣು ಪರೀಕ್ಷೆ ಮುಂತಾದ ಪ್ರಾಥಮಿಕ ಪರೀಕ್ಷೆ ಸವಲತ್ತುಗಳ ಒದಗಣೆ, ಸುಧಾರಿತ ತಂತ್ರಜ್ಞಾನದ ಪ್ರಾತ್ಯಕ್ಷಿಕೆಯ ಪ್ರದರ್ಶನದ ಅವಕಾಶ ಇತ್ಯಾದಿ ಪ್ರಯೋಜನಗಳಾಗುವ ಬಗೆಗೆಲ್ಲ ಹೇಳಿದರು. ಆಗ ಶ್ರೀ ಸುಣಗಾರ ಶರಣಪ್ಪ ತಿಪ್ಪಣ್ಣ ಅವರು, ರೈತ ಸಂಪರ್ಕ ಕೇಂದ್ರ ಪ್ರಯೋಜನಗಳನ್ನು ಭಿತ್ತಿ ಪತ್ರಗಳ ಸಹಿತ ಪ್ರಕಟ ಮಾಡಿ ಹೋಬಳಿಯ ಎಲ್ಲಾ ರೈತರ ಗಮನಕ್ಕೆ ಸಂಪೂರ್ಣ ಮಾಹಿತಿ ಒದಗಿಸಿಕೊಡುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲು ವಿನಂತಿಸಿದರು.

6. ವಿಧಾನಸಭಾಧಿವೇಶನದ ನಡವಳಿಕೆಗಳು., ಸಂಪುಟ 5 (3-5), ಭಾಗ 2 (26.7.2002), ಪು. 1400-1402.

ಸಚಿವ ಶ್ರೀ **ಎಂ.ಶಿವಣ್ಣ** ಅವರು, 2000-01ನೇ ಸಾಲಿನ ತೀರ್ಮಾನದಂತೆ 7045 ರೈತ ಸಂಪರ್ಕ ಕೇಂದ್ರಗಳನ್ನು ಸ್ಥಾಪಿಸುವಂತೆ ಸರ್ಕಾರದ ತೀರ್ಮಾನವಾಗಿತ್ತು; ಅದರಲ್ಲಿ 744 ಕೇಂದ್ರಗಳು ಸ್ಥಾಪನೆಗೊಂಡಿವೆ. 159 ಕಡೆ ಹೋಬಳಿ ಮಟ್ಟದ ಕೇಂದ್ರಗಳಲ್ಲಿ ಕಂಪ್ಯೂಟರ್‌ಗಳನ್ನು ಅಳವಡಿಸಿದೆ. ಹೆಚ್ಚು ಪ್ರಚಾರ ಕಾರ್ಯಗಳನ್ನು ಹಮ್ಮಿಕೊಳ್ಳಲಾಗುತ್ತದೆ ಎಂದರು.

ಶ್ರೀ ಸುಣಗಾರ ಶರಣಪ್ಪ ತಿಪ್ಪಣ್ಣನವರು ರೈತಸಂಪರ್ಕ ಕೇಂದ್ರಗಳು ಉದ್ಘಾಟನೆಯಾಗಿಯೂ ಸಹ ತಮ್ಮ ಗಮನಕ್ಕೆ ಅದು ಬಂದಿಲ್ಲದಿರುವುದು, ಹೋಬಳಿ ಮಟ್ಟದಲ್ಲಿ ರೈತರಿಗಾಗಿ ಸಭೆನಡೆಸಿ, ಈ ಕೇಂದ್ರಗಳಿಂದ ದೊರೆಯುವ ರೈತರ ಸಂಖ್ಯೆ, ಹೋಬಳಿ ಮಟ್ಟದ ಎಲ್ಲಾ ರೈತರನ್ನು ಕರೆಸಿ, ಸಂಪೂರ್ಣ ಮಾಹಿತಿ ಕೊಡುವುದು ಕುರಿತೆಲ್ಲ ಮಾತನಾಡಿದರು.

**ವಿಷಯ 8:** ರೈತರಿಗೆ ಗಣಕೀಕೃತ ಪಹಣಿ ಸೌಲಭ್ಯಕ್ಕಾಗಿ ಪಹಣಿ ಕೇಂದ್ರಗಳ ಸ್ಥಾಪನೆ

28.7.2003ರ ವಿಧಾನ ಪರಿಷತ್ ಅಧಿವೇಶನದಲ್ಲಿ ಶ್ರೀ **ಬಿ.ಎಸ್. ಯಡಿಯೂರಪ್ಪ** ನವರು ಮಾತನಾಡುತ್ತ, ರೈತರು ಪಹಣಿ ಪಡೆಯಲು ಇಡೀ ದಿನ ಕಾಯಬೇಕು. ರೈತರಿಗೆ ಗಣಕೀಕೃತ ಪಹಣಿ ನೀಡಲು ರಾಜ್ಯದಲ್ಲಿ ಹೆಚ್ಚು ಗಣಕಯಂತ್ರದ ಪಹಣಿ ಕೇಂದ್ರಗಳನ್ನು ಆರಂಭಿಸಬೇಕಿರುವುದು, ರಾಜ್ಯದಲ್ಲಿ 735 ಹೋಬಳಿಗಳಿದ್ದು, ಕಂಪ್ಯೂಟರ್ ಪಹಣಿಗೆ ತಲಾ 15ರೂ. ಕಂಪ್ಯೂಟರ್ ಮ್ಯುಟೇಷನ್ ಕಾಪಿಗೆ 35 ರೂ.ನಂತೆ ರೈತರಿಂದ ತಲೆಗಂದಾಯದ ರೀತಿಯಲ್ಲಿ ಹಣ ಸುಲಿಗೆ ಮಾಡುತ್ತಿರುವುದು. ಈ ಬದಲಿಗೆ 5ರೂ.ಗಳನ್ನು ಒಟ್ಟು ಸಂಗ್ರಹಿಸಿ ದಾಖಲೆಯನ್ನು ನೀಡುವ ವ್ಯವಸ್ಥೆ ಮಾಡಬೇಕಿರುವುದು, ಪಹಣಿ ಮ್ಯುಟೇಷನ್ ಕಾಪಿಗಾಗಿ ಕಾದು ನಿಂತಿರುವ ಸಹಸ್ರಾರು ರೈತರು, ಬೆಳೆವಿಮೆಗೆ ಸಮಯ ವಿಸ್ತರಿಸುವುದು, ತುಂಬಿದ ಜಲಾಶಯಗಳಿಂದ ಕಾಲುವೆಗೆ ನೀರುಬಿಟ್ಟು ಬೇಸಾಯಕ್ಕೆ ಹದ ಮಾಡುವುದು ಹಾಗಾಗದಿದ್ದರೆ ರೈತ ಬೆಳೆವಿಮೆಯಿಂದ ವಂಚಿತನಾಗುವುದು, ಕುರಿತೆಲ್ಲ ಹೇಳಿದರು. ಸಚಿವ ಶ್ರೀ **ಕಾಗೋಡು ತಿಮ್ಮಪ್ಪನವರು** ಪಹಣಿಗಳನ್ನು ರೈತರ ಬೇಡಿಕೆ ಹಚ್ಚಿರುವ ಕಡೆ ಹೆಚ್ಚುವರಿ ಕಿಯಾಸ್ಕ್ ಕೇಂದ್ರಗಳನ್ನು ತೆರೆದು ವಿತರಿಸುವುದು, ರೈತರು ದೂರದಿಂದ ಪ್ರಮಾಣ ಮಾಡುವುದನ್ನು ತಪ್ಪಿಸಲು ಈ ಯೋಜನೆಯನ್ನು ಗ್ರಾಮ ಮಟ್ಟಕ್ಕೆ ವಿಕೇಂದ್ರಿಕರಿಸುದು, ಪಹಣಿಯು ಸುಲಭದರದಲ್ಲಿ, ಸುಲಭ ರೀತಿಯಲ್ಲಿ ಸಿಗುವಂಥ ವ್ಯವಸ್ಥೆ ಮಾಡುವುದು. ಕುರಿತೆಲ್ಲ ಹೇಳಿದರು. ಶ್ರೀ **ಬಿ.ಎಸ್.ಯಡಿಯೂರಪ್ಪನವರು**,

ರೈತರ ಬಗ್ಗೆ ಕಠೋರವಾಗಿ ಸರ್ಕಾರ ನಡೆದುಕೊಳ್ಳುತ್ತಿರುವುದು, ಜೂನ್ 2003 ರಿಂದ ಈವರೆಗೆ 177 ಕೇಂದ್ರಗಳಲ್ಲಿ ರೈತರು ಕಂಪ್ಯೂಟರ್ ಪಹಣಿ ಮತ್ತು ಮ್ಯುಟೇಷನ್‌ನಿಂದ ಸರ್ಕಾರಕ್ಕೆ 15 ಕೋಟಿ 72 ಲಕ್ಷ ಬಂದಿರುವುದು, ಸರ್ಕಾರ ರೈತರಿಂದ ಸೂಕ್ತವಾಗಿ ಬೆಳೆ ವಿಮೆ ಮಾಡಿಸಲು ಒಂದು ತಿಂಗಳು ಹೆಚ್ಚುವರಿ ವಿಸ್ತರಣೆ ಮಾಡಿ ಅನುಕೂಲಿಸುವುದು. ಜಲಾಶಯದಲ್ಲಿ ನೀರಿಲ್ಲದೆ ಕೆನಾಲ್‌ಗೆ ನೀರು ಬಿಟ್ಟಿಲ್ಲವಾಗಿ, ಬೀಜ ಬಿತ್ತಲು ರೈತರು ಕಾಯುತ್ತಿರುವ ಕಾರಣ ಈ ಕಾಲಾವಕಾಶ ಅಗತ್ಯವಿರುವುದು, ರೈತರು ಬರಗಾಲಕ್ಕೆ ತುತ್ತಾಗಿರುವಲ್ಲಿ ಉಚಿತವಾಗಿ ಪಹಣಿಯನ್ನು ಕೊಡಬೇಕಿರುವುದು, ಅಥವಾ ತತ್ಕಾಲಕ್ಕೆ ಪಹಣಿಗೆ 5 ರೂ.ಗಳನ್ನು ನಿಗದಿ ಮಾಡಬೇಕಿರುವ ಬಗೆಗೆಲ್ಲ ಹೇಳಿದರು. **ಶ್ರೀ ಬಸವರಾಜ್ ಬೊಮ್ಮಾಯಿ** ಅವರು 'ಭೂಮಿ' ಕಾರ್ಯಕ್ರಮವನ್ನು ದೇಶದಲ್ಲಿ ಪ್ರಪ್ರಥಮವಾಗಿ ಜಾರಿಗೆ ತಂದಿರುವ ರಾಜ್ಯ ಕರ್ನಾಟಕವೇ ಮಾದರಿ ಎಂದಿರುವ ಯೋಜನಾ ಆಯೋಗದ ಮಾತನ್ನು ಗಮನಿಸುವುದರ ಜೊತೆಗೆ, ಈ ಯೋಜನೆಯ ನ್ಯೂನತೆಗಳನ್ನು ಹೋಗಲಾಡಿಸಬೇಕು. ಎಂಬ ಅಭಿಪ್ರಾಯದಲ್ಲಿ ನುಡಿದರು. ಶ್ರೀ ಕಾಗೋಡು ತಿಮ್ಮಪ್ಪನವರು ಮಾತು ಮುಂದುವರಿಸಿ, ಒಟ್ಟಾರೆ ವ್ಯವಸ್ಥೆಯಲ್ಲಿ ಕಂಡುಬರುವ ಲೋಪವನ್ನು ಸರಿಪಡಿಸಬೇಕೆಂಬ ಮಾತು ಒಪ್ಪುವಂಥದ್ದು. ರೈತರ ಮನೆಮನೆಗೂ ಪಹಣಿ ದಾಖಲೆಗಳನ್ನು ಸುಮಾರು 5 ಕೋಟಿ ರೂ. ಖರ್ಚಿನಲ್ಲಿ ಒದಗಿಸಿದೆ. ಇದರ ನಿರ್ವಹಣೆಗೆ ಸುಮಾರು 10 ಕೋಟಿ ರೂ. ವಾರ್ಷಿಕವಾಗಿ ಖರ್ಚಾಗುತ್ತದೆ. ಪ್ರತಿವರ್ಷ ಆರ್.ಟಿ.ಸಿ. ಯನ್ನು ಉಚಿತವಾಗಿ ಕೊಡಲಾಗುತ್ತಿದೆ. ದಕ್ಷಿಣ ಕನ್ನಡದಲ್ಲಿ 2 ಗುಂಟೆ, 5 ಗುಂಟೆಗೆ ಒಂದೊಂದು ಸರ್ವೆನಂಬರಿದೆ. 5ಎಕರೆ ಇರುವ ಸರ್ವೆನಂಬರಿಗೆ 15ರೂ. ನಿಗದಿ ಇದೆ. ಆದರೆ 5ಗುಂಟೆ, 2ಗುಂಟೆಯವರೂ 15ರೂ. ಕೊಡಬೇಕು ಎಂದಿದೆ. ಬರಗಾಲದಲ್ಲಿ ಈ ದರವನ್ನು ಕಡಿಮೆ ಮಾಡಬೇಕೆಂಬ ಅಭಿಪ್ರಾಯ ಸಚಿವ ಸಂಪುಟದಲ್ಲಿ ಸಹಾಯವಾಗುವಂತೆ ಮಾಡೋಣ. ಇದಕ್ಕೆ ಮುನ್ನ ಸದನದ ಬಾವಿಗೆ ಇಳಿಯುವುದು ಬೇಡ. ಬೆಳೆವಿಮೆ ಅವಧಿ ವಿಸ್ತರಣೆಗೆ ಸಂಪುಟ ಚರ್ಚೆಯಾಗಿ ಕೇಂದ್ರಕ್ಕೆ ಪತ್ರ ಬರೆದಿದ್ದು ಅನುಮತಿಗಾಗಿ ಕಾಯಲಾಗಿದೆ, ಎಂದರು. ಶ್ರೀ ಬಿ.ಎಸ್.ಯಡಿಯೂರಪ್ಪನವರು, ಬೆಳೆ ವಿಮೆ ಮಾಡಿಸುವ ಅವಧಿ ಮುಗಿಯಲು 3 ದಿನ ಮಾತ್ರ ಇದೆ. ಈ ವಿಷಯವನ್ನು 10 ದಿನಗಳಿಂದಲೂ ಪ್ರಸ್ತಾಪ ಮಾಡುತ್ತಿದ್ದೇನೆ. ಇದನ್ನು ತಿಂಗಳು ಕಾಲ ವಿಸ್ತರಣೆ ಮಾಡಬೇಕಾದ ಅಗತ್ಯ ಇದೆ. ಕಂಪ್ಯೂಟರ್ ಪಹಣಿ ಕೊಡುವಂಥದ್ದನ್ನೂ ಏಜೆನ್ಸಿಗೆ ಕೊಟ್ಟು, ಇಡೀ ರಾಜ್ಯದಲ್ಲಿ ಆದ ಎಲ್ಲಾ ಹೋಬಳಿಗಳಲ್ಲಿ ಕೇಂದ್ರ ತೆರೆದು ನೀಡುವಂತೆ

ವ್ಯವಸ್ಥೆ ಮಾಡಿ, ಬೆಳೆ ವಿಮೆ ಬಗ್ಗೆ ಜಾಗೃತಿ ಮೂಡಿದೆ. ಪಹಣಿ ದರವನ್ನು 5ರೂ. ಗಳಿಗೆ ಇಳಿಸಿ ಎಂದರು.

**ಸಭಾಪತಿಯವರು**. ಪಹಣಿದರವನ್ನು ಕಡಿಮೆ ಮಾಡುವ ಕುರಿತು ಪರಿಶೀಲಿಸುವ ಬಗ್ಗೆ, ಸರ್ವೇ ನಂಬರ್ ರೀತ್ಯಾನಿಗದಿಗೊಳಿಸುವ ಬದಲು, ವ್ಯಕ್ತಿಗೆ ಅಥವಾ ಬಹಳ ಕಡಿಮೆ ಭೂಮಿ ಇರುವವನಿಗೆ ಅಥವಾ 1 ಸೆಂಟ್, 2 ಸೆಂಟ್ ಎಂದಿರುವವರಿಗೆ ನಿಗದಿ ಉಚಿತ ಮಾಡುವ ಬಗ್ಗೆ, ಬೆಳೆ ವಿಮೆ ಅವಧಿ ವಿಸ್ತರಣೆ ಬಗ್ಗೆ ಪರಿಶೀಲಿಸಲು ಶ್ರೀ ಕಾಗೋಡು ತಿಮ್ಮಪ್ಪನವರಿಗೆ ಸೂಚಿಸಿದರು.

**ಶ್ರೀ ಆರ್.ವಿ.ದೇಶಪಾಂಡೆ** ಅವರು, ಬ್ಯಾಂಕ್ ಅಥವಾ ಸೊಸೈಟಿ ಸಾಲ ನೋಂದಣಿಗೆ ಮ್ಯುಟೇಶನ್ ಸೆಟ್ ಕೇಳುವುದುಂಟು. ಸಿದ್ದಾಪುರ ತಾಲೂಕಿನಲ್ಲಿ ಗಮನಿಸಿದಂತೆ ಸರ್ವೆನಂ. 10 ಇದ್ದ ರೈತನೊಬ್ಬ 2 ಗುಂಟೆ, 3 ಗುಂಟೆ, 8 ಗುಂಟೆಗೆ 35 ರೂ. ಕೊಡಬೇಕಾಗಿದ್ದುದು ಗಮನಕ್ಕೆ ಬಂತು. ಈ ವ್ಯವಸ್ಥೆ ಬದಲಿಸಲು ಮುಖ್ಯಮಂತ್ರಿಗಳಿಗೆ ಪತ್ರ ಬರೆದಾಗ, ಆ ಬಗ್ಗೆ ಆದೇಶ ಮಾಡಿ ಕಂದಾಯ ಇಲಾಖೆಗೆ ಕಳುಹಿಸಲಾಗಿದೆ. ರೈತರಿಗೆ ಅನ್ಯಾಯವಾಗುವ ಬಗ್ಗೆ ಮಾನ್ಯ ಸದಸ್ಯರ ಮಾತು ನಿಜ. ಈ ಬಗ್ಗೆ ನಿರ್ಣಯ ಮಾಡಬೇಕಿದೆ ಎಂದರು. ಸಚಿವ ಶ್ರೀ ಕಾಗೋಡು ತಿಮ್ಮಪ್ಪನವರು ಪ್ರತಿವರ್ಷ ಉಚಿತವಾಗಿ ಒಂದು ಪಹಣಿ ಪ್ರತಿಯನ್ನು ರಾಜ್ಯದ ರೈತರ ಮನೆಗೆ ವಾರ್ಷಿಕವಾಗಿ 4ಕೋಟಿ ರೂ. ಖರ್ಚಿನಲ್ಲಿ ಕಳುಹಿಸಲಾಗುತ್ತಿದೆ; ತಪ್ಪಾಗಿ ಪಹಣಿ ಕೊಟ್ಟಿದ್ದರೆ ಸರಿಯಾದ ಪಹಣಿ ಪಡೆದುಕೊಳ್ಳಲು ರೈತರು ಮತ್ತೆ ಹಣ ಕೊಡಬೇಕಾಗಿಲ್ಲ ಎಂದೆಲ್ಲ ಹೇಳಿದರು, ಹಾಗು ಮುಂದುವರಿದು ಬಂದ ಸದಸ್ಯರ ಸಲಹೆಗಳಿಗೆ ಪ್ರತಿಕ್ರಿಯಿಸಿ ರೈತರಿಗೆ ಆಗುವ ಖರ್ಚಿನ ಹೊರೆ ಹಾಗು ಬೇರೆ ಬೇರೆ ಊರುಗಳಿಂದ ಖರ್ಚು ಮಾಡಿಕೊಂಡು ಬಂದಾಗ ರೈತರು 2-3 ಗಂಟೆ ಕಾಯುವಂಥದ್ದು ಕೂಡ ತಪ್ಪಿಸಬೇಕು ಎಂಬ ಮಾನ್ಯ ಸದಸ್ಯರ ಅನಿಸಿಕೆಗೆ ಸರ್ಕಾರ ಸ್ಪಂದಿಸಬೇಕಾಗುತ್ತದೆ. ಇಡೀ ರಾಜ್ಯದ ರೈತರ ಹಿತ ದೃಷ್ಟಿಯಿಂದ ಈ ಕೆಲಸ ಮಾಡಬೇಕಾಗಿದೆ ಎಂದರು.

**ವಿಷಯ 9:** ರೈತ ಕಾಯಕ ಕೆರೆ ಮೇವು ಸರಬರಾಜು ಬರಗಾಲದ ನೆರವುಗಳು

16.7.2003 ರ ವಿಧಾನ ಸಭಾಧಿವೇಶನದಲ್ಲಿ[7] ಶ್ರೀ ಪಿ.ಜಿ.ಆರ್ ಸಿಂಧ್ಯಾ ಅವರು ಮಾತನಾಡುತ್ತ ಆಂಧ್ರದಲ್ಲಿ ಜನ್ಮಭೂಮಿ ಕಾರ್ಯಕ್ರಮದಡಿ ಸರ್ಕಾರಿ

---

7. ವಿಧಾನ ಸಭೆಯ ನಡವಳಿಕೆಗಳು, ಸಂಪುಟ 6(1-2) ಭಾಗ-1 (16-7-2003) ಪು 97-117

ನೌಕರರನ್ನು ಸಂಘ ಸಂಸ್ಥೆಗಳನ್ನು ತೊಡಗಿಸಿ ಕೃಷಿಕಾರರಿಗೆ ಆಹಾರ ಧಾನ್ಯಗಳನ್ನು ನೀಡಿಸಿ ಕೆಲಸ ಮಾಡಿಸಿರುವುದು; ಕರ್ನಾಟಕದಲ್ಲಿಯೂ ಅಂಥ ಪ್ರಯತ್ನವಾಗಬೇಕಿರುವುದು; ರಾಜ್ಯದಲ್ಲಿ ಎಂ. ಎಲ್. ಎಗಳನ್ನು ಟಾಸ್ಕ್ ಫೋರ್ಸ್‌ನ ಛೇರ್‌ಮನ್‌ಗಳಾಗಿ ಮಾಡಿ ಕೆಲಸಗಳು ಪರಿಶೀಲನೆಗೆ ಅನುವು ಮಾಡಿರುವುದು ಸರ್ಕಾರದ ಸ್ವಾಗತಾರ್ಹಕ್ರಮ. ಬಂದಿರುವ ಏಳು ಲಕ್ಷಟನ್ ಆಹಾರ ಧಾನ್ಯ ಬಳಸಿ ಹಳ್ಳಿಗಳಲ್ಲಿ ಸರಿಯಾಗಿ ಕೆಲಸ ಮಾಡಿಸಬೇಕಾಗಿದ್ದು ಅಗತ್ಯ; **ರೈತ ಕಾಯಕ ಕೆರೆ** ಎನ್ನುವಂಥ ಒಳ್ಳೆಯ ಕಾರ್ಯಕ್ರಮವನ್ನು ಸರ್ಕಾರ ಹಮ್ಮಿಕೊಂಡಿರುವಲ್ಲಿ ಜನಗಳನ್ನು ತೊಡಗಿಸಿಕೊಳ್ಳಬೇಕಾಗಿತ್ತು. ಅದಾಗಿದ್ದರೆ 50 ಸಾವಿರ ಕೆರೆಗಳನ್ನು ಮಾಡಿಸುವ ಗುರಿ ಇಟ್ಟುಕೊಂಡು ಅದು 25 ಸಾವಿರಕ್ಕಿಳಿದು ಈಗ 175 ಕೆರೆಗಳಷ್ಟಕ್ಕೆ ಮಾತ್ರ ದುಡ್ಡಿನ ಕೊರತೆಯಿಂದ ಸೀಮಿತಗೊಳಿಸಿಕೊಳ್ಳುವ ಪರಿಸ್ಥಿತಿ ಇಲ್ಲದಿರುತ್ತಿದ್ದುದು; ಬರಗಾಲಕ್ಕೆ ರಿಸೋರ್ಸ್ ಮೊಬಿಲೈಸ್ ಮಾಡುವಲ್ಲಿ ಸರ್ಕಾರದ ವೈಫಲ್ಯ, ಅದರಿಂದ ಬರಗಾಲದ ಕೆಲಸಗಳಿಗೆ ತೊಂದರೆ ಆಗಿರುವುದು; ರಾಗಿ ಬಿತ್ತನೆ ಆಗಿದೆ ಆದರೆ ಶೇಂಗಾ ಬೀಜಗಳನ್ನು ಬಿತ್ತಲು ಸಿಗದಿರುವುದು, ಹಾಸನದಲ್ಲಿ ಆಲೂಗೆಡ್ಡೆ ಬೀಜವು ಬ್ಲಾಕ್‌ನಲ್ಲಿ 1300–1400 ರೂ.ಗೆ ಒದಗಿರುವುದು; ಈ ಬಗ್ಗೆ ತೋಟಗಾರಿಕೆ ಇಲಾಖೆಗಳ ಹೊಣೆಗಾರಿಕೆ; ನೀರಿರುವ ಕಡೆ ಮೇವು ಬೆಳಸಿ ಬಿತ್ತನೆ ಬೀಜವನ್ನು ರೈತರಿಗೆ ಕೊಟ್ಟು ಮೇವು ಒಸಗಿಸುವಂತೆ ಮಾಡಬೇಕಾದ ಕಾರ್ಯ ಕುರಿತೆಲ್ಲ ಹೇಳಿದರು.

**ಸಚಿವ ಶ್ರೀ ಎಂ ಮಹದೇವ್** ಅವರು ಈ ಮಾತಿಗೆ ಪ್ರತಿಕ್ರಿಯಿಸಿ ಪಂಜಾಬಿನಿಂದ ಬಂದ ಮೇವನ್ನು ವಿವಿಧ ಜಿಲ್ಲೆಗಳಿಗೆ ಕಳುಹಿಸಿರುವುದು, ಗ್ರೀನ್ ಫಾಡರ್ ಡ್ರೈಫಾಡರ್ ಸಪ್ಲೈ ಆಗಿದ್ದು ಅದನ್ನೂ ಜಿಲ್ಲೆಗಳಿಗೆ ಕಳುಹಿಸುವ ಬಗ್ಗೆ ಹೇಳಿದರು. ಶ್ರೀ ಪಿ.ಜಿ.ಆರ್.ಸಿಂಧ್ಯಾ ಅವರು ಬೋರ್‌ವೆಲ್ ಇರುವೆಡೆ ಓಪನ್ ವೆಲ್ ಇರುವೆಡೆಯಿಂದ ನೀರು ಸಿಗುವಲ್ಲಿ ರೈತರಿಗೆ ಬೀಜವನ್ನು ಕೊಟ್ಟು ಮೇವು–ಹುಲ್ಲನ್ನು ಬೆಳಸಬೇಕಿತ್ತು. ಈ ಕೆಲಸ ಆಗಿಲ್ಲ. ಬರಗಾಲದ ತೀವ್ರತೆಯನ್ನು ಅರಿತುಕೊಳ್ಳಬೇಕಿತ್ತು. ದನಕರುಗಳಿಗೆ ಬೇಕಾದ ಗೋಶಾಲೆಗಳನ್ನು ಹೋಬಲ್‌ಗಳಲ್ಲಿ ತೆರೆಯಬೇಕಿತ್ತು. ಕಬ್ಬನ್ನು ಬೆಳೆದಂಥ ರೈತರಿಗೆ ಕೊಡಬೇಕಾದ 1400 ಕೋಟಿ ರೂ ಗಳ ಬಾಕಿಯನ್ನು ಸರ್ಕಾರದಿಂದ ಸಾಲ ತೆಗೆದುಕೊಂಡು ಸಹಕಾರಿ ಸಕ್ಕರೆ ಕಾರ್ಖಾನೆಗಳಿಗೆ (2–4) ಪರ್ಸೆಂಟ್ ಬಡ್ಡಿದರಲ್ಲಿ ಸಾಲ ಕೊಡಿಸಿ ಚುಕ್ತಾ ಮಾಡಬೇಕಿತ್ತು. ಬರಗಾಲಕ್ಕೆ ಕೇಂದ್ರ ಕೊಟ್ಟಿರುವ ಆಹಾರ ಧಾನ್ಯ ಹಾಗು ಹಣದ ನೆರವು, ರಾಜ್ಯ ಸರ್ಕಾರದ

ದೇಣಿಗೆಯ ವಿವರದ ಮಾಹಿತಿ ನೀಡಿಕೆ, ಕರ್ನಾಟಕಕ್ಕೆ ಕೇಂದ್ರವು ಕಡಿಮೆ ಆಹಾರ ಧಾನ್ಯ ಕೊಟ್ಟಿದ್ದರೆ ಅದನ್ನು ಡಿಬೇಟ್ ಮಾಡಿ ಆಲ್ ಇಂಡಿಯಾ ಇಶ್ಯುವಾಗಿ ಮಾಡಬೇಕಾದುದು; ಮೂರು ವರ್ಷಗಳ ಕಾಲ ರೈತರ ಸಾಲ ವಸೂಲಾತಿ ಹಾಗು ಸಾಲದ ಮೇಲಿನ ಬಡ್ಡಿಯನ್ನು ಸಂಪೂರ್ಣವಾಗಿ ನಿಲ್ಲಿಸುವುದು, ರೈತರು ಇದ್ದ ರಾಗಿಯನ್ನು ಮಾರಿಕೊಂಡಿರುವುದರಿಂದ ಕನಿಷ್ಠ ಪಕ್ಷ ಸಾಲದ ರೂಪದಲ್ಲಿಯಾದರೂ ಪ್ರತಿ ರೈತ ಕುಟುಂಬಕ್ಕೆ ಐದು ಕ್ವಿಂಟಾಲ್ ರೇಷನ್ ಒದಗಿಸಿ ಕೊಡುವುದು; 1500 ಕೋಟಿಗಳ ಬದಲು ಐದು ಸಾವಿರ ಕೋಟಿ ರೂ.ಗಳ ಪರಿಹಾರವನ್ನು ಕೊಡಲು ಕೇಂದ್ರಕ್ಕೆ ಒತ್ತಾಯ ಮಾಡಲು ರಾಜ್ಯ ಸರ್ಕಾರಕ್ಕೆ ಪಕ್ಷ ಭೇದವಿಲ್ಲದೆ ಒತ್ತಾಸೆ ನೀಡುವುದು, ಕುರಿತೆಲ್ಲ ಹೇಳಿ ತಮ್ಮ ಮಾತನ್ನು ಮುಕ್ತಾಯ ಗೊಳಿಸಿದರು .

**ಶ್ರೀ ಪ್ರಕಾಶ್ ಖಂಡ್ರೆ** ಅವರು ಕರ್ನಾಟಕದಲ್ಲಿ ಮೂರು ವರ್ಷಗಳಿಂದ ಬರುತ್ತಿರುವ ಬರಗಾಲದಿಂದಾಗಿ ಭಾಲ್ಕಿ ಕ್ಷೇತ್ರದಲ್ಲಿ ಆಗುತ್ತಿರುವ ಕುಡಿಯುವ ನೀರಿನ ಸಮಸ್ಯೆ, ರೈತರಿಗೆ ಮಳೆ ಬಾರದೆ ಕಂಗಾಲು ಸ್ಥಿತಿ, ಸಾಲದ ಹೊರೆಯಿಂದ ಹೋಗುತ್ತಿರುವ ವಲಸೆ, ಭಾಲ್ಕಿಯ ರೈತರೂ ಅನುಭವಿಸುತ್ತಿರುವ ಭೀಕರ ಬರಗಾಲದ ಪರಿಣಾಮ, ಬಿತ್ತನೆ ತೀರ ಕಡಿಮೆ ಆಗಿರುವುದು, ಬೆಳೆ ಹಾಗು ಬೆಳೆ ವಿಮೆ ಇಲ್ಲದೆ ಸಕ್ಕರೆ ಕಾರ್ಖಾನೆಯಿಂದ ಕಬ್ಬಿನ ಹಣವೂ ಪಾವತಿಯಾಗದೆ ರೈತರ ಕಂಗಾಲು ಸ್ಥಿತಿ, ಭಾಲ್ಕಿ ಕ್ಷೇತ್ರದ ಹಾಲಹಳ್ಳಿ ಗ್ರಾಮದ ರೈತನ ಆತ್ಮ ಹತ್ಯೆ, ರೈತರು ಕಾರ್ಮಿಕರು ಹೆಣ್ಣು ಮಕ್ಕಳು ನೀರಿನ ಸಲುವಾಗಿ ಮಾಡುತ್ತಿರುವ ರಾಸ್ತಾರೋಕೋ, ದನಕರುಗಳ ಮೇವಿನ ಸಮಸ್ಯೆ ಹಾಗು ಕಸಾಯಿಖಾನೆಗಳಿಗೆ ಸಾಗಾಟ, ಗ್ರಾಮಾಂತರ ಪ್ರದೇಶದಲ್ಲಿ 10-15 ಕೊಳವೆ ಭಾವಿ ಕೊರೆಸುವ ನಿರ್ಣಯ ಕಾರ್ಯಗತವಾಗದಿರುವುದು, ದನಕರುಗಳಿಗೆ ಗೋಶಾಲೆ ತೆರೆದು ಮೇವಿನ ವ್ಯವಸ್ಥೆ ಕಲ್ಪಿಸಿ ಕೊಡಬೇಕಿರುವುದು, ಕೊಳವೆ ಭಾವಿಗಳಿಗೆ ಅಂತರ್ಜಲ ಮಟ್ಟ 500ರಿಂದ 700 ಅಡಿ ಕೆಳಗೆ ಹೋಗಿರುವಲ್ಲಿ ಆ ಭಾವಿಗಳ ರಿಚಾರ್ಜ್ ಮಾಡುವ ವ್ಯವಸ್ಥೆ ಮಾಡುವುದು, ನಾರಂಜಾ ಮತ್ತು ಮಾಂಜ್ರಾ ನದಿಗೆ ಬಚಾವತ್ ಆಯೋಗದ ಪ್ರಕಾರ ಒದಗುವ 22ಟಿ.ಎಂ.ಸಿ ನೀರಿನಿಂದ ಈಗಲಾದರೂ ಬಳಸಬೇಕಾದ ಅಗತ್ಯತೆ ಈ ಎರಡೂ ನದಿಗಳಿಗೆ ಬ್ಯಾರೇಜ್ ಅಣೆಕಟ್ಟು ಪಿಕಪ್ ಡ್ಯಾಂ ಗಳನ್ನು ಮಾಡಿ ಹುಲಸೂರ್ ಭಾಲ್ಕಿ ಔರಾದ ಮತ್ತು ಬೀದರ್ ಕ್ಷೇತ್ರಕ್ಕೆ ಕುಡಿಯುವ ನೀರು, ರೈತರ ಹೊಲಗಳಿಗೆ ನೀರು ದನಕರುಗಳಿಗೆ ಮೇವು ಸಮಸ್ಯೆಯನ್ನು ಬಗೆಹರಿಸುವುದು, ಆದರಿಂದ ಎಲ್ಲಾ ತಾಲೂಕುಗಳಲ್ಲಿ ಅಂತರ್ಜಲ ಮಟ್ಟ ಹೆಚ್ಚುವುದು, ಗಡಿಭಾಗದಲ್ಲಿ ಮಹಾರಾಷ್ಟ್ರದವರು ದೊಡ್ಡ

ಪ್ರಮಾಣದಲ್ಲಿ ವಾಟರ್‌ಶೆಡ್ ಕಾರ್ಯಕ್ರಮಬಲ್ಲಿ ಕ್ರಾಂತಿ ಮಾಡುತ್ತಿರುವುದು, ಅದರಂತೆ ನಮ್ಮಲ್ಲಿಯೂ ಪ್ರತಿ ಹಳ್ಳ ಕೊಳ್ಳ ಮತ್ತು ನದಿಗಳಿಗೆ ಅಂಥ ಕಾರ್ಯಕ್ರಮ ಹಮ್ಮಿಕೊಳ್ಳುವುದು ಹೊಸಕೆರೆಗಳು ಕೆರೆಗಳ ಜೀರ್ಣೋದ್ಧಾರ ಮತ್ತು ಕೆರೆಗಳ ಪುನರುಜ್ಜೀವನ ಕೆರೆಗಳ ಆಧುನೀಕರಣ ರೈತ ಕಾಯಕ ಕೆರೆ ಇತ್ಯಾದಿ ಯೋಜನೆಗಳಿಂದ ಮಳೆಯ ನೀರನ್ನು ಹಿಡಿದು ಅಂತರ್ಜಲವನ್ನು ಹೆಚ್ಚು ಮಾಡುವುದು; ಬೀದರ್ ಜಿಲ್ಲೆಯಲ್ಲಿ ಕಾರಂಜಾಪ್ರಾಜೆಕ್ಟ್ 1972–73ರಲ್ಲಿ ಆರಂಭವಾಗಿ ಡ್ಯಾಂ ಪೂರ್ಣಗೊಂಡಿರುವಲ್ಲಿ ಪ್ರಾಜೆಕ್ಟ್‌ನ್ನು ಬೇಗನೆ ಮುಗಿಸಿದರೆ ರೈತರ ಹೊಲಗಳ ದನಕರುಗಳ ನೀರಿನ ಸಮಸ್ಯೆ ಬಗೆಹರಿಯುವುದು ಡ್ಯಾಂನಿಂದ ಕೆನಾಲ್‌ನಿಂದ ಡಿಸ್ಟ್ರಿಬ್ಯೂಟರಿ ಮತ್ತು ಫೀಲ್ಡ್ ಚಾನೆಲ್‌ನಿಂದ ಹರಿಯುವ ನೀರು ಆ ಪ್ರದೇಶದ ಅಂತರ್ಜಲದ ಮಟ್ಟವನ್ನು ಹೆಚ್ಚಿಸುವುದು, ಬೀದರ್ ಜಿಲ್ಲೆಯ ನದಿ ನೀರು ಮತ್ತು ಮಳೆನೀರು ಬಳಕೆ ಮಾಡಲು ನೂರು ಕೋಟಿಯ ವಿಶೇಷ ಯೋಜನೆಯನ್ನು 2 ವರ್ಷಗಳ ಹಿಂದೆ ಮಾನ್ಯ ಮುಖ್ಯಮಂತ್ರಿಯವರು ಕೊಡುತ್ತೇವೆಂದು ಹೇಳಿದ್ದಂತೆ ಕೊಡುವುದು, ಬರಗಾಲದ ಕೆಲಸದಲ್ಲಿ ಹಾಗೂ ಫುಡ್ ಮತ್ತು ಫಾಡರ್ ಕರ್ಯಕ್ರಮದಡಿ ರೈತ ಕಾರ್ಮಿಕರಿಗೆ ಬಹಳಷ್ಟು ಕಡಿಮೆ ಪ್ರಮಾಣದಲ್ಲಿ ಕೆಲಸ ಕೊಡುತ್ತಿರುವುದು ಹಾಗು ಯಾವ ಪ್ರಮಾಣದಲ್ಲಿ ಕೆಲಸ ಆಗಬೇಕೋ ಹಣ ಸಿಗಬೇಕೋ ಅದು ಆಗುತ್ತಿಲ್ಲದಿರುವುದು; ಬೋರ್ ಹಾಕಿಯೂ ಪಂಪ್ ಹಾಗು ಪೈಪನ್ನು ಕೊರೆದು ಎರಡು ತಿಂಗಳಾದರೂ ಹಾಕದಿರುವುದು; ಹಾಗೆಯೆ ಬಿಟ್ಟರೆ ನೀರು ಬರದೇ ಹೋಗುವಂಥದ್ದು ಇತ್ಯಾದಿ ಅವ್ಯವಸ್ಥೆಯನ್ನು ಸರಿಪಡಿಸುವುದು ಕುರಿತೆಲ್ಲ ಹೇಳಿ ತಮ್ಮ ಮಾತನ್ನು ಮುಗಿಸಿದರು.

**ಶ್ರೀ ಕರಡಿಸಂಗಣ್ಣ ಅಮರಪ್ಪ** ಅವರು ಕರ್ನಾಟಕ ರಾಜ್ಯದಲ್ಲಿಯ 154 ತಾಲೂಕುಗಳಿಂದ ಭೀಕರವಾದ ಬರಗಾಲ ಅದನ್ನು ಎದುರಿಸಲು ಪರ್ಯಾಯ ಯೋಜನೆ ಕಲ್ಪಿಸಲು ಕೇಂದ್ರಕ್ಕೆ 1500 ಕೋಟಿ ಹಣಕ್ಕೆ ರಾಜ್ಯ ಸರ್ಕಾರ ಮನವಿ ಮಾಡಿರುವುದು; 12 ಲಕ್ಷ ಮೆಟ್ರಿಕ್ ಟನ್ ಆಹಾರಕ್ಕೂ ಮನವಿ ಸಲ್ಲಿಸಿರುವುದು. ಅದರಲ್ಲಿ 7 ಲಕ್ಷ ಮೆಟ್ರಿಕ್ ಟನ್ ಆಹಾರ ಧಾನ್ಯವನ್ನು ಕೇಂದ್ರವು ಬಿಡುಗಡೆ ಮಾಡಿರುವುದು; ಜೊತೆಗೆ 200 ಕೋಟಿ ರೂ. ಹಣವನ್ನು ಬಿಡುಗಡೆ ಮಾಡಿರುವುದು; ಗ್ರಾಮ ಪಂಚಾಯಿತಿ ಮಟ್ಟದಲ್ಲಿಯೂ ಆಹಾರ ಧಾನ್ಯಗಳೂ ಉಳಿದಿಲ್ಲವಾಗಿ, ರಾಜ್ಯ ಸರ್ಕಾರವು ಆರನೆಯ ಹಂತದಲ್ಲಿ, ಕೆಲಸ ಕಾರ್ಯಗಳನ್ನು ನಿಗದಿಮಾಡಿ 15 ಲಕ್ಷ ರೂ.ಗಳಷ್ಟು ಹಣ, 30 ಲಕ್ಷ ರೂ.ಗಳಷ್ಟು ಆಹಾರಧಾನ್ಯವನ್ನು ಕೊಟ್ಟಿರುವುದು;

ನಮ್ಮ ಕ್ರಿಯಾ ಯೋಜನೆಗಳನ್ನು 45–50 ಲಕ್ಷ ರೂ.ಗಳ ವೆಚ್ಚದಲ್ಲಿ ಕಾಮಗಾರಿಗಳನ್ನು ಕೈಗೆತ್ತಿಕೊಂಡಿರುವುದು; ಬರದ ಗಂಭೀರತೆಯನ್ನು ಗಮನಿಸಿದರೆ ರಿಲೀಸ್ ಆಗಿರುವ ಹಣ ಕಡಿಮೆ ಇದೆ; ಇನ್ನಷ್ಟು ಆಹಾರಧಾನ್ಯ ಕೂಡ ರಿಲೀಸ್ ಆಗಬೇಕಿರುವುದು; ಈ ಬಗೆಗೆಲ್ಲ ನುಡಿದರು.

**ಶ್ರೀ ಕಾಗೋಡು ತಿಮ್ಮಪ್ಪ** ಅವರು, ಈ ಮಾತಿಗೆ ಪ್ರತಿಕ್ರಿಯಿಸಿ ಮೊನ್ನೆ ತಾನೆ ಪ್ರತಿಯೊಂದು ತಾಲ್ಲೂಕಿಗೆ ಹಣ ಮತ್ತು ಅಕ್ಕಿ ಬಿಡುಗಡೆ ಮಾಡಿದೆ. ಶ್ರೀ ಸಂಗಣ್ಣನವರೇ ಟಾಸ್ಕ್‌ಫೋರ್ಸ್‌ನ ಅಧ್ಯಕ್ಷರಾಗಿರುವಲ್ಲಿ ಕಾರ್ಯಕ್ರಮ ರೂಪಿಸುವ ಅಧಿಕಾರವೂ ಇದೆ. ಈಗ ಕೊಟ್ಟಿರುವಂಥ ಅಕ್ಕಿಯನ್ನು ಜುಲೈ ಅಂತ್ಯದೊಳಗಾಗಿ ಖರ್ಚುಮಾಡಬೇಕು. ಅಕ್ಕಿ ಮತ್ತು ಹಣದಿಂದ ತಾಲೂಕಿನ ಕಾಮಗಾರಿಗಳನ್ನು ಆರಂಭಿಸಬೇಕು ಎಂದೂ ಆದೇಶ ನೀಡಲಾಗಿದೆ. ಕೆಲಸಗಳು ಕೊಟ್ಟಿರುವುದು, ಸಾಲದು ಎಂದರೆ, ಇನ್ನು ಎಷ್ಟು ಜನಕ್ಕೆ ಕೊಡಬೇಕು. ಯಾವ್ಯಾವ ಪಂಚಾಯಿತಿಯಲ್ಲಿ ಕೊಡಬೇಕು? ಹಣ ಮತ್ತು ಅಕ್ಕಿಯಿಂದ ಈಗ ಮಾಡಿರುವ ವ್ಯವಸ್ಥೆ ಬಗ್ಗೆ ಹೇಳಿ ಎಂದರು.

ಶ್ರೀ ಕರಡಿ ಸಂಗಣ್ಣ ಅಮರಪ್ಪ ಅವರು ಉತ್ತರಿಸುತ್ತ, ಒಂದೊಂದು ಗ್ರಾಮದಲ್ಲಿ ಒಂದೊಂದು ಲಕ್ಷ ರೂ. ಹಣಕಾಸಿನ ನೆರವಿನಿಂದ ಉದ್ಯೋಗ ಪ್ರಾರಂಭಿಸುವಲ್ಲಿ ಒಂದೇ ದಿನಕ್ಕೆ ಕೆಲಸ ಮುಗಿದು ಹೋಗುತ್ತದೆ. ಈಗ ನಿರಂತರವಾಗಿ ಉದ್ಯೋಗ ಕೊಡಬೇಕಿದೆ. ವಾಸ್ತವವಾಗಿ ಒಂದು ಹೊತ್ತಿನ ಊಟಕೂಡ ಗ್ರಾಮಿಣ ಪ್ರದೇಶದ ಜನರಿಗೆ ಸಿಗುತ್ತಿಲ್ಲ. ಅಂತಾಗಿ ಸರ್ಕಾರ ಹೆಚ್ಚಿನ ಪ್ರಮಾಣದಲ್ಲಿ ಹಣಕಾಸಿನ ನೆರವನ್ನು . ಮತ್ತು ಆಹಾರ ಧಾನ್ಯಗಳನ್ನು ಕೊಡಬೇಕಿದೆ. ಈ ಬಗ್ಗೆ ಸರ್ಕಾರದ ಪರ್ಯಾಯ ಯೋಜನೆ ಇದ್ದರೆ ತಿಳಿಸಬೇಕು ಎಂದರು. ಶ್ರೀ ಕಾಗೋಡು ತಿಮ್ಮಪ್ಪನವರು, ನಿಜಸ್ಥಿತಿ ಏನಿದೆ ತಿಳಿದುಕೊಳ್ಳುವುದರಲ್ಲಿ ಮುಚ್ಚುಮರೆ ಇಲ್ಲ. 1 ಲಕ್ಷಕ್ಕಿಂತ ಕಡಿಮೆ ಕೆಲಸವು ಯಾವ್ಯಾವ ಪಂಚಾಯಿತಿಗೆ ಅಗತ್ಯವಿದೆ ಎಂಬುದರ ಮಾಹಿತಿ ಕೊಟ್ಟರೆ ಹೆಚ್ಚು ಪ್ರಮಾಣದ ನೆರವು ಕೊಡಬಹುದು ಎಂದರು. ಶ್ರೀ ಕರಡಿ ಸಂಗಣ್ಣ ಅಮರಪ್ಪ ಅವರು ಒಂದೊಂದು ಪಂಚಾಯಿತಿಯಲ್ಲಿ 4–5 ಗ್ರಾಮಗಳು ಅಥವಾ ತಾಂಡಾಗಳು ಇರುವಲ್ಲಿ ಅವರಿಗೆ ನಿರಂತರವಾಗಿ ಉದ್ಯೋಗ ಕೊಡಲು ಹಣ ಒದಗಿಸಲು ಸರ್ಕಾರ ಎಂದು ನುಡಿದರು. ಒಂದೊಂದು ಲಕ್ಷ ರೂ. ಹಣವನ್ನು ಒಂದೊಂದು ಗ್ರಾಮಗಳಿಗೆ ಕೊಟ್ಟಿದೆ ಎಂದರು. ಶ್ರೀ ಕಾಗೋಡು ತಿಮ್ಮಪ್ಪನವರು ಎಸ್.ಜೆ.ಆರ್ ವೈನಲ್ಲಿ 3 ಸಾವಿರ ಮೆಟ್ರಿಕ್ ಟನ್, ಸ್ಕೆರ್ ಸಿಟಿಯಲ್ಲಿ

2500 ಮೆಟ್ರಿಕ್ ಟನ್ ಅಂದರೆ 5500 ಮೆಟ್ರಿಕ್ ಟನ್ ಅಕ್ಕಿ ಹಾಗೂ ಅದಕ್ಕೆ ಸಮನಾದ ಹಣವನ್ನು ಬಿಡುಗಡೆಯಾಗಿರುವ ಬಗ್ಗೆ ಹೇಳಿದರು. ಶ್ರೀ.ಎಸ್.ಎಸ್.ಪಾಟೀಲ್ ಅವರ ಪ್ರಶ್ನೆಗೂ ಹಾಗೆಯೇ ಉತ್ತರಿಸಿದರು.

ಸಚಿವ **ಶ್ರೀ ಎಂ.ಮಲ್ಲಿಕಾರ್ಜುನ ನಾಗಪ್ಪ** ಅವರು ಜಿಲ್ಲೆಗೆ 6 ನೇ ಹಂತದ ಕಾಮಗಾರಿಗಳಿಗೆ ಅನುಮೋದನೆ ಆಗಿ ಎಲ್ಲಾ ಕಾಮಗಾರಿಗಳು ಆರಂಭವಾಗಿರುವುದು, ಹಣ ಮತ್ತು ಅಕ್ಕಿ ಕೂಡಾ ಇದ್ದು ಕಾಮಗಾರಿಗಳನ್ನು 7ನೇ ಹಂತದವರೆಗೂ ಕೆಲಸ ಚಾಲೂ ಮಾಡಲು ಸರ್ಕಾರಕ್ಕೆ ಹಿಂಜರಿಕೆ ಇಲ್ಲದಿರುವುದು ಕುರಿತೆಲ್ಲ ಹೇಳಿದರು. ಶ್ರೀ ಕರಡಿ ಸಂಗಣ್ಣನವರು ಕೆಲಸಗಳಿಗಾಗಿ ಕೊಟ್ಟಿರುವ ಹಣ ಮತ್ತು ಆಹಾರ ಧಾನ್ಯಗಳು ಸಾಕಾಗುತ್ತಿಲ್ಲವಾಗಿ ಅದನ್ನು ಹೆಚ್ಚಿಸಬೇಕಿದೆ ಎಂದರು. ಶ್ರೀಮಲ್ಲಿಕಾರ್ಜುನಪ್ಪ ನಾಗಪ್ಪನವರು ಮಾತು ಮುಂದುವರಿಸಿ ಶ್ರೀ ಕರಡಿಸಂಗಣ್ಣ ಅಮರಪ್ಪ ಅವರೇ ಟಾಸ್ಕ್‌ಫೋರ್ಸ್ ಸಮಿತಿಯ ಅಧ್ಯಕ್ಷರಾಗಿರುವಲ್ಲಿ ಅದರ ನಿರ್ಣಯವನ್ನು ಮಾನ್ಯ ಮಾಡಲಾಗುವುದು. ಮಾನ್ಯ ಸದಸ್ಯರು ಹೇಳಿದ ಪ್ರಕಾರ ಶಾಸಕರು ಸಾಕಷ್ಟು ಕೆಲಸಗಳನ್ನು ಮಾಡಿಸಿದ್ದಾರೆ. ಎಂದರು.

ಈ ದಿನದ ಚರ್ಚೆಯಲ್ಲಿ ಸರ್ವಶ್ರೀ ಎಸ್.ಎಸ್. ಪಾಟೀಲ್, ಡಿ.ಕೆ.ಶಿವಕುಮಾರ್ ಅವರೂ ಪಾಲ್ಗೊಂಡಿದ್ದರು.

**ವಿಷಯ 10:** ಜಲಸಂವರ್ಧಿನಿ ಯೋಜನೆ : ಹಾಗೂ ಇತರ ಕಾರ್ಯಕ್ರಮಗಳು

16.1.2004 ರ ವಿಧಾನಸಭಾಧಿವೇಶನದಲ್ಲಿ[8] ಶ್ರೀ **ಶ್ರೀನಿವಾಸಗೌಡ ಕುದುವನಹಳ್ಳಿ** ಅವರು ಮಾತನಾಡುತ್ತ : ಜಲಸಂವರ್ಧಿನಿ, ರೈತ ಕಾಯಕ ಕೆರೆಯೋಜನೆಗಳಿಗೆ, ಫೀಡರ್ ಚಾನಲ್‌ಗೆ ಕಾಮಗಾರಿ ನಡೆದಿವೆ. ಆದರೆ ಹಣದ ಖರ್ಚಿನ ವಿವರಗಳೂ ಸಮರ್ಪಕವಾಗಿರಬೇಕು. ಅದಕ್ಕೆ ಸರ್ಕಾರದ ನಾರ್ಮ್ಸ್ (Norms) ಕೂಡ ಇದೆ. ಆದರೆ ನಾರ್ಮ್ಸ್ ಸರಿಯಾಗಿಲ್ಲದ ಕಾರಣ ಕಾಮಗಾರಿ ಕೆಲಸ ಸಮರ್ಪಕವಾಗಿ ನಡೆದಿಲ್ಲ. ಜಲಸಂವರ್ಧಿನಿ ಯೋಜನೆಯಡಿ ಕೆರೆಗಳ ಕಾಮಗಾರಿ ಕೈಗೆತ್ತಿಕೊಳ್ಳಲಾಗಿದೆ. ಮಳೆ ಇಲ್ಲದಿದ್ದರೂ ಗಿಡಗಳನ್ನು 8.10. ಲಕ್ಷರೂ.ಗಳ ವೆಚ್ಚದಲ್ಲಿ ಹಾಕಲಾಗಿದೆ. 282 ಕೋಟಿ ರೂ.ಗಳನ್ನು ಹಣ ಖರ್ಚಾಗಿದೆ ಎನ್ನಲಾಗಿದೆ. ಕೆರೆಗಳ ಕಾಮಗಾರಿ ಸರಿಯಾಗಿ ನಡೆದಿಲ್ಲ. ಬೆಳೆವಿಮೆ ಹಣವಾದ 268 ಕೋಟಿ ರೂ.ಗಳ ಪೈಕಿ 114 ಕೋಟಿ ರೂ.ಗಳನ್ನು ಕಟ್ಟಿ ಬಾಕಿ 154 ಕೋಟಿ ರೂ.ಗಳನ್ನು

8. ವಿಧಾನಸಭಾಧಿವೇಶನದ ನಡವಳಿಕೆಗಳು, ಸಂಪುಟ 2, ಭಾಗ 4, (16.1.2004) ಪು. 1310–45

ಕಟ್ಟಿಲ್ಲದಿರುವುದು, ರೈತರು ಇದರಿಂದ ಸಹಾಯ ವಂಚಿತರಾಗಿರುವುದು, ಅಂತರ್ಜಲ ಬಹಳ ಆಳಕ್ಕೆ ಇಳಿಯುತ್ತಿದ್ದರೂ ತೋಟಗಾರಿಕೆ ಬೆಳೆಗಳಿಗೆ ಶೇ.12 ರಷ್ಟು ಸಬ್ಸಿಡಿಯನ್ನು 5 ಎಕರೆಗೆ ಮಾತ್ರ ಕೊಟ್ಟಿರುವುದು, ಅದನ್ನು 10 ಎಕರೆಗೆ ಏರಿಸುವುದು, ಡ್ರಿಪ್ ಇರಿಗೇಷನ್ ಅಳವಡಿಕೆಯವರಿಗೆ ಈ ಸೌಲಭ್ಯವನ್ನು ಒದಗಿಸಿಕೊಡಬೇಕಿರುವುದು, ಕಾಲುವೆ ಮುಖಾಂತರ ರೈತರಿಗೆ ನೀರು ಹರಿಸಿಕೊಡುವುದು, 'ಯಶಸ್ವಿನಿ' ಯೋಜನೆಯನ್ನು ಸಹಕಾರಿ ರೈತರಿಗೆ ಒದಗಿಸಿರುವಂತೆ ಕೃಷಿ ಕೂಲಿ ಕಾರ್ಮಿಕರಿಗೂ ವಿಸ್ತರಿಸುವುದು, 2002ರಲ್ಲಿ 880 ಕೋಟಿ ರೂ.ಗಳ ಪ್ಯಾಕೇಜ್‌ನಲ್ಲಿ ಸಹಕಾರಿ ಮಂತ್ರಿಗಳು ಬೆಳೆಸಾಲದ ಮೇಲೆ 40ಕೋಟಿ ರೂ. ಗಳ ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲ ಸೌಲಭ್ಯ ಒದಗಿಸಿಕೊಟ್ಟು ಅಷ್ಟಕ್ಕೇ ನಿಲ್ಲಿಸಿದ್ದು, ರೈತ ಸಾಲ ತೆಗೆದುಕೊಂಡು ಅದರ ಬಾಧೆಯಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು, ಇಂದೂ ದೀರ್ಘಾವಧಿ, ಮಧ್ಯಮಾವಧಿ ಸಾಲವನ್ನು ಬೆಳೆಗೆಕೊಡುವ ಅಗತ್ಯ ಕುರಿತೆಲ್ಲ ಹೇಳಿದರು.

ಸಚಿವ **ಶ್ರೀ ಹೆಚ್.ವಿಶ್ವನಾಥ್** ಅವರು ಇದಕ್ಕೆ ಪ್ರತಿಕ್ರಿಯಿಸಿ ಸದ್ಯ 162 ಕೋಟಿ ರೂ. ಬೆಳೆಸಾಲವನ್ನು ಕೊಡಲಾಗಿದೆ ಎಂದರು. ಶ್ರೀ ಶ್ರೀನಿವಾಸಗೌಡ ಅವರು ಮಾತು ಮುಂದುವರಿಸಿ ರಾಜ್ಯ ಸರ್ಕಾರ ಸುಸ್ತಿ ಬಡ್ಡಿ ವಸೂಲಿ ಖರ್ಚನ್ನು ಮನ್ನಾ ಮಾಡಿರುವುದು, ಸರಿ. ಆದರೆ ಕೆ.ಎಸ್.ಡಿ ಮತ್ತು ಪಿಸಿಆರ್‌ಡಿ ಬ್ಯಾಂಕ್ ಮುಖಾಂತರ ಕೊಡಿಸಿರುವ ಕಾರಣ ಬ್ಯಾಂಕ್‌ನ ರಿಯಾಯಿತಿಯಿಂದ ಅಥವಾ ಸಹಾಯಧನವಾಗಿ ರೈತರಿಗೆ ಹಣ ಹೆಚ್ಚು ಬಂತೇವಿನಹ. ಪ್ಯಾಕೇಜಿನಿಂದ ಒಬ್ಬ ರೈತನಿಗೆ ಸಿಗುವಂಥ ಒಟ್ಟು ಸೌಲಭ್ಯ ಸರ್ಕಾರದಿಂದ ಒದಗಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಮಾಡಿದರು. ನಂತರ 10904 ತೆರೆದ ಭಾವಿಗಳ ಸಂಬಂಧ 30 ಕೋಟಿ ರೂ.ಗಳಷ್ಟನ್ನು ಮನ್ನಾ ಮಾಡಿರುವುದು; 1984ರಲ್ಲಿ ತೆರೆದ ಭಾವಿಗಳಿಗೆ ಖರ್ಚಾದ ಹಣ ಮಾಫಿಗೆ ರೂಪುಗೊಂಡ ಸಮಿತಿ; ಭಾವಿಗಳು ವಿಫಲವಾಗಿರುವಲ್ಲಿ ಸದ್ಯದ ಸಮಿತಿಯ ಅನಗತ್ಯತೆ ಕುರಿತು ಹೇಳಿದರು. ಶ್ರೀ ವಿಶ್ವನಾಥ್ ಅವರು ವಿಫಲ ಭಾವಿಗಳಿಗೆ. ಸಣ್ಣ ರೈತ, ದೊಡ್ಡರೈತ, ಎಂದು ಭೇದ ಮಾಡದೆ ನೆರವು ನೀಡಲಾಗಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಮಾಡಿದರು. ಶ್ರೀ ಶ್ರೀನಿವಾಸಗೌಡರು, ಆ ಮಾತಿಗೆ, ಪ್ರತಿಕ್ರಿಯಿಸಿ ಪಿ.ಸಿ.ಆರ್.ಡಿ ಬ್ಯಾಂಕ್ ಸಾಲ ಪಡೆದು ಕೊರೆಸಿದ ತೆರೆದ ಭಾವಿಗಳು ವಿಫಲವಾದ ಕಡೆ, ರೈತ ಕರೆಂಟ್ ಪಡೆದಿರುವಲ್ಲಿ ಶುಲ್ಕವನ್ನು ಹಿಂದಿನಿಂದಲೇ ಮಾಫಿ ಮಾಡಬೇಕಿತ್ತು. ಎಂದಾಗ, ಶ್ರೀ ಹೆಚ್.ವಿಶ್ವನಾಥ್ ಅವರು,

ರೈತರ ಮನೆಗೆ ಡಿಮಾಂಡ್ ನೋಟೀಸ್ ಬಂದು ಜಪ್ತಿ ತಪ್ಪಿಸಲು 332 ಕೋಟಿ ರೂ. ಗಳನ್ನು ರೈಟ್ ಆಫ್ ಮಾಡಲಾಗಿದೆ. ಇದನ್ನು ಮಾನ್ಯ ಸದಸ್ಯರು ಗಮನಿಸಬೇಕು ಎಂದರು. ಆಗ ಶ್ರೀನಿವಾಸಗೌಡರು, ಟ್ರಾನ್ಸ್ ಫಾರ್ಮರ್‌ಗೆ ರೈತರು, ಬರದ ಪರಿಸ್ಥಿತಿ ಇರುವಾಗ, ಹಣ ಕಟ್ಟದಿದ್ದರೂ ಸುಟ್ಟ ಟ್ರಾನ್ಸ್‌ಫಾರ್ಮರ್‌ಗೆ ಬದಲಿ ಹಾಕಿಕೊಡಬೇಕು ಎಂದು ಹೇಳಿದರು.

**ಶ್ರೀ ಆರಗ ಜ್ಞಾನೇಂದ್ರ ಅವರು** : ರಾಜ್ಯದ ಬರ ಪರಿಸ್ಥಿತಿಯನ್ನು ನೀಗಿಸುವ ಬಗ್ಗೆ ಆಲೋಚಿಸಬೇಕಾಗಿದ್ದು. ಸರ್ಕಾರವು ಆ ಬಗೆಗೆ ವಿಶೇಷತಃ ಕೃಷಿ ವಿಶ್ವ ವಿದ್ಯಾಲಯಗಳನ್ನು ಬಳಸಿಕೊಳ್ಳಬೇಕಿತ್ತು; ಬರವನ್ನು ನಿರೀಧಿಸಿಯೂ ಬೆಳೆಯತಕ್ಕಂಥ ಕೆಲವು ತಳಿಗಳನ್ನು ಅಭಿವೃದ್ಧಿ ಮಾಡಬೇಕಾಗಿದ್ದುದರಲ್ಲಿ ಒಂದು ತಳಿಯನ್ನು ಅಭಿವೃದ್ಧಿ ಮಾಡಲಿಲ್ಲ. ಬಯೋಟೆಕ್ನಾಲಜಿ ಮೇಳಗಳು ಮಾಧ್ಯಮ ಪ್ರಚಾರಕ್ಕಾಯಿತೇ ವಿನಾ, ಕೃಷಿ ವಿಶ್ವವಿದ್ಯಾಲಯದ ಲ್ಯಾಬಿನಿಂದ ಸಂಶೋಧನ ರೈತನ ಭೂಮಿಗೆ ಹೋಗಲಿಲ್ಲ. ಸರ್ಕಾರವೂ ಈ ಬಗ್ಗೆ ಕಾಳಜಿ ವಹಿಸಲಿಲ್ಲ. ಹತ್ತಿ, ಜೋಳ, ರಾಗಿ ಇತ್ಯಾದಿ ಯಾವುದೇ ತಳಿ ಸಂಶೋಧನೆ ಮಾಡಿ, ಆ ಜೀನ್ ಅನ್ನು, ಆ ಅಂಗಾಂಶವನ್ನು ತರ್ಜುಮೆ ಮಾಡಿ ಕೊಟ್ಟಿದ್ದರೆ, ಬರದ ಸಂದರ್ಭದಲ್ಲೂ ಕೂಡ ಬೆಳೆಯುವ ತಳಿಗಳನ್ನು ಕೃಷಿ ವಿಶ್ವವಿದ್ಯಾಲಯದಿಂದ ರೈತರಿಗೆ ಕೊಡಬಹುದಾಗಿತ್ತು. ಇಂದು ಎಲ್ಲಾ ರೀತಿಯ ಬೀಜಗಳಿಗೆ ಖಾಸಗಿ ಕಂಪೆನಿಗಳಿಗೆ ಮೊರೆ ಹೋಗಿ, ಹೇಳಿದಷ್ಟು ಬೆಲೆ ತೆತ್ತು ಅಂದರೆ ಕ್ವಿಂಟಾಲ್ ಬೀಜಕ್ಕೆ 10–15 ಸಾವಿರ ಕೊಟ್ಟು ಕೊಳ್ಳಬೇಕಾಗಿದೆ. ಹಿಂದೆ ರೈತರೇ ಬೀಜಗಳನ್ನು ತಯಾರುಮಾಡಿ ತಮ್ಮಲ್ಲೇ ಹಂಚಿಕೊಳ್ಳುತ್ತಿದ್ದ ಪದ್ಧತಿ ಇಂದಿಲ್ಲ. ಇದು ರೈತರನ್ನು ಸಂಪೂರ್ಣವಾಗಿ ಶೋಷಿಸುವ ಕಾರ್ಯವಾಗಿದೆ. ರಫ್ತಿಗಾಗಿ ಆಹಾರ ಧಾನ್ಯಗಳನ್ನು ಬದಲು. ವೆನಿಲ್ಲಾದಂಥ ಬೆಳೆಗೆ ಮಲೆನಾಡಿನಲ್ಲಿ ಬಂದ ರೇಟ್ ಗಮನಿಸಿ ಅಂಥ ಒಂದು ತಳಿಯನ್ನು ಬೆಳೆದು ರೈತನ ಮನೆ ಬಾಗಿಲಿಗೆ ಕೊಟ್ಟಿದ್ದರೆ ಒಳ್ಳೆಯದಾಗುತ್ತಿತ್ತು. ಎಲ್ಲಾ ಸಾಮಾನ್ಯ ರೈತರಿಗೂ ಲಾಭವಾಗುವಂಥ ಈ ಬೆಳೆಯನ್ನು ಬೆಳೆಸಿ ರಫ್ತಿಗೆ ಅವಕಾಶ ಮಾಡಬೇಕಿತ್ತು. 745 ರೈತ ಮಾಹಿತಿ ಕೇಂದ್ರಗಳನ್ನು ಸ್ಥಾಪಿಸಿರುವಲ್ಲಿ ಮಾರುಕಟ್ಟೆ ಇಲಾಖೆ ಇವೆಲ್ಲವನ್ನು ಸಂಯೋಜಿಸಿ ಉಪಯುಕ್ತ ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕಿತ್ತು. ಆದರೆ 656 ಕೃಷಿ ಅಧಿಕಾರಿ ಹುದ್ದೆಗಳು ಈ ಕೇಂದ್ರಗಳಲ್ಲಿ ಖಾಲಿ ಇವೆ. ಇದರಿಂದ ರೈತರಿಗೆ ಉಪಯೋಗವೇನು? ಕೃಷಿ ಮತ್ತು ತೋಟಗಾರಿಕೆ ಇಲಾಖೆಗಳಿಂದ ರೈತರಿಗೆ ನೆರವಾಗದಿದ್ದರೆ. ಆ ಇಲಾಖೆಗಳನ್ನು ಬಂದ್ ಮಾಡಿ. ರಾಜ್ಯದ ತೆರಿಗೆದಾರನ

ಹಣವಾದರೂ ಉಳಿಯುತ್ತದೆ. ಕೃಷಿ ಉತ್ಪನ್ನಗಳ ಸಂಸ್ಕರಣೆಯ ಖಾತೆ ಇದ್ದರೂ, ಜೋಳ ಹುರಿದು ಕೊಡುವುದು ಬಿಟ್ಟರೆ ಬೇರೆ ಯಾವ ಸಂಸ್ಕರಣೆಯ ಕೆಲಸವು ಆಗಿಲ್ಲ. ವಿದೇಶಗಳಿಗೆ ರಫ್ತು ಆಗುವಂಥ ಗರ್ಕಿನ್ಸ್ ಬೆಳೆಯ ಅವಕಾಶವನ್ನು ಯಾವುದೇ ಖಾಸಗಿ ಕಂಪೆನಿಗೆ ಕೊಟ್ಟು ರೈತರನ್ನು ಜೀತದಾಳುಗಳನ್ನಾಗಿಸುವುದಲ್ಲ. ಬದಲು ಗರ್ಕಿನ್ಸ್ ಬೆಳೆಯುವಂಥ ರೈತರ ಸೊಸೈಟಿಯನ್ನು ಮಾಡಿ, ಅವಶ್ಯ ಮಾಹಿತಿ ಕೊಟ್ಟು ಗರ್ಕಿನ್ಸ್ ರಫ್ತು ಮಾಡಿ ಆದಾಯ ಪಡೆಯುವ ಬಗ್ಗೆ ಯೋಚಿಸಿ; ಬೆಳೆ ವಿಮೆಗೆ ಶೇ.2 ರಷ್ಟು ರೈತರನ್ನು ಮಾತ್ರ ಅಳವಡಿಸಲಾಗಿದೆ. ಇಂದು ನೂರಾರು ಸಾವಯವ ಕೃಷಿಗೊಬ್ಬರಗಳು, ಕೀಟನಾಶಕಗಳು ಬರುತ್ತಿವೆ. ಇವನ್ನು ಕೃಷಿ ಇಲಾಖೆ, ತೋಟಗಾರಿಕೆ ಇಲಾಖೆ, ಕೃಷಿ ವಿಶ್ವವಿದ್ಯಾಲಯವಾಗಲಿ ಪರೀಕ್ಷೆಗೊಳಪಡಿಸಿಲ್ಲ. ಗೊಬ್ಬರದ ಕಂಪೆನಿಗಳು ರೈತರನ್ನು ಶೋಷಿಸುತ್ತಿರುವಂತೆ ಸಾವಯವ ಕೃಷಿಯಲ್ಲಿಯೂ ಮಾಡಲಾಗುತ್ತಿದೆ. ಎರೆಹುಳು ಗೊಬ್ಬರ ಎಂದು ಪ್ಯಾಕ್‌ನಲ್ಲಿ ಬರುತ್ತಿವೆ. ಆ ಪ್ಯಾಕ್‌ನಲ್ಲಿ ಬರಿಹೊಟ್ಟು ಮರದ ಹೊಟ್ಟು ಮಿಶ್ರ ಮಾಡಿ ಮಾರುತ್ತಿರುವುದೇ ಇದಕ್ಕೆ ಉದಾಹರಣೆ, ಆಗಿದೆ. ರೈತರಿಗೆ ಬೆಳೆ ಸಾಲವನ್ನು, 16 ರಿಂದ 18 ಪರ್ಸೆಂಟ್ ದರದಲ್ಲಿ ಕೊಡುತ್ತಿದ್ದು ಶ್ರೀಮಂತರಿಗೆ ಕಾರುಕೊಳ್ಳಲು ಕೇವಲ 2 ಪರ್ಸೆಂಟ್ ದರದಲ್ಲಿ ಬ್ಯಾಂಕ್‌ಗಳು ಸಾಲ ನೀಡುತ್ತಿವೆ. ಕೇಂದ್ರ ಸರ್ಕಾರ 9 ಪರ್ಸೆಂಟ್ ದರವನ್ನು ಬಡ್ಡಿಯು ಮೀರಬಾರದೆಂದಿದೆ. ಖಾಸಗಿ ಬ್ಯಾಂಕ್‌ಗಳು ಅದರಂತೆ ಕೊಡುತ್ತಿರುವಲ್ಲಿ, ನಮ್ಮ ಸಹಕಾರರಂಗ ಅದನ್ನು ಅಳವಡಿಸಿಕೊಂಡಿಲ್ಲ ಎಂದರು.

ಶ್ರೀ **ಬಿ.ಎನ್.ಬಚ್ಚೇಗೌಡರು** : ಕಮರ್ಷಿಯಲ್ ಲೋನ್, ಹೌಸಿಂಗ್ ಲೋನ್ 6.5% ಮತ್ತು 7% ಬಡ್ಡಿದರ ಅನುಕ್ರಮವಾಗಿದ್ದು ಅಗ್ರಿಕಲ್ಚರಲ್ ಲೋನ್ ಕೊಡುವ ವ್ಯವಸ್ಥೆ ಇದೆಯೆ? ಎಂದು ಪ್ರಶ್ನಿಸಿದರು. ಶ್ರೀ **ಹೆಚ್.ವಿಶ್ವನಾಥ** ಅವರು, ಪ್ರತಿಕ್ರಿಯಿಸಿ, ನಮ್ಮಲ್ಲಿ 'ಎ' ಗ್ರೇಡ್ ಆಡಿಟ್ ಬ್ಯಾಂಕ್ ಇಲ್ಲದೆ ಬರೀ 'ಸಿ' ಗ್ರೇಡ್ ಬ್ಯಾಂಕ್‌ಗಳಿದ್ದು, ಕೇಂದ್ರದ ಶರತ್ತುಗಳಿರುವಲ್ಲಿ ರೈತರಿಗೆ 9 ಪರ್ಸೆಂಟೇಜ್ ಬಡ್ಡಿದರದಲ್ಲಿ ಸಾಲಕೊಡಬೇಕಿರುವುದು, ಹೀಗಾಗಿ ನಾವು ಅದನ್ನು ಅವೈಲ್ ಮಾಡಿಕೊಳ್ಳಲಾಗದ ಪರಿಸ್ಥಿತಿಯಲ್ಲಿರುವುದು, ಬರ ಪರಿಹಾರಕ್ಕೂ ಕೇಂದ್ರವು ಶೇ.20 ರಷ್ಟು ರೇಟ್ ಆಫ್ ಇಂಟ್ರೆಸ್ಟ್‌ಅನ್ನು ವೇವ್ ಆಫ್ ಮಾಡಲೂ, ಡ್ರೈಲಾಂಡ್ ಮಾತ್ರ ಇರಬೇಕು. ಘೋಷಿಸಿರಬೇಕು, ಎಂದೆಲ್ಲ ಶರತ್ತು ಹಾಕಿರುವುದು ಕೇಂದ್ರ ಕೊಡುವಂಥದ್ದನ್ನು ಅಕ್ರಾಸ್ ದಿ ಬೋರ್ಡ್ ಕೊಟ್ಟರೆ ಅನುಕೂಲವಾಗುವುದು; ಕಾರಣ ರಾಜ್ಯ ಸರ್ಕಾರ 14 ಕೋಟಿ ರೂ. ರೇಟ್ ಆಫ್ ಇಂಟರೆಸ್ಟ್ ಅನ್ನು ಡ್ರಾಪ್ ಮಾಡಿರುವುದು.

ಎಂದೆಲ್ಲ ಹೇಳಿದರು. ಶ್ರೀ **ಆರಗಜ್ಞಾನೇಂದ್ರ** ಅವರು ವಾಣಿಜ್ಯ ಬ್ಯಾಂಕ್‌ಗಳು ಬಳಕೆ ಮಾಡಿಕೊಂಡಿರುವ ಸೌಲಭ್ಯದಂತೆ ನಮ್ಮ ರೈತರಿಗೆ ಸಹಕಾರ ರಂಗದಲ್ಲಿ ಕೇಂದ್ರದೊಡನೆ ಮಾತನಾಡಿ ಅದೇ ಅನುಕೂಲ ಒದಗಿಸಬೇಕಿರುವುದು, **ಜಲಸಂರಕ್ಷಣೆ** ಯೋಜನೆಯು ಸಮರ್ಪಕವಾಗಿ ಸೊಸೈಟಿಗಳು ನಿರ್ವಹಿಸದೆ ಜಾರಿಗೊಳ್ಳದೆ ಹೋದುದು; ಲಿಫ್ಟ್ ಇರಿಗೇಷನ್‌ಗಳು ಮಂಜೂರಾಗಿದ್ದರೂ ಇಂದು ಕಾರ್ಯ ಮುಂದುವರಿಸದಿರುವುದು; ಇಡೀ ರಾಜ್ಯದಲ್ಲಿ 10–15 ಪರ್ಸೆಂಟ್ ರೈತರಿಗೆ ಮೇಜರ್ ಇರಿಗೇಷನ್ ತಲುಪಿದ್ದು ಉಳಿದವರು ಮೈನರ್ ಇರಿಗೇಷನ್ ಮೇಲೆ (ಕೆರೆ, ಲಿಫ್ಟ್ ಇರಿಗೇಷನ್) ಡಿಪೆಂಡ್ ಆಗಿರುವುದು; ತುಂಗ, ಭದ್ರಾ ನೀರು ಬಳಕೆ ಮಾಡದೆ ಹರಿದು ಹೋಗಲು ಬಿಟ್ಟಿರುವುದು, ಮೈನರ್ ಇರಿಗೇಷನ್ ಕೂಡ ನಿಷ್ಕ್ರಿಯವಾಗಿರುವುದು, ನಬಾರ್ಡ್‌ನಿಂದ ಬರುವ ರೇಟ್ ಆಫ್ ಇಂಟರೆಸ್ಟ್ ಹಣವನ್ನು ಒಂದೆರಡು ರೂ. ವ್ಯತ್ಯಾಸದಲ್ಲಿ ರೈತನಿಗೆ ತಲುಪಿಸುವ ವ್ಯವಸ್ಥೆ ಮಾಡಬೇಕಿರುವುದು; ಕಿಂಡಿ ಅಣೆಕಟ್ಟು ಕಟ್ಟುತ್ತೇವೆ. 5 ಸಾವಿರ ಹಳ್ಳಿಗಳಿಗೆ ಕುಡಿಯುವ ನೀರೊದಗಣೆ ಮಾಡುತ್ತೇವೆ ಎಂದಿರುವುದೆಲ್ಲ ಬರಿ ಪ್ರಚಾರಕ್ಕಷ್ಟೆ ಆದುದು; 'ರೈತಕಾಯಕ'ದಲ್ಲಿ ಹೋಬಳಿಗೊಂದು ಕೆರೆ ಎಂಬ ಮಾತು ಕಾರ್ಯಗತವಾಗದೆ ಹೋದುದು; ಒಂದೂವರೆ ಲಕ್ಷ ಹೆಕ್ಟೇರ್ ಭೂಮಿಯನ್ನು ನೀರಾವರಿಗೆ ಅಳವಡಿಸುತ್ತೇವೆ ಎಂದು ಹೇಳಿ 85 ಸಾವಿರ ಹೆಕ್ಟೇರ್ ಭೂಮಿಯನ್ನು ಮಾತ್ರ ಅಳವಡಿಸಿರುವುದು, ಪಹಣಿಗೆ ಮೂರು ರೂ.ಗೆ ಒದಗುತ್ತಿದ್ದುದು 15ರೂ.ಗೆ ನಿಗದಿ ಮಾಡಿ ರೈತರಿಗೆ ವೆಚ್ಚ ಹೆಚ್ಚಿಸಿರುವುದು, ಬಗರ್ ಹುಕುಂ ಮಾಡಿದ ರೈತನಿಗೆ ಮಂಜೂರಾತಿ ಮಾಡುವುದು; ರೈತರ ಕೃಷಿಕ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಅನ್ನು ಗ್ರಾಮಾಂತರ ಪ್ರದೇಶಗಳಲ್ಲಿ ಬಹಳ ಕಡಿಮೆ ಕೊಡುತ್ತಿರುವುದು, ಕುರಿತೆಲ್ಲ ಹೇಳಿದರು.

ಶ್ರೀ **ಎಂ.ಪಿ.ಅಪ್ಪಚ್ಚುರಂಜನ್** ಅವರು ಮಾತನಾಡಿ ಕೊಡಗಿಗೆ ವಿದ್ಯುತ್ ಸಂಬಂಧದಲ್ಲಿ ಬೆಸ್ಕಾಂನಿಂದ ಬಂದಿರುವ ನೋಟೀಸ್ ರೀತ್ಯಾ, ಐಪಿಸೆಟ್‌ಗೆ ಕನೆಕ್ಷನ್ ತೆಗೆದುಕೊಳ್ಳಲು ಓಇಟಿ ಎಂದು 25 ಸಾವಿರ ರೂ. ಡಿಪಾಸಿಟ್ ಇಡಬೇಕಾಗಿದೆ. ರೈತರಿಗೆ ಕರೆಂಟ್ ಬಿಲ್ ಕಟ್ಟುವುದೇ ಸಾಧ್ಯವಾಗದ ಸಂದರ್ಭದಲ್ಲಿ, ಹೀಗೆ ದುಡ್ಡು ಕಟ್ಟಿ ಕನೆಕ್ಷನ್ ತೆಗೆದುಕೊಳ್ಳಲು ರೈತರಿಗೆ ಸಾಧ್ಯವೆ? ಎಂಬುದನ್ನು ಸರ್ಕಾರ ತೀವ್ರವಾಗಿ ಪರಿಶೀಲಿಸಬೇಕು, ಎಂದರು. *ಶ್ರೀ ಆರಗಜ್ಞಾನೇಂದ್ರ ಅವರೂ ಹೊಸದಾಗಿ ಕನೆಕ್ಷನ್* ತೆಗೆದುಕೊಳ್ಳುವುದಕ್ಕೆ ಇನ್ನು ಜಾಸ್ತಿ ಅಂದರೆ 35 ಸಾವಿರ ರೂ. ಕೊಡಬೇಕು, ಎಂದು ಪೂರಕವಾಗಿ ಹೇಳಿದರು. ಶ್ರೀ ಕರಡಿ ಸಂಗಣ್ಣ ಅಮರಪ್ಪ ನವರು ಇದೆಲ್ಲ

ರೈತಪರವಾದ ಯೋಜನೆ ಅಲ್ಲ ಎಂದರು. ಶ್ರೀ ಎಸ್.ಎಸ್.ಪಾಟೀಲ್ ಅವರು, ಟ್ರಾನ್ಸ್‌ಫಾರ್ಮರ್ ಕೆಟ್ಟರೆ ರೈತನೇ ರಿಪೇರಿ ಮಾಡಿಕೊಳ್ಳಬೇಕೆಂದು ಹೇಳಲಾಗಿದೆ ಎಂದರು. ಶ್ರೀ ಆರಗ ಜ್ಞಾನೇಂದ್ರ ಅವರು, ಸುಟ್ಟುಹೋದ ಮೀಟರುಗಳಿಗೆ ಮೀಟರ್ ಒಂದನ್ನು 650 ರೂ.ಗೆ ಕೊಂಡರೂ, ರೈತನಿಂದ ವಸೂಲು ಮಾಡುವುದು 1200 ರೂ.ಗಳು; ಶೇ.5 ರಷ್ಟು ಸರ್‌ಛಾರ್ಜ್ ಅನ್ನು ವಿದ್ಯುತ್ ಬಳಕೆಗಾಗಿ ಕಟ್ಟಬೇಕಿದೆ; ರೈತರ ಪರವಾಗಿರತಕ್ಕಂಥ ಪ್ಯಾಕೇಜನ್ನು ಸರ್ಕಾರ ಘೋಷಿಸಿದರೂ ಅದರಲ್ಲಿ ಒಂದು ಪೈಸೆಯೂ ಬರಲಿಲ್ಲ. ಹಣ ಬಿಡುಗಡೆಗೆ ಪ್ರಯತ್ನವನ್ನು ಮಾಡಲಿಲ್ಲ. ಪಂಪ್‌ಸೆಟ್ ಜನ್‌ರೇಟರ್‌ಗೆ ಸಬ್ಸಿಡಿ ಕೊಡಬೇಕಿತ್ತು. ಬದಲು ಯೂನಿಟ್ ಒಂದಕ್ಕೆ 50 ಪೈಸೆ ವಸೂಲಿ ಮಾಡುವ ಕೆಲಸ ನಡೆದಿದೆ. 'ಯಶಸ್ವಿನಿ' ಯೋಜನೆಗೆ ಹೃದಯ ಚಿಕಿತ್ಸೆಗೆ 80 ಸಾವಿರಕ್ಕೆ ಆಗುವಲ್ಲಿ, ಅದನ್ನು ಬಿಟ್ಟು ಖಾಸಗಿ ಆಸ್ಪತ್ರೆಗಳನ್ನು ಅದರೊಡನೆ ಸೇರಿಸಿರುವುದೇಕೆ? ಎಂದು ತಮ್ಮ ಮಾತಿನ ಕೊನೆಯಲ್ಲಿ ಪ್ರಶ್ನಿಸಿದರು. ಸಚಿವ **ಶ್ರೀ ಎಚ್.ವಿಶ್ವನಾಥ್** ಅವರು ಉತ್ತರಿಸುತ್ತ, ಈ 'ಯಶಸ್ವಿನಿ' ಯೋಜನೆ ರೈತರ ಆರೋಗ್ಯದ ಸಲುವಾಗಿ ತಂದಂಥ ಮಹತ್ವಾಕಾಂಕ್ಷೆಯ ಕಾರ್ಯಕ್ರಮವಾಗಿದ್ದು, ಸಹಕಾರ ಸಂಘದಲ್ಲಿ ಸದಸ್ಯರಾಗಿರುವವರೆಲ್ಲರೂ ಈ ಯೋಜನೆಗೆ ಒಳಪಡುತ್ತಾರೆ. ಜಯದೇವ ಆಸ್ಪತ್ರೆಯನ್ನು 90 ಹೈಟೆಕ್ ಆಸ್ಪತ್ರೆಗಳೊಡನೆ ಟೈ-ಅಪ್ ಮಾಡಿಕೊಳ್ಳಲಾಗಿದೆ, ಎಂದರು. ವಸತಿ ಸಚಿವ ಶ್ರೀ ಸಿ.ಆರ್.ಸಗೀರ್ ಅಹಮದ್ ಅವರೂ, ರೈತರ ಸಂಬಂಧದಲ್ಲಿ ಹೃದಯ ಚಿಕಿತ್ಸೆಗೆ 80 ಸಾವಿರ ರೂ. ನಿಗದಿ ಪಡಿಸಿರುವಲ್ಲಿ, 3 ಲಕ್ಷ ರೂ. ಕೇಳುವ ಆಸ್ಪತ್ರೆಯ ವಿವರಕೊಟ್ಟರೆ ಕ್ರಮತೆಗೆದುಕೊಳ್ಳುವುದಾಗಿ ಹೇಳಿದರು. **ಶ್ರೀ ಕೆ.ಎಂ.ಕೃಷ್ಣಮೂರ್ತಿ** ಅವರು, ರೈತರ ಚಿಕಿತ್ಸೆಗೆ ಹೆಚ್ಚು ಖರ್ಚಾದರೂ ಕೊಡುವ ಬಗ್ಗೆ ಸರ್ಕಾರ ಹೇಳಬೇಕು ಎಂದರು. ಶ್ರೀ ಅರಗಜ್ಞಾನೇಂದ್ರ ಅವರು ತಮ್ಮ ಮಾತನ್ನು ಮುಂದುವರಿಸಿ, ಈ ಒಳ್ಳೆಯ ಯಶಸ್ವಿನಿ ಯೋಜನೆಯು ದುರ್ಲಾಭವಾಗದಂತೆ ತಡೆಯುವುದು, ಜಯದೇವ ಆಸ್ಪತ್ರೆಯನ್ನು ಬಲಪಡಿಸುವುದು, ಉಡುಪಿ-ಮಣಿಪಾಲ್ ಆಸ್ಪತ್ರೆಯನ್ನು ಈ ಯೋಜನೆಗೆ ಟೈ-ಅಪ್ ಮಾಡಬೇಕಿರುವುದು, ಕೂಲಿಗಾಗಿ ಕಾಳು ಯೋಜನೆಯಲ್ಲಿ ಸರಿಯಾಗಿ ಜನರನ್ನು ಗುರುತಿಸದೆ, ಅಡಿಕೆ ತೋಟ ಇದ್ದವರಿಗೆ ಕಾರ್ಡ್ ಕೊಟ್ಟು, ಕೂಲಿ ಮಾಡುವವರಿಗೆ ಈ ಬಿಪಿಎಲ್ ಕಾರ್ಡು ಕೊಟ್ಟಿಲ್ಲ, ಇಂಥ ವ್ಯತ್ಯಾಸಗಳನ್ನು ತಪ್ಪಿಸುವುದು, ಭಾಗ್ಯಜ್ಯೋತಿ ಯೋಜನೆ, ಇಂದಿರಾ ಆವಾಸ್ ಯೋಜನೆ, ಆಶ್ರಯ ಯೋಜನೆ ಸಂಬಂಧ ಗುರುತಿಸಿ ಅಗತ್ಯವಾದ ಬಿಪಿಎಲ್ ಕಾರ್ಡ್ ಕೊಡುವಲ್ಲಿ ವೈಫಲ್ಯವಿರುವುದು, ಗ್ರಾಮದ ಮನೆಯ ಬಾಗಿಲಿಗೆ ಹೋಗಿ ಪರಿಶೀಲನೆ ಮಾಡಬೇಕಿರುವುದು ಕುರಿತೆಲ್ಲ ಹೇಳಿದರು.

ಸಚಿವ ಶ್ರೀ **ಸಿ.ಆರ್.ಸಗೀರ್ ಅಹಮದ್** ಅವರು, ಬಡತನದ ರೇಖೆ ಅಡಿಯಲ್ಲಿ ಬರುವವರ ಪೈಕಿ ಗುರುತಿಸಿ 64 ಲಕ್ಷ ಕುಟುಂಬಗಳಿಗೆ ಹಳದಿ ಕಾರ್ಡ್ ಕೊಡಲಾಗಿದೆ. ಹೆಚ್ಚು ಬೇಡಿಕೆ ಬಂದ ಸಂದರ್ಭದಲ್ಲಿ ಅದನ್ನು ವಿತರಿಸಲಾಗುವುದು ಎಂದರು. ಶ್ರೀ **ಬಿ.ಎನ್.ಬಚ್ಚೇಗೌಡರು** ಮಾತನಾಡಿ ಹಳದಿ ಕಾರ್ಡ್‌ಗಳು ಕೇವಲ 40–50 ಪರ್ಸೆಂಟ್ ಅರ್ಹ ಫಲಾನುಭವಿಗಳಿಗೆ ಮಾತ್ರ ಇಡೀ ರಾಜ್ಯದಲ್ಲಿ ಸಿಕ್ಕಿದೆ ಎಂದರು. ಶ್ರೀ **ಸಿ.ಆರ್.ಸಗೀರ್ ಅಹಮದ್** ಅವರು, ಸರ್ಕಾರದ ಸುತ್ತೋಲೆಯಲ್ಲಿ ಹಾಲಿ ಹಸಿರು ಪಡಿತರ ಚೀಟಿಯನ್ನು ವಾಪಸ್ಸು ಕೊಟ್ಟು ಹಳದಿ ಪಡಿತರ ಚೀಟಿ ಪಡೆದುಕೊಳ್ಳಲು ಆದೇಶ ಹೊರಡಿಸಿದೆ; ಎಂದರು. ಸಭೆಯ ಛೇರ್ಮನ್ ಅವರು ಹಳದಿಕಾರ್ಡ್ ಪಡೆದುಕೊಂಡಿಲ್ಲದವರು ಹಸಿರು ಕಾರ್ಡನ್ನೆ ಇಟ್ಟುಕೊಂಡಿದ್ದರೆ ಆ ಕಾರ್ಡ್ ಮೂಲಕ ಆಹಾರ ಧಾನ್ಯ ಪಡೆದುಕೊಳ್ಳಲೂ ಆದೇಶವಿದೆ ಎಂದರು.

**ವಿಷಯ 11:** ಸಾಲ ಮರುಸಂದಾಯ ಮುಂದೂಡಿಕೆ

11.2.2004 ವಿಧಾನಸಭಾಧಿವೇಶನದಲ್ಲಿ[9] 1961 ಕರ್ನಾಟಕದ ಲೇವಾದೇವಿಗಾರರ ಅಧಿನಿಯಮದ ಅಡಿ ವಿಧೇಯಕವು ಪ್ರಸ್ತಾಪಿತಗೊಂಡಿತು. ರೈತರು ಮತ್ತು ಕೃಷಿ ಕಾರ್ಮಿಕರಿಂದ ಈ ವಿಧೇಯಕ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ಸಾಲ ವಸೂಲಾತಿ ಮುಂದೂಡಬೇಕು, ರೈತರು ಅನುಭವಿಸುತ್ತಿರುವ ತೊಂದರೆ ನಿವಾರಣೆಗಾಗಿ ಯಾರು ಮಿತಿ ಮೀರಿದ ಬಡ್ಡಿ ವಿಧಿಸಬಾರದು, ಬಡ್ಡಿ ಮತ್ತು ಸಾಲ ವಸೂಲಿಗಾಗಿ ಪೀಡಿಸಬಾರದು, ಪೀಡಿಸಲು ಪ್ರೇರಿಸಲೂಬಾರದು, ಸರ್ಕಾರವು ನಿಗದಿಪಡಿಸಿದ ದರವನ್ನು ಮಾತ್ರ ವಿಧಿಸಬೇಕು. ಬಡ್ಡಿ ಹೊಂದಾಣಿಕೆ ಮಾಡಬೇಕು ಎಂದೆಲ್ಲ 2003ರ ಬಡ್ಡಿ ವಿಧಿಸುವಿಕೆ ನಿಷೇಧ ಅಧ್ಯಾದೇಶ. 6ನ್ನು ಪ್ರಸ್ತಾಪಿಸಲಾಯಿತು. ರಾಜ್ಯದ ರೈತರು ಬಹಳತೊಂದರೆಗೊಳಗಾಗಿ, ಸಾಲದ ಬಾಧೆ ತಾಳಲಾರದೆ ಆತ್ಮ ಹತ್ಯೆ ಮಾಡಿಕೊಳ್ಳುತ್ತಿರುವ ವರದಿ ಕಾರಣ ಹಾಗೂ ತೀವ್ರ ಬರಗಾಲದ ಕಾರಣ ಈ ವಿಧೇಯಕವು ಮಂಡಿತವಾಯಿತು.

12.2.2004ರ ವಿಧಾನಸಭಾಧಿವೇಶನದಲ್ಲಿ[10] ಮಿತಿಮೀರಿದ ಬಡ್ಡಿ ವಿಧಿಸುವಿಕೆ ನಿಷೇಧ ವಿಧೇಯಕ *2004* ಪರ್ಯಾಲೋಚನ ಹಾಗೂ ಅಂಗೀಕಾರದ ಬಗ್ಗೆ ಪ್ರಸ್ತಾವ ಮಂಡಿಸಿದ ಸಚಿವ ಶ್ರೀ **ಹೆಚ್.ವಿಶ್ವನಾಥ್** ಅವರು ಮಾತನಾಡುತ್ತ[10]

9. ವಿಧಾನಸಭೆಯ ನಡವಳಿಕೆಗಳು., ಸಂಪುಟ 3(1–5), (11.2.2004), ಪು.406–08

10 . ವಿಧಾನಸಭಾನಡವಳಿಕೆಗಳು, ಸಂಪುಟ 3 (1–5), (12.2.2004), ಪು. 534–43

ಖಾಸಗಿ ಲೇವಾದೇವಿಗಾರರು ಹೆಚ್ಚು ಬಡ್ಡಿ ವಿಧಿಸುವುದು, ಅಂದರೆ ತಿಂಗಳಿಗೆ ಸು.5 ರೂ. 10ರೂ. ಬಡ್ಡಿ ವಿಧಿಸುವುದು, ಈ ಕಾರಣವೂ ಬಹಳಷ್ಟು ಆತ್ಮಹತ್ಯೆಗಳು ನಡೆದಿರುವುದು; ನಂತರ ವಿಧೇಯಕ ತಂದು unsecured loanಗೆ ಬಡ್ಡಿದರ ಶೇ.32 ಇದ್ದುದನ್ನು 16ಕ್ಕೆ, Secured loanಗೆ ಬಡ್ಡಿದರ ಶೇ.21 ಇದ್ದುದನ್ನು 14ಕ್ಕೆ ಇಳಿಸಿರುವುದು; ಕೃಷಿ ಸಲುವಾಗಿ ಸಾಲ ಮಾಡಿದ್ದರೆ, ಸಾಲ ತೀರುವಳಿ ಮಾಡಲು ಕನಿಷ್ಠ 1 ವರ್ಷಗಳ ಕಾಲ ಅವಕಾಶ ಕೊಡುವುದು; ಮನೆ ಬಾಗಿಲಿಗೆ ಹೋಗಿ ಹಠಮಾಡಿ ವಸೂಲಿಗೆ ತಗಾದೆ ಮಾಡಿದ ಕಾರಣ ಆತ್ಮಹತ್ಯೆಗೆ ಅವಕಾಶವಾದರೆ, ಆ ಸಾಲಕೊಟ್ಟವರ ಮೇಲೆ ಕ್ರಿಮಿನಲ್ ದಾವೆ ಹೂಡಲು ಅವಕಾಶವಿರುವುದು; ಬಾಯ್ಮಾತು ಅಥವಾ ಜಮೀನು ಅಡವಿಟ್ಟು ಸಾಲ ಮಾಡಿರುವ ಪ್ರಕರಣಗಳಿದ್ದರೆ ಸಿವಿಲ್ ನ್ಯಾಯಾಲಯದಲ್ಲಿ ರಿಡ್ರೆಸಲ್ ಮಾಡಲು ಅವಕಾಶವಿರುವುದು; ಈ ಹಿನ್ನೆಲೆಯಲ್ಲಿ ವಿಧೇಯಕಕ್ಕೆ ಒಪ್ಪಿಗೆ ಬೇಕು ಎಂದು ವಿನಂತಿಸಿದರು. ಶ್ರೀ **ಎಸ್.ಎಸ್.ಪಾಟೀಲ್** ಅವರು ಬಡ್ಡಿದರವನ್ನು ಶೇ.16 ಎಂದಿಟ್ಟರೂ ಇಂದಿನ ಪರಿಸ್ಥಿತಿಯಲ್ಲಿ ಜಾಸ್ತಿ. ಅಲ್ಲದೆ ರೈತರು ಮನೆ ಕಟ್ಟುವುದಕ್ಕೆ ಕೊಡುವ ಸಾಲದ ಬಡ್ಡಿಯ ದರವು ಇನ್ನಷ್ಟು ಕಡಿಮೆ ಆಗಬೇಕು, ಎಂದರು.

ಶ್ರೀ **ಕೆ.ಜಯಪ್ರಕಾಶ್ ಹೆಗಡೆ** ಅವರು, ಕರ್ನಾಟಕ ಲೇವಾದೇವಿಗಾರರ ಅಧಿನಿಯಮ 7ರಲ್ಲಿ ಸಾಲ ಮರುಸಂದಾಯದ ಮುಂದೂಡಿಕೆ ವಿಷಯವಿದೆ; ಸಾಲಗಾರ ರೈತ ಅಥವಾ ಕೃಷಿ ಕಾರ್ಮಿಕನಾಗಿದ್ದಲ್ಲಿ ಒಂದು ವರ್ಷದವರೆಗೆ ಸಾಲ ವಸೂಲಾತಿಗಾಗಿ ಯಾವುದೆ ಕ್ರಮ ಕೈಗೊಳ್ಳುವಂತಿಲ್ಲ. ಆದರೆ ಲಿಮಿಟೇಷನ್ ಬಾರ್ ಆಗುವುದಾದರೆ ಆ ಅವಧಿಯನ್ನು ಪ್ರೊಟೆಕ್ಟ್ ಮಾಡಬೇಕಾಗುತ್ತದೆ. ಹೀಗಾಗಿ ಈ ಅವಧಿಯನ್ನು ಕವರ್ ಮಾಡಲು ಅವಕಾಶವಾಗಬೇಕು. ಬಡ್ಡಿ ಕಡಿತ ಮಾಡಿಕೊಂಡು ಸಾಲ ಕೊಟ್ಟಿರುವ ಕಡೆ ಏನು ವ್ಯವಸ್ಥೆ? ಎಂಬ ಬಗ್ಗೆ ಸಚಿವರು ತಿಳಿಸಬೇಕು ಎಂದರು. ಶ್ರೀ ಎಚ್.ವಿಶ್ವನಾಥ್ ಅವರು, ಈ ಸಲುವಾಗಿ ಇರುವ ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯ ಏಳುಜನ ಹಿರಿಯ ಅಧಿಕಾರಿಗಳ ಸಮಿತಿ ಈ ಸಮಸ್ಯೆಯನ್ನು ನೋಡಿಕೊಳ್ಳುತ್ತದೆ. ಎಂದು ತಿಳಿಸಿದರು.

ಶ್ರೀ **ಬಿ.ಎಚ್. ಬನ್ನಿಕೋಡ್** ಅವರು, ಬರಗಾಲದ ಹಿನ್ನೆಲೆಯಲ್ಲಿ ಯಾರು ನೊಂದಿದ್ದಾರೆ. ಆತ್ಮಹತ್ಯೆ ಮಾಡಿಕೊಂಡಿದ್ದಾರೆ ಅಂಥ ರೈತ ವರ್ಗಕ್ಕೆ ಸಹಾಯ ಮಾಡಬೇಕು ಮುಖ್ಯವಾಗಿ, ಎಂದರು. ಶ್ರೀ **ಎಸ್.ಸುರೇಶ್‌ಕುಮಾರ್** ಅವರು, ರೈತಾಪಿ ಜನರಿಗಾಗಿ ಬರಗಾಲದ ಹಿನ್ನೆಲೆಯಲ್ಲಿ ತಂದಿರುವ ವಿಧೇಯಕ. ಕರ್ನಾಟಕದ

ಎಲ್ಲರಿಗೂ ಅನ್ವಯ. ಈ ಸಂಬಂಧದಲ್ಲಿ ಪೋಲೀಸ್ ಸ್ಟೇಷನ್‌ಗೆ ಹೋದ ಸಾಲ ಪಡೆದವನನ್ನು ಹೇಗೆ ನಡೆಸಿಕೊಳ್ಳಬೇಕು ಎಂಬ ಬಗ್ಗೆ ಸೂಚನೆಯನ್ನು ಸರ್ಕಾರ ಕೊಡಬೇಕು ಎಂದರು. ಶ್ರೀ **ಮಲ್ಲಿಕಾರ್ಜುನ ಖರ್ಗೆ** ಅವರು ಅಪರಾಧ ಮಾಡಿದವನಿಗೇ ಹೆಚ್ಚು ಸಿಂಪತಿ ತೋರಿಸಿ, victim– ನೊಂದವನಿಗೆ ಆ ಸಿಂಪತಿ ತೋರಿಸುತ್ತಿಲ್ಲ. ಇದನ್ನು Judiciously ಯೋಚಿಸಬೇಕು ಎಂದರು. **ಶ್ರೀ ಶ್ರೀನಿವಾಸಗೌಡ ಕುಡುವನಹಳ್ಳಿ** ಅವರು ಮಾತನಾಡಿ ರೈತ ಆತ್ಮಹತ್ಯೆಯನ್ನು ಖಾಸಗಿಯವರ ಬಳಿ ಬಡ್ಡಿಗೆ ದುಡ್ಡು ಪಡೆದು ಮಾಡಿಕೊಂಡಿದ್ದರೆ ಸಾಲ ಕೊಟ್ಟವನ ಮೇಲೆ ಐಸಿಪಿ ಸೆಕ್ಷನ್ 302 ರಲ್ಲಿ ಕೇಸ್ ಬುಕ್ ಮಾಡಬೇಕೆಂಬುದು ಪ್ರಕಟವಾಗಿದೆ. ಆದರೆ ಇಲ್ಲಿ ತಂದಿರುವ ವಿಧೇಯಕದ ಉದ್ದೇಶಗಳಲ್ಲಿ ಅದಿಲ್ಲವಾದ ಕಾರಣ ಅದನ್ನು ಅಳವಡಿಸಬೇಕಿದೆ. ಹಾಗೆ ಅಳವಡಿಸಿದರೆ ಯಾರು ನೂರಕ್ಕೆ 10–15 ಮಿತಿಮೀರಿದ ಬಡ್ಡಿ ಹಾಕುವುದಿಲ್ಲ. **ಆತ್ಮಹತ್ಯೆಗಳಾದರೆ ಐಪಿಸಿ 302ರ ಅಡಿಯಲ್ಲಿ ಕ್ರಮ ಕೈಗೊಳ್ಳುತ್ತೇವೆಂದರೆ** ಯಾರೇ ವಸೂಲಿಗಾರರಿಗೆ ಹೆದರಿಕೆ ಬರುತ್ತದೆ. ಇದು ರೈತರ ಆತ್ಮಹತ್ಯೆ ನಿಲ್ಲಿಸುವುದಕ್ಕೆ ಕೈಗೊಂಡಿರುವ. ಒಂದು ದಿಟ್ಟ ಕ್ರಮ ಎಂದು ಪ್ರಶಂಸಿಸಿದರು.

ಶ್ರೀ **ಎಸ್.ಎಸ್.ಪುಟ್ಟರಂಗನಾಥ್** ಅವರು ವಿಧೇಯಕದ ಬಗ್ಗೆ ಪ್ರಶಂಸೆ ವ್ಯಕ್ತಪಡಿಸುತ್ತ, ಪ್ರೈವೇಟ್ ಫೈನಾನ್ಸ್‌ನವರು 10–20ರೂ. ಬಡ್ಡಿಗೆ ಜನರನ್ನು ಕರೆದು ಕೊಟ್ಟು, ಅವರನ್ನು ಊರು ಬಿಟ್ಟು ಹೋಗುವಂತೆ ಮಾಡಿದ್ದಾರೆ. ಅಂತಾಗಿ ಈ ಫೈನಾನ್ಸ್‌ಗಳವರನ್ನು ಈ ವಿಧೇಯಕದಡಿ ಸೇರಿಸಬೇಕು, ಅನ್–ರಿಜಸ್ಟರ್ಡ್ ಫೈನಾನ್ಸಿಯರ್ಸ್ ಅನ್ನುಕೂಡ ಇದರಲ್ಲಿ ಅಳವಡಿಸಿಕೊಳ್ಳಬೇಕು ಎಂದು ಹೇಳಿದರು.

**ಶ್ರೀ ಸಿ.ಚನ್ನಿಗಪ್ಪ** ಅವರು ವಿಧೇಯಕವನ್ನು ಸ್ವಾಗತ ಮಾಡುತ್ತ, ಹಳ್ಳಿಗಾಡಿನ ರೈತರ ಬಡವರ ಕಷ್ಟಸುಖಗಳನ್ನರಿತು ಮಿತಿಮೀರಿದ ಬಡ್ಡಿ ವಿಧಿಸುವಿಕೆ ನಿಷೇಧ ವಿಧೇಯಕವನ್ನು ಇಲ್ಲಿ ಮಂಡಿಸಿರುವುದು ಸ್ವಾಗತಾರ್ಹವಾಗಿದೆ ಎಂದರು.

ಶ್ರೀ **ಎನ್.ಯೋಗೀಶ್ ಭಟ್** ಅವರು ಸದ್ಯ ವಿಧೇಯಕ 2004 ಅನ್ನು ಸ್ವಾಗತಿಸುತ್ತ; ರಿಜಿಸ್ಟರ್ಡ್ ಮತ್ತು ಅನ್‌ರಿಜಿಸ್ಟರ್ಡ್ ಫೈನಾನ್ಸ್ ಕಂಪೆನಿಗಳನ್ನು ವಿಧೇಯಕದ ವ್ಯಾಪ್ತಿಗೆ ತರಬೇಕು, ಎಂದರು. ಈ ಫೈನಾನ್ಸ್‌ನವರು ಚೆಕ್‌ಗಳನ್ನು ಹೆಚ್ಚಿನ ಮೊತ್ತಗಳಿಗೆ ಬರೆಸಿಕೊಳ್ಳುವುದು, ಹೆದರಿಸುವುದು, ವಿಧೇಯಕದ ದಿನಾಂಕಕ್ಕೆ ಮುನ್ನಿನ ದಿನಾಂಕವನ್ನು ಬರೆಸಿ ಸಾಲಕೊಡುವುದು, ಇತ್ಯಾದಿ ಪ್ರಸಂಗಗಳನ್ನು

ಗಮನಿಸಬೇಕು. ಸಂಬಂಧಿಸಿದ ಅಧಿಕಾರಿಗಳಿಗೆ ಸೂಚನೆ ನೀಡಿ ಕಾನೂನಿನ ವ್ಯಾಪ್ತಿಗೆ ಬರುವ ಅವಧಿಯ ನಂತರವೆ ವಸೂಲಾತಿಗೆ ಅವಕಾಶವೆಂದು ನಿಯಮಾವಳಿಗಳಲ್ಲಿ ಹೇಳಬೇಕು ಎಂದರು. ಸಚಿವ ಶ್ರೀ ಹೆಚ್.ವಿಶ್ವನಾಥ್ ಅವರು ವಿನಂತಿಸಿದಂತೆ ವಿಧೇಯಕದ ಪ್ರಸ್ತಾವವನ್ನು ಅಧ್ಯಕ್ಷರು ಸಭೆಯ ಮುಂದಿಟ್ಟರು. ಅದು ಅಂಗೀಕರಿಸಲ್ಪಟ್ಟಿತು.

20.1.2005ರ ವಿಧಾನಸಭಾಧಿವೇಶನದಲ್ಲಿ[11] **ಶ್ರೀ ವೈಜನಾಥ ಪಾಟೀಲ್** ಅವರು ಗುಲ್ಬರ್ಗ ಜಿಲ್ಲೆಯಲ್ಲಿ ತೊಗರಿಬೆಳೆ ದರ ಕುಸಿತ ಹಾಗೂ ಏಕಾಏಕಿ ತೊಗರಿ ಖರೀದಿ ಸ್ಥಗಿತದ ಬಗ್ಗೆ ಪ್ರಸ್ತಾಪಿಸಿದಾಗ, ಮಾನ್ಯ ಮುಖ್ಯ ಮಂತ್ರಿಗಳು ಕ್ರಮಕೈಗೊಳ್ಳುವ ಬಗ್ಗೆ ತಿಳಿಸಿದರು. ಶ್ರೀ ಗೋವಿಂದ ಎಂ. ಕಾರಜೋಳ ಅವರು ಬಿಜಾಪುರ, ಬಾಗಲಕೋಟೆ ಜಿಲ್ಲೆಯಲ್ಲಿ ಕೃಷ್ಣ ಮೇಲ್ದಂಡೆ ಯೋಜನೆ ಬಗ್ಗೆ ಪ್ರಸ್ತಾಪಿಸಿ ಉಳಿದ ಜಮೀನುಗಳಿಗೂ ನೀರಾವರಿ ಸೌಲಭ್ಯ ಕಲ್ಪಿಸಲು ಕೇಳಿಕೊಂಡಾಗ ಮಾನ್ಯ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು ಉತ್ತರಿಸಿದರು. ಶ್ರೀ ಸಿ.ಎಂ.ಉದಾಸಿ ಅವರು ಅಕ್ರಮ ವಿದ್ಯುತ್ ಮೀಟರುಗಳನ್ನು ಸಕ್ರಮಗೊಳಿಸುವ ಅವಧಿಯನ್ನು ವಿಸ್ತರಿಸುವ ಬಗ್ಗೆ ಪ್ರಸ್ತಾಪಿಸಿದಾಗ ಮಾನ್ಯ ಲೋಕೋಪಯೋಗಿ ಹಾಗೂ ಇಂಧನ ಸಚಿವರು ಉತ್ತರಿಸಿದರು. ಶ್ರೀ **ಜಗದೀಶ ಶೆಟ್ಟರ್** ಅವರು ನೀರಾವರಿ ಯೋಜನೆಯ ಅನುಷ್ಠಾನದ ಕುರಿತು ಪ್ರಸ್ತಾಪಿಸಿದರು.

1.2.2005ರ ವಿಧಾನ ಸಭಾಧಿವೇಶನದಲ್ಲಿ[11] ಶ್ರೀ ಗೋವಿಂದ ಕಾರಜೋಳ ಅವರು ಬಾಗಲಕೋಟೆ, ಬಿಜಾಪುರ, ಜಿಲ್ಲೆಗಳಲ್ಲಿ ಏತ ನೀರಾವರಿ ಸೌಲಭ್ಯವನ್ನು ಕಲ್ಪಿಸುವ ಬಗ್ಗೆ ಪ್ರಸ್ತಾಪಿಸಿದರು. 2.2.2005ರ ವಿಧಾನ ಸಭೆಯಲ್ಲಿ ಶ್ರೀ ಬಿ.ಎಸ್.ಯಡಿಯೂರಪ್ಪನವರು ಮೇಲ್ಸೂಚಿತ ಜಿಲ್ಲೆಗಳ ಏತ ನೀರಾವರಿ ಸೌಲಭ್ಯ ಕಲ್ಪಿಸುವ ಬಗ್ಗೆ ಪ್ರಸ್ತಾಪಿಸಿದರು. ಶ್ರೀ ಕೆ.ಎಸ್.ಈಶ್ವರಪ್ಪ ನವರೂ ಮಾತನಾಡಿದರು. ಮಾನ್ಯ ಗ್ರಾಮೀಣ ನೀರು ಸರಬರಾಜು ರಾಜ್ಯಸಚಿವರು ನೀಡಿದ ಉತ್ತರದಿಂದ ತೃಪ್ತರಾಗದೆ ಎಲ್ಲಾ ಬಿಜೆಪಿ ಸದಸ್ಯರು ಪ್ರತಿಭಟಿಸಿ ಸದನದಿಂದ ಹೊರನಡೆದರು. ಶ್ರೀ ವಾಟಾಳ್ ನಾಗರಾಜ್ ಅವರು ಸದನದ ಭಾವಿಯಲ್ಲಿ ಧರಣಿ ನಡೆಸಿ ನಂತರ ಸದನದಿಂದ ಹೊರ ನಡೆದರು. ಈ ಪ್ರಸ್ತಾಪ ಪ್ರತಿಭಟನೆಗಳು, ರೈತರಿಗೆ ಸಾಂತ್ವನ, ಪರಿಹಾರೋಪಾಯಗಳನ್ನು ಒದಗಿಸುವ ಬಗ್ಗೆ ಸರ್ಕಾರದ ಗಮನ ಸೆಳೆಯಲು ಕಾರ್ಯೋನ್ಮುಖವಾಗಲು ಮಾಡಿದ ಪ್ರಯತ್ನಗಳೆಂದು ಪರಿಗಣಿಸಬೇಕಾಗುತ್ತದೆ.

---

11. 12ನೇ ವಿಧಾನಸಭೆ 2ನೆಯ ಅಧಿವೇಶನದ ಕಾರ್ಯಕಲಾಪಗಳ ಸಂಕ್ಷಿಪ್ತ ವರದಿ., (20.1.2005 ರಿಂದ 5.2.2005) ಪು.30.31,60,62,80

5.2.2005ರ ವಿಧಾನ ಸಭೆಯಲ್ಲಿ, ಈ ಮೊದಲು 3.2.2005 ರಂದು ಕರ್ನಾಟಕ ಭೂಸುಧಾರಣೆಗಳ (ತಿದ್ದುಪಡಿ) ವಿಧೇಯಕ 2005ನ್ನು ಮಾನ್ಯ ಕಂದಾಯ ಸಚಿವ ಶ್ರೀ ಎಂ.ಪಿ ಪ್ರಾಕಾಶ್ ಅವರು ಗಮನ ಸೆಳೆಯುವ ಸೂಚನೆಯಾಗಿ ಮಂಡಿಸಿದ್ದದನ್ನು ಇಂದು ಪರ್ಯಾಲೋಚಿಸುವ ಬಗ್ಗೆ ಚರ್ಚೆ ನಡೆದು ವಿಧೇಯಕವನ್ನು ಮತಕ್ಕೆ ಹಾಕಿದಾಗ ಅಂಗೀಕರಿಸಲ್ಪಟ್ಟಿತು.

16.3.2005ರ ವಿಧಾನ ಸಭಾಧಿವೇಶನದಲ್ಲಿ[12] ಶ್ರೀ **ಚಿಕ್ಕನಗೌಡ್ರ ಸಿದ್ದನಗೌಡ ಈಶ್ವರಗೌಡ** ಅವರು ಬೆಳೆವಿಮೆ ಹಾಗು ತಮ್ಮ ಕ್ಷೇತ್ರದಲ್ಲಿ ರೈತರ ಮೇಲೆ ನಡೆದ ಪೋಲೀಸರ ಲಾಠಿ ಪ್ರಹಾರದ ಬಗ್ಗೆ ಪ್ರಸ್ತಾಪಿಸಿದಾಗ ಮಾನ್ಯ ಉಪಮುಖ್ಯ ಮಂತ್ರಿಗಳು ಉತ್ತರಿಸಿದರು; ಶ್ರೀ **ಶಿವರಾಜ್ ಸಜ್ಜನರ್** ಅವರು ಹಾವೇರಿ ಜಿಲ್ಲೆಯಲ್ಲಿ 20 ಸಾವಿರ ಎಕರೆ ಜಮೀನಿನಲ್ಲಿ ಕಳಪೆ ಬೀಜ ಬಿತ್ತಿದ್ದು ಹತ್ತಿ ಬೆಳೆ ನಷ್ಟವಾಗಿರುವ ಪ್ರಸ್ತಾಪ ಮಾಡಿ ಪರಿಹಾರ ಧನ ನೀಡಲು ಕೋರಿದರು. ಶ್ರೀ **ಪಿ.ಡಿ.ಪರಮೇಶ್ವರ ನಾಯಕ್** ಅವರು ವೆನಿಲ್ಲಾ ಬೆಳೆಯ ರೈತರ ಹಿತವನ್ನು ಸರ್ಕಾರ ರಕ್ಷಿಸಬೇಕು ಎಂದರು. ಶ್ರೀ **ನೆಹರು ಓಲೇಕಾರ್** ಅವರು ರೈತರ ಮೇಲೆ ಇರುವ ಕೇಸ್‌ಗಳನ್ನು ವಾಪಸು ಪಡೆಯಬೇಕೆಂದರು. ಸಚಿವರು ಈ ಬಗೆಗೆಲ್ಲ ಉತ್ತರಿಸಿದರು. 30.6.05ರ ವಿಧಾನಸಭೆಯ 4ನೆಯ ಅಧಿವೇಶನದಲ್ಲಿ[13] ಶ್ರೀ **ಬಿ.ಎಸ್.ಯಡಿಯೂರಪ್ಪನವರು,** ಸರ್ಕಾರಿ ಸಂಘ, ಸಹಕಾರಿ ಬ್ಯಾಂಕ್‌ಗಳಿಂದ ಪಡೆದ ಸಾಲದ ಅಸಲನ್ನು ಪೂರ್ತಿ ತೀರುವಳಿ ಮಾಡುವವರಿಗೆ ಬಡ್ಡಿ ಹಾಗೂ ಸುಸ್ತಿ ಬಡ್ಡಿ ಮನ್ನಾ ಮಾಡುವ ಯೋಜನೆಯ ಅವಧಿ ವಿಸ್ತರಿಸುವಂತೆ ನಿಲುವಳಿ ಸೂಚನೆಯನ್ನು ಪ್ರಸ್ತಾಪಿಸಲು ಅವಕಾಶ ಕೋರಿದರು. ಮಾನ್ಯ ಸಭಾಧ್ಯಕ್ಷರು ಚರ್ಚೆಗೆ ಅವಕಾಶ ನೀಡಿದರು. ಕೃಷಿ ಸಚಿವ ಶ್ರೀ ಶ್ರೀನಿವಾಗೌಡರು ಈ ಕುರಿತು ಮಾತನಾಡಿದರು. 4.7.2005 ವಿಧಾನಸಭೆಯ[13] ಅಧಿವೇಶನದಲ್ಲಿ ರೈತರ ಸಾಲದ ಬಡ್ಡಿ ಮನ್ನಾ ಮಾಡುವ ವಿಷಯವನ್ನು ಒತ್ತಾಯಿಸಿ, ಬಿಜೆಪಿಯ ಎಲ್ಲಾ ಸದಸ್ಯರು ಧರಣಿಯನ್ನು ಮುಂದುವರಿಸಿ ಭಾವಿಗೆ ಧಾವಿಸಿ ಬಂದು ಪ್ರತಿಭಟನೆಯನ್ನು ಮಾಡಿದರು. ಶ್ರೀ ಬಿ.ಎಸ್.ಯಡಿಯೂರಪ್ಪ ನವರು ಸಾಲದ ಬಡ್ಡಿ ಮನ್ನಾ ಮಾಡವ ವಿಷಯದ ಬಗ್ಗೆ ಮಾತನಾಡಿದರು. ಸರ್ಕಾರವು ತಮ್ಮ ಬೇಡಿಕೆಯನ್ನು 15 ದಿನಗಳ ಒಳಗೆ ಈಡೇರಿಸುವ ನಿರ್ಧಾರ ತೆಗೆದುಕೊಂಡ ಕಾರಣ ಸದಸ್ಯರೆಲ್ಲ ಧರಣಿಯನ್ನು ಹಿಂದಕ್ಕೆ

12. ವಿಧಾನ ಸಭಾಧಿವೇಶನದ ಸಂಕ್ಷಿಪ್ತ ವರದಿಗಳು. *(16.3.05)* ಪು.*107*; 108;(23.3.2005) ಪು.129
13. ವಿಧಾನ ಸಭೆಯ ನಡವಳಿಕೆಗಳು–ಸಂಕ್ಷಿಪ್ತ ವರದಿ., (30.6.05), ಪು.2; (4.7.2005), ಪು. 7. 28; (12.7.2005) ಪು.51; (13.7.05) ಪು.59

ಪಡೆದು ನಿಲ್ಲಿಸಿದರು. ಶ್ರೀ ಜೆ.ಸಿ.ಮಾಧುಸ್ವಾಮಿ, ಶ್ರೀ ವಾಟಾಳ್ ನಾಗರಾಜ್, ಶ್ರೀ ಜಿ.ವಿ. ಶ್ರೀರಾಮರೆಡ್ಡಿ, ಶ್ರೀ ಜಯಪ್ರಕಾಶ್ ಹೆಗಡೆ ಅವರುಗಳು ಚರ್ಚೆಯಲ್ಲಿ ಪಾಲ್ಗೊಂಡಿದ್ದರು. ಸಚಿವ ಶ್ರೀ ಆರ್.ವಿ.ದೇಶಪಾಂಡೆ ಹಾಗೂ ಉಪಮುಖ್ಯಮಂತ್ರಿ ಶ್ರೀ ಸಿದ್ದರಾಮಯ್ಯ ಅವರುಗಳು ಉತ್ತರಿಸಿದರು.

ಶ್ರೀ **ಬಿ.ಎಸ್.ಯಡಿಯೂರಪ್ಪ** ನವರು ನಿರ್ಣಯವನ್ನು ಮಂಡಿಸಿದರು :

*1. ರಾಜ್ಯದ ರೈತರು ಚಟುವಟಿಕೆಗಳಿಗೆ ಪಡೆಯುವ ಕೃಷಿ ಸಾಲದ ಮೇಲೆ ಶೇಕಡಾ 6ರಂತೆ ಬಡ್ಡಿ ನಿಗದಿಪಡಿಸಲಾಗಿರುವ ಈ ಸೌಲಭ್ಯವು ರಾಜ್ಯ ಸರ್ಕಾರದ ವ್ಯಾಪ್ತಿಗೆ ಬರುವ ಸಹಕಾರಿ ಬ್ಯಾಂಕುಗಳಿಗೆ ಮಾತ್ರ ಅನ್ವಯವಾಗಿದ್ದು ಶೇ.40 ಕ್ಕೂ ಹೆಚ್ಚು ರೈತರು ಕೃಷಿ ಚಟುವಟಿಕೆಗಳಿಗೆ ರಾಷ್ಟ್ರೀಕೃತ ಬ್ಯಾಂಕುಗಳಿಂದ ಸಾಲ ಸೌಲಭ್ಯ ಪಡೆಯುತ್ತಿದ್ದಾರೆ. ಅಲ್ಲಿನ ಸಾಲದ ಮೇಲಿನ ಬಡ್ಡಿದರವನ್ನು ಶೇ.6ಕ್ಕೆ ನಿಗದಿ ಮಾಡುವಂತೆ ಕೇಂದ್ರ ಸರ್ಕಾರವನ್ನು ಕೋರಲು ಈ ಸದನವು ನಿರ್ಣಯಿಸುತ್ತದೆ.*

*2. ಕರ್ನಾಟಕ ರಾಜ್ಯವು ಸತತವಾಗಿ 4 ವರ್ಷಗಳ ಬರಗಾಲ ಅನುಭವಿಸಿರುವ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರವು 31.3.2004ರ ವರೆಗಿನ ರೈತರ ಸಾಲದ ಮೇಲಿನ ಬಡ್ಡಿ, ಸುಸ್ತಿ ಬಡ್ಡಿಯನ್ನು ಸಹಕಾರಿ ಕ್ಷೇತ್ರದ ಬ್ಯಾಂಕುಗಳಿಗೆ ಸೇರಿದಂತೆ ಮನ್ನಾಮಾಡಿರುತ್ತದೆ. ಈ ಸೌಲಭ್ಯವನ್ನು ಶೇ.40 ರಷ್ಟು ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಪಡೆದಿರುವ ರೈತರ ಕೃಷಿ ಸಾಲಕ್ಕೂ ವಿಸ್ತರಿಸಲು ಕೇಂದ್ರ ಸರ್ಕಾರವನ್ನು ಕೋರುವಂತೆ ಈ ಸದನ ನಿರ್ಣಯಿಸುತ್ತದೆ.*

ಶ್ರೀ ಜೆ.ಸಿ.ಮಧುಸ್ವಾಮಿ ಅವರು ನಿರ್ಣಯದಲ್ಲಿ ಸ್ವಲ್ಪ ತಿದ್ದುಪಡಿ ಮಾಡಬೇಕೆಂದರು. ಶ್ರೀ ಎಸ್.ಎಸ್.ಪಾಟೀಲ್, ಸಚಿವ ಶ್ರೀ ಆರ್.ವಿ.ದೇಶಪಾಂಡೆ, ಮಾನ್ಯ ಮುಖ್ಯಮಂತ್ರಿಗಳು ಈ ಬಗ್ಗೆ ಮಾತನಾಡಿದ ಮೇಲೆ, ನಿರ್ಣಯವನ್ನು ಮತಕ್ಕೆ ಹಾಕಿ ಅಂಗೀಕರಿಸಲಾಯಿತು.

12.7.2004ರ ವಿಧಾನ ಸಭೆಯ ಕಾರ್ಯಕಲಾಪಗಳಲ್ಲಿ ನಿಲುವಳಿ ಸೂಚನೆಯಲ್ಲಿ ಮಹದಾಯಿ ಕಣಿವೆಯಿಂದ ಕಳಸಾ. ಬಂಡೂರಿ ನಾಲೆಗಳ ಮೂಲಕ ಮಲಪ್ರಭಾ ನದಿಗೆ ಮಾರ್ಗ ಕಲ್ಪಿಸುವುದರಿಂದ 8 ಟಿ.ಎಂ.ಸಿ ನೀರು ಹೆಚ್ಚುವರಿಯಾಗಿ ದೊರೆಯಲಿದ್ದು. ಕುಡಿಯುವ ನೀರಿನ ಸಮಸ್ಯೆ ಪರಿಹಾರವಾಗುತ್ತದೆ. *2006ರ ಡಿಸೆಂಬರ್ ತಿಂಗಳ ಆದಿಯಲ್ಲಿ ನಡೆದ ಸಂಸತ್ ಅಧಿವೇಶನದಲ್ಲಿ* ಮಹದಾಯಿ *ಅಂತರ್ ರಾಜ್ಯ ನದಿ ನೀರು ವಿವಾದವನ್ನು ನ್ಯಾಯಾಧಿಕರಣಕ್ಕೆ ಒಪ್ಪಿಸುವಂತೆ*

*ಪರಿಷ್ಕೃತ ಮನವಿಯನ್ನು ಕಳುಹಿಸಲು ಕೇಂದ್ರವು ಗೋವ ರಾಜ್ಯವನ್ನು ಕೋರಿರುವ ಬಗ್ಗೆ, ಕೇಂದ್ರ ಜಲಸಂಪನ್ಮೂಲ ರಾಜ್ಯ ಸಚಿವ* **ಜೈಪ್ರಕಾಶ್ ನಾರಾಯಣ್ ಯಾದವ್** *ಅವರು ರಾಜ್ಯ ಸಭೆಯಲ್ಲಿ* **ಶಾಂತಾರಾಮ್ ಲಕ್ಷ್ಮಣ್ ನಾಯಕ್** *ಅವರ ಪ್ರಶ್ನೆಗೆ ಉತ್ತರಿಸಿದರು. ಕಾರಣ ಗೋವಾ ಸರ್ಕಾರದ ಕೋರಿಕೆ 1956ರ ಅಂತರ್ ರಾಜ್ಯ ನದಿ ನೀರು ವಿವಾದ ಕಾಯಿದೆಗೆ ಅನುಗುಣವಾಗಿ ಇರಲಿಲ್ಲ ಎಂಬುದಾಗಿತ್ತು. ಹುಬ್ಬಳ್ಳಿ–ಧಾರವಾಡ ಮತ್ತಿತರ ಪ್ರದೇಶಗಳಿಗೆ ಕುಡಿಯುವ ನೀರು ಒದಗಿಸಲು ಮಹದಾಯಿ ನದಿಯಿಂದ ಮಲಪ್ರಭೆಗೆ ನೀರು ತಿರುಗಿಸಿಕೊಂಡು ಕಳಸ–ಬಂಡೂರಿ ನಾಲಾ ಯೋಜನೆ ನಿರ್ಮಿಸಲು ಅಡಿಗಲ್ಲು ಹಾಕಿರುವ ಬಗ್ಗೆ ಕರ್ನಾಟಕ ಸರ್ಕಾರವು ಕೇಂದ್ರಕ್ಕೆ ಬರೆದಿರುವ ಬಗ್ಗೆಯೂ ಶ್ರೀ ಯಾದವ್ ಅವರು ತಿಳಿಸಿದುದು ವರದಿಗೊಂಡಿದೆ (6.12.2006). ಅಂದರೆ 2005ರ ಜುಲೈನ ವಿಧಾನಸಭಾಧಿವೇಶನದ ಪ್ರಸ್ತಾಪಿತ ಕೋರಿಕೆಯು, ಕಾರ್ಯೋನ್ಮುಖವಾದುದರ ಸೂಚನೆ ಇಲ್ಲಿ ಕಾಣುತ್ತದೆ.*

ಅಕ್ರಮ–ಸಕ್ರಮ ಯೋಜನೆಯಡಿಯಲ್ಲಿ, ಒವರ್ ಲೋಡ್‌ನಿಂದಾಗಿ ಟಿ.ಸಿ.ಯು ಸುಟ್ಟು ಹೋಗುತ್ತಿದ್ದು ಅವುಗಳ ರಿಪೇರಿ ವಿಳಂಬವಾಗಿ, ಕುಡಿವ ನೀರಿಗೆ, ಬಿತ್ತನೆಗೆ ತೊಂದರೆ ಆಗಿರುವ ಬಗ್ಗೆ, ಹಾಗೂ ಹೆಚ್ಚಿಗೆ ಬಡ್ಡಿ ವಿಧಿಸುತ್ತಿರುವ ಬಗ್ಗೆ ಪ್ರಸ್ತಾಪಗೊಂಡವು. ಭೀಮಾ ನದಿ ಸಂಪೂರ್ಣ ಒಣಗಿರುವುದರಿಂದ ಇಂಡಿ, ಸಿಂಧಗಿ, ಮತ್ತು ಅಫ್‌ಜಲ್‌ಪುರ ತಾಲೂಕುಗಳ ರೈತರ ಬೆಳೆ ನಾಶವಾಗಿರುವುದಲ್ಲದೆ ಜನ ಜಾನುವಾರುಗಳಿಗೆ ಕುಡಿಯಲು ನೀರಿಲ್ಲದಂತಾಗಿರುವುದು, ಮಹಾರಾಷ್ಟ್ರದ ಉಜ್ಜನಿ ಜಲಾಶಯದಿಂದ ನೀರು ಪಡೆಯುವುದು ಬಗ್ಗೆ ಮಾನ್ಯ ಜಲಸಂಪನ್ಮೂಲ ಮತ್ತು ಸಾರಿಗೆ ಸಚಿವರ ಗಮನ ಸೆಳೆಯಲಾಯಿತು. 13.7.2005ರ ವಿಧಾನಸಭಾ ಕಾರ್ಯಕಲಾಪಗಳಲ್ಲಿ ಶ್ರೀ **ರೇವುನಾಯಕ್ ಬೆಳಮಗಿ** ಅವರು ಸತತ 4 ವರ್ಷಗಳ ಬರಗಾಲದ ಪ್ರಯುಕ್ತ ರೈತರಿಗೆ ಕೂಲಿಕಾರ್ಮಿಕರಿಗೆ ಕುಡಿವ ನೀರಿನ ತೊಂದರೆ ಆಗಿರುವಲ್ಲಿ ಕಮಲಾಪುರ ಕ್ಷೇತ್ರವನ್ನು ಬರಗಾಲಪ್ರದೇಶವೆಂದು ಘೋಷಿಸುವ ಬಗ್ಗೆ ಪ್ರಸ್ತಾಪ ಮಾಡಿದರು. ಮಾನ್ಯ ಕಂದಾಯ ಸಚಿವರು ಉತ್ತರಿಸಿದಂತೆ 19.7.2005ರ ವಿಧಾನಸಭಾಧಿವೇಶನದಲ್ಲಿ ಶ್ರೀ **ಸಿ.ಎಂ.ಉದಾಸಿ** ಹಾಗು ಶ್ರೀ **ಎಸ್.ಕುಮಾರ್ ಬಂಗಾರಪ್ಪ** ಅವರು ಹಾನಗಲ್ ತಾ. ವರದಾ ನದಿಗೆ ಅಣೆಕಟ್ಟುತ್ತಿರುವಲ್ಲಿ ಸಾವಿರಾರು ಜನ ನಿರಾಶ್ರಿತರಾಗುವಲ್ಲಿ ಹಾಗೂ ಕೃಷಿ ಜಮೀನು ಮುಳುಗಡೆ ಆಗುವಲ್ಲಿ, ಆ ಜನರಿಗೆ ಪರ್ಯಾಯ ನೆಲೆಯಾಗಿ ಪರಿಹಾರ ಒದಗಿಸಿಕೊಡಲು ಜಲಸಂಪನ್ಮೂಲ–ಸಾರಿಗೆ ಸಚಿವರ ಗಮನ ಸೆಳೆದರು. ಸಚಿವರು

ಈ ಬಗ್ಗೆ ಉತ್ತರಿಸಿದರು. 3.8.2005ರ ವಿಧಾನಸಭಾನಾಧಿವೇಶದಂತೆ ನಿಲುವಳಿ ಸೂಚನೆಯನ್ನು ಸ್ವೀಕರಿಸಲಾಯಿತು. ನಿಯಮ 146ರ ಮೇರೆಗೆ ರಾಜ್ಯದ ರೈತರ ಸಾಲದ ಮೇಲಿನ ಬಡ್ಡಿ ಮನ್ನಾ ಮಾಡುವ ಬಗ್ಗೆ 2 ನಿರ್ಣಯಗಳನ್ನು ಅಂಗೀಕರಿಸಲಾಯಿತು.

**ವಿಷಯ 12:** ಅ) ಕರ್ನಾಟಕ ಮೌಲ್ಯವರ್ಧಿತ ತೆರಿಗೆ ವಿಧೇಯಕ 2003

25.3.2003ರ ವಿಧಾನ ಸಭಾಧಿವೇಶನದಲ್ಲಿ[14] ಶ್ರೀ **ಎಸ್.ಪಿ.ಮುದ್ದ ಹನುಮೇಗೌಡರು** ಈ ತೆರಿಗೆಯ ಬಗ್ಗೆ ತಮ್ಮ ಅನಿಸಿಕೆಗಳನ್ನು ಮಂಡಿಸುತ್ತ; ಮುಕ್ತ ಮಾರುಕಟ್ಟೆ ಮತ್ತು ಜಾಗತೀಕರಣ ಸವಾಲುಗಳು ಎದುರಾಗಿವೆ. ಸಾಂಪ್ರದಾಯಿಕ ತೆರಿಗೆ ಪದ್ಧತಿ ಈಗ ಸೂಕ್ತವಾಗದು. ಮುಂದುವರಿದ ರಾಷ್ಟ್ರಗಳು ಮೌಲ್ಯವರ್ಧಿತ ತೆರಿಗೆ ಪದ್ಧತಿಗೆ ಒಳಪಟ್ಟಿರುವಲ್ಲಿ ನಮ್ಮಲ್ಲಿ ಅದರ ಅಳವಡಿಕೆ ಅನಿವಾರ್ಯ, ಅಗತ್ಯವಾಗಿದೆ. ರಾಜ್ಯದ ಅರ್ಥಿಕ ಹಿತದೃಷ್ಟಿಯಿಂದ ಅದು ಒಳ್ಳೆಯ ವ್ಯವಸ್ಥೆ, ಈ ತೆರಿಗೆಯಿಂದ ಮಾರಾಟ ವ್ಯವಸ್ಥೆಯಲ್ಲಿ ಪಾರದರ್ಶಕತೆ ಬರುತ್ತದೆ. ತೆರಿಗೆಯನ್ನು ಯಾರು, ಯಾವಾಗ, ಎಷ್ಟು, ತೆರಿಗೆ ಕೊಡಬೇಕು, ಯಾರಿಗೆ ಯಾವ ಸಂದರ್ಭದಲ್ಲಿ ಹಾಕಬೇಕು ಎಂಬುದು ಸ್ಪಷ್ಟವಿದೆ. ಮಾರಾಟಗಾರರು, ತಯಾರಕರು, ಬಳಕೆದಾರರಿಗೆ ಗೊಂದಲ ಈ ವ್ಯವಸ್ಥೆಯಲ್ಲಿ ಇಲ್ಲ. ಪಾರದರ್ಶಕತೆಯಿಂದ, ಪ್ರಾಮಾಣಿಕತೆ ಹೆಚ್ಚು ಮಾಡುವಂಥ ವ್ಯವಸ್ಥೆ ಈ ತೆರಿಗೆ ಸುಧಾರಣೆಯಿಂದ ಆಗುತ್ತದೆ. ಬೆಸ್ಟ್ ಆಫ್ ದಿ ಟರ್ನ್‌ಓವರ್ ಮೇಲೆ ಏನು ತೆರಿಗೆ ಇಂಪೋಸ್ ಮಾಡುತ್ತಿದ್ದೆವೋ ಅದು ಈಗ ವಾಲ್ಯೂ ಆಡೆಡ್ ಪ್ರಾಡಕ್ಟ್ ಆಗಿ ಪರಿವರ್ತನೆ ಆಗಿರುವುದರಿಂದ ತೆರಿಗೆ ವ್ಯವಸ್ಥೆಯಲ್ಲಿ ಸುಧಾರಣೆ ತರುವ ಕ್ರಮವಾಗಿದೆ. ರಾಜ್ಯದ ಆರ್ಥಿಕ ಶಿಸ್ತು ಮೂಡಿಸುವ ವ್ಯವಸ್ಥೆ ಆಗುತ್ತದೆ. ತೆರಿಗೆ ಕೊಡುವವರಿಗೆ, ವಸೂಲಿ ಮಾಡುವವರಿಗೆ ಯಾವುದೇ ಕಷ್ಟಕರ ಪರಿಸ್ಥಿತಿ ಇಲ್ಲಿಲ್ಲ. ಸರಳ ಮತ್ತು ಸುಲಭ ತೆರಿಗೆ ಸುಧಾರಣಾ ಪದ್ಧತಿಯಾಗಿ, ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಬರುತ್ತಿರತಕ್ಕದ್ದಾಗಿದೆ. ಆದರೆ ಈ ವಿಧೇಯಕದ 8ನೇ ಅಧ್ಯಾಯದಲ್ಲಿ ದಂಡ, ಅಪರಾಧ, ನಿಯಮ ರೂಪಿಸುವ ಅಧಿಕಾರ ಇತ್ಯಾದಿ ವಿಷಯಕ್ಕೆ ಸಂಬಂಧಿಸಿದಂತೆ ಇರುವ ಕೆಲವು ನ್ಯೂನ್ಯತೆಗಳನ್ನು ಕಾನೂನು ಸಚಿವರ ಗಮನಕ್ಕೆ ತರಬೇಕಿದೆ. 1.4.2003 ರಿಂದ ಈ ಹೊಸ ವ್ಯವಸ್ಥೆ ಜಾರಿಗೆ ಬರಲಿದೆ. ಟ್ಯಾಕ್ಸೇಷನ್ ಸಿಸ್ಟಂಗೆ ಹೊಸ ಆಯಾಮವನ್ನು ನೀಡಲಾಗಿದೆ. ಇದರಲ್ಲಿಯ ಕ್ಲಿಷ್ಟಕರವಾದ

14. **25.3.2003**ರ ವಿಧಾನಸಭಾಧಿವೇಶನದಲ್ಲಿ ವಿಧಾನಸಭೆಯ ನಡವಳಿಕೆಗಳು., ಸಂಪುಟ 4 (1–3), **25.3.2003**, ಪು.87–91

Penal clauses ಬಗ್ಗೆ ಜನರಿಗೆ ತೆರಿಗೆ ಕಟ್ಟುವವರಿಗೆ ಜಾಗೃತಿ ಉಂಟುಮಾಡದೆಯೆ, ಏಕಾಏಕಿ 1.4.2003 ರಿಂದ ಜಾರಿಗೆ ತಂದರೆ– Suppose if you just detect a serious offence under Section 79 of the act ಆಗ The Penalty prescribed under the act is "imprisonment for six months; penalty of Rs.1 lakh or double the amount of the tax evaded-ಹೀಗಾಗಿ ಜನರಲ್ಲಿ ಜಾಗೃತಿ ಮಾಡುವ ಅನಿವಾರ್ಯತೆ ಇದೆ. ಆದರೆ by giving more powers to the officers of levying the fine ಎಲ್ಲೋ ಒಂದು ಕಡೆ ಅದು it may lead to certain Corruptions. ಅಧಿಕಾರ ದುರ್ಬಳಕೆ ಆಗುವ ಅನುಮಾನ ನನಗೆ ಇದೆ. ಹೀಗಾಗಿ 71–79ನೇ ಸೆಕ್ಷನ್‌ನಲ್ಲಿ ಬೃಹತ್ ಮಟ್ಟದ ಫೈನ್ ಹಾಕುವ ಅಧಿಕಾರ, ಹಾಗೂ compound offenecs ನಲ್ಲಿ ಅಷ್ಟೊಂದು ಅಧಿಕಾರ ಕೊಡುವುದರಲ್ಲಿ ಅರ್ಥವಿಲ್ಲ. ಈ ವಿಧೇಯಕದ 80ನೇ ಸೆಕ್ಷನ್ sub-Section (1) ಮತ್ತು sub-section (2) ನಲ್ಲಿ ಗೊಂದಲ ಹಾಗೂ ಅಸ್ಪಷ್ಟತೆ ಇದೆ. ಈ ಬಗ್ಗೆ ಕಾನೂನು ಇಲಾಖೆ ಗಮನಹರಿಸಬೇಕು. ಕಾರಣ ಎಲ್ಲೆಲ್ಲಿ ತಪ್ಪುಗಳಿವೆಯೋ, ಕೊರತೆಗಳಿವೆಯೋ ಅದನ್ನು ಹುಡುಕಿ ಕಾನೂನಿನ ರಕ್ಷಣೆ ಪಡೆಯುವಂಥ ಪ್ರಯತ್ನಗಳು ನಿರಂತರ ನಡೆಯುತ್ತಿರುತ್ತವೆ. ಇಂಥ ಪ್ರಯತ್ನಕ್ಕೆ ಅವಕಾಶವಾಗದಂತೆ ನೋಡಿಕೊಳ್ಳಬೇಕು. ಎಂದು ತಮ್ಮ ಮಾತನ್ನು ಮುಗಿಸಿದರು.

**ಶ್ರೀ ಎ.ರಾಮದಾಸ್** ಅವರೂ ವಿಧೇಯಕವನ್ನು ಸ್ವಾಗತ ಮಾಡುತ್ತ; ಈ ವ್ಯಾಟ್ ಪದ್ಧತಿಯನ್ನು ಕಾನೂನು ರೀತ್ಯಾ ಸದನದಲ್ಲಿ ಬಿಲ್ ಪಾಸ್ ಮಾಡಿ Act ಮಾಡುವ ಮೊದಲು ಬಜೆಟ್‌ನಲ್ಲಿ ತಂದಿದ್ದೇವೆ ಅನ್ನುವುದಕ್ಕೆ ಕಾನೂನಿನಲ್ಲಿ ಅವಕಾಶವಿಲ್ಲ. ಬಜೆಟ್‌ನಲ್ಲಿ ಈ ಪದ್ಧತಿ ಪ್ರಕಾರ ಟಾಕ್ಸ್ ಹಾಕುತ್ತೇವೆ ಎಂದು ಜಾರಿಗೆ ಕೊಡುವ ಮೊದಲು legal sanctity ಅನ್ನು ನಾವು ತೆಗೆದುಕೊಂಡಿಲ್ಲ. ಈ ಹೌಸ್‌ನ legal sanctity ಅನ್ನು ಈ ವ್ಯಾಟ್ ಪದ್ಧತಿಗೆ ಬರುವುದಕ್ಕೆ ಮೊದಲೇ ಜಾರಿಗೆ ತರುತ್ತೇವೆ ಎಂದರೆ, ಅಕ್ಷಮ್ಯ ಅಪರಾಧ. ಕರ್ನಾಟಕ ಸೇಲ್ಸ್ ಟ್ಯಾಕ್ಸ್, ಮಾರಾಟ ತೆರಿಗೆ ಎಂಬುದು ರಾಜ್ಯದಲ್ಲಿ 46 ವರ್ಷಗಳ ಕಾಲದಿಂದ ಜಾರಿಯಲ್ಲಿದೆ. ಹೀಗಾಗಿ ಹೊಸ ಪದ್ಧತಿ ಅಳವಡಿಕೆಯಲ್ಲಿ ಎಚ್ಚರಿಕೆ ಹೆಜ್ಜೆ ಹೆಜ್ಜೆಗೂ ಅವಶ್ಯಕ. ಆದರೆ ಈಗಾಗಲೇ ಕೇಂದ್ರದಲ್ಲಿ ನಮ್ಮ ಮುಂದಿರುವ ಸ್ಯಾನ್ ವ್ಯಾಟ್ ಸೆಂಟ್ರಲ್ ಎಕ್ಸೈಸ್‌ನಲ್ಲಿ ಬರುವ ಸಮಸ್ಯೆಗಳನ್ನು ವಿಶ್ಲೇಷಣೆ ಮಾಡುವಲ್ಲಿ ಅದಕ್ಕೆ ಬೇಕಾದ ರೀತಿಯಲ್ಲಿ ಮಾಡ್‌ವ್ಯಾಟ್ ಆಯಿತು. ಮಾಡಿಫೈಡ್ ವ್ಯಾಲ್ಯು ಆ್ಯಡೆಡ್ ಟ್ಯಾಕ್ಸ್ ನಲ್ಲಿರುವ ಸಮಸ್ಯೆಗಳಿಗೂ ಪರಿಹಾರ ಹುಡುಕುವ ಕೆಲಸವನ್ನು ಆರಂಭಿಸಲಾಗಿದೆ.

ಮಾರಾಟ ತೆರಿಗೆಯ ರಿಪ್ಲೇಸ್‌ಮೆಂಟ್‌ಗೋಸ್ಕರ ಈ ಪದ್ಧತಿಯ ಜಾರಿಗೆ ಎಲ್ಲರ ಸ್ವಾಗತವಿದೆ. ಮುಖ್ಯವಾಗಿ ನಮ್ಮಲ್ಲಿಯ ಕಮರ್ಷಿಯಲ್ ಟ್ಯಾಕ್ಸ್, ಅದರಲ್ಲಿ ಎಂಟ್ರಿಟ್ಯಾಕ್ಸ್, ಎಂಟರ್‌ಟೇನ್‌ಮೆಂಟ್ ಟ್ಯಾಕ್ಸ್, ಲಕ್ಸುರಿ ಟ್ಯಾಕ್ಸ್ ಹಾಗು ಇತರೆ ಸರ್ವೀಸ್ ಟ್ಯಾಕ್ಸ್ ಅನ್ನು ರಾಜ್ಯ ಸರ್ಕಾರ ಇಚ್ಛೆ ಬಂದ ರೀತಿಯಲ್ಲಿ ಹಾಕುವುದನ್ನು ಕಾಣುತ್ತೇವೆ. ಇದನ್ನು ರಿಪ್ಲೇಸ್ ಮಾಡಲು ವ್ಯಾಟ್ ಪದ್ಧತಿ ತರುವುದಾಗಿದೆ. ಆದರೆ ಟ್ಯಾಕ್ಸ್ ವ್ಯಾಟ್ ಬಂದ ಮೇಲೆ ಏನಾಗುತ್ತದೆ ಎಂಬ ಭಯವೂ ಇದೆ. ಈ ವ್ಯವಸ್ಥೆಗೆ ಕೊಟ್ಟಿರುವ ಐಟಂಗಳಲ್ಲಿ, ಕಾಟನ್, ಸಿಲ್ಕ್ ಯಾರ್ನ್, ಫ್ರೆಶ್‌ಮಿಲ್ಕ್ ಇತ್ಯಾದಿ 38 ಐಟಂಗಳಿವೆ. ಎಕ್ಸೆಮ್‌ಷನ್ ಆಫ್ ಟ್ಯಾಕ್ಸ್ ಎನ್ನುವ ಒಂದು clause ನಲ್ಲಿ ರಾಜ್ಯ ಸರ್ಕಾರಕ್ಕೆ ಅಧಿಕಾರ ಇದೆ. ಕೆ.ಎಸ್.ಟಿ.(ಕರ್ನಾಟಕ ಸೇಲ್ಸ್ ಟ್ಯಾಕ್ಸ್) ಉಳಿಸಿಕೊಳ್ಳುವ ಬಗ್ಗೆ ಸಚಿವರು ಹೇಳಿದ್ದಾರೆ (ಪೆಟ್ರೋಲ್, ಡಿಸೆಲ್ ವಿಷಯದಲ್ಲಿ), ಕೇಂದ್ರದ ಟ್ಯಾಕ್ಸ್ ಪದ್ಧತಿಗಳು ಬೇರೆ ಬೇರೆ ಇವೆ. ಇದಕ್ಕಾಗಿ ಕೆ.ಎಸ್.ಟಿ ಉಳಿಸಿಕೊಳ್ಳಲಾಗುತ್ತದೆ, ಎಂದರೆ What is the meaning of bringing the vat here? ವ್ಯಾಟ್ ಬಂದ ಮೇಲೆ ಕೆ.ಎಸ್.ಟಿ. ರಾಜ್ಯದಲ್ಲಿ ಇರಲು ಸಾಧ್ಯವಿಲ್ಲ. ಪೆಟ್ರೋಲ್, ಡೀಸೆಲ್ ಮತ್ತು ಎವಿಯೇಷನ್ ಟರ್ಬೈನ್ ಫ್ಯೂಯಲ್, ಕೆರೋಸಿನ್ ಅನ್ನು ಸೇರಿದಂತೆ ಕೆ.ಎಸ್.ಟಿ.ಹೊರಗೆ ತಂದು ವ್ಯಾಟ್ ಅಡಿಯಲ್ಲಿ ಕೂಡಿಸಿ ಸೆಪರೇಟ್ ಶೆಡ್ಯೂಲ್ ಕೊಡಬೇಕು. ಈ ಸಂಬಂಧ ಒಂದು Clause ಕೊಡಬೇಕು.

ಅದರ ಪ್ರಕಾರ ಇನ್‌ಪುಟ್ ಕ್ಯಾಶ್ ಕ್ರೆಡಿಟ್ ಈ ಪದಾರ್ಥಗಳಿಗೆ ಇಲ್ಲ; ಅಂತಾಗಿ ತರಿಸಿಕೊಳ್ಳುವ ಇನ್‌ಪುಟ್‌ಗೆ ಕ್ಯಾಷ್‌ಕ್ರೆಡಿಟ್ ಕೊಡಲು ಬರುವುದಿಲ್ಲ ಎಂದು ತಿಳಿಸಬೇಕು. ಕೆ.ಎಸ್.ಟಿ ಉಳಿಸಿಕೊಂಡರೆ ವ್ಯಾಟ್‌ಗೆ ಯಾವುದೇ ಕಾರಣಕ್ಕೂ ವ್ಯಾಲ್ಯೂ ಇಲ್ಲದ ಹಾಗೆ ಆಗುತ್ತದೆ. ಏಪ್ರಿಲ್ 1ನೇ ತಾರೀಖಿನಿಂದಲೇ ಈ ಕಾರಣ ಕೆ.ಎಸ್.ಟಿ ವ್ಯವಸ್ಥೆ ಸ್ಕ್ರಾಪ್ ಆಗಬೇಕು. ಬೇರೆ ರಾಜ್ಯಗಳಲ್ಲೂ ವ್ಯಾಟ್ ಇಲ್ಲ. ವ್ಯಾಟ್ ಬಂದರೆ ಕೆ.ಎಸ್.ಟಿ.ಇರುವುದಿಲ್ಲ ಎಂದು ಕಾನೂನು ಮಂತ್ರಿಗಳು ಹೇಳಿದ್ದಾರೆ. ನಾಲ್ಕನೇ ಶೆಡ್ಯೂಲಿನಲ್ಲಿ, goods taxable at 20 Pereent ಎಂದು ಹೇಳಿ, ಲಿಕ್ಕರ್ ಇನ್‌ಕ್ಲೂಡಿಂಗ್ ಬಿಯರ್ ಪೆನ್ನಿ, ಲಿಕ್ಕರ್‌ವೈನ್, ನಾಪೋಟಿಸ್, ರೆಕ್ಟಿಫೈಡ್ ಸ್ಪಿರಿಟ್ ಇವೆಲ್ಲ ಸೇರಿಸಿಕೊಂಡಿರುವುದಕ್ಕೆ ಸ್ವಾಗತ. ಆದರೆ ಮೂರು ದಿನಗಳ ಒಳಗೆ ವ್ಯಾಟ್ ಪದ್ಧತಿ ಬಳಸಿ ಹಳೆಯ ಪದ್ಧತಿಗೆ ಹೋಗುವುದಕ್ಕೆ ಏನಾಯಿತು! ಎಂದರು. ಒಟ್ಟಾರೆ ವ್ಯಾಟ್ ಪದ್ಧತಿಯ ಇತಿಮಿತಿಗಳನ್ನು ಚರ್ಚಿಸಿ ಸೂಕ್ತವಾದಂತೆ ಅಳವಡಿಸಿಕೊಳ್ಳುವುದು ಒಳಿತು, ಎಂಬ ಅಭಿಪ್ರಾಯ ವ್ಯಕ್ತವಾಯಿತು.

ಈ ದಿನದ ಚರ್ಚೆಯಲ್ಲಿ ಸರ್ವಶ್ರೀ ಬಿ.ಎನ್.ಬಚ್ಚೆಗೌಡ. ಕೆ.ಜಯಪ್ರಕಾಶ್ ಹೆಗಡೆ, ಅವರುಗಳೂ ಪಾಲ್ಗೊಂಡಿದ್ದರು.

**ವಿಷಯ 13:** ಇ) ಕರ್ನಾಟಕದ ಕೃಷಿ ನೀತಿ 2006

ರೈತ ಕೇಂದ್ರೀಕೃತ ಕೃಷಿ ನೀತಿ ಕರ್ನಾಟಕದ ಗುರಿ. ಇದು ರೈತ ವರ್ಗದ ಸರ್ವತೋಮುಖ ಅಭಿವೃದ್ಧಿಗಾಗಿ ರೂಪಿಸಿದ ನೀತಿ. ಮಣ್ಣಿನ ದುಡಿಮೆಗಾರರಿಗೆ ಸಲ್ಲಿಸಬೇಕಾದ ಋಣಕ್ಕೆ ಇದು ಕಾರ್ಯಭಾರದ ಕರ್ತವ್ಯ. ರೈತ ಕೊಟ್ಟ ತುತ್ತಿಗೆ, ಬೆಳೆದ ಜೀವಗಳು ಸಂವೇದಿಸಬೇಕಾದ ಹೊಣೆ. ಇಲ್ಲಿ ಕೃಷಿವಲಯದ ಸಮಸ್ಯೆಗಳನ್ನು ಪರಿಹರಿಸಲು ಸರ್ವರೂ ಮಾಡಬೇಕಾದ ಪ್ರಯತ್ನ. ಇದು ಕೃಷಿತಜ್ಞರು, ಸಮಾಜಸೇವಕರು, ಶಾಸಕರು, ಸ್ವಯಂಸೇವಾ ಸಂಸ್ಥೆಗಳು, ರೈತ ನಾಯಕರು ಹಾಗು ಸಂಘಟನೆಗಳು ಇತ್ಯಾದಿ ಸಮೂಹದೊಡನೆ ಸಮಾಲೋಚನೆ, ಸಂವಾದ ನಡೆಸಿ ರೂಪಿಸಬೇಕಾದ ಕೃಷಿ ನೀತಿಯಾಗಿದೆ.

ಇಂಥ ಕೃಷಿ ನೀತಿ ನಿರೂಪಣೆಗೆ ಪ್ರೇರಣೆಯ ಪಾಲು 20.11.2005ರ ಉಭಯ ಸದನಗಳ ಜಂಟಿ ಅಧಿವೇಶನದಲ್ಲಿ ಮಾಡಿದ ಕೃಷಿ ಸರ್ವತೋಮುಖ ಅಭಿವೃದ್ಧಿ ಕುರಿತ ಸಲಹೆಗಳಲ್ಲಿಯೂ ಇದೆ. ಕಾರ್ಯಸೂಚಿಯಾಗಿ ಜೈವಿಕ ಇಂಧನ ಬೆಳೆಗಳಾದ ಹೊಂಗೆ, ಜತ್ರೋಪಾ ಇತ್ಯಾದಿ ವೃಕ್ಷಮೂಲಗಳಿಂದ ಶಕ್ತಿ ಉತ್ಪಾದನೆ, ತೋಟಗಾರಿಕೆಯ ಉದ್ದಿಷ್ಟ ಕಾರ್ಯವಾಗಿ ನೀರಾವರಿ, ಮೂಲಭೂತ ಸೌಕರ್ಯಗಳು ಕೃಷಿ ಯಾಂತ್ರೀಕರಣ ಮತ್ತು ಕೃಷಿ ಸಂಸ್ಕರಣೆಗಳ ಅಭಿವೃದ್ಧಿ, ಜಲನಿರ್ವಹಣೆ ಈ ಮೂಲಕ ಉದ್ಯೋಗಾವಕಾಶ, ಆದಾಯ ಹೆಚ್ಚಳಕ್ಕೆ ಕಾರಣವಾಗುತ್ತದೆ ಎಂಬುದೇ ಸಾರಾಂಶ. ಇದು ನಮ್ಮ ಜನರ ಹಿತಕ್ಕಾದ ಸಂವೇದನೆ ಆಗಿದೆ; ಕಾಳಜಿ ಆಗಿದೆ. ದೇಶದ ರಾಷ್ಟ್ರೀಯ ಉತ್ಪಾದನೆ ಹಾಗು ಆದಾಯದಲ್ಲಿ ಕೃಷಿ ಕ್ಷೇತ್ರದ ಕೊಡುಗೆ ಮಹತ್ತಾದುದು. ಅಂತೇ ಅದರ ಯಶಸ್ವಿಗೆ ಸರ್ವರ ಸಮಪಾಲಿದೆ. ಹಾಗೆಯೇ ಸರ್ವರಿಗೂ ಸಮಬಾಳಿಗೆ ಅವಕಾಶವಿದೆ.

1990ರ ದಶಕದ ಮಧ್ಯಂತರ ವರ್ಷಗಳಿಂದೀಚೆಗೆ ಕೃಷಿ ವಲಯದ ಶೇಕಡಾ ಸಾಧನೆ ಇಳಿಮುಖವಾಗಿದೆ. ಚಿಕ್ಕ ಭೂ ಹಿಡುವಳಿಯ ರೈತರಿಗೆ ಆರ್ಥಿಕ ಸಮಸ್ಯೆಯೆ ಆತ್ಮಹತ್ಯೆಗೆ ಕಾರಣವಾಗಿದೆ. ಸಾಲ ಸೋಲ ಅವರ ನಿತ್ಯದ ಗೋಳೆನಿಸಿದೆ. ಮುಂಗಾರು ವೈಫಲ್ಯದ ಕಾರಣ ಕೃಷಿ ಹಾಗೂ ಕೃಷಿಯೇತರ ವಲಯಗಳಿಗೂ ಸಂಕಷ್ಟಗಳೊದಗಿದೆ. ಕೃಷಿ ನೀತಿಯ ಪಂಚ ಸೂತ್ರಗಳು ಹೀಗಿವೆ:[15] ಮಣ್ಣಿನ ಫಲವತ್ತತೆ ಮತ್ತು ಆರೋಗ್ಯ ರಕ್ಷಣೆ; ನೀರು–ನೀರಾವರಿ ಸಂಪನ್ಮೂಲಗಳ ಸಂರಕ್ಷಣೆ; ರೈತರಿಗೆ ಕಡಿಮೆ ಬಡ್ಡಿದರದಲ್ಲಿ

15. ಕರ್ನಾಟಕ ಕೃಷಿ ನೀತಿ., 2006 ಕೃಷಿ ಮತ್ತು ತೋಟಗಾರಿಕೆ ಇಲಾಖೆ, ಬೆಂಗಳೂರು., ನವೆಂಬರ್ 2006

ಸಕಾಲಿಕ ಸಾಲಸೌಲಭ್ಯ ಹಾಗೂ ತತ್ಸಂಬಂಧೀ ಪರಿಕರಗಳ ಪೂರೈಕೆ; ಬೆಳೆ ರಕ್ಷಣೆ ಮತ್ತು ಕುಯ್ಲಿನೋತ್ತರ ಸಂಸ್ಕರಣೆ, ಹಾಗು ಉತ್ಪಾದನಾ ಪ್ರಕ್ರಿಯೆಗಳ ಸಮನ್ವಯ; ನೈಸರ್ಗಿಕ ಕೃಷಿ ಪದ್ಧತಿ ಮತ್ತು ಅವಿಷ್ಕಾರಗೊಂಡ ಕೃಷಿ ತಂತ್ರಜ್ಞಾನದ ನೆರವನ್ನು ರೈತರಿಗೆ ಒದಗಿಸುವುದು. ಈ ಹೊಸ ಕೃಷಿ ನೀತಿಯಲ್ಲಿ ಬೆಳೆವೈವಿಧ್ಯತೆ, ತೋಟಗಾರಿಕೆ, ಕೋಳಿಸಾಕಾಣಿಕೆ, ಪಶು ಸಂಗೋಪನೆಯಂಥ ಕೃಷಿ ಪೂರಕ ಕ್ಷೇತ್ರಗಳಿಗೆ ಪ್ರಾಧಾನ್ಯ ನೀಡಿದೆ. ವ್ಯವಸ್ಥಿತ ಮಾರುಕಟ್ಟೆ, ಗ್ರಾಹಕರಿಗೆ ಕೃಷಿ ಉತ್ಪನ್ನಗಳ ವಿತರಣೆ, ಕೃಷಿ ಉತ್ಪನ್ನಗಳಿಗೆ ಹೆಚ್ಚಿನ ಮೌಲ್ಯ ಲಭ್ಯತೆ ಇತ್ಯಾದಿಗಳ ಚಾಲನೆಗೆ ಹೊಸ ಕೃಷಿ ನೀತಿ ಮುಂದಾಗಲಿದೆ. ಜಾಗತಿಕ ಕೃಷಿ ವಹಿವಾಟಿನಲ್ಲಿ ನಮ್ಮ ಕೃಷಿ ರಂಗಕ್ಕೆ ಮಹತ್ವದ ಸ್ಥಾನ ಒದಗುವಂತೆ ಕಾರ್ಯಮಗ್ನರಾಗುವುದು ನಮಗೊಂದು ಆಹ್ವಾನವೇ ಆಗಿದೆ.

**ವಿಷಯ 14:** ಕರ್ನಾಟಕದ ಕೃಷಿ ಸಂಬಂಧೀ ಮಾಹಿತಿಗಳು :

ಕರ್ನಾಟಕ, ದೇಶದ ಎಂಟನೆಯ ದೊಡ್ಡ ರಾಜ್ಯ. 191,791 ಚ.ಕಿ.ಮೀ ಪ್ರದೇಶವನ್ನೊಳಗೊಂಡಿದೆ. 2001ರ ಜನಗಣತಿಯಂತೆ ರಾಜ್ಯದ ಜನಸಂಖ್ಯೆಯಲ್ಲಿ ಶೇ 66 ರಷ್ಟು ಜನ ಗ್ರಾಮೀಣ ಪ್ರದೇಶವಾಸಿಗಳಾಗಿದ್ದಾರೆ. ಅವರ ಮುಖ್ಯ ಉದ್ಯೋಗ ಕೃಷಿ ಹಾಗೂ ಅದಕ್ಕನುಗುಣ ಚಟುವಟಿಕೆಗಳಿಂದ ಕೂಡಿದೆ. 69.36 ಲಕ್ಷ ಜನ ರೈತರು ಮತ್ತು 62.09 ಲಕ್ಷ ಜನ ಕೃಷಿ ಕಾರ್ಮಿಕರಿದ್ದು, ಮಹಿಳೆಯರಲ್ಲಿಯೇ ಕೃಷಿ ಕಾರ್ಮಿಕರ ಸಂಖ್ಯೆ (ಶೇ.58.19) ಪುರುಷರಿಗಿಂತ ಹೆಚ್ಚಿಗಿದೆ. ಗ್ರಾಮೀಣ ಸಾಕ್ಷರತೆ 59.68% ಇದ್ದು ನಗರಕ್ಕಿಂತ ಕಡಿಮೆಯೇ. ರಾಜ್ಯದ 190.50 ಲಕ್ಷ ಹೆಕ್ಟೇರ್ ಭೌಗೋಳಿಕ ಪ್ರದೇಶದಲ್ಲಿ ಸುಮಾರು 123.07 ಲಕ್ಷ ಹೇಕ್ಟೇರ್ (ಶೇ.64.60) ನಷ್ಟು ಕೃಷಿ ಯೋಗ್ಯ ಭೂಮಿ ಇದೆ. ಒಟ್ಟು ಭೂ ಹಿಡುವಳಿಯಲ್ಲಿ ಸಣ್ಣ ಮತ್ತು ಅತಿ ಸಣ್ಣ ರೈತರು ಶೇ.72.9 ರಷ್ಟಿದ್ದಾರೆ. ಕೇವಲ ಶೇ.34.4 ರಷ್ಟು ಕೃಷಿ ಯೋಗ್ಯ ಭೂಮಿಯ ಬೇಸಾಯ ಮಾಡುತ್ತಿದ್ದಾರೆ. ಭೂ ವಿಘಟನೆಯ ಕಾರಣ ಹಿಡುವಳಿಗಳ ಸಂಖ್ಯೆ 8–58 ಲಕ್ಷದಷ್ಟು ಹೆಚ್ಚಿದೆ. ಸರಾಸರಿ ಗಾತ್ರ 1.95 ಹೆ. ಗಳಿಂದ 1.74 ಹೆ. ಗಳಿಗೆ ಕುಗ್ಗಿದೆ. ಒಟ್ಟು ಕೃಷಿ ಯೋಗ್ಯ ಭೂಮಿಯಲ್ಲಿ 116.70 ಲಕ್ಷ ಹೆ.ಭೂಮಿಯಲ್ಲಿ ಬೇಸಾಯ ನಡೆದಿದೆ. ನಿವ್ವಳ ಕೃಷಿ ಯೋಗ್ಯಭೂಮಿ 100.31 ಲಕ್ಷ ಹೆ.ಗಳಷ್ಟಿದೆ. 2001–02ರ ಅಂಕಿ ಅಂಶಗಳ ರೀತ್ಯಾ ಬೆಳೆ ಸಾಂದ್ರತೆ ಶೇ.116 ರಷ್ಟಿತ್ತು. ನೀರಾವರಿ ಪ್ರದೇಶ ಒಟ್ಟು ಬೇಸಾಯ ಭೂಮಿಯಲ್ಲಿ 30.89 ಲಕ್ಷ ಹೆಕ್ಟೇರ್‌ಗಳಿಗೆ (ಶೇ.26.5) ರಷ್ಟಿದೆ. ಅಂದರೆ ನೀರಾವರಿ ನಿರೀಕ್ಷಿತ ಮಟ್ಟ ಮುಟ್ಟಿಲ್ಲವೆಂದಾಯಿತು.

ರಾಜ್ಯವನ್ನು 10 ಕೃಷಿ ಹವಾಮಾನ ವಲಯಗಳಾಗಿ ವಿಂಗಡಿಸಿದೆ. ಅದಕ್ಕೆ ಮಣ್ಣಿನ ರಚನೆ, ಆರ್ದ್ರತೆ, ಎತ್ತರ, ಮೇಲ್ಮೈ ರಚನೆ, ಸಸ್ಯರಾಶಿ, ಮಳೆ, ಕೃಷಿ ಹವಾಮಾನ ಇತ್ಯಾದಿಗಳು ಆಧಾರಗಳಾಗಿವೆ. ರಾಜ್ಯವು 3 ಕೃಷಿ ಋತುಮಾನಗಳು ಅಂದರೆ ಏಪ್ರಿಲ್–ಸೆಪ್ಟೆಂಬರ್‌ನ ಮುಂಗಾರು, ಆಕ್ಟೋಬರ್–ಡಿಸೆಂಬರ್‌ನ ಹಿಂಗಾರು, ಜನವರಿ–ಮಾರ್ಚಿಯ ಬೇಸಿಗೆ ಎಂದಿವೆ. ನೈರುತ್ಯ ಮಾರುತಗಳಿಂದ (ಜೂನ್–ಸೆಪ್ಟೆಂಬರ್ : 806 ಮಿ.ಮೀ) ಈಶಾನ್ಯ ಮಾರುತಗಳಿಂದ (ಅಕ್ಟೋಬರ್–ಡಿಸೆಂಬರ್ : 195 ಮಿ.ಮೀ) 1139 ಮಿ.ಮೀ ಸಾಮಾನ್ಯ ಮಳೆ ಆಗುತ್ತದೆ. ಏಪ್ರಿಲ್‌ನಿಂದ ಮೇವರೆಗೆ 124 ಮಿ.ಮೀ ಮಳೆ, ಜನವರಿಯಿಂದ ಮಾರ್ಚ್‌ವರೆಗೆ (ಮಳೆಗಾಲದ ನಂತರ) ಸುಮಾರು 14 ಮಿ.ಮೀ. ಮಳೆ ಆಗುತ್ತದೆ. ಮುಂಗಾರು ಋತುಮಾನದಲ್ಲಿ 69 ಲಕ್ಷ ಹೆ(ಶೇ.64), ಹಿಂಗಾರು ಋತುಮಾನದಲ್ಲಿ ಸುಮಾರು 32 ಲಕ್ಷ (ಶೇ.30) ಮತ್ತು ಬೇಸಿಗೆಯಲ್ಲಿ 6 ಲಕ್ಷ ಹೆ. (ಶೇ.6) ಪ್ರದೇಶದಲ್ಲಿ ಕೃಷಿ ಬೆಳೆ ಬೆಳೆದು ಒಟ್ಟು 107 ಲಕ್ಷ ಹೆ. ಬೆಳೆ ಆಗುತ್ತಿದೆ. ಸುಮಾರು 22 ಲಕ್ಷ ಹೆ. (ಶೇ.20.5) ನೀರಾವರಿ ಪ್ರದೇಶವಾಗಿದೆ. ಅಂದರೆ ಐದನೆ ಒಂದು ಭಾಗ ಮಾತ್ರ ನೀರಾವರಿ ಪ್ರದೇಶವಾಗಿದೆ ಎಂದಾಗುತ್ತದೆ. ರಾಷ್ಟ್ರೀಯ ಆಹಾರ ಧಾನ್ಯ ಉತ್ಪಾದನೆಗೆ ಶೇ.5ರಷ್ಟು ಕೊಡುಗೆ ಕರ್ನಾಟಕದ್ದಾಗಿದೆ.

**ವಿಷಯ 15:** ಕೃಷಿ ನೀತಿಯ ವಿವರಗಳು

ಕರ್ನಾಟಕ ರಾಜ್ಯದ ಬಹುಪಾಲು ಭೂಮಿಯು ಅರೆ–ಒಣಭೂಮಿ ಆಗಿದೆ. ಬೇರೆ ಬೇರೆ ಕೃಷಿ ಹವಾಮಾನದ ಪರಿಸ್ಥಿತಿ ಇದೆ. ಅತೀ ಕಡಿಮೆ ನೀರಾವರಿ ಹೊಂದಿದ ಪ್ರದೇಶಗಳಲ್ಲಿ ರಾಜ್ಯ ಒಂದಾಗಿದೆ. ಕಡಿಮೆ ಬೆಲೆಯ ಬೆಳೆಗಳೇ ಹೆಚ್ಚಿಗಿವೆ. ರೈತರ ಆತ್ಮಹತ್ಯೆ ಪ್ರಕರಣಗಳು ಹೆಚ್ಚುತ್ತಿವೆ. ಸಣ್ಣ ಮತ್ತು ಅತೀ ಸಣ್ಣ ರೈತರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಸಂಪನ್ಮೂಲ ಮಿತಿಯೂ ಇದೆ. ಹೀಗಿದ್ದರೂ ರಾಜ್ಯದ ಕೃಷಿರಂಗದ ಸಾಧನೆಯಲ್ಲಿ ಪಾಲ್ಗೊಂಡಿರುವ ರೈತರು ಅಭಿನಂದನಾರ್ಹರು; ಅವರ ಕಾರ್ಯಕ್ಷಮತೆಯೂ ಗಮನಾರ್ಹ. ಡಬ್ಲುಟಿಓ ಒಪ್ಪಂದಗಳ ಪರಿಣಾಮದ ದಾಖಲಾತಿ, ಕೃಷಿ ಕ್ಷೇತ್ರದ ಸಮಸ್ಯೆಗಳು, ಕೃಷಿಬೆಲೆಗಳ ಬಗ್ಗೆ ಸಮಸ್ಯೆಗಳ ಬಗ್ಗೆ ಅಯೋಗ ರಚನೆ, ರೈತರ ಆತ್ಮಹತ್ಯೆಯ ಸಂಬಂಧೀ ಸಮಸ್ಯೆಗಳ ಅಧ್ಯಯನ, ರೈತರ ನಿವ್ವಳ ಆದಾಯ ಹಾಗೂ ಕೃಷಿ ಕ್ಷೇತ್ರದ ನಿವ್ವಳ ಆದಾಯ ಕಡಿಮೆಗೊಂಡಿರುವುದು, ರೈತರಿಗೆ ಕೃಷಿಯೇತರ ಕಸುಬನ್ನು ಕಲಿಸಿದಾಗ ಕೃಷಿ ರಂಗದ ವೈಭವವನ್ನು ಪುನರಪಿ ತೋರುವುದು, ರೈತರ ಹೊಣೆ. ರಾಜ್ಯವನ್ನು

ಮುಂದೊಯ್ಯುವ ಜವಾಬ್ದಾರಿ ಅವರದು ರೈತರ ಕಲ್ಯಾಣವನ್ನು ಸರ್ಕಾರವು ನೋಡಿಕೊಳ್ಳುವುದು ಮುಖ್ಯವಾಗಿದೆ.

ಇಂದಿನ ಕೃಷಿ ನೀತಿಯ ಆದ್ಯತೆ ರೈತರ ನಿವ್ವಳ ಆದಾಯವನ್ನು ಹೆಚ್ಚಿಸುವುದಾಗಿದೆ. ಇದನ್ನು ಸಾಧಿಸಲು ಬೆಳೆಯೋಜನೆ, ಉತ್ಪಾದನೆ, ತಂತ್ರಜ್ಞಾನ ಮಾರುಕಟ್ಟೆ ಬೆಲೆ ನಿಯಂತ್ರಣ ಇತ್ಯಾದಿಗಳಾಗಿವೆ. ಕೃಷಿಯ ಸಡಗರ ಮತ್ತು ರೈತರ ಆತ್ಮಗೌರವವನ್ನು ರೈತ ಸಮೂಹಕ್ಕೆ ಒದಗಿಸಬೇಕು.

ನಮ್ಮ ಕೃಷಿ ಕ್ಷೇತ್ರ, ಬರಗಾಲ ಹಾಗೂ ಇತರೆ ಸಮಸ್ಯೆಗಳಿಂದಾಗಿ ಶೇ.2ರಿಂದ 3 ರಷ್ಟು ಮಾತ್ರ ವಾರ್ಷಿಕ ಬೆಳವಣಿಗೆ ಗತಿ ಹೊಂದಿದ್ದು ಅದಕ್ಕೆ ಶೇ.4.5 ರಷ್ಟು ಗುರಿ ನಿಗದಿ ಮಾಡಬೇಕು.

**ಕೃಷಿ ನೀತಿಯ ತಾತ್ವಿಕ ಪರಿಕಲ್ಪನೆ–ಪಂಚಸೂತ್ರಗಳು** : ಜಂಟಿ ಅಧಿವೇಶನದಲ್ಲಿ ರಾಷ್ಟ್ರಪತಿಯವರು ಮಾಡಿದ ಭಾಷಣದಲ್ಲಿ, ರಾಜ್ಯ ಕೃಷಿ ಸುಭಿಕ್ಷತೆಗೆ ನಾಲ್ಕು ಹಂತಗಳ ಸೂಚಿತ ಪಂಚಸೂತ್ರಗಳು : ಮಣ್ಣಿನ ಆರೋಗ್ಯ ಸಂರಕ್ಷಣೆ, ಪ್ರಾಕೃತಿಕ ಸಂಪನ್ಮೂಲ ಸಂರಕ್ಷಣೆ, ರೈತರಿಗೆ ಸಾಲ ಸೌಲಭ್ಯ, ಉದ್ಯೋಗ ಲಭ್ಯತೆ, ತೋಟಗಾರಿಕೆ ಕಾರ್ಯ ಮತ್ತು ಕೃಷಿ ಸಂಸ್ಕರಣೆ ಜಲನಿರ್ವಹಣೆ, ನೀರಿನ ಕೊಯ್ಲು ಸೌಲಭ್ಯ ಇತ್ಯಾದಿಗಳ–ರೈತ ಕೇಂದ್ರಿತ ಕಾರ್ಯನೀತಿ ಆಗಿದೆ. ರೈತರ ಪರಿಸರ ಸ್ನೇಹಿ ಮನೋಭಾವ ಬೆಳಸಬೇಕಾಗಿದೆ. ಮಾರುಕಟ್ಟೆ ಲಭ್ಯತೆ ಹಾಗು ರೈತರಿಗೆ ಒದಗುವ ಪರಿಕರಗಳ ಗುಣಮಟ್ಟಗಳ ಬಗ್ಗೆ ಸದಾ ಚರ್ಚೆ ಬೇಕು. ಉತ್ಪಾದನಾ ಆಧಾರಿತ ತಂತ್ರಜ್ಞಾನದಿಂದ ಬೇಡಿಕೆ ಆಧಾರಿತ ತಂತ್ರಜ್ಞಾನದ ಕಡೆಗೆ ಸಾಗಬೇಕು ಎನ್ನಲಾಗಿದೆ. ಅಂದರೆ ಇದು ಉತ್ಪನ್ನಗಳ ಗುಣಮಟ್ಟವನ್ನು ಅವಲಂಬಿಸುತ್ತದೆ.

ಕೃಷಿಯ ವಿಸ್ತೃತ ಆರ್ಥಿಕತೆಯ ಅಗತ್ಯವಿದೆ. ಕೃಷಿ ರಂಗದಲ್ಲಿ ಸಾರ್ವಜನಿಕ ಮತ್ತು ಖಾಸಗಿ ಬಂಡವಾಳ ಹೂಡಿಕೆ, ಆಯವ್ಯಯ ವಿತರಣೆ ಸಮರ್ಪಕವಾಗಿ ಆಗಬೇಕಿದೆ. ಅಭಿವೃದ್ಧಿ ವೆಚ್ಚವನ್ನು ಶೇ.10ರ ಮಟ್ಟಕ್ಕೆ ಹೆಚ್ಚಿಸಬೇಕಿದೆ. ಡಾ.ನಂಜುಂಡಪ್ಪ ಸಮಿತಿಯ ವರದಿಯಂತೆ ವಿಶೇಷವಾಗಿ ಹಿಂದುಳಿದ ಗ್ರಾಮೀಣ ತಾಲೂಕುಗಳಲ್ಲಿ ಕೃಷಿ ಮತ್ತು ಕೃಷಿಯೇತರ ಕ್ಷೇತ್ರದಲ್ಲಿ ಬಂಡವಾಳ ಹೂಡಿಕೆಗೆ ಉತ್ತೇಜನ ನೀಡುವಂಥ ವಿಶೇಷ ಯೋಜನೆ ರೂಪಿಸಬೇಕು. ಕೃಷಿಕ್ಷೇತ್ರದಲ್ಲಿ ಉತ್ತಮ ಸಾಧನೆಯ ಪರಿಣಾಮವಾಗಿ ಆಂತರಿಕ ಉತ್ಪನ್ನದ ಹೆಚ್ಚಳವಾಗಬೇಕು; ಮೆಚ್ಚುಗೆಗೆ ಪಾತ್ರವಾಗಬೇಕು.

ರೈತರಿಗೆ ಕೇಂದ್ರ ಮತ್ತು ಪೂರಕ ಯೋಜನೆಗಳಿಂದ ಬೆಳೆ ಆರ್ಥಿಕತೆ, ತೋಟಗಾರಿಕ ಆರ್ಥಿಕತೆ, ಹಾಗೂ ಒಳಸುರಿ ಕ್ಷೇತ್ರಗಳ ಅಭಿವೃದ್ಧಿ ಯೋಜನೆಗಳಿಗೆ ಸಹಾಯಧನ ಲಭ್ಯವಾಗುತ್ತದೆ. ಸಂದರ್ಭಕ್ಕನುಗುಣವಾಗಿ ಅದನ್ನು ಬಳಸಿಕೊಳ್ಳಬೇಕು. ಕಳೆದ ವರ್ಷ ಕೃಷಿ ಕ್ಷೇತ್ರದ ನಿವ್ವಳ ಆದಾಯದ ಸ್ಥಿರ ಸ್ಥಿತಿಯ ಕಾರಣ ರೈತರಿಗೆ ಕಷ್ಟ ಬಗೆಹರಿದಿಲ್ಲ. ನಿವ್ವಳ ಆದಾಯ ಹೆಚ್ಚುವಂಥ, ಕೃಷಿ ಮತ್ತು ಕೃಷಿಯೇತರ ಕ್ಷೇತ್ರಗಳಲ್ಲಿ ಕೃಷಿ ಕಾರ್ಮಿಕರಿಗೆ ಉದ್ಯೋಗದ ಅವಕಾಶ ಹೆಚ್ಚಬೇಕು. ಆತ್ಮಗೌರವ ಗಳಿಸಿಕೊಡುವಂತಾಗಬೇಕು. ರೈತ ಕುಟುಂಬದ ಎಲ್ಲಾ ಮಾಹಿತಿಯನ್ನು ಒಳಗೊಂಡ ಅಂದರೆ ಭೂ ಹಿಡುಬಳಿ ನೀರಾವರಿ, ಬ್ಯಾಂಕ್ ಸಂಘದ ಸದಸ್ಯತ್ವ, ಸಾಲ, ಮಣ್ಣಿನ ವಿಧ, ಬೆಳೆಯುವ ಬೆಳೆ ಇತ್ಯಾದಿ ಕುರಿತ **'ರೈತ ಮಿತ್ರ ಪುಸ್ತಕ'** ವನ್ನು ಪ್ರತಿ ರೈತನಿಗೂ ಕೊಡಲಾಗುವುದು. ಡಾ.ಎಂ.ಎಸ್.ಸ್ವಾಮಿನಾಥನ್ ಅವರು ಪ್ರಸ್ತಾಪಿಸಿರುವಂತೆ ಭೂಮಿ ವಲಯಗಳ ಗುರುತಿಸುವಿಕೆಗೆ ಸರ್ಕಾರ ಭೂ ಬಳಕೆ ಮಂಡಳಿ ಸಹಾಯವನ್ನು ಪಡೆಯುತ್ತದೆ.

ನೈಸರ್ಗಿಕ ಸಂಪನ್ಮೂಲಗಳಲ್ಲಿ ಭೂಮಿ ಒಂದು ಪ್ರಧಾನ ಆಗರ. ಭೂ ಬಳಕೆಯ ರೀತಿ ನೀತಿ, ಉಪಯುಕ್ತತೆಗೆ, ಸೂಕ್ತ ಯೋಜನೆಗಳನ್ನು ರೂಪಿಸಬೇಕು ಕರ್ನಾಟಕದ ಭೂಸುಧಾರಣೆ ಬೇರೆಡೆಗಿಂತ ಹೆಚ್ಚು ಸಾರ್ಥಕವಾಗಿದೆ. ಹೆಚ್ಚುವರಿ ಭೂಮಿವಶ, ಮಧ್ಯವರ್ತಿಗಳ ನಿಷೇಧ, ಗೇಣಿ ರದ್ದು, ಉಳುವವನಿಗೆ ಹೊಲ ಹಿಡುವಳಿಗಾತ್ರದ ಕುಗ್ಗುವಿಕೆ ಇವೆಲ್ಲ ಆಗಿದೆ. ಆದರೆ ಹೆಚ್ಚುವರಿ ಭೂಮಿಯ ಅಸೂಕ್ತ ಹಂಚಿಕೆ, ಜಮೀನಿನ ಗುಣಮಟ್ಟ, ಆರ್ಥಿಕ ಸಾಮರ್ಥ್ಯ ತಿಳಿಯಲಾಗದಿರುವುದು ಈ ಪದ್ಧತಿಯ ಇತಿಮಿತಿ. ಅದನ್ನು ಸರಿಪಡಿಸಬೇಕು. ಬಂಜರು ಭೂಮಿ, ಅನುಪಯುಕ್ತ ಉಳುಮೆ, ಕೌಶಲ್ಯ ರಹಿತ ನೀರಾವರಿ, ಇತ್ಯಾದಿಗಳೂ ಇಲ್ಲ ಸುಧಾರಿಸಬೇಕಿದೆ.

ಪಂಚಾಯತ್ ಮಟ್ಟದಲ್ಲಿ ರೈತರಿಂದ ತಂಡಗಳಲ್ಲಿ ಬಂಜರು ಭೂಮಿ ನಿರ್ವಹಣೆ, ಭೂಸುಧಾರಣೆ ಕುರಿತ ಸಾರ್ವಜನಿಕ ಚರ್ಚೆ, ಭೂಬಳಕೆ ಮಂಡಳಿ ಬಲವರ್ಧನೆ, ಕೃಷಿ ಪರ್ಯಾಯ ಚಟುವಟಿಕೆಗಳ ಬೆಳಸು ಭೂ ಕಂದಾಯದ ಆಡಳಿತ ವಿಕೇಂದ್ರೀಕರಣ, ಸಾಮಾಜಿಕ ಬೆಳವಣಿಗೆಯ (ನೀರು, ಕಲಿಕೆ, ಆರೋಗ್ಯ) ಕಾರ್ಯಕ್ರಮಗಳ ವ್ಯವಸ್ಥೆ ಮಾಡಬೇಕು. ಸಣ್ಣ ಜಲಾನಯನ ಪ್ರದೇಶದಲ್ಲಿ, ಬೇರೆ ಬೇರೆ ಉದ್ದೇಶಗಳಿಗೆ ಬಳಸಲು **'ಭೂಮಿ ಯೋಜನೆ'**ಯನ್ನು ನಿರ್ವಹಿಸಬೇಕು; ಭೂ ವರ್ಗೀಕರಣ ಮಾಡಿ ರೈತರೊಡನೆ ಸಮಾಲೋಚಿಸಿ, ಸೂಕ್ತಪರಿಹಾರ,

ಮಾರುಕಟ್ಟೆದರ ನಿರ್ಣಯವನ್ನು ಉಳುವ ಭೂಮಿ ಕುರಿತು ಮಾಡಬೇಕು. ಡಾ॥ ಸತೀಶ್ ಚಂದ್ರನ್ ಸಮಿತಿ ವರದಿ ಅನ್ವಯ ಭೂ ಒಡೆತನ ಹಾಗು ಗುತ್ತಿಗೆ ಅವಧಿಯನ್ನು ನಿರ್ಣಯಿಸಬೇಕು. ಗೇಣಿ ಜಮೀನಿನ ಗುರುತಿಸುವಿಕೆಯಿಂದ ಕೃಷಿ ಪರಿಕರಗಳ ಬಳಕೆ ಮತ್ತು ಉತ್ಪಾದಕತೆಯ ಮೇಲೆ ಬೀರುವ ಪರಿಣಾಮದ ನಿರ್ಧಾರವಾಗುತ್ತದೆ.

ಕರ್ನಾಟಕದಲ್ಲಿ ಏಳು ಬಗೆಯ ಮುಖ್ಯ ಮಣ್ಣಿನ ಮಾದರಿಗಳಿವೆ. ನೀರು ನಿಲ್ಲುವಿಕೆ, ಚೌಳು ಮತ್ತು ಕ್ಷಾರ ಮಾದರಿಗಳು ಸಮಸ್ಯೆಯೆ. ತುಂಗಭದ್ರ, ಕೃಷ್ಣಾ ಮಲಪ್ರಭಾ–ಘಟಪ್ರಭಾ ಯೋಜನಾ ಕ್ಷೇತ್ರಗಳಲ್ಲಿ ಬಂಜರು ಹಾಗು ಸಮಸ್ಯಾತ್ಮಕ ಪ್ರದೇಶಗಳ ವಿಪುಲತೆ ಇದೆ. ಇಲ್ಲಿ ಮಣ್ಣು ಸ್ವಾಸ್ಥ್ಯ ಮಾಡುವ ಯೋಜಿತ ಕಾರ್ಯ ಹಮ್ಮಿಕೊಂಡು 'ಭೂಮಿತಾಯಿಯ ಆರೋಗ್ಯ' ಕಾರ್ಯಕ್ರಮವೆನ್ನಲಾಗಿದೆ. ಜಮೀನು ಮಾಲೀಕರಿಂದ ಶೇ.20 ಭಾಗ, ರಾಜ್ಯದಿಂದ ಶೇ.80 ಭಾಗ ಪಡೆದು ಇದಕ್ಕೆ ತಗಲುವ ವೆಚ್ಚವನ್ನು ಭರಿಸಲಾಗುತ್ತದೆ. **'ರೈತ ಮಿತ್ರ ಪುಸ್ತಕ'** ದೊಂದಿಗೆ ಮಣ್ಣು ಆರೋಗ್ಯ ಕಾರ್ಡ್ (soil health Card) ಅನ್ನು ಬಯಸುವ ರೈತರಿಗೆ ಅತ್ಯಲ್ಪ ಬೆಲೆಯಲ್ಲಿ ನೀಡಲಾಗುವುದು.

**ಬೆಳೆ ಆರ್ಥಿಕತೆ** ವಿಭಾಗದಲ್ಲಿ, ಕೃಷಿ ವಿಶ್ವವಿದ್ಯಾಲಯ – ವಿಜ್ಞಾನ ಕೇಂದ್ರಗಳಿಂದ ತರಬೇತಿ; ಅಲ್ಲಿಂದ ಪ್ರಮಾಣಿತ ಬೀಜ ಮತ್ತು ಗುಣಮಟ್ಟದ ಸಸಿ ಲಭ್ಯತೆ (ಭತ್ತ, ಮುಸುಕಿನ ಜೋಳ, ಸಜ್ಜೆ, ಹತ್ತಿ, ಸೂರ್ಯಕಾಂತಿ ಮತ್ತು ಅವುಗಳಲ್ಲಿ ಸಂಕರ ತಳಿ) ವಿಸ್ತರಣ ಕಾರ್ಯಗಳನ್ನು ಆರಂಭಿಸಲಾಗುವುದು. ಮಳೆಯಾಶ್ರಿತ ಪ್ರದೇಶಗಳಲ್ಲಿ ಸಮಗ್ರಯೋಜಿತ ಫಾರ್ಮಿಂಗ್ ಪದ್ಧತಿ, ಆಯ್ದ ಬೆಳೆಗಳಲ್ಲಿ ಕೊಯ್ಲೋತ್ತರ ಉಪಚಾರ, ಗುತ್ತಿಗೆ ಕೃಷಿಗೆ ಪ್ರೋತ್ಸಾಹ ನೀಡುವ ಬಗ್ಗೆ ಹೇಳಿದೆ. ಸರಿಯಾದ ಬೆಳೆ ಸಂಯೋಜನೆ ಯನ್ನು ಪಂಚಾಯತ್ ಮಟ್ಟದಲ್ಲಿ ತಂದು ಬೆಳೆ ಆರ್ಥಿಕತೆಯನ್ನು ನೇರ್ಪುಗೊಳಿಸುವ ಬಗ್ಗೆ ಹೇಳಲಾಗಿದೆ.

ವಿವಿಧ ವಲಯ ಬೆಳೆ ಪದ್ಧತಿಯಲ್ಲಿ ಅರೆಮಲೆನಾಡು, ಒಣವಲಯ, ಗುಡ್ಡಗಾಡು ವಲಯ, ಕರಾವಳಿ ವಲಯಗಳಿಗೆ ಹಿಂದಿನ ಸೂಕ್ತವಾದ ಹಾಗೂ ಬದಲಿ ಬೆಳೆಗಳನ್ನು ಬೆಳೆಯುವ ಬಗೆಯನ್ನು ಹೇಳಲಾಗಿದೆ.

ಮಳೆಯಾಶ್ರಿತ ಬೇಸಾಯ, ಬರಪರಿಸ್ಥಿತಿ, ಅಡೆತಡೆಗಳು ಸಂಬಂಧದಲ್ಲಿ ಶಿಫಾರಸ್ಸಾದ ಪದ್ಧತಿಗಳ ವಿಸ್ತೃತ ಅಳವಡಿಕೆಗೆ ರೈತರಿಂದ ಪ್ರಯತ್ನ ಆಗಬೇಕಿರುವುದು;

ಕೃಷಿ, ತೋಟಗಾರಿಕೆ, ಆರ್ಥಿಕ, ಮಾರುಕಟ್ಟೆ, ಪಶು ಸಂಗೋಪನೆ, ತಾಂತ್ರಿಕ ಪರಿಣತಿಯ ತಜ್ಞರಿರುವ ಮಳೆಯಾಶ್ರಿತ ಪ್ರದೇಶದ ಕೃಷಿ ಆಯೋಗ ರಚನೆಯ ಬಗ್ಗೆ ಹೇಳಲಾಗಿದೆ. ಅದು ಕೃಷಿ ಅಭಿವೃದ್ಧಿಯ ಕಾರ್ಯಕ್ರಮಗಳಲ್ಲಿ ತೊಡಗುತ್ತದೆ. ಆ ಪ್ರದೇಶದಲ್ಲಿ ಅಂತರ್ಜಲದ ಕೊರತೆಯ ಕಾರಣ ಮಳೆ ನೀರು ಕುಯ್ಲು ಮತ್ತು ಜಲಾನಯನ ಅಭಿವೃದ್ಧಿ ಕಾರ್ಯಗಳಿಗೆ ಆದ್ಯತೆ ಉಂಟು. ಅಂತರ್ಜಲ ಪುನಃ ಸ್ಥಾಪನ ವಲಯಗಳನ್ನು ಗುರುತಿಸಿ ಪುನಶ್ಚೇತನಕ್ಕೆ ವಿಸ್ತೃತ ಪ್ರಯತ್ನಗಳ ಬಗ್ಗೆ ಆಶ್ವಾಸನೆ ನೀಡಲಾಗಿದೆ. ಈ ಪ್ರದೇಶಗಳಲ್ಲಿ ಗ್ರಾಮೀಣ ಕೈಗಾರಿಕೀಕರಣ ಮುಖ್ಯವಾಗುತ್ತದೆ. ಅದರಿಂದ ಉದ್ಯೋಗಾವಕಾಶವೂ ದೊರೆಯುತ್ತದೆ ಎನ್ನಲಾಗಿದೆ. ಆದರೆ ಈ ಪ್ರಕ್ರಿಯೆ ಸ್ಥಳೀಯ ಸಂಪನ್ಮೂಲ ಹಾಗೂ ಕೌಶಲ್ಯವನ್ನವಲಂಬಿಸಿರುತ್ತದೆ. ಇಲ್ಲಿ ಮೂಲಭೂತ ಸೌಕರ್ಯಗಳ ಒದಗುವಿಕೆಯನ್ನು ನಬಾರ್ಡ್‌ನ ಅಭಿವೃದ್ಧಿ ನಿಧಿಯಿಂದ ಬರಿಸಬೇಕಾದ ಸಂದರ್ಭವಾಗುತ್ತದೆ. ಬರಗಾಲ ಪರಿಸ್ಥಿತಿಯನ್ನು ಪದೇ ಪದೇ ಎದುರಿಸುವಂತಾಗದಿರಲು, ದೀರ್ಘಾವಧಿ ಮಾರ್ಗೋಪಾಯಗಳನ್ನು ರೂಪಿಸಿಕೊಳ್ಳಬೇಕು. ಕಾರಣ ಅಂತರ್ಜಲ, ಮಣ್ಣು, ಅರಣ್ಯ ಇತ್ಯಾದಿ ನೈಸರ್ಗಿಕ ಸಂಪನ್ಮೂಲಗಳ ಮೇಲೆ ಪರಿಣಾಮ ಬೀಳುತ್ತದೆ. ಅಂತೇ 'ಬರ ಉಸ್ತುವಾರಿ ಘಟಕ' ಈ ಬಗ್ಗೆ ತಾಂತ್ರಿಕ ಮಾಹಿತಿ ನೀಡಿ ಮುನ್ನೆಚ್ಚರಿಸುತ್ತದೆ. ಈ ಘಟಕವು 'ಕರ್ನಾಟಕ ನೈಸರ್ಗಿಕ ವಿಪತ್ತು ಉಸ್ತುವಾರಿ ವಿಭಾಗ'ದೊಡನೆ ವಿಲೀನವಾಗಿ, ಪರಿಹಾರದ ವಿಧಾನಗಳನ್ನು ತೋರುತ್ತದೆ. ತಾಲೂಕು ಮಟ್ಟದಲ್ಲಿ ಹವಾಮಾನ ಪರಿವೀಕ್ಷಣಾ ಸಮಿತಿ, ಸಂಪನ್ಮೂಲ ನಿರ್ವಹಣಾ ತಂಡಗಳ ಅವಶ್ಯಕತೆ ಇದೆ.

ನದಿಗಳ ದಿಸೆಯನ್ನು ಅನುಕೂಲಕರವಾಗಿ ಬದಲಿಸುವ ತಾಂತ್ರಿಕ ಸಾಧ್ಯತೆ, ಧಾನ್ಯದ ಬ್ಯಾಂಕ್ ಮಾದರಿಯಲ್ಲಿ ಮೇವು ಬ್ಯಾಂಕ್ ಸ್ಥಾಪನೆ, ಉದ್ಯೋಗವಕಾಶಗಳನ್ನು ಹಳ್ಳಿಗಳ ದುರ್ಬಲ ಕುಟುಂಬಗಳಿಗೆ ಒದಗಿಸುವುದು, 'ಒಂದುಗ್ರಾಮ–ಒಂದುಕೆರೆ' ಎಂಬ ಪರಿಕಲ್ಪನೆಯ ಪ್ರೋತ್ಸಾಹಕರ ಅಳವಡಿಕೆ, ನಷ್ಟಕಷ್ಟಗಳಿಂದ ಪಾರಾಗಲು ಅನುಕೂಲಿಸುವ ಬೆಳೆಪದ್ಧತಿ ಬದಲಾವಣೆಯನ್ನು ತಿಳಿಸಲಾಗಿದೆ.

ಜಲಾನಯನ ನಿರ್ವಹಣಾ ತಂತ್ರವಾಗಿ ಜಲಗ್ರಾಹೀ ಕ್ಷೇತ್ರದ ಒಟ್ಟಾರೆ ಉತ್ಪಾದಕತೆಯನ್ನು ಸುಧಾರಿಸುವುದು, ಜಮೀನಿನಲ್ಲಿ ಸೂಕ್ತ ಬಳಕೆಗೆ ಮಣ್ಣು ಮತ್ತು ತೇವಾಂಶಗಳ ರಕ್ಷಣೆಯತ್ತ ಗಮನ ಹರಿಸಲಾಗುವುದು. ಕರ್ನಾಟಕ 2ನೇ ಅತಿ ಹೆಚ್ಚು ಬರಪೀಡಿತ ಪ್ರದೇಶಗಳನ್ನು (152.2 ಲಕ್ಷ ಹೆಕ್ಟೇರುಗಳು) ಒಳಗೊಂಡಿದೆ. 129.79 ಲಕ್ಷ ಹೆಕ್ಟೇರು ಭೂಮಿಯು ಜಲಾನಯನ ಅಭಿವೃದ್ಧಿಗೆ ಲಭ್ಯವಿದೆ.

ಹಂತ ಹಂತವಾಗಿ 20 ವರ್ಷಗಳಲ್ಲಿ ಈ ಭೂಮಿಯನ್ನು ಅಭಿವೃದ್ಧಿಗೊಳಿಸಲಾಗುವುದು. ಜಲಾನಯನ ನಿರ್ವಹಣೆಯಿಂದಾಗಿ, ಬೆಳೆ ಇಳುವರಿ ಹೆಚ್ಚಳ, ಅಂತರ್ಜಲ ಮಟ್ಟ ಪುನಶ್ಚೇತನವಾಗುತ್ತದೆ. ಅಭಿವೃದ್ಧಿ ವೆಚ್ಚದ ಒಂದು ಭಾಗವನ್ನು ಭೂ ಮಾಲೀಕನು ಭರಿಸುವುದು, ಒಣ ಭೂಮಿ ಅಭಿವೃದ್ಧಿ ಕಾರ್ಯಗಳೂ ಇಲ್ಲಿ ನಡೆಯುತ್ತವೆ. ರಾಜ್ಯದ ಅತ್ಯಂತ ಹಿಂದುಳಿದ ತಾಲೂಕುಗಳನ್ನು ಮೊದಲ ಆದ್ಯತೆಯಾಗಿ ಪರಿಗಣಿಸಲಾಗಿದೆ.

ಮೂಲಭೂತ ಸೌಕರ್ಯಗಳ ಕೊರತೆಯ ನಿವಾರಣೆ, ಜಲಾನಯನ ಅಭಿವೃದ್ಧಿಯಿಂದ ಕೃಷಿ ಉತ್ಪಾದನೆಗೆ ಉತ್ತೇಜನ, ಮಳೆವಾರು ಪ್ರದೇಶಗಳ ಅಯ್ಕೆ ಹಂತ ಹಂತವಾಗಿ ತಾಲೂಕುಗಳ ಅಭಿವೃದ್ಧಿ, ಜಲಾನಯನ ಪ್ಲಸ್ ಪ್ಯಾರಾಡಿಮ್ ಅನ್ವಯ, ಮಹಿಳೆಯರು ಮತ್ತು ಪಂಚಾಯಿತಿ ರಾಜ್ ಸಂಸ್ಥೆಗಳಿಗೆ ಪರಿಣಾಮಕಾರಿ ಪಾತ್ರ ನೀಡಿಕೆ, ಸ್ವಸಹಾಯ ಗುಂಪುಗಳನ್ನು ಮುಂಚೂಣಿಗಿರಿಸಿ ಸಾಲ ಸೌಲಭ್ಯ ವ್ಯವಸ್ಥೆ ಮಾಡುವುದು, ಕಾರ್ಯಾಚರಣೆಗಳ ಪಾರದರ್ಶಕತೆ ಕುರಿತೆಲ್ಲ ಯೋಜಿಸಲಾಗಿದೆ.

**ಬೆಳೆವಿಮೆ** : 1948ರಲ್ಲಿ ಸಂಸತ್ತಿನಲ್ಲಿ ಕೃಷಿ ಮಂತ್ರಿಗಳಿಂದ ಮೊಟ್ಟ ಮೊದಲಿಗೆ ಆದ ಈ ಯೋಜನೆಯ ಪ್ರಸ್ತಾಪ, 1970ರಲ್ಲಿ ರೂಪುಗೊಂಡ ಮಾದರಿ ಯೋಜನೆಯ ಕರಡು ಹಾಗೂ ಅದರ ಪರಿಶೀಲನೆ, 1976ರಲ್ಲಿ ಬೆಳೆವಿಮೆ ಹಾಗು ಬೆಳೆಸಾಲದೊಂದಿಗೆ ಸಂಬಂಧಗೊಳಿಸುವ ಪರ್ಯಾಯ ವಿಧಾನ, 1978ರಲ್ಲಿ ನಡೆದ ಇದರ ಪ್ರಾಯೋಗಿಕ ಅನ್ವಯ, 1985ರಲ್ಲಿ ಸಂಸ್ಥಾನ ಸಾಲಗಾರರಿಗೆ ಕಾಂಪ್ರಿ ಹೆನ್ಸೀವ್ ಕ್ರಾಪ್ ಇನ್‌ಶೂರೆನ್ಸ್ ಸ್ಕೀಮ್ 'ಎಂದು ಖಡ್ಡಾಯ ಮಾಡಿದ್ದು, 1999ರಲ್ಲಿ' ರಾಷ್ಟ್ರೀಯ **ಕೃಷಿ ವಿಮಾ ಯೋಜನೆಯ** ಬಿಡುಗಡೆ ಹಾಗೂ ಆಯ್ಕೆಯ ಸ್ವಾತಂತ್ರ್ಯ, 2000ದ ಮುಂಗಾರಿನಿಂದ ಕಾರ್ಯಾನ್ವಯ; ಸರ್ಕಾರ ನಿರ್ದೇಶಿತ ಜಂಟಿ ಸಮಿತಿ ರಚನೆ ಹಾಗೂ ಸಲಹೆಗಳ ಪರಿಶೀಲನೆ ಹಾಗೂ ಮೌಲ್ಯಮಾಪನವನ್ನು **ಹವಾಮಾನ ವಿಮೆ, ವರ್ಷಾವಿಮೆ (ಇಫ್‌ಕೋ, ಟೋಕಿಯೋ ವಿಮೆ)** ಗಳೊಡನೆ ಬೆಳೆ ವಿಮೆಯನ್ನು ತುಲನಾತ್ಮಕವಾಗಿ ಮಾಡುವ ಅಗತ್ಯತೆ ಕುರಿತಾಗಿ ಹೇಳಲಾಗಿದೆ.

ರಾಷ್ಟ್ರೀಯ ಬೆಳೆ ವಿಮಾ ಯೋಜನೆಯ ಸಮಸ್ಯೆಗಳಲ್ಲಿ, ಬಿತ್ತನೆ ದಿನಾಂಕದ ನಿಗದಿ, ನಷ್ಟದ ಪಾವತಿಯಲ್ಲಿ ವಿಳಂಬ, ಬಹುವಾರ್ಷಿಕ ತೋಟಗಾರಿಕೆ ಬೆಳೆಗಳಿಗೆ ಬೇಕಾದ ಸೂಕ್ತ ವಿಮಾ ನಿಯಮಗಳು, ಕಾಡುಪ್ರಾಣಿಗಳಿಂದಾಗುವ ಸ್ಥಳೀಯ ಹಾನಿಗಳ ಅಧ್ಯಯನ, ಕುರಿತೆಲ್ಲ ವಿವೇಚಿಸಲಾಗಿದೆ.

ಸ್ಥಳೀಯ ಅಸಮಾನತೆಗಳ ಸಂದರ್ಭದಲ್ಲಿ ಅದರ ಸಮದರ್ಶಿನೆಲೆಗೆ ತರಲು ನಂಜುಂಡಪ್ಪ ವರದಿಗನುಗುಣವಾಗಿ ಕೃಷಿ ಅಭಿವೃದ್ಧಿ ಬೆಳವಣಿಗೆಯನ್ನು ಮಳೆ ಆಶ್ರಿತ ಪ್ರದೇಶಗಳಲ್ಲಿಯೂ ಗಮನಿಸುವಿಕೆ, ಸಾಂದ್ರ ಜಲಾನಯನ ಅಭಿವೃದ್ಧಿ, ಕೃಷಿ ಆಧಾರಿತ ಹಾಗೂ ಅನಾಧಾರಿತ ಗ್ರಾಮೀಣ ಔದ್ಯೋಗೀಕರಣ, ನೈಸರ್ಗಿಕ ಸಂಪನ್ಮೂಲಗಳ ಸುಧಾರಿತ ಬಳಕೆ ಕುರಿತು ಹೇಳಲಾಗಿದೆ. ಉತ್ತರ ಕರ್ನಾಟಕದ ಹಾಗು ದ.ಕರ್ನಾಟಕದ ಅತಿ ಹಿಂದುಳಿದ ತಾಲೂಕು ಅಭಿವೃದ್ಧಿಗೆ ಮಾರ್ಗೋಪಾಯಗಳನ್ನು ಸೂಚಿಸಲಾಗಿದೆ.

**ವಿಷಯ 16:** ಕೃಷಿ ಶಿಕ್ಷಣ ಮತ್ತು ಸಂಶೋಧನೆ

ರಾಜ್ಯದ ಕೃಷಿ ವಿಶ್ವವಿದ್ಯಾಲಯ, ಪಶು ವೈದ್ಯಕೀಯ ವಿಜ್ಞಾನ ವಿಶ್ವವಿದ್ಯಾನಿಲಯಗಳಿಂದ ರೈತರಿಗೆ ಕೃಷಿ ಸಂಶೋಧನೆಯ ಅರಿವಿನ ಪೂರೈಕೆ; ಅಗತ್ಯತೆಗಳ ಪೂರೈಕೆ; ಅರೋರಾ ಸಮಿತಿಯಿಂದ ರೈತರ ಹೊಲಗಳಿಗೆ ತಾಂತ್ರಿಕತೆಯ ವರ್ಗಾವಣೆ ಹಾಗೂ ವಿಸ್ತರಣಾ ಸೇವೆಯ ವಿಧಿವಿಧಾನಗಳ ಪರಿಶೀಲನೆ; ಸಣ್ಣ ಮತ್ತು ಅತಿ ಸಣ್ಣ ರೈತರ ಭೂಮಿ ಪರಿಸರದ ಅಗತ್ಯತೆಗಳನ್ನು ಕೃಷಿ ವಿಶ್ವವಿದ್ಯಾಲಯ, ಕೃಷಿ ಇಲಾಖೆಗಳಿಂದ ಕೇಂದ್ರೀಕರಿಸಿ ಪೂರೈಸುವ ನಿರಂತರ ಕ್ರಿಯೆ; ಆರೋರ ಸಮಿತಿಯ ಶಿಫಾರಸ್ಸಿನಂತೆ 2005 ರೈತಕೇಂದ್ರಿತ ಅಂಶಗಳನ್ನು ಸಂಶೋಧನಾ ವಿಜ್ಞಾನಿಗಳಿಂದ ಅಳವಡಿಕೆಗೊಳ್ಳಬೇಕಾದುದು ಹಾಗು ಅದರ ಫಲಗಳು ರೈತರಿಗೆ ತಲುಪಬೇಕಾದುದು; ಸತೀಶ್ ಚಂದ್ರನ್ ಸಮಿತಿ ಶಿಫಾರಸ್ಸಿನಂತೆ (1993) ಬೀಜ ಸಂಶೋಧನೆಯ (ಉತ್ಪಾದನೆ, ಸಂಸ್ಕರಣೆ, ಪರೀಕ್ಷಣೆ, ಪ್ಯಾಕಿಂಗ್, ಸಂಗ್ರಹ, ಬೆಲೆ ಕಡಿತ) ತಂತ್ರಜ್ಞಾನದ ಅಭಿವೃದ್ಧಿ, ಔದ್ಯಮಿಕ ಬಳಕೆಯ ತಂತ್ರಜ್ಞಾನ, ಖಾಸಗಿ ಕಂಪೆನಿಗಳಿಗೆ ಸಂಶೋಧನೆಗೆ ಪ್ರೋತ್ಸಾಹ,. ಸಮಗ್ರ ಕೃಷಿಗಾರಿಕೆ ಪದ್ಧತಿ ಅಧ್ಯಯನಕ್ಕೆ ವಿಶ್ವವಿದ್ಯಾಲಯದಲ್ಲಿ ಅವಕಾಶ, ರೈತರಿಗೆ ಕೃಷಿ ತಂತ್ರಜ್ಞಾನಗಳನ್ನು ವಿಳಂಬವಿಲ್ಲದೆ ತಲುಪಿಸುವುದು, ಸ್ಥಳೀಯ ಅಗತ್ಯಕ್ಕೆ ಸೂಕ್ತ ರೀತಿಯಲ್ಲಿ ಹೊಸ ತಂತ್ರಜ್ಞಾನವನ್ನು ಮಾರ್ಪಡಿಸುವುದು, ನೆರೆರಾಜ್ಯಗಳಲ್ಲಿ ತಂತ್ರಜ್ಞಾನ ಅನ್ವಯ ಫಲಿತಾಂಶಗಳನ್ನು ಪರಿಶೀಲಿಸಿ, ಸೂಕ್ತವಿದ್ದರೆ ಅಳವಡಿಸಿಕೊಳ್ಳುವುದು, ಅನ್ವಯಿಕ ಸಂಶೋಧನೆಗೆ ಒತ್ತು, ಬೇಡಿಕೆ ಆಧಾರಿತ ಸಂಶೋಧನೆಗೆ ಒತ್ತು, ರೈತರ ಅನಿಸಿಕೆಗಳಿಗಾಗಿ ಸಂಪರ್ಕ ಹೊಂದಿರಬೇಕಾದುದು, ಬೀಜ ಮತ್ತು ತಾಂತ್ರಿಕತೆಗೆ ಬ್ರಾಂಡ್ ಹೆಸರಿಡುವುದು, ಕುರಿತೆಲ್ಲ ಹೇಳಲಾಗಿದೆ. ಅಂದರೆ ರೈತರ ಬದುಕಿಗೆ ಹದವಾಗುವ, ಅನುಕೂಲಿಸುವ ವಾಸ್ತವ ಸಂಶೋಧನೆಗಳು ವಿಶ್ವವಿದ್ಯಾಲಯಗಳಿಂದ ನಡೆಯಬೇಕೆಂಬುದು ರಾಜ್ಯದ ಕಾರ್ಯಕ್ರಮಗಳಲ್ಲಿ ಧ್ವನಿತಗೊಂಡಿದೆ, ಎನ್ನಬೇಕು.

**ತೋಟಗಾರಿಕೆ:** ಕರ್ನಾಟಕದ ತೋಟಗಾರಿಕೆ ಬೆಳೆಗಳು ರಾಜ್ಯದ ಸಾಗುವಳಿ ಪ್ರದೇಶದಲ್ಲಿ ಶೇ.13 ಭಾಗದಷ್ಟಿದ್ದು, ಒಟ್ಟು ಆದಾಯ ಅಭಿವೃದ್ಧಿಯಲ್ಲಿ ಶೇ.17ರಷ್ಟು ಕೊಡುಗೆ ಅವುಗಳಿಂದ ಒದಗಿದೆ. ಒಣ ಪ್ರದೇಶದಲ್ಲಿ ಬೆಳೆಯ ಬೇಕಾದ ಬೆಳೆ ಹೂವಿನ ಬೆಳೆಗಳನ್ನು ಹೆಚ್ಚಿಸಲು ಪ್ರದೇಶಗಳನ್ನು ಯೋಜಿಸುವಿಕೆ. ಆ ಬಗ್ಗೆ ರೈತರಿಗೆ ತಿಳುವಳಿಕೆ, ತೋಟಗಾರಿಕಾ ಬೆಳೆಗಳಿಗೆ ನಿರಂತರ ವಿಸ್ತರಣಾ ಬೆಂಬಲ, ಮಳೆಯಾಶ್ರಿತ ತೋಟಗಾರಿಕೆಯನ್ನು ಹನಿ ನೀರಾವರಿ ಯೋಜನೆಯೊಡನೆ ಹೊಂದಿಸಿ ಬೃಹತ್ ಕಾರ್ಯಕ್ರಮ ರೂಪಿಸಲು ಹೇರುವ ನಂಜುಂಡಪ್ಪ ಸಮಿತಿ ವರದಿ, ಒಣ ಪ್ರದೇಶಗಳಲ್ಲಿ ಸಾಮಾನ್ಯ ಹಣ್ಣುಗಳ ಪ್ರಮುಖ ಪಾತ್ರ, ಸಾವಯವ ಸಾಗುವಳಿಯ ಸೂಕ್ತ ಸಾಮಂಜಸ್ಯ, ತೋಟಗಾರಿಕೆ ಬೆಳೆಗಳಿಗೆ ಆಗುವ ಹಾನಿಗಳನ್ನು ತಪ್ಪಿಸುವುದು, ಆಧುನೀಕೃತ ಮಾರುಕಟ್ಟೆಗಳ ಸ್ಥಾಪನೆ ರೈತರೇ ನಿರ್ವಹಿಸುವ ರೈತ ಸಂಘಗಳಿಗೆ ಉತ್ತೇಜನ ಹಾಗು ಕಪ್ಪೆಕ್ ಸಂಸ್ಥೆಯೊಡನೆ ಸಹಯೋಗ, ಹೂವಿನ ಬೆಳೆ ಸಾಗಾಣಿಕೆಯ ಮೂಲಸೌಕರ್ಯ ಹೆಚ್ಚಳ, ಹೂವಿನ ಬೇಸಾಯ ತಂತ್ರಜ್ಞಾನವನ್ನು ಸಣ್ಣ ಹಿಡುವಳಿದಾರರಿಗೂ ಸುಲಭವಾಗಿ ಸಿಗುವಂತೆ ಮಾಡುವುದು, ಹೂವಿನ ಉತ್ಪನ್ನಗಳಿಗೆ ಹೆಚ್ಚಿನ ಸಂಖ್ಯೆಯಲ್ಲಿ ಮಾರುಕಟ್ಟೆಗಳನ್ನು ತೆರೆಯುವುದು ಕುರಿತೆಲ್ಲ ವಿವರಿಸಲಾಗಿದೆ.

ಹೂಡಿಕೆಗಳು ಮತ್ತು ತಂತ್ರಜ್ಞಾನ ಶೀರ್ಷಿಕೆಯಡಿ ಸತ್ವಭರಿತ ಹೂಡಿಕೆ ಹಾಗೂ ಸಾಗುವಳಿ ವೆಚ್ಚದ ಮಿತವ್ಯಯ, ನೀರಿನ ಬಳಕೆಯ ಸಾಮರ್ಥ್ಯ ಕುರಿತು ಹೇಳಲಾಗಿದೆ.

ನೀರಾವರಿ ವಿಷಯದಲ್ಲಿ ಭೂಮಿಯ ಉತ್ಪನ್ನಗಳ ಹೆಚ್ಚಳಕ್ಕೆ ಕಾರಣವಾದ ನೀರಾವರಿಯ ಪ್ರಗತಿಯ ಗತಿ ಹೆಚ್ಚಬೇಕು, ಹರಿಯುವ ನೀರಿನ ನೀರಾವರಿ ಮತ್ತು ಏತ ನೀರಾವರಿ ಎಂಬ ವರ್ಗೀಕರಣ, ವೈಜ್ಞಾನಿಕವಾಗಿ ನೀರು ನಿರ್ವಹಣಾ ತಾಂತ್ರಿಕತೆಯ ಅಳವಡಿಕೆಯ ಅಗತ್ಯ ಹಾಗೂ ಬಳಕೆದಾರರಿಗೆ ಅಂತರ್ಜಲ ಕುಸಿತದ ಕಾರಣಗಳು ಮತ್ತು ಆ ಕುರಿತಾಗಿ ತಿಳುವಳಿಕೆ–ಕೊಡುವ ಬಗ್ಗೆ ಯೋಚಿಸಲಾಗಿದೆ. 2006ರ ವರೆಗಿನ ಬೃಹತ್ ಮತ್ತು ಮಧ್ಯಮ ನೀರಾವರಿ ಯೋಜನೆಗಳ ಪರಿಸ್ಥಿತಿಯ ಚಿತ್ರವನ್ನು ನೀಡಿದೆ. ಉಳಿಕೆಯಾದ ಹಣದ ಬಗ್ಗೆಯೂ ಹೇಳಿದೆ. ಸಣ್ಣ ನೀರಾವರಿಯು ಒಟ್ಟು ನೀರಾವರಿ ಪ್ರದೇಶದ ಶೇ.46 ಭಾಗವಿದ್ದರೆ ಶೇ.40 ಭಾಗ ನಾಲೆಗಳಿವೆ. ನೀರಾವರಿ ಯೋಜನೆ ಹೊಂದಾಣಿಕೆಗೆ ತೀರ ಕಡಿಮೆ ಇರುವ ಅನುದಾನ, ಯೋಜನೆಯ ವಿಳಂಬ ಕಾರಣಗಳು, ನೀರಿನ ಪರಿಣಾಮಕಾರಿ ಬಳಕೆ, ಉಸ್ತುವಾರಿ

ಹಕ್ಕುಗಳು ಹಾಗೂ ಹೊಣೆಗಾರಿಕೆ, ಬೆಳೆಗಳು, ಬಯಸುವ ನೀರಿನ ಪ್ರಮಾಣ ಆಧರಿಸಿ ಸರದಿ ನೀರು ಪೂರೈಕೆ ಪದ್ಧತಿ ಅಳವಡಿಕೆ, ನಾಲೆಯ ಕೊನೆಯಂಚಿನಲ್ಲಿರುವವರಿಗೂ ನೀರು ಲಭ್ಯತೆ; ನೀರಾವರಿ ಸಾಮರ್ಥ್ಯ ಹೆಚ್ಚಿಸಲು ನೀರಿನಗತಿ ಬದಲಿಕೆಯ ಅಗತ್ಯತೆ, ರೈತರು ಭತ್ತದ ಬದಲು ಲಘು ನೀರಾವರಿ ಬೆಳೆ ಬೆಳೆಯಲು ಉತ್ತೇಜನ, ರೈತರಿಗೆ ನೀರಿನ ಬೆಲೆ ಬಗ್ಗೆ ತಿಳುವಳಿಕೆ, ನಾಲೆಗಳ ಹೂಳೆತ್ತುವಿಕೆ, ಪರಿಸರ ಪಟ್ಟಿಗಳ ಅಭಿವೃದ್ಧಿ, ಸ್ಥಳೀಯ ದೇಶೀ ಜನ್ಯ ತಂತ್ರಜ್ಞಾನ ನಿರೂಪಣೆ, ಪಾರಂಪರಿಕ ಜ್ಞಾನದ ಪುನರ್ನವೀಕರಣ, ಕುರಿತೆಲ್ಲ ವಿವೇಚಿಸಲಾಗಿದೆ.

**ಸಣ್ಣ ನೀರಾವರಿ** : ಕೆರೆ ನೀರಾವರಿ, ಭಾವಿ ನೀರಾವರಿ, ನಾಲೆ ನೀರಾವರಿ ಪ್ರದೇಶಗಳಲ್ಲಿ ನೀರಿನ ಬಳಕೆ ಸಾಮರ್ಥ್ಯವನ್ನು ಸಜ್ಜುಗೊಳಿಸಲು, ಕೆರೆಗಳ ಪುನರುಜ್ಜೀವನ, ಹೂಳೆತ್ತುವಿಕೆ, ನೀರಾವರಿ ನಿರ್ವಹಣೆ, ನೀರು ಬಳಕೆದಾರರ ಸಂಘ, ಅಚ್ಚುಕಟ್ಟು ಪ್ರದೇಶದಲ್ಲಿ ಮಳೆ ನೀರು ಸಂಗ್ರಹ, ಹೆಚ್ಚು ನೀರು ಬಳಕೆಯ ಭತ್ತ, ಕಬ್ಬು ಬದಲು ಕಡಿಮೆ ನೀರು ಬಳಕೆಯ ಉತ್ತಮ ಆರ್ಥಿಕ ವರಮಾನದ ಬೆಳೆ ಬೆಳೆಯುವಿಕೆ, ಸಾಗಣೆ ನೀರುನಷ್ಟ ತಡಗೆ ಸೂಕ್ತ ತಂತ್ರಜ್ಞಾನದ ಬಳಕೆ, ಸ್ವಸಹಾಯ ಆರ್ಥಿಕ ಯೋಜನೆ, ಖಾಸಗಿ ಪಾಲುದಾರಿಕೆ, ಜಲಾನಯನ ಕ್ಷೇತ್ರಗಳ ನಿರ್ವಹಣೆ ಕುರಿತು ಕಾರ್ಯಕ್ರಮಗಳನ್ನು ವಿವರಿಸಲಾಗಿದೆ. ಆದರೆ ಸತತ 3–4 ವರ್ಷ ಮಳೆ ವಿಫಲವಾದ ಸಂದರ್ಭದಲ್ಲಿ ಕಾರ್ಯಕ್ರಮಗಳೇನು ಎಂಬುದಕ್ಕೆ ವಿವರಣೆ ಇಲ್ಲಿ ಕಾಣದು.

**ಅಂತರ್ಜಲ ನೀರಾವರಿ** ಸಂದರ್ಭದಲ್ಲಿ, ಅಂತರ್ಜಲದ ಅತೀ ಬಳಕೆಯ ಪ್ರದೇಶಗಳು, ನೀರಿನ ಗುಣಮಟ್ಟ ಹಾಗೂ ನೀರಾವರಿಗೆ ಸೂಕ್ತತೆ, ಕೊಳವೆ ಭಾವಿಗಳನ್ನು ಆಳಕ್ಕೆ ಕೆತ್ತಿದಷ್ಟೂ ಆಗುವ ದುಬಾರಿವೆಚ್ಚ, ಬತ್ತಿದ ಜಲಮೂಲದ ಬಗ್ಗೆ ಅರಿವು, ವ್ಯರ್ಥ ಹೂಡಿಕೆ, ತೆರೆದ ಭಾವಿಗಳ ಬತ್ತುವಿಕೆ, ಭಾವಿಗಳ ಪುನರುಜ್ಜೀವನ ಮಾಡಿ ಅಂತರ್ಜಲ ಹೆಚ್ಚಿಸುವಿಕೆ, ಕೊಳವೆ ಭಾವಿಗಳ ನಡುವೆ ಇರಬೇಕಾದ ಅಂತರ, ಸಮುದಾಯ ಆಧಾರಿತ ಅಂತರ್ಜಲ ಪುನರುಜ್ಜೀವನ, ಅಚ್ಚುಕಟ್ಟು ಪ್ರದೇಶಗಳಲ್ಲಿ ಅಂತರ್ಜಲ ಮತ್ತು ಮೇಲ್ಮೈ ನೀರಿನ ಸಂಯುಕ್ತ ಬಳಕೆಗೆ ಉತ್ತೇಜನ, ಗ್ರಾಮಪಂಚಾಯಿತಿಗೆ ಕೆರೆಗಳ ನಿರ್ವಹಣೆಯ ಹೊಣೆ, ನೀರಿನ ದರ ಪರಿಷ್ಕರಣೆ, ಲಘು ನೀರಾವರಿಗೆ ಪ್ರಾಮುಖ್ಯತೆ, ಆಳ ಕೊಳವೆ ಭಾವಿ ಕೊರೆಯಲು ನಿಷೇಧ ಕುರಿತೆಲ್ಲ ಸೂಚನೆಗಳನ್ನು ನೀಡಲಾಗಿದೆ. ಇಸ್ರೇಲ್ ಮಾದರಿ ನೀರು ಬಳಕೆಯ ಅನುಕೂಲಗಳನ್ನು ಅಳವಡಿಸುವ ಬಗ್ಗೆ ಸೂಚನೆ ನೀಡಿದೆ. ಆದರೆ

ಗ್ರಾಮೀಣ ಪ್ರದೇಶಗಳಲ್ಲಿ ಸಮೂಹ ನೀರು ಗುಂಡಿ ಮಳೆ ಕುಯ್ಲುವಿನಿಂದ ಅಂತರ್ಜಲ ಪುನಶ್ಚೇತನ ಕಾರ್ಯಕ್ರಮಗಳು ಹಾಗೂ ಬಳಕೆಗೊಂಡು ಹೆಚ್ಚುವರಿ ಹರಿದು ಹೋದ ಗದ್ದೆ, ತೋಟಗಳ ನೀರನ್ನು ಇಂಗು ಗುಂಡಿಗಳಿಗೆ ಸಾಗಿಸುವಂಥ ಕಾರ್ಯವನ್ನು ಗಮನಿಸಬೇಕಾಗಿತ್ತೆನಿಸುತ್ತದೆ.

**ಬೆಳವಣಿಗೆ ಪ್ರೇರಣೆಗಳು, ವಿಸ್ತರಣಾ ಸೇವೆಗಳು** : ಜೀವನ ಶೈಲಿಯ ಬದಲಾವಣೆ, ಕೃಷಿ ಪರಿಸ್ಥಿತಿಯ ಗುಣಾತ್ಮಕ ಪರಿವರ್ತನೆ, ಕೌಟುಂಬಿಕ ಆದಾಯದ ಸುಧಾರಣೆ, ಹಿಡುವಳಿಗಳ ಸಂಖ್ಯೆಯ ಹೆಚ್ಚಳ, ಪುರುಷಪ್ರಧಾನ ರೈತ ಸಂಕರ್ಪ ವಿಧಾನದ ಅಸಮರ್ಪಕತೆ, ಕೃಷಿಕ್ಷೇತ್ರವು ವಾಣಿಜ್ಯ ಮತ್ತು ಜೀವನಾಧಾರ ವಿಭಾಗವಾಗಿ ವರ್ಗೀಕರಣಗೊಂಡದ್ದು ಕುರಿತೆಲ್ಲ ವಿವರಿಸಲಾಗಿದೆ. ವಿಸ್ತರಣಾ ಸೇವೆಗಳು ನಿರೀಕ್ಷಿತ ಮಟ್ಟದಲ್ಲಿಲ್ಲದಿರುವುದು, ವಿದ್ಯಾರ್ಥಿಗಳಿಗೆ ತಂತ್ರಜ್ಞಾನದ ಕುರಿತು ಮಾರ್ಗದರ್ಶನ, ರೈತರನ್ನು ಒಳಗೊಂಡಂಥ. ವಿಸ್ತರಣಾ ಸೇವೆಯನ್ನು ಚಾಲ್ತಿಗೆ ತರುವ ತರಬೇತಿ; ಗ್ರಾಮಸಭೆ ಮಟ್ಟದಲ್ಲಿ ವಿಸ್ತರಣಾ ಸೇವೆಯನ್ನು ಸೂಕ್ತ ಉದ್ಯಮಗಳೊಂದಿಗೆ ಮಾಡಬೇಕಿರುವುದು. ರೈತಸಂಘ ಸಂಸ್ಥೆಗಳಿಗೂ ವಿಸ್ತರಣಾ ಸೇವೆಯನ್ನು ಒದಗಿಸುವುದು; ಗ್ರಾಮ ಸಭೆಗಳ ಮುಖಾಂತರ ಕೃಷಿ ಸಲಹಾ ವಿಭಾಗವನ್ನು ತೆರೆದು ತಾಂತ್ರಿಕ ಸಲಹೆಗಳನ್ನು ರೈತರಿಗೆ ತಲುಪಿಸುವುದು; ವಿಸ್ತರಣಾ ಧ್ಯೇಯೋದ್ದೇಶಗಳು, ಕೃಷಿ ಕುಟುಂಬವನ್ನು ಗಮನದಲ್ಲಿರಿಸಿಕೊಳ್ಳುವುದು, ಕೃಷಿ ಕಾರ್ಮಿಕರಿಗೆ ಉತ್ತೇಜನ ದೊರಕಬೇಕಿರುವುದು ಕುರಿತೆಲ್ಲ ತಿಳಿಸಲಾಗಿದೆ. ಆದರೆ ಇದರ ಅನ್ವಯ ಸಾರ್ಥಕತೆಯು, ಅಧಿಕಾರಿವಲಯದಿಂದ ಸಮರ್ಪಕವಾಗಿ ಚಾಲ್ತಿಗೊಂಡಾಗ ತಿಳಿದು ಬರುತ್ತದೆ. ಗುರಿಯಂತು ಇದೆ. ಸಾಧಿಸಬೇಕಾದ ಕಾಳಜಿ ಬೇಕಷ್ಟೆ.

**ರೈತ ಸಂಪರ್ಕ ಕೇಂದ್ರಗಳು** ಕೃಷಿ ಸಾಮಗ್ರಿ, ಕೃಷಿ ಪದ್ಧತಿ ಮತ್ತು ಮಾರುಕಟ್ಟೆಯ ಮಾಹಿತಿಯನ್ನು ರೈತರಿಗೇನೋ ಒದಗಿಸುತ್ತಿವೆ. ಆದರೆ ಅವುಗಳ ಕಾರ್ಯಗಳಲ್ಲಿ ಸುಧಾರಣೆ ಬೇಕು, ತ್ವರಿತ ಚಾಲನೆ ಬೇಕು. ಹಿಂದುಳಿದ ತಾಲೂಕಿನಿಂದ ಈ ಮುತುವರ್ಜಿ ಅನ್ವಯವಾಗಬೇಕು. ಸತೀಶ್ ಚಂದ್ರನ್ ಸಮಿತಿ ಸಲಹೆಯಂತೆ (1993) ಸಸ್ಯ ಸಂರಕ್ಷಣ ತರಬೇತಿ ಸಂಸ್ಥೆಯನ್ನು ಆರಂಭಿಸಬೇಕು. ವಿಶ್ವ ಮಾರುಕಟ್ಟೆಯಲ್ಲಿನ ಪ್ರಚಲಿತ ಧಾರಣೆ, ವಸ್ತುಗಳ ಬೇಡಿಕೆ ಕುರಿತು ಮಾಹಿತಿ ಒದಗಿಸುವ ಗ್ರಾಮೀಣ ಮಳಿಗೆಗಳಂತೆ ರೈತ ಸಂಪರ್ಕ ಕೇಂದ್ರಗಳಿರಬೇಕು; ಉಚಿತ ದೂರವಾಣಿ ಸಂಖ್ಯೆ ಹೊಂದಿರಬೇಕು, ಎಂದೆಲ್ಲ ಅದರ ಸ್ವರೂಪವನ್ನು

ವಿಶದೀಕರಿಸಲಾಗಿದೆ. ಆದರೆ ರೈತರು ಮತ್ತು ಕೃಷಿ ವಿಜ್ಞಾನಿಗಳ ಮಾಸಿಕ, ದ್ವೈಮಾಸಿಕ, ತ್ರೈಮಾಸಿಕ, ವಾರ್ಷಿಕ ಇವುಗಳಲ್ಲಿ ಯಾವುದಾದರೂ ಎರಡನ್ನು ಆಯ್ದುಕೊಂಡು ಸಂವಾದ–ಸಲಹೆ ಕಾರ್ಯಗಳನ್ನು ಹಮ್ಮಿಕೊಳ್ಳುವ ಬಗ್ಗೆಯೂ ಹೇಳಬೇಕಿತ್ತೆನಿಸುತ್ತದೆ.

**ಫ್ಯಾಕ್ಟರ್ ಮಾರುಕಟ್ಟೆ :** ಒದಗಿಸುವ ಕೃಷಿ ಸಾಮಗ್ರಿಗಳ ಪ್ರಮಾಣ ಅಂದರೆ ಬೀಜ, ಗೊಬ್ಬರ, ಔಷಧಿಗಳ ಪ್ರಮಾಣ, ಗುಣಮಟ್ಟ ಸೂಕ್ತವಾಗಿರಬೇಕು, ಕೃಷಿ ಕಚ್ಚಾ ಸಾಮಗ್ರಿಗಳ ಬೆಲೆ ಉತ್ಪನ್ನಗಳ ಬೆಲೆಗಿಂತ ಹೆಚ್ಚಿ ರೈತರಿಗೆ ಆದಾಯದ ಖೋತಾ ಆಗುವುದರ ನಿಯಂತ್ರಣ, ರೈತರಿಗೆ ವ್ಯಾಪಾರಿಗಳ ಮೂಲಕವೇ ಮಾಹಿತಿ ಪಡೆಯುವ ಬದಲು ನೇರವಾಗಿ ಮಾಹಿತಿ ಪಡೆಯುವ ವ್ಯವಸ್ಥೆ, ಅಂತಿಮ ಉತ್ಪನ್ನಗಳ ಬೆಲೆ ನಿಯಂತ್ರಿತ ಮಾರುಕಟ್ಟೆಯ ನಿಯಂತ್ರಣದಲ್ಲಿರುವುದು ಕುರಿತೆಲ್ಲ ಹೇಳಿದೆ. ಆದರೆ ಇಂಥ ಮಾರುಕಟ್ಟೆಗಳ ಮೂಲಭೂತ ಸೌಕರ್ಯ, ಉತ್ಪನ್ನಗಳ ಶೀಘ್ರ ಸ್ವೀಕರಣೆ ಹಾಗು ವಿತರಣೆ ಕುರಿತ ಸಲಹೆಗಳನ್ನು ಸೂಚಿಸಬೇಕಿತ್ತೆನಿಸುತ್ತದೆ.

ಈ ಸಂದರ್ಭದಲ್ಲಿ ಬೀಜಗ್ರಾಮಗಳ ಸ್ಥಾಪನೆ. ಬೀಜ ಮಾರಾಟಗಾರರ ನೋಂದಣಿ ಬಗ್ಗೆ ಸೂಕ್ತ ವ್ಯವಸ್ಥೆ, ಖಾಸಗಿ ಕಂಪೆನಿಯು ಹೊಸದಾಗಿ ಉತ್ಪಾದಿಸಿದ ಬೀಜಗಳ ಕಡ್ಡಾಯ ದೃಢೀಕರಣ, ತಳಿಗಳ ಗೌಪ್ಯತೆಯ ನಿರ್ವಹಣೆ, ಸಣ್ಣ ಹಾಗು ಅತಿ ಸಣ್ಣ ರೈತರ ಗುಂಪುಗಳಿಗೆ ಕೃಷಿ ಪರಿಕರ, ಉಪಕರಣಗಳಿಗೆ ಸಹಾಯಧನ (20 ಸಾವಿರ) ಇತ್ಯಾದಿಗಳ ಬಗ್ಗೆಯೂ ಗಮನಿಸಿರುವುದು ಸ್ವಾಗತಾರ್ಹ.

**ಸಾಲವ್ಯವಸ್ಥೆ :** ಕೃಷಿ ಕ್ಷೇತ್ರದಲ್ಲಿ ರೈತ ಸ್ನೇಹಿಯಾಗಿ ನಬಾರ್ಡ್ ಸಂಸ್ಥೆ ಕೃಷಿ ಮಂತ್ರಾಲಯದಡಿ ಕಾರ್ಯನಿರ್ವಹಿಸಲು ಸಲಹೆ ನಬಾರ್ಡ್ ಮತ್ತು ವಾಣಿಜ್ಯ ಬ್ಯಾಂಕುಗಳು ಕೃಷಿ ಸಾಲಗಳಿಗೆ ಏಕರೂಪದ ಬಡ್ಡಿಯನ್ನು ಹಾಕುವಿಕೆ, ರೈತರ ಸಾಲ ನೀಡಿಕೆಗೆ ಪಾಸ್‌ಬುಕ್ ವಿತರಣೆ ಸಹಕಾರ ಸಂಘಗಳನ್ನು ಬಲಪಡಿಸುವಿಕೆ. ಶೇ.4ರ ಬಡ್ಡಿದರದಲ್ಲಿ ಸಾಲವಿತರಣೆಗೆ ಬ್ಯಾಂಕ್‌ಗಳಿಗೆ ಸರ್ಕಾರದ ನೆರವು, ಟಾಸ್ಕ್ ಫೋರ್ಸ್ ಸಮಿತಿಯ ಶಿಫಾರಸ್ಸಿನ ಪರಿಗಣನೆ, ಗ್ರಾಮೀಣ ಮಟ್ಟದ ಪ್ರಗತಿ ಬ್ಯಾಂಕ್‌ಗಳಿಗೆ ರೈತರಿಗೆ ಸಕಾಲಸಾಲದ ವ್ಯವಸ್ಥೆ, ರೈತರ ಬೆಳೆ ವ್ಯವಹಾರ ಸಾಮರ್ಥ್ಯ ಹಾಗೂ ಮಾರುಕಟ್ಟೆ ಆಧುನಿಕರಣ ಸಾಲಸಲಹಾ ಸಮಿತಿ ಮೂಲಕ (ಕ್ರೆಡಿಟ್ ಕೌನ್ಸಿಲಿಂಗ್) ಹಾಗೂ ರೈತರಿಗೆ ಇತರೇ ಅಗತ್ಯ ಸೌಲಭ್ಯಗಳ ಒದಗಣೆ ಮೂಲಕ ರೈತರ ಆತ್ಮಹತ್ಯೆಯಂಥ ಹಾನಿಗಳನ್ನು ತಪ್ಪಿಸುವುದು, ಪ್ರತಿಗ್ರಾಮ ಮತ್ತು ಜ್ಞಾನಕೇಂದ್ರದ ಮೂಲಕ ಸಾಲ ಮತ್ತು ವಿಮಾ ಮಾಹಿತಿಗಳನ್ನು ರೈತರಿಗೆ ನೀಡಿ

ಜಾಗೃತಿಗೊಳಿಸುವುದು, ಕೊಳವೆ ಭಾವಿಗಳಿಗೆ ಸಾಲದ ಸದುಪಯೋಗ ಹಾಗೂ ಉಸ್ತುವಾರಿ ಕುರಿತೆಲ್ಲ ಯೋಜನೆಗಳನ್ನು ಈ ಸಾಲವ್ಯವಸ್ಥೆಯ ಶೀರ್ಷಿಕೆಯಲ್ಲಿ ಮಂಡಿಸಲಾಗಿದೆ. ಆದರೆ ಹೀಗೆ ಸಾಲ ಮಾಡಲು ಪ್ರೇರಕವಾದ ಪರಿಸ್ಥಿತಿಗಳ ನಿಯಂತ್ರಣ (ಕಬ್ಬು ಕಾರ್ಖಾನೆಗಳಿಂದ ಹಣ ಪಾವತಿಯ ದೀರ್ಘ ವಿಳಂಬ, ಇತ್ಯಾದಿ) ಕುರಿತಾಗಿಯೂ ಇಲ್ಲಿ ಹೇಳಬೇಕಾಗಿತ್ತೆನಿಸುತ್ತದೆ.

**ಕೃಷಿ ಕಾರ್ಮಿಕರಲ್ಲಿ** ಕರ್ನಾಟಕದಲ್ಲಿ 36 ಲಕ್ಷ ಮಹಿಳೆಯರು, 26 ಲಕ್ಷ ಪುರುಷರು ಇದ್ದಾರೆ. ಸಣ್ಣ ಮತ್ತು ಅತಿ ಸಣ್ಣ ರೈತರೂ ಸಹ ಹೀಗೆಯೇ ದುಡಿಯುವ ಕಾರಣ ಅಸಂಘಟಿತ ಕಾರ್ಮಿಕರಾಗಿ ಪರಸ್ಪರ ಒಪ್ಪಂದದಲ್ಲಿ ಕಡಿಮೆ ಕೂಲಿಗೆ ದುಡಿಯುತ್ತಿದ್ದಾರೆ. ಇದು ಗ್ರಾಮೀಣರ ವಲಸೆಗೂ ಕಾರಣವಾಗಿದೆ. ಈ ಕಾರಣ 100 ದಿನಗಳಿಗೆ ಮೀರದಂತೆ ಉದ್ಯೋಗ ಹಾಗೂ ಸೂಕ್ತ ಕೂಲಿ ನೀಡಿಕೆ, ಕೃಷಿ ಉತ್ಪನ್ನ ಸಂಸ್ಕರಣೆ, ಪ್ಯಾಕಿಂಗ್ ಹಾಗೂ ಸಾಗಾಣಿಕೆ ಬಗ್ಗೆ ಕೌಶಲ್ಯ ಅಭಿವೃದ್ಧಿ ಕೇಂದ್ರಗಳಲ್ಲಿ ತರಬೇತಿ ಯೋಜನೆಯನ್ನು ಹಾಕಿಕೊಳ್ಳಲಾಗಿದೆ. ಆದರೆ ಕೃಷಿ ಕೂಲಿ ಇಲ್ಲದ ಸಂದರ್ಭದಲ್ಲಿ ಪರ್ಯಾಯ ಉದ್ಯೋಗ ಸಂದರ್ಭವನ್ನು ಸೃಷ್ಟಿಸುವ ವಿಚಾರವನ್ನು ಮಾಡಬೇಕಿತ್ತೆನಿಸುತ್ತದೆ.

**ಸಾವಯವ ಕೃಷಿ** ಕುರಿತಂತೆ 1993ರ ಸತೀಶ್ ಚಂದ್ರನ್ ವರದಿ ಅನ್ವಯ ಕಡಿಮೆ ಖರ್ಚಿನಲ್ಲಿ ಸಮಗ್ರ ಕೀಟ ನಿರ್ವಹಣೆ ಮೂಲಕ ಪರಿಸರ ಸಮತೋಲನ ರಕ್ಷಣೆಗಾಗಿ ಕ್ರಮಗಳು–ಸಾವಯವ ಬೆಳೆ ಕುಯ್ಲಿಗೆ ಪ್ರೋತ್ಸಾಹಧನ, ರೈತ ಸಂಪರ್ಕ ಕೇಂದ್ರಗಳಲ್ಲಿ ಕೆಲವು ರಾಸಾಯನಿಕಗಳಿಂದ ಮಣ್ಣಿಗೆ ಆಗುವ ಅಪಾಯ, ಸಾವಯವ ಗೊಬ್ಬರಗಳ ಅಭಿವೃದ್ಧಿ, ಪ್ರಾಥಮಿಕ, ಪ್ರೌಢಶಿಕ್ಷಣ ಪಠ್ಯಕ್ರಮದಲ್ಲಿ ಸಾವಯವ ಕೃಷಿ ವಿಷಯದ ಅಳವಡಿಕೆ, ಕೃಷಿ ಸ್ನಾತಕೋತ್ತರ ಹಂತದಲ್ಲಿಯೂ ಕಡ್ಡಾಯವಾಗಿ ಆ ವಿಷಯದ ಸೇರ್ಪಡೆ, ಕೃಷಿ, ತೋಟಗಾರಿಕೆ, ರೇಷ್ಮೆ ಹಾಗೂ ಅರಣ್ಯ ಸಸ್ಯಕ್ಷೇತ್ರದಲ್ಲಿ ಈ ಕೃಷಿ ಪದ್ಧತಿ ಅಳವಡಿಕೆ, ರೈತ ಸಂಪರ್ಕ ಕೇಂದ್ರಗಳಲ್ಲಿ ಸಾವಯವ ಬೀಜ ಬ್ಯಾಂಕ್ ಸ್ಥಾಪನೆ ಹಾಗೂ ಸ್ಥಳೀಯ ರೈತ ಸಮಿತಿಗಳಿಂದ ನಿರ್ವಹಣೆ, ಸಾವಯವ ರೈತ ಸಂಘಗಳಿಗೆ ಉತ್ತೇಜನ, ವಿಸ್ತರಣಾ ಕಾರ್ಯಕ್ರಮದ ಅಂಗವಾಗಿ ಮಾಧ್ಯಮದಲ್ಲಿ ಪ್ರಚಾರ, ಕುರಿತೆಲ್ಲ ಹೇಳಲಾಗಿದೆ. ಅಧಿಕ ಇಳುವರಿಗೆ ಇಂಥ ಸ್ವಾಭಾವಿಕ ಸಂಪನ್ಮೂಲ ಹೇಗೆ ಉಪಯೋಗಕಾರಿ ಎಂಬುದನ್ನು ಪ್ರಸ್ತಾಪಿಸಲಾಗಿದೆ. ಇಲ್ಲಿನ ವಿವರಗಳು ಕುತೂಹಲಕಾರಿ ಆಗಿವೆ. ಆದರೆ ಈ ಪದ್ಧತಿಯಲ್ಲಿ ಅಡಕಗೊಳಿಸಬಹುದಾದ ಕೃಷಿ ಕ್ಷೇತ್ರದ ಪ್ರಮಾಣದ ಸಂದರ್ಭಗಳನ್ನು ಹೇಳಿದ್ದರೆ ಚೆನ್ನಿರುತ್ತಿತ್ತು. ಶೇ.40 ರಷ್ಟು

ಸರ್ಕಾರಿ ಸ್ವಾಮ್ಯದ ಕೃಷಿ ಕ್ಷೇತ್ರಕ್ಕೆ ಅಳವಡಿಸಿದರೆ ಸಾಕೆ? ಖಾಸಗಿ ಕೃಷಿ ಕ್ಷೇತ್ರಗಳಲ್ಲಿ ಇದರ ಪ್ರಮಾಣ ಎಷ್ಟಿರಬೇಕು ಎಂಬುದು ಸ್ಪಷ್ಟವಾಗ ಬೇಕಿತ್ತು.

**ಜೈವಿಕ ಇಂಧನ** : ಭಾರತದ ಶೇ. 70 ರಷ್ಟು ಪೆಟ್ರೋಲಿಯಂ ಉತ್ಪನ್ನಗಳು ವಿಪರೀತ ವೆಚ್ಚದಿಂದ ಆಮದುಗೊಳ್ಳುತ್ತಿವೆ. ಜೈವಿಕ ಇಂಧನವನ್ನು ಈ ಉರುವಲಿನ ಬದಲು ಬಳಸಿದರೆ ಉಳಿತಾಯವಾಗುವ ವಿದೇಶಿ ವಿನಿಮಯ ಹಾಗೂ ರೈತರ ಬದುಕಿಗೆ ಉದ್ಯೋಗ ಸೃಷ್ಟಿಗೆ ಅನುಕೂಲವಾಗುವ ವಿಷಯವು ಮಂಡಿತವಾಗಿದೆ. ಕರ್ನಾಟಕದ ರೈತರಿಗೆ ಜೈವಿಕ ಇಂಧನ ಸಸ್ಯಗಳ ಕೃಷಿಗೆ ಪೂರಕ ತಂತ್ರಜ್ಞಾನ ಪೂರೈಕೆಯ ಬಗ್ಗೆ ಹೇಳಿದೆ. ಕರ್ನಾಟಕದ 13.5 ಲಕ್ಷ ಹೆಕ್ಟೇರ್ ಒಣ ಹಾಗೂ ಅರೆ ಒಣ ಭೂಮಿಯ ಬೆಳೆಗಳ ಕೃಷಿಗೆ ಜೈವಿಕ ಇಂಧನವನ್ನು ಸಮರ್ಪಕವಾಗಿ ಬಳಸಬಹುದಾಗಿದೆ. ಇದಕ್ಕೆ ಬೇಕಾದ ತಾಂತ್ರಿಕ ಜ್ಞಾನ ರಾಜ್ಯದ ಕೃಷಿ ವಿಶ್ವವಿದ್ಯಾಲಯಗಳಲ್ಲಿ ಲಭ್ಯವಿದೆ. ಜೈವಿಕ ಇಂಧನವು ವರ್ಷಕ್ಕೆ 159 ಮಾನವ ದಿನಗಳ ಕೆಲಸವಲ್ಲದೆ ಹೆಕ್ಟೇರಿಗೆ 5 ಸಾವಿರದಿಂದ 9 ಸಾವಿರ ರೂ.ಗಳ ಆದಾಯವನ್ನು ಪೂರೈಸುತ್ತದೆ. ಜೈವಿಕ ಇಂಧನ ಸಂಸ್ಕರಣಾ ಘಟಕಗಳ ಸ್ಥಾಪನೆ, ವಿತರಣೆ, ಪೂರಕ ತಂತ್ರಜ್ಞಾನ ಪೂರೈಕೆ, ಮಾರುಕಟ್ಟೆ ವ್ಯವಸ್ಥೆ, ಪೂರಕ ಘಟಕಗಳಾಗಿ ಗ್ಲಿಸರಿನ್ ಉತ್ಪಾದನಾ ಘಟಕ, ಕೊಳವೆ ಭಾವಿ, ಯಂತ್ರ ವಿದ್ಯುತ್ ಪೂರೈಕೆ ಹಾಗೂ ಇಂಧನ ಹಿಂಡುವ ಘಟಕಗಳನ್ನು ಅಭಿವೃದ್ಧಿಗೊಳಿಸುವ ಬಗ್ಗೆಯೂ ಹೇಳಲಾಗಿದೆ. ಆದರೆ ಪ್ರಯೋಗಗಳ ಉದಾಹರಣೆ ಹಾಗೂ ಅಲ್ಲಿನ ಅನುಭವಗಳ ಮಾದರಿಗಳನ್ನು ನೀಡಬೇಕಿತ್ತೆನಿಸುತ್ತದೆ. ಜೈವಿಕ ಇಂಧನಗಳ ಅರ್ಥ ಹಾಗೂ ವಿವರಗಳು ಅಗತ್ಯ ನಮೂದಾಗಬೇಕಿತ್ತೆನಿಸುತ್ತದೆ.

**ಜೈವಿಕ ತಂತ್ರಜ್ಞಾನ:** ರಾಜ್ಯದಲ್ಲಿ 2000–03ರ ಅವಧಿಯಲ್ಲಿ ಇದ್ದ 40 ಕ್ಕೂ ಹೆಚ್ಚಿನ ಜೈವಿಕ ತಂತ್ರಜ್ಞಾನ ಕಂಪೆನಿಗಳು, ಅವು ಬೆಳೆದ ವೇಗ, ಹೂಡಿರುವ ಸುಮಾರು 100 ಕೋಟಿ ರೂ. ಬಂಡವಾಳ, ಜೈವಿಕ ತಂತ್ರಜ್ಞಾನ ಪಾರ್ಕ್‌ಗಳು ಒದಗಿಸುವ ಜಾಗತಿಕ ಮಟ್ಟದ ಮೂಲಭೂತ ಸೌಕರ್ಯ, ವಿದ್ಯುತ್, ಇಂಧನ, ದೂರಸಂಪರ್ಕ ವ್ಯವಸ್ಥೆ ಕುರಿತೆಲ್ಲ ಹೇಳಲಾಗಿದೆ. ಕೃಷಿ ಆರೋಗ್ಯ ಹಾಗೂ ಕೈಗಾರಿಕಾ ಕ್ಷೇತ್ರಗಳಲ್ಲಿ ಅದರ ಪಾತ್ರದ ಬಗ್ಗೆ ಹಾಗೂ ಕಂಪೆನಿಗಳನ್ನು ಆಕರ್ಷಿಸುವ ಬಗ್ಗೆ ಹೇಳಲಾಗಿದೆ. ಅಂದರೆ ರಾಜ್ಯವು ಕಂಪೆನಿಗಳ ಸ್ಥಾಪನೆಗೆ ಅಗತ್ಯವಾದ ವಾತಾವರಣ ನಿರ್ಮಿಸುತ್ತಿರುವ ವಿಷಯ, ಶೇ.28 ರಷ್ಟು ವಾರ್ಷಿಕ ಬೆಳವಣಿಗೆ ಹೆಚ್ಚುವ ರಫ್ತು ವಹಿವಾಟು ಹಾಗು ಶಕ್ತಿಯುತವಾಗಿ ಇದನ್ನು ಬೆಳೆಸಬೇಕಾದ ಪ್ರಯತ್ನ ಕುರಿತೂ

ಹೇಳಲಾಗಿದೆ. ಜಾಗತಿಕ ಜಗತ್ತಿನೊಡನೆ ಹೆಜ್ಜೆ ಹಾಕುವ ಪ್ರಯತ್ನ ಈ ನೀತಿಯಲ್ಲಿ ಕಾಣುತ್ತದೆ.

**ರೈತರ ಕಲ್ಯಾಣ** : ರೈತ ಕೇಂದ್ರೀಕೃತ ಕೃಷಿ ನೀತಿಯಾದ ಕಾರಣ, ಮಣ್ಣಿನ ವಿಧ, ಭೂಮಿಯ ವಿಸ್ತಾರ, ಬೆಳೆಯುವ ಬೆಳೆ, ತಂತ್ರಜ್ಞಾನ ಬಳಕೆ, ಹಾಗೂ ಮೂಲಭೂತ ಸೌಕರ್ಯದ ಲಭ್ಯತೆ ಕುರಿತೆಲ್ಲ ಯೋಚಿಸಲಾಗಿದೆ. ಮಾರುಕಟ್ಟೆ ವ್ಯವಸ್ಥೆ, ಕೃಷಿ ಕೂಲಿಕಾರರ ಲಭ್ಯತೆ, ಹಾಗೂ ಅವರ ಸ್ಥಿತಿಗತಿ, ಕುಟುಂಬದ ಆರೋಗ್ಯ, ಸಾಮಾಜಿಕ ಸಂಘ ಸಂಸ್ಥೆಗಳ ಸಹಕಾರ ಇತ್ಯಾದಿ ಸಂಗತಿಗಳು ರೈತ ಕಲ್ಯಾಣವನ್ನು ಸಾಧಿಸುವತ್ತ ಸಾಗಬೇಕೆಂದಿದೆ. ರೈತರ ಕಲ್ಯಾಣಕ್ಕೆಂದೆ ಮೀಸಲಾದ ವ್ಯವಸ್ಥೆಯಾಗಿ ಕೃಷಿ ಇಲಾಖೆಯನ್ನು **'ಕೃಷಿ ಮತ್ತು ರೈತರ ಕಲ್ಯಾಣ'** ಇಲಾಖೆ ಎಂದು ಮರುನಾಮಕರಣ ಮಾಡಿರುವುದು ಸ್ವಾಗತಾರ್ಹನಡೆ. ಆದರೆ ಅಧಿಕಾರಿವಲಯ ಇದರಲ್ಲಿ ಸಮಗ್ರವಾಗಿ ತನ್ಮಯವಾದಾಗ ಇದಕ್ಕೆ ಮೌಲ್ಯ ಬಂದೀತು.

**ರೈತರ ಆರೋಗ್ಯ –ಯಶಸ್ವಿನಿ ಗ್ರಾಮೀಣ ಆರೋಗ್ಯ ರಕ್ಷಣಾ ಯೋಜನೆ** : 'ಯಶಸ್ವಿನಿ' ಕಾರ್ಯಕ್ರಮದಲ್ಲಿ ರೈತರ ಆರೋಗ್ಯ ವೆಚ್ಚ ಹಾಗೂ ಆಸ್ಪತ್ರೆಯ ಆದ್ಯತೆಗಳನ್ನು ಗಮನಿಸಿದೆ. ಈ ಯೋಜನೆಯನ್ನು ಹಾರ್ವರ್ಡ್ ವಿಶ್ವವಿದ್ಯಾಲಯವು ಶ್ಲಾಘಿಸಿದೆ ಹಾಗೂ ಅಭಿವೃದ್ಧಿ ಶೀಲ ರಾಷ್ಟ್ರಗಳಿಗೆ ಮಾದರಿ ಎಂದಿದೆ. ಕಳೆದ ಮೂರು ವರ್ಷಗಳಲ್ಲಿ 50 ಸಾವಿರ ರೈತರಿಗೆ ಶಸ್ತ್ರ ಚಿಕಿತ್ಸೆ; 2 ಲಕ್ಷ ಹೊರರೋಗಿ ರೈತರಿಗೆ ಚಿಕಿತ್ಸೆ; ರೈತ ಮಿತ್ರ ಪುಸ್ತಕದಲ್ಲಿ ಇದರ ದಾಖಲಾತಿ. ರಾಷ್ಟ್ರೀಯ ರೈತ ಆಯೋಗದ ಪ್ರಕಾರ ರೈತರಿಗೆ ಕನಿಷ್ಠ ಆರೋಗ್ಯ ಸೌಲಭ್ಯ ಸಿಗದಿರುವುದೇ ಆತ್ಮಹತ್ಯೆಗೆ ಮೂಲಕಾರಣವೆಂದಿರುವುದು; ರೈತ ಚಿಕಿತ್ಸೆಗೆ ಸಾಲ, ಬೆಳೆ ವೈಫಲ್ಯ ಇವೆಲ್ಲವೂ ಆತ್ಮಹತ್ಯೆಗೆ ಕಾರಣವಾಗಿರುವಲ್ಲಿ, ಯೋಜನೆಯನ್ನು ಮತ್ತೂ ಬಲಗೊಳಿಸುವ ಪ್ರಯತ್ನ ಕುರಿತೆಲ್ಲ ಹೇಳಲಾಗಿದೆ. ಸರ್ಕಾರ ರೈತರ ಆತ್ಮಹತ್ಯೆಗಳ ಬಗ್ಗೆ ಸೂಕ್ಷ್ಮವಾಗಿ ಸ್ಪಂದಿಸಿರುವ ಬಗೆ ಇದೆನಿಸುತ್ತದೆ. ಮುಂದೆ 'ಸುವರ್ಣ ಸುರಕ್ಷ ಯೋಜನೆ'ಯನ್ನು ಕೃಷಿ ಕೂಲಿಕಾರರು ಮತ್ತು ಬಡತನದ ರೇಖೆಯ ಕೆಳಗಿರುವವರಿಗೆ ಅನುಷ್ಠಾನಗೊಳಿಸಬೇಕಾಗಿರುವ ಬಗ್ಗೆ ಹೇಳಲಾಗಿದೆ. ಆದರೆ ಗ್ರಾಮಗಳಲ್ಲಿ ತಜ್ಞ ವೈದ್ಯಕೀಯ ಸೇವೆಯ ತುರ್ತು ಸಂದರ್ಭದಲ್ಲಿ ಅನುಕೂಲವಿಲ್ಲದ ಕಾರಣ, ಅದು ಒದಗುವ ನಗರ ಪಟ್ಟಣ ಪ್ರದೇಶಕ್ಕೆ ರೈತ ರೋಗಿಯನ್ನು ಸಾಗಿಸಲು ತುರ್ತುವಾಹನಗಳನ್ನು ಒದಗಿಸಬೇಕಾದ ಅಗತ್ಯದ ಬಗ್ಗೆ ಹೇಳಬೇಕಾಗಿತ್ತು.

**ವ್ಯಾಪಾರ ನಿರ್ವಹಣೆ-ಸಮಸ್ಯೆಗಳು :** ಕಪ್ಟೆಕ್ (ರಫ್ತುನಿಗಮ) ಸಂಸ್ಥೆಯ ಮೂಲಕ ರಾಜ್ಯ ಕೃಷ್ಯುತ್ಪನ್ನಗಳ ಮಾರಾಟ ಭರದಿಂದ ನಡೆದಿರುವುದು, ಕಾಫಿ, ರೇಷ್ಮೆ ಉತ್ಪನ್ನಗಳು, ಗೋಡಂಬಿ, ಗೇರ್ಕಿನ್ಸ್, ಸಂಸ್ಕರಿತ ಕೃಷಿ ಉತ್ಪನ್ನ ಸಾಂಬಾರು ಬೆಳೆಗಳು ಇತ್ಯಾದಿಗಳ ರಫ್ತಿನ ಪ್ರಮಾಣ ಕಳೆದ ವರ್ಷ 2004-05ರಲ್ಲಿ 2 ಸಾವಿರದಿಂದ 3 ಸಾವಿರ ಕೋಟಿ ಆಗಿತ್ತು. ಗೋಡಂಬಿಯು ಇದರಲ್ಲಿ ಅತ್ಯಧಿಕ ಆದಾಯ ತಂದುಕೊಟ್ಟಂತೆ ಇತರ ಉತ್ಪನ್ನಗಳ ರಫ್ತಿಗೂ ಹೆಚ್ಚು ಒತ್ತುಕೊಡಬೇಕಾದುದು; ರಫ್ತು ನಿಗಮ ಮತ್ತು ಅಪೇಡಾ ಸಂಸ್ಥೆಗಳ ಸಹಯೋಗದೊಡನೆ ಸ್ಥಾಪಿಸಿರುವ ಕೃಷಿ ರಫ್ತು ವಲಯ (10.75 ಕೋಟಿ ವೆಚ್ಚದಲ್ಲಿ), ಗೇರ್ಕಿನ್ಸ್ ಬೆಳೆಗೆ ಆದ್ಯತೆ (15 ಸಾವಿರ ಎಕರೆ ಬೆಳೆ) ನೀಡಿ ರಾಷ್ಟ್ರದ ಒಟ್ಟು 150 ಕೋಟಿ ರೂ. ರಫ್ತಿನಲ್ಲಿ ಕರ್ನಾಟಕದ ಪಾಲು 139 ಕೋಟಿ ರೂ. ಇರುವುದು, ಕೃಷಿ ರಫ್ತು ವಲಯವನ್ನು 2002ರಲ್ಲಿ ಗುಲಾಬಿ ಈರುಳ್ಳಿಗೆ ಸ್ಥಾಪಿಸಿದ್ದು ಪ್ರಸ್ತುತ 10 ಸಾವಿರ ಎಕರೆಗೆ ವಿಸ್ತರಿಸಿರುವುದು, ಕೃಷಿ ರಫ್ತು ವಲಯವನ್ನು ಪುಷ್ಪ ಕೃಷಿಯಲ್ಲಿಯೂ ಗುರುತಿಸಿದ ಕಾರಣ, ಬೆಂಗಳೂರು, ಕೋಲಾರ, ತುಮಕೂರು, ಕೊಡಗು, ದಕ್ಷಿಣ ಕನ್ನಡ, ಉತ್ತರ ಕನ್ನಡ, ಹಾಗೂ ಬೆಳಗಾವಿ ರೈತರಿಗೆ ಅದು ನೆರವಾಗಿರುವುದು, ವೆನಿಲ್ಲಾ, ಮಾವು, ದ್ರಾಕ್ಷಿ, ನಿಂಬೆ, ದಾಳಿಂಬೆ, ಔಷಧಿ ಹಾಗೂ ಸುಗಂಧ ಬೆಳೆಗಳಿಗೂ ಇದನ್ನು ವಿಸ್ತರಿಸುವ ಉದ್ದೇಶವಿರುವುದು, ಕುರಿತು ಹೇಳಲಾಗಿದೆ. ಕೃಷಿ ಉತ್ಪನ್ನ ಸಂಸ್ಕರಣೆ, ಮಾರಾಟಕ್ಕೆ ಉತ್ತೇಜನ, ಮೂಲಭೂತ ಸೌಲಭ್ಯಗಳಾದ ಪ್ಯಾಕಿಂಗ್ ಶೀತಲಗೃಹ ಸ್ಥಾಪನೆ, ಪ್ರಗತಿಪರ ರೈತರ ತಂಡಗಳನ್ನು ಹೊರದೇಶಗಳಿಗೆ ನಿಯೋಜಿಸಿ ಅಲ್ಲಿನ ಕೃಷಿ ಉತ್ಪನ್ನಗಳ ಮಾರುಕಟ್ಟೆಗಳನ್ನು ಪರಿಚಯಿಸುವುದು, ರಾಜ್ಯದ ತೋಟಗಾರಿಕಾ ಇಲಾಖೆಯ ಡಬ್ಲ್ಯು.ಟಿ.ಓ ಕೋಶ ಮೂಲಕ, ರಾಜ್ಯ ಸರ್ಕಾರದ ಅಹವಾಲನ್ನು ಕೃಷಿ ಉತ್ಪನ್ನ ಸಂಬಂಧ ಉದ್ಭವಿಸುವ ಕಾರ್ಯತಂತ್ರಗಳನ್ನು ರೂಪಿಸಿ, ವಾಣಿಜ್ಯ ಮಂತ್ರಾಲಯಕ್ಕೆ ಸಲ್ಲಿಸಲು ಅನುವಾಗಿರುವುದು ರಾಜ್ಯದ ಕೃಷಿ ತಜ್ಞರ ವಾರ್ಷಿಕ ಕನಿಷ್ಠ 2 ಸಭೆಗಳ ಏರ್ಪಾಟು ಮಾಡಿ ವ್ಯಾಪಾರ ವಹಿವಾಟು ಪತ್ರ ವ್ಯವಹಾರವನ್ನು ವಾಣಿಜ್ಯ ಮಂತ್ರಾಲಯದೊಡನೆ ನಡೆಸುವುದು ಕುರಿತೆಲ್ಲ ಹೇಳಲಾಗಿದೆ.

**ಕೃಷಿ ಉತ್ಪನ್ನಗಳ ಸಂಸ್ಕರಣೆ** – ಸಂಸ್ಕರಣೆಗೊಳ್ಳದೆ ಕೃಷ್ಯುತ್ಪನ್ನಗಳು ಮಧ್ಯವರ್ತಿಗಳಿಂದ ಮಾರಾಟವಾಗುತ್ತಿದ್ದು, ರೈತರಿಗೆ ಹೆಚ್ಚಿನ ನಿವ್ವಳ ಆದಾಯ ದೊರಕುತ್ತಿಲ್ಲ. ಕೃಷ್ಯುತ್ಪನ್ನಗಳನ್ನು ಸ್ವಚ್ಛಗೊಳಿಸಿ, ಶೇಖರಿಸಿ ಪ್ಯಾಕಿಂಗ್ ಮಾಡುವುದರಿಂಧ, ಅವುಗಳ, ಶೇಖರಣಾ ಅವಧಿಯನ್ನು ಹೆಚ್ಚಿಸಬಹುದು. ಆಕರ್ಷಕ

ಬೆಲೆಯನ್ನು ಪಡೆಯಬಹುದು ಇದು ಉದ್ಯೋಗ ಸೃಷ್ಟಿಗೆ ಹಾಗೂ ವ್ಯಾಪಾರೀಕರಣಕ್ಕೆ ಸಹಕಾರಿಯಾಗುತ್ತದೆ. ಮಾರಾಟದಲ್ಲಿ ಏರಿಳಿತದ ರಾಜ್ಯದಲ್ಲಿ ಲಭ್ಯವಿರುವ ವಿವಿಧ ಆಹಾರ ಸಂಸ್ಕರಣಾ ಘಟಕಗಳು ಪಟ್ಟಿಯನ್ನು ನೀಡಲಾಗಿದೆ.

**ಸೂಕ್ತ ನೀತಿ** – ಈ ದಿಸೆಯಲ್ಲಿ ರಾಜ್ಯದ ಯಾವ ಯಾವ ಪ್ರದೇಶಗಳಲ್ಲಿ ಸಂಸ್ಕರಣಾ ಘಟಕಗಳನ್ನು ಸ್ಥಾಪಿಸಬೇಕು ಎಂಬ ಬಗ್ಗೆ ತಿಳಿಸಲಾಗಿದೆ. ಅಗತ್ಯ ಕೃಷ್ಯುತ್ಪನ್ನಗಳ ಲಭ್ಯತೆ ನಂಜುಂಡಪ್ಪ ವರದಿಯ ಅನುಷ್ಠಾನ ಸೂತ್ರ, ರೈತ ಸಮಾವೇಶ ಬಂಡವಾಳದ ಲಭ್ಯತೆ ಈ ಹಿನ್ನೆಲೆಯಲ್ಲಿ ಸಂಸ್ಕರಣಾ ಘಟಕಗಳನ್ನು ಆಹಾರವಸ್ತು ಮತ್ತು ಜಿಲ್ಲೆಗಳನ್ನು ನಿಗದಿಪಡಿಸಿ, ಸ್ಥಾಪಿಸಲಿರುವ ವಿಷಯವನ್ನು ಸೂಕ್ತ ನೀತಿಯಾಗಿ ಮಂಡಿಸಲಾಗಿದೆ. ಒಳ್ಳೆ ಮಾರುಕಟ್ಟೆ, ಹೆಚ್ಚಿನ ಲಾಭ, ಬೆಳೆವಿಮೆ, ಹೂಡಿಕೆದಾರನಿಗೆ ಅನುಕೂಲಿಸುವ ಆಹಾರ ಉದ್ಯಾನ (food park), ಆಹಾರ ಸಂಸ್ಕರಣಾ ಕೈಗಾರಿಕೆಗೆ (ಕಾಲಿಕ ಕೈಗಾರಿಕೆ) ಉತ್ತೇಜನ ಯೋಜನೆ, ವಿದ್ಯುಚ್ಛಕ್ತಿ ಕೊರತೆಯ ಪ್ರದೇಶದಲ್ಲಿ ಕ್ಯಾಪ್ಟೀವ್ ಪವರ್ ಜನರೇಶನ್ ಘಟಕಗಳ ಸ್ಥಾಪನೆಗೆ ಸರ್ಕಾರ ತೆರಿಗೆ ವಿಧಿಸದೆ ಅವಕಾಶ ನೀಡುವುದು, ಸಾರ್ವಜನಿಕ ಹಾಗೂ ಖಾಸಗಿ ಆಹಾರ ಸಂಸ್ಕರಣಾ ಘಟಕಗಳ ಸ್ಥಾಪನೆಗೆ ಉತ್ತೇಜನ, ಕೃಷಿ ವಿಶ್ವವಿದ್ಯಾಲಯ ಒಡೆತನದ ಜಮೀನನ್ನು ಕಾಪ್ಟೀವ್ ಕಲ್ಟಿವೇಶನ್' ಹಾಗೂ ಸಂಸ್ಕರಣ ಘಟಕಗಳ ಸ್ಥಾಪನೆಗೆ ನೀಡುವುದು ಕುರಿತೆಲ್ಲ ಶಿಫಾರಸು ಮಾಡಲಾಗಿದೆ.

**ರೇಷ್ಮೆ ಕೃಷಿಯಿಂದ ಆರ್ಥಿಕ ಲಾಭ :** ರಾಷ್ಟ್ರದ ಒಟ್ಟು 15,400 ಟನ್ ಹಿಪ್ಪ ನೇರಳೆ ಕೃಷಿ ಉತ್ಪಾದನೆಯಲ್ಲಿ ಕರ್ನಾಟಕದ್ದು 3471 ಮೆಟ್ರಿಕ್ ಟನ್‌ನಷ್ಟು ಇದೆ. ಇದೊಂದು ಕೃಷಿ ಆಧಾರಿತ ಗುಡಿ ಕೈಗಾರಿಕೆಯಾಗಿದೆ. ಹಳ್ಳಿಯ ಎಲ್ಲಾವರ್ಗದ ಜನರಿಗೆ ಉದ್ಯೋಗ ಕಲ್ಪಿಸುವುದು, ಇಂದು ಒಳ್ಳೆಯ ಗುಣಮಟ್ಟದ ರೇಷ್ಮೆಯ ಬೇಡಿಕೆಯ ಹೆಚ್ಚಳದ ಕಾರಣ, ಉತ್ತಮ ಮಟ್ಟದ ಬೀಜೋತ್ಪಾದನೆ, ನಿರಂತರ ತರಬೇತಿ ಕಾರ್ಯಕ್ರಮ, ಮೂಲಭೂತ ಸೌಕರ್ಯಗಳಿಗೆ ಒತ್ತು, ಹೊಸ ತಾಂತ್ರಿಕ ಜ್ಞಾನದ ಅಳವಡಿಕೆ. ಬೆಳೆಹಾನಿ ತಪ್ಪಿಸಲು ಸಾಮೂಹಿಕ ಚಾಕಿ ಸಾಕಾಣಿಕೆಗೆ ಪ್ರೋತ್ಸಾಹ ನೀಡುವುದು, ರೋಗ ನಿಯಂತ್ರಣ, ಉತ್ಪಾದನಾ ವೆಚ್ಚ ಕಡಿಮೆ ಮಾಡಲು ಸೌರಶಕ್ತಿಯ ಒಲೆಗಳಿಂದ ಕುದಿಸುವಿಕೆ, ಓರ್ವ, ಬಿಸಿಗಾಳಿಯಿಂದ ಒಣಗಿಸುವಿಕೆ, ಪಂಚವಾರ್ಷಿಕ ಯೋಜನೆಯಡಿಯಲ್ಲಿ ಭಾರತ ಸರ್ಕಾರ ರೂಪಿತ ಕೆಟಲಿಟಿಕ್ ಡೆವಲಪ್ಮೆಂಟ್ ಪ್ರೋಗ್ರಾಂ ಅನ್ನು ಕಾರ್ಯಗತಗೊಳಿಸುವುದು, ಈ ಯೋಜನೆಯಡಿಯಲ್ಲಿ ತುಂತುರು ನೀರಾವರಿ, ಸಾಕಾಣಿಕೆ ಮನೆಗಳ ನಿರ್ಮಾಣ,

ಹಿಪ್ಪುನೇರಳೆ ಸಸಿ ಬೆಳಸಲು ರೀಲಿಂಗ್ ಮೆಷಿನ್ ಅಳವಡಿಕೆ, ಬೈವೋಲ್ಟೈನ್ ರೇಷ್ಮೆಗೆ ಪ್ರೋತ್ಸಾಹ, ಗುಣಮಟ್ಟದ ರೇಷ್ಮೆಗೂಡುಗಳನ್ನು ರೇಷ್ಮೆ ಉತ್ಪಾದನೆ ಹೆಚ್ಚಿಸಲು ರಾಜ್ಯ ಮತ್ತು ಕೇಂದ್ರದ ನೆರವು, 2017ರ ವರೆಗಿನ ಯೋಜನೆಗಳ ಮುನ್ನೋಟ – ಹಿಪ್ಪುನೇರಳೆ ಎಲೆ ಉತ್ಪಾದನೆ, ಇಳುವರಿ, ಗೂಡುಗಳ ಉತ್ಪಾದನೆ ರೇಷ್ಮೆ ಉತ್ಪಾದನೆಗಳ ಸು.ಶೇ.20ರಷ್ಟು ಹೆಚ್ಚಿಸುವಿಕೆಯ ಬಗ್ಗೆ ಹೇಳಲಾಗಿದೆ. ಉದ್ಯೋಗ ಸೃಷ್ಟಿಯ ಬಗ್ಗೆಯೂ ಹೇಳಿದೆ. ಆದರೆ ಇದರ ಮಾರುಕಟ್ಟೆಯ ಬಗೆಗಿನ ವರ್ತಮಾನದ ಸವಾಲುಗಳು ಹಾಗೂ ಅವನ್ನು ಎದುರಿಸುವ ಕ್ರಮಗಳ ಕುರಿತೂ ಇಲ್ಲಿಯ ಕೆಲವು ವಿವರಗಳನ್ನೂ ಹೇಳಬೇಕಿತ್ತು.

ಪಶುಪಾಲನಾ ವಲಯಕ್ಕೆ ಸಂಬಂಧಿಸಿದಂತೆ ಪಶುಸಂಗೋಪನ ವಿಭಾಗದ ಅಂತರಿಕ ಉತ್ಪನ್ನಗಳು (ಶೇ.3.6) ಹಾಗೂ ಕೃಷಿ ವಿಭಾಗದಲ್ಲಿ ಶೇ. 16.27 ಇರುವುದು; ದನಕರುಗಳ ಸಂಖ್ಯೆ ಶೇ. 11.90 ರಷ್ಟು ಕುಸಿತ, ಮಿಶ್ರತಳಿ ಹಸುಗಳ ಸಂಖ್ಯೆ ಶೇ. 40.51ರಷ್ಟು ಹೆಚ್ಚಳ; ಪಶುಪಾಲನಾ ಉದ್ದಿಮೆಯಿಂದ ಒದಗಿರುವ ಉದ್ಯೋಗಾವಕಾಶ; ಕೋಳಿ ಸಾಕಾಣಿಕೆ ಪ್ರಮುಖ ಉದ್ದಿಮೆ ಆಗಿರುವುದು ಕುರಿತೆಲ್ಲ ಹೇಳಲಾಗಿದೆ. ಜಾನುವಾರು ವಿಭಾಗದ ಯೋಜಿತ ನೀತಿ ನಿಯಮಗಳನ್ನು ಸೂಚಿಸಲಾಗಿದೆ; ಜಾನುವಾರು ತಿನಿಸು–ಮೇವುಗಳ ನಿಗಮಸ್ಥಾಪನೆ, ಸಾಕಾಣಿಕೆ ಕೇಂದ್ರ, ಹಾಲು ಉತ್ಪಾದನಾ ಸಹಕಾರ ಸಂಘಗಳಿಗೆ ರಾಷ್ಟ್ರೀಯ ಸಂಸ್ಥೆಗಳ ಮಾರ್ಗದರ್ಶನ, ಮಾರಾಟ ವ್ಯವಸ್ಥೆಯನ್ನು ಬಲಪಡಿಸಿ ಜಾಗತಿಕ ಪೈಪೋಟಿಯನ್ನು ಸಮರ್ಥವಾಗಿ ಎದುರಿಸುವ ಬಗೆ, ಜಾನುವಾರು ಉತ್ಪನ್ನಗಳ ರೋಗ ಮುಕ್ತವಲಯದ ಸೃಷ್ಟಿ, ಉಣ್ಣೆ ಉತ್ಪಾದನೆ ಹೆಚ್ಚಿಸುವುದು, ಸಂಸ್ಕರಣಾ ಘಟಕಗಳ ಸ್ಥಾಪನೆ, ಗೋಮಾಳ ಮತ್ತು ಹುಲ್ಲುಗಾವಲು ಪ್ರದೇಶಗಳ ಅಭಿವೃದ್ಧಿ, ತಾಲೂಕು ಮಟ್ಟದಲ್ಲಿ ಪಶುಸಂಗೋಪನ ಚಟುವಟಿಕೆಗಳ ಹೆಚ್ಚಳ, ವಿಸ್ತರಣಾ ಘಟಕಗಳ ಸ್ಥಾಪನೆ ಕುರಿತೆಲ್ಲ ಹೇಳಲಾಗಿದೆ.

ಮೀನುಗಾರಿಕೆ ಕುರಿತಂತೆ, ಮೀನು ಕೈಗಾರಿಕೆ ಉದ್ದಿಮೆಯ ಆಧುನೀಕರಣ, ಮೀನುಸಾಗರೋತ್ಪನ್ನಗಳ ರಫ್ತಿಗೆ ಉತ್ತೇಜನ, ಉದ್ದಿಮೆದಾರರಿಗೆ ಶೇ.4ರ ಬಡ್ಡಿಯಂತೆ ಸಾಲದ ಸೌಲಭ್ಯ, ದೋಣಿ ಮತ್ತು ತೆಪ್ಪಗಳ ಯಾಂತ್ರೀಕರಣಕ್ಕೆ ಒತ್ತು ಇತ್ಯಾದಿಗಳನ್ನು ಪ್ರಸ್ತಾಪಿಸಲಾಗಿದೆ.

**ಕೃಷಿ ಮಾರುಕಟ್ಟೆ ಮತ್ತು ಬೆಲೆ :** ಈ ವಿಭಾಗದ ಕಾರ್ಯನಿರ್ವಹಣೆ, ಬೆಲೆಗಳ ಏರಿಳಿತಗಳಿಂದ ರೈತನ ಆರ್ಥಿಕ ಸ್ಥಿತಿಯಲ್ಲಿ ಏರುಪೇರುಗಳನ್ನು ಹದಕ್ಕೆ ತರಲು ಸೂಕ್ತ ನೀತಿ ನಿಯಮ ನಿರೂಪಣೆ ಮತ್ತು ಅನುಷ್ಠಾನ, ಹಾಗು ಒದಗುವ ಸವಾಲುಗಳನ್ನು ಎದುರಿಸುವ ಬಗೆ, ಮಾರಾಟದ ಸರಕಿನ ದಾಸ್ತಾನುವ್ಯವಸ್ಥೆ ಹಾಗೂ ಮೂಲಭೂತ ಸೌಕರ್ಯಗಳನ್ನು ಹೆಚ್ಚಿಸಬೇಕಾದ ಅಗತ್ಯ, ಹಾಲಿ ಮಾರಾಟ ಕಾನೂನುಗಳ ಪುನರ್ ಪರಿಶೀಲನೆ, ಅಂತರಾಷ್ಟ್ರೀಯ ವ್ಯಾಪಾರ ವಹಿವಾಟು, ರೈತರಿಗೆ ಲಾಭದಾಯಕ ಮಾರುಕಟ್ಟೆ ಬೆಲೆ ವ್ಯವಸ್ಥೆ, ಮಾರಾಟ ಸಾಮರ್ಥ್ಯ ಹಾಗೂ ಪೂರಕ ಅನುಕೂಲಗಳು, ನಿವ್ವಳ ಕೃಷಿ ವರಮಾನ, ಮಾರಾಟ ಸಂಸ್ಥೆಗಳೊಡನೆ ಸಹಕಾರ ಸಂಬಂಧಗಳು ಕುರಿತೆಲ್ಲ ವಿವರಿಸಲಾಗಿದೆ. ಮುಖ್ಯ ಮಾರುಕಟ್ಟೆ, ಉಪ ಮಾರುಕಟ್ಟೆಗಳ ಸಂಖ್ಯೆ ಹಾಗೂ ವಹಿವಾಟು ಕುರಿತ ಚಟುವಟಿಕೆಯ ಚಿತ್ರ ನೀಡಿ, ಪ್ರಗತಿಯ ಹೆಜ್ಜೆಗಳ ಬಗ್ಗೆ ತಿಳಿಸಲಾಗಿದೆ. ಅಂತು ಮಾಹಿತಿಗಳಿವೆ. ಸಮರ್ಥನೆಗಳಿವೆ. ಆದರೆ ರೈತರ ಪಾತ್ರಗಳ ಬಗ್ಗೆ ಹೆಚ್ಚು ಒತ್ತು ಕಾಣದೆ, ಅವರ ಸ್ವಾವಲಂಬನ ಪ್ರಕ್ರಿಯೆಗೆ ಪರಿಶೀಲನೆಗೆ ಮತ್ತಷ್ಟು ಅವಕಾಶಗಳಾಗಬೇಕು ಎನಿಸುತ್ತದೆ.

**ನೀತಿಗಳ ನಿರೂಪಣೆ :** 1966 ರ ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಕಾಯ್ದೆಯ ಪುನರ್‌ಪರಿಶೀಲನೆ ಸುಧಾರಣೆ, ಸಣ್ಣಪುಟ್ಟ ಮಾರಾಟ ಕೇಂದ್ರಗಳನ್ನು ಸಾರ್ವಜನಿಕ ಹಾಗೂ ಖಾಸಗಿ ಸಹಭಾಗಿತ್ವದಲ್ಲಿ ಮಾಡುವುದು, ರೈತರ ಸರಕಿಗೆ ಸೂಕ್ತ ಬೆಲೆಯಾಗಿ ಒದಗಣೆ ಹಾಗೂ ಗ್ರಾಹಕರಿಗೆ ಗುಣಮಟ್ಟದ ಉತ್ಪನ್ನಗಳ ಒದಗಣೆ, ಮಾರಾಟದ ವಿಮಾ ಯೋಜನೆ ರೂಪಿಸುವಿಕೆ, ಸಗಟು ಮಾರಾಟಗಾರರು, ಸಂಸ್ಕರಣಾದಾರರು, ಚಿಲ್ಲರೆ ಮಾರಾಟಗಾರರು ರೈತರು ಇಲ್ಲವೇ ವ್ಯಾಪಾರಗಾರರಿಂದ ಮಾರಾಟಕೇಂದ್ರಗಳ ಉತ್ಪನ್ನಗಳನ್ನು ನೇರವಾಗಿ ಖರೀದಿಸುವ ರೂಢಿಯ ಹೆಚ್ಚುಗಾರಿಕೆ, ಹರಾಜು ನಡೆಸಲು ಅಗತ್ಯವಿರುವ ಮಳಿಗೆಗಳು, ಸಣ್ಣ ಪುಟ್ಟ ಮಾರಾಟಕೇಂದ್ರಗಳ ಸ್ಥಾಪನೆ, ವ್ಯವಸಾಯೋತ್ಪನ್ನ ಮಾರುಕಟ್ಟೆಗಳ ಜಾಲ ನಿರ್ಮಾಣ, ಬೆಲೆ ಕುಸಿತಗಳ ಮಾಹಿತಿಗಳ ವಿನಿಮಯ, ಅನುಕೂಲಕರ ಜಾಗಗಳಲ್ಲಿ ರೈತರು ಉತ್ಪನ್ನಗಳನ್ನು ಮಾರಾಟ ಮಾಡಲು ಪ್ರೋತ್ಸಾಹ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ರೈತರಿಗೆ ನೆರವಾಗುವಿಕೆ (ಸರಕಿನ ವರ್ಗೀಕರಣ, ಗುಣಮಟ್ಟ ನಿಯಂತ್ರಣ ಹಾಗು ಸುಧಾರಣೆ, ಮೌಲ್ಯವರ್ಧನೆ, ಪ್ಯಾಕಿಂಗ್ ಮುಂತಾದ ಸಂದರ್ಭಗಳಲ್ಲಿ) ಕೃಷಿ ಉತ್ಪನ್ನಗಳಿಗೆ ಕನಿಷ್ಠ ಬೆಂಬಲ ಬೆಲೆ ಯೋಜನೆ, ಕೇಂದ್ರ ಸರ್ಕಾರದಿಂದ ರಿವಾಲ್ವಿಂಗ್ ಹಣವನ್ನು (ಆವರ್ತ ನಿಧಿ ಸುತ್ತು ನಿಧಿ) ಮಾರ್ಕೆಟ್ ಇಂಟರ್‌ವೆನ್ಷನ್

ಸ್ಕೀಮ್ ಅನ್ನು ಬಲಪಡಿಸಲು ಬಳಕೆ, ಬೆಳೆ ಉತ್ಪನ್ನಗಳ ಸಂಗ್ರಹ, ವಿತರಣೆಗೆ ಸುವ್ಯವಸ್ಥಿತಿ ಜಾಲ ನಿರ್ಮಾಣ, ಗ್ರಾಮೀಣ ಮತ್ತು ಸಹಕಾರ ಗೋದಾಮುಗಳ ನಿರ್ಮಾಣ ಮಾರಾಟ ಸಾಲ ಸೌಲಭ್ಯ, ಗ್ರಾಮೀಣ ಭಂಡಾರ ಯೋಜನೆ, ಕೃಷಿ ಮಾರಾಟವಾಹಿನಿ ವೆಬ್ ಸೈಟ್ ಅನ್ನು ಮಾಹಿತಿ ತಂತ್ರಜ್ಞಾನಕ್ಕಾಗಿ, ಅನುಕೂಲದ ಸ್ಥಳಗಳಲ್ಲೆಲ್ಲಾ 'ರೈತರ ಸಂತೆ' ಗಳ ಸ್ಥಾಪನೆ (ಗ್ರಾಹಕರಿಗೆ ರೈತರ ಸರಕಿನ ನೇರ ಮಾರಾಟದ ಅನುಕೂಲ), ರೈತರ ಪ್ರತಿನಿಧಿಗಳ, ಪ್ರಗತಿಪರ ರೈತರು, ಸ್ವ-ಸಹಾಯ ಗುಂಪಿನ ಮುಂಖಂಡರಿಗೆ ಮಾರುಕಟ್ಟೆ ತಾಂತ್ರಿಕ ತರಬೇತಿಯನ್ನು ಕೃಷಿ ವಿಶ್ವವಿದ್ಯಾಲಯದಲ್ಲಿ ನೀಡುವುದು, ಕೃಷಿ ಮಾರಾಟ ವಿಸ್ತರಣೆ, ಕುರಿತೆಲ್ಲ ತೌಲನಿಕವಾಗಿ ವಿವರಿಸಲಾಗಿದೆ. ಅಂದರೆ ಪರಿಹಾರೋಪಾಯಗಳನ್ನು ಸಮಸ್ಯೆಗಳಿಗೆ ಸೂಚಿಸಿರುವ ಬಗ್ಗೆ ಗಮನಾರ್ಹವಾಗಿದೆ. ರೈತರಿಗೆ ಲಾಭದಾಯಕ ಬೆಳೆಗಳು ಸಿಗುವಂತೆ ಮಾಡಲು ಕನಿಷ್ಠ ಬೆಂಬಲ ಬೆಲೆಗಳತ್ತ ಸಾಗುವ ಕಾರ್ಯವಿಧಾನಗಳು ನವೀಕರಣಕೊಳ್ಳಬೇಕು ಎಂಬ ಸಲಹೆಗಳು ಇಲ್ಲಿವೆ. ಮಾರುಕಟ್ಟೆಯಲ್ಲಿ ರೈತರ ತೊಂದರೆ ತೊಡಕುಗಳನ್ನು ನಿವಾರಿಸಲು 'ಮಾರ್ಕೆಟ್ ಇಂಟರ್‌ವೆನ್‌ಷನ್'ಗೆ , ಶಾಶ್ವತ ವಾಹನವನ್ನು ಕಾದಿರಿಸಿರುವುದು ಒಂದು ಸೂಕ್ತ ಕ್ರಮವಾಗಿದೆ. ಕೃಷಿ ಆಡಳಿತ–ಇಂದಿನ ಪರಿಸ್ಥಿಯಲ್ಲಿ ವ್ಯಾಪಕ ಆಡಳಿತದಡಿಯಲ್ಲಿ, ಕೃಷಿ, ತೋಟಗಾರಿಕೆ, ಪಶುಪಾಲನೆ, ರೇಷ್ಮೆ, ಜಲಾನಯನ ಅಭಿವೃದ್ಧಿ, ಜಲಸಂಪನ್ಮೂಲ ಇಲಾಖೆಗಳು ಹಾಗೂ ಇತರ ಸ್ವಾಯತ್ತ ಮಂಡಳಿಗಳಿವೆ. ಈ ಇಲಾಖೆಗಳ ಸಮಾಂತರ ಸಮಗ್ರತೆ ಇರುವಂತೆ ಸೂಚಿಸಿರುವುದು ಗಮನಾರ್ಹ. ಇಲ್ಲಿನ ಕಾರ್ಯಕ್ರಮಗಳು ಕೇಂದ್ರೀಕರಿಸಿ ನಡೆಯುವಂಥದ್ದಾಗಿರಬೇಕು. ಎನ್ನಲಾಗಿದೆ. ಅನೇಕ ಕಾರ್ಯಕ್ರಮಗಳ ಸರಳೀಕರಣಕ್ಕಿಂತ ನಿರ್ದಿಷ್ಟಗೊಳಿಸಿದ ಕಾರ್ಯಕ್ರಮಗಳ ಗಟ್ಟಿತನದ ವಿಸ್ತರಣ ಸೂಕ್ತ ಎಂಬ ಅಭಿಪ್ರಾಯವೂ ಇದೆ. ರಾಜ್ಯಮಟ್ಟದಲ್ಲಿ ಸೀಮಿತಗೊಂಡಿರುವ ಇಲಾಖೆಗಳ ಕಾರ್ಯಕ್ರಮಗಳ ಜಿಲ್ಲೆ ಹಾಗೂ ಹೋಬಳಿ ಮಟ್ಟದಲ್ಲೂ ಸಮಗ್ರಗೊಳಿಸುವಂಥ ಸಂಯೋಜನಾ ಯಂತ್ರ ರೂಪುಗೊಳಿಸಬೇಕು. ಪ್ರತಿ ಇಲಾಖೆಗಳೂ ಸಮಿತಿಯನ್ನು ರೂಪಿಸಿ ರಾಜ್ಯದ ಕೃಷಿ ನೀತಿಯನ್ನು ಊರ್ಜಿತಗೊಳಿಸಬೇಕು, ಕಪ್ಪೆಕ್‌ನೊಂದಿಗೆ, ಕೇಂದ್ರ ಹಣಕಾಸು ಮಂತ್ರಿ ಮಂಡಲದೊಂದಿಗೆ ಸಂಪರ್ಕ, ಕೃಷಿ ಬೆಲೆ ಆಯೋಗಕ್ಕೆ ಶಾಶ್ವತ ಅಸ್ತಿತ್ವ ನೀಡುವುದು, ರೈತರಿಂದ ಸತತವಾಗಿ ಮಾಹಿತಿ ಸಂಗ್ರಹ ಹಾಗೂ ನೀತಿ ನಿರೂಪಣೆಗೆ ಸಹಕಾರಿಯಾಗಿರಲು ಶಾಶ್ವತ ಕೃಷಿ ಆಯೋಗ ಸದಸ್ಯತ್ವ ಸ್ಥಾಪನೆ, ಕರ್ನಾಟಕ ವಹಿವಾಟು ಪ್ರಾಧಿಕಾರದ ಸ್ಥಾಪನೆ, ರಾಷ್ಟ್ರೀಯ ಮಾರಾಟದಲ್ಲಿ ಆಗುವ ಬದಲಾವಣೆಯ ಬಗ್ಗೆ ಗಮನ ರಾಜ್ಯದ ಹಿತಾಸಕ್ತಿ ನಿರ್ವಹಣೆಯ ಬಗೆಗೆಲ್ಲ ಕೃಷಿ

ಆಡಳಿತ ಶೀರ್ಷಿಕೆಯಡಿಯಲ್ಲಿ ನಮೂದಿಸಲಾಗಿದೆ. ಇವೆಲ್ಲ, ರೈತ ಹಾಗೂ ಕೃಷಿ ಸಂಬಂಧಿ ಇಲಾಖೆಗಳ, ಸ್ವಾಯತ್ತ ಸಂಸ್ಥೆಗಳ ನಡುವಣ ಸಂಪರ್ಕಗಳನ್ನು ಬೆಸೆಯುವ ಪ್ರಯತ್ನವಾಗಿ ಕಾಣುತ್ತವೆ. ಇವುಗಳ ಅನುಷ್ಠಾನ ಸೂಕ್ತವಾಗಿ ಚಾಲನೆಗೊಂಡರೆ, ಸತತ ಉಸ್ತುವಾರಿ (follow up) ನಡೆದರೆ, ಅರ್ಥಪೂರ್ಣವಾಗುತ್ತದೆ. ವಿಕೇಂದ್ರಿಯ ಆಡಳಿತದ ಸ್ವರೂಪವು ಮೂರು ಹಂತಗಳಲ್ಲಿ ನಮ್ಮಲ್ಲಿ ಭಾರತದ ಸಂವಿಧಾನದ ಅಧಿನಿಯಮ 243ರ ಪ್ರಕಾರ ಚಾಲನೆಯಲ್ಲಿದೆ. ಗ್ರಾಮ ಪಂಚಾಯಿತಿಗಳು ಸ್ವಯಂ ಆಡಳಿತ ಹೊಂದಿದ್ದು, ರೈತನ ಹಿತಾಸಕ್ತಿಗೆ ಅನುವಾಗುವಂತೆ ಇವೆ. ಆಡಳಿತದ ಸಂಪರ್ಕ ನಿಕಟವಾಗುವಂತಿದೆ. ಅಂದರೆ ಫಲಾನುಭವಿಗಳ ಸ್ವಯಂ ಪಾಲುದಾರಿಕೆಗೆ ಅವಕಾಶವಿಲ್ಲಿದೆ. ಈ ಹಿನ್ನೆಲೆಯಲ್ಲಿ ಗ್ರಾಮಪಂಚಾಯತ್ ಮಟ್ಟದಲ್ಲಿ ಬೆಳೆ ಯೋಜನೆ, ಚರ್ಚೆ, ಪ್ರದರ್ಶನ, ಬೆಳೆಯ ಬೆಲೆಗಳ ಮಾಹಿತಿ ಒದಗಿಸುವಿಕೆ; ಗೋದಾಮು ನಿರ್ವಹಣೆ, ರೈತರು ಸರಕುಗಳನ್ನು ಹೊಸತಾಂತ್ರಿಕತೆಯ ಪ್ರದರ್ಶನ, ಪ್ರಾತ್ಯಕ್ಷಿತೆ ತಾಕುಗಳ ನಿರ್ವಹಣೆ, ಬೆಳೆ ಬೆಲೆಗಳ ಮಾಹಿತಿಗಳ ಗಣಕಯಂತ್ರ ಕ್ರೋಢೀಕರಣ, ಸಾರ್ವಜನಿಕ ಹಾಗೂ ಖಾಸಗಿಯವರ ಪರಸ್ಪರ ಸಹಭಾಗಿತ್ವ, ಕುರಿತೆಲ್ಲ ಹೇಳಲಾಗಿದೆ.

2006 ನೇ ಸಾಲಿನ ಕೈಗಾರಿಕೆ ಹಾಗೂ ಕೃಷಿ ವಿಭಾಗಗಳಿಗೆ ನಿಧಿ ಪ್ರೋತ್ಸಾಹ ಹಾಗೂ ರಿಯಾಯಿತಿ ಕುರಿತು ನೀಡಿರುವ ಪಟ್ಟಿಯಲ್ಲಿ ತೌಲನಿಕ ಅಂಕಿ ಅಂಶಗಳಿದ್ದು ರೈತರು ಹಾಗೂ ವರ್ತಮಾನದ ಬದುಕಿನ ಮಗ್ಗಲುಗಳೊಡನೆಯು ಸಂಪರ್ಕ ಹಾಗು ಪರಿಣಾಮಗಳು, ಕುರಿತೆಲ್ಲ ಹೇಳಲಾಗಿದೆ. ಕೈಗಾರಿಕೆಗಿಂತ ಕೃಷಿವಿಭಾಗಕ್ಕೆ ಒತ್ತುಕೊಟ್ಟಿರುವುದನ್ನು ಎತ್ತಿ ತೋರಿಸಿದಂತೆ ಇದೆ. ಆದರೆ ವಾಸ್ತವದಲ್ಲಿ ರೈತರಿಗೆ ಇವೆಲ್ಲ ಎಷ್ಟು ಫಲಾನುಭವವನ್ನು ತಂದಿವೆ ಎಂಬುದರ ವಿಶ್ಲೇಷಣೆಯು ರೈತವೇದಿಕೆಯೊಡನೆ ನಡೆಯಬೇಕು.

ಈ 2006 ಕೃಷಿ ನೀತಿ ಕುರಿತು ಟೀಕೆ, ಪ್ರತಿಭಟನೆಗಳೂ ವ್ಯಕ್ತವಾಗಿವೆ. ಕೃಷಿ ನೀತಿಯ ಮುಖ್ಯಲಕ್ಷಣಗಳಿಗೆ ಸ್ವಾಗತಗಳೂ ವ್ಯಕ್ತವಾಗಿವೆ.

16.12.06 ಗುರುವಾರದಂದು ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಹೆಚ್.ಡಿ.ಕುಮಾರಸ್ವಾಮಿಯವರು ಬಿಡುಗಡೆಮಾಡಿದ ಕರ್ನಾಟಕದ ಕೃಷಿ ನೀತಿಯ ಮುಖ್ಯಾಂಶಗಳು ಮೇಲಿನಂತಿವೆ. ಕೃಷಿ ಉತ್ಪಾದನೆ ಹತ್ತು ವರ್ಷಗಳಲ್ಲಿ ದ್ವಿಗುಣಗೊಳ್ಳಬೇಕು ಎಂಬುದು ಕೃಷಿ ನೀತಿಯ ಹುರುಳು. ರೈತರ ಅಭ್ಯುದಯಕ್ಕೆ 'ಪಂಚಸೂತ್ರ' ವೆಂದು ಮಣ್ಣಿನ ಆರೋಗ್ಯ ನಿರ್ವಹಣೆ; ಸೂಕ್ತ ನಿರಾವರಿ ಹಾಗೂ

ಸಂಪನ್ಮೂಲಗಳ ರಕ್ಷಣೆ; ಸಂಸ್ಕರಣೆ. ಉತ್ಪಾದನಾ ಪ್ರಕ್ರಿಯೆಯಲ್ಲಿ ಸಮನ್ವಯ ತರುವುದು; ತಂತ್ರಜ್ಞಾನದ ಪ್ರಯೋಗಾಲಯ ಮತ್ತು ಕೃಷಿ ಕ್ಷೇತ್ರಗಳ ನಿಕಟತೆ; ರೈತರಿಗೆ ಸಕಾಲಿಕ ಸಾಲ ಸೌಲಭ್ಯ ಮತ್ತು ಪರಿಕರಗಳ ಲಭ್ಯತೆ ಎಂಬ ಘಟಕಗಳಲ್ಲಿ ನಮೂದಿಸಿರುವುದು ಕಾಣುತ್ತದೆ. ರೈತ ಕುಟುಂಬದ ಆದಾಯ ಹೆಚ್ಚಿಸಬೇಕು (ಕನಿಷ್ಠ ಶೇ.3 ರಷ್ಟು), ರೈತ ಕೇಂದ್ರೀಕೃತ ನೀತಿಯಾಗಿ ಇವು ಚಾಲನೆಗೊಳ್ಳಬೇಕು, ಎಂಬ ಆಶಯವಿಲ್ಲಿದೆ. ಬೆಳೆಪದ್ಧತಿಯನ್ನು ವಲಯವಾರು ವಿಂಗಡಿಸಿ ಪ್ರಾದೇಶಿಕ ವಿಭಿನ್ನ ಬೆಳೆ ಪದ್ಧತಿಗೆ ಅವಕಾಶ ಮಾಡಿ ಉತ್ತಮ ಆದಾಯವನ್ನು ನಿರೀಕ್ಷಿಸಲಾಗಿದೆ. ಹಿಂದುಳಿದ ತಾಲೂಕುಗಳಲ್ಲಿ ನಂಜುಂಡಪ್ಪ ವರದಿಯನುಸಾರ ಕೃಷಿ ಅಭಿವೃದ್ಧಿಗೆ ಗಮನ ಹರಿಸಲಾಗಿದೆ. ಅರೋರ ಸಮಿತಿಯ ಶಿಫಾರಸ್ಸುಗಳನ್ನು ಕೃಷಿ ವಲಯದ ಶಿಕ್ಷಣ ಸಂಶೋಧನೆಯಲ್ಲಿ ಕಾರ್ಯಗತಗೊಳಿಸುವುದು, ನೀರಾವರಿಯ ಪುನರುಜ್ಜೀವನವನ್ನು ನೀರು ಬಳಕೆದಾರರ ಸಂಘದ ಮೂಲಕ ಮಾಡುವುದು ಎಂದಿರುವಲ್ಲಿ ಗ್ರಾಮೀಣ ಮಟ್ಟದಲ್ಲಿ ಹೊಸ ಶೋಧಗಳ ಅಳವಡಿಕೆ ಹಾಗೂ ಸ್ಥಳೀಯರ ಪಾಲುದಾರಿಕೆಯಿಂದಾಗಿ ಯಶಸ್ವಿ ಹೊಣೆಗಾರಿಕೆಯ ಸಂತೋಷ ಒದಗುವಂತಾಗಿದೆ.

ರೈತರ ಆತ್ಮಹತ್ಯೆಗೆ ಸಾಲದ ಬಾಧೆಯೆ ಪ್ರಮುಖವಾಗಿ ಕಾಣಬರುವ ಕಾರಣ ಕಡಿಮೆ ಬಡ್ಡಿದರದಲ್ಲಿ ಸಾಲ ವ್ಯವಸ್ಥೆ ಕಲ್ಪಿಸಲು ಸಲಹೆಗಳು ಮಂಡಿತವಾಗಿವೆ. ಅಂದರೆ ರೈತರ ಆರ್ತನಾದ ಸಮಾಜದ ಎಲ್ಲ ವಲಯಗಳಿಗೆ ಕೇಳಿಸಿದ ಕುರುಹು ಇದಾಗಿದೆ. ಆದರೆ ಇಷ್ಟಾಗಿಬಿಟ್ಟರೆ ರೈತರ ಆತ್ಮಹತ್ಯೆ ನಿಲ್ಲಬಲ್ಲುದೆ? ಎಂಬ ಪ್ರಶ್ನೆಯೂ ಇದೆ ದಿಟ. ಪ್ರಯತ್ನವಂತು ಮಾಡಿರುವುದಲ್ಲದೆ. ಯಶಸ್ವಿ ಮುಂದಿನ ಘಟನೆಗಳಿಂದ ತಾರ್ಕಣೆಗೊಳ್ಳಬೇಕಷ್ಟೆ. ಕೃಷಿಕೂಲಿಕಾರರು ಮತ್ತು ಬಡತನದ ರೇಖೆಯ ಕೆಳಗಿರುವವರಿಗೆ ಸುವರ್ಣ ಸುರಕ್ಷಾ ಯೋಜನೆ ಮೂಲಕ ಅವರ ಆರೋಗ್ಯ ರಕ್ಷಣೆಗೆ ಗಮನ ಹಾಗೂ ಕೃಷಿ ಸಂಸ್ಕರಣಾ ಕ್ಷೇತ್ರಕ್ಕೆ ಆದ್ಯತೆ ನೀಡುವಲ್ಲಿ ಉದ್ಯೋಗ ಲಭ್ಯತೆಗೆ ಕಾರಣವಾಗುವ ಅಂಶವನ್ನು ಗಮನಿಸಲಾಗಿದೆ.

ಗ್ರಾಮೀಣ ಕೃಷಿ ಮತ್ತು ಕೃಷಿಯೇತರ ಕ್ಷೇತ್ರದಲ್ಲಿ ಬಂಡವಾಳ ಹೂಡಿಕೆ; ರೈತ ಕುಟುಂಬದ ಮಾಹಿತಿಯುಳ್ಳ ರೈತಮಿತ್ರ ಪುಸ್ತಕದ ಹಂಚಿಕೆ; ಮಣ್ಣಿನ ಆರೋಗ್ಯ ಸುಧಾರಣೆ–ನಿರ್ವಹಣೆ; ಬರ ಉಸ್ತುವಾರಿ ಘಟಕ ಸ್ಥಾಪನೆ; ಪ್ರಗತಿಪರ ರೈತರ ಕೃಷಿಕ್ಷೇತ್ರ ಸೀಮಿತ ಒಕ್ಕೂಟ ಸ್ಥಾಪನೆ; ಕೃಷಿ ಶಿಕ್ಷಣದ ಚಾಲನೆ; ಜೈವಿಕ ಇಂಧನ ಸಸ್ಯಗಳ ಬೆಳವಣಿಗೆಗೆ ಪ್ರೋತ್ಸಾಹ; ಉತ್ತರ ಕರ್ನಾಟಕದಲ್ಲಿ ಕೃಷಿ ಆಯೋಗದ

ರಚನೆ; ಕರ್ನಾಟಕ ವಾಣಿಜ್ಯ ಪ್ರಾಧಿಕಾರ ರಚಿಸಿ 'ಕಪೆಕ್'ನೊಡನೆ ಸಂಪರ್ಕ ಸೃಷ್ಟಿ; ಕೃಷಿ ತಂತ್ರಜ್ಞಾನ ಪಾರ್ಕ್ ಸ್ಥಾಪನೆ, ಫುಡ್‌ಪಾರ್ಕ್‌ಗಳ ಸ್ಥಾಪನೆ; ಗ್ರಾಮಪಂಚಾಯತಿಯಲ್ಲಿ ಮಳೆ ಮಾಪನ ಕೇಂದ್ರ ಸ್ಥಾಪನೆ; ಕೃಷಿ ಆವರ್ತ ನಿಧಿ ಹೆಚ್ಚಿಸಿ ಕೇಂದ್ರ ಸರ್ಕಾರದಿಂದಲೂ ಪಾಲುಪಡೆಯುವುದು ಇತ್ಯಾದಿ ಪ್ರಮುಖ ವಿಷಯಗಳು ರೈತರ ಸಂಕಷ್ಟಗಳನ್ನು ದೂರ ಮಾಡುವಂಥ ಕೃಷಿ ನೀತಿ ನಮ್ಮದಾಗಿದೆ ಎಂದು ರಾಜ್ಯ ಸರ್ಕಾರಕ್ಕೆ ವಿಶ್ವಾಸ ತುಂಬಿಕೊಂಡು ಹೇಳಿದೆ.

ಕೃಷಿ ನೀತಿ ಬಿಡುಗಡೆ ಮಾಡಿದ ಮಾನ್ಯ ಮುಖ್ಯಮಂತ್ರಿಗಳಾದ ಹೆಚ್.ಡಿ.ಕುಮಾರ್‌ಸ್ವಾಮಿ ಅವರು, ರೈತರು ಆತ್ಮಹತ್ಯೆ ಮಾಡಿಕೊಳ್ಳುವುದನ್ನು ಸಂಪೂರ್ಣವಾಗಿ ನಿಲ್ಲಿಸಬೇಕು; ಬರಗಾಲದ ಹಿನ್ನೆಲೆಯಲ್ಲಿ ರೈತರು ಆರ್ಥಿಕ ಸಂಕಷ್ಟಕ್ಕೆ ಸಿಲುಕಿ ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ. ಇದನ್ನು ಸಂಪೂರ್ಣವಾಗಿ ನಿಲ್ಲಿಸಲು ಕಾರ್ಯಕ್ರಮ ಹಮ್ಮಿಕೊಳ್ಳಲಾಗುವುದು. ಸರ್ಕಾರ ಪ್ರಕಟಿಸಿರುವ ಕೃಷಿ ನೀತಿ ಈ ದಿಸೆಯಲ್ಲಿ ಮಾರ್ಗದರ್ಶಕವಾಗಿದೆ. ನೀರಿನ ಬಳಕೆ, ಬೆಳೆಪದ್ಧತಿ ಬಗ್ಗೆ ರೈತರು ಇಂದಿನ ಜ್ಞಾನದ ಹಿನ್ನೆಲೆಯಲ್ಲಿ ಚಿಂತಿಸಬೇಕು. ಕೃಷಿ ಬೆಳವಣಿಗೆ ದರವನ್ನು ಶೇ.4.5ಕ್ಕೆ ಏರಿಸುವ ಗುರಿ ಸರ್ಕಾರದ್ದು ಎಂದು ಪತ್ರಿಕಾ ಗೋಷ್ಠಿಯಲ್ಲಿ ಹೇಳಿದ್ದರೆ. ಮಾನ್ಯ ಉಪಮುಖ್ಯಮಂತ್ರಿ ಶ್ರೀ. ಬಿ.ಎಸ್.ಯಡಿಯೂರಪ್ಪ ಅವರು ರೈತರಿಗೆ ಶೇ.4ರ ಬಡ್ಡಿದರದಲ್ಲಿ ಸರ್ಕಾರ ಸಾಲ ನೀಡುತ್ತಿದೆ. ರೈತರಿಗೆ ಎತ್ತಿನ ಗಾಡಿ ಖರೀದಿಸಲೂ ಸಾಲ ನೀಡುವ ವಿಶಿಷ್ಟ ಯೋಜನೆಯು ದೇಶದಲ್ಲಿ ಮೊದಲ ಬಾರಿಗೆ ನಮ್ಮಲ್ಲಿ ಆರಂಭಿಸಲಾಗಿದೆ. ಬೀಜ ಖರೀದಿಯ ಮೇಲೆ ಶೇ.75 ರಷ್ಟು ಸಬ್ಸಿಡಿ ನೀಡಲಾಗುತ್ತಿದೆ ಎಂದಿದ್ದಾರೆ.

ಈ ಕೃಷಿ ನೀತಿ ಸಂಬಂಧ ಬಂದ, ಪ್ರತಿಕ್ರಿಯೆಗಳೂ ವಿವಿಧ ತೆರನಾಗಿವೆ. ರೈತ ಸಂಘಟನೆಗಳು ಬೆಂಗಳೂರಿನಲ್ಲಿ ರಾಜ್ಯದ ನೂತನ ಕೃಷಿ ನೀತಿ ಕುರಿತು ಚರ್ಚಿಸಲು ಸಭೆಯೊಂದನ್ನು 28.12.2006ರಂದು ಏರ್ಪಡಿಸಿದ್ದುವು. ದೇಶೀಯ ಕೃಷಿಯನ್ನು ಬಹುರಾಷ್ಟ್ರೀಯ ಮತ್ತು ಬಂಡವಾಳ ಶಾಹಿ ಕಂಪೆನಿಗಳಿಗೆ ಒಪ್ಪಿಸಲು ಸರ್ಕಾರದ ಕೃಷಿನೀತಿಯಾಗಿದೆ. ಕೃಷಿ ಉತ್ಪಾದನೆ ಕುಸಿಯಲು ಕಾರಣಗಳನ್ನು ಗುರುತಿಸಬೇಕಿತ್ತು. ಭೂಹೀನರಿಗೆ ಭೂಹಂಚಿಕೆ ವಿಷಯದ ಬಗ್ಗೆ ಪ್ರಸ್ತಾಪವೇ ಇಲ್ಲ. ರೈತರ ಆತ್ಮಹತ್ಯೆಗೆ ಕಾರಣಗಳ ಬಗ್ಗೆ ನಿರ್ದಿಷ್ಟ ಸಮೀಕ್ಷೆ ನಡೆಸಬೇಕೆಂಬ ಡಾ. ಸ್ವಾಮಿನಾಥನ್ ಸಮಿತಿ ವರದಿ ಬಗ್ಗೆ ಚಕಾರ ವೆತ್ತಿಲ್ಲ. ಬಹುರಾಷ್ಟ್ರೀಯ ಕಂಪೆನಿಗಳಿಗೆ ಕೃಷಿ ಆಯೋಗ ಸರ್ಕಾರಿ ಭೂಮಿಯನ್ನು ಗುತ್ತಿಗೆ ನೀಡಿ ಕೃಷಿ

ಕಂಪೆನೀಕರಣಕ್ಕೆ ಅವಕಾಶ ಮಾಡಲಾಗಿದೆ. ಶೇ.4ರ ಬಡ್ಡಿದರದ ಕೃಷಿ ಸಾಲಸೌಲಭ್ಯ 5 ಲಕ್ಷ ಜನರಿಗಲ್ಲದೆ ಎಲ್ಲರಿಗೂ ದಕ್ಕಿಲ್ಲ, ಎಂದೆಲ್ಲ ರೈತರು, ಕೃಷಿಕೂಲಿಕಾರರು ದಲಿತ ಸಂಘಟನೆಗಳ ಮುಖಂಡರು ಸಮಾವೇಶಗೊಂಡಿದ ಸಭೆಯಲ್ಲಿ ಅಭಿಪ್ರಾಯಗಳು ವ್ಯಕ್ತವಾದುದು ವರದಿಗೊಂಡಿದೆ: ಸರ್ಕಾರದ ಕೃಷಿ ನೀತಿಯಲ್ಲಿ ಐ ಎಂ ಎಫ್– ವಿಶ್ವಬ್ಯಾಂಕ್ ನಿರ್ದೇಶಿತ ನೀತಿಗಳೇ ಮುಂದುವರಿದಿದೆ ಎಂಬ ಅಭಿಪ್ರಾಯವೂ ಸಭೆಯಲ್ಲಿ ವ್ಯಕ್ತವಾಯಿತು. ಸರ್ಕಾರದ ಕೃಷಿ ನೀತಿಯನ್ನು ಖಂಡಿಸಿ ಜ.11 ರಂದು ರಾಜ್ಯವ್ಯಾಪ್ತಿ ಪ್ರತಿಭಟನೆಯನ್ನು ನಡೆಸಲೂ ನಿರ್ಣಯವಾಯಿತು.

ಕರ್ನಾಟಕ ರಾಜ್ಯ ರೈತ ಸಂಘದ ಅಧ್ಯಕ್ಷ ಶ್ರೀ ಕೆ.ಎಸ್. ಪುಟ್ಟಣ್ಣಯ್ಯ ಅವರು, ರೈತರಿಗೆ ನೀಡುವ ಸಾಲದ ನೀತಿ ಬದಲಾಗಬೇಕು; ಎಟಿಎಂ ಕಾರ್ಡ್ ಮಾದರಿಯಲ್ಲಿ ರೈತರಿಗೆ ಎಟಿಎಂ ಕಾರ್ಡ್ (ಎನಿಟೈಮ್ ಲೋನ್ ಕಾರ್ಡ್) ಅನ್ನು ತುರ್ತು ಸಂದರ್ಭದಲ್ಲಿ ಬಳಸಲು ಕೊಡಬೇಕು; ರೈತರು ಖಾಸಗಿ ಸಾಲಕ್ಕೆ ತೆರಳುವುದನ್ನು ಇದರಿಂದ ನಿಲ್ಲಿಸಲು ಸಾಧ್ಯವಾಗಬೇಕು; ಸಾಹಿತ್ಯ ಸಮ್ಮೇಳನದಲ್ಲಿ ರೈತರ ಆತ್ಮ ಹತ್ಯೆ ತಡೆಗೆ ಸರ್ಕಾರವನ್ನು ಒತ್ತಾಯಿಸುವ ನಿರ್ಣಯ ಅಂಗೀಕರಿಸಬೇಕಿತ್ತು. ಆತ್ಮಹತ್ಯೆ ಮಾಡಿಕೊಳ್ಳುವ ಮುನ್ನ ಸ್ಥಳೀಯ ರೈತ ಸಂಘವನ್ನು ಸಂಪರ್ಕಿಸಲು ರೈತರಲ್ಲಿ ನನ್ನ ಮನವಿ ಇದೆ. ಈ ಬಗ್ಗೆ ಮಾತುಕತೆಗೆ ಸರ್ಕಾರ ರೈತರನ್ನು ರೈತ ನಾಯಕರನ್ನು ಕರೆಸಬೇಕು. ಜನವರಿ 30 ರಿಂದ ರೈತ ಪರ ಚಳುವಳಿ ಆರಂಭಿಸಲಿದ್ದೇವೆ, ಎಂದೆಲ್ಲ ಅಭಿಪ್ರಾಯವನ್ನು ತಿಳಿಸಿದ್ದಾರೆ. ರಾಜ್ಯ ರೈತ ಸಂಘದ ಇನ್ನೋರ್ವ ನಾಯಕರಾದ ಶ್ರೀ ಕೋಡಿಹಳ್ಳಿ ಚಂದ್ರಶೇಖರ್ ವಿವಿಧ ಪತ್ರಿಕಾ ಮೂಲಗಳಿಂದ ಹೇಳಲಾಗಿದೆ. ಅವರು, ಬೆಳೆ ಮತ್ತು ಬೆಲೆ ನಷ್ಟದಿಂದ ರೈತ ಕಂಗಾಲಾಗಿದ್ದಾನೆ. ಕೃಷಿ ವೆಚ್ಚ ಮಕ್ಕಳ ವಿದ್ಯಾಭ್ಯಾಸ ನಿತ್ಯದ ಬದುಕಿಗೆ ಆದಾಯದ ಕೊರತೆಯಿಂದಾಗಿ ಹಣ ಸಾಲದ ಸಾಲದ ಬಲೆಗೆ ಸಿಕ್ಕಿದ್ದಾನೆ. ರೈತರ ಸಾಲ 30 ಸಾವಿರ ಕೋಟಿ ರೂ. ಇದ್ದು ಮನ್ನಾ ಮಾಡದೆ ಕೈಗಾರಿಕೋದ್ಯಮಗಳ 1 ಲಕ್ಷ 50 ಸಾವಿರ ಕೋಟಿ ರೂ. ಸಾಲ ರದ್ದು ಪಡಿಸುವಲ್ಲಿ ಸರ್ಕಾರಕ್ಕೆ ಮೃದು ಧೋರಣೆ ಇದೆ. ರೈತರಿಗೆ ಪರಿಹಾರ ನೀಡುವುದರಿಂದ ಆತ್ಮಹತ್ಯೆ ಹೆಚ್ಚುತ್ತದೆ ಎಂಬ ವಾದದಲ್ಲಿ ಹುರಳಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತ ಮಾಡಿದ್ದಾರೆ. ಕರ್ನಾಟಕ ಪ್ರಾಂತ ರೈತ ಸಂಘದ ನಾಯಕರಾದ ಶ್ರೀ ಜಿ.ಸಿ ಬಯ್ಯಾರೆಡ್ಡಿ ಅವರು ರಾಜ್ಯದ ಹೊಸ ಕೃಷಿ ನೀತಿಯಲ್ಲಿ ಸಂಜೀವಿನಿ ಕಾಣುವುದಿಲ್ಲ. **ಸರ್ಕಾರದ ಶೇ 4** ಬಡ್ಡಿದರದ ಸಾಲ ಕೇವಲ ಶೇ 23 ರೈತರಿಗೆ ಮಾತ್ರ ಲಭ್ಯವಾಗಿದೆ. ಸಾಲ ಮನ್ನಾ ಸ್ವಾಗತಾರ್ಹ ಕ್ರಮ, ಆದರೆ ಅವು ಶ್ರೀಮಂತರಿಗಷ್ಟೆ ಅನುಕೂಲವಾಗಲಿದೆ. ರಾಜ್ಯದಲ್ಲಿ

ಸಮಗ್ರ ಭೂಸುಧಾರಣೆ ಆಗಬೇಕು 62 ಲಕ್ಷ ದಷ್ಟಿರುವ ಕೃಷಿ ಕೂಲಿಗಾರರಿಗೂ ಪರಿಹಾರ ದೊರೆಯಬೇಕು ಎಂದು ಹೇಳಿ ರೈತರ ಮನವಿ ಸ್ವೀಕರಿಸಬೇಕೆಂದು ವಿಧಾನ ಸೌಧದ ಮುಂದೆ ಪ್ರದರ್ಶನ ನಡೆಸುವ ನಿರ್ಧಾರವನ್ನು ಪ್ರಕಟಿಸಿದರು (1.1.07)

ಕರ್ನಾಟಕ ರಾಜ್ಯದ ಹೊಸ ನೀತಿಯು ವಾಸ್ತವವನ್ನರಿಯದ ಪಂಡಿತ ಚರ್ಚೆಗಷ್ಟೆ ಲಾಯಕ್ಕಾಗಿರುವಂತಿದೆ. ಬೆಲೆ ಕುಸಿತ ಸಾಲಬಾಧೆ ಕೃಷಿ ಮೂಲ ಪರಿಕರಗಳ ದುಬಾರಿ ಬೆಲೆ, ಬೆಳೆವಿಮೆ, ವಿಶೇಷ ಕಾಲದ ಸಂದರ್ಭದಲ್ಲಿ ರೈತ ಕುಟುಂಬದ ಸಮಗ್ರ ರಕ್ಷಣಾ ಕ್ರಮವಿಲ್ಲದಿರುವುದು, ಕೃಷಿ ಕೂಲಿಗಾರರಾದ ಸಣ್ಣ ರೈತರಿಗೆ ಕನಿಷ್ಟ. ಕೂಲಿ ಜಾರಿಗೊಳ್ಳದಿರುವುದು, ಸಮಗ್ರ ಕೃಷಿ ನೀತಿ ರಾಷ್ಟ್ರದ ಎಲ್ಲ ರಾಜ್ಯಗಳಿಲ್ಲಿ ಕಡ್ಡಾಯ ಜಾರಿ ಇಲ್ಲದಿರುವುದು, ಕಳಪೆ ಬೀಜವನ್ನು ನಂಬಿ ಬಳಸಿ ಬೆಳೆ ವಿಫಲವಾಗುವುದು, ಇತ್ಯಾದಿಗಳು ರೈತರ ಜೀವಕ್ಕೆ ಎರವಾಗಿವೆ. ಹೀಗಾಗಿ ಸಮಗ್ರ ಭೂಸುಧಾರಣೆ ಜಾರಿಗೆ ತಂದು ಕೃಷಿ ಕೂಲಿಗಾರರು ಹಾಗು ಬಡರೈತರಿಗೆ ಭೂಮಿಯನ್ನು ಹಂಚಬೇಕು. ಕೃಷಿ ಕೇತ್ರದಲ್ಲಿ ಸರ್ಕಾರ ತನ್ನ ಹೂಡಿಕೆಯನ್ನು ಹೆಚ್ಚಿಸಿ ನೀರಾವರಿ ವಿದ್ಯುತ್ ವಿಜ್ಞಾನ ತಂತ್ರಜ್ಞಾನ ಹಾಗು ಮೂಲಭೂತ ಸೌಕರ್ಯಗಳನ್ನು ವಿಸ್ತರಿಸಬೇಕು. ಅಗತ್ಯ ಸಬ್ಸಿಡಿಯನ್ನು ಕೃಷಿ ಉತ್ಪಾದನೆಗೆ ಕೊಟ್ಟು ಸಣ್ಣ ಮತ್ತು ಅತಿ ಸಣ್ಣ ರೈತರ ಹಿತ ಕಾಪಾಡಬೇಕು. ಸಮಗ್ರ ಬೆಳೆ ವಿಮಾ ಯೋಜನೆಯನ್ನು ಜಾರಿಗೆ ತರಬೇಕು. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯನ್ನು ದೇಶಾದ್ಯಂತ ಸಮರ್ಪಕವಾಗಿ ಜಾರಿಗೆ ತರಬೇಕು, ಎಂಬ ಅಭಿಪ್ರಾಯಗಳು ಆರ್. ಜಯಕುಮಾರ್ ಅವರದಾಗಿವೆ. (1.1.07)

ರಾಜ್ಯದ ಕೃಷಿ ರಂಗದ ಅಭಿವೃದ್ಧಿಗೆ ಸರ್ಕಾರವು ತುಂಬಾ ಮಹತ್ವ ನೀಡುತ್ತದೆ ಎಂದು ಬಿಂಬಿಸಲು ಹೊಸ ಕೃಷಿನೀತಿಯನ್ನು ಬಿಡುಗಡೆ ಮಾಡುವ ಮೂಲಕ ಯತ್ನಿಸಿದೆ. ಕಳೆದ 20 ವರ್ಷದ ಅವಧಿಯಲ್ಲಿ ಕರ್ನಾಟಕದಲ್ಲಿ 30 ಸಾವಿರಕ್ಕೂ ಹೆಚ್ಚು ರೈತರ ಆತ್ಮಹತ್ಯೆ ನಡೆದಿದೆ. ಅತಿ ಸಣ್ಣ ರೈತರು ಭೂಮಿ ಕಳೆದುಕೊಂಡು ಕೃಷಿ ಕೂಲಿಗಳಾಗುತ್ತಿದ್ದಾರೆ. ಡಾ. ಎಂ ಎಸ್. ಸ್ವಾಮಿನಾಥನ್ ಅವರು ರೈತರ ಆತ್ಮಹತ್ಯೆಯ ಸಂಬಂಧ ಕೊಟ್ಟ ಸಲಹೆಗಳಿಗನುಗುಣವಾಗಿಯೆ ಕೃಷಿ ನೀತಿಯನ್ನು ರೂಪಿಸಲಾಗಿದೆ ಎಂದಿದೆ. ಆದರೆ ರೈತರ ಆತ್ಮ ಹತ್ಯೆಗಳ ವಿದ್ಯಮಾನವನ್ನು ಆಧ್ಯಯನಿಸಿದ ವಿವರ ಕೃಷಿ ನೀತಿಯಲ್ಲಿ ಕಂಡು ಬರುವುದಿಲ್ಲ. ಉದಾರೀಕರಣದ ನೀರಿಕ್ಷೆಗಳು ಕೃಷಿ ಕ್ಷೇತ್ರಕ್ಕೆ ಕಾಲಿಟ್ಟದಂದಿನಿಂದ ಕೃಷಿವಲಯಕ್ಕೆ ಸಬ್ಸಿಡಿಗಳ ಕಡಿತ ತುಟ್ಟಿಯಾಯಿತು. ವಿದೇಶ ಸರಕುಗಳು ನಮ್ಮ ಮಾರುಕಟ್ಟೆಗೆ ಲಗ್ಗೆ ಹಾಕಲಾರಂಭಿಸಿ ನಮ್ಮ ರೈತರ ಕೃಷಿ ಉತ್ಪನ್ನಗಳ ಬೆಲೆ ಕುಸಿತ ಕಂಡಿತು.

ರೈತ ದಿವಾಳಿಯಾಗುತ್ತ ಬಂದ. ಬೆಳೆ ಹಾನಿ, ಬೆಲೆ ಹಾನಿ, ಖಾಸಗಿ ದುಬಾರಿ ಬಡ್ಡಿ ಸಾಲಬಾಧೆ, ಮರ್ಯಾದೆಹಾನಿ ಈ ಕಾರಣ ಆತ್ಮಹತ್ಯೆಯೆ ಅವನು ಕಂಡುಕೊಂಡ ದಾರಿ. 1990ರ ದಶಕಾರ್ಧದ ನಂತರ ನಮ್ಮ ಕೃಷಿರಂಗದ ಸಾಧನೆ ಇಳಿಮುಖವಾಗಿದೆ. ಕೃಷಿ ಉತ್ಪಾದನೆ ಕುಸಿತ ಕಂಡಿದೆ. ಕಾರಣ ಭೂ ಹಂಚಿಕೆಯ ಸಂದರ್ಭಗಳಾಗಿವೆ. ಸದ್ಯದ ಕೃಷಿ ನೀತಿಯಲ್ಲಿ 12 ತಾಸುಗಳ ಗುಣಮಟ್ಟದ ವಿದ್ಯುತ್ ಪೂರೈಕೆಯ ಬಗ್ಗೆ ನೀರಾವರಿ ಪಂಪ್‌ಸೆಟ್ ರೈತರ ಬೇಡಿಕೆಗೆ ಉತ್ತರವಿಲ್ಲ. ಶೇ.4ರ ಬಡ್ಡಿದರದಲ್ಲಿ ರೈತರಿಗೆ ಸಾಲ ಎಂದು ಸರ್ಕಾರ ಹೇಳಿದರೂ ಸುಮಾರು 23 ಲಕ್ಷ ರೈತರು ಸಹಕಾರಿ ಬ್ಯಾಂಕ್ ಗ್ರಾಮೀಣ ಬ್ಯಾಂಕ್ ವ್ಯಾಪ್ತಿಗೆ ಬರುವವರು ಮಾತ್ರ ಅರ್ಹರು. ಶೇ.60ಕ್ಕೂ ಹೆಚ್ಚು ಜನ ಖಾಸಗಿ ಲೇವಾದೇವಿದಾರರನ್ನು ಅವಲಂಬಿಸಿರುವ ರೈತರ ಸ್ಥಿತಿ ಏನು? ರಿಯಾಯ್ತಿ ಬಡ್ಡಿದರದ ಸಾಲ ಎಷ್ಟು ಜನ ರೈತರಿಗೆ ಸಿಗುತ್ತದೆ ಎಂಬುದು ಸರ್ಕಾರ ಹೇಳಿಲ್ಲ. ರೈತರ ಒಟ್ಟು ಸಾಲದ ಬಗ್ಗೆ ಸರ್ಕಾರ ವಿವರವಾದ ಸಮೀಕ್ಷೆ ನಡೆಸಬೇಕೆಂದು ಡಾ.ಸ್ವಾಮಿನಾಥನ್ ಆಯೋಗದ ವರದಿಯಲ್ಲಿ ಹೇಳಿದ್ದರೂ ಅಂತಹ ಪ್ರಸ್ತಾವ ಈ ಕೃಷಿನೀತಿಯಲ್ಲಿಲ್ಲ. ಖಾಸಗಿ ಲೇವಾದೇವಿದಾರರನ್ನು ನಿಯಂತ್ರಿಸುವ ಪ್ರಸ್ತಾವ ಇಲ್ಲಿ ಕಾಣಬರುವುದಿಲ್ಲ. ರೈತರ ಬೆಳೆಗೆ ನ್ಯಾಯ ಬೆಲೆ ಸಿಗದೆ ಬೆಲೆ ಹಾನಿ ಆಗುತ್ತದೆ. ಮಾರುಕಟ್ಟೆ ಮಧ್ಯ ಪ್ರವೇಶಯೋಜನೆಯನ್ನು ಬಲಪಡಿಸುವ ಬಗ್ಗೆ ಕೃಷಿ ನೀತಿಯಲ್ಲಿ ಹೇಳಲಾಗಿದೆ. ಕೃಷ್ಯುತ್ಪನ್ನಗಳ ಬೆಲೆಗಳ ಏರಿಳಿತವನ್ನು ಸರಿದೂಗಿಸಲು 500 ಕೋಟಿ ರೂಪಾಯಿಯ ಆವರ್ತನಿಧಿ ಸ್ಥಾಪಿಸುವುದು ಭರವಸೆಯಾಗಿಯೇ ಉಳಿದಿದೆ. ಬೆಂಬಲ ಬೆಲೆ ನಿಗದಿಗೆ ಆಯೋಗ ರಚಿತವಾಗಿದ್ದರೂ ರೈತರ ಪ್ರಮುಖ ಕೃಷಿ ಉತ್ಪನ್ನಗಳಿಗೆ ಬೆಂಬಲ ಬೆಲೆ ಘೋಷಣೆ ಮಾಡಲು ಹಾಗೂ ಬೆಲೆ ಕುಸಿತದ ಸಮಯದಲ್ಲಿ ಬೆಂಬಲ ಬೆಲೆ ನೀಡಿ ಕೊಳ್ಳಲು ವಿಫಲವಾಗಿದೆ. ಕೃಷಿ ಕೆಲಸವನ್ನೆ ಅವಲಂಬಿಸಿರುವ ಬಹುಸಂಖ್ಯಾತ ಕೃಷಿ ಕೂಲಿಕಾರರಿಗೆ ನಗಣ್ಯರಾಗಿರುವಂಥ ಕೃಷಿನೀತಿ, ಸಮಗ್ರ ಕೃಷಿ ನೀತಿ ಎನಿಸಿದು. ಡಾ. ಸ್ವಾಮಿನಾಥನ್ ಅಯೋಗವು ಕೇಂದ್ರ ಸರ್ಕಾರಕ್ಕೆ ನೀಡಿದ ಯಾವುದೇ ಮುಖ್ಯ ಸಲಹೆಗಳು ಈ ಕೃಷಿ ನೀತಿಯಲ್ಲಿ ಅಳವಡಿಕೆಯಾಗಿದೆನ್ನುವಂತಿಲ್ಲ, ಎಂಬೆಲ್ಲ ಅಭಿಪ್ರಾಯಗಳನ್ನು ಶ್ರೀ ನಿತ್ಯಾನಂದ ಸ್ವಾಮಿ ಅವರು ತಮ್ಮ ಲೇಖನವೊಂದರಲ್ಲಿ ವ್ಯಕ್ತ ಮಾಡಿದ್ದಾರೆ (5.1.07)

*ಮಂಥನ: ಮೇಲಿನ ಅಭಿಪ್ರಾಯಗಳಲ್ಲಿ ಕೆಲವು ಗಮನಾರ್ಹವಾಗಿವೆ. ಸರ್ಕಾರದ ಕಾರ್ಯಾನುಷ್ಠಾನದಲ್ಲಿ ಇತಿಮಿತಿಗಳಿರಬಹುದು. ಆದರೆ ಅನೇಕ ಸಂದರ್ಭಗಳಲ್ಲಿ ಪ್ರಾಮಾಣಿಕ ಪ್ರಯತ್ನಗಳನ್ನೂ ಸರ್ಕಾರ ಮಾಡಿರುವುದು ಗಮನಕ್ಕೆ ಬರುತ್ತದೆ.*

*ಸರ್ವಕಾಲ ಸಾಲದ ಕಾರ್ಡ್ (ಎನಿಟೈಮ್ ಲೋನ್ ಕಾರ್ಡ್) ಒಂದು ಗಮನಾರ್ಹ ಸಲಹೆ. ಆದರೆ ಕೃಷಿನೀತಿಯಲ್ಲೂ ಸುಲಭವಾಗಿ ಸಾಲ ದೊರೆಯದೆ ಖಾಸಗಿ ವ್ಯಕ್ತಿಗಳಲ್ಲಿ ಹೆಚ್ಚು ಬಡ್ಡಿಗೆ ಒಳಗಾಗಿ ಹಿಂದಿರುಗಿಸಲಾಗದ ರೈತನ ದುಸ್ಥಿತಿಯನ್ನು ಮನಗಂಡು 'ಸಕಾಲಿಕ ಸಾಲಕ್ಕಾಗಿ ಯೋಜನೆ ರೂಪಿಸಿರುವ ಬಗ್ಗೆ ಹೇಳಿದೆ. ರೈತನಿಗೆ ಕೃಷಿ ಹಂಗಾಮಿನಲ್ಲಿ ಸಾಲದ ಪೂರ್ಣಹಣ ಒಮ್ಮೆಗೇ ಅಗತ್ಯವಾಗುವುದಿಲ್ಲ. ಆ ಕಾರಣ ವಿವಿಧ ಕೃಷಿ ಚಟುವಟಿಕೆಗಳಿಗನುಗುಣವಾಗಿ ಬಿಡುಗಡೆ ಮಾಡುವ ಬಗ್ಗೆ ಹಾಗೂ ಬಿಡುಗಡೆ ನಂತರ, ಪೂರ್ಣ ಉಪಯೋಗಿಸಿದ ನಂತರ ಬಡ್ಡಿಹಾಕುವ ಬಗ್ಗೆ ಹೇಳಲಾಗಿದೆ. ಸಹಕಾರ ಬ್ಯಾಂಕುಗಳಂತೆ ವಾಣಿಜ್ಯ ಬ್ಯಾಂಕುಗಳೂ ಶೇ.4ರ ಬಡ್ಡಿದರದಲ್ಲಿ ಸಾಲ ನೀಡುವ ಬಗ್ಗೆ ಆಯಾ ಅಧಿಕಾರಿಗಳೊಡನೆ ಚರ್ಚಿಸುವ ಬಗ್ಗೆ ಹೇಳಿದೆ. ಸಕಾಲ ಮತ್ತು ಸಾಕಷ್ಟು ಪ್ರಮಾಣದಲ್ಲಿ ಗುಡ್ಡಗಾಡು ಹಾಗು ಬಡತನ ರೇಖೆಯಲ್ಲಿರುವ ರೈತರಿಗೆ ನಿಧಿ ನೆರವು ಹಾಗೂ ರಿಯಾಯಿತಿ ಬದಲು ಅಗತ್ಯಕ್ಕನುಗುಣವಾಗಿ ಒದಗುವ ಸಾಲವ್ಯವಸ್ಥೆಯ ಬಗ್ಗೆ ಹೇಳಿದೆ. ಆದರೆ ಅಗತ್ಯತೆಯ ನಿರ್ಧಾರ ವಿಳಂಬವಾದರೆ ಕಷ್ಟ; ಹಾಗೂ ಯಾವುದೇ ಪಾರ್ಶ್ವ ಬಯಕೆಗಳಿಲ್ಲದೆ ಅನುಷ್ಠಾನಕ್ಕೆ ತರಬೇಕಾದವರ ಪ್ರಾಮಾಣಿಕ ನಿರ್ವಹಣೆ ಆ ವ್ಯವಸ್ಥೆಯಲ್ಲಿರಬೇಕಾಗುತ್ತದೆ. ಇನ್ನು ಬರಗಾಲದ ರೈತರ ಸಂಕಷ್ಟ ಸಮಯದ ಸಾಲ ಮರುಪಾವತಿ ಅವಧಿ ವಿಸ್ತರಣೆ, ಕೃಷಿ ಮರುಸಾಲವ್ಯವಸ್ಥೆಯ ಬಗ್ಗೆ ಹೇಳಿದೆ. ಜೊತೆಗೆ ಈಚೆಗಿನ ಸರ್ಕಾರದ ತೀರ್ಮಾನದಂತೆ ಎಲ್ಲ ರೈತರಿಗೂ ಎಷ್ಟೇ ಮೊತ್ತದ ಬೆಳೆ ಸಾಲ ಪಡೆದ ರೈತರಿಗೂ (ಮೊದಲು 50 ಸಾವಿರ ರೂ. ವರೆಗೆ ಬೆಳೆ ಸಾಲದ ರೈತರಿಗೆಂದಿತ್ತು) 2006 ಜನವರಿ 1 ರಿಂದ ಹಾಗೆ ಸಾಲ ಪಡೆದವರಿಗೂ 25 ಸಾವಿರ ರೂ.ಗಳ ಸಾಲ ಮನ್ನಾ ಸೌಲಭ್ಯವನ್ನು ಪ್ರಕಟಿಸಲಾಗಿದೆ. 2300 ಕೋಟಿ ರೂ. ಹೊರೆ ಸರ್ಕಾರದ ಮೇಲೆ ಬಿದ್ದರೂ 15.63 ಲಕ್ಷ ರೈತ ಕುಟುಂಬಗಳಿಗೆ ಸಾಲ ಮತ್ತು ಬಡ್ಡಿ ಮನ್ನಾ ಸೌಲಭ್ಯವು ದೊರಕಲಿದೆ. (3.5.07) ಮೇ 31 ರೊಳಗೆ ಅಸಲು ಪಾವತಿಸುವ ಎಲ್ಲರಿಗೂ ಈ ಸೌಲಭ್ಯ ಒದಗಲಿದೆ. ಆದರೂ ಕೃಷಿ ಕೂಲಿಕಾರರಿಗೂ ಪರಿಹಾರ ದೊರೆಯಬೇಕೆಂಬುದಕ್ಕೆ ಎರಡು ಮಾತಿಲ್ಲ. ಶ್ರೀಮಂತ ರೈತನಿಗೆ ಮಾತ್ರ ಅನುಕೂಲವಾಗುತ್ತಿದೆ ಎಂಬ ಭಾವನೆಯನ್ನು ಹೋಗಲಾಡಿಸುವ ದಿಕ್ಕಿನಲ್ಲಿ ಕಾರ್ಯ ನಡೆಯಬೇಕು. ಸರ್ಕಾರದ ಕೃಷಿ ನೀತಿಯ ಫಲ ಪ್ರತ್ಯಕ್ಷವಾಗಿ ರೈತನ ಕೈಗೆಟುಕಿದಾಗಲೇ ಸಂಪೂರ್ಣ ವಿಶ್ವಾಸ ಮೂಡೀತು. ಸದ್ಯ ಕೃಷಿ ಕಾರ್ಮಿಕರ ವಲಸೆ ಪ್ರವೃತ್ತಿ ತಡೆಯಲು ಉದ್ಯೋಗ ಯೋಜನೆ ಹಾಗು ತರಬೇತಿ ಬಗ್ಗೆಯೂ ಗಮನ ಹರಿಸಲಾಗಿದೆ. ಆದರೆ ಖುಷ್ಕಿ ರೈತರ dry land farmers ಬಗ್ಗೆ ಒತ್ತು ಬೇಕಿತ್ತು.*

ರೈತರು ಆತ್ಮಹತ್ಯೆ ಮಾಡಿಕೊಳ್ಳುವ ಮುನ್ನ ಜಿಲ್ಲಾಡಳಿತ, ತಾಲೂಕಾಡಳಿತ ಅಥವಾ ರೈತ ಸಂಘವನ್ನು ಸಂಪರ್ಕಿಸಬೇಕೆಂದರೆ ಅಂಥ ಪ್ರಯತ್ನಕ್ಕೆ ಹತಾಶೆಯಲ್ಲಿರುವ ರೈತ ಮುಂದಾಗಿ ಬರುತ್ತಾನೆನ್ನುವುದು ಕಷ್ಟ. ಹೇಳಿ ಕೇಳಿ ಅವನು ಆತ್ಮಹತ್ಯೆ ಮಾಡಿಕೊಳ್ಳುವುದಿಲ್ಲ. ಬದಲು ಆತ್ಮಹತ್ಯೆಗಳು ಕಂಡು ಬಂದಿರುವ ಕ್ಷೇತ್ರಗಳಲ್ಲಿ ರಹಸ್ಯ ವೀಕ್ಷಣಾದಳವೊಂದನ್ನೂ, ಸಾಮಾಜಿಕ ರಕ್ಷಣಾ ದಳವನ್ನು ನೇಮಿಸಿ ಸದಾ ಜಾಗೃತಿಯಿಂದ ಗಮನಿಸುವಂತೆ ಸರ್ಕಾರ, ರೈತ ಸಂಘ ಹಾಗೂ ಸಮಾಜವೂ ಪ್ರಯತ್ನಶೀಲರಾಗಬೇಕು. ಅನುಷ್ಠಾನ ಆಗದಿದ್ದರೆ ಯಾವ ಯೋಜನೆಯೂ ವ್ಯರ್ಥವೆ.

ಕೃಷಿ ನೀತಿಯ ಭಾಷೆ ತಾಂತ್ರಿಕ ಪರಿಭಾಷೆಗಳಿಂದ ಕೂಡಿ, ಸರಳವಾಗಿ ಅರ್ಥವಾಗುವುದಿಲ್ಲ. ಪಂಡಿತಾನ್ವಯ ಎಂಬ ಮಾತಿನಲ್ಲಿ ಹುರುಳಿದೆ. ಆದರೂ ರೈತರ ಹಿತಾಸಕ್ತಿಗಳ ಬಗ್ಗೆ ಚಿಂತನೆ ಗಂಭೀರವಾಗಿದೆ ಎಂಬುದು ಗಮನಿಸಬೇಕಾದ ವಿಷಯ. ಬೆಲೆಕುಸಿತದ ಸಂದರ್ಭವನ್ನು, ಬೆಲೆಗಳ ಏರಿಳಿತ, ಮಾರಾಟವ್ಯವಸ್ಥೆ, ಬೆಂಬಲ ಬೆಲೆ, ಮಾರುಕಟ್ಟೆ ಮಧ್ಯೆ ಪ್ರವೇಶ ಇತ್ಯಾದಿ ಶೀರ್ಷಿಕೆಗಳಡಿಯಲ್ಲಿ ದೀರ್ಘವಾಗಿಯೆ ವಿಶದೀಕರಿಸಲಾಗಿದೆ. ಈ ನೀತಿ ರೈತರಿಗೆ ತಲುಪಿದಾಗ, ಮಾತ್ರ ಮೌಲಿಕತೆ ಹೆಚ್ಚಿಸಿಕೊಳ್ಳುತ್ತದೆ ಎನ್ನಬೇಕು. ರೈತಕುಟುಂಬಗಳಿಗೆ ಸಮಗ್ರ ರಕ್ಷಣಾ ಕ್ರಮವನ್ನು ಬಿಡಿಯಾಗಿಯೆ ನೋಡುವುದಕ್ಕಿಂತ ಇಡೀ ಕಾರ್ಯಕ್ರಮಗಳ ಜಾರಿಯ ಫಲಿತದ ಮೇಲೆ ತಾಳೆ ಹಾಕಿ ನೋಡಬೇಕಾಗುತ್ತದೆ. ಕಳಪೆ ಬೀಜದ ಸಮಸ್ಯೆಯನ್ನು ಅನುಷ್ಠಾನ ಅಂತರದಲ್ಲಿ ಅಧಿಕಾರ ವಲಯವು ಪ್ರಾಮಾಣಿಕ ಕಾಳಜಿಯಿಂದ ನಿಭಾಯಿಸಬೇಕು. ಬೆಳೆ ವಿಮಾ ಯೋಜನೆಯನ್ನು ವಿವಿಧ ಮುಖಗಳಿಂದ ಚರ್ಚಿಸಲಾಗಿದ್ದರೂ ನಷ್ಟದ ಪಾವತಿಯು ವಿಳಂಬವಾಗುತ್ತಿರುವುದನ್ನು ಕೃಷಿ ನೀತಿ ಗಮನಿಸಿದೆ. ಅದಕ್ಕೆ ಭದ್ರತಾಜಾಲದ ಭರವಸೆಯ ಬಗ್ಗೆ ಹೇಳಿದೆ. ಆದರೆ ರೈತರಿಗೆ ಇದನ್ನು ಸರಳವಾಗಿ ತಿಳಿಸಬೇಕಾದ ಬಗ್ಗೆ ನಷ್ಟವನ್ನು ತುರ್ತಾಗಿ ತುಂಬಿ ಕೊಡುವ ಕರ್ತವ್ಯದ ಬಗ್ಗೆ ಸ್ಪಷ್ಟವಾಗಿಲ್ಲ. ಉದ್ಯೋಗ ಖಾತ್ರಿಯ ಬಗ್ಗೆ ಹೆಚ್ಚು ಗಮನ ಹರಿಸಬೇಕಾಗಿದೆ ಎಂಬುದು ಸರಿ. ಅಂಥ ಸಣ್ಣ ರೈತರು ಭೂಮಿ ಕಳೆದುಕೊಂಡು ಕೃಷಿ ಕಾರ್ಮಿಕರಾಗುವ ಪರಿಸ್ಥಿತಿಯನ್ನು ತಪ್ಪಿಸುವ ಬಗ್ಗೆ ಸಲಹೆಗಳು, ಕೃಷಿ ನೀತಿಗಳು ಸ್ಪಷ್ಟವಾಗಿಲ್ಲ. ಹಾಗೂ ಕೃಷಿಕಾರ್ಮಿಕರ ಬಗ್ಗೆ ಹೆಚ್ಚಿನ ಸುಧಾರಣೆ ಎಂದು ಹೇಳಿ ಉದ್ಯೋಗ ನೀಡಿಕೆ, ತರಬೇತಿ ಎಂಬಷ್ಟಕ್ಕೆ ಸೀಮಿತವಾಗದೆ ಜಮೀನು ಪುನರ್ ನೀಡಿಕೆ ಅಥವಾ ಗಳಿಕೆಯ ಕುರಿತೂ ಚಿಂತನೆಗಳು ಸ್ಪಷ್ಟವಾಗಿ ಮೂಡಿ

ಬರಬೇಕಿತ್ತು. ರೈತರ ಒಟ್ಟು ಸಾಲದ ಸಮಗ್ರ ಸಮೀಕ್ಷೆ ಬಗ್ಗೆ ರೈತರಿಗೆ ವಿದ್ಯುತ್ ಪೂರೈಕೆಯ ಸೂಕ್ತ ಅವಧಿ ಹೆಚ್ಚಳದ ಬಗ್ಗೆ (ಪಂಪ್‌ಸೆಟ್‌ಗೆ) ಸೂಕ್ತ ವಿವರಗಳಿಲ್ಲದಿರುವುದೂ ಕೊರತೆಯಾಗಿ ಕಾಣುವುದು ಸಹಜ. ಆವರ್ತನಿಧಿಯ ಕುರಿತ ಟೀಕೆ ಸರಿ ಎಂದರೂ, ವಿಧಾನಸಭಾ ಚರ್ಚೆಗಳು ಆ ಬಗ್ಗೆ ವಿವರಪೂರ್ಣವಾಗಿ ನಡೆದು ಶಾಸಕರು ರೈತರ ಅಗತ್ಯವನ್ನು ಎತ್ತು ಹೇಳಿರುವುದನ್ನು ಸರ್ಕಾರ ಗಮನಿಸಿರುವ ಬಗ್ಗೆ ಈ ಸಂದರ್ಭದಲ್ಲಿ ಕೃತಿಯಲ್ಲಿ ನಮೂದಿಸಬೇಕಿತ್ತು. ಖಾಸಗಿ ಲೇವಾದೇವಿದಾರರ ನಿಯಂತ್ರಣದಲ್ಲಿ ಕಾನೂನು ಸಮಸ್ಯೆ ಒದಗಬಹುದು. ಆದರೆ ಮಿತಿ ಮೀರಿದ ಬಡ್ಡಿ ವಿಧಿಸುವಿಕೆ ನಿಷೇಧ ವಿಧೇಯಕ 2004 ತಂದಿರುವುದು ಈ ದಿಸೆಯಲ್ಲಿ ಒಂದು ಗಮನಾರ್ಹ ಪ್ರಯತ್ನವಾಗಿದೆ. ಎನ್ನಬಹುದು. ಸಾಲಮರುಪಾವತಿ ಇತ್ಯಾದಿ ಅನೇಕ ವಿಷಯಗಳಲ್ಲಿ ಚರ್ಚೆ ನಡೆದು ಪರಿಹಾರಗಳನ್ನು ಶಾಸಕರು ವ್ಯಕ್ತಪಡಿಸಿರುವುದನ್ನು ವಿಧಾನಸಭೆಯ ನಡವಳಿಕೆಗಳ ವರದಿಗಳಿಂದಲೇ ಗಮನಿಸಬಹುದು. ಆದರೆ ಆತ್ಮಹತ್ಯೆ ಕುರಿತ ಅಧ್ಯಯನದ ವಿವರ ಹಾಗೂ ಖಾಸಗಿ ಲೇವದೇವಿದಾರರ ನಿಯಂತ್ರಣದ ಕುರಿತ ಚಿಂತನೆ ಅಗತ್ಯವಿತ್ತು. ಹೊಸ ಕೃಷಿ ನೀತಿಯಲ್ಲಿ ರೈತರ ಸಂಘಟನೆಯು ವ್ಯವಸ್ಥಾಬದ್ಧವಾಗಿ ನಡೆಸಲು ಅಗತ್ಯವಿಧಿವಿಧಾನಗಳ ಪ್ರಸ್ತಾಪ ಇಲ್ಲ; ರೈತ ಸಂಘಟನೆ ಕುರಿತು ಸರ್ಕಾರ ಆಳವಾಗಿ ಚಿಂತಿಸಿದಂತೆ ಕಂಡು ಬರುವುದಿಲ್ಲ ಎಂಬ ಗಮನಾರ್ಹ ಟೀಕೆಯೂ ಇದೆ. ಬಹುಶಃ ಸಮಸ್ಯೆಗಳ ಪರಿಹಾರದಲ್ಲಿಯೇ ಇದಕ್ಕೆ ಮಾರ್ಗವಿದೆ ಎಂದು ಸರ್ಕಾರ ಭಾವಿಸಿರಬೇಕು. ಹೀಗೆ ಹೊಸ ಕೃಷಿ ನೀತಿಯ ಪ್ರಕಟಣೆಯಲ್ಲಿ ಕೆಲವಾರು ಇತಿಮಿತಿಗಳಿರಬಹುದು. ಆದರೆ ಈ ಹಿಂದೆ ವಿಧಾನಸಭೆ ಹಾಗೂ ವಿಧಾನಪರಿಷತ್ತಿನಲ್ಲಿ ಈ ಬಗೆಗೆಲ್ಲ ನಡೆದಿರುವ ಗಂಭೀರ ಚರ್ಚೆಗಳೇ ಮೇಲಿನ ಅಭಿಪ್ರಾಯಗಳಿಗೆ ಉತ್ತರವೆನ್ನುವಂತಿವೆ. ಹೀಗಾಗಿ ರೈತ ಹಿತಾಸಕ್ತಿಗಳನ್ನು ಕಾಪಾಡಲು ಹೊಸಕೃಷಿ ನೀತಿಯು ತನ್ನ ಕಾಳಜಿಯನ್ನು ತೋರಿದೆ. ಅದು ಅಧಿಕಾರಿ ವಲಯದಲ್ಲಿ ಸಮರ್ಥ ಅನ್ವಯವಾದಾಗಲೇ ಕೃಷಿ ನೀತಿಯ ಸಾಫಲ್ಯ ಕಾಣುತ್ತದೆ. ಇದು ಆಡಳಿತದ ಹೊಣೆ. ಕೃಷಿ ನೀತಿ ನಿರೂಪಿಸುವಲ್ಲಿ ಶಾಸಕರೊಡನೆ ಕ್ಷೇತ್ರದ ರೈತರು ತಮ್ಮ ದೈನಂದಿನ ಸಮಸ್ಯೆಗಳನ್ನು ಹಂಚಿಕೊಳ್ಳುತ್ತಾರೆ. ಅಂತಾಗಿ ಕ್ಷೇತ್ರಕಾರ್ಯ ನಡೆಸುವ ಶಾಸಕರಿದ್ದಾರೆ. ಅನುಭವಿಕ ಅಂತರ್ ನೋಟದವರೂ ಅವರಲ್ಲಿದ್ದಾರೆ. ಹಾಗಾಗಿ ಅವರು ಸದನಗಳಲ್ಲಿ ನಡೆಸುವ ಚರ್ಚೆಗಳನ್ನು (ರಾಜಕೀಯ ಸ್ಪರ್ಶದವುಗಳನ್ನು ಬಿಟ್ಟು) ಗಮನಿಸಿದರೆ. ಅವರು ಅರ್ಥೈಸುವ ರೈತ ಸಮಸ್ಯೆಗಳು ಹಾಗೂ ಸೂಚಿಸುವ ಸಲಹೆಗಳು, ಮಾಡುವ ಟೀಕೆಗಳು ಸಾಕಷ್ಟು ಒಳನೋಟಗಳಿಂದ ಕೂಡಿರುತ್ತವೆ.

*ಈ ಹಿನ್ನೆಲೆಯಲ್ಲಿ ವಿಧಾನ ಮಂಡಲದ ಗ್ರಂಥಾಲಯ ಸಮಿತಿ ಹೊರತಂದಿರುವ ಕೃಷಿ ಹಾಗೂ ರೈತ ಚಳುವಳಿ ಆತ್ಮಹತ್ಯೆ ಕುರಿತ ಕೃತಿಗಳನ್ನು ಮತ್ತು ಸದನಗಳಲ್ಲಿ ನಡೆದ ನಡವಳಿಕೆಗಳಲ್ಲಿಯ ಚರ್ಚೆಗಳನ್ನು ಗಮನಿಸಬೇಕಿತ್ತು; ಗಮನಿಸಿದಿದ್ದರೆ ಕೃಷಿನೀತಿ ಪ್ರಕಟಣೆಯಲ್ಲಿ ಪೂರಕ ಸಮಾಧಾನಗಳು ಸಲಹೆಗಳು ಒದಗುತ್ತಿದ್ದುವು. ವ್ಯಕ್ತವಾಗಿರುವ ಟೀಕೆಗಳಿಗೂ ಉತ್ತರಗಳು ಒದಗುತ್ತಿದ್ದುವು. ಅದೇನೇ ಇರಲಿ ಸದುದ್ದೇಶಗಳನ್ನಿಟ್ಟುಕೊಂಡು ಕೃಷಿ ನೀತಿ 2006 ನಿರೂಪಣೆಗೊಂಡಿದೆ. ಅದರ ಚಾಲನೆಯ ಹಂತದಲ್ಲಿ ತೋರಿ ಬರುವ ಲೋಪದೋಷಗಳನ್ನು ಕಂಡುಕೊಂಡು, ಸಲಹೆಗಳನ್ನು ಗಮನದಲ್ಲಿರಿಸಿಕೊಂಡು ರೈತ ವಲಯದ ಎಲ್ಲ ಸಂಬಂಧಿತ ಸಂಗತಿಗಳು ವರ್ತಮಾನ ಜಾಗೃತಿಗೆ ಅನುವಾಗುವಂತೆ ಹಿತಾಸಕ್ತಿಯನ್ನು ಸಂರಕ್ಷಿಸುವ ಕಾರ್ಯ ಸರ್ಕಾರದ ಹಾಗೂ ಸಾಮಾಜಿಕರ ಹೊಣೆಯಾಗಿದೆ.*

**ವಿಷಯ 17:** ರೈತ ಹೋರಾಟದ ಹಾದಿಯ ಕೆಲವು ಮಾದರಿ ಪ್ರೇರಕ ಮತ್ತು ಸಾಂತ್ವನ ವ್ಯಕ್ತಿತ್ವಗಳು

ಸದನದ ಸದಸ್ಯರು. 9.2.2004ರ ವಿಧಾನಸಭಾಧಿವೇಶನದಲ್ಲಿ[16] ಸಭಾಧ್ಯಕ್ಷರಾದ ಮಾನ್ಯ ಶ್ರೀ ಎಂ.ವಿ.ವೆಂಕಟಪ್ಪನವರು ನಿಧನರಾದ ಸದನದ ಮಾಜಿ ಸದಸ್ಯರ ಕುರಿತ ಸಂತಾಪ ಸೂಚನಾ ಸಭೆಯಲ್ಲಿ, ಅವರುಗಳ ಸೇವೆಯನ್ನು ಸ್ಮರಿಸಿ, ಸಂತಾಪವನ್ನು ಸೂಚಿಸಿದರು.

**ಪ್ರೊ॥ ಎಂ.ಡಿ.ನಂಜುಂಡಸ್ವಾಮಿ:** 5.2.2004 ರಂದು ನಿಧನರಾದ ಪ್ರೊ॥ ಎಂ.ಡಿ.ನಂಜುಂಡಸ್ವಾಮಿಯವರು : ವೃತ್ತಿಯಲ್ಲಿ ಕೃಷಿಕರು. ಕೃಷಿ ಆಂದೋಲನದಲ್ಲಿ ತುಂಬಾ ಆಸಕ್ತಿಯುಳ್ಳವರಾಗಿದ್ದರು. ಅವರನ್ನು ಕುರಿತಂತೆ ಸಚಿವ ಶ್ರೀ **ಮಲ್ಲಿಕಾರ್ಜುನ ಖರ್ಗೆ** ಅವರು ಮಾತನಾಡುತ್ತ : ಪ್ರೊ॥ ನಂಜುಂಡಸ್ವಾಮಿಯವರು ಒಬ್ಬ ಪ್ರಭಾವಿ ವ್ಯಕ್ತಿ. ವಿಶೇಷತಃ ಕಾನೂನು ಪಂಡಿತರು. ಆದರೂ ಅವರ ವಿಶೇಷ ಆಸಕ್ತಿ ಕೃಷಿ ಕ್ಷೇತ್ರದಲ್ಲಿತ್ತು. ರೈತರು ಸೈಂಟಿಫಿಕ್ ಅಗ್ರಿಕಲ್ಚರ್ ಮಾಡುವ ಬಗ್ಗೆ, ಆಧುನಿಕ ವ್ಯವಸ್ಥೆಯನ್ನು ಅರಿತು ಮುಂಬರಿಯುವ ಕ್ರಮ, ಅವರ ಉತ್ಪನ್ನಗಳಿಗೆ ದೇಶ, ವಿದೇಶಗಳಲ್ಲಿ ಬೆಲೆ ಲಭ್ಯತೆ ಕುರಿತು ಸ್ಪಷ್ಟವಾದ ವಿಚಾರವನ್ನು ಮಂಡಿಸುತ್ತಿದ್ದರು. ರೈತನಿಗೆ ಬೆಳೆದ ಬೆಳೆಯ ಬೆಲೆ ನಿಗದಿ ಮಾಡುವ ಹಕ್ಕು ಇರಬೇಕು; ನಿಗದಿ ಮಾಡುವಂಥ ಅಧಿಕಾರವಿರಬೇಕು. ಈ ದೇಶದಲ್ಲಿ 75% ರೈತರು ಇರುವಾಗ ಆರ್ಥಿಕ ಅಭಿವೃದ್ಧಿ

16. ವಿಧಾನಸಭೆಯ ನಡವಳಿಕೆಗಳು., ಸಂಪುಟ 3 (1–5), 9.2.2004, ಪು.1–30

ಮಾಡುವಂಥದ್ದು ರೈತರ ಕೈಯ್ಯಲ್ಲಿದೆ. ಇದಕ್ಕೆ ರೈತರಿಗೆ ಹೆಚ್ಚಿನ ಪ್ರೋತ್ಸಾಹ ಅಗತ್ಯ ಎನ್ನುತ್ತಿದ್ದರು. ವಿಶೇಷತಃ ಡಾ॥ ರಾಮಮನೋಹರ ಲೋಹಿಯಾ ಅವರ ವಿಚಾರಧಾರೆಯ ಮೇಲೆ, ಜಯಪ್ರಕಾಶ್ ನಾರಾಯಣ್ ವಿಚಾರಧಾರೆಯ ಮೇಲೆ ಮತ್ತು ಸೋಷಿಯಲಿಸ್ಟ್ ತತ್ವದ ಮೇಲೆ ನಂಬಿಕೆ ಇಟ್ಟು ರಾಜಕೀಯಕ್ಕೆ ಬಂದಂಥ ವ್ಯಕ್ತಿ ಅವರಾಗಿದ್ದರು. ಕೊಪ್ಪಳ, ಗಂಗಾವತಿ, ಮದ್ದೂರು, ಕೋಲಾರ, ಎಲ್ಲೆಲ್ಲಿ ರೈತರ ಚಳುವಳಿ ಆಗಲಿ ವಿಶೇಷವಾಗಿ ಕೆ.ಪಿ.ಟಿ.ಸಿ.ಎಲ್ ನವರು ರೈತರ ಅಗತ್ಯಕ್ಕೆ ತಕ್ಕಂತೆ ವಿದ್ಯುತ್ ಸರಬರಾಜು ಮಾಡುತ್ತಿಲ್ಲ, ಅಂತಾಗಿ ಮೀಟರ್ ಫಿಕ್ಸ್ ಮಾಡುವ ಹಕ್ಕು ಇಲ್ಲ ಎಂಬವಾದವನ್ನು ಸರ್ಕಾರದ ಮುಂದಿಟ್ಟು ಚಳುವಳಿ ಮಾಡುತ್ತಿದ್ದುದನ್ನು ನಾವೆಲ್ಲ ಕಂಡಿದ್ದೇವೆ. ಪೋಲೀಸರು ಚಳುವಳಿಯ ರೈತರನ್ನು ಹಿಡಿದುಕೊಂಡು ಹೋಗಿ ಬಳ್ಳಾರಿ, ಬೆಳಗಾಂ ಜೈಲಿನಲ್ಲಿ ಇಟ್ಟಿದ್ದಾರೆ. ಅವರನ್ನು ಬಿಡಿಸಿ, ಅವರ ಮೇಲಿನ ಕೇಸನ್ನು, ವಿತ್‌ಡ್ರಾಮಾಡಬೇಕು ಎಂದು ಪ್ರತಿಪಾದನೆ ಮಾಡುತ್ತಿದ್ದಂಥ ವ್ಯಕ್ತಿ ಅವರ ಮಾತಿಗೆ ಗೌರವ ಕೊಟ್ಟು ಅನೇಕಸಾರಿ ರೈತರ ಮೇಲಿನ ಕೇಸುಗಳನ್ನು ವಿತ್‌ಡ್ರಾ ಮಾಡಿಕೊಳ್ಳುವ ಪ್ರಯತ್ನಮಾಡಿದ್ದೇವೆ. ರೈತರ ಬಗ್ಗೆ ಕಾಳಜಿ ಇದ್ದಂತಹ ಅಂಥ ವ್ಯಕ್ತಿ ಇಂದು ನಮ್ಮನ್ನು ಅಗಲಿರುವಲ್ಲಿ ವಿಶೇಷವಾಗಿ ನಾವು ಇವತ್ತು ರೈತರ ಪ್ರತಿನಿಧಿತ್ವವನ್ನು ಕಳೆದುಕೊಂಡಿದ್ದೇವೆ ಎಂದರೆ ತಪ್ಪಾಗದು. ಕಾರಣ ಅಸ್ಲೆಂಬಿಯಲ್ಲಿ ಅವರು ರೈತರ ಪರ ವೈಜ್ಞಾನಿಕವಾಗಿ ಮತ್ತು ಸಾಕಷ್ಟು ರೀತಿಯಲ್ಲಿ ಸರ್ಕಾರಕ್ಕೆ ಮನವರಿಕೆ ಮಾಡಿಕೊಡುತ್ತಿದ್ದರು. ಅವರನ್ನು ಕಳೆದುಕೊಂಡು ವಾಕ್ಯೂಮ್ ಉಂಟಾಗಿದೆ. ದುಃಖವಾಗಿದೆ, ಎಂದರು.

**ಶ್ರೀ ಜಗದೀಶ್ ಶೆಟ್ಟರ್** (ವಿರೋಧ ಪಕ್ಷದ ನಾಯಕ) ಅವರು ಮಾತನಾಡಿ, ರೈತ ಚಳುವಳಿ ಎಂದರೆ ತಕ್ಷಣ ತಟ್ಟನೆ ನೆನಪಾಗುವ ಹೆಸರು ಪ್ರೊ॥ ಎಂ.ಡಿ.ನಂಜುಂಡಸ್ವಾಮಿ. ಕರ್ನಾಟಕ ರಾಜ್ಯದಲ್ಲಿ ರೈತ ಚಳುವಳಿಗೆ ಒಂದು ದಿಕ್ಕುದೆಸೆ, ಮಾರ್ಗದರ್ಶನ ಮಾಡುವ ಮೂಲಕ ಅದಕ್ಕೊಂದು ಗುರಿ ತೋರಿಸಿ ಕೊಟ್ಟಂಥವರು. ಯಾವುದೇ ಒಂದು ಅಧಿಕಾರವಿರಲಿ, ಬಿಡಲಿ ರೈತರ ಪರವಾಗಿ ಮಾತನಾಡಿ, ರೈತರ ಸಮಸ್ಯೆಗಳು ಬಂದಾಗ ದೊಡ್ಡದನಿಯಾಗಿ ನಿಂತು ಅವರ ಪರವಾಗಿ ಹೋರಾಟ ಮಾಡುವಂಥ ವ್ಯಕ್ತಿಯಾಗಿದ್ದರು. ರೈತರಿಗೆ ಮಾತನಾಡುವ ದನಿಯೂ ಇರಲಿಲ್ಲ. ಛಲವೂ ಇರಲಿಲ್ಲ. ಅವರಿಗೆ ಮಾತನಾಡುವ ಛಲ ಹಾಗೂ ಅಧಿಕಾರಿಯ ಮುಂದೆ ಎದೆಸೆಟೆಸಿ ನಿಂತು ಮಾತನಾಡುವ ಧೈರ್ಯಕೊಟ್ಟವರು, ಅಧಿಕಾರಿಗಳನ್ನು ಏಕೆಂದು ಪ್ರಶ್ನಿಸಲು ಮಾರ್ಗದರ್ಶನ ಮಾಡಿದವರು ಅವರು. ಕೆಲವೇ ಕೆಲವು ರಾಜ್ಯಗಳಲ್ಲಿ ರೈತ ಚಳುವಳಿಯು ಒಂದು ದೊಡ್ಡ ಚಳುವಳಿಯಾಗಿ ಬೆಳೆಯಲು

ಕಾರಣವಾದಂಥ ರಾಜ್ಯಗಳಲ್ಲಿ ಕರ್ನಾಟಕವೂ ಒಂದು. ಅದಕ್ಕೆ ಮೂಲಕಾರಣ ಪ್ರೊ॥ ಎಂ.ಡಿ.ನಂಜುಂಡಸ್ವಾಮಿಯವರು. ಈ ಚಳುವಳಿಯನ್ನು ಕೇವಲ ಕರ್ನಾಟಕಕ್ಕೆ ಸೀಮಿತಗೊಳಿಸದೆ ಇಡೀ ರಾಷ್ಟ್ರಕ್ಕಷ್ಟೇ ಅಲ್ಲದೆ, ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಹೆಸರುಗಳಿಸಿದ ರೈತನಾಯಕರನ್ನು ಕರ್ನಾಟಕಕ್ಕೂ ಕರೆದುಕೊಂಡು ಬಂದರು. ಅವರ ವಿಚಾರಗಳಿಗೆ ಸ್ಪಂದಿಸುವಂಥ ಕೆಲಸವನ್ನು ಮಾಡಿದರು. ಶಾಸಕರಾಗಿ ಶಾಸನ ಸಭೆಯಲ್ಲಿ ರೈತರ ಪರವಾಗಿ ದನಿಯೆತ್ತಿ ಬಹಳಷ್ಟು ವಿಚಾರಗಳನ್ನು ಪ್ರಸ್ತಾಪಿಸಿದ್ದರು. ರೈತರ ಪ್ರತಿನಿಧಿಗಳಾಗಿ ನಂಜುಂಡಸ್ವಾಮಿಯವರು ಹಾಗೂ ಬಾಬಾ ಗೌಡ ಪಾಟೀಲರು ಶಾಸಕರಾಗಿದ್ದರು. ಹಿಂದಿನ ಸದನದಲ್ಲಿ ಪುಟ್ಟಣ್ಣಯ್ಯನವರು ರೈತರ ಪರವಾದ ನಾಯಕರಾಗಿ ಆರಿಸಿ ಬಂದು ಇಲ್ಲಿ ಮಾತನಾಡುವ ಅವಕಾಶ ಅವರಿಗೆ ಸಿಕ್ಕಿತ್ತು. ರೈತ ಚಳುವಳಿ ಹಿನ್ನೆಲೆಯಿಂದ ರೈತರ ಪರವಾಗಿ ಹೋರಾಟ ಮಾಡಿಕೊಂಡು ಬಂದ ವ್ಯಕ್ತಿಗಳ ಪ್ರಾತಿನಿಧ್ಯತೆ ಇವೊತ್ತು ವಿಧಾನಸಭೆಯಲ್ಲಿ ಕಡಿಮೆಯಾಗುತ್ತಿರುವುದರ ಕೊರಗು ಇದೆ. ಹೀಗಾಗಿ ಚಳವಳಿ ಮುಖಾಂತರ ಬಂದಿರುವ ರೈತ ಪ್ರತಿನಿಧಿಗಳಿಗೆ ಸೂಕ್ತ ಪ್ರಾತಿನಿಧ್ಯ ಸಿಗುವ ಬಗ್ಗೆ ನಾವೆಲ್ಲರೂ ಚಿಂತನೆ ಮಾಡಬೇಕಾಗಿದೆ. ರೈತ ಚಳುವಳಿಯ ಹರಿಕಾರರಾದ ಪ್ರೊ॥ ನಂಜುಂಡಸ್ವಾಮಿಯವರು ಹಾಕಿಕೊಟ್ಟ ಚಳವಳಿ ಮುಂದುವರಿಯಬೇಕು, ಎಂದೆಲ್ಲ ಹೇಳಿದರು; ನಂತರ ಮಾನ್ಯ ಖರ್ಗೆಯವರು ಕಾಬಿನೆಟ್ ಡಿಸಿಷನ್ ತೆಗೆದುಕೊಳ್ಳುವ ಮೂಲಕ ರೈತ ಚಳುವಳಿಯಲ್ಲಿ ಭಾಗವಹಿಸಿದ ರೈತರುಗಳ ಮೇಲೆ ಹೂಡಲಾಗಿದ್ದ ಕೆಲವು ಮೊಕದ್ದಮೆಗಳನ್ನು ವಾಪಸ್ಸು ಪಡೆದಿದೆ ಎಂದಿದ್ದಾರೆ; ಕಾವೇರಿ ಕಣಿವೆ ವಿಚಾರದಲ್ಲಿ ಇತ್ತೀಚೆಗೆ ನಡೆದ ಚಳವಳಿ ಸಂದರ್ಭದಲ್ಲಿ ಸನ್ಮಾನ್ಯ ಮಾದೇಗೌಡರು ಮತ್ತು ಇನ್ನಿತರ ರೈತ ಪ್ರಮುಖರು ನಡೆಸಿದ ಚಳವಳಿ ಸಂದರ್ಭದ ರೈತರ ಮೇಲಿನ ಮೊಕದ್ದಮೆಗಳನ್ನು ವಾಪಸು ಪಡೆಯಲಾಗಿದೆ. ಭೀಮಾನದಿ ಹೋರಾಟದಲ್ಲಿ ಬಿಜಾಪುರ ಭಾಗದ ರೈತರ ಮೇಲಿನ ಖಟ್ಲೆಗಳನ್ನು ವಾಪಸ್ಸು ಪಡೆದಿದ್ದೀರಿ; ಅದಷ್ಟೇ ಸಾಲದು. ರೈತ ಸಂಘದ ವತಿಯಿಂದ ಕಳೆದ ಹತ್ತಾರು ವರ್ಷಗಳಿಂದ ಜರುಗಿದ ಚಳುವಳಿ ನಿರತ ರೈತ ಕಾರ್ಯಕರ್ತರ ಮೇಲಿನ ಸಾವಿರಾರು ಮೊಕದ್ದಮೆ ವಾಪಸಾತಿ ಆಗಿಲ್ಲ. ಅದು ಗ್ಯಾಟ್ ಒಪ್ಪಂದದ ವಿರೋಧದ ಹಿನ್ನೆಲೆಯಲ್ಲಿ, ಅಂತರ್‌ರಾಷ್ಟ್ರೀಯ ಕಂಪೆನಿಗಳ ವಿರುದ್ಧ ನಡೆಸಿದ ಚಳುವಳಿ ಇರಬಹುದು. ರೈತನಾಯಕರಾದ ನಂಜುಂಡಸ್ವಾಮಿಯವರ *ಜೊತೆಗೆ ರೈತ ಸಂಘದ ಇನ್ನಿತರ ಕಾರ್ಯಕರ್ತರ* ಮೇಲೆ ಹೂಡಿರುವ ಖಟ್ಲೆಗಳು, ಕ್ರಿಮಿನಲ್ ಮೊಕದ್ದಮೆಗಳು ಅವೆಲ್ಲವನ್ನೂ ವಾಪಸು ತೆಗೆದುಕೊಂಡಾಗ ಮಾತ್ರ ನಮ್ಮನ್ನಗಲಿರುವ ನಂಜುಂಡಸ್ವಾಮಿಯವರಿಗೆ ನಿಜವಾದ ರೀತಿಯಲ್ಲಿ ಶ್ರದ್ಧಾಂಜಲಿ ಅರ್ಪಿಸಿದಂತಾಗುತ್ತದೆ. ಸರ್ಕಾರ ಈ ದಿಸೆಯಲ್ಲಿ ಚಿಂತನೆ ಮಾಡಬೇಕು, ಎಂದರು.

**ಶ್ರೀ ಬಿ.ಸೋಮಶೇಖರ್** ಅವರು ಮಾತನಾಡಿ; ಪ್ರೊ॥ ನಂಜುಂಡಸ್ವಾಮಿಯವರು ವಿಶಿಷ್ಟವಾದ ಮುಖಂಡರು. ರೈತ ಸಂಘಟನೆಯಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸಿ 1980ರಲ್ಲಿ ಅದನ್ನು ಕಟ್ಟಿದರು. ಅದು ಪ್ರಬಲವಾಗಿ ಬೆಳೆದಂಥ ಸಂಸ್ಥೆಯಾಯಿತು. ರೈತ ಸಂಘಟನೆಯ ದೇಹ ರುದ್ರಪ್ಪನವರಾಗಿದ್ದರೆ ಮೆದುಳು ಪ್ರೊ॥ನಂಜುಂಡಸ್ವಾಮಿಯವರದಾಗಿತ್ತು. ಸುಂದರೇಶ್ ಸಂಘಟನಾ ಚತುರರು. ಈ ಮೂವರ ಸಂಗಮದಿಂದ ರೈತ ಸಂಘ ಬಹಳಚೆನ್ನಾಗಿ ಬೆಳೆಯಿತು. 1982ರ ಚುನಾವಣೆಯಲ್ಲಿ ಮದ್ಯವನ್ನು ಹಂಚಲು ರೈತ ಸಂಘದ ಕಾರ್ಯಕರ್ತರು ಅವಕಾಶವನ್ನು ಕೊಡಲಿಲ್ಲ. ತೊಂಬತ್ತರ ದಶಕದಲ್ಲಿ ರಾಷ್ಟ್ರವು ಗ್ಯಾಟ್ ಒಪ್ಪಂದದ ವಿಚಾರದಲ್ಲಿ WTO ಬಗ್ಗೆ ನೀತಿ ನಿಯಮಗಳನ್ನು ರಚನೆ ಮಾಡುವಾಗ ಬಹಳ ಪ್ರಬಲವಾಗಿ ಪ್ರೊ॥ ಎಂ. ಡಿ.ಎನ್. ವಿರೊಧ ಮಾಡಿದರು. ಕೇವಲ ರಾಜಕೀಯವಾಗಿ ಅದರ ಬಗ್ಗೆ ಪ್ರತಿಭಟನೆ ಮಾಡಲಿಲ್ಲ. ನಿಜವಾಗಿ ರೈತರ ಹಿತದ ಬಗ್ಗೆ ಅಧ್ಯಯನ ಮಾಡಿ WTO ಒಪ್ಪಂದದ ಬಗ್ಗೆ ಬಹಳ ವಿರೋಧ ಮಾಡಿ ರಾಜ್ಯ, ರಾಷ್ಟ್ರಮಟ್ಟದಲ್ಲಿ ದೊಡ್ಡ ಸಭೆ, ವಿಚಾರಗೋಷ್ಠಿ ಮಾಡಿ ರೈತರನ್ನು ಎಬ್ಬಿಸುವಂಥ ಕೆಲಸ ಮಾಡಿದರು. ಕರ್ನಾಟಕದ ರೈತ ಮುಖಂಡತ್ವ ಮಾತ್ರವಲ್ಲ ಭಾರತದೇಶದ ರೈತ ಮುಖಂಡತ್ವವೂ ಅವರಿಗೆ ಸಿಕ್ಕಿತ್ತು. ಅಂತರಾಷ್ಟ್ರೀಯ ಮಟ್ಟದಲ್ಲಿ ದೊಡ್ಡ ದೊಡ್ಡ ಅಧಿಕಾರಿಗಳ ಸಭೆಯಲ್ಲಿ ಇಂಗ್ಲಿಷ್ ಮಾತಿನ ಮೂಲಕ ವಾಗ್ಮಿತೆ ತೋರಿದ್ದರು. ಯಾವುದೇ ಅನ್ಯಾಯದ ವಿರುದ್ಧ ಅನೇಕ ರೀತಿಯ ಹೋರಾಟದ ವಿಧಾನಗಳನ್ನು ಕರ್ನಾಟಕದಲ್ಲಿ ಕಂಡುಹಿಡಿದುಕೊಟ್ಟವರಾಗಿದ್ದರು. ಯಾವತ್ತೂ ಆತ್ಮಸ್ಥೈರ್ಯ ಕಳೆದುಕೊಳ್ಳಲಿಲ್ಲ. ಅಧಿಕಾರಕ್ಕೂ ಆಸೆ ಪಡಲಿಲ್ಲ. ರೈತರಿಗೆ ತಮ್ಮ ಬೆಳೆಗಳಿಗೆ ವೈಜ್ಞಾನಿಕವಾದಂಥ ಬೆಲೆ ಸಿಗಬೇಕು. ರೈತನ ಕಷ್ಟ ಹೇಗಿದೆ? ಸರ್ಕಾರದ ಆರ್ಥಿಕ ವ್ಯವಸ್ಥೆಯೊಳಗೆ ಯಾವ ರೀತಿ ರೈತ ಶೋಷಣೆಗೊಳ್ಳುತ್ತಿದ್ದಾನೆ? ಬೆಳೆದ ಬೆಳೆಗೆ ವೈಜ್ಞಾನಿಕವಾದಂಥ ಬೆಲೆ ಏಕೆ ಸಿಗುತ್ತಿಲ್ಲ? ಯಾವರೀತಿಯಾಗಿ ಹೊಂದಿಸಿಕೊಡಬೇಕು? ಎಂದು ಅಂಕಿ ಅಂಶಗಳ ಸಮೇತ ಸರ್ಕಾರದ ವಿರುದ್ಧ ಹೋರಾಟ ಮಾಡುತ್ತಿದ್ದರು. ಶೋಷಣೆಗೆ ಒಳಗಾಗಿರತಕ್ಕವರು ರೈತ ಸಮುದಾಯ ದಲಿತ ಸಮುದಾಯ ಮತ್ತು ಮಹಿಳಾ ಸಮುದಾಯ. ದಲಿತ ಸಂಘಟನೆ ಮತ್ತು ರೈತರ ಸಂಘಟನೆ ಎರಡೂ ಒಟ್ಟಾಗಿ ಹೋಗಬೇಕು ಎಂಬ ಕನಸನ್ನು ಕಂಡಿದ್ದರು. ಅವರ ಜ್ಞಾಪಕಾರ್ಥವಾಗಿ ಸರ್ಕಾರ ಒಂದು ರೈತ ಭವನವನ್ನು ಕಟ್ಟಿಸಿ ಅದಕ್ಕೆ ಅವರ ಹೆಸರಿಡಬೇಕು. ರೈತರ ಅಭಿವೃದ್ಧಿಗೋಸ್ಕರ ಅವರ ಹೆಸರಿನಲ್ಲಿ ಸಂಸ್ಥೆಯೊಂದನ್ನು ಸ್ಥಾಪಿಸಬೇಕು, ಎಂದರು.

ಶ್ರೀ ಸಿ.ಚನ್ನಿಗಪ್ಪ ಅವರು: ಪ್ರೊ॥ಎಂ.ಡಿ.ನಂಜುಂಡಸ್ವಾಮಿಯವರು ರೈತರ ಬಗ್ಗೆ, ವ್ಯವಸಾಯದ ಬಗ್ಗೆ ಕೆಲಸ ಮಾಡಿದಂಥ ಅತ್ಯುತ್ತಮ ನಾಯಕರಾಗಿದ್ದರು ಎಂದರು. ಶ್ರೀ **ವಿ.ಮುನಿಯಪ್ಪ** ಅವರು ಮಾತನಾಡಿ, ರೈತ ಸಮುದಾಯ ಅಸಂಘಟಿತ ವರ್ಗವಾಗಿತ್ತು. ಅದರ ಸಂಘಟನೆಗೆ ಚಾಲನೆ ಕೊಟ್ಟಂಥವರು ಪ್ರೊ॥ ಎಂ.ಡಿ.ನಂಜುಂಡಸ್ವಾಮಿಯವರು. ಅವರ ಮುಖಾಂತರ ರೈತರ ಸಮಸ್ಯೆಗಳಿಗೆ ವಿಶೇಷವಾದ ಚಾಲನೆ ಸಿಕ್ಕಿತು. ಮುಖ್ಯವಾಗಿ ರೈತ ಬೆಳೆದ ಬೆಳೆಗೆ ವೈಜ್ಞಾನಿಕವಾದ ಬೆಂಬಲಿತ ಬೆಲೆ ಕೊಡಬೇಕು, ಎಂಬ ಒತ್ತಾಯವನ್ನು ರೈತ ಸಂಘವು ಪ್ರಾರಂಭವಾದಾಗಲೇ ಕೊಟ್ಟರು. ರೈತರು ಉತ್ಪಾದನೆ ಮಾಡುವ ವೆಚ್ಚಕ್ಕೆ ಅನುಗುಣವಾಗಿ ಬೆಲೆ ನಿಗದಿ ಮಾಡುವಂಥ ವ್ಯವಸ್ಥೆ ನಮ್ಮ ರಾಜ್ಯದಲ್ಲಿ ಆಗಬೇಕು ಎಂಬ ಬೇಡಿಕೆಯನ್ನು ಮುಂದೆ ಇಟ್ಟರು. ಅದೃಷ್ಟವಶಾತ್ ಕನಿಷ್ಠ ನಮ್ಮ ಆಹಾರ ಧಾನ್ಯಗಳಿಗೆ ಬೇಳೆ ಕಾಳುಗಳಿಗೆ, ತೆಂಗಿನಕಾಯಿಗೆ ಆಲೂಗೆಡ್ಡೆಗೆ ನಮ್ಮ ರಾಜ್ಯದಲ್ಲಿ ಬೆಂಬಲ ಬೆಲೆ ಘೋಷಣೆ ಮಾಡಿ ಆವರ್ತನಿಧಿ ಮಾಡತಕ್ಕಂಥ ಹೊಸ ಆಯಾಮವನ್ನು ನಮ್ಮ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಕೃಷ್ಣ ಅವರು ಜಾರಿಗೆ ತಂದಿದ್ದಾರೆ. ಅಂಥ ವ್ಯವಸ್ಥೆಯ ಆರಂಭಕ್ಕೆ ಚಾಲನೆ ಕೊಟ್ಟ ನಿಜವಾದ ಕಾನೂನು ತಜ್ಞ, ನಿಜವಾದ ಕೃಷಿತಜ್ಞ, ಪ್ರೊ॥ನಂಜುಂಡಸ್ವಾಮಿಯವರು. ರೇಷ್ಮೆಗೆ ಬಂದ ಪೆಬ್ರಿನ್ ಡಿಸೀಸ್ ಎಂಬ ಗಂಟುರೋಗದ ನಿವಾರಣೆಗೆ ವೈಜ್ಞಾನಿಕ ಸಲಹೆಗಳನ್ನು ನೀಡಿದರು. ಕೃಷಿತಜ್ಞರಾಗಿ, ರೈತ ಸಮುದಾಯಕ್ಕೆ ಹೆಚ್ಚು ಶಕ್ತಿಯನ್ನು ಕೊಟ್ಟು ಸಂಘಟನೆಗೆ ಕಾರಣರಾದ ಅವರ ಸ್ಮರಣೆ ಬಹಳ ಅವಶ್ಯಕ ಎಂದರು. ಶ್ರೀ ಎಸ್.ಎಸ್. ಪಾಟೀಲ್ ಅವರು ಮಾತನಾಡಿ, ನಂಜುಂಡಸ್ವಾಮಿಯವರ ಹೆಸರಿನಲ್ಲಿ ಸಂಸ್ಥೆ ತೆಗೆಯಲು ಸಲಹೆ ಆಗಿದೆ. ಅದರ ಜೊತೆಗೆ ಉತ್ತಮ ಬೆಳೆ ಹೆಚ್ಚು ಬೆಳೆಯುವಂಥ ಸ್ಪರ್ಧೆ ಏರ್ಪಡಿಸಿ ಹಾಗೆ ಬೆಳೆದಂಥ ರೈತರಿಗೆ ಪ್ರಶಸ್ತಿ ಕೊಡುತ್ತಿರುವಲ್ಲಿ ಸರ್ಕಾರವು ಆ ಪ್ರಶಸ್ತಿಗೆ ನಂಜುಂಡಸ್ವಾಮಿಯವರ ಹೆಸರನ್ನು ತಕ್ಷಣದಲ್ಲಿಯೆ ಇಟ್ಟರೆ ಒಳ್ಳೆಯದು. ಅದರಿಂದ ರೈತ ಸಮುದಾಯಕ್ಕೆ ಗೌರವ ಸಲ್ಲಿಸಿದಂತಾಗುತ್ತದೆ ಎಂದರು.

**ಶ್ರೀ ಆರಗ ಜ್ಞಾನೇಂದ್ರ ಅವರು:** ಇವತ್ತು ರೈತರಿಗೆ ಒಂದು ದೊಡ್ಡ ದನಿಯನ್ನು ಶಕ್ತಿಯನ್ನು ಒದಗಿಸಿದ್ದರೆ ಅದು ಪ್ರೊ॥ ನಂಜುಂಡಸ್ವಾಮಿ. ಅವರು ನಮ್ಮ ಕಣ್ಣನ್ನು ಸದನದ ಚರ್ಚೆಯಲ್ಲಿ ತೆರೆಸುವಂಥ ರೀತಿಯನ್ನು ಹೋರಾಟ ಮತ್ತು ಚಿಂತನೆಗಳನ್ನು ಕೊಟ್ಟಿತರಕ್ಕಂಥವರು; ರೈತರನ್ನು ಸರ್ಕಾರಿ ಕಛೇರಿಯಲ್ಲಿ ಗೌರವಿಸುವಂಥ ಸನ್ನಿವೇಶವನ್ನು ನಿರ್ಮಿಸಿದವರು. ರೈತರಿಗೆ ಅಧಿಕಾರಿಯ ಎದುರು ನಿಂತು

ಮಾತನಾಡುವಂಥ ಧೈರ್ಯ ಪ್ರಜ್ಞೆಯನ್ನು ನಿರ್ಮಾಣ ಮಾಡಿ ರೈತ ಚಳುವಳಿಯನ್ನು ಪ್ರಾರಂಭ ಮಾಡಿದರು. ರೈತರಿಗೆ ಒಂದು ದೊಡ್ಡ ಶಕ್ತಿಯನ್ನು ತುಂಬಿ ಕೊಟ್ಟಿದ್ದಾರೆ ಎಂದರು.

**ಶ್ರೀ ಬೆಲ್ಲದ್ ಚಂದ್ರಕಾಂತ ಗುರುಪ್ಪ** ಅವರು : ಪ್ರೊ॥ ನಂಜುಂಡಸ್ವಾಮಿ ಅವರು ಕರ್ನಾಟಕ ರಾಜ್ಯದಲ್ಲಿ ಮತ್ತು ರಾಷ್ಟ್ರದಲ್ಲಿ ರೈತ ಚಳುವಳಿಗೆ ಬಹಳ ದೊಡ್ಡ ಪ್ರಾಮುಖ್ಯತೆಯನ್ನು ತಂದುಕೊಟ್ಟರು. ರೈತ ಚಳುವಳಿ ಇಷ್ಟೊಂದು ಬೆಳೆದು ರಾಜ್ಯದಲ್ಲಿ ರಾಜಕೀಯ ಇಚ್ಛಾಶಕ್ತಿಯಿಂದ ಗ್ರಾಮೀಣ ರೈತರಿಗೆ ಸಹಾಯ ಮಾಡುವ ಯೋಜನೆಗಳು ಏನಾದರೂ ಬಂದಿದ್ದರೆ ಅವು ಮಾನ್ಯ ನಂಜುಂಡಸ್ವಾಮಿ ಅವರ ಹೋರಾಟದ ಮೂಲಕ ಎಂದು ಹೇಳಬೇಕಾಗುತ್ತದೆ. ಅಸಂಘಟಿತ ರೈತರನ್ನು ರೈತ ಹೋರಾಟದ ಮೂಲಕ ಸಂಘಟಿಸುವ ಕಾರ್ಯವನ್ನು ಮಾಡಿದರು. ಇಷ್ಟೇ ಅಲ್ಲ ಅನೇಕ ಜನರಿಗೆ ಅವರು ತರಬೇತಿ ಕೊಟ್ಟರು. ರೈತರ ವಿಷಯವಾಗಿ ಗ್ರಾಮೀಣ ಅಭಿವೃದ್ಧಿಯ ಬಗ್ಗೆ ಅವರಷ್ಟು ತಿಳಿದಿದ್ದವರು ಬಹುಶಃ ಯಾರೂ ಇಲ್ಲ. ಡಂಕೆಲ್ ವಿಷಯವಾಗಿ ಬಹಳ ದೊಡ್ಡ ಹೋರಾಟವನ್ನು ಮಾಡಿದರು. WTOನ ಎಲ್ಲ ವಿಷಯಗಳ ಮೇಲೆ ಬಹಳ ಪ್ರಬಲ ಹೋರಾಟವನ್ನು ಮಾಡಿದರು. ರೈತರ ಮೂವ್‌ಮೆಂಟ್ ಬಗ್ಗೆ ರೈತರ ಅಭಿವೃದ್ಧಿಯ ಬಗ್ಗೆ ರಾಷ್ಟ್ರದ ಬಹುಸಂಖ್ಯಾತ ಅಸಂಘಟಿತ ರೈತರಿಗೆ ಏನಾದರೂ ದನಿ ಕೊಡಬೇಕಾಗಿದ್ದರೆ ಮಾನ್ಯ ನಂಜುಂಡಸ್ವಾಮಿ ಅವರ ಹೆಸರಿನಲ್ಲಿ ಪ್ರತಿಷ್ಠಾನವನ್ನು ರಾಜ್ಯ ಸರ್ಕಾರವು ಪ್ರಾರಂಭ ಮಾಡುವುದು ಬಹಳ ಅವಶ್ಯಕ, ಎಂದರು.

**ಶ್ರೀ ಬಿ.ಆರ್.ಯಾವಗಲ್** ಅವರು ಮಾತನಾಡುತ್ತ; 1980ರ ದಶಕದಲ್ಲಿ ನರಗುಂದ ನವಲುಗುಂದದಿಂದ ಪ್ರಾರಂಭವಾದಂಥ ರೈತ ಚಳುವಳಿ ರಾಜ್ಯವ್ಯಾಪಿಯಾಗಿ ದೊಡ್ಡ ಪ್ರಮಾಣದಲ್ಲಿ ಹರಡಿತು; ಜನರಲ್ಲಿ ಜಾಗೃತಿ ಮೂಡಿಸಿತು; ವ್ಯವಸ್ಥೆಯ ವಿರುದ್ಧದ ಸಿಟ್ಟೂ ಹೊರಹಾಕಿದ ದೊಡ್ಡ ಚಳುವಳಿಯಾಗಿತ್ತು. ಅದನ್ನು ಸುಸಂಘಟಿತವಾದ ಒಂದು ವ್ಯವಸ್ಥೆಗೆ ತರುವಲ್ಲಿ ಇವರ ಪಾತ್ರ ಬಹಳ ದೊಡ್ಡದು, ಎಂದು ನಾನು ನೆನೆಯಬಯಸುತ್ತೇನೆ. ಅವರ ಒಂದು ದೊಡ್ಡ ಕೊಡುಗೆ ಎಂದರೆ ರೈತ ಸಂಘಟನೆಗಳನ್ನು ಒಂದೇ ವೇದಿಕೆಯಲ್ಲಿ ತಂದು ವ್ಯವಸ್ಥಿತವಾಗಿ ಬೆಳೆಸಿದುದಾಗಿದೆ. ಶಿವಮೊಗ್ಗ ಕಬ್ಬು ಬೆಳೆಗಾರರ ಸಂಘದ ಸದಸ್ಯರಾಗಿ ನಂಜುಂಡಸ್ವಾಮಿಯವರು ರುದ್ರಪ್ಪನವರ ನೇತೃತ್ವದ ಆ ಸಂಘದಿಂದ ಪ್ರಾತಿನಿಧಿಕವಾಗಿ ಬಂದರು. ಸಂಘಟನೆಯನ್ನು ವ್ಯವಸ್ಥಿತವಾಗಿ ರೂಪಿಸಿ ಡಂಕೆಲ್ – ಗ್ಯಾಟ್ ಒಪ್ಪಂದದ

ವಿರುದ್ಧವಾಗಿ ದೊಡ್ಡ ಹೋರಾಟವನ್ನು ಮಾಡಿದರು. ರೈತ ಸಂಘಟನೆಯನ್ನು ಎಲ್ಲಾ ರಾಜಕೀಯ ಪಕ್ಷಗಳಿಂದ ದೂರವಿಟ್ಟಿದ್ದರು, ಎಂದರು.

ಶ್ರೀ **ಎಂ.ಎಸ್.ಆತ್ಮಾನಂದ** ಅವರು ಮಾತನಾಡಿ, ರೈತ ಸಂಘದ ನಾಯಕರಾಗಿ ಶ್ರೀ ಎಂ.ಡಿ.ನಂಜುಂಡಸ್ವಾಮಿ ಅವರು ರೈತ ಸಮುದಾಯಕ್ಕೆ ಹೊಸ ಆಯಾಮವನ್ನು ಕೊಟ್ಟಂಥವರು. ನಮ್ಮ ಜಿಲ್ಲೆಯ ರೈತಪರ ಸಂಘಟನೆಯಲ್ಲಿ ಹಾಸುಹೊಕ್ಕಾಗಿ ಭಾಗವಹಿಸಿದ್ದರು. ರೈತರಿಗೆ ವೈಜ್ಞಾನಿಕ ತಳಹದಿಯ ಮೇಲೆ ಬೆಲೆ ನಿಗದಿ ಮಾಡಿ ಉತ್ತಮ ಬೆಲೆ ದೊರಕಬೇಕು ಎಂಬ ಏಕಮೇವ ಉದ್ದೇಶ ಅವರಿಗಿತ್ತು, ಎಂದರು.

**ವಿಷಯ 18**: ಶ್ರೀ ಕೆ.ಎನ್.ನಾಗೇಗೌಡ

**ಸಚಿವ ಶ್ರೀ ಮಲ್ಲಿಕಾರ್ಜುನ ಖರ್ಗೆ** ಅವರು: ಶ್ರೀ ಕೆ.ಎನ್.ನಾಗೇಗೌಡರು ಕ್ಯಾಬಿನೆಟ್‌ನಲ್ಲಿ ನೀರಾವರಿ ಸಚಿವರಾಗಿದ್ದರು. ಗ್ರಾಮೀಣರಿಗೆಂದು ಶಿಕ್ಷಣ ಸಂಸ್ಥೆಗಳನ್ನು ತೆರೆದವರು ಎಂದರು. **ಶ್ರೀ ಜಗದೀಶ್ ಶೆಟ್ಟರ್** ಅವರು: ಕಾವೇರಿ ಕಣಿವೆ ಪ್ರದೇಶದಿಂದ ಬಂದವರಾಗಿದ್ದರೂ, ಕೃಷ್ಣಾ ಕಣಿವೆಯೋಜನೆಗಳ ಬಗ್ಗೆ ಹೆಚ್ಚು ಮುತುವರ್ಜಿವಹಿಸಿ ಹೆಚ್ಚು ಹಣವನ್ನು ವಿನಿಯೋಗಿಸಿ ಆಲಮಟ್ಟಿ ಅಣೆಕಟ್ಟು ಯೋಜನೆಯನ್ನು ಒಂದು ಹಂತಕ್ಕೆ ತಂದರು. ಹೋರಾಟಗಾರರಾಗಿ ಎಷ್ಟೋ ಚಳುವಳಿಗಳಲ್ಲಿ ಪಾಲ್ಗೊಂಡಿದ್ದರು, ಎಂದರು. ಶ್ರೀ **ಬಿ.ಸೋಮಶೇಖರ್** ಅವರು: ಆಲಮಟ್ಟಿ ಡ್ಯಾಂ ಎತ್ತರವನ್ನು ಎತ್ತರಿಸಲು ಬಹಳ ಪ್ರಯತ್ನ ಮಾಡಿದರು. ಅದೇ ರೀತಿ ವಿಶ್ವೇಶ್ವರಯ್ಯ ನಾಲೆಯ ಆಧುನೀಕರಣಕ್ಕೆ ಹೆಚ್ಚು ಆಸಕ್ತಿ ವಹಿಸಿ ಹಣ ಖರ್ಚು ಮಾಡಿದರು, ಎಂದರು. **ಶ್ರೀ ಸಿ.ಚೆನ್ನಿಗಪ್ಪ** ಅವರು: ಶ್ರೀ ನಾಗೇಗೌಡರು ಒಬ್ಬ ರೈತ ನಾಯಕರಾಗಿ ತತ್ವಾಧಾರಿತ ವ್ಯಕ್ತಿ ಆಗಿದ್ದರು. ನೀರಾವರಿ ಸಚಿವರಾಗಿ ಕೃಷ್ಣ ಜಲಭಾಗ್ಯ ನಿಗಮದ ಮೂಲಕ ರೈತರಿಗೆ ಸಹಾಯವಾಗುವಂಥ ತೀರ್ಮಾನವನ್ನು ತೆಗೆದುಕೊಂಡಿದ್ದರು. ರಾಜ್ಯದ ಯಾವುದೇ ಮೂಲೆಯ ರೈತರಿಗೂ ಅನುಕೂಲ ಮಾಡಿಕೊಡಬೇಕೆಂಬ ಉದ್ದೇಶದಿಂದ ನೀರಾವರಿ ಕ್ಷೇತ್ರಕ್ಕೆ ಸಚಿವರಾಗಿ ಹೆಚ್ಚು ಹಣ ನೀಡಬೇಕೆಂದು ಹಕ್ಕೊತ್ತಾಯವಿಡುತ್ತಿದ್ದರು. ನೀರಾವರಿಯಿಂದ ಮಾತ್ರ ರಾಜ್ಯದ ರೈತರು ಆರ್ಥಿಕವಾಗಿ ಸಬಲರಾಗಬಹುದು ಎನ್ನುವಂಥದ್ದನ್ನು ನಾಗೇಗೌಡರು ಅರಿತಿದ್ದರು, ಎಂದರು. **ಶ್ರೀ ವಿ.ಮುನಿಯಪ್ಪನವರು;** 1992 ರಲ್ಲಿ ಅವರು ಸಚಿವರಾಗಿದ್ದಾಗ ನಮ್ಮ ಜಿಲ್ಲೆಯ ಹಾಲು ಉತ್ಪಾದಕರು ಬಹಳ ತೊಂದರೆಗೀಡಾಗಿದ್ದರು. ಆ ಸಂದರ್ಭದಲ್ಲಿ ಬಹಳ ದೊಡ್ಡ ಧರಣಿಗಳು ನಡೆದವು. ಆಗ ಶ್ರೀ ನಾಗೇಗೌಡರನ್ನು ಆಹ್ವಾನಿಸಿ ಹಾಲು ಉತ್ಪಾದಕರ ಸಮಸ್ಯೆಗಳನ್ನು

ವಿನರಿಸಿ ಹಾಲಿನ ದರವನ್ನು ಹೆಚ್ಚು ಮಾಡಬೇಕೆಂದು ಕೋರಿದೆವು. ಅದಕ್ಕೆ ಮನ್ನಣೆ ಕೊಟ್ಟು ಸ್ಥಳದಲ್ಲಿಯೇ ಆ ಬಗ್ಗೆ ಘೋಷಿಸಿ, ಸಚಿವ ಸಂಪುಟದ ಮುಂದೆ ತಂದು ಹಾಲಿನ ದರವನ್ನು ಹೆಚ್ಚು ಮಾಡಲು ಒಪ್ಪಿಸಿ ಅದರಂತೆ ನಡೆದುಕೊಂಡರು. ರೈತ ಪ್ರತಿನಿಧಿಯಾಗಿ ಬಯಲು ಪ್ರದೇಶಗಳಿಗೆ ನೀರು ಕೊಡತಕ್ಕಂಥ ಪರಮಶಿವಯ್ಯನವರ ವರದಿಯನ್ನು ಜಾರಿಗೆ ಕೊಡಲು ಅವರ ವಿಶೇಷ ಕಾಳಜಿ ಇತ್ತು, ಎಂದರು.

**ಶ್ರೀ ಎಸ್.ಎಸ್.ಪಾಟೀಲ್** ಅವರು ಮಾತನಾಡಿ; ರಾಜ್ಯದಲ್ಲಿ ರೈತರಂಥ ಅಸಂಘಟಿತ ವಲಯದ ಪರವಾಗಿ ಹೋರಾಟದ ಮುಂಚೂಣಿಯಲ್ಲಿದ್ದ ಶ್ರೀ ಬೈರೇಗೌಡರು, ಶ್ರೀ ವೈ.ಕೆ.ರಾಮಯ್ಯನವರು, ನಂತರ ಶ್ರೀ ನಾಗೇಗೌಡರಂಥ ರೈತ ನಾಯಕರನ್ನು ನಾವಲ್ಲದೆ ರೈತ ಸಮುದಾಯವೂ ಕಳೆದುಕೊಂಡಿದೆ. ಉತ್ತರಕರ್ನಾಟಕದ ಬಹಳ ಹಿಂದುಳಿದ ಮುಂಡರಗಿ, ಹಡಗಲಿ ಮತ್ತು ಕೊಪ್ಪಳ ತಾಲೂಕಿಗೆ ಉಪಯೋಗವಾದಂಥ ಹೂಲಿಗುಡ್ಡ ನೀರಾವರಿ ಯೋಜನೆಯ ಬಗ್ಗೆ, ಅಂಥ ಬರಗಾಲ ಪೀಡಿತ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಒದಗಿಸುವ ಬಗ್ಗೆ ಅವರಿಗೆ ತುಂಬು ಕಾಳಜಿ ಇತ್ತು; ಹೋರಾಟವಿತ್ತು. ಕೃಷ್ಣಾ ಮೇಲ್ದಂಡೆ ಯೋಜನೆಯ ಕೀರ್ತಿಯೂ ಅವರಿಗೆ ಸಲ್ಲಬೇಕಾಗುತ್ತದೆ. ಅಂಥ ನಾಯಕರು ಇಂದು ನಮ್ಮಿಂದ ಕಣ್ಮರೆ ಆಗಿದ್ದಾರೆ ಎಂದರು. **ಶ್ರೀ ಅರಗಜ್ಞಾನೇಂದ್ರ** ಅವರು ಮಾತನಾಡಿ ಪಶುಸಂಗೋಪನಾ ಇಲಾಖೆಯ ಮಹತ್ವವನ್ನು ಮಂತ್ರಿಯಾಗಿ ತೋರಿಸಿಕೊಟ್ಟವರು ಶ್ರೀ ನಾಗೇಗೌಡರು. ಅವರು ಅಧಿಕಾರ ವಹಿಸಿಕೊಂಡ ಸಂದರ್ಭದಲ್ಲಿ ತುಮಕೂರು, ಮಂಡ್ಯ, ಕೋಲಾರ ಹಾಗೂ ಮೈಸೂರು ಡೈರಿಗಳಲ್ಲಿ ಹಾಲಿನ ಬಟವಾಡೆಯನ್ನು ಕೊಡಲು ಸಾಧ್ಯವಾಗದೆ ರೈತರು ಬಂದ್, ರಸ್ತೆತಡೆ ಮಾಡಿ ಚಳವಳಿಯನ್ನು ಕೂಡ ನಡೆಸುತ್ತಿದ್ದರು. ಲಾಠಿ ಪ್ರಹಾರವೂ ಅವರ ಮೇಲಾಗಿತ್ತು. ಆಗ ಶ್ರೀ ನಾಗೇಗೌಡರು ಇಲಾಖೆಯ ವಿಸ್ತರಣೆಗಿಂತ, ಉತ್ಪಾದಿತ ಹಾಲಿಗೆ ಮಾರಾಟ, ಹಾಲು ಉತ್ಪನ್ನಗಳ ಮಾರಾಟದ ಬಗ್ಗೆ ನಿಗಾ ಕೊಡಲು ಯೋಚಿಸಿದರು. ಡೈರಿ ಮತ್ತು ಹಾಲಿನ ಸೊಸೈಟಿಗಳ ಮೂಲಕ ಎಲ್ಲಾ ಪ್ರಾಥಮಿಕ ಶಾಲೆಗಳಿಗೆ ಹಾಲು ಸರಬರಾಜು ಮಾಡುವ ವ್ಯವಸ್ಥೆಯನ್ನು ಜಾರಿಗೆ ತಂದರು; ಆ ಹಾಲಿನ ಸರ್ಕಾರ ಹಣ ಕೊಡುವ ಹಾಗೆ ಮಾಡಿದರು, ಎಂದರು. **ಶ್ರೀ ಬೆಲ್ಲದ್ ಚಂದ್ರಕಾಂತ್ ಗುರಪ್ಪ** ಅವರು ಮಾನ್ಯ ನಾಗೇಗೌಡರು, ಕೃಷ್ಣಾ ಇರಬಹುದು, ಕಾವೇರಿ ಇರಬಹುದು ಈ ಎಲ್ಲಾ ಜಲಾನಯನಗಳ ಮೂಲಕ ರೈತರಿಗೆ ನೀರನ್ನು ತೀವ್ರವಾಗಿ ಒದಗಿಸುವುದು, ಈ ಬಗ್ಗೆ ಪ್ರಯತ್ನ ಅವರದಾಗಿತ್ತು. ಮಲಪ್ರಭಾಗೆ ಮಹಾದಾಯಿಯನ್ನು

ಜೋಡಿಸಬೇಕೆಂದು ಗೋವಾ ಸರ್ಕಾರವನ್ನು ಒತ್ತಾಯಿಸಿ ಈ ಕೆಲಸವಾಗಬೇಕೆಂದು ಅವರ ಪ್ರಯತ್ನವಿತ್ತು. ರೈತರ ಸಲುವಾಗಿ ದೊಡ್ಡಬಳ್ಳಾಪುರದಲ್ಲಿ ನಂದಿ ಸೀಡ್ಸ್ ಪ್ರೊಸೆಸಿಂಗ್ ಯೂನಿಟ್ ಹಾಕಿ ಸೀಡ್ ಉತ್ಪಾದನೆ ಮಾಡುವಂಥ ಕಾರ್ಯದಲ್ಲಿ ಶಾಸಕರಾಗಿ ತೊಡಗಿದವರು. ಕೇಂದ್ರ ರೇಷ್ಮೆ ಮಂಡಲಿ ಅಧ್ಯಕ್ಷರಾಗಿ, ರೈತ ಸಮಾಜದ ಬೆಳವಣಿಗೆಗಾಗಿ ಮಾಡಿದ ಸೇವೆಯನ್ನು ಸ್ಮರಿಸಿಕೊಳ್ಳಬೇಕಾಗಿದೆ ಎಂದರು. ಶ್ರೀ **ಬಿ.ಆರ್.ಯಾವಗಲ್** ಅವರು, ದಿ॥ ನಾಗೇಗೌಡರು ನೀರಾವರಿ ಸಚಿವರಾಗಿ ಉತ್ತರ ಕರ್ನಾಟಕದ ಭಾಗದ ಅನೇಕ ಯೋಜನೆಗಳಿಗೆ ಹಣವನ್ನು ಒದಗಿಸುವ ಮೂಲಕ ಬಹಳಷ್ಟು ಚಾಲನೆ ನೀಡಿದರು. ಪಶುಸಂಗೋಪನಾ ಸಚಿವರಾಗಿಯೂ ಬಹಳ ದೊಡ್ಡ ಕೊಡುಗೆಯನ್ನು ನೀಡಿದ್ದಾರೆ ಎಂದರು. **ಶ್ರೀ ಎಂ.ಎಸ್.ಆತ್ಮಾನಂದ** ಅವರು; ಮಂಡ್ಯ ಜಿಲ್ಲೆಯವರಾಗಿ ದಿ॥ ನಾಗೇಗೌಡರು ಮೂರು ದಶಕಗಳ ಕಾಲ ರಾಜ್ಯಕ್ಕೆ ಮತ್ತು ಜಿಲ್ಲೆಗೆ ಅನುಪಮಸೇವೆ ಸಲ್ಲಿಸಿದ್ದಾರೆ. ಆಧುನೀಕರಣ ನೀರಾವರಿ ಕಾಮಗಾರಿಗೆ ಚಾಲನೆ ನೀಡಿದರು; **ದಿ॥ ಮುನಿರಾಜು** ಅವರೂ ಶಾಸಕರಾಗಿ ರೇಷ್ಮೆ ಕೃಷಿಗೆ ತುಂಬಾ ಪರಿಶ್ರಮ ಕೊಟ್ಟು ಅದರಲ್ಲಿ ನಾವೀನ್ಯತೆಯನ್ನು ತರಬೇಕೆಂದು ರೈತರಿಗೆ ಉಪಯುಕ್ತವಾದ ವಿಚಾರಗಳನ್ನು ಅವರ ಗಮನಕ್ಕೆ ತರುತ್ತಿದ್ದರು ಎಂದರು.

ಹೀಗೆಯೇ **ದಿ॥ವಾದಿರಾಜ್** ಅವರ ಬಗ್ಗೆ ಮಾನ್ಯ ಸದಸ್ಯರು ತಮ್ಮ ಭಾವನೆಗಳನ್ನು ವ್ಯಕ್ತಪಡಿಸಿದರು. ಸಭಾಧ್ಯಕ್ಷರು ದಿವಂಗತರುಗಳಿಗೆ ಗೌರವ ಸೂಚನೆಯ ಸಲುವಾಗಿ ಎದ್ದು ನಿಂತು ನಿಮಿಷಕಾಲ ಮೌನವಾಚರಿಸಲು ಕೇಳಿಕೊಂಡಂತೆ ಎಲ್ಲರೂ ಎದ್ದು ನಿಂತು ನಿಮಿಷದ ಮೌನವನ್ನಾಚರಿಸಿ ನಂತರ ಸಂತಾಪ ಸೂಚಕ ನಿರ್ಣಯವನ್ನು ಮೃತರ ಕುಟುಂಬ ವರ್ಗದವರಿಗೆ ಕಳುಹಿಸುವ ಬಗ್ಗೆ ಅಧ್ಯಕ್ಷರು ತಿಳಿಸಿದರು.

ಶಾಸಕೇತರರ ಪೈಕಿ ರಾಜ್ಯ ರೈತ ಸಂಘದ ಕಾರ್ಯಕಾರಿ ಸಮಿತಿ ಸದಸ್ಯ ಶ್ರೀ ಡಿ.ಎಸ್. ಕಲ್ಮಠ್ ಸಿಂಧನೂರು ಅವರನ್ನು (12.3.07ರಂದು) ಸಂದರ್ಶಿಸಿದಾಗ; ರೈತ ಸಂಘದ ವತಿಯಿಂದ ಸಿಂಧನೂರಿನಲ್ಲಿ ಗಾಂಧಿ ಸತ್ಯಾಗ್ರಹ ಮಾದರಿಯಲ್ಲಿ ಚಳವಳಿ, ರಾಸ್ತಾರೋಕೋ, ಕಛೇರಿ ಮುತ್ತಿಗೆ, 1996ರಲ್ಲಿ ಗಂಗಾವತಿ ತಾಲೂಕಿನಲ್ಲಿ 3 ಸಾವಿರ ರೈತರಿಂದ ನೀರಿನ ಹಂಚಿಕೆ ಸಂಬಂಧದಲ್ಲಿ ನೀರಿನ ಚಳವಳಿ, ಶಿವರಾತ್ರಿಯ ದಿನದಂದು, ಆಂಧ್ರಕ್ಕೆ ಅಣೆಕಟ್ಟೆಯಿಂದ ಬಿಡುತ್ತಿದ್ದ ನೀರನ್ನು ತಡೆಯಲು ಅಣೆಕಟ್ಟೆಗೆ 10 ಸಾವಿರ ರೈತರಿಂದ ಮುತ್ತಿಗೆ ಹಾಕಿ ಯಶಸ್ವಿಯಾದದ್ದು, 1992ರಲ್ಲಿ ಬಹುರಾಷ್ಟ್ರೀಯ ಕಂಪೆನಿಯಾದ ಕಾರ್ಗಿಲ್ ಕಂಪೆನಿಯ ಕಟ್ಟಡವನ್ನು ಬಳ್ಳಾರಿಯಲ್ಲಿ ಒಡೆದು ಹಾಕಿದ್ದು,

ಸಿಂಧನೂರಿನಲ್ಲಿ 1998ರಲ್ಲಿ ಬಿ.ಟಿ.ಹತ್ತಿ ಸಂಬಂಧ ಕಂಪೆನಿಯ ಬೀಜ ಸ್ವಾಮ್ಯದ ವಿರುದ್ಧ ಚಳವಳಿ ಮಾಡಿದ್ದು, ಜರ್ಮನಿಯಲ್ಲಿ ನಂಜುಂಡಸ್ವಾಮಿಯವರೊಡನೆ ಬಹುರಾಷ್ಟ್ರೀಯ ಕಂಪೆನಿಗಳ ಶೋಷಣೆಗಳ ವಿರುದ್ಧ ಮೆರವಣಿಗೆಯಲ್ಲಿ ಪಾಲ್ಗೊಂಡಿದ್ದು, ಇವೆಲ್ಲಕ್ಕೂ ಪ್ರೊ॥ಎಂ.ಡಿ.ಎನ್ ತಮಗೆ ಒತ್ತಾಸೆ ನೀಡಿದ ಬಗ್ಗೆ ತಿಳಿಸಿದರು. ಅಂದರೆ ರಾಜ್ಯದ ಮೂಲೆ ಮೂಲೆಗಳಲ್ಲಿ ರೈತರ ಹೋರಾಟಕ್ಕೆ ಎಂ.ಡಿ.ಎನ್ ಹೇಗೆ ಪ್ರೇರಕ ಶಕ್ತಿಯಾಗಿದ್ದರು ಎಂಬ ಚಿತ್ರ ಇಲ್ಲಿ ದೊರೆಯುತ್ತದೆ.

**ವಿಷಯ 19:** ರೈತ ಹೋರಾಟದ ವ್ಯಕ್ತಿತ್ವಗಳು (ಅನ್ಯಮೂಲಗಳಿಂದ)

ರೈತ ಪರ ಚಿಂತನೆ ಪ್ರೊ॥ ಎಂ.ಡಿ.ಎನ್. ಅವರ ನಿತ್ಯದ ಮಿಡಿತವಾಗಿತ್ತು. ತುತ್ತಿಡುವ ರೈತನಿಗೆ ಇಡೀ ದೇಶವೇ ಸಾಲಗಾರ ಎನ್ನುತ್ತಿದ್ದರು. ಆ ಮಾತಿನಲ್ಲಿ ರೈತ ಇಡುತ್ತಿದ್ದ ತುತ್ತಿನ ಇಡುಗಂಟನ್ನು ಬಳಸಿದವರು ತಮ್ಮ ಬದುಕಿನ ನಿರ್ವಹಣೆಗೆ ಬಳಸಿದವರು ಸಾಲಗಾರರು. ಅಂತಹ ರೈತನ ಸಾಲ ತೀರಿಸಲು, ಸಮಾಜ, ರಾಜ್ಯ, ದೇಶ ಎಲ್ಲರೂ ಬಾಧ್ಯಸ್ಥರು ಎಂಬ ನಿಲುವು ಅವರದಾಗಿತ್ತು. ರೈತ ಮುಗ್ಧ. ಇದನ್ನೆಲ್ಲ ಕೇಳದೆ ತಾನೇ ಉತ್ತು ಬಿತ್ತಲು ಸಾಲ ತಂದು ಸಾಲಗಾರನಾಗಿ, ಸಾಲ ತೀರಿಸಲಾಗದೆ ಜೀವ ತೆರುತ್ತಿದ್ದ. ತನ್ನ ಹಕ್ಕನ್ನು ತಿಳಿಯದೆ ಅವನ ಮೇಲೆ ಸಮಾಜ ಹಾಗೂ ಆಡಳಿತದ ಸವಾರಿ ನಡೆಯುತ್ತಿತ್ತು. ಅಂತಾಗಿ ಈ ಬಗ್ಗೆ ರೈತನ ಸ್ವಾಭಿಮಾನಕ್ಕೆ ಅವರು ಪುಳಕವಿಟ್ಟರು. ಬೌದ್ಧಿಕ ನೆಲೆ ಇಟ್ಟರು. ಆಧುನಿಕ ಸಿದ್ಧಾಂತದ ಬಲವಿತ್ತರು. ಚಳವಳಿಯ ಬಲವನ್ನು ಉದ್ದೇಶಿಸಿದರು. ಆತ್ಮ ಸ್ಥೈರ್ಯ ತುಂಬಿದರು. ಜಾಗೃತಗೊಂಡ ರೈತ ಇಂದು ಪ್ರಶ್ನಿಸುತ್ತಿದ್ದಾನೆ. ಅದುಮಿಟ್ಟಿದ್ದ ಸಮಸ್ಯೆಗಳನ್ನು ಸೆಳೆದು ತೋರಿ ಪರಿಹಾರ ಕೇಳುತ್ತಿದ್ದಾನೆ. ಇಂಥ ಶಕ್ತಿಯನ್ನು ರೈತರಲ್ಲಿ ಪ್ರಖರಗೊಳಿಸಿದವರು ಎಂ.ಡಿ.ಎನ್. ಅಧಿಕಾರಶಾಹಿಯನ್ನು ಪಳಗಿಸುವ (Taming the Burecocracy) ಕಲೆಯನ್ನು ರೈತರಿಗೆ ಕಲಿಸಿಕೊಟ್ಟರು. ಇಂದು ನಡೆಯುತ್ತಿರುವ ರೈತ ಚಳುವಳಿಯಾಗಲಿ ದಲಿತ ಚಳುವಳಿಯಾಗಲಿ ಇತರ ಚಳುವಳಿಯಾಗಲಿ, ಯಾವುದೇ ಪ್ರಗತಿಪರ ಚಳವಳಿಗಳಿಗೆ ನೆಲೆಗಟ್ಟು ಕಟ್ಟಿಕೊಟ್ಟರು. ರೈತ ಚಳವಳಿ, ರೈತ ಸಂಘ, ರೈತರ ಸ್ವಾಭಿಮಾನದ ಜಾಗೃತಿಯಲ್ಲಿ ಅವರು ಅವಿಭಾಜ್ಯ ಸ್ವರೂಪವಾಗಿದ್ದರು.

ಭಾರತ ಎಂದರೆ ಹಳ್ಳಿಗಳ, ಚೈತನ್ಯದ ಸಂಯುಕ್ತ ರೂಪ; ರೈತರೇ ಅದರ ಜೀವ ಬಂಧುಗಳು. ಅಂತೇ ಚುನಾವಣೆಕಾಲದಲ್ಲಿ ರಾಜಕೀಯ ಪಕ್ಷಗಳು ಮಾಡುವ ದುರಾಚಾರಗಳನ್ನು ಮೌನವಾಗಿ ನೋಡದೆ ಬಯಲಿಗೆಳೆಯಬೇಕು. ರೈತರು ಈ

ಕೆಲಸವನ್ನು ಮಾಡಬಲ್ಲ ಗಟ್ಟಿಗರು. ಅವರಿಗೊಂದು ನಾಯಕತ್ವ ಬೇಕು ಎಂದು. ರಾಜ್ಯ ರೈತ ಸಂಘದ ಪ್ರಣಾಳಿಕೆಯಲ್ಲಿ ಇದನ್ನೆಲ್ಲ 1984ರಲ್ಲಿಯೆ ಸಾರಿದರು. ರೈತರು ಭೂಹಿಡುವಳಿದಾರರಾಗಿ ದೇಶದ ಒಡೆಯರು. ಹುಟ್ಟಿನಿಂದಲೇ ಬಂದ ಹೊಲಗಳ ಮಾಲೀಕರು. ಅವರು ಅಂತಾಗಿ 'ಜನ್ಮಿ'ಗಳು. ಅಂದ ಮೇಲೆ ಅಧಿಕಾರಿಗಳಾಗಲಿ, ಸಮಾಜವಾಗಲಿ ಅವನಿಗೆ ಗೌರವ ತೋರಬೇಕು. ಋಣವನ್ನು ಸೇವೆಯ ಮೂಲಕ ತೀರಿಸಬೇಕು. ಅವನೇನು ಬಿಟ್ಟಿ ಚಾಕರಿಯನ್ನು ಅವರಿಂದ ಬಯಸುತ್ತಿರಲಿಲ್ಲ. ತನ್ನ ದುಡಿಮೆಗೆ ಹಕ್ಕಿಗೆ, ಒಡೆತನಕ್ಕೆ ನೀಡಬೇಕಾದ ಗೌರವ, ಸಹಜ ಪ್ರತಿಫಲವನ್ನು ಕೇಳುತ್ತಿದ್ದ. ಇದನ್ನೇ ಪ್ರೊ॥ಎಂ.ಡಿ.ಎನ್. ಎತ್ತಿ ಹೇಳುತ್ತಿದ್ದರು. ರೈತ ಚಳುವಳಿಗೆ ಹಸಿರು ಟವಲನ್ನು ಶಾಂತಿ ಸಂಕೇತದ ಜೊತೆಗೆ ಶೋಷಣೆ ವಿರುದ್ಧ ಹೋರಾಟಕ್ಕೆ ಪ್ರತಿಭಟನೆಗೆ ಸಂಕೇತವಾಗಿಟ್ಟರು.

ನಾಡಿನ ಪಾರಂಪರಿಕ ಕೃಷಿ, ಜೈವಿಕ ತಂತ್ರಜ್ಞಾನಕ್ಕೂ ಇರುವ ವ್ಯತ್ಯಾಸಗಳು, ಗ್ಯಾಟ್–ಡಂಕಲ್ ಪ್ರಸ್ತಾಪಗಳು ತಂದೊಡ್ಡುವ ಸವಾಲುಗಳು, ಅದರಿಂದ ಭವಿಷ್ಯತ್ತಿಗೆ ಆಗುವ ಸಂಕಷ್ಟಗಳ ಬಗ್ಗೆಯೂ ರೈತರಲ್ಲಿ ಜಾಗೃತಿ ಉಂಟುಮಾಡಿದರು. ರೈತಸಂಘಟನೆಯ ಬಲವನ್ನು ಪ್ರದರ್ಶಿಸಿದರು.

ಅಡಿಕೆಯ ಬೆಳೆಗಾರ ಇರಲಿ ಕಾಫಿ ಬೆಳೆಗಾರ ಇರಲಿ ರೈತ ವೃಂದ ಬಂಧುಗಳೆಂದು ಮನನ ಮಾಡಿಸಿ ರೈತ ಚಳುವಳಿಗೆ ಸಮಗ್ರತೆಯನ್ನು ತಂದರು. **ಕಡಿದಾಳು ಶಾಮಣ್ಣ, ಎನ್.ಡಿ.ಸುಂದರೇಶ್** ಈ ದಿಸೆಯಲ್ಲಿ ಜೊತೆಯಾದರು. ಗ್ರಾಮಗಳ ಮೇಲೆ ಜಾಗತೀಕರಣದ ದುಂಬಾಲು ಬೀಳುತ್ತಿತ್ತು. ಅಂತೇ ಗ್ರಾಮದ ಹೊಣೆಯನ್ನು ರೈತ ಸಂಘ ಭರಿಸಬೇಕು ಎಂಬುದು ಅವರ ಆಶಯವಾಗಿತ್ತು. ರೈತರನ್ನು ಅಂತರಾಷ್ಟ್ರೀಯ ವಿಚಾರಸಂಕಿರಣಗಳಿಗೆ ಕರೆದುಕೊಂಡು ಹೋಗಿ ದೇಸೀ ಕೃಷಿಯ ಮಹತ್ವದ ಬಗ್ಗೆ ವಿವರಿಸುತ್ತಿದ್ದರು; ಬೀಜ ಕಂಪೆನಿಗಳ (ಕಾರ್ಗಿಲ್, ಮಾನ್ಸಾಂಟೋ) ಮೇಲೆ ಧಾಳಿ ಮಾಡುತ್ತಿದ್ದರು. ರೈತ ಮತ್ತು ದಲಿತ ಚಳುವಳಿಗಳನ್ನು ಸೇರಿಸಲು ಮಾಡಿದ ಪ್ರಯತ್ನ ಮಾತ್ರ ಅವರಿಗೆ ಹೆಚ್ಚಿನ ಫಲಶ್ರುತಿ ತಂದುಕೊಡಲಿಲ್ಲ.

ರೈತರ ಬೆಳೆಗಳಿಗೆ ವೈಜ್ಞಾನಿಕ ಬೆಲೆ ಬೇಕು, ಎನ್ನುವ ಅವರ ಮಾತಿನಲ್ಲಿ ಬಿತ್ತಿ ಉತ್ತಿ ಬೆಳೆ ತೆಗೆದು ಮಾರುಕಟ್ಟೆಗೆ ತರುವವರೆಗಿನ ಖರ್ಚುವೆಚ್ಚಗಳನ್ನೆಲ್ಲ ಲೆಕ್ಕ ಹಾಕಿ, ಅವನ ಬದುಕಿನ ನಿರ್ವಹಣೆಯ ವೆಚ್ಚವನ್ನು ಗಮನಿಸಿ ಆದಾಯ ನಿರ್ಧರಿಸಿ, ಬೆಲೆ ನಿಗದಿಗೊಳಿಸಬೇಕು ಎಂಬ ಧ್ವನಿ ಇರುತ್ತಿತ್ತು. ಗ್ರಾಮಮಟ್ಟಕ್ಕೂ ರಾಜ್ಯ ರೈತ

ಸಂಘದ ಚಳುವಳಿಯನ್ನು ವಿಸ್ತರಿಸಿ ರೈತರಲ್ಲಿ ಆತ್ಮಸ್ಥೈರ್ಯ ಹುಟ್ಟಿಸಿದರು; ಆತ್ಮಗೌರವ ತಂದುಕೊಟ್ಟರು. ಅವರ ಚಿಂತನೆಯ ಕ್ರಮ ದೇಶಿ ನೆಲೆಯ ಪ್ರತಿಭೆಯನ್ನು ಗುರುತಿಸುವುದರಲ್ಲಿತ್ತು. ಚಾರಿತ್ರಿಕವಾಗಿ ರೈತನ ಕೃಷಿಜ್ಞಾನ ಯಾವ ಮಣ್ಣಿನಲ್ಲಿ ಯಾವ ಬೀಜ ಬಿತ್ತಿ ಯಾವ ಮಳೆಗೆ ಬಿತ್ತನೆ ಮಾಡಬೇಕು ಎಂದೆಲ್ಲ ಇರುವಲ್ಲಿ ಭಾರತದಲ್ಲಿ ಪ್ರಸ್ತುತವಾಗಿ ಅದು ಕೃಷಿ ನಡೆದು ಬಂದ ಹಾದಿಯಾಗಿದೆ ಹಾಗೂ ಸಿಂಧೂ ಸಂಸ್ಕೃತಿಯ ಕಾಲದಿಂದ ಬಂದದ್ದು ಎಂಬುದೂ ಅವರಿಗೆ ಒಪ್ಪಿತವಾಗಿತ್ತು.

ಕರ್ನಾಟಕದಲ್ಲಿ ಅತ್ಯಂತ ಹೆಚ್ಚು ಸುದ್ದಿ ಮಾಡಿದ್ದು, ರೈತರಲ್ಲಿ ತಮ್ಮ ಪರಿಸ್ಥಿತಿ ಕುರಿತು ಜಾಗೃತಿಯನ್ನುಂಟುಮಾಡಿದ್ದು ಎಚ್.ಎಸ್.ರುದ್ರಪ್ಪ, ಸುಂದರೇಶ್, ನಂಜುಂಡಸ್ವಾಮಿ ಮುಂತಾದವರ **ಕರ್ನಾಟಕ** ರಾಜ್ಯ **ರೈತಸಂಘ** ಎಂಬುದರಲ್ಲಿ ಅನುಮಾನವಿಲ್ಲ. ಅದು ರೈತರ ಸಮಸ್ಯೆಗಳನ್ನು ಇಡೀ ರಾಜ್ಯದ ಆರ್ಥಿಕ ಸಂದರ್ಭದಲ್ಲಿಟ್ಟು ಕೃಷಿ ಮತ್ತು ಕೈಗಾರಿಕೆ, ರೈತ ಮತ್ತು ಸರ್ಕಾರದ ಸಂಬಂಧಗಳನ್ನು ಮೊತ್ತ ಮೊದಲ ಬಾರಿಗೆ ವಿಶ್ಲೇಷಿಸಿತು. ಸರ್ಕಾರ ಹೂಡುವ ಹಣ ಮತ್ತು ಸರ್ಕಾರದ ತಾರತಮ್ಯ ನೀತಿಯನ್ನು ರೈತ ಪ್ರಶ್ನಿಸತೊಡಗಿದ, ಖಂಡಿಸತೊಡಗಿದ ಎಂದಿದ್ದಾರೆ ಪಿ.ಲಂಕೇಶ್[17]. ಆದರೆ ರೈತ ಮತ್ತು ಸರ್ಕಾರದ ಸಂಬಂಧದಲ್ಲಿ ಸಂಘರ್ಷ ಕಂಡರೂ ಸಾಮಾಜಿಕ ನೆಲೆಯಲ್ಲಿ ಕೃಷಿ ಕ್ಷೇತ್ರದಲ್ಲಿ ಮಹತ್ವ ಕೊಟ್ಟದ್ದೂ ಸತ್ಯ. ಅದರ ಚಾಲನೆಯಲ್ಲಿ ಮಿತಿಗಳಂತು ಉಕ್ಕಿ ಬಂದದ್ದುಂಟು.

ಸಾಲವು ರೈತರನ್ನು ಆರ್ಥಿಕವಾಗಿ ದುರ್ಬಲರನ್ನಾಗಿ ಮಾಡುತ್ತದೆ. ಅವೈಜ್ಞಾನಿಕ ಸಾಲ ನೀತಿ, ಅವೈಜ್ಞಾನಿಕ ಬೆಲೆ ನೀತಿಯಿಂದ ರೈತರು ಹಾಳಾಗುವುದರ ಬಗ್ಗೆ ಅವರ ಚಿಂತನೆ ಇತ್ತು. ಇದರ ಹಿನ್ನೆಲೆ ಮುನ್ನಲೆಗಳನ್ನು ಅರಿತುಕೊಂಡು ಹೋರಾಟದ ಮುಂಚೂಣಿಯಲ್ಲಿ ಸಾಗುತ್ತಿದ್ದರು. ಗ್ರಾಮ ಕೈಗಾರಿಕೆ, ಸಣ್ಣ ನೀರಾವರಿ ಕುರಿತು ಅವರ ಕಾಳಜಿ ಇತ್ತು.

ಶಿವಮೊಗ್ಗೆಯಲ್ಲಿ ಕಬ್ಬಿಗೆ ಯೋಗ್ಯ ಬೆಲೆ ಬಯಸಿ ಕಬ್ಬು ಬೆಳೆಗಾರರ ಹೋರಾಟವು ಮಾಗಿದ ಅನುಭವದ ಹೆಚ್.ಎಸ್.ರುದ್ರಪ್ಪನವರ ನೇತೃತ್ವದಲ್ಲಿ ನಡೆಯುತ್ತಿತ್ತು. ಇಂಥ ಸಂದರ್ಭದಲ್ಲಿ ನಂಜುಂಡಸ್ವಾಮಿ ಶಿವಮೊಗ್ಗಕ್ಕೆ ಬಂದರು. ಚಿಂತನ ಸಭೆ ನಡೆದು ಬೆಳೆಗಾರರ ಹೋರಾಟ ಬೆಲೆಗಳಿಗಾಗಿ ಅಷ್ಟೇ ಅಲ್ಲದೆ ಇಡೀ ರೈತರ ಹೋರಾಟವಾಗಬೇಕು ಎಂಬ ಆಶಯ ವ್ಯಕ್ತವಾಯಿತು. ಕರ್ನಾಟಕ

17. **ಪ್ರೊಫೆಸರ್ ಎಂ.ಡಿ.ಎನ್.**, (2006), (ಸಂ) ವೀರಭದ್ರಪ್ಪ ಬಿಸ್ಲಳ್ಳಿ, ಮೈಸೂರು, ಪು.54)

ರಾಜ್ಯ ರೈತ ಸಂಘ ರೂಪುಗೊಂಡಿತು. ಎಚ್.ಎಸ್.ರುದ್ರಪ್ಪ ಸಂಘದ ಅಧ್ಯಕ್ಷರಾದರು. ಎನ್.ಡಿ.ಸುಂದರೇಶ್ ಕಾರ್ಯದರ್ಶಿಯಾದರು. ಕಡಿದಾಳ್ ಶಾಮಣ್ಣ, ನಾಗರಾಜ್, ಚಿಕ್ಕಸ್ವಾಮಿ ಮುಂತಾದವರು ಕಾರ್ಯಕಾರಿ ಸಮಿತಿಯಲ್ಲಿದ್ದರು. ರೈತ ಸಂಘಗಳನ್ನು ಎಲ್ಲೆಡೆ ಬೆಳೆಸಿ ಚಳುವಳಿಗಳನ್ನು ಬೆಳೆಸಿದರು. ಪ್ರೊ|ನಂಜುಂಡಸ್ವಾಮಿ ಈ ಚಳವಳಿಗೆ ಸೈದ್ಧಾಂತಿಕ ನೆಲೆಗಟ್ಟನ್ನು ರೂಪಿಸಿಕೊಟ್ಟು ಸಂಘಕ್ಕೆ ಬೌದ್ಧಿಕ ಆಸ್ತಿ ಆದರು. ಸಂಘಟನೆಯ ಮೆದುಳು ಎನಿಸಿದರು.

ಬಹು ರಾಷ್ಟ್ರೀಯ ಕಂಪೆನಿಗಳ ವಿರುದ್ಧ ಭಾರಿ ಹೋರಾಟ ನಡೆಸಿದರು. ಮಾನ್ಸಂಟೋ ಕಂಪೆನಿ ತಯಾರಿಸಿದ ಬಿ.ಟಿ.ಹತ್ತಿಯನ್ನು ಕಿತ್ತು ಎಸೆದರು. ಆ ಮೂಲಕ ಮುಕ್ತ ಆರ್ಥಿಕ ನೀತಿಗೆ ಸವಾಲೆಸೆದರು. ಪ್ರೊ|ನಂಜುಂಡಸ್ವಾಮಿಯವರು ಜಾಗತೀಕರಣದ ಎದುರುಬಿದ್ದ ಆಗ್ನೇಯ ಏಷ್ಯಾದ ರೈತ ಸಂಘಟನೆಗಳಿಗೆ ಪ್ರಬಲ ಕೊಂಡಿ ಆಗಿದ್ದರು. ಬಹುರಾಷ್ಟ್ರೀಯ ಕಂಪೆನಿಯ ಯಂತ್ರಗಳು ನಮ್ಮವರ ಉದ್ಯೋಗ ಕಿತ್ತುಕೊಳ್ಳುತ್ತವೆ, ಎಂದಿದ್ದರು.

ಬಡ ರೈತರ ಮನೆಗೆ ನುಗ್ಗಿ ಅವರ ಬದುಕು ನಿರ್ವಹಣೆಯ ವಸ್ತುಗಳನ್ನು ಜಪ್ತಿಮಾಡುತ್ತಿದ್ದ ಸರ್ಕಾರಿ ಅಧಿಕಾರಿಗಳ ಮನೆಯ ಐಶಾರಾಮಿ ವಸ್ತುಗಳನ್ನು ರೈತರು ಜಪ್ತಿ ಮಾಡುವ ಶಕ್ತಿಯನ್ನು ನಂಜುಂಡಸ್ವಾಮಿ ತಂದುಕೊಟ್ಟಿದ್ದರು. ಸರ್ಕಾರವು ಈ ಬಗ್ಗೆ ನ್ಯಾಯಾಲಕ್ಕೆ ಮೇಲ್ಮನವಿ ಸಲ್ಲಿಸಿದಾಗ ರೈತರ ಜೀವನಾವಶ್ಯಕ ವಸ್ತುಗಳನ್ನು ಜಪ್ತಿ ಮಾಡದಂತೆ ಆದೇಶ ನೀಡಿತು. ಸರ್ಕಾರವೇ ವಿಧಿ ಇಲ್ಲದೆ ಆ ಬಗ್ಗೆ ಜಪ್ತಿಮಾಡದಿರುವಂತೆ ಆದೇಶ ಹೊರಡಿಸಬೇಕಾಯಿತು. ಜಪ್ತಿಗೆ, ಮರುಜಪ್ತಿಯನ್ನು ಚಳುವಳಿಯಾಗಿ ನಂಜುಂಡಸ್ವಾಮಿಯವರು ರೂಪಿಸಿದರು. ಅವರಿಂದ ರೈತ ಆತ್ಮವಿಶ್ವಾಸದಿಂದ ಕುದುರಿದ ರೈತ ಸಮುದಾಯ ಶಕ್ತಿಶಾಲಿ ಆಯಿತು.

ಮೈಸೂರು, ಬೆಂಗಳೂರು, ಚಿತ್ರದುರ್ಗ, ಶಿವಮೊಗ್ಗ ಮತ್ತು ಹಳೇ ಮೈಸೂರು ಪ್ರಾಂತ್ಯಕ್ಕೆ ಸೀಮಿತವಾಗಿದ್ದ ರೈತ ಹೋರಾಟ, ಬೆಳಗಾವಿ, ಧಾರವಾಡ, ಕೊಪ್ಪಳ, ಬಳ್ಳಾರಿ, ರಾಯಚೂರು ಹಾಗೂ ಕಲಬುರ್ಗಿಗಳತ್ತ ಸಾಗಿ ರೈತ ಯುವಕರನ್ನು ಸಂಘಟಿಸಿದ ಬಗ್ಗೆ ಎಸ್.ಎಸ್.ಪಾಟೀಲರು ನೆನೆಸಿದ್ದಾರೆ. ವಿಶ್ವವಾಣಿಜ್ಯ ಸಂಘಟನೆಯಿಂದ ಈ ದೇಶದ ಒಕ್ಕಲುತನವನ್ನು ಬೇರ್ಪಡಿಸುವ ಇಚ್ಛೆ ಅವರದಾಗಿತ್ತು. ಅದಕ್ಕಾಗಿ ರಾಷ್ಟ್ರಮಟ್ಟ, ಅಂತರಾಷ್ಟ್ರೀಯ ಮಟ್ಟದಲ್ಲಿ ಅವರ ಹೋರಾಟನಡೆದಿತ್ತು.

ನಂಜುಂಡಸ್ವಾಮಿ ಅವರು ಜನೀವಾಕ್ಕೆ ಹೋದ ದಿನ ಡಬ್ಲ್ಯು.ಟಿ.ಒ. ತನ್ನ ಕಚೇರಿಯನ್ನುಮುಚ್ಚಿ ರಜೆಯನ್ನು ಘೋಷಿಸಿದ್ದು, ಜಗತ್ತಿನ ಚಳುವಳಿಗಳನ್ನು ಸಂಘಟಿಸಿ ಬಹುರಾಷ್ಟ್ರೀಯ ಕಂಪೆನಿಗಳ ವಂಚನೆಗಳನ್ನು, ಶೋಷಣೆಗಳನ್ನು ತೋರಿಸಿ ಆ ಕಂಪೆನಿಗಳನ್ನು ನಿಯಂತ್ರಿಸುವ ಮಟ್ಟಕ್ಕೆ ಅವರ ವರ್ಚಸ್ಸು ಬೆಳೆದಿದ್ದ ಬಗ್ಗೆ ಪ್ರೊ॥ರವಿವರ್ಮಕುಮಾರ್ ಅವರು ತಮ್ಮ ಸ್ಮರಣೆಗಳನ್ನು ಕೆದಕಿ ಹೇಳಿದ್ದಾರೆ. ಸಿಂಧನೂರಿನ ರೈತ ನಾಯಕ ಶ್ರೀ ಡಿ.ಎಸ್.ಕಲ್ಮಠ್ ಅವರು ಈ ಸಂಬಂಧದಲ್ಲಿ ರಕ್ಷಿಸಿಟ್ಟಿರುವ ಜನೀವಾದಲ್ಲಿನ ನಡೆದ ಪ್ರತಿಭಟನೆಯ ಚಿತ್ರಗಳನ್ನು ತೋರಿಸುತ್ತಾರೆ.

ರೈತರು, ರೈತ ಕೂಲಿಕಾರರು ಸ್ವಾಭಿಮಾನದ ಹೋರಾಟಕ್ಕೆ ಎಂದೂ ಹಿಂಜರಿಯಬಾರದು, ಎನ್ನುವುದು ಅವರ ವೀರವಾಕ್ಯವೆನಿಸಿತ್ತು ಅವರು ಕಾರ್ಯಕ್ರಮಗಳನ್ನು ರೂಪಿಸಿ, ಸಂಘಟಕರ ಮೇಲೆ ಹೇರುತ್ತಾರೆ. ಬೇರೆಯವರು ಬೆಳೆಯಲು ಅವಕಾಶ ಕೊಡುವುದಿಲ್ಲ ಎಂಬ ದೂರೂ ಇತ್ತು. ಆದರೆ ಅವರ ಚಿಂತನೆಗಳು ವರ್ತಮಾನವಲ್ಲದೆ, ವರ್ತಮಾನವನ್ನು ಮೀರಿ ಭವಿಷ್ಯತ್ತಿನ ಯೋಜನೆಗಳ ಚಾಲನೆಗಾಗಿ ಮೀಸಲಾಗಿರುತ್ತಿದ್ದುವು, ಕಾರ್ಯಕರ್ತರು ಅದಕ್ಕೆ ಸಿದ್ಧವಾಗಬೇಕು, ಹೋರಾಟದ ಮಟ್ಟ ಬೆಳೆಯಬೇಕು ಎಂಬ ಆಶಯ ಅವರಲ್ಲಿತ್ತು. ಹಾಗಾಗಿ ಅವರ ವರ್ತನೆಗಳನ್ನೂ ಅನ್ಯ ರೀತಿಯಲ್ಲಿ ಅರ್ಥೈಸಿಕೊಂಡವರಿಗೆ, ಸರ್ವಾಧಿಕಾರಿ ಎಂಬ ಭಾವನೆ ಬೆಳೆದಿರಬಹುದು. ರೈತಸಂಘದ ಒಡಕಿಗೆ ಇದೂ ಒಂದು ಕಾರಣ ಎನ್ನುವುದುಂಟು.

ಹೋರಾಟಗಾರ ಎಲ್ಲ ಏಟುಗಳಿಂದ, ಅನುಭವಗಳಿಂದ ಕಡೆದ ಶಿಲ್ಪವಾದಾಗಲೇ ಕೆಚ್ಚು ಕಳೆ ಮೂಡುತ್ತದೆ ಅಲ್ಲವೆ! ಸಂಘಟನೆ ಶಾಲೆ ಎನಿಸಿದರೆ, ಹೋರಾಟ ಬದುಕಾಗಬೇಕೆಂಬುದು, ಚಳುವಳಿಗಿಡುತ್ತಿದ್ದ ವಾಖ್ಯೆ ಅವರದಾಗಿತ್ತು. ರೈತರು ನೀಡುವ ತೆರಿಗೆಯಿಂದಲೇ ದೇಶದ ಆರ್ಥಿಕ ಚುಕ್ಕಾಣಿ ಸಾಗುತ್ತದೆ ಎಂಬುದನ್ನು ಸರ್ಕಾರಗಳು ಅರಿತು ಕೊಳ್ಳಬೇಕಾದುದು ಮುಖ್ಯ ಎಂದಿದ್ದರು. ರೈತ ಚಳುವಳಿಗೆ ಸೈದ್ಧಾಂತಿಕ ನೆಲೆಯನ್ನು ಒದಗಿಸಿ, ರೈತರಲ್ಲಿ ಆತ್ಮಾಭಿಮಾನವನ್ನು, ಜಾಗೃತಿ ಮೂಡಿಸಿದ ನಂಜುಂಡಸ್ವಾಮಿಯವರು ಕೆಲವೇಳೆ ಒರಟಾಗಿ ನಡೆದುಕೊಳ್ಳುತ್ತಿದ್ದರು ಎಂಬ ದೂರೂ ಅವರ ಮೇಲಿದೆ. ಇದು ಬಹುಶಃ ಒಬ್ಬೊಬ್ಬ ನಾಯಕರಲ್ಲಿ ಕೆಲವೇಳೆ ಕಾಣಬರುವ ಒಂದು ಆಕಸ್ಮಿಕ ದೌರ್ಬಲ್ಯವಾಗಿರಬಹುದು.

ಆಧುನಿಕ ಕೃಷಿ, ಕುಲಾಂತರಿ ಬೀಜಗಳ, ವಿದೇಶಿ ಕೀಟನಾಶಕಗಳು ನಮ್ಮಲ್ಲಿ ಚಾಲೂ ಆದಷ್ಟು, ನಾವು ಬೆಳೆದ ಬೆಳೆಗೆ ವಿದೇಶದವರು ಬೆಲೆ ನಿಗದಿ ಮಾಡುವಂತಾಗುತ್ತದೆ, ಎಂದು ಹೇಳಿ ರೈತ ಸಮುದಾಯದಲ್ಲಿ ಜಾಗೃತಿ ಮೂಡಿಸಿ, ಆ ಸಮುದಾಯದ ಬೌದ್ಧಿಕ ನಾಯಕತ್ವ ವಹಿಸಿದ್ದರು. ಈ ನಡೆಯಲ್ಲಿ ದೇಸೀಕರಣದ, ಸ್ವಾಭಿಮಾನದ ಆಶಯವಲ್ಲದೆ ರೈತರ ಸ್ವಾವಲಂಬನೆಗೆ ಎಚ್ಚರಿಸಿದ ಬೌದ್ಧಿಕ ಆಯಾಮವೂ ಇತ್ತು, ಎನ್ನಬೇಕು. ಹೀಗಾಗಿ ಅವರು ಹಸಿರುಶಾಲಿನ ಹರಿಕಾರನೆನಿಸಿ ರೈತರ ಬೆಳೆಯ ಹಸಿರು ಬದುಕಿಗೆ ಜೀವ ತುಂಬಿದ್ದರು. ಅವರು ಚಳವಳಿಗೆ ಬಳಸುತ್ತಿದ್ದ ಭಾಷೆ ಅನ್ನದಾತನ ಬೆವರಿನ ಭಾಷೆಯುದಾಗಿರುತ್ತಿತ್ತು. ಪ್ರಾಮಾಣಿಕವಾಗಿರುತ್ತಿತ್ತು. ಅವರ ದೃಷ್ಟಿಯಲ್ಲಿ ಪ್ರತಿಯೊಬ್ಬ ರೈತನೂ ತನ್ನ ಬದುಕಿನ ಸ್ವಾಭಿಮಾನಿ ನಾಯಕ. ಅಂದರೆ **ರೈತರಿರುವವರೆವಿಗೂ ರೈತ ಚಳವಳಿ ನಿರಂತರ** ಎಂಬ ಭಾವ ಅವರದು. ದುಡಿಮೆಗಾರ ಎಂದಿಗೂ ಚೈತನ್ಯದ ಸಂಕೇತ. ಅದಾಗಿ ಚಳವಳಿಯನ್ನು ನಡೆಸಬಲ್ಲ ಸ್ಥೈರ್ಯ ಅವನಲ್ಲಿ ಸದಾ ಇರಬಲ್ಲದು ಎಂಬ ವಿಶ್ವಾಸ ಅವರದು. ತದನುಗುಣವಾಗಿ ಚಳವಳಿಗಳನ್ನು ರೈತರಿಗಾಗಿ, ಜನಪರ ಸಂಘಟನೆಗಳಿಗಾಗಿ ರೂಪಿಸಿದರು. ರೈತರು ತಮ್ಮನ್ನು ತಾವು ಮುನ್ನಡೆಸಿಕೊಳ್ಳಬಲ್ಲರು, ಎಂದೂ ತೋರಿಸಿಕೊಟ್ಟರು.

ರೈತ ಸಂಘವು ಹುಟ್ಟಿದ ಮೇಲೆ ರಾಜಕೀಯ ನಾಯಕರು, ಅಧಿಕಾರಿಗಳು ರೈತರ ಕುರಿತು ಆಡುವ ಮಾತಿನ ಧಾಟಿ ಬದಲಾಯಿತು. ನಿಗದಿತ ಸಾಲಮನ್ನಾ ಬಡ್ಡಿ ಮನ್ನಾ ಒತ್ತಾಯ ಜಪ್ತಿ ತಡೆ, ಹರಾಜು ತಡೆಯಲಾಯಿತು. ಬಹುರಾಷ್ಟ್ರೀಯ ಕಂಪೆನಿಗಳಿಗೆ ವಿರುದ್ಧ, ಬೀಜೋತ್ಪಾದನೆ ಕಟ್ಟಡಗಳ ಧ್ವಂಸ, ಬೆಂಗಳೂರಿನ ಕೆಂಟುಕಿ ಚಿಕನ್, ಮಾನ್ಸಾಂಟೋ, ಕಾರ್ಗಿಲ್ ಕಂಪೆನಿ ಧ್ವಂಸ ಇತ್ಯಾದಿಗಳು ನಡೆದವು. ಪಾರಂಪರಿಕ ಬೀಜಗಳ ಬದಲು ಸಂಕರಣ ಬೀಜ ಬಿತ್ತಿದ್ದ ರೈತರು ಅವುಗಳ ಮೊಳಕೆ ಕಾಣದೆ ಆತ್ಮಹತ್ಯೆಗೆ ಎಳಸುತ್ತಿದ್ದಾರೆ ಎಂದು ಹೇಳಿ ನಮ್ಮ ಸರ್ಕಾರವನ್ನು ಹಾಗೂ ರೈತರನ್ನು ಎಚ್ಚರಿಸಿದರು. ಡಬ್ಲ್ಯುಟಿಓ ಒಪ್ಪಂದಿಂದಾಗಿ ರೈತರಿಗೆ ಅಗತ್ಯವಿಲ್ಲದ ವಸ್ತುಗಳನ್ನು ಪರದೇಶಗಳಿಂದ ಆಮದು ಮಾಡಿಕೊಳ್ಳುವುದನ್ನು ವಿರೋಧಿಸಲು, ರಾಷ್ಟ್ರೀಯ ಸಮನ್ವಯ ಸಮಿತಿಯ ಆಶ್ರಯದಲ್ಲಿ '**ಬಂಡಿಯಾತ್ರೆ**'ಯನ್ನು ಕೈಗೊಂಡರು. ರೈತರ ಸಮಸ್ಯೆಗಳತ್ತ ಸರ್ಕಾರದ ಗಮನ ಸೆಳೆದು ಆ ಮೂಲಕ ಭಾರತದ ರೈತರು ತಮ್ಮ ಸಮಸ್ಯೆಗಳನ್ನು ತಾವೇ ಅರಿತು, ಪರಿಹರಿಸಿಕೊಳ್ಳುವ ಬಗ್ಗೆ ಹೇಳುತ್ತಿದ್ದುದು ಅವರು ಕಾಳಜಿಯ ದ್ಯೋತಕವಾಗಿತ್ತು. ತೆಂಗಿನ ಮರಗಳಿಗೆ ನುಸಿರೋಗ ತಗುಲಿದಾಗ,

ರೈತರು ಹತಾಶರಾಗಿ ಸರ್ಕಾರಕ್ಕೆ ಮೊರೆ ಇಟ್ಟರೂ ಪರಿಹಾರ ಕಾಣಲಿಲ್ಲ. ಆಗ ನಂಜುಂಡಸ್ವಾಮಿ ಅವರು ನೀರಾ ಇಳಿಸುವ ಚಳವಳಿಯನ್ನು ಕೈಗೊಂಡು ನೇತೃತ್ವ ವಹಿಸಿ ಮುನ್ನಡೆಸಿದರು.

ತಮ್ಮ ಬುತ್ತಿ, ತಮ್ಮ ಹೊದಿಕೆ, ತಮ್ಮ ಜೇಬಿನ ಹಣವಿಟ್ಟು ರೈತರು ಸಮಾವೇಶಗೊಳ್ಳುತ್ತಿದ್ದರು. ತಮ್ಮ ಹಳ್ಳಿಯ ತಮಟೆ, ನಗಾರಿ, ಡೊಳ್ಳು, ತುತ್ತೂರಿಗಳನ್ನು ನಗರಗಳಲ್ಲಿ ಬಾರಿಸಿ 'ರೈತ ಜಗತ್ತು' ಇದೆ ಎಂಬ ಸಂಗತಿಯನ್ನು ಕರ್ನಾಟಕದ ರೈತ ಚಳುವಳಿ ದಾಖಲಿಸಿತ್ತು. ವಿಶ್ವವ್ಯಾಪಾರಿ ಒಪ್ಪಂದದ ಆಮದು ನೀತಿ ಬಗ್ಗೆ ನಿರರ್ಗಳವಾಗಿ ಹೇಳಬಲ್ಲ ತಾಕತ್ತನ್ನು ವಿಶ್ವವಿದ್ಯಾಲಯಗಳ ಮಟ್ಟ ಮೀರಿ ರೈತ ಚಳವಳಿ ತೋರಿತ್ತು. ದೇಶ ಸಂಸ್ಕೃತಿ, ಬೀಜ ಕೃಷಿ ವಿಧಾನ, ಪರಂಪರೆಯಿಂದ ಬಂದ ಕೃಷಿ ಜ್ಞಾನ ಸಂಪತ್ತು ಎಲ್ಲದರ ರಕ್ಷಣೆಗೆ ಸ್ವತಃ ರೈತರೇ ಮುಂದಾಗಬೇಕಾದ ಅನಿವಾರ್ಯತೆ ಎದುರಾಗಿದೆ. ಬಂಡವಾಳಶಾಹಿ ಜಗತ್ತು ಬಹುಸಂಖ್ಯಾತ ರೈತ ವರ್ಗದ ಬಿತ್ತನೆ ಬೀಜ ಕ್ಷೇತ್ರಕ್ಕೆ ಅಪಾಯ ಒಡ್ಡುತ್ತಿರುವುದರ ವಿರುದ್ಧ, ಸರ್ಕಾರ, ವಿರೋಧಪಕ್ಷ, ಎಡ ಪಂಥೀಯ ವ್ಯವಸ್ಥೆ ಇವಾವುವೂ ಧ್ವನಿ ಎತ್ತಲಾಗದ ಪರಿಸ್ಥಿತಿ ಇದ್ದಾಗ ರೈತಚಳವಳಿ ಆ ಮಾರ್ಗದಲ್ಲಿ ಮುನ್ನುಗ್ಗುತ್ತಿದೆ. ಎರಡೂವರೆ ದಶಕದ ಈ ಚಳವಳಿಯಲ್ಲಿ ಎಚ್.ಎಸ್.ರುದ್ರಪ್ಪ, ಎನ್.ಡಿ.ಸುಂದರೇಶ್, ಪ್ರೊ||ಎಂ.ಡಿ.ಎನ್. ಅವರು ಶಕ್ತಿಯಾಗಿ ನಿಂತು ರೈತರ ಇಂದ್ರಿಯಗಳಿಗೆ ಪ್ರಥಮಬಾರಿಗೆ ಚೈತನ್ಯ ತಂದುಕೊಟ್ಟ ಅದ್ಭುತ ಶಕ್ತಿಗಳು,[18] ಎಂಬ ಮಾತುಗಳೂ ಇವೆ. ರೈತರ ಪಾಲಿಗೆ ಪ್ರೊಫೆಸರ್ ನಂಜುಂಡಸ್ವಾಮಿ ಒಂದು ಅದ್ಭುತ ನೈತಿಕ ಶಕ್ತಿ ಆಗಿದ್ದರು. ಎಷ್ಟೋ ಸಾವಿರ ರೈತರಲ್ಲಿ ಜಪ್ತಿ ಅಧಿಕಾರಿಗಳ ವಿರುದ್ಧ ಸೆಡ್ಡು ಹೊಡೆಯುವ ಎದೆಗಾರಿಕೆ ಕಲಿಸಿದ್ದರು.

33 ಹಳ್ಳಿಗಳಿದ್ದ ರಾಮದುರ್ಗ ಸಂಸ್ಥಾನದ ಕ್ರಾಂತಿಕಾರಿ ರೈತ ಸ್ವಾತಂತ್ರ್ಯಹೋರಾಟಗಳ ಶ್ರೀ **ಮಹಾದೇವಪ್ಪ ಶಿವಬಸಪ್ಪ ಪಟ್ಟಣ** ಅವರು 1911ರಲ್ಲಿ ಜನಿಸಿದವರು. ಈಗ (2007ರಲ್ಲಿ) 96ನೇ ವಯಸ್ಸಿನಲ್ಲಿಯೂ ಅದೇ ಕೆಚ್ಚು ಉಳಿಸಿಕೊಂಡು ಬೆಂಗಳೂರಿನ ಬನಶಂಕರಿಯಲ್ಲಿ ವಾಸವಿದ್ದಾರೆ. ಅವರಿಗೆ 2006ರಲ್ಲಿ **ಕರ್ನಾಟಕ ಏಕೀಕರಣ ಹೋರಾಟಗಾರರ ಪ್ರಶಸ್ತಿಯನ್ನು** ಸರ್ಕಾರ ನೀಡಿ ಗೌರವಿಸಿತು.

1936-37ರಲ್ಲಿ ರಾಮದುರ್ಗದಲ್ಲಿ ಮಳೆ ಬೆಳೆ ಇಲ್ಲದೆ ರೈತರು ಬಹಳ ಕಷ್ಟ ಅನುಭವಿಸುತ್ತಿದ್ದ ಸಮಯದಲ್ಲಿ ಸಂಸ್ಥಾನದ ರಾಜ ರೈತರಿಗೆ ತೆರಿಗೆಯನ್ನು

---

18. **ಪ್ರೊಫೆಸರ್** ಎಂ.ಡಿ.ಎನ್., (ಸಂ) ವೀರಭದ್ರಪ್ಪ ಬಿಸ್ಲಳ್ಳಿ-ಈ ಕೃತಿಯಲ್ಲಿ ಸಿ.ಪುಟ್ಟಸ್ವಾಮಿ ಅವರ ಲೇಖನ ನೋಡಿ ಪು.183ಅ

ಕಟ್ಟಲೇಬೇಕೆಂದು ಒತ್ತಾಯಿಸಿದ. ರೈತರಿಗೆ ಆದಾಯವಿಲ್ಲದೆ ತೆರಿಗೆ ಕಟ್ಟಲು ಸಾಧ್ಯವಾಗಲಿಲ್ಲ. ದೊರೆ ದಬ್ಬಾಳಿಕೆಯಿಂದ 1937ರ ಕೊನೆಯಲ್ಲಿ ಅವರ ಮನೆ, ಹೊಲ, ದನಕರುಗಳನ್ನು, ಪಾತ್ರ ಪಗಡಿಗಳನ್ನು ಜಪ್ತಿ ಮಾಡಿಸಿದ. ರೈತರು ಕಂಗಾಲಾಗಿ ರಾಜನೊಡನೆ ಕಷ್ಟವನ್ನು ಹೇಳಿಕೊಳ್ಳಲು ರಾಮದುರ್ಗದ ಅರಮನೆಯತ್ತ ಹೊರಟರು. ಹಾದಿಯಲ್ಲಿ ಬಸಪ್ಪ ಯಲಿಗಾರ ಹಾಗೂ ಮಹಾದೇವಪ್ಪ ಪಟ್ಟಣ ಅವರನ್ನು ಕಂಡರು. ಅವರ ನೇತೃತ್ವದಲ್ಲಿ ಅರಮನೆ ಬಯಲಿಗೆ ಬಂದರು. ಕಂದಾಯಸೂಟು ಬಿಡಬೇಕೆಂದು ಕೇಳಿದರು. ಆದರೆ ರಾಜ ಇನ್ನಾವುದಕ್ಕೂ ಗಮನ ಕೊಡದೆ ಕುದುರೆಗಾಡಿಯಲ್ಲಿ ಮುಂದೆ ಹೋದಾಗ ಬಸಪ್ಪ ಯಲಿಗಾರ ತಡೆದರು. ಲಾಠಿ ಪ್ರಹಾರ ಆಯಿತು. ಆದರೆ ಆಮಲ್ದಾರರ ಹಿತವಚನ ಕೇಳಿ ರೈತರು ಹಿಂದಿರುಗಿದರು. ರಾಜ ಸಂಚು ಮಾಡಿದ. ಮರುಳಾರಾಧ್ಯ, ಮುನವಳ್ಳಿ ವಕೀಲರು ಮುಂತಾದವರ ನೇತೃತ್ವದಲ್ಲಿ ರೈತರ ಸಭೆಯನ್ನು ಆಗ ಮಹಾದೇವಪ್ಪ ಪಟ್ಟಣ ಅವರು ಏರ್ಪಡಿಸಿ ರೈತ ಜಾಗೃತಿ ಉಂಟುಮಾಡಿದರು. ಶಿವಪೇಟೆ ಹಿರೇಮಠದ ಸ್ವಾಮಿ ವೀರತ್ತಯ್ಯ ಅವರೂ ಸೇರಿ ಸ್ವಾತಂತ್ರ್ಯ ಹೋರಾಟಕ್ಕೂ ಅನುವಾಗಿ ರೈತ ಸಂಘಟನೆಯೂ ಬಲಗೊಂಡು, 1939ರ ಏಪ್ರಿಲ್ 5,6,7ರಂದು ರಾಜನ ವಿರುದ್ಧ ರೈತರ ಬಂಡಾಯ ನಡೆಯಿತು. ನಂತರ ಇದು ಸ್ವಾತಂತ್ರ್ಯ ಹೋರಾಟಕ್ಕೂ ಕೂಡಿಕೊಂಡು ಸಂಸ್ಥಾನಿಕನನ್ನು ಕೆಳಗಿಳಿಸುವಷ್ಟು ಮಟ್ಟಿಗೆ ಯಶಸ್ವಿಯಾಯಿತು. ಈ ಬಗೆಗಿನ ಹೆಚ್ಚಿನ ವಿವರಗಳು **ಕರ್ನಾಟಕ ರೈತ ಚಳವಳಿ – ಸತ್ಯಾಗ್ರಹಗಳು** ಕೃತಿಯ **ಮೊದಲ ಸಂಪುಟದಲ್ಲಿಯೇ** ಬಂದಿದೆ.

1957ರ ವಿಧಾನ ಸಭೆಗೆ ಮಹಾದೇವಪ್ಪ ಶಿವಬಸಪ್ಪ ಪಟ್ಟಣ ಅವರು ರಾಮದುರ್ಗ ಕ್ಷೇತ್ರದಿಂದ ಆಯ್ಕೆಯಾದರು. 1962ರಲ್ಲಿ ರೈತ ಸಮಸ್ಯೆಯೊಂದು ಉಂಟಾಯಿತು. ಸುರೇಬಾನ ಬಳಿಯ ಶಿವಪೇಟೆಯಲ್ಲಿ ಮಲಪ್ರಭಾ ಕಾಲುವೆ ನೀರಿನಿಂದಾಗಿ ಜವುಳು ಉಂಟಾಗಿ ಮನೆಗಳು ಕುಸಿದು ಬಿದ್ದುವು. ಜನರು ಸುರೇಬಾನಕ್ಕೆ ಬಂದು ಪಟ್ಟಣ ಅವರ ಬಳಿ ತಮ್ಮ ಕಷ್ಟಗಳನ್ನು ಹೇಳಿಕೊಂಡರು. ಪಟ್ಟಣ ಅವರು, ಸಮಸ್ಯೆ ಬಗೆಹರಿಯುವವರಿಗೂ ಒಗ್ಗಟ್ಟಿನಿಂದಿರುತ್ತೇವೆ ಎಂದು ಭಾಷೆ ಕೊಟ್ಟರೆ ನಿಮ್ಮ ಕಷ್ಟಕ್ಕೆ ನೆರವಾಗುತ್ತೇನೆ ಎಂಬ ಶರತ್ತು ಹಾಕಿದರು. ಅದರಂತೆ ಊರಿನ ವೀರಭದ್ರ ದೇವಸ್ಥಾನದಲ್ಲಿ ರೈತರು ಪ್ರತಿಜ್ಞೆ ಇಟ್ಟರು. ಮರುದಿನ ಪಟ್ಟಣ ಅವರ ನೇತೃತ್ವದಲ್ಲಿ ನೂರಾರು ಜನರು ರಾಮದುರ್ಗಕ್ಕೆ ಬಂದರು. ಗೆಸ್ಟ್ ಹೌಸ್‌ನಲ್ಲಿದ್ದ ಅಸಿಸ್ಟೆಂಟ್ ಕಮೀಷನರ್ ಮತ್ತು ಅಸಿಸ್ಟೆಂಟ್ ಎಂಜನಿಯರನ್ನು

ಘೇರಾವ್ ಮಾಡಿದರು. ಶಿವಪೇಟೆ ಗ್ರಾಮಕ್ಕೆ ಬಂದು ಪರಿಸ್ಥಿತಿ ನೋಡಿ ಎಂದು ಪಟ್ಟಣ ಅವರು ಆ ಅಧಿಕಾರಿಗಳಿಗೆ ತಾಕೀತು ಮಾಡಿದರು. ನಂತರ ಅವರು ಒಂದು ವಾರದೊಳಗೆ ಸಮಸ್ಯೆಯ ಬಗ್ಗೆ ಸರ್ಕಾರಕ್ಕೆ ವರದಿಮಾಡಿ ಸಮಸ್ಯೆ ಬಗೆಹರಿಸುವ ಬಗ್ಗೆ ಭರವಸೆ ನೀಡಲಾಗಿ ಗ್ರಾಮದ ಜನ ಹಿಂದಿರುಗಿದರು. ಹೀಗೆಯೇ ಲಿಂಗದಾಳ ಗ್ರಾಮದ ಬಡರೈತರ ಮೇಲೆ ತೆರಿಗೆ ಸಮಸ್ಯೆ ಇತ್ತು. ಆ ಗ್ರಾಮದ ಇನಾಮದಾರನು ರೈತರ ಮೇಲೆ ಹೆಚ್ಚಿಗೆ ತೆರಿಗೆ ಹಾಕಲು ಯತ್ನಿಸಿದ. ರೈತರು ಮಹದೇವಪ್ಪ ಪಟ್ಟಣರ ಬಳಿಗೆ ಬಂದು ಸಂಕಟ ತೋಡಿಕೊಂಡರು. ಪಟ್ಟಣ ಅವರು ರೈತರನ್ನೆಲ್ಲ ಒಗ್ಗೂಡಿಸಿದರು; ರೈತರಿಗೆ 'ನೀವು ಗೇಣಿದಾರರಾಗಿದ್ದೀರಿ (ಟೆನೆಂಟ್ಸ್) ಅಂತಾಗಿ ನೀವೇ ಭೂ ಒಡೆಯರಾಗಿದ್ದೀರಿ, ಎಂದು ತಿಳಿವಳಿಕೆ ಕೊಟ್ಟು ಚಳವಳಿ ನಡೆಸಿ ಯಶಸ್ವಿಯಾದರು.[19]

ಶ್ರೀ ಮಹದೇವ ಪಟ್ಟಣ ಅವರ ಪತ್ನಿ ಶ್ರೀಮತಿ ಶಾರದವ್ವ ಅವರೂ ಕೂಡ ಶಾಸಕಿಯಾಗಿ ಆಯ್ಕೆಗೊಂಡವರು. ಮಲಪ್ರಭೆ ನೀರಾವರಿ .ಕಾಲುವೆ ಬಸಿನೀರಿನಿಂದ ಭೂಮಿ ಹಾಳಾಗಿ ನಿರಾಶ್ರಿತರಾದ ಶಿವಪೇಟೆ ರೈತಾಪಿ ಜನರಿಗೆ ಹೊಸ ಗ್ರಾಮ ನಿರ್ಮಿಸಲು ಶ್ರಮಿಸಿದವರು. ಈ ಮೇಲಿನ ಅಂಶಗಳಿಂದ ರೈತಹೋರಾಟದ ಬಲ ಸ್ವಾತಂತ್ರ್ಯ ಹೋರಾಟಕ್ಕೂ ಕಸುವು ತಂದುಕೊಟ್ಟ ಸಂಗತಿಯಾಗಿ ಕಾಣುತ್ತದೆ.

ಕಾಗೋಡು ಸತ್ಯಾಗ್ರಹದಲ್ಲಿ ಶ್ರೀ **ಗಣಪತಿಯಪ್ಪನವರು** ದೀವರ ಸ್ವಾಭಿಮಾನಿ ರೈತ ಹೋರಾಟ ನಡೆಸಿದವರು. 1948ರಲ್ಲಿಯೆ ಸಾಗರ ತಾಲೂಕು ರೈತ ಸಂಘದ ಚಟುವಟಿಕೆಯನ್ನು ಪ್ರಾರಂಭಿಸಿದವರು. ಪ್ರಗತಿಪರ ಭೂಮಿತಿ ಶಾಸನದ ಅನುಷ್ಠಾನಕ್ಕೆ ಕಾರಣರಾದವರು: ಗೇಣಿದಾರರನ್ನು ಹದ್ದುಬಸ್ತಿನಲ್ಲಿಟ್ಟುಕೊಳ್ಳಲು, ಎದುರಾಡುವ ಒಕ್ಕಲುಗಳು ಭೂಮಿಗೆ ಕಾಲಿಡದಂತೆ ಬಹಿಷ್ಕಾರ ಅಥವಾ ಕಟ್ಟು ಪದ್ದತಿಯನ್ನು ಜಮೀನುದಾರರು ಜಾರಿಗಿಟ್ಟುಕೊಂಡರು. ಗಣಪತಿಯಪ್ಪ ಈ ಪದ್ಧತಿಗೆ ವಿರುದ್ಧವಾಗಿ ಹೋರಾಡಿ ಯಶಸ್ವಿಯಾದರು. ಈಗ (2006) ವಡ್ನಾಲ ಗ್ರಾಮದಲ್ಲಿ ಕುಟುಂಬದವರೊಡನೆ ತಮ್ಮ ತುಂಬಿದ ಇಳಿವಯಸ್ಸಿನಲ್ಲಿ ವಾಸಿಸುತ್ತಿದ್ದಾರೆ.

ಕಾಗೋಡು ಸತ್ಯಾಗ್ರಹದ ಮುಂಚೂಣಿಯಲ್ಲಿದ್ದ ನಾಯಕರೆಂದರೆ ಸವಾಜಿವೀರ ನಾಯಕರು, ಹಾಗೂ ದೊಡ್ಡಮನೆ ವೀರಪ್ಪ. ರೈತ ಮಹಿಳೆಯರ ಪೈಕಿ ಈ ಕಾಗೋಡು

19. ರಾಮದುರ್ಗದ ಕ್ರಾಂತಿಕಾರಿ ಮಹಾದೇವಪ್ಪ ಪಟ್ಟಣ : (ಪ್ರ) ನಾಗರಿಕ ವೇದಿಕೆ, ರಾಮದುರ್ಗ 1989, ಪು. 2, 3, 19,20 ಹಾಗೂ 2.3.2007 ರಂದು ಬೆಂಗಳೂರಿನ ಬನಶಂಕರಿಯಲ್ಲಿರುವ ಅವರ ಮನೆಯಲ್ಲಿ (ನಿ) ಕರ್ನಾಟಕ ಗ್ಯಾಸೆಟಿಯರ್ (ಪ್ರ) ಮುಖ್ಯಸಂಪಾದಕ ಶ್ರೀ ಎಂ.ಬಿ.ಪಾಟೀಲ್ ಅವರೊಡನೆ ಹೋಗಿ ಮಾಡಿದ ಸಂದರ್ಶನದಲ್ಲಿ ಪಡೆದ ಮಾಹಿತಿ.

ಹೋರಾಟದಲ್ಲಿ ಪಾಲ್ಗೊಂಡವರು **ದೀವರ ಕೋಣೆ** ಕನ್ನಮ್ಮ (71) ಇವರು ಗದ್ದೆಗೆ ಹೋಗಲು ಇದ್ದ ವಿರೋಧವನ್ನು ಲೆಕ್ಕಿಸದೆ ಬೀಜವನ್ನು ಕೈಚೆಲ್ಲನೆ ಮಾಡಿ ಧೈರ್ಯ ತೋರಿದವರು, ಇಂದೂ (2006ರ ಮಾಹಿತಿ) ಕಾಗೋಡು ವಾಸಿಯಾಗಿದ್ದಾರೆ. ಇವರ ಜೊತೆ ಪಾಲ್ಗೊಂಡ ಇತರ ರೈತ ಮಹಿಳೆಯರೆಂದರೆ ಸಿರಿಯನ ಸಾವಿತ್ರಿ, (ಸಾವಂತ್ರಿ), ವಟಗುಪ್ಪೆ ಬಂಗಾರಿ, ಮಡಿವಾಳ ಕನ್ನಮ್ಮ ಅವರುಗಳು. ಕೋಣೆ ಕನ್ನಮ್ಮನ ಮೂಲಮನೆಯ ತಳಪಾಯ ಮಾತ್ರ ಈಗ ಉಳಿದಿದೆ. ಬೇರೆ ಮನೆ ಕಟ್ಟಿಕೊಂಡು ಕನ್ನಮ್ಮ ಈಗಲೂ ಕೈಲಾದಷ್ಟು ಬೇಸಾಯದ ಕೆಲಸ ಮಾಡಿಕೊಂಡಿದ್ದಾರೆ.[20] ಕಾಗೋಡಿನ ಹೋರಾಟದ ಗಾಥೆ ಅವರ ಮೊಗದಲ್ಲಿ ಮಡುಗಟ್ಟಿದೆ. ಅದು ಇಂದಿಗೂ ಕಾಣಬರುವ ದೃಶ್ಯ.

**ವಿಷಯ 20:** ಸಾಂತ್ವನ ನೆಲೆಗಳು

ತುತ್ತು ಬೆಳೆದು ಕೊಡುವಾತನಿಗೆ ತುತ್ತಿನ ಪುಷ್ಟಿ, ನೆಮ್ಮದಿಯ ನೆರಳು ರಕ್ಷಣೆ ನೀಡುವುದು ಸರ್ಕಾರ ಹಾಗೂ ಸಮಾಜದ ಹೊಣೆ. ನಮ್ಮ ಹೊಟ್ಟೆ ತುಂಬಿಸುವವನ ದುಡಿಮೆಗೆ ಬಾಯುಪಚಾರ ಸಾಲದು. ನೆರವಿನ ಹದವನ್ನು ತುಂಬಿ ಕೊಡಬೇಕು. ಈ ದೃಷ್ಟಿಯಿಂದ ರೈತರ ಬೇಸಾಯದ ಕ್ರಿಯೆಗೆ ಒದಗುವ ಸವಲತ್ತುಗಳು ಸಾಂತ್ವನದ ನೆಲೆಗಳಾಗುತ್ತವೆ. ಚಳವಳಿಗಳು ಮುಂದಿಡುವ ಸಮಸ್ಯೆಗಳಿಗೆ, ಸವಾಲುಗಳಿಗೆ ಪರಿಹಾರದ ಪ್ರಸಾರವಾಗುತ್ತದೆ.

ಈ ದಿಸೆಯಲ್ಲಿ **'ಭೂಮಿ'** ಯೋಜನೆ ಒಂದು ಗಮನಾರ್ಹ ಕೊಡುಗೆ. ರಾಜ್ಯದ ಎಲ್ಲಾ ಕೃಷಿಭೂಮಿಯ ಪೂರ್ಣ ವಿವರದ ದಾಖಲೆಗಳ ಗಣಕೀಕರ್ಣ ಅಂದರೆ ಭೂ ದಾಖಲೆಗಳ ಗಣಕೀಕರಣವಾಗಿದೆ. ರೈತರು ತಮ್ಮ ಜಮೀನಿನ ಕುರಿತು ಯಾವ ಘಳಿಗೆಯಲ್ಲಾದರೂ ಸುಲಭವಾಗಿ ಮಾಹಿತಿ ಪಡೆದುಕೊಳ್ಳಲು ಅವಕಾಶವಾಗಿದೆ. ಅತೀ ಕಡಿಮೆ ಖರ್ಚಿನಲ್ಲಿ ಅದು ಒದಗುತ್ತದೆ.

**ಕೃಷಿ ಬೆಲೆ ಆಯೋಗ :**

**ಎ.ಪಿ.ಎಂ.ಸಿ ಕಾಯಿದೆ ತಿದ್ದುಪಡಿಯು** ಬಹುರಾಷ್ಟ್ರೀಯ ಕಂಪನಿಗಳು ರೈತರಿಂದಲೇ ನೇರವಾಗಿ ಕೃಷಿಉತ್ಪನ್ನಗಳನ್ನು ಖರೀದಿಸಲು ಅವಕಾಶ ಮಾಡಿಕೊಡುವುದೆಂದು, ಅದಕ್ಕೆ ಭಾರಿ ವಿರೋಧ ವ್ಯಕ್ತವಾಯಿತು. ಆದರೆ ಎ.ಪಿ.ಎಂ.ಸಿ

20. 6.3.2006ರಂದು ಕಾಗೋಡಿಗೆ ಹೋಗಿ ಭೇಟಿ ಮಾಡಿದಾಗ ಶ್ರೀಮತಿ ಕನ್ನಮ್ಮ ಅವರಿಂದ ತಿಳಿದ ಮಾಹಿತಿ.

ವ್ಯವಸ್ಥೆಯನ್ನು ಸುಧಾರಿಸುವಂತೆ ರೈತರು, ಗ್ರಾಹಕರು, ವ್ಯಾಪಾರಿ–ದಳ್ಳಾಳಿಗಳಿಂದ ಸಲಹೆಗಳು ಬಂದವು. ಇದಕ್ಕಾಗಿ ಸರ್ವರಿಗೂ ಅನುಕೂಲಿಸುವಂತೆ ಸುಧಾರಣೆಯ ಬಗ್ಗೆ ಅಧ್ಯಯನ ನಡೆಸಲು ಡಾ॥ ಬಿಸಿಲಯ್ಯ ಅವರ ನೇತೃತ್ವದಲ್ಲಿ **ಕರ್ನಾಟಕ ಕೃಷಿ ಬೆಲೆ ಆಯೋಗವನ್ನು** ರೂಪಿಸಲಾಯಿತು. ಈ ಆಯೋಗವು ಮೇಲೆ ಸೂಚಿಸಿದವರಲ್ಲದೆ ಹಮಾಲಿಗಳು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಉಗ್ರಾಣ ನಿಗಮ, ಭಾರತೀಯ ಆಹಾರ ಉಗ್ರಾಣನಿಗಮ ಸೇರಿದಂತೆ ಸಂಬಂಧಿಸಿದವರೆಲ್ಲರೊಡನೆ ವಿಚಾರ ವಿನಿಮಯ ನಡೆಸುವಂತಾಯಿತು. ರೈತರುಗಳಿಂದ ದೂರುಗಳನ್ನು ಸ್ವೀಕರಿಸಿ ಸಲಹೆ ಸೂಚನೆಗಳನ್ನು ಇಲಾಖೆಯಿಂದಲೂ ಪಡೆದು ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದಾಗಿ ಸಮಿತಿ ಹೇಳಿತು. (14.2.2006)

**ರೈತ ಸಂಪರ್ಕ ಕೇಂದ್ರಗಳ** ಕಾರ್ಯ ನಿರ್ವಹಣೆ ಉತ್ತಮಗೊಳಿಸಬೇಕು. ಅಂದರೆ ಕೇವಲ ಕೃಷಿ ಪರಿಕರಗಳ ವಿತರಣಾ ಕೇಂದ್ರವಾಗದೆ ತಾಂತ್ರಿಕ ಮಾಹಿತಿ ಹಾಗೂ ಸಲಹಾ ಕೇಂದ್ರಗಳಾಗಿ ಪರಿವರ್ತನೆಗೊಳ್ಳಬೇಕು. ಕೃಷಿ ಮಾರುಕಟ್ಟೆ ವಿಸ್ತರಣಾ ಸೌಲಭ್ಯ, ಸಣ್ಣ ರೈತರು ತಮ್ಮ ಜಮೀನುಗಳನ್ನು ಗುತ್ತಿಗೆ ಮೇಲೆ ನೀಡಲು ಅಥವಾ ಪಡೆಯಲು ಭೂಮಿತಿ ಮತ್ತು ಗುತ್ತಿಗೆ ಕಾಯ್ದೆಗೆ ತಿದ್ದುಪಡಿ ತರಬೇಕು. ಜಲಾನಯನ ಕಾರ್ಯಕ್ರಮಗಳಿಗೆ ಹೂಡಲಾದ ಬಂಡವಾಳ ಸದುಪಯೋಗ ಆಗಿರುವ ಬಗ್ಗೆ ಪರಿಶೀಲಿಸಲು ಉನ್ನತ ಮಟ್ಟದ ಸಮಿತಿ ರಚನೆ ಆಗಬೇಕು. ರಾಜ್ಯದ ಖುಷ್ಕಿ ಜಮೀನುಗಳಲ್ಲಿ ಸುಸ್ಥಿರ ಉತ್ಪನ್ನವನ್ನು ಪಡೆಯುವ ಉದ್ದೇಶದಿಂದ 2006 – 16ರ ದಶಕವನ್ನು **ಒಣಬೇಸಾಯದಶಕವೆಂದು** ಘೋಷಿಸಲು ಕೃಷಿ ತಜ್ಞರು ಸೂಚಿಸಿದುದು ರೈತಪರವಾಗಿತ್ತು. (14.2.2006)

**ರೈತ ಸಮಾಲೋಚನೆ ಸಭೆ :** ವಿಧಾನಸೌಧದಲ್ಲಿ ಮುಖ್ಯಮಂತ್ರಿ ಶ್ರೀ ಹೆಚ್.ಡಿ.ಕುಮಾರಸ್ವಾಮಿಯವರ ಅಧ್ಯಕ್ಷತೆಯಲ್ಲಿ 25.2.2006 ದಂದು ನಡೆದ ರೈತರ ಸಮಾಲೋಚನೆ ಸಭೆಯಲ್ಲಿ, ರೈತರಿಗೆ ಉಚಿತ ವಿದ್ಯುತ್, ಗ್ರಾಮೀಣ ಕೃಪಾಂಕ, ಕೃಷಿ ಕಾರ್ಮಿಕರಿಗೆ ವಿಮೆ, ನೈಸರ್ಗಿಕ ಕೃಷಿ ಪದ್ಧತಿ ಜಾರಿಗೆ ರೈತ ಸಂಘಟನೆಗಳು ಸರ್ಕಾರವನ್ನು ಒತ್ತಾಯಿಸಿದುವು. ವಾಣಿಜ್ಯ ಬ್ಯಾಂಕುಗಳಲ್ಲಿ ರೈತರಿಗೆ ಸಾಲ ವಿತರಣೆ ಹಾಗೂ ಕೃಷಿಗೆ ಹೆಚ್ಚಿನ ಸಾಲ ನೀಡುವಂತೆ ಬ್ಯಾಂಕಿಗೆ ಆಗಿರುವ ಆದೇಶವನ್ನು ಬ್ಯಾಂಕುಗಳು ಪಾಲಿಸುವಂತೆ ಸರ್ಕಾರ ಬಿಗಿ ನಿಲುವು ತಾಳಬೇಕು, ಕೃಷಿ ಕಾರ್ಮಿಕರಿಗೆ ಯಶಸ್ವಿ ಯೋಜನೆ ಅಳವಡಿಸಬೇಕು. ವಿವಿಧ ರೈತ ಚಳುವಳಿಗಳಲ್ಲಿ ಹೂಡಲಾದ ಮೊಕದ್ದಮೆಯನ್ನು ವಾಪಸ್ಸು ಪಡೆಯಬೇಕು. ರೈತ ಚಳುವಳಿಗಳಲ್ಲಿ

ಹುತಾತ್ಮರಾದ ಕುಟುಂಬದವರಿಗೆ 2 ಲಕ್ಷ ರೂ. ಪರಿಹಾರ ನೀಡಬೇಕು ಎಂದೆಲ್ಲ ರೈತರ ಕೋರಿಕೆ, ಆಗಿತ್ತು. ಈ ದಿಸೆಯಲ್ಲಿ ರೈತರ ಸಮಗ್ರ ಸಮಸ್ಯೆಗಳು, ಮತ್ತು ಮುಂದಿನ ಯೋಜನೆಗಳನ್ನು ರೂಪಿಸುವ ನಿಟ್ಟಿನಲ್ಲಿ ಮತ್ತೆ ರೈತ ಮುಖಂಡರ ಸಭೆ ಕರೆಯುವ ಬಗ್ಗೆ ಮುಖ್ಯಮಂತ್ರಿಗಳು ತಿಳಿಸಿದರು. ಉಪಮುಖ್ಯ ಮಂತ್ರಿ ಶ್ರೀ.ಬಿ.ಎಸ್.ಯಡಿಯೂರಪ್ಪನವರು ರೈತ ಮುಖಂಡರಾದ ಸರ್ವಶ್ರೀ ಕೆ.ಎಸ್.ಪುಟ್ಟಣ್ಣಯ್ಯ, ಬಸವರಾಜ ತಂಬಾಕೆ, ಕೋಡಿಹಳ್ಳಿ ಚಂದ್ರಶೇಖರ್ ಹಾಗೂ ರೈತ ಸಂಘಟನೆಯ ಎಲ್ಲಾ ಜಿಲ್ಲಾಧ್ಯಕ್ಷರು ನೀಡಿದ ಪ್ರತಿಯೊಂದು ಸಲಹೆ, ಸೂಚನೆ, ವಿಚಾರಗಳನ್ನು ಟಿಪ್ಪಣಿ ಮಾಡಿಕೊಂಡರು. ಇವೆಲ್ಲ ರೈತ ಸಮಸ್ಯೆಗಳ ಸಾಂತ್ವನಕ್ಕೆ ಅನುಕೂಲಕರ ವಾತಾವರಣ ಸೃಷ್ಟಿಗೆ ಕಾರಣವಾಗುವಂತಾಗಿವೆ. ಈ ದಿಸೆಯಲ್ಲಿ ಡಿಸೆಂಬರ್ 2005ರ ವರೆಗೆ ಹೂಡಿರುವ ರೈತರ ಮೇಲಿನ ಮೊಕದ್ದಮೆ ವಾಪಸಾತಿಗೆ ಚಾಲನೆ ನೀಡಿರುವ ಬಗ್ಗೆ ಸಚಿವ ಶ್ರೀ ಬಸವರಾಜ ಹೊರಟ್ಟಿಯವರು ಸುದ್ದಿಗಾರರಿಗೆ ತಿಳಿಸಿದರು. (26.02.2006)

**ಮಣ್ಣಿನ ಆರೋಗ್ಯ ಕಾರ್ಡ್:** ರಾಷ್ಟ್ರೀಯ ಕೃಷಿ ಆಯೋಗದ ಅಧ್ಯಕ್ಷ ಶ್ರೀ ಎಂ.ಎಸ್. ಸ್ವಾಮಿನಾಥನ್ ಅವರು ರಾಜ್ಯ ಸರ್ಕಾರಕ್ಕೆ ನೀಡಿರುವ ಸಲಹೆಗಳು; ರೈತರಿಗೆ ಹೊಸ ಕೃಷಿ ನೀತಿಯಲ್ಲಿ ಅವರ ಜಮೀನು ಮಣ್ಣಿನ ಆರೋಗ್ಯ ತಿಳಿಸುವ ಕಾರ್ಡ್‌ಗಳನ್ನು ಕೊಡಬೇಕು; ಆ ಕಾರ್ಡಿನಲ್ಲಿ ಕೃಷಿ ಮಣ್ಣಿನ ಗುಣಮಟ್ಟ, ಆ ಮಣ್ಣಿಗೆ ತಕ್ಕದಾದ ಬೆಳೆ ಬೆಳೆಯಲು ಸೂಚಿಸಬೇಕು, ಎಂದೆಲ್ಲಾ **ಮಣ್ಣಿನ ಆರೋಗ್ಯ ಕಾರ್ಡ್** ಕುರಿತು ಹೇಳಿದೆ. ಕರ್ನಾಟಕವು ಕೃಷಿ, ತೋಟಗಾರಿಕೆ, ಮೀನುಗಾರಿಕೆ, ಪಶುಸಂಗೋಪನೆಗೆ ಒತ್ತು ನೀಡಬೇಕು. 2006–07ನೇ ವರ್ಷವನ್ನು ಕೃಷಿ ನವೀಕರಣ ವರ್ಷವೆಂದು ಆಚರಿಸಬೇಕು. ಪ್ರತಿ ಗ್ರಾಮ ಪಂಚಾಯಿತಿಯಲ್ಲಿ ರೈತ ಹಾಗೂ ರೈತ ಮಹಿಳೆಯೊಬ್ಬರಿಗೆ ಕೃಷಿ ತರಬೇತಿ ನೀಡಬೇಕು; ಕೃಷಿ ಶಾಲೆಗಳು ಆರಂಭವಾಗಬೇಕು. ರೈತರಿಂದ ರೈತರ ಕಲಿಕೆಗೆ ಒತ್ತು ನೀಡಬೇಕು; 2006–07ನೇ ವರ್ಷವನ್ನು ಮಣ್ಣಿನ ಆರೋಗ್ಯ ಹೆಚ್ಚಿಸುವ ವರ್ಷವೆಂದು ಆಚರಿಸುವಲ್ಲಿ ಮಳೆ ನೀರು ಕೊಯ್ಲು, ಅಂತರ್ಜಲ ಮರುಭರ್ತಿ, ಕಡಿಮೆ ನೀರಿನಲ್ಲಿ ಹೆಚ್ಚು ಬೆಲೆಯ ಬೆಳೆ ತೆಗೆಯಲು ಪ್ರೋತ್ಸಾಹ, ಜಲಸಾಕ್ಷರತೆಗೆ, ನೀರಿನ ಸಮರ್ಪಕ ನಿರ್ವಹಣೆಗೆ ಒತ್ತು ನೀಡಬೇಕು ಎಂದೆಲ್ಲಾ ಶಿಫಾರಸ್ಸಿನಲ್ಲಿವೆ (26.2.2006)

**ರೈತರ ಸಾಲಕ್ಕೆ ಮೀಸಲು ಹಣ :** ರಾಜ್ಯವು ಕಳೆದ ಸಾಲಿನಲ್ಲಿ ಶೇ.6ರ ಬಡ್ಡಿಯಲ್ಲಿ ರೈತರಿಗೆ ಸಾಲ ಕೊಡಲಾರಂಭಿಸಿದ ಮೇಲೆ ಸಾಲಪಡೆವ ರೈತರ

ಸಂಖ್ಯೆ ಹೆಚ್ಚುತ್ತಿದೆ. ಇದನ್ನು ಕಂಡ ಕೇಂದ್ರವು ಶೇ.7ರ ಬಡ್ಡಿದರದಲ್ಲಿ ಸಾಲ ನೀಡಲು ಮುಂದಾಗಿದೆ. ರಾಜ್ಯವು ಇದರ ಉಪಯೋಗ ಪಡೆಯಲು ಬಜೆಟ್‌ನಲ್ಲಿ ರೈತರ ಸಾಲದ ಬಡ್ಡಿ ಪಾವತಿಗೆ ನಿಗದಿ ಹಣ (1 ಸಾವಿರ ಕೋಟಿ) ಮೀಸಲಿಡಬೇಕು ಎಂದು ಆರ್ಥಿಕತಜ್ಞರು ಒತ್ತಾಯಿಸಿದ್ದಾರೆ. 2005ಕ್ಕೆ ಬಡ್ಡಿ ಸಹಾಯ ಧನ ನೀಡಲು 80 ಕೋಟಿ ರೂ.ಗಳನ್ನು ನಿಗದಿಪಡಿಸಲಾಗಿದೆ. 2006–07ರಲ್ಲಿ ರೈತರಿಗೆ 2590 ಕೋಟಿ ರೂ. ಸಾಲ ನೀಡಲು 140 ಕೋಟಿ ರೂ. ಹಾಗೂ ಬಡ್ಡಿ ಸಹಾಯ ಧನಕ್ಕೆ ವ್ಯವಸ್ಥೆ ಆಗಲಿದೆ. 2006ರಲ್ಲಿ 11, 759 ರೈತರಿಗೆ ಸಾಲ ನೀಡುವ ಯೋಜನೆ ಆಗಿದೆ. ಕೇಂದ್ರವು ವೈದ್ಯನಾಥನ್ ಆಯೋಗದ ಸಲಹೆಯಂತೆ ಸಹಕಾರಿ ಬ್ಯಾಂಕ್‌ಗಳ ಹಳೆಸಾಲವನ್ನು ಒಂದೇ ಬಾರಿಗೆ ಚುಕ್ತಾ ಮಾಡಿ ಹೊಸ ಲೆಕ್ಕ ಆರಂಭಿಸಲು ತಯಾರಾಗಿದೆ ಎಂದು ಎಚ್.ಆರ್.ಶ್ರೀಶ ಅವರು ವರದಿಮಾಡಿದ್ದಾರೆ (8.3.2006)

**ರೈತ ಆಯೋಗ ರಚನೆ :** ರಾಜ್ಯ ಸರ್ಕಾರ ಬೆಲೆ ಆಯೋಗ ರಚಿಸಿದೆ. ಅನುಷ್ಠಾನ ಗೊಂಡಿಲ್ಲ. ಮಧ್ಯವರ್ತಿಗಳನ್ನು ನಿಯಂತ್ರಿಸಲಾಗಿಲ್ಲ. ಗ್ರಾಮಪಂಚಾಯಿತಿಯಲ್ಲಿಯೇ ಹಿಂದಿನಂತೆ ಪಹಣಿ ಪತ್ರ ನೀಡುವುದು ಸೂಕ್ತ. ಅಂತಾಗಿ ರಾಜ್ಯದಲ್ಲಿ ಪ್ರತ್ಯೇಕ 800 ಪಹಣಿ ಕೇಂದ್ರಗಳ ಅಗತ್ಯವಿಲ್ಲ. ರೈತರ ಪಂಪ್‌ಸೆಟ್‌ಗಳಿಗೆ, ಭಾಗ್ಯಜ್ಯೋತಿಗೆ ಒಳಗೊಳಗೆ ಬಿಲ್ ಹಾಕುವ ಬದಲು ಸ್ಲ್ಯಾಬ್ ಪದ್ಧತಿಯನ್ನು ಹಿಂದಿನಂತೆ ಮುಂದುವರಿಸಬೇಕು. ಸರ್ಕಾರವು ಖಾಸಗಿ ವಿದ್ಯುತ್ ಸಂಸ್ಥೆಗಳಿಗೆ ನೀಡಬೇಕಾದ 1721 ಕೋಟಿ ರೂ.ಗಳ ಸಬ್ಸಿಡಿ ನೀಡಿ, ಬೇರೆ ರಾಜ್ಯಗಳಿಂದ ವಿದ್ಯುತ್ ಖರೀದಿಗೆ ನೆರವಾಗಬೇಕು, ರೈತರ ಸಮಸ್ಯೆಗಳಿಗೆ ಸ್ಪಂದಿಸಲು ರೈತ ಆಯೋಗ ರಚಿಸಬೇಕು ಎಂದೆಲ್ಲ ರಾಜ್ಯ ಪ್ರಾಂತ ರೈತ ಸಂಘ ಹಾಗೂ ಪ್ರಾಂತ ಕೃಷಿ ಕೂಲಿಕಾರರ ಸಂಘಗಳು ಸರ್ಕಾರವನ್ನು ಒತ್ತಾಯಿಸಿವೆ. (8.3.2006)

**ಪ್ರಯತ್ನ ವೈವಿಧ್ಯಗಳು :** ರೈತರ ಎಲ್ಲ ಬೆಳೆಗಳಿಗೆ ಬೆಲೆಕುಸಿತವಾದಾಗ, ಬೆಂಬಲ ಬೆಲೆ ನಿಗದಿಪಡಿಸಿ, ಸರ್ಕಾರವೇ ಖರೀದಿಸುವ ವ್ಯವಸ್ಥೆಗೆ ಮುಂದಾಗಿದೆ ಎಂದು ಮಾನ್ಯ ಮುಖ್ಯಮಂತ್ರಿಗಳು ಹೇಳಿದರು. ರೈತರ ಬೆಳೆಗಳಿಗೆ ಉತ್ತಮ ಬೆಲೆ ದೊರಕಿಸಲು ರಾಜ್ಯದ ಆರುಕಡೆ ಆಹಾರ ಸಂಸ್ಕರಣ ಘಟಕ ಸ್ಥಾಪನೆ (ಹಾವೇರಿ, ದಾವಣಗೆರೆ, ಗದಗ, ಧಾರವಾಡ, ಕೊಪ್ಪಳ, ಶಿವಮೊಗ್ಗ ಇತ್ಯಾದಿ)ಯನ್ನು ಮೆಕ್ಕೆಜೋಳ ಬೆಳೆಗಾರರಿಗೆ ಉತ್ತಮ ಬೆಲೆ ನಿರೀಕ್ಷೆಯಿಂದ ಮಾಡಲಾಗುತ್ತಿದೆ ಎಂಬುದು ರಾಜ್ಯ ಗ್ರಾಮೀಣಾಭಿವೃದ್ಧಿ ಇಲಾಖಾ ಸಚಿವ ಶ್ರೀ ಸಿ.ಎಂ.ಉದಾಸಿ ಅವರ ಮಾತು (22.5.2006). ಯಶಸ್ವಿನಿ ಯೋಜನೆಯಡಿ 2006–07 ಸಾಲಿನಿಂದ

(ನೊಂದಣಿಯಾಗಿರುವ 197 ಆಸ್ಪತ್ರೆಗಳು ಈ ಯೋಜನೆಯಡಿಯವು) ರೈತರಿಗೆ 8 ಹೆಚ್ಚುವರಿ ಸೌಲಭ್ಯ-ಫಲಾನುಭವಿಗೆ 75 ವರ್ಷಗಳವರೆಗೆ, ಗರ್ಭಕೋಶ ಚಿಕಿತ್ಸೆ 50 ವರ್ಷ ಮೀರಿದ ರೈತ ಮಹಿಳೆಯರಿಗೆ, ಶಸ್ತ್ರ ಚಿಕಿತ್ಸೆಗೆ ವರ್ಷದಲ್ಲಿ ನಿಧಿ ನೆರವನ್ನು 1 ರಿಂದ 2 ಲಕ್ಷದವರೆಗೆ ಪಡೆಯುವಂಥದು; ಕಾಫಿ, ಚಹ ತೋಟಗಾರಿಕೆಯವರು, ಎಣ್ಣೆ ಕಾಳುಗಳ ಬೆಳೆಗಾರರು ಅಸಿಯಾನ್ ರಾಷ್ಟ್ರಗಳೊಡನೆ ಮುಕ್ತ ಒಪ್ಪಂದ ಮಾಡಿಕೊಂಡರೆ, ಸಂಕಷ್ಟಗೊಳಗಾಗುವುದರಿಂದ ಅಂಥ ವಾಣಿಜ್ಯ ಒಪ್ಪಂದಗಳಲ್ಲಿ ಎಲ್ಲರೀತಿಯಲ್ಲಿ ಬಹಳ ಎಚ್ಚರಿಕೆಯಿಂದಿರಬೇಕೆಂದು ಕೇಂದ್ರಕ್ಕೆ ಪಕ್ಷಾಧ್ಯಕ್ಷರ ಸೂಚನೆ; ನೈಸರ್ಗಿಕ ಕೃಷಿಯನ್ನು ಸರ್ಕಾರದ ಕಾರ್ಯಕ್ರಮವಾಗಿ ಘೋಷಣೆ, ರೈತರಿಗೆ ಸಾಂಕೇತಿಕವಾಗಿ 1 ರೂ.ಗೆ ಪಹಣಿ ನೀಡಿಕೆ ಇತ್ಯಾದಿಗಳನ್ನು ರೈತ ಸಂಘವು ಸರ್ಕಾರವನ್ನು ಕೋರಿರುವುದು; ಶುಲ್ಕ ಪಾವತಿಸದಾಕ್ಷಣ ಪಂಪ್‌ಸೆಟ್, ಕುಡಿಯುವ ನೀರಿನ ಪೂರೈಕೆಯನ್ನು ಸ್ಥಗಿತಗೊಳಿಸಬಾರದು ಎಂದು ಮುಖ್ಯಮಂತ್ರಿಗಳ ತಾಕೀತು; ಕೃಷಿ ಇಲಾಖಾಧಿಕಾರಿ, ನೌಕರರ ನಡುವೆ ಸೌಹಾರ್ದತೆಯ ಸಾಧ್ಯತೆಗಾಗಿ ರೈತ ಸಂಪರ್ಕ ಕೇಂದ್ರಗಳಲ್ಲಿ ಡೈರಿ ಬರೆಯುವ ಪದ್ಧತಿ ಅಳವಡಿಕೆ; ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಶೇ.75ರಷ್ಟು ರಿಯಾಯಿತಿ ದರದಲ್ಲಿ ಬೀಜಪೂರೈಕೆಯ ಬಗ್ಗೆ ಸರ್ಕಾರಿ ಆದೇಶವಾಗಿರುವುದು, ರೈತ ಸಂಪರ್ಕ ಕೇಂದ್ರಗಳಲ್ಲಿ ಅಗತ್ಯವಿರುವ ಬಿತ್ತನೆ ಬೀಜದ ದಾಸ್ತಾನು, ಬಜೆಟ್‌ನಲ್ಲಿ ಟ್ರಾಕ್ಟರ್, ಮಿನಿ ಟ್ರಾಕ್ಟರ್, ಟಿಲ್ಲರ್, ಎತ್ತಿನ ಗಾಡಿಗಳ ಖರೀದಿಗೆ ಶೇ.50 ರಷ್ಟು ಸಹಾಯಧನದ ಪ್ರಕಟಣೆ; ಚಾಮರಾಜನಗರದ ಹೊಂಡರಬಾಳು ಬಳಿಯ ಅಮೃತಭೂಮಿಯಲ್ಲಿ ಭಾರತ್‌ಕಿಸಾನ್ ಸಂಘದಿಂದ ಅಂತರಾಷ್ಟ್ರೀಯ ಬೀಜ ಬ್ಯಾಂಕ್‌ನ ವಿದ್ಯುತ್ ಚಾಲನೆ ಹಾಗೂ ಅಲ್ಲಿ ವಿವಿಧ ರೀತಿಯ ಸಾಂಪ್ರದಾಯಿಕ ಬಿತ್ತನೆ ಬೀಜಗಳ ಸಂಗ್ರಹ ಮತ್ತು ರೈತರಿಗೆ ಉಚಿತ ವಿತರಣೆಯ ವ್ಯವಸ್ಥೆ, ಅಂತರಾಷ್ಟ್ರೀಯ ಬೀಜ ಜಾತ್ರೆ; 13 ವಿಧದ ಬೀಜಗಳಿಗೆ ಶೇ.75 ಸಬ್ಸಿಡಿ ಪಡೆಯುವ ಬಗ್ಗೆ ತಿಳುವಳಿಕೆ ನೀಡಿಕೆ ಹಾಗೂ ರೈತ ಕೇಂದ್ರಗಳಲ್ಲಿ ನೋಂದಣಿಗೆ ಕೇವಲ 1 ರೂ. ಶುಲ್ಕ; 2007ನೇ ಸಾಲಿನಲ್ಲಿ ರೈತರ ಮನೆ ಬಾಗಿಲಿಗೆ ಬೀಜ ಸರಬರಾಜು ಮಾಡುವ ವಿನೂತನ ಪದ್ಧತಿಯ ಜಾರಿಗೆ ಸರ್ಕಾರದ ನಿರ್ಧಾರ. ಜಿಲ್ಲೆಗಳಲ್ಲಿ ಭೂಮಿ ಪಹಣಿ ಕೇಂದ್ರ ಸ್ಥಾಪನೆ, ಶೀಘ್ರವಾಗಿ ಜಮೀನು, ಆಸ್ತಿ ದಾಖಲೆ ಪಡೆಯಲು, ಖಾತೆ ಬದಲಾಯಿಸಲು 'ಕಾವೇರಿ ಯೋಜನೆ'ಯ ಅನುಷ್ಠಾನ, ನೈಸರ್ಗಿಕ ಪದ್ಧತಿ ಅನುಸರಿಸಿ ಬೆಳೆದ ಕೃಷಿ ಉತ್ಪನ್ನಗಳಿಗೆ ಮಾರುಕಟ್ಟೆ ಕಲ್ಪಿಸಲು ಕೃಷಿ ಉತ್ಪನ್ನಗಳ ಮಾರಾಟ ಮಳಿಗೆಗಳನ್ನು ಕರ್ನಾಟಕ ರಾಜ್ಯ ರೈತ ಸಂಘ ನವದೆಹಲಿಯ ನವಧಾನ್ಯ ಟ್ರಸ್ಟ್‌ನೊಂದಿಗೆ ರಾಜ್ಯದಲ್ಲಿ ಮೂರುಕಡೆ ಸ್ಥಾಪಿಸುವ

ಬಗ್ಗೆ ರೈತ ಸಂಘದ ಅಧ್ಯಕ್ಷ ಶ್ರೀ ಕೆ.ಎಸ್.ಪುಟ್ಟಣ್ಣಯ್ಯ ಹಾಗೂ ನವಧಾನ್ಯ ಟ್ರಸ್ಟ್‌ನ ವಂದನಾಶಿವ ಅವರ ಪತ್ರಿಕಾ ಗೋಷ್ಠಿ ಪ್ರಕಟಣೆ (27.5.2006); ಸಾವಯವ ಮತ್ತು ಸಹಜ ಕೃಷಿ ಪದ್ಧತಿಗೆ ಆದ್ಯತೆ, ಶೇ.4ರ ಬಡ್ಡಿದರದಲ್ಲಿ ಕೃಷಿ ಉಪಕರಣಗಳ ಖರೀದಿಗೆ ಸಾಲಸೌಲಭ್ಯದ ಪರಿಶೀಲನೆ, ವಾರ್ಷಿಕವಾಗಿ ರೈತ ದಿನಾಚರಣೆಯನ್ನು ಆಚರಿಸುವ ಉದ್ದೇಶದ (ಡಿಸೆಂಬರ್ 27ರಲ್ಲಿನ ಆಹಾರ ದಿನಾಚರಣೆಯಂದು) ಬಗ್ಗೆ ಮಾನ್ಯ ಮುಖ್ಯಮಂತ್ರಿಗಳ ಚಿಂತನೆ (23.6.2006); ಉಡುಪಿ–ದ.ಕನ್ನಡ ಜಿಲ್ಲೆಗಳಲ್ಲಿ ಗುರುವಾಯನ ಕೆರೆಯ ನಾಗರಿಕ ಸೇವಾ ಟ್ರಸ್ಟ್‌ನಿಂದ ಸ್ಥಳೀಯ ತಳಿಗಳ ಬೀಜಗಳಾದ ಅದೇನ್ ಕೇಳ್ತಿ, ಕಂಡ್ರೆ ಕುಟ್ಟಿ, ಮೀಸೆ ಭತ್ತ, ಕಡಿಮೆ ನೀರಿನಲ್ಲಿಯೂ ಬೆಳೆಯುವ ಪಟ್ಟಾಮಿ, ಪಾಣೀರ ಕಜೆ, ಗೊಬ್ಬರದ ಅಗತ್ಯವಿಲ್ಲದ ಚಾರೆ, ಕುಂದಪುಲ್ಲನ್, ಕುಮೇರು, ಮೊರಡ್ಡ, ವರ್ಷದಲ್ಲಿ ಮೂರು ಬೆಳೆ ಬರುವ ಎಲ್ವೇರಿ, ಸುಗ್ಗಿ ಕಯಮೆ ಗಂಧಸಾಲೆ, ಅತಿಕರೆಯ, ಚೋಮನ್ ಕಯಮೆ, ರತ್ನ ಚೂಡಿ, ಅರೆಕಜೆ – ಇತ್ಯಾದಿ 78 ಸಾಂಪ್ರದಾಯಿಕ ದೇಶ ತಳಿಗಳ ಸಂರಕ್ಷಣೆಯ ನಾಲ್ಕು ಬೀಜ ಬ್ಯಾಂಕ್‌ಗಳ ಸ್ಥಾಪನೆ ಹಾಗೂ ಇಲ್ಲಿ ಹಣದ ವ್ಯವಹಾರವಿಲ್ಲದೆ ಬೀಜ ಸಾಲಕ್ಕೆ ಬೀಜವನ್ನು ಎರಡಷ್ಟು ನೀಡುವ ವ್ಯವಸ್ಥೆ, ಬಹುರಾಷ್ಟ್ರೀಯ ಕಂಪೆನಿಗಳ ಬೀಜ ಪೇಟೆಂಟ್ ಪ್ರಯತ್ನಗಳಿಗೆ ಸೆಡ್ಡು ಹೊಡೆಯುವ ಕೆಚ್ಚು (27.6.2006); 1978 ಜೂನ್ 30 ರಿಂದ ಕಾರ್ಯಾರಂಭ ಮಾಡಿರುವ ಕರ್ನಾಟಕ ರಾಜ್ಯ ಬೀಜ ನಿಗಮದಿಂದ 29 ಬೆಳೆಗಳ 88 ತಳಿಗಳ ಉತ್ಪಾದನೆ ಮಾಡಿ ರೈತ ಸಂಪರ್ಕ ಕೇಂದ್ರ, ನಿಗಮದ ವ್ಯಾಪಾರ ಮಳಿಗೆ ಹಾಗೂ ಫ್ರಾಂಚೈಸ್ ಕೇಂದ್ರಗಳ ಮೂಲಕ ವಿತರಣೆ, ನಿಗಮದ ಸಂಸ್ಕರಣಾ ಘಟಕಗಳ ಸಾಮರ್ಥ್ಯ ದುಪ್ಪಟ್ಟು ಮಾಡಿರುವುದು, ಅಧಿಕ ಮೌಲ್ಯದ ಬಿತ್ತನೆ ಬೀಜ ಸಂಗ್ರಹಕ್ಕೆ ಹವಾನಿಯಂತ್ರಿತ ಉಗ್ರಾಣಗಳಿರುವುದು, ರಾಜ್ಯದ 37 ಕೇಂದ್ರಗಳಲ್ಲಿ ನಿಗಮದ ಕಛೇರಿ ಮತ್ತು ಉಗ್ರಾಣಗಳಿರುವುದು 2005ನೇ ಸಾಲಿನಲ್ಲಿ ನಿಗಮವು ಬೀಜ ವಿತರಣೆಯನ್ನು 71.17 ಕೋಟಿ ರೂ. ವಹಿವಾಟಿಗೆ ಏರಿಸಿಕೊಂಡದ್ದು; ಕೊಡಗು ಜಿಲ್ಲೆಯ ಜಮ್ಮಾ ಭೂಮಿಯ (ವಂಶಪಾರಂಪರ್ಯಕ್ಕಾದ ಶಾಶ್ವತ ಬಳುವಳಿ ಜಮೀನು) ಮರಗಳನ್ನು ಸ್ವಉಪಯೋಗಕ್ಕೆ ಕಡಿದುಕೊಳ್ಳಲು ಅವಕಾಶ; ಕಬ್ಬಿನ ಬೆಲೆ ನಿರ್ಧರಿಸಲು ಬೆಲೆ ನಿರ್ಧಾರ ಸಮಿತಿ ರಚನೆ ಬಗ್ಗೆ ಸರ್ಕಾರದ ಪರಿಶೀಲನೆ; ಸ್ವಸಹಾಯ ಗುಂಪುಗಳ ಮಾದರಿಯಲ್ಲಿ ರೈತ ಕೇಂದ್ರಗಳು ಕೆಲಸಮಾಡಿ ರೈತರಿಗೆ ಅತ್ಯಾಧುನಿಕ ಕೃಷಿ ತಂತ್ರಜ್ಞಾನ ದೊರಕಿಸಬೇಕು, ಗುತ್ತಿಗೆ ಆಧಾರದಲ್ಲಿ ಭೂಮಿಯನ್ನು ಇತರ ರೈತರಿಗೆ ಕೊಡುವ ಅವಕಾಶವಾಗಬೇಕು, ಎರಡು ಎಕರೆ ಇದ್ದವರು ಸಮಗ್ರ ಕೃಷಿ ಕೈಗೊಳ್ಳಲು ಸಾಧ್ಯವಿರುವಲ್ಲಿ ಆ ಕಾರ್ಯಕ್ರಮಕ್ಕೆ

ಒತ್ತು ನೀಡುವುದು ಎಂದೆಲ್ಲ ಹೇಳಿರುವ ಕೃಷಿ ತಜ್ಞರ ಒತ್ತಾಯ; ಕರ್ನಾಟಕದಲ್ಲಿ ಅರೆ ಒಣಬೇಸಾಯದ ಪ್ರದೇಶದಲ್ಲಿ ಬೆಳೆ ಹೆಚ್ಚಿಸಬೇಕಾದ ಅನಿವಾರ್ಯತೆ ಇರುವ ಕಾರಣ ಹೇಮಾವತಿ, ಹಾರಂಗಿ ಮತ್ತು ಕಬಿನಿ ಅಚ್ಚುಕಟ್ಟು ಪ್ರದೇಶದ ಯೋಜನೆಗಳಲ್ಲಿ ಕೃತಕ ನೀರಾವರಿ (ಜಲಾಶಯಗಳ ನೀರು ಬಳಸಿ ಮುಂಗಾರು ಮತ್ತು ಹಿಂಗಾರು ಅರೆ ಒಣ ಬೇಸಾಯದ ಬೆಳೆ ಮತ್ತು ಸಣ್ಣ ಪ್ರಮಾಣದಲ್ಲಿ ಬತ್ತ ಬೆಳೆಯುವ ಅವಕಾಶ)ಯನ್ನು ಕೈಗೆತ್ತಿಕೊಳ್ಳಲು ಗ್ಯಾನಚಂದಾನಿ ಮತ್ತು ಸಹಸ್ರಬುದ್ಧೆ ನೇತೃತ್ವದ ತಜ್ಞರ ಸಮಿತಿಯ ವರದಿಯು ಅಚ್ಚುಕಟ್ಟು ಪ್ರದೇಶದಲ್ಲಿ ಅರೆ ಒಣಬೇಸಾಯವನ್ನು ಹೆಚ್ಚಿಸಲು ಹೆಚ್ಚಿನ ನೀರಿನ ಅಗತ್ಯ ಇಲ್ಲ ಎಂಬ ತಮಿಳು ನಾಡಿನ ಅಸಮರ್ಪಕ ವಾದಕ್ಕೆ ಪುರಸ್ಕಾರವಿಡದೆ. ಪ್ರತಿಪಾದಿಸಿರುವುದು; ಸಾಂಪ್ರದಾಯಿಕ ಕೃಷಿ ಪದ್ಧತಿ ಮತ್ತು ಕೌಶಲ್ಯಗಳನ್ನು ಲಾಭಕರವಾದ ವೃತ್ತಿಯಾಗಿಸಿಕೊಳ್ಳುವ ಕೃಷಿಉದ್ಯಮದಿಂದಲೇ ಗ್ರಾಮೀಣರ ಉದ್ಯೋಗ ವೃದ್ಧಿ ಎನಿಸುವ 'ಸ್ವರ್ಣ ಜಯಂತಿ ಗ್ರಾಮ ಸ್ವರೋಜಗಾರ್ ವಿಶೇಷ ಯೋಜನೆ'ಯ 'ಪ್ರಕ್ರಿಯೆ 21 ಜಿಲ್ಲೆಗಳಲ್ಲಿ ಆರಂಭವಾಗಿರುವುದು–ಬೀಜಗ್ರಾಮಗಳ ಸ್ಥಾಪನೆ, ತೋಟಗಾರಿಕೆ ಅರಣ್ಯ ಸಸ್ಯಗಳ ಮಾರಾಟಕ್ಕೆ ಅನುಕೂಲಿಸುವ ಮಾದರಿ 'ಸಸ್ಯಾಗಾರ ಸ್ಥಾಪನೆ ರೇಷ್ಮೆ ಹುಳು ಚಾಕಿ ಸಾಕಾಣಿಕೆ ಕೇಂದ್ರಗಳ ಸ್ಥಾಪನೆ ಇತ್ಯಾದಿಗಳಿಂದಾಗಿ ಒದಗುವ ಅನುಕೂಲ; ಭಾಗ್ಯಜ್ಯೋತಿ, ಕುಠೀರಜ್ಯೋತಿ, ಏತ ನೀರಾವರಿ, ಹಾಗೂ ಗ್ರಾಮೀಣ ಪಂಪ್‌ಸೆಟ್‌ಗಳ ವಿದ್ಯುತ್‌ದರಗಳನ್ನು ಬೆಸ್ಕಾಂ ಏರಿಸದೆ ನೆರವಾದುದು; ದೇಶಾದ್ಯಂತ 1600 ಕೃಷಿ ವಿತರಣಾ ಕೇಂದ್ರಗಳನ್ನು ತೆರೆದು ರೈತರಿಗೆ ನೀಡಿದ ತಾಂತ್ರಿಕ ನೆರವು, ಹಣಕಾಸಿನ ವ್ಯವಸ್ಥೆಯ ಅರಿವು, ಬೀಜ–ಗೊಬ್ಬರ ವಿತರಣೆ, ಕೃಷಿಕರ ಬೆಳೆ ಖರೀದಿ ಇತ್ಯಾದಿಗಳಿಗೆ 25 ಸಾವಿರ ಕೋಟಿ ವಿನಿಯೋಗಿಸಲು ರಿಲೈಯನ್ಸ್ ಇಂಡಸ್ಟ್ರೀಸ್‌ನ ಸಾಮಾಜಿಕ ಹೊಣೆಯ ನಿರ್ಧಾರ; ರೈತರು ಹೆಚ್ಚಿನ ಸಂಖ್ಯೆಯಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ಆಂಧ್ರ, ಮಹಾರಾಷ್ಟ್ರ, ಕರ್ನಾಟಕ, ಕೇರಳ ರಾಜ್ಯಗಳಿಗೆ ಕೇಂದ್ರವು ಪ್ರಕಟಿಸಿದ ವಿಶೇಷ ಪ್ಯಾಕೇಜ್; ರೈತರ ಸಂಕಷ್ಟ ನಿವಾರಣೆ ಆಗಬೇಕೆಂದು ಕೇಂದ್ರದ ನಿರ್ದೇಶಾನುಸಾರ ರಾಜ್ಯವು ಶಿವಮೊಗ್ಗ, ಚಿತ್ರದುರ್ಗ, ಕೊಡಗು, ಚಿಕ್ಕಮಗಳೂರು, ಹಾಸನ ಜಿಲ್ಲೆಗಳಿಗೆ ಪರಿಹಾರ ಪ್ಯಾಕೇಜ್ ಪೈಲಟ್ ಆಧಾರದಲ್ಲಿ ಅನುಷ್ಠಾನಕ್ಕೆ ಸಿದ್ಧಗೊಳಿಸುತ್ತಿರುವುದು, ಅಂದರೆ. ಸಾಲದ ಹೊರೆಯ ನಿವಾರಣೆ, ಸಾಲ ನೀಡುವ ಪದ್ಧತಿ ಸುಧಾರಣೆ, ಬೆಳೆ ಕೇಂದ್ರಿತ ಕೃಷಿ ಪದ್ಧತಿ, ನೀರಾವರಿ ಸೌಲಭ್ಯ ವಿಸ್ತರಣೆ, ಜಲಾನಯನ ನಿರ್ವಹಣೆ, ಕೃಷಿ ಪೂರಕ ಸೇವೆ ನಿರ್ವಹಣೆ, ಸುಧಾರಿಸಿದ ಮಾರುಕಟ್ಟೆ ಸೌಲಭ್ಯ, ಉಪಕಸುಬುಗಳಾದ ತೋಟಗಾರಿಕೆ, ಪಶುಸಂಗೋಪನೆ, ಹೈನುಗಾರಿಕೆ,

ಮೀನುಗಾರಿಕೆಗಳಿಗೆ ಉತ್ತೇಜನ, ಇತ್ಯಾದಿಗಳಿಗೆ 3 ವರ್ಷಗಳ ಅವಧಿಗಳ ಚಾಲನೆಗೆ 6903.80 ಕೋಟಿ ನೆರವಿನ ಕೋರಿಕೆ; ರೈತ ಕುಟುಂಬಕ್ಕೆ ಸಂಕಷ್ಟಕ್ಕೆ ಜಿಲ್ಲಾವಾರು 60 ಲಕ್ಷ ರೂ.ಗಳನ್ನು ಜಿಲ್ಲಾಧಿಕಾರಗಳ ಸುಪರ್ದಿನಲ್ಲಿ ಇಡುವ ಠೇವಣಿ, ರೈತರಿಗೆ ಬಡ್ಡಿ, ಚಕ್ರಬಡ್ಡಿ ಮನ್ನಾ ಮಾಡಲು, ಎಲ್ಲ ಬಗೆ ಬ್ಯಾಂಕ್‌ಗಳಲ್ಲಿ ಇರುವ ರೈತರ ಸಾಲದ ಅಸಲು ಮತ್ತು ಬಡ್ಡಿಮನ್ನಾ ಮಾಡಲು, ಎಲ್ಲ ಬಗೆ ಬ್ಯಾಂಕ್‌ಗಳಲ್ಲಿ ಇರುವ ರೈತರ ಸಾಲದ ಅಸಲು ಮತ್ತು ಬಡ್ಡಿ ಮನ್ನಾ, ಯಶಸ್ವಿನಿ ಸಹಕಾರ ಆರೋಗ್ಯ ರಕ್ಷಣೆ ಯೋಜನೆ ಟ್ರಸ್ಟ್, ಇತ್ಯಾದಿಗಳಿಗೆ ಒಟ್ಟು 14856.13ಕೋಟಿಗಳ ಪ್ರಸ್ತಾವ ಸಲ್ಲಿಕೆ, ವಿಶೇಷ ಪ್ಯಾಕೇಜ್ ಕಾರ್ಯಕ್ರಮದ ಸಮನ್ವಯ ಮತ್ತು ಮೇಲ್ವಿಚಾರಣೆಗಾಗಿ ಮುಖ್ಯ ಕಾರ್ಯದರ್ಶಿಗಳ ನೇತೃತ್ವದ ಸಮನ್ವಯ ಸಮಿತಿ ರಚನೆ, ಹಾಗೂ ಕಾರ್ಯ ನಿರ್ವಹಣಾ ಸಮಿತಿ ರಚನೆ, ದಕ್ಷಿಣ ಕನ್ನಡದ ಪುತ್ತೂರಿನ ಮುಂಡೂರಿನ ಮೋನಪ್ಪ ಕರ್ಕೇರಾ ಅವರು ಗುಡ್ಡದಿಂದ ಹರಿವ ಮಳೆ ನೀರು ಸಂಗ್ರಹ ನೆಲೆ ಮದಕವನ್ನು ದುರಸ್ತಿ ಮಾಡಿ, ಇಂಗುಗುಂಡಿಗಳನ್ನು ರೂಪಿಸಿ ಜಮೀನಿನಲ್ಲಿ ಮಾಡಿದ ವಿವಿಧ ಮರಗಳ ಕೃಷಿ, ತೋಟದ ವಿವಿಧ ಉತ್ಪನ್ನಗಳ ಬೆಳೆದು ಸ್ವಯಂ ಮಾರಾಟ, ಮೀನುಸಾಕಣೆ, ಜೇನಿಸು, ಅಡಿಕೆ, ಗೇರು ಕಾಡುತ್ಪತ್ತಿ ಇತ್ಯಾದಿ ಸಾಧನೆಗಳಿಂದ ಬಂಜರು ನೆಲವನ್ನು ಹಸಿರು ವಲಯ ಮಾಡಿದ ಸಾಧನೆಗೆ ಒಲಿದ 2004-05ರ ಕರ್ನಾಟಕ ಸರ್ಕಾರದ ಕೃಷಿ ಪಂಡಿತ ಪ್ರಶಸ್ತಿ, ಸಣ್ಣ ಮತ್ತು ಅತಿ ಸಣ್ಣರೈತರಿಗೆ ಎತ್ತು ಮತ್ತು ಬಂಡಿಗಳಿಗಾಗಿ ಶೇ.50 ರಷ್ಟು ರಿಯಾಯಿತಿ ದರದಲ್ಲಿ ಹಣದ ನೆರವು; ಈ ಬಗೆಯ 20 ಸಾವಿರ ರೈತರಿಗೆ ಎತ್ತು ಹಾಗೂ ಎತ್ತಿನ ಬಂಡಿ ವಿತರಣೆ; ರೈತರಿಗೆ ಸಾಲ ನೀಡಿಕೆಯಲ್ಲಿ ದ್ವಿಗುಣ ಮೊತ್ತ, ಬಡ್ಡಿದರ ಇಳಿಕೆ, ವರ್ಷಾಂತ್ಯದಲ್ಲಿ ಪ್ರತಿ ಜಿಲ್ಲೆಯಲ್ಲಿ ಕೃಷಿ ವಿಜ್ಞಾನ ಕೇಂದ್ರದ ಸ್ಥಾಪನೆ, ಕೃಷಿ ಸಾಲ ಸಮಸ್ಯೆ ಕುರಿತು ಪರಿಣಿತ ತಂಡದಿಂದ ಅಧ್ಯಯನ, ರಾಷ್ಟ್ರೀಯ ಮೀನುಗಾರಿಕಾ ಅಭಿವೃದ್ಧಿ ಮಂಡಳಿ ರಚನೆ, ಸಹಕಾರಿ ಸಾಲವ್ಯವಸ್ಥೆ ಪುನಶ್ಚೇತನಕ್ಕೆ 13 ಸಾವಿರ ಕೋಟಿ ಪ್ಯಾಕೇಜ್ ಇತ್ಯಾದಿಗಳ ಬಗ್ಗೆ ಪ್ರಧಾನಿಯವರ ಘೋಷಣೆ; ರೈತರ ಆತ್ಮಹತ್ಯೆಯಂಥ ಘಟನೆಗಳಿಗೆ ಹಾದಿ ಮಾಡಿಕೊಟ್ಟಿರುವ 'ಬೇಸಾಯ ಸಂಕಟದ ನಿವಾರಣೆಗೆ' ಒದಗಿಸುವ ವಿಶೇಷ ಪ್ಯಾಕೇಜ್ ಅನ್ನು ರಾಜ್ಯದ ಮತ್ತಷ್ಟು ಜಿಲ್ಲೆಗಳಿಗೆ (9) ವಿಸ್ತರಿಸಿ, ಬರಪರಿಹಾರ ನೀಡಲು ಪ್ರಧಾನಿಗೆ ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರ ಒತ್ತಾಯ; ನೂತನ ಕೃಷಿ ನೀತಿಯಲ್ಲಿ ಡಾ॥ಸ್ವಾಮಿನಾಥನ್ ಅವರ ಪಂಚಶೀಲ ಸೂತ್ರಗಳ ಅಳವಡಿಕೆ (ನೀರು, ಮಣ್ಣು ತಂತ್ರಜ್ಞಾನ, ಮಾರುಕಟ್ಟೆ, ಸಾಲಸೌಲಭ್ಯ ಕುರಿತಾದವು); ರೈತರ ಬೆಳೆಗಳ ಬೆಲೆಯಲ್ಲಿ ಆಗುವ ಏರುಪೇರು ತಡೆಯಲು

'ವಿಮಾ ಪ್ಯಾಕೇಜ್' ಅನ್ನು ಘೋಷಿಸುವ ಚಿಂತನೆ; ವಾಣಿಜ್ಯ ಬೆಳೆಗಳ ಬೆಲೆ ನಿಗದಿ ಸಮಿತಿಯ ಪರಿಷ್ಕೃತ ವರದಿ ಅನುಷ್ಠಾನ ಪ್ರಯತ್ನ; ಕೃಷಿ ರಫ್ತುವಲಯ ಸ್ಥಾಪನೆ ಮಾಡಿ ವೆನಿಲ್ಲಾ ಬೆಳೆಗೆ ಉತ್ತೇಜನ; ರೈಲ್ವೆ ಬಜೆಟ್‌ಮಾದರಿಯಲ್ಲಿ ಕೇಂದ್ರ ಸರ್ಕಾರ ಪ್ರತ್ಯೇಕ ಕೃಷಿ ಬಜೆಟ್ ಮಂಡಿಸಲು ರಾಜ್ಯ ಸಂಸದರ ಒತ್ತಾಯ; 10 ಕೋಟಿ ರೈತ ಕುಟುಂಬಗಳ ಪೈಕಿ 4 ಕೋಟಿ ರೈತ ಕುಟುಂಬಗಳಿಗೆ ಅಂಥದ್ದೇ ಸೌಲಭ್ಯ ಒದಗಿಸಲು ಸಂಸದರ ಆಗ್ರಹ; ಜಾಗತಿಕ ಗೋಡಂಬಿ ಮಾರುಕಟ್ಟೆ ಮರುಪ್ರವೇಶ ಹಾಗೂ ಹೊಸ ಮಾರುಕಟ್ಟೆ ಶೋಧಕ್ಕಾಗಿ ಭಾರತೀಯ ಗೇರು ರಫ್ತು ಉತ್ತೇಜನಸಮಿತಿಯಿಂದ ಅತ್ಯಾಧುನಿಕ ಸಂಶೋಧನಾಲಯ ಸ್ಥಾಪನೆ; ಅದನ್ನು ಮೌಲ್ಯವರ್ಧಿತ ಉತ್ಪನ್ನವನ್ನಾಗಿಸಿ (ಸಾಲ್ಟೆಡ್, ರೋಸ್ಟೆಡ್, ಶುಗರ್ ಕೋಟೆಡ್, ಹನಿಕೋಟೆಡ್ ಸ್ವರೂಪಗಳಲ್ಲಿ) ಮೌಲ್ಯವರ್ಧನೆ ಮಾಡಿ ಆದಾಯಗಳಿಸುವಂತೆ (ಶೇ.50ರಷ್ಟು ಹೆಚ್ಚಳ) ಮಾರಾಟ ಮಾಡುವುದು; ಕಳಪೆ ಕೀಟನಾಶಕ ರಸಗೊಬ್ಬರ ಮಾರಿ ರೈತರನ್ನು ವಂಚಿಸುವ ದಂಧೆಗೆ ಕಡಿವಾಣ ಹಾಕಲು 'ಜಾರಿ ಘಟಕ' ದ ರಚನೆಯ ಪ್ರಯತ್ನ; ಬಿತ್ತನೆ ಬೀಜಕ್ಕೆ ಶೇ.75ರಂತೆ ಸಬ್ಸಿಡಿ ನೀಡಿಕೆ, ಎತ್ತುಗಾಡಿ ಖರೀದಿ ಯೋಜನೆಗೆ 20 ಕೋಟಿ ರೂ. ಸಹಾಯ ಧನ; ಕೃಷಿ ಕಾರ್ಮಿಕರಿಗೆ ಸುವರ್ಣ ಸುರಕ್ಷಾ ವಿಮಾ ಯೋಜನೆ, ಹನಿ ನೀರಾವರಿ ಅಳವಡಿಕೆಗೆ 44 ಕೋಟಿ ರೂ. ಪ್ರೋತ್ಸಾಹ ನಿಧಿ, ಹಾಸನದಲ್ಲಿ ಜೈವಿಕ ಇಂಧನ ಪಾರ್ಕ್ ಸ್ಥಾಪನೆ, ಶಿವಮೊಗ್ಗದಲ್ಲಿ ಸಾವಯವ ಕೃಷಿ ಸಂಶೋಧನಾ ಕೇಂದ್ರ ಸ್ಥಾಪನೆ; ರೈತರ ಹಿತದೃಷ್ಟಿಯಿಂದ ಕಬ್ಬು ಸಾಗಾಣಿಕೆ ನಿರ್ಬಂಧದ ಸಡಿಲಿಕೆ, ಮಹಾರಾಷ್ಟ್ರಕ್ಕೆ ರೈತರು ಕಬ್ಬು ಸಾಗಿಸಲು ಮುಕ್ತಗೊಳಿಸಿದ ರಾಷ್ಟ್ರೀಯ ಹೆದ್ದಾರಿ; 'ಜೈ ಕಿಸಾನ್ ಕಾಲ್ ಸೆಂಟರ್' ಎಂಬ ಮಾಹಿತಿ ಒದಗಿಸುವ ಸೇವೆಯ ಆರಂಭ; ಎಲ್ಲಾ ಜಲಾಶಯಗಳ ಅಚ್ಚುಕಟ್ಟು ಪ್ರದೇಶದಲ್ಲಿ ಸವುಳು ಮತ್ತು ಜವುಳಾಗಿರುವ ಭೂಮಿಯಲ್ಲಿ 'ಶುಗರ್ ಬಿಟ್ಸ್' ಎಂಬ ಸಕ್ಕರೆ ಬೆಳೆಯನ್ನು (ಕೇವಲ 6 ತಿಂಗಳ ಬೆಳೆ ಸಕ್ಕರೆ ಗಡ್ಡೆ) ಕಬ್ಬು ಬೆಳೆಗೆ ಪರ್ಯಾಯವಾಗಿ ಬೆಳೆದು ಹೆಚ್ಚಿನ ಇಳುವರಿ ಪಡೆಯುವ ಸಂದರ್ಭ; ವಿಶ್ವಕೃಷಿ ಮಾರುಕಟ್ಟೆಯ ಅನುಷ್ಠಾನದ ಸವಾಲುಗಳನ್ನು ಸಮರ್ಪಕವಾಗಿ ಎದುರಿಸಲು ರೈತರನ್ನು ಸಿದ್ಧಗೊಳಿಸುವ ರೈತರನ್ನೊಳಗೊಂಡ ವಿಶೇಷ ಸಂಸ್ಥೆಯನ್ನು ರೂಪಿಸಲು ಕೇಂದ್ರದ ಚಿಂತನೆ; ಗುಟ್ಕಾದ ಮೇಲಿನ ಆರೋಪಗಳಿಂದಾಗಿ ತೀವ್ರ ಧಾರಣೆ ಕುಸಿತ ಕಂಡಿದ್ದ ಬೆಟ್ಟೆ, ಅಪಿ, ಇಡಿ, ಗೊರಬಲು ಅಡಕೆ ಮಾದರಿಗಳು 'ಕಾಂಪ್ಕೊ'ನ ಮಾರುಕಟ್ಟೆ ಪ್ರವೇಶದಿಂದಾಗಿ ಧಾರಣೆಯ ಚೇತರಿಕೆ, ಅಡಕೆ ಬೆಳೆಗಾರರ ರಕ್ಷಣೆಗೆ ಶಿವಮೊಗ್ಗ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯು ಧಾವಿಸಿ, ಅಡಕೆ ಪಡೆದು

ಅಡಮಾನ ಸಾಲ 50 ಸಾವಿರ ರೂ.ಗಳ ವರೆಗೆ ಮೊದಲ ತಿಂಗಳಿಗೆ ಬಡ್ಡಿ ಇಲ್ಲದೆ, ನಂತರ ಸಾಮಾನ್ಯ ಬಡ್ಡಿ ವಿಧಿಸಿ ಕೊಡುವುದನ್ನು ಘೋಷಿಸಿದುದು; ಅಡಕೆ ವಹಿವಾಟಿನ ಸಹಕಾರಿ ಸಂಸ್ಥೆಗಳಾದ ಕ್ಯಾಂಪ್ಕೊ, ಮ್ಯಾಮೋಸ್, ಆಪ್ಸ್‌ಕೋಸ್, ತೋಟಗಾರ್ಸ್ ಸೊಸೈಟಿ, ತುಮಕೋಸ್ ಅವುಗಳ ಸಭೆಯಲ್ಲಿ ಗುಟ್ಕಾ ನಿಷೇಧ ಮಾಡದಂತೆ ಕೇಂದ್ರ ಸರ್ಕಾರವನ್ನು ಒತ್ತಾಯಿಸಲು ನಿಯೋಗವು ರಾಜ್ಯ ಸರ್ಕಾರದೊಂದಿಗೆ ಹೋಗುವ ತೀರ್ಮಾನ; ಹಾವೇರಿ ಜಿಲ್ಲೆ ಕಾಕೋಳದಲ್ಲಿ ಶ್ರೀ ಚನ್ನಬಸಪ್ಪ ಶಿವಪ್ಪ ಕೊಂಬಳಿ ಅವರು .ಊರಿನವರೆಲ್ಲರೊಡನೆ ಸೇರಿ ಹರಿದು ಬರುವ ಗುಡ್ಡದ ನೀರಿಗೆ ಕಟ್ಟಿದ ತಡೆಗಟ್ಟೆಗಳು, ಇಂಗುಗುಂಡಿಗಳು, ದೊಡ್ಡ ಕೆರೆಯ ನಿರ್ಮಾಣ; ಕೆರೆಗಳು ಮತ್ತು ಭಾವಿಗಳಿಗೆ ನೀರು ಮರುಪೂರಣ ಸಾಧ್ಯತೆಗಳ ಅಧ್ಯಯನ ಹಾಗೂ ಆ ಬಗ್ಗೆ ರೈತರಿಗೆ ತರಬೇತಿ; ಮಳೆ ಕೊಯ್ಲುವಿನಲ್ಲಿ ನುರಿತಿರುವ ರೈತರ ತಂಡ ನಿರ್ಮಾಣ. ದೇಶದಲ್ಲಿ ವಿಫುಲವಾಗಿ ವಿವಿಧ ಟೊಮೆಟೋ ತಳಿಗಳನ್ನು ಬೆಳೆಸುವ ಕೋಲಾರದಲ್ಲಿ ಟೊಮ್ಯಾಟೋ ಮೊಸಾಯಿಕ್ ವೈರಸ್ ಹಾವಳಿ ನಿಯಂತ್ರಣದ ಬಗ್ಗೆ ಬೆಂಗಳೂರಿನ ಭಾರತೀಯ ವಿಜ್ಞಾನ ಮಂದಿರ ಹಾಗೂ ಬೆಂಗಳೂರು ಕೃಷಿ ವಿಶ್ವವಿದ್ಯಾಲಯ ಜೈವಿಕ ತಂತ್ರಜ್ಞಾನ ಕೇಂದ್ರಗಳಲ್ಲಿ ನಡೆಯುತ್ತಿರುವ ಸಂಶೋಧನೆಗಳು; ಬಿಜಾಪುರದ ರಂಭಾಪುರದ ರೈತ ಬಸವಂತ ಮೈದರಗಿ 21 ಎಕರೆ ಜಮೀನಿನಲ್ಲಿ ಸುಮಾರು ಅರ್ಧದಿನದಲ್ಲಿ ಸೂರ್ಯಕಾಂತಿ ಬೀಜವನ್ನು ಬಿತ್ತಿ ಮೂರು ಜೋಡಿ ಎತ್ತುಗಳನ್ನು ಬಿತ್ತಿದ ಜಮೀನನ್ನು ಹರಗಲು ಬಳಸಿ ತೋರಿದ ಸಾಧನೆ; ಹುಬ್ಬಳ್ಳಿ ಕೃಷಿ ಉತ್ಪನ್ನ ಮಾರುಕಟ್ಟೆ, ಬೆಂಗಳೂರು ಹಾಗೂ ಧಾರವಾಡ ಕೃಷಿ ವಿಶ್ವವಿದ್ಯಾಲಯಗಳು, ಹವಾಮಾನ, ಮಳೆಪ್ರಮಾಣ, ಭೂಮಿಯ ಗುಣಕ್ಕೆ ಹೊಂದುವ ಬೀಜೋತ್ಪಾದನೆಗೆ ಒಡಂಬಡಿಕೆ ಮಾಡಿಕೊಂಡು ಈರುಳ್ಳಿ ಬೀಜ ಸಂಶೋಧನೆ ಮಾಡಿ ಉಳ್ಳಾಗಡ್ಡಿ ಬೆಳೆಗಾರರಿಗೆ ಶಾಶ್ವತ ಪರಿಹಾರ ಕಲ್ಪಿಸಲು ಮುಂದಾಗಿರುವುದು; ಭಾರತೀಯ ಸಾಂಬಾರು ಬೆಳೆಗಳ ಸಂಘವು, ಸಾಂಬಾರು ಬೆಳೆಗಳ ಸುಧಾರಣೆ, ಜೈವಿಕ ತಂತ್ರಜ್ಞಾನ ನೀರು ನಿರ್ವಹಣೆ, ಸಾವಯವ ಬೇಸಾಯ, ಕೀಟಬಾಧೆ, ರೋಗ ನಿಯಂತ್ರಣ ಮಾರುಕಟ್ಟೆ ಕುರಿತಂತೆ ನಡೆಸಿದ ಸಾಂಬಾರು ಬೆಳೆ ಅಭಿವೃದ್ಧಿ ವಿಚಾರ ಸಂಕಿರಣ, ಹಾಗೂ ಪ್ರಶಸ್ತಿ ಪ್ರದಾನ; ಸಾವಯವ ಉತ್ಪನ್ನಗಳಿಗೆ ದೇಶೀಯ ಮಾರುಕಟ್ಟೆ ಹಾಗೂ 200 ದಶಲಕ್ಷಕ್ಕೂ ಮೀರಿಕೊಳ್ಳುವ ಸಾಮರ್ಥ್ಯದ ಗ್ರಾಹಕರಿರುವುದು; ಸಾವಯವ ಕೃಷಿ ಮೇಳ ನಡೆಸಿದುದು; ಜಮೀನುಗಳಿಗೆ ಮರು ಜೀವನ, ಭೂಮಿಯ ಮಡಿಲಿಗೆ ಮಳೆನೀರಿನ ಮರುಪೂರ್ಣಗಳಿಗಾಗಿ ಕೃಷಿ ಹೊಂಡ ನಿರ್ಮಾಣ, ಕೈಬೀಜಗಳ ಬೆಳಸುವಿಕೆ,

ಕೊಟ್ಟಿಗೆ ಗೊಬ್ಬರ ಹಾಗೂ ಬೇವಿನ ಎಣ್ಣೆ ಬಳಸಿ ಕೀಟನಿಯಂತ್ರಣಕ್ಕೆ ನಿಸರ್ಗಮುಖಿ ಚಳುವಳಿ ಮಾಡುವ ಸ್ವಸಹಾಯ ಸಂಘಗಳು ಮತ್ತು ಬೈಫ್ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯು ಹುಬ್ಬಳ್ಳಿ ಮತ್ತು ಕಲಘಟಗಿ ತಾಲೂಕಿನ 22 ಹಳ್ಳಿಗಳೆಲ್ಲ ನಿಸರ್ಗಮುಖಿ ಚಳುವಳಿಯಲ್ಲಿ ಗ್ರಾಮೀಣರನ್ನು ತೊಡಗಿಸುವುದು; ಭಾಗ್ಯಜ್ಯೋತಿ, ಕುಟೀರ ಜ್ಯೋತಿ ಗ್ರಾಹಕರಿಗೆ ಪ್ರತಿ ಯೂನಿಟ್‌ಗೆ 35 ಪೈಸೆ ಕಡಿಮೆ ಮಾಡಿದುದು, ನೀರಾವರಿ ಪಂಪ್‌ಸೆಟ್‌ಗಳಿಗೆ 10 ಪೈಸೆ ಕಡಿಮೆ ಮಾಡಿ ವಿದ್ಯುತ್‌ದರದ ರಿಯಾಯಿತಿ ನೀಡಿರುವುದು; ರಾಸಾಯನಿಕ ಹಾಗೂ ರಸಗೊಬ್ಬರ ಇಲಾಖೆ ಮೇಲಿನ ಸಂಸದೀಯ ಸಮಿತಿಯು ರೈತರಿಗೆ ನೇರವಾಗಿ ಸಬ್ಸಿಡಿ ನೀಡುವಂತೆ ಶಿಫಾರಸು ಮಾಡಿರುವುದು; ತಾಲೂಕಿನ ಕುಕ್ಕವಾಡ ಗ್ರಾಮದಲ್ಲಿ ರಾಜ್ಯದಲ್ಲಿ ಪ್ರಥಮ ಬಾರಿಗೆ ಇ.ಗ್ರಾಮಯೋಜನೆಯಲ್ಲಿ ಇ.ಸರ್ಕಾರ...ಇ–ಬ್ಯಾಂಕ್ ಸೇವೆಯ ಉದ್ಘಾಟನೆ; ವಿಶ್ವ ಮಾರುಕಟ್ಟೆಯ ಅನುಷ್ಠಾನದ ಸವಾಲುಗಳನ್ನು ಸೂಕ್ತವಾಗಿ ಎದುರಿಸಲು ದೇಶೀಯ ರೈತರನ್ನು ಸಜ್ಜುಗೊಳಿಸಲು ರೈತರನ್ನೊಳಗೊಂಡ ವಿಶೇಷ ಸಂಸ್ಥೆಯನ್ನು ರೂಪುಗೊಳಿಸಲು ಕೇಂದ್ರದ ಚಿಂತನೆ; ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಿಂದ ಬಡ ರೈತ ಕುಟುಂಬಗಳಿಗೆ ಒದಗುವ ಆದಾಯ; **23.12.2006** ರಂದು **ರೈತರ ದಿನಾಚರಣೆ** ಆಚರಣೆ; ಕೃಷಿ ಉತ್ಪನ್ನಗಳ ಉತ್ಪಾದನೆಯನ್ನು ಮತ್ತಷ್ಟು ಉತ್ತೇಜಿಸಲು ಸಣ್ಣ ರೈತರಿಗೆ ಪ್ರೋತ್ಸಾಹಧನ ನೀಡಿಕೆ; ಕೃಷಿ ಪ್ರಶಸ್ತಿ ಹಾಗೂ ಕೃಷಿ ಪಂಡಿತ ಪ್ರಶಸ್ತಿ ನೀಡಿಕೆ: 1980ರ ದಶಕದಲ್ಲಿ ಕೃಷಿ ಉತ್ಪಾದನಾ ವಲಯದಲ್ಲಿ ಸ್ಥಗಿತತೆ ಕೊಂಡಿತು. ಅದಾಗಿ ಉತ್ಪಾದನೆ ಹೆಚ್ಚಿಸಲು ಕೃಷಿಕರಿಗೆ ಪ್ರೋತ್ಸಾಹ ನೀಡಲು 1992–93ರಿಂದ ಕೃಷಿ ಪ್ರಶಸ್ತಿ ಪ್ರದಾನ ಕಾರ್ಯಕ್ರಮದ ಅನುಷ್ಠಾನ; ಇದರಲ್ಲಿ ಗರಿಷ್ಠ ಇಳುವರಿ ಪಡೆದ ರೈತರಿಗೆ ಕೃಷಿ ಪ್ರಶಸ್ತಿ ಪ್ರದಾನವಾಗುತ್ತದೆ. 2005–06ನೇ ಸಾಲಿನ ಕೃಷಿ ಪ್ರಶಸ್ತಿಯನ್ನು ಮಳೆಯಾಶ್ರಿತ ರಾಗಿ, ಕಡಲೆ, ನೀರಾವರಿ ಆಶ್ರಿತ ಮುಸುಕಿನ ಜೋಳದ ಉತ್ಪನ್ನಗಳಲ್ಲಿ ತೋರಿದ ಸಾಧನೆಗಾಗಿ ಸರ್ವಶ್ರೀ ಎಚ್.ಎಲ್.ಶೇಖರಪ್ಪ, ತೋಪಯ್ಯ, ಎಚ್.ಎಸ್.ಅಣ್ಣೇಗೌಡ, ಮಲ್ಲಪ್ಪ ಝುಲ್ಲಿ, ಪರಮೇಶ್ ಹುಸೇನ್ ಪೀರ್ ಖಾಜಾಹುಸೇನ್ ಜವಳಿ ಶೇಷಪ್ಪ ಸಂಗಪ್ಪ ಬಿರಾದಾರ್ ಅವರುಗಳಿಗೆ ನೀಡಲಾಯಿತು; ಕೃಷಿ ವಲಯದಲ್ಲಿ ಅನ್ವೇಷಣೆಗಳು, ಸೃಜನಾತ್ಮಕ ಕಾರ್ಯಗಳಿಂದ ಕೊಡುಗೆ ನೀಡುತ್ತಿರುವ ಹಾಗೂ ಸಮುದಾಯದ ಶ್ರೇಯೋಭಿವೃದ್ಧಿಗೆ ಕಾರಣರಾದ ರೈತ ಮಹನೀಯರಿಗೆ ಕೃಷಿ ಪಂಡಿತ ಪ್ರಶಸ್ತಿಯನ್ನು ನೀಡಲಾಯಿತು. ನೀರಿನ ಸಮರ್ಥ ಬಳಕೆ, ಸಾವಯವ ಕೃಷಿ, ಕೃಷಿ ಯಂತ್ರೋಪಕರಣಗಳ ಅಭಿವೃದ್ಧಿ ಮತ್ತು ಸಮಗ್ರ ಕೃಷಿ ಪದ್ಧತಿಗಳು, ಬೆಳೆ ವೈವಿಧ್ಯತೆಗಳ ಮೂಲಕ ವಿಂಗಡನೆ ಮಾಡಿ

ಸಾಧನೆ ಗಮನಿಸಿ ಈ ಪ್ರಶಸ್ತಿಯನ್ನು ನೀಡುತ್ತಿರುವುದಾಗಿದೆ. ಕಾಕೋಳದ ಶ್ರೀ ಚನ್ನಬಸಪ್ಪ ಶಿವಪ್ಪಕೊಂಬಳಿ ಅವರು ಸಾರ್ವತ್ರಿಕ, ಸಾಮೂಹಿಕವಾಗಿ ನೀರುಕೊಯಿಲು ಪ್ರಯತ್ನಿಸಿ ನೀರಿನ ಬರದ ಗ್ರಾಮವಾದ ಕಾಕೋಳದಲ್ಲಿ ಅಂತರ್ಜಲ ಮರುಪೂರಣಕ್ಕೆ ಕಾರಣರಾಗಿದ್ದಾರೆ; ಅಲ್ಪ ನೀರಿನಲ್ಲಿ ಹೊದಿಕೆ ಪದ್ಧತಿ ಬಳಸಿ, ಕೈಯಿಂದ ನೀರುಣಿಸಿ ತೋಟವನ್ನು ನಂದನವನ ಮಾಡಿಸಿದ್ದಾರೆ. ನೀರಿನ ಮಿತ ಬಳಕೆಯಲ್ಲಿ ಸಾಧಿಸಿದ ಯಶ, ಅಳವಡಿಸಿದ ಇಂಗು ಗುಂಡಿಮಾದರಿ, ಬೆಳೆಗಳ ತ್ಯಾಜ್ಯವನ್ನು ಜಮೀನಿಗೆ ಸೇರಿಸಿ ಫಲವತ್ತಾಗಿಸುವುದು ಚಪ್ಪರದ ಹಳ್ಳಿ ಶ್ರೀ ಸೋಮಶೇಖರಪ್ಪ ವಿರೂಪಾಕ್ಷ' ಅವರ ಕಾಯಕವಾಗಿತ್ತು. ಅವರಿಗೆ 2005-06ನೇ ಸಾಲಿನ ಕೃಷಿ ಪಂಡಿತ ಪ್ರಶಸ್ತಿ ಪ್ರಧಾನವಾಯಿತು; ಹೀಗೆಯೇ ಸಾವಯವ ಮುತಾಲಿಕ್ ದೇಸಾಯಿ, ಎರೆಹುಳು ಕೃಷಿಗಾಗಿ ರೈತರಿಗೆ ಹುಳುವಿನ ಉಚಿತ ಸರಬರಾಜು, ಸಾವಯವ ಕೃಷಿ ಪದ್ಧತಿಯೊಂದಿಗೆ ಸಮಗ್ರ ಕೃಷಿ ಪದ್ಧತಿಯನ್ನು ಸಮೀಕರಿಸುವ ಪ್ರಯತ್ನದ ಶ್ರೀ ಎಸ್.ಎಸ್.ಎತ್ತಿನಮನಿ ಮತ್ತು ಶ್ರೀಮತಿ ವೈ.ಪ್ರಮಿಳ ದಂಪತಿಗಳಿಗೆ, ಟ್ರಾಕ್ಟರ್ ಚಾಲಿತ ಕೂರಿಗೆಗಳ ಸ್ವಯಂ ಚಾಲಿತ ಮಾದರಿಯಲ್ಲಿ ವಿನ್ಯಾಸಗೊಳಿಸಿದ ಮಳೆಯಾಶ್ರಿತದಲ್ಲಿ ಹಿಂಗಾರು ಹಂಗಾಮಿನಲ್ಲಿ ಬಿತ್ತನೆ ಕಾರ್ಯಮಾಡಲು ಅನುಕೂಲಿಸಿದ ಶ್ರೀಗದಗಯ್ಯ ಈರಯ್ಯ ಹಿರೇಮಠ್ ಅವರಿಗೆ ಸಮಗ್ರ ಕೃಷಿ ಪದ್ಧತಿ ಮತ್ತು ಬೆಳೆಗಳ ವೈವಿಧ್ಯೀಕರಣಕ್ಕಾಗಿ ಶ್ರೀ ಸುರೇಶ ಬಸವ ಪ್ರಭು ದೇಸಾಯಿ, ಶ್ರೀ ಕೃಷ್ಣಪ್ಪ ಲಕ್ಷ್ಮಪ್ಪ ಚಲಕೇರಿ ಅವರಿಗೆ ಕೃಷಿ ಪಂಡಿತ ಪ್ರಶಸ್ತಿ ಪ್ರದಾನವಾಯಿತು. ಅಂದರೆ ಕೃಷಿ ಪ್ರಶಸ್ತಿಯು **ಬೆಳೆಸಾಧನೆಗಾಗಿ** ಕೊಡುವ ಪ್ರಶಸ್ತಿಯಾದರೆ, ಕೃಷಿ ವಲಯದಲ್ಲಿ ಮಾಡಿದ **ಅವಿಷ್ಕಾರಕ್ಕಾಗಿ ಕೃಷಿ ಪಂಡಿತ ಪ್ರಶಸ್ತಿ** ಪ್ರದಾನವಿರುವುದು;

ಸರ್ಕಾರದಿಂದ ಗ್ರಾಮುದತ್ತು, ಖಾಸಗಿಲೇವಾದೇವಿದಾರರಿಂದ ಪೀಡನೆಯಿಂದಾಗಿ ರೈತರು ಆತ್ಮಹತ್ಯೆ ಹಾಗೂ ಜೀವ ಬೆದರಿಕೆಗೆ ಒಳಗಾಗದಂತೆ ತಡೆಯಲು ಲೇವಾದೇವಿದಾರರ ಮೇಲೆ ನಿಯಂತ್ರಣ ಹಾಗೂ ಶಿಕ್ಷೆ ವಿಧಿಸುವ ಕಾನೂನು ಜಾರಿಗೆ ತರುವುದು; ಗ್ರಾಮೀಣ ಸ್ತ್ರೀ ಶಕ್ತಿ ಸಂಘದ ಸದಸ್ಯರು ವ್ಯಾಪಾರಿಗಳ ಅಕ್ರಮ ಆಹಾರ ಸಾಮಗ್ರಿ ಸಾಗಾಣಿಕೆಯನ್ನು ತಡೆದು ಪೋಲಿಸರಿಗೆ ಒಪ್ಪಿಸಿ ದಿಟ್ಟತನ ತೋರಿರುವುದು; ಅತ್ಯಂತ ಕಡಿಮೆ ನೀರು, ಸುಮಾರು ಫಲವತ್ತತೆಯ ಭೂಮಿಯಾದರೂ ಬಳಸಿ ಹೆಚ್ಚಿನ ತೋಟಗಾರಿಕೆ ಉತ್ಪನ್ನಗಳನ್ನು ಬೆಳೆಸುವ ಇಸ್ರೇಲಿ ತಂತ್ರಜ್ಞಾನದ ಅಳವಡಿಕೆ; 5 ಕೋಟಿರೂ ವೆಚ್ಚದಲ್ಲಿ ರಾಜ್ಯದ ಆಯ್ದ 10 ತಾಲೂಕುಗಳಲ್ಲಿ (ಜೇವರ್ಗಿ, ಅಫಜಲ್ಪುರ, ಬಾಗೇಪಲ್ಲಿ, ಬೀದರ್, ಮೊಳಕಾಲ್ಮೂರು,

ಪಾವಗಡ, ಅಥಣಿ, ಚಾಮರಾಜನಗರ, ಯಲಬುರ್ಗಾ, ಕುಷ್ಟಗಿ) 720 ಎಕರೆ ರೈತರ ತೋಟದಲ್ಲಿ ದಾಳಿಂಬೆ, ಮೋಸಂಬಿ, ಮಾವು, ಟೊಮೇಟೋ, ಬಿಳಿ ಈರುಳ್ಳಿ ಇತ್ಯಾದಿ ಬೆಳೆಗಳಿವೆ ಈ ತಂತ್ರಜ್ಞಾನ ಯೋಜನೆಯ ಅನುಷ್ಠಾನ; ಬೆಂಬಲ ಬೆಲೆಯಲ್ಲಿ ಕೊಬ್ಬರಿ ಖರೀದಿಸುವ ಬದಲು ರೈತರಿಗೆ ಕ್ವಿಂಟಾಲ್‌ಗೆ 700 ರೂ. ಸಹಾಯ ಧನ ನೀಡುವ ಹೊಸ ವಿಧಾನವನ್ನು ಜನವರಿ 2007ರಿಂದ ಜಾರಿಗೆ ತರಲು ರಾಜ್ಯ ಸರ್ಕಾರದ ತೀರ್ಮಾನ; ಈ ಬಗ್ಗೆ ರಾಜ್ಯದ ಕೊಬ್ಬರಿ ಜೊತೆ ಕೇರಳ ಕೊಬ್ಬರಿಯನ್ನು ಮಿಶ್ರಮಾಡಿ ಮಾರಾಟ ಮಾಡುವ ಸಾಧ್ಯತೆಯನ್ನು ಗಮನಿಸಿ ರೈತರು ಹೊಂದಿರುವ ತೋಟದ ಆಧಾರದ ಮೇಲೆ ಕ್ವಿಂಟಾಲ್ ಖರೀದಿಸುವ ಪ್ರಮಾಣದ ಬಗ್ಗೆಯೂ ಚಿಂತನೆ ನಡೆದಿರುವುದು; ಸಣ್ಣ ರೈತರಿಗೆ ಎಷ್ಟು ಕ್ವಿಂಟಾಲ್ ಕೊಬ್ಬರಿ ಖರೀದಿಗೆ ನೀಡಬೇಕಾದ ಸಹಾಯ ಧನ ನಿಗದಿಗೊಳಿಸಲು ಸಂಬಂಧಿಸಿದ ಇಲಾಖಾ ಅಧಿಕಾರಿಗಳೊಡನೆ ಚರ್ಚಿಸಿ ನೀಡಿದ ತೀರ್ಮಾನ; ಸಹಕಾರಿ ಬ್ಯಾಂಕುಗಳಿಂದ ರಾಜ್ಯದ ರೈತರು ಪಡೆದಿರುವ 15 ಸಾವಿರ ಕೋಟಿ ರೂ. ಸಾಲದ ಪೈಕಿ 6 ಸಾವಿರ ಕೋಟಿ ರೂ. ಸಾಲವನ್ನು ಮನ್ನಾ ಮಾಡಲು ಸರ್ಕಾರ ಸಿದ್ಧಪಡಿಸಿರುವ ಕ್ರಿಯಾ ಯೋಜನೆ; ಪ್ರತಿಟನ್ ಕಬ್ಬಿನ ಖರೀದಿ ತೆರಿಗೆಯಲ್ಲಿ 40 ರೂ.ಗಳ ಕಡಿತ ಮಾಡಲೆಳೆಸಿಮದು, ಸ್ವಾಗತಾರ್ಹವಾಗಿದೆ.

ಕೊಪ್ಪಳ ಜಿಲ್ಲೆ ಕುಷ್ಟಗಿ ತಾ ಬಳೂರಗಿ, ತೆಗ್ಗಿಹಾಳ, ಬಸಾಪುರ ಗ್ರಾಮದ ರೈತರು ಪ್ರಗತಿಪರ ಕೃಷಿಕ ದೇವೇಂದ್ರಪ್ಪ ಬಿಳೊರಗಿ ಅವರ ಮಾರ್ಗದರ್ಶನದಲ್ಲಿ ಮಿಶ್ರ ಕೃಷಿಯಿಂದ ಆದಾಯ, ಬೆಳೆ ಪಡೆದುದಲ್ಲದೆ ಅಂತರ ಬೆಳೆಯಾಗಿ ಕಡಲೆ, ಕುಸುಬೆಯನ್ನು ಹುಣಿಸೆ ಜೊತೆಗೆ ಬೆಳೆದು ಆದಾಯ ಹೆಚ್ಚಿಕೊಂಡದ್ದು, ವಲಸೆ **ಹೋಗುವ ಬದಲು ಪರ್ಯಾಯ ಆದಾಯದ ಮಾರ್ಗ ಕಂಡುಕೊಂಡು ಮುಂಗಾರು, ಹಿಂಗಾರು ವೈಫಲ್ಯವನ್ನು** ಎದುರಿಸಿದುದು; ಗೇರು ಅಭಿವೃದ್ಧಿಯನ್ನು ಲಾಭದ ಉದ್ಯಮವಾಗಿಸಿದುದು; ಕರ್ನಾಟಕ ರಾಜ್ಯ ಗೇರು ಅಭಿವೃದ್ಧಿನಿಗಮಕ್ಕೆ ಸರ್ಕಾರ ಗೇರು ಬೆಳೆಸಲು 26 ಸಾವಿರ ಹೆಕ್ಟೇರ್ ರಿಸರ್ವ್ ಫಾರೆಸ್ಟ್ ನೀಡಿ, ಗೇರು ತೋಟ ನಿರ್ಮಾಣಕ್ಕೆ ನಿರ್ಧರಿಸಿರುವುದು; ಕರ್ನಾಟಕ ಕ್ಯಾಶ್ಯೂ ಮ್ಯಾನ್ಯುಫ್ಯಾಕ್ಚರ್ಸ್ ಅಸೋಸಿಯೇಶನ್ ಸಹಾಯದಿಂದ ಸಸಿ ಬೆಳೆಸಿ ರೈತರಿಗೆ ಪೂರೈಸಲು ಯೋಜನೆ ರೂಪಿಸಲು ನಿಗಮವು ತಾಂತ್ರಿಕ ನೆರವು ನೀಡಲಿರುವುದು; ರೈತ ಮಿತ್ರ ಯೋಜನೆ ಹಾಗೂ ರೈತರನ್ನು ಸಂಪರ್ಕಿಸುವ ಕೆಲಸವನ್ನು ಗ್ರಾಮ ಪಂಚಾಯತಿಗೆ ಬಿಡುವುದು ಅಂದೆ ಪಂಚಾಯತಿ ವ್ಯವಸ್ಥೆ ರೈತರ ಮನೆ ಬಾಗಿಲಿಗೆ ಹೋಗುವ ಸ್ವಾಗತಾರ್ಹ

O-1004-19

ವ್ಯವಸ್ಥೆ; ಭತ್ತದ ಬೆಳೆಯಲ್ಲಿ, ಅಲ್ಪಪ್ರಮಾಣದ ನೀರು ಮತ್ತು ಕೊಟ್ಟಿಗೆ ಗೊಬ್ಬರ ಬಳಸಿ ಅಧಿಕ ಇಳುವರಿ ಪಡೆಯುವ ವಿಧಾನವಾದ **'ಶ್ರೀ ಪದ್ಧತಿ'** ಅಳವಡಿಕೆಗೆ ಮಾಹಿತಿ ಒದಗಣೆ, ಬೇಸಿಗೆಯಲ್ಲಿ ಬೆಳೆಯುವ ಬೆಳೆಗಳ ಕುರಿತು ರೈತರಿಗೆ ತರಬೇತಿ; ರೈತರ ಆತ್ಮಹತ್ಯೆಯ ಸಂದರ್ಭದಲ್ಲಿ ಅವರ ಕುಟುಂಬಗಳಿಗೆ ನೀಡುವ ಪರಿಹಾರವನ್ನು 1 ಲಕ್ಷದಿಂದ 2 ಲಕ್ಷಕ್ಕೆ ಹೆಚ್ಚಿಸುವ ಬಗ್ಗೆ ಸರ್ಕಾರದ ಪರಿಶೀಲನೆ, ಆತ್ಮಹತ್ಯೆ ಪ್ರಕರಣದ 6 ಜಿಲ್ಲೆಗಳ ರೈತರ ಪುನರ್ವಸತಿಗೆ ಪ್ರಧಾನಮಂತ್ರಿಗಳ ರಾಷ್ಟ್ರೀಯ ಪರಿಹಾರ ನಿಧಿಯಿಂದ ತಲಾ 50 ಲಕ್ಷ ರೂ.ಗಳ ಬಿಡುಗಡೆ; 2006ನೇ ಸಾಲಿನಲ್ಲಿ ಬಾಗಲಕೋಟೆಯಿಂದ ಹಿಡಿದು ದ.ಕನ್ನಡ, ಚಾಮರಾಜನಗರದವರೆಗಿನ 22 ಜಿಲ್ಲೆಗಳಲ್ಲಿ ಆದ 217 ರೈತರ ಆತ್ಮಹತ್ಯಾ ಪ್ರಕರಣಗಳನ್ನು ಗಮನಿಸಿ ಪರಿಹಾರೋಪಾಯಗಳಿಗೆ ಸರ್ಕಾರ ಮುಂದಾಗಿರುವುದು; ವಿಧಾನ ಸೌಧದಲ್ಲಿ ಕಬ್ಬು ಬೆಳೆಗಾರರ ಸಭೆಯನ್ನು ಆಯೋಜಿಸಿ ಜನಪ್ರತಿನಿಧಿಗಳು, ರೈತನಾಯಕರು, ಸಕ್ಕರೆ ಕಾರ್ಖಾನೆ ಆಡಳಿತ ಮಂಡಳಿ ಮುಖ್ಯಸ್ಥರೊಡನೆ ಸಮಾಲೋಚನೆ ಮಾಡಿ ಬೆಳೆಗಾರರಿಗೆ 250 ಕೋಟಿ ರೂ.ಗಳ ನೆರವು ಘೋಷಣೆ; **13.4.2007ರ ವಿಧಾನ** ಪರಿಷತ್ತಿನ ಅಧಿವೇಶನದ ಕಾರ್ಯ ಕಲಾಪಗಳಲ್ಲಿ ಪಾಲ್ಗೊಂಡ ಪ್ರತಿಪಕ್ಷದ ನಾಯಕ ಶ್ರೀ **ಎಚ್.ಕೆ.ಪಾಟೀಲ್** ಹೆಚ್ಚುವರಿ ಬೆಳೆದ 137 ಲಕ್ಷ ಟನ್ ಕಬ್ಬು ನುರಿಸದಿದ್ದರೆ ರೈತರಿಗಾಗುವ ಸಂಕಷ್ಟ, ಸಕ್ಕರೆ ಉತ್ಪಾದನೆಗೆ ಹಾನಿ, ಮಹಾರಾಷ್ಟ್ರ ಪ್ಯಾಕೇಜ್ ಮಾದರಿಯಲ್ಲಿ ಕಬ್ಬು ಬೆಳೆಗಾರರಿಗೆ, ಕಬ್ಬಿನ ಬೆಲೆ ಕುಸಿತ ತಡೆಗಟ್ಟಿ ನೆರವು ನೀಡುವ ಬಗ್ಗೆ, ಹೇಳಿದುದು; ಇಳುವರಿಗೆ ತಕ್ಕಂತೆ ದರ ನಿಗದಿ ಮಾಡುವುದು, ಕಬ್ಬಿನ ಗಾಣಕ್ಕೆ ಪರವಾನಗಿ ಮತ್ತು ವಿದ್ಯುತ್ ಸಂಪರ್ಕ ನೀಡಿಕೆ, ಬೆಳೆಗಾರರಿಗಾಗಿ ಆವರ್ತ ನಿಧಿ ಸ್ಥಾಪನೆ ಮಾಡಿ ಆತ್ಮವಿಶ್ವಾಸ ತುಂಬಲು ಶಾಸಕರು ಸರ್ಕಾರದ ಮೇಲೆ ಹಾಕಿದ ಒತ್ತಾಯ, ಇದಕ್ಕೆ ಡಾ.ಎಂ.ಪಿ.ನಾಡಗೌಡ, ಬಸವರಾಜ್ ಪಾಟೀಲ್ ಹುಮ್ನಾಬಾದ್, ಶ್ರೀಕಂಠೇಗೌಡ, ಮರಿತಿಬ್ಬೇಗೌಡ, ವೀರಣ್ಣ ಮತ್ತಿಕಟ್ಟೆ ಅವರು ಒತ್ತಾಯಿಸಿದುದು; ಸುವರ್ಣ ಕರ್ನಾಟಕದ ಸಮಗ್ರ ಅಭಿವೃದ್ಧಿ ಸಮೃದ್ಧ ಕಾರ್ಯಕ್ರಮ ಸಾಧನಾ ಸಂಪುಟವನ್ನು ನರಗುಂದದ ರೈತ ಮುಖಂಡ ಹಾಗೂ ಎಂ.ಪಿ.ಸಿ.ಸಿ ಅಧ್ಯಕ್ಷ ಶ್ರೀ ಶಿವನಗೌಡ ಬಿ.ಕರೀಗೌಡ ಅವರಿಂದ ಬಿಡುಗಡೆ ಮಾಡಿಸಿದುದು; ಅಬ್ದುಲ್ ನಜೀರ್ ಸಾಬ್ ಗ್ರಾಮೀಣಾಭಿವೃದ್ಧಿ ಸಂಸ್ಥೆಯಲ್ಲಿ 176 ತಾಲೂಕುಗಳ ಪಂಚಾಯತ್ ರಾಜ್ ಚುನಾಯಿತ ಪ್ರತಿನಿಧಿಗಳೊಂದಿಗೆ ಉಪಗ್ರಹ ಆಧಾರಿತ ವೀಡಿಯೋ ನೇರ ಸಂವಾದದಲ್ಲಿ ಮಾನ್ಯ ಮುಖ್ಯ ಮಂತ್ರಿ ಶ್ರೀ ಹೆಚ್.ಡಿ.ಕುಮಾರ್‌ಸ್ವಾಮಿಗಳು ಪಾಲ್ಗೊಂಡು ರೈತರ ಸಾಲ ಮನ್ನಾದ ಬಗ್ಗೆ

ಹೇಳಿದುದು; ಸರ್ಕಾರ ಸಾಲಮನ್ನಾ ಮಾಡುವ ಬದಲಿಗೆ ರೈತರು ಬೆಳೆದ ಬೆಳೆಗೆ ಬೆಂಬಲ ಬೆಲೆ ನೀಡಿದರೆ ಸಹಕಾರಿ ರಂಗ ಹಾಗೂ ರೈತರ ರಕ್ಷಣೆ ಆಗುವುದು, ಸಾಲ ಮನ್ನಾಕ್ಕೆ ಬಳಸುವ ಹಣವನ್ನು ಬೆಂಬಲ ಬೆಲೆ ನೀಡಲು ಬಳಸುವಿಕೆ ಕುರಿತು ವ್ಯಕ್ತವಾಗಿರುವ ಅಭಿಪ್ರಾಯಗಳು; 'ಚಂದನ' ವಾಹಿನಿ ಸಂಕ್ರಾಂತಿ ಪ್ರಯುಕ್ತದ ಹಲೋ ಸಿ.ಎಂ. ಕಾರ್ಯಕ್ರಮದಲ್ಲಿ ಮಾನ್ಯ ಮುಖ್ಯಮಂತ್ರಿಗಳ ತಂಬಾಕು ಬೆಳೆ, ಕಬ್ಬು ಬೆಳೆಗಾರರ ಸಮಸ್ಯೆಗಳಿಗೆ ಬ್ಯಾಂಕ್ ಸಾಲದ ಸಮಸ್ಯೆಗಳಿಗೆ ಉತ್ತರ ನೀಡಿದುದು; 2007–08ರ ಕೇಂದ್ರ ಮುಂಗಡಪತ್ರದಲ್ಲಿ ಕೃಷಿರಂಗಕ್ಕೆ ಭಾರಿ ಒತ್ತು ನೀಡುವ, ಶೇ.20 ರಷ್ಟು ಬಜೆಟ್ ಬೆಂಬಲವನ್ನು ಹೆಚ್ಚಿಸುವ, ಕ್ಷಿಪ್ರಗತಿಯ ನೀರಾವರಿ ಯೋಜನೆಗಳಿಗೆ ಶೇ.50 ರಷ್ಟು ಆರ್ಥಿಕ ಬೆಂಬಲವನ್ನು ಹೆಚ್ಚಿಸುವ, ಸಾಧ್ಯತೆಗಳು, ಕೃಷಿ ಕ್ಷೇತ್ರಕ್ಕೆ 4800 ಕೋಟಿ ರೂ.ಗಳ ಬದಲು 7500 ಕೋಟಿ ರೂ.ಗಳ ಮಂಜೂರಾತಿಗೆ ಕೃಷಿ ಸಚಿವಾಲಯದ ಒತ್ತಡ; 94ನೇ ಭಾರತೀಯ ವಿಜ್ಞಾನ ಕಾಂಗ್ರೆಸ್‌ನಲ್ಲಿ ಕೃಷಿ ಉತ್ಪಾದನೆ ಹೆಚ್ಚಿ ಬೆಲೆ ಕಡಿಮೆಯಾಗಲಿ, ಉತ್ಪಾದನೆ, ಕುಸಿದು ಬೆಲೆ ಹೆಚ್ಚಲಿ ರೈತರೇ ಎರಡೂ ಸಂದರ್ಭದಲ್ಲಿ ಸಂಕಷ್ಟಕ್ಕೆ ಸಿಲುಕುವಲ್ಲಿ ರೈತರ ಆದಾಯದ ಮೇಲೆ ಆಗುವ ಪರಿಣಾಮ, ಒಣಬೇಸಾಯ ಬೆಳೆಗಳ ಉತ್ಪಾದನೆ, ರೈತರು ಮತ್ತು ಮಾರುಕಟ್ಟೆ ನಡುವೆ ನೇರ ಸಂಪರ್ಕ ಕಲ್ಪಿಸಬೇಕಾದ ಅಗತ್ಯ, ಹವಾಮಾನ ವೈಪರೀತ್ಯದಿಂದ ಬೆಳೆ ಉತ್ಪಾದನೆ ಮೇಲಾಗುವ ಪರಿಣಾಮ, ರೈತರು ಮಿಶ್ರ ಬೆಳೆ ಬೆಳೆಯಬೇಕಾದ ಅಗತ್ಯ, ಕುರಿತೆಲ್ಲ ಬಂದ ಕೃಷಿ ಕಾಳಜಿಯ ದನಿಗಳು; ಕೇಂದ್ರ ಸರ್ಕಾರ ನೀಡಿರುವ ಪ್ಯಾಕೇಜ್ ಬ್ಯಾಂಕ್‌ಗಳಿಗೆ ಮಾತ್ರ ಅನುಕೂಲ ಎಂದಿರುವ ಅರುಣ್ ಮಾಚಯ್ಯ, ವಿದರ್ಭಕ್ಕೆ ಕೇಂದ್ರ ಸರ್ಕಾರ ಪ್ಯಾಕೇಜ್ ನೀಡಿದ ಮೇಲೂ ರೈತರ ಆತ್ಮಹತ್ಯೆ ದ್ವಿಗುಣಗೊಂಡಿರುವಲ್ಲಿ ರೈತರಿಗೆ ಸರ್ಕಾರದ ನೆರವು ಯಾವ ರೀತಿಯಲ್ಲೂ ಉಪಯೋಗವಾಗಿಲ್ಲ ಎಂದಿರುವ ಶ್ರೀ ಜಿ. ಶಶೀಲ್ ನಮೋಶಿ, ಕೇಂದ್ರ ಸರ್ಕಾರ ಮಹಾರಾಷ್ಟ್ರಕ್ಕೆ ತೋರಿರುವ ಕಾಳಜಿಯನ್ನು ಕರ್ನಾಟಕದ ರೈತರ ಬಗ್ಗೆ ತೋರಿಸಿಲ್ಲ ಇದು ಮಲತಾಯಿ ಧೋರಣೆ ಎಂದಿರುವ ಶ್ರೀ ಅರವಿಂದ ಲಿಂಬಾವಳಿ ಅವರು ವಿಧಾನಪರಿಷತ್ತಿನಲ್ಲಿ ತೋರಿರುವ ಲೋಪಗಳನ್ನು ಗಮನಿಸಿ ಕೃಷಿ ಸಚಿವ ಶ್ರೀ ಬಂಡೆಪ್ಪ ಖಾಶೆಂಪುರ ಅವರು, ಕೇಂದ್ರ ಸರ್ಕಾರ ರಾಜ್ಯದ 6 ಜಿಲ್ಲೆಗಳಿಗೆ ಪ್ಯಾಕೇಜ್ ನೀಡಿದ್ದು ಅದನ್ನು 13 ಜಿಲ್ಲೆಗಳಿಗೆ ವಿಸ್ತರಿಸಲು ಒತ್ತಾಯಿಸಿರುವುದು ಹಾಗೂ 6903 ಕೋಟಿ ರೂ. ಅನುದಾನ ನೀಡಲು ಮನವಿ ಸಲ್ಲಿಸಿರುವುದೆಂದು ಉತ್ತರಿಸಿರುವುದು (21–2–2007); ಬರಪೀಡಿತ ಜಿಲ್ಲೆಯಾದ ಗದಗ್‌ನಲ್ಲಿ ರೈತರು

ಮತ್ತು ಕೃಷಿ ಕಾರ್ಮಿಕರ ಶ್ರೇಯೋಭಿವೃದ್ಧಿಗೆ – ಮಣ್ಣು ಮತ್ತು ನೀರಿನ ಸಂರಕ್ಷಣೆಗೆ, ಒಣ ಬೇಸಾಯ ತಂತ್ರಜ್ಞಾನ ಸುಧಾರಿತ ಬೀಜ, ಬರ ಸಹಿಷ್ಣುತಾ ತಾಂತ್ರಿಕತೆ, ಮಹಿಳೆಯರ ಶ್ರಮ ತಗ್ಗಿಸುವ ತಾಂತ್ರಿಕತೆಯ ಬಳಕೆ ಹಾಗೂ ಕೃಷಿ ಸಂಬಂಧಿ ಚಟುವಟಿಕೆಗಳಲ್ಲಿ ರೈತರೊಂದಿಗೆ ಪರಿಣಾಮಕಾರಿಯಾಗಿ ಪ್ರಭಾವಶಾಲಿಯಾಗಿ ಕೆಲಸ ಮಾಡುತ್ತಿರುವ 'ಹುಲಿಕೋಟಿಯ ಕೆ.ಎಚ್.ಪಾಟೀಲ್ ಕೃಷಿ ವಿಜ್ಞಾನ ಕೇಂದ್ರಕ್ಕೆ', 'ರಾಷ್ಟ್ರೀಯ ಕೃಷಿ ವಿಜ್ಞಾನ ಕೇಂದ್ರ ಪ್ರಶಸ್ತಿ' (2004–05)ಯನ್ನು ನೀಡಲಾಗಿರುವುದು;

2006, ಡಿಸೆಂಬರ್ 20 ರಿಂದ 23ರ ವರೆಗೆ ಶಿವಮೊಗ್ಗದಲ್ಲಿ ನಡೆದ 73ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ. **'ಕೃಷಿ ಮತ್ತು ಜಾಗತೀಕರಣದ ಸವಾಲುಗಳು'** ಎಂಬ ಶೀರ್ಷಿಕೆಯಲ್ಲಿ ಗೋಷ್ಠಿಯೊಂದನ್ನು ಪದ್ಮಶ್ರೀ ಪ್ರಶಸ್ತಿ ವಿಜೇತರೂ, ಧಾರವಾಡ ಕೃಷಿ ವಿಶ್ವವಿದ್ಯಾಲಯದ ಮಾಜಿ ಉಪಕುಲಪತಿಗಳೂ ಆದ ಡಾ.ಎಂ.ಮಹಾದೇವಪ್ಪ ಅವರ ಅಧ್ಯಕ್ಷತೆಯಲ್ಲಿ ಮೊಟ್ಟ ಮೊದಲಿಗೆ ಸಾಹಿತ್ಯ ಸಮ್ಮೇಳನದ ಇತಿಹಾಸದಲ್ಲಿ ಏರ್ಪಡಿಸಿದ್ದುದು ಈ ಹಿಂದೆ ಗ್ರಂಥಾಲಯ ಸಮಿತಿಯಿಂದ ಪ್ರಕಟಗೊಂಡ **ರೈತ ಚಳುವಳಿಗಳ ಸಂಪುಟ**ಗಳಲ್ಲಿ ನೀಡಿದ ಸಲಹೆಗಳಿಗೆ ಸಿಕ್ಕಿದ ಆದರದ ಕುರುಹೂ ಆಗಿತ್ತು; ರೈತರು, ಹಾಗೂ ಕೃಷಿ ಸಂಬಂಧದ ಸಮಸ್ಯೆ, ಸವಾಲು ತಂತ್ರಜ್ಞಾನ ಅಭಿವೃದ್ಧಿ ಕುರಿತು ಸಾಹಿತ್ಯಕ ಚಿಂತನೆಗಳನ್ನು ನೇರ್ಪುಗೊಳಿಸಿದುದೂ ಸ್ವಾಗತಾರ್ಹ ರೈತ ಸಾಂತ್ವನ ಕ್ರಮವೆನಿಸುತ್ತದೆ. ತುತ್ತು ಬೆಳೆದು ಕೊಟ್ಟವನಿಗೆ ತೋರಿದ ಸಾಹಿತ್ಯಕ ಕೃತಜ್ಞತೆಯ ಒಂದು ಸ್ವರೂಪ ಇದೆನ್ನಿಸುತ್ತದೆ.

'ಭಾರತ ಸರ್ಕಾರದ ಮಹಿಳಾ ಸಬಲೀಕರಣ ಯೋಜನೆ' ಅಡಿಯಲ್ಲಿ, ಧಾರವಾಡ, ಗದಗ, ಹಾವೇರಿ, ಉತ್ತರ ಕನ್ನಡ ಜಿಲ್ಲೆಯ ವ್ಯಾಪ್ತಿ ಹೊಂದಿರುವ ಹಾಲು ಒಕ್ಕೂಟದ ಮಹಿಳೆಯರು 64 ಹಾಲು ಉತ್ಪಾದಕ ಮಹಿಳಾ ಸಂಘಗಳನ್ನು ರಚಿಸಿಕೊಂಡಿರುವುದು; ಪಶುಚಿಕಿತ್ಸೆ, ಎಮ್ಮೆ–ಆಕಳುಗಳಿಗೆ ಕೃತಕಗರ್ಭಧಾರಣೆ, ಹಾಲು ಪರೀಕ್ಷೆ, ನಂದಿನಿ ಪಾರ್ಲರ್ ಚಾಲನೆ ಇತ್ಯಾದಿಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವುದು ರೈತ ವಲಯದ ಆರ್ಥಿಕ ನೆಮ್ಮದಿಗೆ, ಉದ್ಯೋಗ ಸಾಂತ್ವನವಾಗಿ ರೂಪುಗೊಂಡಿದೆ; ಹಿರಿಯೂರು ತಾಲೂಕು ಬಿದರಕೆರೆ ಗ್ರಾಮದ ರೈತ ಮಹಿಳೆ ಶ್ರೀಮತಿ ಶಶಿಕಲಾ ಅವರು ಭಾರಿ ಬರಗಾಲದ ತಮ್ಮ ಪ್ರದೇಶಧಲ್ಲಿ ಕಡಿಮೆ ಮಳೆ ನೀರು ಬಂದರೂ ಅರೆ ನೀರಾವರಿ ಪದ್ಧತಿಯಲ್ಲಿ ಸಾಲು ಬಿತ್ತನೆ ಮಾಡಿ, **ಜಲಶ್ರೀ** ಪದ್ಧತಿಯಲ್ಲಿ ಭತ್ತದ ಬಂಪರ್ ಬೆಳೆ ತೆಗೆದಿದ್ದಾರೆ, ಹನಿಹನಿ ನೀರು ಉಳಿಸಿ ಅಂತರ್ಜಲ ಮಟ್ಟವನ್ನು ವೃದ್ಧಿಗೊಳಿಸಿದ್ದಾರೆ. ಇದೆಲ್ಲ ರೈತರಿಗೆ

ಮಾದರಿಯಾಗಿರುವುದು; ಹೂವಿನ ಜೊತೆ ಸುಗಂಧತೈಲಕ್ಕಾಗಿ ಬಳಸುವ **'ಪನ್ನೀರು ಪತ್ರೆ'** (ತುಮಕೂರು ಯಲ್ಲಾಪುರ ರೈತರ ಸಾಧನೆ) ಕೃಷಿಯನ್ನು ಮಾಡಿ ಕಡಿಮೆನೀರು, ಹೆಚ್ಚು ಇಳುವರಿ, ಉತ್ತಮ ಮಾರುಕಟ್ಟೆ ಇರುವ ಬೆಳೆ ಅಂದರೆ ವಾಣಿಜ್ಯ ಬೆಳೆಯಾಗಿ ರೂಪಿಸಿರುವುದು ಸ್ವ ಪ್ರಯತ್ನಗಳ ತೃಪ್ತಿಕಾರಕ ಅಂಶಗಳೇ ಆಗಿವೆ.

ಚೀನಿ ಮಣ್ಣಿನ ಮಡಕೆಗಳ ತಳದಲ್ಲಿ 4–5 ರಂಧ್ರಗಳನ್ನು ಮಾಡಿ ನೀರು ತುಂಬಿಸಿ ಗಿಡದ ಪಕ್ಕದಲ್ಲಿ 4 ಇಂಚು ಆಳದಲ್ಲಿ ಹೂಳಿ ಗಿಡದ ಬೇರಿಗೆ ನಿಧಾನವಾಗಿ ನೇರವಾಗಿ ನೀರು ಸರಬರಾಜು ಮಾಡಿ ತೇವಾಂಶ ಜತನ ಮಾಡಿ ಗಿಡಬೆಳೆಸುವ ಮಹಾರಾಷ್ಟ್ರದ **ಡಿಫ್ಯೂಜರ್ ನೀರಾವರಿ ಪದ್ಧತಿ** (ವಿಜಾಪುರ ಜಿಲ್ಲೆ ತಿಡಗುಂದಿಯ ಶ್ರೀ ವಿಠಲಗೌಡ ರುದ್ರಗೌಡ ಬಿರಾದರ ಅವರು ಈ ಪದ್ಧತಿಯನ್ನು **'ಜೀವವಾಹಿನಿ'** ಪದ್ಧತಿ ಎಂದು ಹೆಸರಿಸಿರುವ ಬಗ್ಗೆ ಮಂಜುನಾಥಕೊಣಸೂರು ಅವರು ದಾಖಲಿಸಿದ್ದಾರೆ) ಅರ್ಥಾತ್ ಜೀವವಾಹಿನಿ ಪದ್ಧತಿಯಿಂದ ದ್ರಾಕ್ಷಿ ತೋಟವನ್ನು ಬಿಜಾಪುರ ಜಿಲ್ಲೆಯದ್ರಾಕ್ಷಿ ಫಾರ್ಮ್‌ನಲ್ಲಿ ವಿಠಲಗೌಡ ಬಿರಾದಾರ ಅವರು ಮಾಡಿತೋರಿಸಿರುವುದು; ಧಾರವಾಡದ ಪರ್ಯಾಯ ಕೃಷಿ ಮಾಧ್ಯಮ ಕೇಂದ್ರವು ಕೃಷಿ ಪತ್ರಿಕೋದ್ಯಮ ಪ್ರಶಸ್ತಿಗಳನ್ನು ಕೃಷಿಕರು ಬರೆದ ಲೇಖನಗಳಿಗೆ, ಕೃಷಿಕೇತರರ ಕೃಷಿಕ ಪರ ಬರಹಗಳಿಗೆ ನೀಡುವ ಪ್ರಯತ್ನ ಮಾಡಿರುವುದು; ಬೆಂಗಳೂರು ಕೃಷಿ ವಿಶ್ವವಿದ್ಯಾಲಯವು ನಡೆಸಿದ (ನವೆಂಬರ್ 2006ರಲ್ಲಿ) ಕೃಷಿ ಮೇಳ ಹಾಗೂ ಆರು ವಿವಿಧ ಬೆಳೆಗಳ ಎಂಟು ಹೊಸತಳಿಗಳನ್ನು ಶೋಧಿಸಿರುವುದು (ಮುಸುಕಿನ ಜೋಳ, ಅಲಸಂದೆ, ಕಡಲೆಗುರೆಳ್ಳು ಹಾಗೂ ಬದನೆಕಾಯಿ ಬೆಳೆಗಳ ತಳಿಗಳು), ಸುಧಾರಿತ ಅರೆ ನೀರಾವರಿ (ಏರೋಬಿಕ್) ವಿಧಾನದಲ್ಲಿ ನೇರವಾಗಿ ಬೀಜ ಬಿತ್ತನೆ ಮಾಡಿ ಅಧಿಕ ಇಳುವರಿ ನೀಡುವ ಮಾಸ್ 946–1 ಎಂಬ ಭತ್ತದ ತಳಿಯನ್ನು ಕೃಷಿ ವಿಶ್ವವಿದ್ಯಾಲಯದ ಅನುವಂಶೀಯ ಮತ್ತು ಸಸ್ಯ ತಳಿಶಾಸ್ತ್ರ ವಿಭಾಗದ ಪ್ರಾಧ್ಯಾಪಕ ಡಾ॥ ಶೈಲಜ ಹಿತ್ತಲಮನಿ ಅವರು ಅಭಿವೃದ್ಧಿ ಪಡಿಸಿರುವುದು; ಹಾಸನ ಜಿಲ್ಲೆ ಅರಹಳ್ಳಿ ಗ್ರಾಮದ ಕಾಫಿ ಬೆಳೆಗಾರರು '300 ಜನ ಕಾಫಿ ಬೆಳೆಗಾರರ ಸ್ವಸಹಾಯ ಸಂಘ ಸ್ಥಾಪಿಸಿದರು. ಮಾರುಕಟ್ಟೆ ಅನಿಶ್ಚಿತತೆಯ ಹಿನ್ನೆಲೆಯಲ್ಲಿ ಈ ಸಂಘ ಆರಂಭಗೊಂಡಿತು. ಮಧ್ಯವರ್ತಿಗಳಿಂದ ಬೆಳೆಗಾರರನ್ನು ರಕ್ಷಿಸಲು, ಬೆಳೆಗೆ ತಕ್ಕ ಬೆಲೆ ದೊರೆಯುವಂತೆ ಮಾಡಲು ಕಾಫಿ ಬೀಜವನ್ನು ಸಂಪೂರ್ಣವಾಗಿ ಕಾಫಿಪುಡಿ ಮಾಡಿ **'ಕಾಫಿ ಕಾಫಿ'** ಎಂಬ ಉತ್ತಮ ಮಟ್ಟದ ಕಾಫಿಪುಡಿ ಎಂದು ಮಾರುಕಟ್ಟೆಗೆ ಬಿಡುಗಡೆ ಮಾಡಿರುವುದು; ನೀರಿನ ಅಭಾವ ಮತ್ತು ರೋಗದ

ಬಾಧೆ ಎದುರಿಸಬಲ್ಲ ಉತ್ತಮ ಇಳುವರಿ ಮತ್ತು ಶ್ರೇಷ್ಠ ಗುಣಮಟ್ಟದ ಭತ್ತದ ತಳಿಯನ್ನು ಗಂಗಾವತಿ ಕೃಷಿ ಸಂಶೋಧನಾ ಕೇಂದ್ರ ಅಭಿವೃದ್ಧಿ ಪಡಿಸಿದ ವಿಜ್ಞಾನಿ ಮಹಮದ್ ಇಬ್ರಾಹಿಂ ಅದಕ್ಕೆ 'ಗಂಗಾವತಿ ಸೋನಾ' ಎಂದು ಹೆಸರಿಸಿರುವುದು, ಚಳಿ, ಬೆಂಕಿರೋಗ, ಕಂದುಜಿಗಿ ರೋಗವನ್ನು ಹೆಚ್ಚು ಸಹಿಸಿಕೊಳ್ಳುವ ತಳಿ ಇದಾಗಿರುವುದು; ಜಗತ್ತಿನಲ್ಲಿಯೇ ಬೇಡಿಕೆ ಇರುವ ಸೋನಾ ಮಸೂರಿ ತಳಿಯ ಎಲ್ಲ ಗುಣಗಳನ್ನು ಹೊಂದಿರುವ ತಳಿ ಇದಾಗಿರುವುದು; ಘೋಡಂಪಳ್ಳಿ ಗ್ರಾಮದ ರೈತ ದಂಪತಿಗಳಾದ ಚಂದ್ರಪ್ಪ ಬಿರಾದಾರ್ ಮತ್ತು ಶ್ರೀಮತಿ ಅನ್ನಪೂರ್ಣಮ್ಮ ಅವರು ಕಲ್ಲುಗುಡ್ಡದಂಥ ಭೂಮಿಯಲ್ಲಿ ಹನಿ ನೀರಾವರಿಯುನ್ನು ಅಳವಡಿಸಿ, ಸಾವಯವ ಕೃಷಿ ಮಾಡಿ ಕಬ್ಬು, ಮಾವು, ತೊಗರಿ, ನಿಂಬೆ ಸಾನುವಾನಿಯ ಬಂಪರ್ ಬೆಳೆ ತೆಗೆದು, ರೈತ ಸಮುದಾಯಕ್ಕೆ ಮಾದರಿಯಾಗಿರುವುದು; ಕೋಕೋಪೀಟ್ (ತೆಂಗಿನಕಾಯಿ ನೀರಿನ ಮಿಶ್ರಣ, ತುಂತುರು ನೀರು, ವಾರಕ್ಕೊಮ್ಮೆ ರೋಗನಾಶಕ ಔಷಧಿ ಸಿಂಚನ) ವಿಧಾನದಲ್ಲಿ ಪ್ಲಾಸ್ಟಿಕ್ ಟ್ರೇ ಮತ್ತು ನೆರಳು ಮನೆಯಲ್ಲಿ ಸಸಿ ಬೆಳೆಸುವ ತಾಂತ್ರಿಕತೆ ಬಳಸಿ ಬೆಳಗಾವಿ ಕೆ.ಎಲ್.ಇ.ಕೃಷಿ ಕಾಲೇಜು ತರಕಾರಿ ಸಸಿ ಮಾಡಿಕೊಟ್ಟು ಮಹಾರಾಷ್ಟ್ರ, ಬೆಳಗಾವಿ, ಬಿಜಾಪುರ ಜಿಲ್ಲೆಯ ರೈತರಿಗೆ ನೆರವಾಗಿರುವುದು; ಬೆಂಗಳೂರಿನ ಜಿಕೆವಿಕೆ ಯ ಕೃಷಿ ಅರ್ಥಶಾಸ್ತ್ರಭಾಗವು ಕರ್ನಾಟಕದ ಪಶ್ಚಿಮ ಘಟ್ಟಗಳ ಕೆರೆ ನೀರಾವರಿ ಕುರಿತು ಅಧ್ಯಯನ ನಡೆಸಿ, ಕೆರೆ ಹೂಳು ನಿರ್ಮೂಲನದ ಜೊತೆಗೆ ಸಹಪರಿಕರ ವ್ಯವಸ್ಥೆ-ಬಂದು, ತೂಬು, ಒಸರು ನೆಲೆ, ಮಣ್ಣು ಸಂರಕ್ಷಣೆ ಬಗ್ಗೆ ತೆಗೆದುಕೊಳ್ಳಬೇಕಾದ ಎಚ್ಚರಿಕೆ, ಪ್ರಧಾನ ಬೆಳೆಗಳಾದ ಭತ್ತ ಮತ್ತು ಅಡಿಕೆ ಕೃಷಿಯನ್ನು ಸ್ಥಳೀಯ ಬೀಜಗಳು ಹಾಗು ನೈಸರ್ಗಿಕ (Farm-yard Manure) ಸಾವಯವ ಗೊಬ್ಬರ ಬಳಸಿ ಮಾಡುವ ಬಗ್ಗೆ ಹೇಳಿರುವುದು; ಕಂದಾಯ ಇಲಾಖೆಯ ಕಾರ್ಯದರ್ಶಿ ಐ.ಎ.ಎಸ್ ಅಧಿಕಾರಿ ರಾಜೀವ್ ಚಾವ್ಲಾ ಭೂ ದಾಖಲೆಗಳನ್ನು ಗಣಕೀಕರಣಗೊಳಿಸಿ, ರೈತರಿಗೆ ಅಗತ್ಯವಾದಾಗ ಅವರ ಜಮೀನು ಕುರಿತ ಎಲ್ಲ ವಿವರಗಳು ಸುಲಭ ಲಭ್ಯವಾಗುವಂತೆ ರೂಪಿಸಿದ 'ಭೂಮಿ' ಯೋಜನೆ; ಸಾವಿರ ಹಳ್ಳಿಗಳಿಗೆ ಸಾವಿರ ಕೋಟಿ ರೂಪಾಯಿ ಅನುದಾನ ಯೋಜನೆಯಾಗಿ ರಾಷ್ಟ್ರಪತಿಗಳಿಂದ ಸುವರ್ಣಗ್ರಾಮೋದಯದ ಚಾಲನೆ; ಅತಿವೃಷ್ಟಿ ಹಾಗೂ ಅನಾವೃಷ್ಟಿಯಿಂದ ಬೆಳೆಹಾನಿಗೆ ಒಳಗಾಗಿ ನಷ್ಟ ಅನುಭವಿಸಿರುವ ರಾಜ್ಯದ 1 ಲಕ್ಷ ರೈತರಿಗೆ 10 ಕೋಟಿ ರೂ. ವಿಮಾ ಹಣ ಬಿಡುಗಡೆ; ಹವಾಮಾನ ವೈಪರೀತ್ಯದಿಂದ ನಷ್ಟ ಅನುಭವಿಸುವ ಬೆಳೆಗಳಿಗೆ 'ಹವಾಮಾನ ವಿಮೆ' ಸೌಲಭ್ಯ ಕಲ್ಪಿಸುವ ಯೋಜನೆಯ ಜಾರಿಗೆ ಸರ್ಕಾರದ ಗಂಭೀರ ಚಿಂತನೆ; ಇವೆಲ್ಲ ಆಗಿವೆ.

ರೈತ ಬೆಳೆದ ಬೆಳೆಗಳನ್ನು ನೇರವಾಗಿ ಮಾರಾಟ ಮಾಡುವ ಬದಲು ಒಂದು ಹಂತದ ಸಂಸ್ಕರಣೆಯನ್ನು ಮಾಡಿದರೆ ಅವನಿಗೆ ಹೆಚ್ಚು ಹಣ ಲಭ್ಯವಾಗುತ್ತದೆ. ಅಂಥದ್ದು **ಮೌಲ್ಯವರ್ಧಿತ ಉತ್ಪನ್ನ** ಎನ್ನಿಸುತ್ತದೆ. ಇಂಥ ಕಾರ್ಯಕ್ಕಾಗಿ ಆಹಾರ ಸಂಸ್ಕರಣ ಉಪಕರಣಗಳನ್ನು ಖರೀದಿಸಲು ರೈತರಿಗೆ ಶೇ.50 ರಷ್ಟು ಸಹಾಯ ಧನವನ್ನು ನೀಡುವುದು–ಭತ್ತ ಮಾರುವ ಬದಲು ಅಕ್ಕಿ ಮಾಡಿ ಮಾರುವುದು, ರಾಗಿಯನ್ನು ಕಲ್ಲು ಮಣ್ಣು ತೆಗೆದು ಪಾಲಿಷ್ ಮಾಡಿ (ರಾಗಿ ಕ್ಲೀನರ್, ರಾಗಿ ಪಾಲಿಷಿಂಗ್‌ಯಂತ್ರ ಬಳಸಿ) ಮಾರುವುದು, ಕಬ್ಬನ್ನು ಬೇರೆಯವರ ಆಲೆಮನೆಯಲ್ಲಿ ಮಾಡಿಸುವ ಬದಲು ರೈತನೇ ಸಣ್ಣಗಾಣ ಹಾಕಿಕೊಂಡು ಬೆಲ್ಲ ತಯಾರಿಸುವುದು, ನೆಲಗಡಲೆಯನ್ನು ಸಿಪ್ಪೆ ಬಿಡಿಸುವಯಂತ್ರ ಬಳಸಿ, ಸಿಪ್ಪೆತೆಗೆದು ಮಾರುವುದು, ಕಡ್ಲೆಕಾಯಿ ಎಣ್ಣೆ ತಯಾರಿಸಿ ಮಾರುವುದು–ಹೀಗೆಲ್ಲ ಮಾಡುವಲ್ಲಿ ಬೇಕಾದ ಆಹಾರ ಸಂಸ್ಕರಣಾ ಉಪಕರಣಗಳಿಗೆ ಸಹಾಯಧನ–ಸಬ್ಸಿಡಿ ನೀಡುವುದು, ಬೀಜ ಹತ್ತಿ ಬೇರ್ಪಡಿಸುವ ಯಂತ್ರ ಇವುಗಳ ಖರೀದಿಗೆ, ರೈತರಂತೆಯೆ, ಅರ್ಹವ್ಯಕ್ತಿಗಳಿಗೂ ಸಬ್ಸಿಡಿ ಕೊಡುವ ಸೌಲಭ್ಯ ನೀಡುತ್ತಿರುವುದು; ರಾಜ್ಯ ಗ್ರಾಹಕ ಆಯೋಗವು ರೈತರಿಗೆ 1 ಕೋಟಿ ರೂ. ಬೆಳೆ ವಿಮೆ ಪರಿಹಾರವನ್ನು ನೀಡುವಂತೆ ತೀರ್ಪನ್ನು ಎತ್ತಿ ಹಿಡಿದಿರುವುದು; ರೈತರ ಆತ್ಮಹತ್ಯೆಯ ಸಂದರ್ಭಗಳಲ್ಲಿ ಅವರ ಕುಟುಂಬಗಳಿಗೆ ನೀಡುವ ಪರಿಹಾರವನ್ನು 1 ರಿಂದ 2 ಲಕ್ಷ ರೂ.ಗಳಿಗೆ ಏರಿಸುವ ಪ್ರಸ್ತಾವನೆಯನ್ನು ವಿಧಾನಸಭೆಯಲ್ಲಿ ಮಂಡಿಸುವ ವಿಚಾರವಿರುವುದು; **ಸಿದ್ಧಗಂಗಾ ಮಠದಲ್ಲಿ** ವಾರ್ಷಿಕ **ಕೃಷಿ** ಮತ್ತು **ಕೈಗಾರಿಕಾ ವಸ್ತುಪ್ರದರ್ಶನ** ಸಂದರ್ಭದಲ್ಲಿ 16 ದಿನಗಳ ಅವಧಿಯಲ್ಲಿ ಕೃಷಿ ಆರೋಗ್ಯ, ತೋಟಗಾರಿಕೆ, ಅರಣ್ಯ, ನೀರಾವರಿ, ಪಶುಪಾಲನೆ, ಮೀನುಗಾರಿಕೆ ಇತ್ಯಾದಿ ಕ್ಷೇತ್ರಗಳಲ್ಲಿ ಆಗಿರುವ ವೈಜ್ಞಾನಿಕ ಬದಲಾವಣೆಗಳನ್ನು ರೈತ ಸಮುದಾಯ ಹಾಗೂ ಇತರರಿಗೆ ಮನವರಿಕೆ ಮಾಡುತ್ತಿರುವುದು;

**ನಾಟಿ ಬೀಜ ಸಂರಕ್ಷಣೆಯ ಜಾತ್ರೆ.** ಆಂಧ್ರದ ಮೇಡ್‌ಕ್ ಜಿಲ್ಲೆಯ ಎಳ್ಗೋಯಿಗ್ರಾಮದಲ್ಲಿ ನಡೆದದ್ದು (ಸುಧಾ, ವಾರಪತ್ರಿಕೆ, 8.2.2007) ನೆರೆಯ ಬೀದರ್ ಜಿಲ್ಲೆಯ ರೈತರಿಗೊಂದು ಸ್ಫೂರ್ತಿಕಾರಣ ಸಂಚಲನ ಬೀಜಯಾತ್ರೆ ಎನಿಸಿತ್ತು. ಅಲ್ಲಿಯ ಕಲಾತ್ಮಕ ಬೀಜಪ್ರದರ್ಶನ, ಅಲಂಕೃತ ಎತ್ತಿನ ಬಂಡಿಯ ಪಥದಲ್ಲಿ ಬೀಜಮಾತೆಯರ ಹೆಜ್ಜೆ, ರೈತ ಮಹಿಳೆಯರು ಸಿದ್ಧಪಡಿಸಿದ ದೇಶಿಭಕ್ಷ್ಯ ಬಿಡಿಸಿದ ಬಂಡಿ ಚಿತ್ತಾರ, ಇವೆಲ್ಲ ರೈತ ಬದುಕಿನ ಸಾಂಸ್ಕೃತಿಕ ಕೆಚ್ಚಲು; ಉತ್ಸಾಹದ ವೈಭವ. ಬದುಕುವಂಥ ಆಸೆಗೆ ನವಚೇತನ; ಇದೊಂದು ಸಾಮಾಜಿಕ ಹೊಣೆಯ ಸಂಸ್ಕೃತಿ.

ರೈತರ ಬಾಳಿಗೊಂದು ಕಲಾತ್ಮಕ ಸಾಂತ್ವನ. ಇಂಥದ್ದು, ಕರ್ನಾಟಕದಲ್ಲಿ ನಡೆಯಲಿ, ಆಂಧ್ರದಲ್ಲಿ ನಡೆಯಲಿ ತಮಿಳುನಾಡಿನಲ್ಲಿ ನಡೆಯಲಿ, ಪಂಜಾಬಿನಲ್ಲಿ ನಡೆಯಲಿ, ಗುಜರಾತಿನಲ್ಲಿ ನಡೆಯಲಿ ರಾಷ್ಟ್ರದ ರೈತರಿಗೊಂದು ದೇಸೀಪಥದ ಸಾಂತ್ವನವೆನಿಸುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯ ಗುರುವಾಯನ ಕೆರೆಯ 'ದೇಶೀ ಬೀಜ ಬ್ಯಾಂಕ್' ಈ ದಿಸೆಯಲ್ಲಿ ಒಂದು ಮಾದರಿ.

ಬೆಂಗಳೂರಿನಲ್ಲಿ ಭಾರತದ ಅಂತರಾಷ್ಟ್ರೀಯ ಕಾಫಿ ಮೇಳ–2007'ದ ವ್ಯವಸ್ಥೆಯು ಭಾರತದಲ್ಲಿ ಕಾಫಿ ಮಾರುಕಟ್ಟೆಗೆ ಇರುವ ಸಾಮರ್ಥ್ಯದ ಅಳತೆಗೋಲಾಗಿ ಮಾಡಿದುದಾಗಿತ್ತು. ಹಿಂದೆ 2002ರಲ್ಲಿ ನಡೆದ ಕಾಫಿ ಮೇಳ, ರಫ್ತಿನ ವಿಷಯದ ಮೇಲೆ ಗಮನವಿರಿಸಿದುದಾಗಿತ್ತು. ಈಗಿನದು ವಿದೇಶಿ ಕಂಪೆನಿಗಳಿಗೆ ನಮ್ಮ ದೇಶದ ಕಾಫಿ ಮಾರುಕಟ್ಟೆಯ ಪರಿಚಯಕ್ಕೆ, ಸ್ಥಳೀಯ ಕಾಫಿ ಬೆಳೆಗಾರರಿಗೆ ವಿದೇಶಗಳ ಕಾಫಿ ಮಾರುಕಟ್ಟೆಗಳಲ್ಲಿ ಬಳಸುವ ತಂತ್ರಜ್ಞಾನದ ಮಾಹಿತಿ ಒದಗಿಸಲು ಈ ಮೇಳದ ವ್ಯವಸ್ಥೆ, ಇದರಿಂದಾಗಿ ಸ್ಥಳೀಯ ಕಾಫಿ ಬೆಳೆಗಾರರು ಹಾಗೂ ಕಂಪೆನಿಗಳು ವಿದೇಶಿ ಕಂಪೆನಿಗಳೊಡನೆ ಸಂಪರ್ಕಕ್ಕೆ ಸಾಧ್ಯವಾಗಿ ಮುಂದಿನ ದಿನಗಳಲ್ಲಿ ಅವುಗಳೊಂದಿಗೆ ವಹಿವಾಟು ನಡೆಸಲು ಅನುಕೂಲವಾಗುತ್ತದೆ ಎಂಬುದು ಸಂಚಾಲಕರ ವಿವರಣೆ. ಬೆಳೆಗಾರರಿಗೆಲ್ಲ ಇದೆಲ್ಲ ಒಂದು ಬೀತಿ ಜೀವನೋತ್ಸಾಹದ ಪ್ರಕ್ರಿಯೆಯೆ. ಕಾಫಿ ತೋಟಗಳ ಪುನರುಜ್ಜೀವನಕ್ಕೆ 800 ಕೋಟಿ ರೂ. ವಿಶೇಷ ಉದ್ದೇಶ ನಿಧಿಯನ್ನು ಆರಂಭಿಸುವ ಬಗ್ಗೆ ಕೇಂದ್ರ ವಾಣಿಜ್ಯ ಖಾತೆ ಸಹಾಯಕ ಸಚಿವ ಶ್ರೀ ಜೈರಾಂ ರಮೇಶ್ ಈ ಮೇಳದಲ್ಲಿ ಹೇಳಿದ್ದಾರೆ. ಇದರಲ್ಲಿ ಕೇಂದ್ರ 400 ಕೋಟಿ ರೂ. ಕೊಟ್ಟರೆ ಉಳಿದ ಹಣವನ್ನು ಬೆಳೆಗಾರರು ಕೊಡಬೇಕು. ವಿಮಾ ನಿಯಂತ್ರಣ ಅಭಿವೃದ್ಧಿ ಪ್ರಾಧಿಕಾರದ ಮಾಜಿ ಅಧ್ಯಕ್ಷ ರಂಗಾಚಾರಿ ನೇತೃತ್ವದ ತಜ್ಞರ ಸಮಿತಿಯ ವರದಿಯನ್ನು ಆಧರಿಸಿ ಕಾಫಿ ಬೆಳೆಗಾರರಿಗೆ ವಿಮೆ, ಸ್ಥಿರ ಬೆಲೆಗಳನ್ನು ಒದಗಿಸಲು ಹೊಸ ಪ್ಯಾಕೇಜ್ ಅನ್ನು ನೀಡಲು ಕೇಂದ್ರದ ಉದ್ದೇಶವಾಗಿದೆ. ಮಾರುಕಟ್ಟೆ ಏರುಪೇರಿನಿಂದ ಕಾಫಿ ಉದ್ಯಮವನ್ನು ರಕ್ಷಿಸಲು ಸಹಾಯಧನ ಸಹಿತವಾಗಿ ವಿಮಾ ಯೋಜನೆಯನ್ನು ನೀಡಲಾಗುವ ಬಗ್ಗೆಯೂ ಅವರು ಹೇಳಿದ್ದಾರೆ (24–2.2007).

ರೈತನೊಬ್ಬನಿಂದ ಇಂಗು ಗುಂಡಿ ನಿರ್ಮಿಸಲು ವಶಪಡಿಸಿಕೊಂಡ ಭೂಮಿಗೆ ಸರ್ಕಾರ ಪರಿಹಾರ ನೀಡದಿದ್ದುದರಿಂದ ಜಿಲ್ಲಾಧಿಕಾರಿ ಕಛೇರಿ ಆಸ್ತಿಯನ್ನೇ ಮಾರಾಟಮಾಡಿ ರೈತನಿಗೆ ಪರಿಹಾರ ನೀಡಬೇಕೆಂದು ಒಂದು ವಿಶಿಷ್ಟ ಆದೇಶವನ್ನು

ಮುಂಬೈ ನ್ಯಾಯಾಲಯವು ನೀಡಿರುವುದು ಗಮನಾರ್ಹ ನ್ಯಾಯದೇವತೆಯ ರೈತ ಕಾಳಜಿಯ ಒಂದು ವಿಶೇಷ ಸಾಕ್ಷ್ಯವಿದಾಗಿದೆ.

ಕಷ್ಟಪಟ್ಟು ಬೆಳೆದ ಈರುಳ್ಳಿಗೆ ಸೂಕ್ತಬೆಲೆ ಇಲ್ಲ. ಮಧ್ಯವರ್ತಿಗಳ ಕಾರುಬಾರು; ಹೀಗಾಗಿ ಕ್ವಿಂಟಾಲ್‌ಗೆ ಬೆಲೆ 50 ರೂ.ಗಳಿಗಿಳಿದಿತ್ತು. ರೈತರಿಗೆ ಕ್ವಿಂಟಾಲ್ ಈರುಳ್ಳಿ ಬೆಳೆಯಲು ಆಗಿದ್ದ ಖರ್ಚು 200 ರೂ; ಅದನ್ನು ಕಡಿಮೆ ಬೆಲೆಗೆ ಕೊಂಡ ಮಧ್ಯವರ್ತಿಗಳು ಬೆಂಗಳೂರಿಗೆ ಬಂದು ಕ್ವಿಂಟಲ್‌ಗೆ ಸಾವಿರ ರೂ.ನಂತೆ ಮಾರಿ ಅತಿ ಲಾಭದ ಜೇಬು ಅವರದಾಗಿತ್ತು. ಇದನ್ನು ತಿಳಿದ ಹಾವೇರಿ, ಹಾಸನ, ಹುಬ್ಬಳ್ಳಿ, ಧಾರವಾಡ ಜಿಲ್ಲೆಗಳ ಈರುಳ್ಳಿ ಬೆಳೆಗಾರರು. ಈರುಳ್ಳಿಯನ್ನು ರಸ್ತೆಗೆ ಚೆಲ್ಲಿ ಪ್ರತಿಭಟನೆ ಮಾಡಿದರು. ಕೂಡಲೆ ಸರ್ಕಾರ ರೈತರಿಂದ ನೇರವಾಗಿ ಈರುಳ್ಳಿಯನ್ನು, ಗುಣಮಟ್ಟದ ಆಧಾರದ ಮೇಲೆ ಕ್ವಿಂಟಾಲ್‌ಗೆ 100 ರೂ.ಗಳಿಂದ 400 ರೂ. ತನಕ ಬೆಂಬಲ ಬೆಲೆ ನೀಡಿ, ಕೃಷಿ ಮಾರುಕಟ್ಟೆ ಒಕ್ಕೂಟ ಹಾಗೂ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ (ಎ.ಪಿ.ಎಂ.ಸಿ) ಮೂಲಕ ಖರೀದಿಸಿತು. 'ಎ' ಗ್ರೇಡ್ ಈರುಳ್ಳಿಗೆ 500 ರೂ. ಗಳವರೆಗೆ ಬೆಂಬಲಬೆಲೆ ನೀಡಿತು; ಹೀಗೆಯೇ ಕೊಬ್ಬರಿ ಬೆಲೆ ಕ್ವಿಂಟಾಲ್‌ಗೆ 6 ಸಾವಿರದಿಂದ 3500 ರೂ.ಗೆ ಕುಸಿದಿತ್ತು. ಸರ್ಕಾರ ಮಧ್ಯ ಪ್ರವೇಶಿಸಿ ಕ್ವಿಂಟಾಲ್‌ಗೆ 4775 ರೂ.ಗಳನ್ನು ನಿಗದಿಪಡಿಸಿ ಮಂಗಳೂರು, ತಿಪಟೂರು, ಅರಸೀಕೆರೆ ಕೊಬ್ಬರಿ ಬೆಳೆಗಾರರ ಮನವಿಗೆ ಸ್ಪಂದಿಸಿತು. ಹಿಂದೆ ಕಡಿಮೆ ಬೆಲೆಗೆ ಮಾರಲ್ಪಟ್ಟ ಕೊಬ್ಬರಿಗೆ 750 ರೂ.ಗಳ ನೆರವು ನಿಧಿಯನ್ನು ಕೊಟ್ಟ ಬಗ್ಗೆ ಸರ್ಕಾರ ಹೇಳಿದೆ (11.2.2007); ಸ್ವರ್ಣಜಯಂತಿ ಗ್ರಾಮ ಸ್ವರಾಜ್ ಯೋಜನೆಯಡಿ, ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಸಹಯೋಗದೊಂದಿಗೆ ರಾಜ್ಯ ಗ್ರಾಮೀಣಾಭಿವೃದ್ಧಿ ಇಲಾಖೆಯು 'ರಾಷ್ಟ್ರೀಯ ಗ್ರಾಮೀಣ ಉತ್ಪನ್ನಗಳ ಮೇಳ-ಕಾವೇರಿ ಸರಸ್' ಅನ್ನು ಬೆಂಗಳೂರಿನಲ್ಲಿ (ಮಾರ್ಚ್-ಏಪ್ರಿಲ್ 2007ರಲ್ಲಿ) ಏರ್ಪಡಿಸಿತು. 1.5 ಲಕ್ಷ ಜನರು ಈ ಮೇಳಕ್ಕೆ ಬಂದಿದ್ದು, 1.61 ಕೋಟಿ ರೂ.ಗಳ ವಹಿವಾಟು ನಡೆದಿರುವಲ್ಲಿ, ಗ್ರಾಮೀಣ ಕೈಗಾರಿಕೆ ಉತ್ಪನ್ನಗಳ ಉತ್ಕೃಷ್ಟತೆ, ಹಾಗೂ ಗ್ರಾಮೀಣ ಜನತೆಗೆ ದೊರೆತ ಉತ್ತೇಜನದ ಸಂಕೇತವಾಗಿ ಕಾಣುತ್ತದೆ.

ಕಿರು ಅರಣ್ಯ ಉತ್ಪನ್ನಗಳಾದ ದಾಲ್ಚಿನ್ನಿ, ರಾಂಪತ್ರೆ, ಉಪ್ಪಾಗೆ ಮುರುಗಲು, ಸುರಗಿ, ಅಪ್ಪೆಮಿಡಿ, ರಾಳಧೂಪ ಇವುಗಳ ಸಸ್ಯಾಭಿವೃದ್ಧಿ ಮಾಡಿ ಶಿರಸಿಯ ಪ್ರಕೃತಿಸಂಸ್ಥೆ ರೈತರಿಗೆ ವಿತರಿಸುತ್ತಿದೆ; 128 ಉತ್ತಮ ಉಪ್ಪಾಗೆ ಮರಗಳನ್ನು ಗುರುತಿಸಿ ಅವುಗಳ ಸಸ್ಯಾಭಿವೃದ್ಧಿ ಮಾಡುತ್ತಿದೆ. ಸರ್ಕಾರಕ್ಕೆ ಕಿರು ಅರಣ್ಯ ಉತ್ಪನ್ನದಿಂದ ವಾರ್ಷಿಕ 1

ಸಾವಿರ ಕೋಟಿ ರೂ. ಆದಾಯ ಇದೆ ಎಂಬುದು ಗಜಾನನ ಹೆಗಡೆ ಬೆಟ್ಟಣ್ಣಿ ಅವರ ಮಾತು. ಕಿರು ಅರಣ್ಯ ಸಸ್ಯೋತ್ಪನ್ನಗಳು ಇಂದಿಗೂ ಬುಡಕಟ್ಟು ಮತ್ತು ಆದಿವಾಸಿಗಳ ಬದುಕಿಗೆ ಆಧಾರವಾಗಿವೆ.

ರಾಜ್ಯದಲ್ಲಿ 1971-72ರ ಭೀಕರ ಬರಗಾಲ ಮರುಕಳಿಸಿದೆ. ಮುಂಗಾರು, ಹಿಂಗಾರು ಎರಡೂ ಮಳೆ 2006ನೇ ಸಾಲಿನಲ್ಲಿ ವಿಫಲವಾಗಿ ಶೇ.38 ರಷ್ಟು ಮಳೆ ಕಡಿಮೆ ಆಯಿತು. ಹೀಗಾಗಿ ಎಲ್ಲ ಕಡೆ ಮೇವು ಬ್ಯಾಂಕುಗಳನ್ನು ತೆರೆಯಲು ಜಿಲ್ಲಾಧಿಕಾರಿಗಳಿಗೆ ಆದೇಶಿಸಿರುವ ಬಗ್ಗೆ ಸಚಿವ ಶ್ರೀ ಎಂ.ಪಿ.ಪ್ರಕಾಶ್ ಹೇಳಿದ್ದಾರೆ; ಸರ್ಕಾರದ ಕೃಷಿ ಫಾರ್ಮಗಳಲ್ಲಿ ಹಸಿರು ಹುಲ್ಲು ಬೆಳೆಸಲು ಅಂತರ್‌ರಾಜ್ಯ ಮೇವು ಸಾಗಾಣಿಕೆ ಪ್ರತಿಬಂಧಿಸಲು ಮೆಕ್ಕೆಜೋಳದ ಮೇವನ್ನು ಟನ್‌ಗೆ 10 ಸಾವಿರ ರೂ.ನಂತೆ ಖರೀದಿಸಲು ಆದೇಶಿಸಿರುವುದನ್ನು ತಿಳಿಸಿದ್ದಾರೆ. ಬರಗಾಲ ಇರುವ 128 ತಾಲೂಕುಗಳಿಗೆ ಸರ್ಕಾರವು ತಲಾ 1 ಕೋಟಿ ರೂ. ನೀಡಿದೆ. ಕೇಂದ್ರವು 34.48 ಕೋಟಿ ರೂ. ಹಾಗೂ 3 ಲಕ್ಷ ಟನ್ ಆಹಾರಧಾನ್ಯ ಕೊಡುವ ಭರವಸೆ ನೀಡಿದೆ. ಉದ್ಯೋಗ ದೃಢೀಕರಣ ಕಾಮಗಾರಿಯನ್ನು ಭೀಕರ ಬರ ಇರುವ ಜಿಲ್ಲೆಗಳಲ್ಲಿ ಕೈಗೊಂಡಿರುವ ಬಗ್ಗೆಯೂ ತಿಳಿಸಿದ್ದಾರೆ.

ಅಧಿಕ ಬೆಳೆಯನ್ನು ಅತ್ಯಧಿಕ ರಾಸಾಯನಿಕ ಗೊಬ್ಬರ ಬಳಸಿ ಬೆಳೆಯುತ್ತೇವೆ ಎನ್ನುವ ಭರದಲ್ಲಿ ಭೂಮಿಯ ಫಲವತ್ತತೆ ಕುಸಿಯುತ್ತದೆ. ಕಬ್ಬಿನ ಬೆಳೆಯ ತ್ಯಾಜ್ಯಗಳು, ಕಡಿಮೆ ಬೆಳೆಯ ತ್ಯಾಜ್ಯಗಳನ್ನು ಬಳಸಿಗೊಬ್ಬರ ತಯಾರಿಸಿ ಕಡಿಮೆ ಖರ್ಚಿನಲ್ಲಿ ಅಧಿಕ ಇಳುವರಿ ಪಡೆಯಬೇಕು. ಇದಕ್ಕೆ ಅಗತ್ಯವಾದ ಮಾಹಿತಿ ತಂತ್ರಜ್ಞಾನ, ಧಾರವಾಡ ಕೃಷಿ ವಿಶ್ವವಿದ್ಯಾಲಯದಲ್ಲಿದೆ. ಕಳಪೆ ಬೀಜದಿಂದ ರೈತರಿಗೆ ವಿತರಿಸಲು ವಿಶ್ವವಿದ್ಯಾಲಯ ಸಿದ್ಧತೆ ನಡೆಸಿರುವ ಬಗ್ಗೆ ಕುಲಪತಿ ಡಾ.ಜಿ.ಎಸ್.ಕುಲಕರ್ಣಿ ಅವರು ತಿಳಿಸಿದುದು ಮಹೇಶ ಮನ್ನಯ್ಯನವರ ಮಠ ಅವರಿಂದ ವರದಿಗೊಂಡಿದೆ. ಬಾಗಲಕೋಟೆ ಜಿಲ್ಲೆ ಮುಧೋಳದ ಸಮೀರವಾಡಿಯಲ್ಲಿ ಕೆ.ಜಿ.ಸೋಮಯ್ಯ ಕೃಷಿ ಅನ್ವಯಿಕ ಸಂಸ್ಥೆ ಮತ್ತು ಗೋದಾವರಿ ಸಕ್ಕರೆ ಕಾರ್ಖಾನೆ ಸಂಯುಕ್ತವಾಗಿ ಸಂಘಟಿಸಿದ ಕೃಷಿ ಮೇಳ - 2007ರ ಸಂದರ್ಭದಲ್ಲಿ ರೈತ ಹಿತಾಸಕ್ತಿಯಾಗಿ ವ್ಯಕ್ತವಾದ ಪ್ರಯತ್ನವಿದೆನಿಸುತ್ತದೆ (5.3.2007). ಹೀಗೆಯೇ ಉಂಡೆ ಕೊಬ್ಬರಿ ಬೆಳೆಗಾರರಿಗೆ ಕೇಂದ್ರ ಸರ್ಕಾರ ಗೋಷಿಸಿದ್ದ ಕನಿಷ್ಠ ಬೆಂಬಲ ಬೆಲೆಗಿಂತ ಕಡಿಮೆದರದಲ್ಲಿ ಉಂಡೆ ಕೊಬ್ಬರಿಯ ಸಗಟು ಬೆಲೆಯು ಮಾರಾಟವಾಗುತ್ತಿದ್ದ ಕಾರಣ ರಾಜ್ಯ ಸರ್ಕಾರ ಪ್ರಕಟಿಸಿದ ಪರಿಹಾರಧನ, ರೈತ ಸಾಂತ್ವನಕಾರಿಯಾದುದು.

ವಿಧಾನಪರಿಷತ್ ಹಾಗೂ ರಾಜ್ಯ ಯೋಜನಾಮಂಡಳಿಯು ನಗರದಲ್ಲಿ ಪ್ರಾಯೋಜಿಸಿದ್ದ ಕರ್ನಾಟಕ ಜಲಕ್ಷಾಮ ಹಾಗೂ ಪರಿಹಾರೋಪಾಯ ಬಗೆಗಿನ ರಾಜ್ಯಮಟ್ಟದ ಕಾರ್ಯಾಗಾರ (17.5.2007 ಹಾಗೂ 18.5.2007)ದಲ್ಲಿ ರಾಜ್ಯದ ಜಲಸಂಪನ್ಮೂಲ ಸಂಪತ್ತು – ನಿರ್ವಹಣೆ, ಕೃಷಿ ಹಾಗೂ ನೀರಾವರಿ ಸಮಸ್ಯೆಗಳು, ಬರ ನಿರ್ವಹಣೆ, ಜಲಾನಯನ ಅಭಿವೃದ್ಧಿ, ಅಂತರ್ಜಲ ಶಾಸನ, ಮಳೆನೀರು ಕುಯ್ಲು, ಗ್ರಾಮೀಣ ಕುಡಿಯುವ ನೀರು. ನೀರಿನ ಗುಣಮಟ್ಟ, ಜಿಲ್ಲಾ ಹಾಗೂ ಗ್ರಾಮ ಪಂಚಾಯಿತಿಗಳಿಂದ ನೀರಿನ ನಿರ್ವಹಣೆ, ಕುರಿತು, ರೈತರು, ವಿಜ್ಞಾನಿಗಳು, ಕೃಷಿ ತಜ್ಞರು, ಕೃಷಿ ಆರ್ಥಿಕ ತಜ್ಞರು, ಶಾಸಕರು, ಪರಿಸರವಾದಿಗಳು ಪಾಲ್ಗೊಂಡು ವಿಷಯ ವಿಶ್ಲೇಷಣೆ ನಡೆಸಿ ನಿರ್ಣಯಗಳನ್ನು ಕೈಕೊಂಡಿರುವುದು ರಾಜ್ಯದ ಶಾಸಕರ ರೈತ ಕಾಳಜಿಯ ಹೊಸ ತಂತ್ರಜ್ಞಾನಗಳ ಅಳವಡಿಕೆಗೆ ತೋರಿದ ಆಸಕ್ತಿಯ ದ್ಯೋತಕವಾಗಿದೆ. ಸಮಸ್ಯೆಗಳ ಪರಿಚಯ ಪರಿಹಾರೋಪಾಯ ಹಾಗು ಪ್ರಾಮಾಣಿಕ ಅನುಷ್ಠಾನದ ಬಗ್ಗೆ ಕಾರ್ಯಾಗಾರ ತೋರಿದ ಮಾರ್ಗದರ್ಶನ ಸ್ವಾಗತಾರ್ಹ. ವಿಧಾನ ಪರಿಷತ್ತಿನ ಅಧ್ಯಕ್ಷ ಪ್ರೊ|| ಬಿ.ಕೆ.ಚಂದ್ರಶೇಖರ್ ಹಾಗೂ ಯೋಜನಾಮಂಡಳಿಯ ಶ್ರೀ ರವೀಂದ್ರ ಅವರ ಈ ಪ್ರಯತ್ನ ಮಾರ್ಗದರ್ಶಕವೆನಿಸಿದೆ. ಸಾಂತ್ವನ ಕ್ರಿಯೆಯ ಮಜಲುಗಳು ಹೀಗೆ ವಿವಿಧ ಆಯಾಮಗಳಲ್ಲಿ ತೋರಿಕೊಳ್ಳುತ್ತವೆ. ರೈತರಸಂಕಷ್ಟಗಳಿಗೆ ಸಾಂತ್ವನ ನೆಲೆಗಳನ್ನು ಒದಗಿಸಬೇಕಾದುದು ತುತ್ತು ಪಡೆದವರ ಸಾಂಸ್ಕೃತಿಕ, ಸಾಮಾಜಿಕ ಹೊಣೆ ಎನಿಸುತ್ತದೆ.

ರೈತ – ಕೃಷಿ ಕಾರ್ಮಿಕರ ಸಂಘಟನೆಗಳು, ರೈತ ವಿರೋಧಿ ನೀತಿಗಳ ಬಗ್ಗೆ ಜಾಗೃತಿ ಮೂಡಿಸಲು ರೈತ–ಕಾರ್ಮಿಕರ ಶಿಬಿರಗಳನ್ನೇರ್ಪಡಿಸಿದ್ದುಂಟು. ಅವರ ಅಭಿಪ್ರಾಯದಲ್ಲಿ ದೇಶದ ಕೃಷಿ ಕ್ಷೇತ್ರಕ್ಕೆ ನೀಡುತ್ತಿದ್ದ ಸುಮಾರು 6 ಸಾವಿರ ಕೋಟಿ ರೂ.ಗಳ ಸಬ್ಸಿಡಿ ಹಣವನ್ನು ಕಡಿತಗೊಳಿಸಿ, ಆ ಕ್ಷೇತ್ರವನ್ನು ಅಪಾಯಕ್ಕೆ ದೂಡಿರುವುದಾಗಿದೆ. ಅದರಿಂದಾಗಿ ಗೊಬ್ಬರ ಕೀಟನಾಶಕಗಳ ಬೆಲೆ ತೀರ ತುಟ್ಟಿ ಆಗಿದೆ. ಬೆಳೆದ ಬೆಳೆಗಳಿಗೆ ಬೆಲೆ ಇಲ್ಲ. 2000ದ ವರ್ಷದಲ್ಲಿ 229 ಕೃಷಿ ಸಂಬಂಧಿತ ವಿದೇಶಿ ಸರಕುಗಳ ಆಮದಿಗೆ ಮುಕ್ತ ಅವಕಾಶವಾದುದೇ ರೈತರ ಉತ್ಪನ್ನಗಳ ಬೆಲೆ ಕುಸಿತಕ್ಕೆ ಕಾರಣವಾಯಿತು. ಶೇ.50ರಷ್ಟು ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸಬಹುದಾಗಿರುವಲ್ಲಿ ಯೋಜನೆಗಳ ಬಗ್ಗೆ ಹೊಣೆ ಹೊತ್ತವರ ನಿರಾಸಕ್ತಿಯೆ ಕಾಣುತ್ತದೆ, ಎಂಬ ಅಭಿಪ್ರಾಯಗಳೂ ಉಂಟು.

ಇಂಥ ಸಂದರ್ಭಗಳಿದ್ದರೂ ರೈತರ ಸ್ವಪ್ರಯತ್ನಗಳಿಂದ ಅವರ ಸಂಕಷ್ಟಗಳ ಸವಾಲುಗಳನ್ನು ಎದುರಿಸಿರುವ ಉದಾಹರಣೆಗಳೂ ಇವೆ. ಮಧುಗಿರಿ ಬಳಿಯ ಬೋಳೇನಹಳ್ಳಿ ಕೆರೆ ಅಚ್ಚುಕಟ್ಟಿನಲ್ಲಿ ಪಣ್ಣೆಗ್ರಾಮದ **ಪಣ್ಣೆ ರೈತರ** 30 ಜನರ ತಂಡ ಸ್ವಂತ ಶಕ್ತಿಯಿಂದ ಹಳೆ ಪರಂಪರೆಯ ಚೌಕಟ್ಟಿನಲ್ಲಿ ತಮ್ಮ ತೋಟಗಳಿಗೆ ಸತತ ನೀರಿನ ಸರಬರಾಜಿಗೆ ಅನುಕೂಲ ಮಾಡಿಕೊಂಡಿದ್ದಾರೆ. ಕೆರೆ ಅಚ್ಚುಕಟ್ಟುದಾರರು (ಈ 300 ಜನ ಸಾಗುವಳಿದಾರ ರೈತರು ಮಧುಗಿರಿ, ಕಂಬತ್ತಹಳ್ಳಿ, ವೀರಮಾನಹಳ್ಳಿಯವರು) ಪ್ರತ್ಯೇಕವಾಗಿ 'ಬಗಲು' ಎಂಬ ಮುಖ್ಯ ಕಾಲುವೆಗಳನ್ನು ರೂಪಿಸಿಕೊಂಡು ನೀರು ಹಾಯಿಸಿಕೊಳ್ಳುತ್ತಾರೆ. ಕೆರೆಯ ನೀರಿನಮಟ್ಟ ನೋಡಿಕೊಂಡು ಬೆಳೆ ಪದ್ಧತಿ ಚರ್ಚಿಸಿ ಬೆಳೆಯುತ್ತಾರೆ. ಕೆರೆ ಅರ್ಧತುಂಬಿದಾಗ ಎಲ್ಲಾ ರೈತರು ಖಡ್ಡಾಯವಾಗಿ **ತಡಿ ಫಸಲನ್ನು** ಬೆಳೆಯುತ್ತಾರೆ. ಕೆರೆ ಪೂರ್ತಿ ತುಂಬಿದಾಗ ಬಹುತೇಕ ಎಲ್ಲರೂ ಭತ್ತ ಬೆಳೆಯುತ್ತಾರೆ. ಅಚ್ಚುಕಟ್ಟಿನ ಕೊನೆಭಾಗದ ರೈತರು ತಡಿ ಫಸಲನ್ನು ಬೆಳೆಯುತ್ತಾರೆ. ರೈತರೆ ಎಕರೆಗೆ ಒಬ್ಬರಂತೆ ಕಾಲುವೆಗಳನ್ನು ಸ್ವಚ್ಛಗೊಳಿಸುತ್ತಾರೆ. ಸರದಿಯಂತೆ ಕೈವಾಡದವರು ಕೆರೆ ಕಾವಲು ಕಾಯುತ್ತಾರೆ. ನೀರು ಪೋಲುಮಾಡಿದ ರೈತರಿಗೆ ದಂಡ ಹಾಕುವುದುಂಟು. ಏನೇ ಸಮಸ್ಯೆಗಳು ಬಂದರೂ ಸಮುದಾಯದ ಪಾಲುದಾರಿಕೆಯಿಂದಾಗಿ ಪರಿಹಾರ ಕಂಡುಕೊಳ್ಳುತ್ತಿರುವ ಈ ಪ್ರಾಚೀನ ಪದ್ಧತಿಯನ್ನು ಶ್ರೀ ಗಿರೀಶ್ ಹೆಚ್.ಸಿ.ಅವರು ಗಮನಕ್ಕೆ ತಂದಿದ್ದಾರೆ(5.4.07); ಹಾಗೆ ನೋಡಿದರೆ ಇದು ಒಂದು ರೀತಿ ಆಧುನಿಕ ವ್ಯವಸ್ಥೆಯಲ್ಲಿ ಕಂಡುಬರುವ ಕೃಷಿಗಾಗಿ ನೀರು ಬಳಕೆದಾರರ ಸಂಘದ ವ್ಯವಸ್ಥೆಯ ಪ್ರಾಚೀನ ಪದ್ಧತಿಯ ಮುಂದುವರಿಕೆ ಎನ್ನಬಹುದು. ಇಮ್ಮಡಿ ಕೆಂಪೇಗೌಡನ ಕಾಲದಲ್ಲಿಯೂ ಮಾಗಡಿ ಪ್ರದೇಶದ ಕಲ್ಯ ಗ್ರಾಮದಲ್ಲಿ ಪಣ್ಯ ಜಮೀನುಗಳಿದ್ದುವು; ಕೊಡಗಿನಲ್ಲಿಯಂತು ಸುಮಾರು 51 ಪನ್ಯಜಮೀನುಗಳು ಹಾಲೇರಿ ವಂಶದ ಅರಸರ ಕಾಲದಲ್ಲಿ ಇದ್ದುವು. ಅವು ರಾಜರ ಖಾಸಗಿ ಕೃಷಿ ಜಮೀನುಗಳೆನಿಸಿ ಬಹಳ ವಿಶಾಲ ಫಲವತ್ತಾದ ಜಮೀನುಗಳೆನಿಸಿದ್ದುವು. ಅವುಗಳ ಬೆಳೆ ಉತ್ಪನ್ನವನ್ನು, ಅರಮನೆ, ರಾಜ್ಯದ ಸೈನ್ಯ ಹಾಗೂ ಕೃಷಿಕಾರರ ಆಶನ ನಿರ್ವಹಣೆಗೆ ಬಳಸಲಾಗುತ್ತಿತ್ತು. ಅಲ್ಲಿ ಬಿಟ್ಟಿ ಕೆಲಸ ಪರಸ್ಪರ ಉಪಯೋಗಿ ದೃಷ್ಟಿಯದಾಗಿತ್ತು. ಮುಯ್ಯಾಳು ಪದ್ಧತಿ (ಪರಸ್ಪರ ವಿನಿಮಯ ಸಹಾಯ) ಅಡಕವಿತ್ತು.[21] ಕೃಷಿ ಕಾರ್ಮಿಕರಿಗೆ ಕ್ರೀಡಾ ಸ್ಪರ್ಧೆ, ಬಹುಮಾನ ಇತ್ಯಾದಿ ಸಾಂಸ್ಕೃತಿಕ ಚಟುವಟಿಕೆಗಳಿಗೆ ಆಗರವಾಗಿದ್ದುವು.

21. ಎಂ.ಜಿ.ನಾಗರಾಜ್., 2004, **ಕೊಡಗಿನ ಹಾಲೇರಿ ರಾಜವಂಶವು**, ರಾಜ್ಯಪುರಾತತ್ತ್ವ ಮತ್ತು ವಸ್ತು ಸಂಗ್ರಹ ನಿರ್ದೇಶನಾಲಯ ಪು.112, 165, ಕ.115; 165

ಇಂದು ಅವೆಲ್ಲ ಆಯಾಗ್ರಾಮಗಳ ರೈತಾಪಿ ವರ್ಗದ ವಶದಲ್ಲಿದ್ದು, ಸಾಂಸ್ಕೃತಿಕ ಪದ್ಧತಿಗಳಂತು ಮುಂದುವರಿದಿವೆ. ಇವೆಲ್ಲ ಆಧುನಿಕ ರೈತ ಸಾಂತ್ವನ ನೆಲೆಗಳಿಗೆ ಪ್ರಾಚೀನತೆಯ ಸ್ಪರ್ಶಗಳನ್ನು ನೀಡಿವೆ ಎನ್ನಬಹುದು.

ಕಬ್ಬಿನ ವಿಪುಲ ಬೆಳೆ ಬಂದಾಗ, ರೈತರಿಂದ ಕಾರ್ಖಾನೆ ಕೊಳ್ಳುವುದರಲ್ಲಿ, ಅರೆಯುವಲ್ಲಿ ಬೆಲೆ ಪಾವತಿಸುವಲ್ಲಿ ಸಮಸ್ಯೆಗಳ ಸರಣಿ ಇರಬಹುದು. ಸರ್ಕಾರ ನಿಗದಿತ ಅವಧಿಯವರೆಗೆ ಕಬ್ಬು ಅರೆಯಬೇಕು ಎಂದಾಗ ಅನೇಕ ಕಾರ್ಖಾನೆಗಳು ಅದನ್ನು ಪಾಲಿಸಿದರೂ ಕೆಲವು ಕಾರ್ಖಾನೆಗಳು ತಮ್ಮ ಮೊಂಡುತನ ಬಿಡಲಿಲ್ಲ. ಸರಿ ಸಂಧಾನ, ಬೆಲೆ ಪಾವತಿಗೆ ಸರ್ಕಾರದಿಂದ ಸಾಲ ಹೀಗೆಯೇ ಮುಂದುವರಿದ ಜಾಯಮಾನ. ಸರಕಾರಿ, ಸಹಕಾರಿ ಹಾಗೂ ಖಾಸಗಿ ಸಕ್ಕರೆ ಕಾರ್ಖಾನೆಗಳು 55ಇದ್ದರೂ ಬಗೆಹರಿಯದ ಸಮಸ್ಯೆಗಳು ಅಂಟಿವೆ. ಟನ್ ಕಬ್ಬಿಗೆ ನಿಗದಿ ಪಡಿಸಿದ ಬೆಲೆ ರೈತನ ಉತ್ಪನ್ನ ಖರ್ಚಿಗೆ ಎಟುಕದು, ವೈಜ್ಞಾನಿಕ ಬೆಲೆ ನಿಗದಿ ಮಾಡಿ ಎಂಬುದು ರೈತರ ದುಂಬಾಲು. ಬಿತ್ತನೆ ಬೀಜ, ಗೊಬ್ಬರ, ಕ್ರಿಮಿನಾಶಕ, ನಾಟಿ ಖರ್ಚು, ನೀರುಣಿಸುವವನಿಗೆ ಕೂಲಿ, ವಿದ್ಯುತ್ ವೆಚ್ಚದ ಪಂಪ್‌ಸೆಟ್ಟು ಕಟಾವು ಕೂಲಿ, ಸಾಗಾಣಿಕೆ ಖರ್ಚು, ಕಂದಾಯ ಯಾವುದೆಲ್ಲ ಸರಿಯಾಗಿ ಉತ್ಪನ್ನವೆಚ್ಚ ದಕ್ಕದಿದ್ದರೆ ರೈತನ ಮೇಲೆ ಹೊರೆಯೇ. ಕಾರ್ಖಾನೆ ಮಾಲೀಕರೂ ಹೆಚ್ಚು ದರ ಕೊಡಲು ಮುಂದೆ ಬರುವುದಿಲ್ಲ. ರಾಜಕೀಯ ಹಿತಾಸಕ್ತಿಗಳೂ ಅಲ್ಲಿವೆ, ಎಂಬ ಮಾತಿದೆ. ಬೆಲ್ಲದ ಆಲೆಮನೆಗೆ ನೆಲೆ ಕಡಿಮೆಯಾಗುತ್ತ ಬಂದು, ಸಕ್ಕರೆಗೇ ಜೋತುಬೀಳುವ ಪರಿಸ್ಥಿತಿ. ಇಂಥ ಸಂದರ್ಭದಲ್ಲಿ ಕಬ್ಬಿನಿಂದ ಬರುವ ಇತರೆ (ಉಪ ಉತ್ಪನ್ನಗಳಲ್ಲಿ ಎಥೆನಾಲ್ ಅನ್ನು ಬಸ್ಸುಗಳಿಗೆ ಬಳಸಿದರೆ ಹಣ ಉಳಿತಾಯ (ಪೆಟ್ರೋಲ್–ಡೀಸೆಲ್ ಬಳಕೆಗೆ ಹೋಲಿಸಿದರೆ); ಬಸ್‌ನಿಂದ ಬರುವ ಹೊಗೆಯನ್ನು ಶೇ.50ರಷ್ಟು ತಗ್ಗಿಸಲನುಕೂಲ; ಕಾಕಂಬಿಯಿಂದ ಮದ್ಯತಯಾರಿಕೆ; ಕೋ ಜನರೇಷನ್–ವಿದ್ಯುತ್ತನ್ನು ಕೆಪಿಟಿಸಿಎಲ್‌ಗೆ ಮಾರಿ ಪಡೆಯುವ ಆದಾಯ; ಬಯೋಕಾಂಪೋಸ್ಟ್ ನಂತಹ ಸಿಪ್ಪೆಗೊಬ್ಬರವನ್ನು ರೈತನಿಗೆ ಒದಗಿಸುವುದು ಇತ್ಯಾದಿ ಸಲಹೆಗಳನ್ನು ವಿಶ್ಲೇಷಕರು ನೀಡಿದ್ದಾರೆ (17.6.2007). ಆದರೆ ಇವೆಲ್ಲದರ ಸೂಕ್ತ ಚಾಲನೆ ಆಗಿ ರೈತನಿಗೆ ತಲುಪುವಲ್ಲಿ ಏನೆಲ್ಲ ಅಡ್ಡಿಗಳು; ಇಂಥ ಅಡ್ಡಿಗಳನ್ನು ತಡೆದು ರೈತನಿಗೆ ಆದಾಯ ತಲುಪಿ ನೆಮ್ಮದಿ ಒದಗಿಸಿದಾಗ ಮಾತ್ರ ಅವನ ಮನಸ್ಸು ಹತಾಶೆಗಳಿಂದ ದೂರವಾಗುತ್ತದೆ. ಆತ್ಮಹತ್ಯೆಗಳು ಕುಂಠಿತಗೊಳ್ಳಲು ಒಂದು ಕಾರಣವಾಗುತ್ತದೆ.

ನೀರಾ ಒಂದು ತೆಂಗಿನ ಉತ್ಪನ್ನ. ನಮ್ಮ ರಾಜ್ಯದಲ್ಲಿ ದೇಸಿ ನೀರಾ ಉದ್ಯಮ ತಮಿಳುನಾಡು, ಮಹಾರಾಷ್ಟ್ರ, ಮಲೇಷಿಯಾದಲ್ಲಿಯಂತೆ ಇನ್ನೂ ನೆಲೆ ನಿಲ್ಲಬೇಕಿದೆ. ಸಂರಕ್ಷಣೆಗೆ ಬೇಕಾದ ತಂತ್ರಜ್ಞಾನವಿದ್ದು ಮಾರುಕಟ್ಟೆಯಲ್ಲಿ ಅನುಕೂಲ ಅಸ್ತಿತ್ವ ಒದಗುವುದಿದೆ. ಇದರ ಉಪ ಉತ್ಪನ್ನಗಳಾಗಿ ಸಿಹಿಪಾನೀಯ, ಬೆಲ್ಲ–ಸಕ್ಕರೆ ಚಾಕೋಲೇಟ್, ಪೆಪ್ಪರ್‌ಮೆಂಟ್ ಹಾಗೂ ಸಿಹಿತಿಂಡಿ ತಯಾರಿಸಬಹುದಾಗಿದೆ. ಬೆಳಗಾವಿ ಸಮೀಪದ ಪಾಶ್ಚಾಪುರದಲ್ಲಿ ಇರುವ ನೀರಾ ತಂತ್ರಜ್ಞಾನ ಅಭಿವೃದ್ಧಿ, ಸಂಶೋಧನ ಉತ್ಪಾದನೆ, ಪ್ರಶಿಕ್ಷಣ ಕುರಿತಂತೆ 4 ತಿಂಗಳ ತರಬೇತಿಯ ಅವಕಾಶವನ್ನು ಅಭ್ಯರ್ಥಿಗಳು ಬಳಸಿಕೊಳ್ಳಬೇಕು. ಕರ್ನಾಟಕದಲ್ಲಿ ನೀರಾ ತಯಾರಿಕೆ ತಂತ್ರಜ್ಞಾನ ತರಬೇತಿ ಮೊದಲ ಬಾರಿಗೆ ನೀಡುವ ವ್ಯವಸ್ಥೆ ಇಲ್ಲಿ ಆಗಿದೆ. ತೆಂಗಿನ ತೋಟವನ್ನು ಗುತ್ತಿಗೆಗೆ ಪಡೆದು ನೀರಾ ತೆಗೆಯಲು ಅವಕಾಶವಿದೆ. ತೆಂಗಿನ ಮರದ ವಿವಿಧ ಮಾದರಿ ಬ್ರಷ್ ತಯಾರಿಕೆಗೂ ತರಬೇತಿ ಇದೆ. ಆಧುನಿಕವಾದ ನೀರಾ ಸಂಸ್ಕರಣೆ. 'ಮೆಮರನ್ ಪ್ರಾಸೆಸಿಂಗ್' ತುಸು ದುಬಾರಿ ಎನಿಸಿದರೂ ಹೆಚ್ಚುಕಾಲ ನೀರಾ ಸಂಗ್ರಹಕ್ಕೆ ಅನುಕೂಲಕರ ತಂತ್ರಜ್ಞಾನವೆನಿಸಿದೆ. 80 ಡಿಗ್ರಿ ಸೆಂಟಿಗ್ರೇಡ್‌ವರೆಗೆ ಕಾಯಿಸಿ ಹಿಮಗಟ್ಟಿಸಿ ಪ್ಯಾಕ್ ಮಾಡಿದ್ದು ತಿಂಗಳು ಕಾಲ ಉಳಿಯಬಲ್ಲುದು. ಅದನ್ನು ಪೆಟ್ ಶೀಸೆಗಳಲ್ಲಿ ಮೂರು ತಿಂಗಳ ಕಾಲ ಕೆಡದಂತೆ ಸಂಗ್ರಹಿಸಬಹುದು. ನೀರಾ ಉತ್ಪನ್ನಗಳಾದ ಬೆಲ್ಲ, ಸಕ್ಕರೆ ಆಯುರ್ವೇದ ಔಷಧ ತಯಾರಿಕೆಯಲ್ಲಿ ಬಹಳ ಬೇಡಿಕೆ ಪಡೆದಿವೆ.

600 ತೆಂಗಿನ ಮರದ ಯೂನಿಟ್‌ನ ಸಂಸ್ಕರಣೆ, ಸಂರಕ್ಷಣಾ ಘಟಕ ಸ್ಥಾಪಿಸಲು 1 ಕೋಟಿ 26 ಲಕ್ಷ ಬಂಡವಾಳದ ಅಗತ್ಯವಿದ್ದು, ಶೇ.10 ರಷ್ಟು ಸ್ವಂತ ಬಂಡವಾಳ, ಶೇ.40 ರಷ್ಟು ಅನುದಾನ ಒದಗಿಸಿಕೊಂಡು, ಶೇ.50ರಷ್ಟು ಬ್ಯಾಂಕ್ ಸಾಲ ಪಡೆಯಬಹುದಾಗಿದೆ. ಇಂಥ ಘಟಕದಿಂದ ದಿನಂಪ್ರತಿ 1800 ಲೀ.ನೀರಾ ಸಂಸ್ಕರಣೆ ಮಾಡಬಹುದು. ವರ್ಷದ 9 ತಿಂಗಳು ಮಾತ್ರ ನೀರಾ ತೆಗೆಯಬೇಕು. ದಿನವೊಂದಕ್ಕೆ 3 ರಿಂದ 5 ಲೀಟರ್ ನೀರಾ ಒದಗಬಲ್ಲುದು. ಮಳೆಗಾಲದ ಮೂರು ತಿಂಗಳು ಮರಕ್ಕೆ ವಿಶ್ರಾಂತಿ ಇರಬೇಕು. ನೀರಾ ಸಂಸ್ಕರಣದಿಂದ ಮಾರಾಟಕ್ಕನುಗುಣವಾಗಿ ಸುಮಾರು 57 ಲಕ್ಷದಿಂದ 83 ಲಕ್ಷದವರೆಗೆ 600 ತೆಂಗಿನ ಮರದಿಂದ ಲಾಭ ಪಡೆಯಬಹುದು. ನೀರಾ ಬೆಲ್ಲ ಘಟಕಕ್ಕೆ ನೀರಾ ಸಕ್ಕರೆ ಉತ್ಪಾದನೆ ಘಟಕಕ್ಕೆ ಸೂಕ್ತ ಬಂಡವಾಳ ಹಾಕಿದರೆ ಲಾಭವೂ ದೊರೆಯಲು ಅನುಕೂಲ. ನೀರಾ ಸಕ್ಕರೆ ಹೆಚ್ಚು ಆದಾಯ ಕೊಡುವ ಉದ್ಯಮ. ಆದರೆ ನೀರಾ

ಉದ್ಯಮ ಬೆಳೆಯದಂತೆ ಕೋಲಾ, ಪೆಪ್ಸಿಯಂಥ ತಂಪುಪಾನೀಯ ಹಾಗೂ ಲಿಕ್ಕರ್ ಲಾಬಿಯೂ ಇರುವ ಬಗ್ಗೆ ನೀರಾ ಚಳುವಳಿಯ ಸ್ವಾಮಿ ಭಕ್ತತೀರ್ಥರ ಅಭಿಪ್ರಾಯದ ಬಗ್ಗೆ ಗಜಾನನ ಹೆಗಡೆ ಬೆಟ್ಟಣ್ಣಿ ಹೇಳಿದ್ದಾರೆ. ನೀರಾವು ಜೀವ ಸತ್ವ ಹೊಂದಿರುವ ಉತ್ತಮ ದೇಶೀಯ ಪಾನೀಯ ಎಂಬುದನ್ನು ಗಮನಿಸಬೇಕು.

ಇದೆಲ್ಲ ಸರಿಯೆ, ಆದರೆ ಸಮಸ್ಯೆ ಇರುವುದು ನೀರಾ ಬಳಕೆ ಇನ್ನೂ ಸಾರ್ವತ್ರಿಕ ವಿಪುಲತೆ ಪಡೆಯದಿರುವುದರಲ್ಲಿ, ಮಾರುಕಟ್ಟೆಯಾಗಿ ಪರಿವರ್ತನೆಯಾಗಿಲ್ಲದಿರುವುದರಲ್ಲಿ. ಈ ಬಗೆಗೆಲ್ಲ ಶಾಸನ ಸಭೆಯಲ್ಲಿ ವಿವರವಾಗಿ ಚರ್ಚೆಗೊಂಡಿದೆ. ಆದರೆ ಜನಪ್ರಿಯಗೊಳಿಸಿ, ಆದಾಯ ಮೂಲ ಮಾಡಿಕೊಳ್ಳುವ ಪ್ರಯತ್ನದ ಕೊರತೆ ತರಬೇತಿಯ ಕೊರತೆಯೇ ಎದ್ದು ಕಾಣುತ್ತದೆ. ಮೂತೆದಾರರ ನೆರವಿಲ್ಲದೆ ರೈತರೇ ತರಬೇತಿಗೊಂಡರೆ ಅದು ಲಾಭಕಾರಕವಾದೀತು. ಚೆನ್ನೈನಲ್ಲಿಯೂ ತರಬೇತಿ ಕೇಂದ್ರವಿದೆ.

ಕುಲಾಂತರಿ ಬೆಳೆಗಳನ್ನು ಪರಿಸರ ಮತ್ತು ಜೀವಿಗಳ ಆರೋಗ್ಯಕ್ಕೆ ಹಾನಿಯಾಗದಂತೆ ಜೈವಿಕ ತಂತ್ರಜ್ಞಾನ ಕ್ಷೇತ್ರದಲ್ಲಿ ಈಚೆಗೆ ಪ್ರಯೋಗ ಮಾಡಲಾಗುತ್ತಿದೆ. ಕಳೆ ನಿರೋಧಕ ಅಥವಾ ನಿಯಂತ್ರಿಸುವ ಗಿಡಮೂಲಿಕೆಗಳನ್ನು ಅಭಿವೃದ್ಧಿ ಪಡಿಸುವ ಪ್ರಯೋಗ ನಡೆಸಲಾಗಿದೆ. ಬರಪ್ರದೇಶದಲ್ಲಿ ಬೆಳೆಯ ಬಲ್ಲ ಕುಲಾಂತರಿ ಹತ್ತಿ ಮತ್ತು ಮೆಕ್ಕೆಜೋಳದ ಬಿತ್ತನೆಯ ಉಪಯೋಗವನ್ನು ಅಮೇರಿಕದಲ್ಲಿ ನಡೆಸಲಾಗಿದೆ. ಕರ್ನಾಟಕ ಸೇರಿದಂತೆ 9 ರಾಜ್ಯಗಳಲ್ಲಿ ಇಂಥ ತಳಿಯನ್ನು ಪರಿಚಯಿಸಬೇಕೆನ್ನುವಲ್ಲಿ, ದೇಶದ 2.2 ಕೋಟಿ ಎಕರೆ ಪ್ರದೇಶದಲ್ಲಿ ಬೆಳೆಯುವ ಹತ್ತಿಯಲ್ಲಿ ಅರ್ಧದಷ್ಟು ಕುಲಾಂತರಿ ಹತ್ತಿ ಆಗಿದೆ ಎಂದು ವಿವಾದಾತ್ಮಕ ದೈತ್ಯ ಕಂಪನಿ ಮಾನ್ಸೆಂಟೋದ ಅಧಿಕಾರಿ ರಾಜೇಂದ್ರ ಕೇತ್ಕರ್ ಹೇಳಿಕೊಂಡರೆಂದು ಪಿ.ಟಿ.ಐ ತಿಳಿಸಿದೆ (17.06.2007) ಬರ ಪ್ರದೇಶದಲ್ಲಿ ಹೀಗೆ ಬೆಳೆಯಬಹುದೆಂದರೆ ರೈತರು ಇಂಥ ಬೆಳೆಯ ಕಡೆ ಆಕರ್ಷಿತರಾಗುವುದು ಸಹಜ. ಅದು ಮತ್ತಷ್ಟು ದೃಢಪಟ್ಟಾಗ ಆ ಪ್ರಯೋಗಕ್ಕೆ ಬೆಲೆ ಬರುತ್ತದೆ.

**ಹೋಬಳಿಮಟ್ಟದಲ್ಲಿ ಬೆಳೆ ಹಾನಿ ನಿರ್ಧಾರ** : ರಾಷ್ಟ್ರೀಯ ಕೃಷಿ ವಿಮಾ ಯೋಜನೆಯಡಿ 2007ರ ಮುಂಗಾರು ಹಂಗಾಮಿಗೆ 30 ಬೆಳೆಗಳನ್ನು ಆಯ್ಕೆ ಮಾಡಿದೆ. 27 ಜಿಲ್ಲೆಗಳ ಹೋಬಳಿಗಳನ್ನು ಈ ಯೋಜನೆಯ ವ್ಯಾಪ್ತಿಗೆ ತರಲಾಗಿದೆ. ಪ್ರವಾಹ, ಆಲಿಕಲ್ಲು ಮಳೆ, ಭೂಕುಸಿತ, ಚಂಡಮಾರುತ ಇತ್ಯಾದಿ ಪ್ರಕೃತಿ ವಿಕೋಪಕ್ಕೆ

ಈಡಾದ ಬೆಳೆಯ ನಷ್ಟದ ಪ್ರಮಾಣವನ್ನು ನಿರ್ಧರಿಸಿ ಆನಂತರ ಬೆಳೆವಿಮೆ ಆಕರಿಸಲಾಗುವುದು. ಮಳೆ ಆಶ್ರಿತ ಈರುಳ್ಳಿ ಮೆಣಸಿನಕಾಯಿ ಹಾಗೂ ಹತ್ತಿ ಬೆಳೆಗಳನ್ನು ವಿಮಾ ಕಂತಿನ ದರ ಜಾಸ್ತಿ ಆದ ಕಾರಣ ಸದ್ಯ ಮುಂಗಾರು ಹಂಗಾಮಿನಲ್ಲಿ ಕೈಬಿಡಲು ಸರ್ಕಾರದ ಪ್ರಯತ್ನ ನಡೆದಿದೆ. ಮುಂಗಾರು ಹಂಗಾಮು ಬೆಳೆ ಸಾಲ ಪಡೆಯದವರು ನಿಗದಿಗೊಳಿಸಿರುವ ಅವಧಿಯಲ್ಲಿ ನೋಂದಾಯಿಸಿಕೊಳ್ಳಬೇಕು. ಬೆಳೆ ಬಿತ್ತಿದ ಮೇಲೆ ಅಥವಾ ನಾಟಿ ಮಾಡಿದ ಮೇಲೆ 30 ದಿನಗಳೊಳಗಿನ ಬೆಳೆಗಳಿಗೆ ಮಾತ್ರ ವಿಮಾ ಕುರಿತು ಪಾವತಿಸಿ ಅರ್ಜಿ ಸಲ್ಲಿಸಬೇಕು. ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ವಿಮಾ ಕಂತಿನ ಮೇಲೆ ಶೇ. 10 ರಷ್ಟು ಸಹಾಯಧನ ಒದಗುತ್ತದೆ. ಸ್ಥಳೀಯ ವಾಣಿಜ್ಯ ಅಥವಾ ಡಿಸಿಸಿ ಬ್ಯಾಂಕುಗಳಲ್ಲಿ ವಿಮೆ ಕಂತು ಕಟ್ಟಲು ಅವಕಾಶವಿದೆ. ಭತ್ತ ಮುಸುಕಿನ ಜೋಳ, ರಾಗಿ ಇತ್ಯಾದಿ ಧಾನ್ಯಗಳು, ಉದ್ದು, ತೊಗರಿ, ಹೆಸರು, ಹುರುಳಿ ಇತ್ಯಾದಿ ಕಾಳುಗಳು, ಎಳ್ಳು, ಹರಳು, ಹತ್ತಿ ಇತ್ಯಾದಿ ಬೀಜಗಳು ಈರುಳ್ಳಿ, ಆಲೂ ಇತ್ಯಾದಿ ಗಡ್ಡೆಗಳು – ಇವೆಲ್ಲ ಯೋಜನಾನುಷ್ಠಾನಕ್ಕಾಗಿ ಆಯ್ದ 30 ಬೆಳೆಗಳ ಪೈಕಿಯಾಗಿವೆ. ಬೆಳೆ ಹಾನಿಗೆ ವಿಮೆ ಮಾಡಿಸಿರುವ ರೈತರು ಬೆಳೆಯ ವಿವರ, ಹಾನಿ ಪ್ರಮಾಣ, ಹಾನಿಗೆ ಕಾರಣಗಳನ್ನು ಸಂಬಂಧಪಟ್ಟ ವಿಮಾ ಕಂಪೆನಿಗಳಿಗೆ ತಿಳಿಸಬೇಕು. ರೈತರಿಂದ ಹಾನಿಯ ಕುರಿತ ವಿವರಗಳನ್ನು ಸ್ವೀಕರಿಸಿದ ಮೇಲೆ ಬೆಳೆ ನಷ್ಟದ ನಿರ್ಧಾರಕ್ಕೆ ನಿರ್ಧಾರಕರನ್ನು ಸಂಬಂಧಪಟ್ಟ ಸ್ಥಳಕ್ಕೆ ಕಳುಹಿಸಬೇಕು. ಜಿಲ್ಲಾ ಕಂದಾಯ ಇಲಾಖೆ ಕೂಡ ಬೆಳೆ ನಷ್ಟ ಪ್ರಮಾಣದ ನಿರ್ಧಾರಕ್ಕೆ ವಿಮಾ ಕಂಪೆನಿಗೆ ನೆರವಾಗಬೇಕು ಎಂದೆಲ್ಲ ಮಾಹಿತಿಯು ಪ್ರಕಟವಾಗಿದೆ. (ಶಿವರಾಂ, 18.6.2007), ಹೆಕ್ಟೇರ್‌ಗೆ ನಿಗದಿಪಡಿಸಿರುವ ವಿಮಾ ಮೊತ್ತ 900 ರೂ. (ನವಣೆ)ನಿಂದ 24300 ರೂ. (ಭತ್ತ) ವರೆಗೂ ಆಯ್ದ ಬೆಳೆಗಳಿಗಿವೆ. ಆದರೆ ಬೆಳೆಹಾನಿ ಆಯಾ ವರ್ಗದ ರೈತರ ಭೂಮಿಯ ಹಾಗೂ ಬೆಳೆದ ಬೆಳೆಯ ಪ್ರಮಾಣಕ್ಕೆ ಅನುಗುಣವಾಗಿರುವಲ್ಲಿ ನೆರವಿನ ನಿಧಿ ಕೆಲಮಟ್ಟಿಗಾದರೂ ದೊರೆಯಬೇಕು. ಇಲ್ಲವಾದರೆ ಅಂಥ ರೈತರೂ ಸಂಕಷ್ಟಗಳನ್ನು ಭರಿಸುವಲ್ಲಿ ಎದೆಗುಂದಬಹುದು. ಅದು ಆತ್ಮಹತ್ಯೆಯ ದಾರಿಗೆ ಪ್ರೇರಣೆಯಾಗಬಹುದು. ಅಂತೇ ಸಾಂತ್ವನ ನೆಲೆಯಲ್ಲಿ ಇದನ್ನು ನಿರ್ಧರಿಸಬೇಕಿದೆ.

ರಾಜ್ಯದಲ್ಲಿನ 190.50 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಸುಮಾರು 123.07 ಲಕ್ಷ ಹೆಕ್ಟೇರ್‌ನಷ್ಟು ಅಂದರೆ ಶೇಕಡ 64.60 ರಷ್ಟು ಸಾಗುವಳಿ ಪ್ರದೇಶವಿದೆ. ಆದರೆ ಆಹಾರಧಾನ್ಯಗಳ ಇಳುವರಿ ಕಡಿಮೆ ಆಗುತ್ತಿದ್ದು ರೈತರ ಆತ್ಮಹತ್ಯೆ ಹೆಚ್ಚುತ್ತಿದೆ.

ಹೀಗಾಗಿ ಕೃಷಿಗೇ ಪ್ರತ್ಯೇಕ ಬಡ್ಜೆಟ್ ಅನ್ನು ನಿಗದಿಗೊಳಿಸಬೇಕಾದ ಅಗತ್ಯವು ಸರ್ಕಾರದ ಮುಂದೆ ನಿಂತಿದೆ. ಪ್ರತ್ಯೇಕ ಕೃಷಿ ಬಡ್ಜೆಟ್‌ಗಾಗಿ ಬೀಳುತ್ತಿರುವ ಒತ್ತಾಯದ ಕಾರಣವೆಂದರೆ ಕೃಷಿ ವಲಯವನ್ನು ಸತತವಾಗಿ ನಿರ್ಲಕ್ಷಿಸಿರುವುದೇ ಆಗಿದೆ. ಈ ಬಗ್ಗೆ ಒಳ್ಳೆಯ ಕೃಷಿ ಬಡ್ಜೆಟ್ ಅನ್ನು ಮಂಡಿಸದಿದ್ದರೆ ಎರಡನೇ ಹಸಿರುಕ್ರಾಂತಿಗೆ ಅವಕಾಶವಾಗದು; ಕೃಷಿ ವಲಯ ವಿಫಲವಾದರೆ ಆರ್ಥಿಕಶಕ್ತಿ ಕುಂಠಿತವಾಗುತ್ತದೆ ಎಂದು ಕೃಷಿ ತಜ್ಞ ಡಾ.ಆರ್.ಎಸ್.ಪಾಂಡೆ ಅವರ ಅಭಿಪ್ರಾಯವಾಗಿದೆ.

ಕೃಷಿಗೇ ಪ್ರತ್ಯೇಕ ಬಡ್ಜೆಟ್ ರೂಪಿಸಿದರೆ ಅದು ರೈತರ ಹಿತಾಸಕ್ತಿಯ ಸರ್ಕಾರದ ಬದ್ಧತೆಯ ಸೂಚನೆಯೇ. ಕಳೆದ ವರ್ಷ ಪ್ರಕಟವಾದ ಕೃಷಿ ನೀತಿ ಅನ್ವಯಕ್ಕೆ ಬಡ್ಜೆಟ್ ಕೊರತೆಯಿಂದಾಗಿ ತಡೆಉಂಟಾಗಿದೆ. ಈ ಪ್ರತ್ಯೇಕ ಬಡ್ಜೆಟ್‌ನ ಫಲವೆಂದರೆ ಕೃಷಿವಲಯದಲ್ಲಿ ಹೂಡಿಕೆಗಳನ್ನು ಸುಗಮವಾಗಿಸಲನುಕೂಲಿಸುತ್ತದೆ. ಇದು ಕೃಷಿ ತಜ್ಞರಿಂದ ರೂಪುಗೊಳ್ಳಬೇಕೇ ವಿನಹ ಆರ್ಥಿಕ ಇಲಾಖೆಯ ಅಧಿಕಾರಿಗಳಿಂದಲ್ಲ. ಈ ಬಡ್ಜೆಟ್, ಸಣ್ಣ ಮತ್ತು ಅತಿಸಣ್ಣರೈತರು, ಅವಲಂಬಿತ ರೈತ ಮಹಿಳೆಯರನ್ನು ಗಮನದಲ್ಲಿಟ್ಟುಕೊಂಡು ರೂಪುಗೊಳ್ಳಬೇಕು ಎಂಬುದು ಕೃಷಿ ಅರ್ಥಶಾಸ್ತ್ರ ತಜ್ಞ ಡಾ.ಎಂ.ಜಿ. ಚಂದ್ರಕಾಂತ ಅವರ ಮಾತು.

ನಕಲಿ ಬೀಜದ ಸಮಸ್ಯೆ ಪರಿಹರಿಸಲು, ರೈತ ಸಂಪರ್ಕಕೇಂದ್ರ, ಬೀಜನಿಗಮ, ಕೃಷಿ ವಿಶ್ವವಿದ್ಯಾಲಯ, ಕೃಷಿ ವಿಸ್ತರಣಾಕೇಂದ್ರಗಳು ರೈತರಿಗೆ ತಜ್ಞರು ಪ್ರಮಾಣೀಕರಿಸಿದ ಬಿತ್ತನೆ ಬೀಜ, ಕೀಟನಾಶಕ, ರಸಗೊಬ್ಬರ ಇತ್ಯಾದಿಗಳು ರೈತರಿಗೆ ನೇರವಾಗಿ ತಲುಪುವಂತೆ ಮಾಡಬೇಕು. ನಕಲಿ ಮಾರಾಟಗಾರರನ್ನು ಪತ್ತೆ ಮಾಡಿ ಕಾಯ್ದೆ ಅಡಿ ಬಂಧಿಸಿ ಶಿಕ್ಷಿಸಬೇಕು. 1955ರ ಅಗತ್ಯ ವಸ್ತುಕಾಯಿದೆ, 1966ರ ಬೀಜ ಅಧಿನಿಯಮ, 1968ರ ಬೀಜ ನಿಯಮಾವಳಿ, 1983 ಬೀಜ ನಿಯಂತ್ರಣ ಆದೇಶಗಳ ಅನ್ವಯ ನಿಯಮ ಉಲ್ಲಂಘಿಸಿದ ಮಾರಾಟಗಾರರ ಮೇಲೆ ಕ್ರಮಕೈಗೊಳ್ಳಬೇಕು.

ಮುಂಗಾರು ಮುನ್ನವೆ ರೈತರಿಗೆ ಹವಾಮಾನ, ಹೊಸಬೆಳೆ ಬಿತ್ತನೆ ಬೀಜ ಕುರಿತೆಲ್ಲ ತರಬೇತಿ ಶಿಬಿರಗಳಲ್ಲಿ ಮಾಹಿತಿ ನೀಡಬೇಕು. ಕೊಟ್ಟ ಬಿತ್ತನೆ ಬೀಜ ವಿಫಲವಾದರೆ ಪರಿಹಾರ ಕೊಡಬೇಕು. ಜೊತೆಗೆ ರೈತರ ಅನುಭವವಗಳನ್ನು ಪರಿಶೀಲಿಸಬೇಕು. ರೈತರ ಮನೆ ಬಾಗಿಲಿಗೆ ಹೋಗಿ ಸಾಲ ಮನ್ನಾ ರಸೀತಿ, ಹೊಸ ಸಾಲಕ್ಕೆ ಅರ್ಜಿ ವಿತರಿಸುವ ಅಂದೋಲನವು ಸಹಕಾರಿ ಇಲಾಖೆಯಿಂದ ಚಾಲನೆಗೊಳ್ಳಲಿರುವುದಂತು ಸ್ವಾಗತಾರ್ಹ.

ಹುಬ್ಬಳ್ಳಿ ವಿಮಾನ ನಿಲ್ದಾಣ ಅಭಿವೃದ್ಧಿ ಮತ್ತು ವಿಸ್ತರಣೆಗೆ ಸ್ವಾಧೀನ ಪಡಿಸಿಕೊಂಡ ಭೂಮಿಗೆ ಸೂಕ್ತ ಬೆಲೆ ನಿಗದಿಗೆ, ಹಾಗು ಸಂತ್ರಸ್ತ ನಿವಾಸಿಗಳಿಗೆ ಪರ್ಯಾಯ ವ್ಯವಸ್ಥೆಗಾಗಿ ಉಣಕಲ್ ಮತ್ತು ಗೋಕುಲಗ್ರಾಮದ ನೂರಾರು ರೈತರು ವಿಮಾನ ನಿಲ್ದಾಣಕ್ಕೆ ಮುತ್ತಿಗೆ ಹಾಕಿ ಆಗ್ರಹಿಸಿದರು. (25.6.2007) ಪ್ರತಿಭಟನಾ ನಿರತರಿಗೆ ಸೂಕ್ತ ಪರಿಹಾರ ಮತ್ತು ಪರ್ಯಾಯ ವ್ಯವಸ್ಥೆ ಕಲ್ಪಿಸುವುದಾಗಿ ಮಾಜಿ ಸಚಿವರು. ಹಾಗೂ ನಾಯಕರಾದ ಶ್ರೀ ಆರ್.ವಿ.ದೇಶಪಾಂಡೆ ಭರವಸೆ ಇತ್ತುದು ರೈತರನ್ನು ಸಾಂತ್ವನಗೊಳಿಸುವ ಒಂದು ಪ್ರಯತ್ನವೆನ್ನಬಹುದು.

ಹೊರರಾಷ್ಟ್ರಗಳಿಂದ ಕಳಪೆ ಅಡಿಕೆ ಬಂದು ಬೆಲೆ ಕುಸಿತಕ್ಕೆ ಕಾರಣವಾಯಿತು ಆದರೆ ಬೆಳೆಗಾರರ ಹಿತರಕ್ಷಣೆಗಿರುವ ಕ್ಯಾಮ್‌ಕೋಸ್, ಮ್ಯಾಮ್‌ಕೋಸ್, ಆಪ್ಸ್‌ಕೋಸ್ ಮತ್ತು ಅಡಕೆ ಬೆಳೆಗಾರರ ಸಹಕಾರ ಮಾರಾಟ ಮಂಡಲವು ಕಳಪೆ ಅಡಕೆ ಮಾರಾಟಗಾರರ ವಿರುದ್ಧ ಸೂಕ್ತ ಕ್ರಮತೆಗೆದುಕೊಳ್ಳುತ್ತ ಬೇಕು.

ಹನಿ ನೀರಾವರಿ ಯೋಜನೆ ಅಳವಡಿಸಿಕೊಂಡ ರೈತರಿಗೆ ಸಹಾಯಧನವನ್ನು ಹೊಸದುರ್ಗದಲ್ಲಿ ವಿತರಿಸುವಲ್ಲಿ ವಂಚನೆ ನಡೆಯಿತು. ಆಗ ರೈತರು ಕಛೇರಿಗೆ ನುಗ್ಗಿ ದಾಂಧಲೆ ಮಾಡಿದ್ದ ಸಂಗತಿ ಇತ್ತು. ನಕಲಿ ದಾಖಲೆಯನ್ನು ರೂಪಿಸಿ ರೈತರ ಗಮನಕ್ಕೂ ತರದೆ ಸಹಾಯಧನವನ್ನು ಅಧಿಕಾರಿಗಳು, ಏಜೆನ್ಸಿಯವರು ನುಂಗಿದ್ದರೆನ್ನಲಾಗಿದೆ. ಹೀಗಾದರೆ ರೈತರ ಸಂಕಷ್ಟನಿವಾರಣೆ ಆಗದು.

**ವಿಶೇಷ ಆರ್ಥಿಕ ಅಭಿವೃದ್ಧಿ ವಲಯಕ್ಕೆ** ರೈತರ ಜಮೀನು ವಶಪಡಿಸಿಕೊಳ್ಳಬೇಕೆಂಬ ಇರಾದೆ ಇದೆ. ಬೆಳೆಯುತ್ತಿರುವ ಬೆಂಗಳೂರಿನಿಂದ ಕೈಗಾರಿಕೋದ್ಯಮಿಗಳು ವಲಸೆ ಹೋಗುತ್ತಿದ್ದಾರೆ ಎನ್ನುವುದಿದೆ. ಈ ಕಾರಣ ಬೆಂಗಳೂರು ಮಹಾನಗರ ಪಾಲಿಕೆಯ ನಾಲ್ಕು ವಲಯ ಅಭಿವೃದ್ಧಿಗೆ 30 ಕೋಟಿ ರೂ.ಗಳನ್ನು ಮೀಸಲಿರಿಸಿದ್ದೂ ಆಗಿದೆ. ಷರತ್ತುಗಳನ್ನು ಹಾಕಿ ವಿಶೇಷ ವಿತ್ತವಲಯಗಳನ್ನು ರೂಪಿಸುವ ಬಗ್ಗೆಯೂ ಹೇಳಲಾಗಿದೆ. ನಂದಗುಡಿ ಸುತ್ತಮುತ್ತಲ ಫಲವತ್ತು ಭೂಮಿಯನ್ನು ವಿಶೇಷ ಆರ್ಥಿಕ ವಲಯಕ್ಕೆ ಬಿಟ್ಟುಕೊಡುವುದರ ವಿರುದ್ಧ ರೈತರ ತೀವ್ರ ವಿರೋಧವು ರಸ್ತೆ ತಡೆ ಸಹಿತ ಎದ್ದಿದೆ. ನಂದಗುಡಿ ಸುತ್ತಲಿನ 36 ಗ್ರಾಮಗಳ ಹೆಚ್ಚು ಬೆಲೆ ಬಾಳುವ 4745 ಎಕರೆ ಭೂಮಿ ಬಿಟ್ಟುಕೊಡಬೇಕೆನ್ನುವ ಬಲವಂತ ಒತ್ತಡಕ್ಕೆ ರೈತರು ತೀವ್ರಪ್ರತಿಕ್ರಿಯೆ ತೋರಿದ್ದಾರೆ. ಈ ಭೂಮಿ ಪಡೆಯಲು ಮುಂದಾಗಿರುವ ಮುಂಬೈ ಮೂಲದ ಸ್ಕಿಲ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ಸಂಸ್ಥೆಗೆ,

ರೈತರ ವಿರೋಧದ ಕಾರಣವಾಗಿ ಎಸ್.ಇ.ಜೆಡ್ ಸ್ಥಾಪಿಸಲು ಸರ್ಕಾರ ವಿಧಿಸಿರುವ ಶರತ್ತುಗಳು ಗಮನಾರ್ಹವಾಗಿವೆ. ಸ್ಕಿಲ್ ಸಂಸ್ಥೆ ನೇರವಾಗಿ ರೈತರ ಸಮ್ಮತಿ ಇದ್ದಲ್ಲಿ ಮಾತ್ರ ಜಮೀನು ಖರೀದಿಸಬೇಕು; ಸರ್ಕಾರದಿಂದ ಜಮೀನು ಬಲವಂತ ಸ್ವಾಧೀನವಿಲ್ಲ; ಮಾರುಕಟ್ಟೆದರದಲ್ಲಿ ಜಮೀನು ಮಾರಾಟ; ಪುನರ್ವಸತಿ ಯೋಜನೆಗೆ ಸರ್ಕಾರ ಖಡ್ಡಾಯವಾಗಿ ಅನುಮತಿ ನೀಡುವುದು; ಜಮೀನು ಕಳೆದುಕೊಂಡ ಕುಟುಂಬದ ಸದಸ್ಯರೊಬ್ಬರಿಗೆ ಉದ್ಯೋಗ ಖಾತರಿ ಪುನರ್ವಸತಿ ಈ ಯೋಜನೆಯಲ್ಲಿರಬೇಕು. ಸ್ಕಿಲ್ ಸಂಸ್ಥೆ ಪಡೆಯುವ ನಂದಗುಡಿ ಎಸ್.ಇ.ಜೆಡ್ ಯೋಜನೆಯನ್ನು ಅನ್ಯರಿಗಾಗಲಿ ತನ್ನದೇ ಉಪಸಂಸ್ಥೆಗೆ ಮಾರುವಂತಿಲ್ಲ. ನಿರ್ವಹಣೆ ವರ್ಗಾವಣೆ ಕೂಡದು; ನಿರ್ದೇಶಕರ ಮಂಡಳಿ ಪಾಲುದಾರಿಕೆ ಬದಲಾವಣೆಕೂಡದು; ನೀರು ಪೂರೈಸಿಕೊಳ್ಳುವ ಹೊಣೆ ಸಂಸ್ಥೆಯದು; ಆ ಬಗ್ಗೆ ಸಮಗ್ರ ವರದಿ ಸರ್ಕಾರಕ್ಕೆ ಸಲ್ಲಬೇಕು. ಇದು ಎಸ್.ಇ.ಜೆಡ್ ಕುರಿತ ಶಂಕೆಗಳಿಗೆ ಪರಿಹಾರೋಪಾಯದಂತೆ ಸದ್ಯಕ್ಕೆ ಕಾಣುತ್ತದೆ. ಮುಂದಿನ ಸಮಸ್ಯೆಗಳು ಅನುಷ್ಠಾನ ಲೋಪಗಳು ಉಂಟಾದಾಗ ಬಂದರೆ ಎದುರಿಸುವ ಧಾರ್ಡ್ಯವೂ ಇರಬೇಕು.

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿ ಈಗ 1219.50 ಚದರ ಕಿಲೋಮೀಟರ್‌ಗೆ ಸರ್ಕಾರದ ಅನುಮತಿ ಸಿಕ್ಕಿ ಹೊರಡಿಸಿರುವ ಆದೇಶದಂತೆ ವಿಸ್ತರಣೆಗೊಂಡಿದೆ. ಈ ಮಾಸ್ಟರ್ ಪ್ಲಾನ್ ರೀತ್ಯ ನಗರ ಭಾಗಕ್ಕೆ 800 ಚ.ಕಿ.ಮೀ. ಮೀಸಲಿದ್ದು ಕೃಷಿಭೂಮಿ ಮತ್ತು ಹಸಿರುವಲಯಕ್ಕೆ 419.50 ಚ.ಕಿಮೀ (ಶೇ.46.6)ನಷ್ಟು ಮೀಸಲಿರುವುದು ಗಮನಾರ್ಹ. ಕೃಷಿ ಭೂಮಿಯಲ್ಲಿ ಶಿಕ್ಷಣ ಸಂಸ್ಥೆ ಆರಂಭಕ್ಕೆ ಮಾತ್ರ ಅನುಮತಿ ಇತ್ತು. ಈಗ ಆಸ್ಪತ್ರೆ ಸ್ಥಾಪನೆಗೂ ಅವಕಾಶ ನೀಡಲಾಗುತ್ತದೆ. ಬೇರೆ ಯಾವುದೇ ಯೋಜನೆಗಳಿಗೆ ಈ ಭೂಮಿ ಬಳಸುವಂತಿಲ್ಲ. ಇದರಿಂದ ರೈತಾಪಿ ವರ್ಗಕ್ಕೆ, ಶಿಕ್ಷಣ ಹಾಗೂ ಆರೋಗ್ಯ ವ್ಯವಸ್ಥೆ ಮನೆ ಬಾಗಿಲಿಗೇ ನಿಲುಕಿದಂತಾಗುತ್ತದೆ.

ಈ ನಡುವೆ ಪೂರ್ವಕ್ಕೆ ನೇತ್ರಾವತಿ ನದಿ ತಿರುಗಿಸುವ ಯೋಜನೆಯೊಂದನ್ನು 12,500 ಕೋಟಿ ರೂ. ವೆಚ್ಚದಲ್ಲಿ ಅಂದಾಜು ಮಾಡಲಾಗಿದೆ. ಇದು ಬರಪೀಡಿತ ತಾಲೂಕುಗಳಿಗೆ ಕುಡಿಯುವ ನೀರಿಗಾಗಿ, ವಿಶೇಷ ಆರ್ಥಿಕ ವಲಯ ಸೇರಿದಂತೆ ದೊಡ್ಡ ಪ್ರಮಾಣದ ಉದ್ದಿಮೆಗಳಿಂದ ಬರುವ ಹಾಗೂ ಹೆಚ್ಚುತ್ತಲೇ ಹೋಗುವ ನೀರಿನ ಬೇಡಿಕೆ ಪೂರೈಸಲು ರೂಪಿಸಿರುವ ಯೋಜನೆ ಎಂಬ ಮಾತೂ ಕೇಳಿ ಬರುತ್ತದೆ. ಪರಿಸರವಾದಿಗಳು, ಈ ಯೋಜನೆಯಿಂದ 7716 ಹೆಕ್ಟೇರ್ ಪಶ್ಚಿಮ

ಘಟ್ಟ ಪ್ರದೇಶದ ಮುಳುಗಡೆ ಆಗಿ 15 ಸಾವಿರ ಬಗೆಯ ಜೀವ ಸಂಕುಲಕ್ಕೆ ಹಾನಿ ತಟ್ಟುತ್ತದೆ ಎನ್ನುತ್ತಾರೆ. ಈ ಯೋಜನೆಯಿಂದ ನದಿ ಪ್ರದೇಶದ ಕೃಷಿ ಹಾಗೂ ಪರಿಸರ ವ್ಯವಸ್ಥೆಗೆ ಮಾರಕವಾಗಿ ಜಿಲ್ಲೆಗಳ ನಡುವೆ ಸಂಘರ್ಷಕ್ಕೆ ಕಾರಣವಾಗುತ್ತದೆ ಎಂಬುದು ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ಡಿ.ವೀರೇಂದ್ರ ಹೆಗ್ಗಡೆ ಅವರ ಅಭಿಪ್ರಾಯವಾಗಿದೆ. ಶ್ರೀ ವಿಶ್ವೇಶ್ವರತೀರ್ಥ ಶ್ರೀಪಾದರು ಕರಾವಳಿಯ ಕಲ್ಪನೆಯಿಲ್ಲದ ಯೋಜನೆ ಇದು. ನದಿ ತಿರುವಿನಿಂದ ಅಲ್ಲಿಯೂ ನೀರಿಲ್ಲ, ಇಲ್ಲಿಯೂ ನೀರಿಲ್ಲ ಎಂಬ ಪರಿಸ್ಥಿತಿ ಉಂಟಾಗಬಹುದು, ಎಂದಿದ್ದಾರೆ. (2.7.2007). ಇಂಥ ಸಂದರ್ಭವಾಗಿರುವಲ್ಲಿ ಯೋಜನೆಯ ಸಾಧಕ ಬಾಧಕಗಳಿಗೆ ಮರು ಪರಿಶೀಲನೆಯ ಅಗತ್ಯವಿದೆ ಎನ್ನಿಸುತ್ತದೆ.

ಮಂಡ್ಯ ಜಿಲ್ಲೆ ಗೆಜ್ಜಲಗೆರೆಯಲ್ಲಿ ಏಕಗವಾಕ್ಷಿ ಯೋಜನೆಯಲ್ಲಿ ಫುಡ್‌ಪಾರ್ಕ್ ಅನ್ನೂ ಗೋಲ್ಡನ್ ಹಾರ್ವೆಸ್ಟ್ ಕಂಪೆನಿಯು ಸ್ಥಾಪಿಸಲು ಜಮೀನನ್ನು ಕೇಳಿತು. ಅದಕ್ಕೆ ಅಗತ್ಯವಾದ 78 ಎಕರೆ ಜಮೀನನ್ನು ರೈತರಿಂದ ಸ್ವಾಧೀನ ಪಡಿಸಿಕೊಳ್ಳಲು ತಲಾ ಎಕರೆಗೆ 4.5 ಕೋಟಿ ರೂ. ನೀಡಲು ನಿರ್ಧಾರವಾಗಿತ್ತು ಈ ಯೋಜನೆಯಲ್ಲಿ ಬೇಡಿಕೆಯ ಸಿದ್ಧ ಆಹಾರ ಪದಾರ್ಥಗಳನ್ನು ತಯಾರಿಸಿ ವಿದೇಶಗಳಿಗೆ ರಫ್ತು ಮಾಡಲು ಸಣ್ಣ ಕೈಗಾರಿಕೋದ್ಯಮಿಗಳಿಗೆ ಈ ಕಂಪೆನಿಯು ಕೆಲವು ಎಕರೆಗಳನ್ನು ಉಪಭೋಗಕ್ಕೆ (ಸಬ್‌ಲೀಜ್) ಕೊಡುವುದಾಗಿತ್ತು. ಇಂಥ ಫುಡ್ ಪಾರ್ಕ್ ಯೋಜನೆಗೆ ಸರ್ಕಾರ ಹಣ ಪಡೆದುಕೊಂಡು ಜಮೀನು ನೀಡಲು, ಸರ್ಕಾರದ ಆದೇಶದ ರೀತ್ಯಾ ಕೆಐಡಿಬಿ (ಕರ್ನಾಟಕ ಇಂಡಸ್ಟ್ರಿಯಲ್ ಡೆವಲೆಪ್‌ಮೆಂಟ್ ಬೋರ್ಡ್) ಮುಂದಾಗಿತ್ತು. ಆದರೆ ಕಾವೇರಿ ಚಳವಳಿಯ ಕಾವು ಸುಮಾರು ಮೂರು ತಿಂಗಳ ಕಾಲ ಇದ್ದು, ರಸ್ತೆ ರೈಲು ತಡೆ ಇತ್ಯಾದಿ ವಿವಿಧ ಪ್ರತಿಭಟನೆಗಳ ಸರಣಿ ನಡೆದ ಹಿನ್ನೆಲೆಯಲ್ಲಿ ಯೋಜನೆಗೆ ಹಿನ್ನಡೆ ಆಯಿತು; ಈ ಹಿಂದೆಯೂ ಭೂಸ್ವಾಧೀನ ಪ್ರಕ್ರಿಯೆಗೆ ಅಡ್ಡಿಯಾಗಿ ಕೋಕೋ ಕೋಲಾ ಕಂಪೆನಿಯೂ, ಟ್ರಾಕ್ಟರ್ ಕಾರ್ಖಾನೆ ಆರಂಭಿಸಲೆಳೆಸಿದ್ದ ಕೈಗಾರಿಕೋದ್ಯಮಿಗಳೂ ಹಿಂದಾದರು. ಹೀಗೆ ಒಂದೆಡೆ ಕೈಗಾರಿಕಾ ಪ್ರಗತಿ, ಇನ್ನೊಂದೆಡೆ ಜಮೀನು ಕಳೆದುಕೊಳ್ಳುವ ರೈತರ ಸ್ಥಿತಿ ಇವೆರಡರ ನಡುವೆ ಸಮತೋಲನ ಸಾಧಿಸದಿದ್ದರೆ, ಅಭಿವೃದ್ಧಿ ಕಷ್ಟಕರವಾಗುತ್ತದೆ. ಸಾಂತ್ವನದ ನೆಲೆಗಳನ್ನು ಸಾಧಿಸಲು ರೈತರು ಮತ್ತು ಸರ್ಕಾರದ ಜಂಟಿ ಸಹಕಾರವೇ ಬೇಕಾಗುತ್ತದೆ.

ಕೇಂದ್ರವೂ ನಂದಗುಡಿ ಎಸ್‌ಇಜೆಡ್ ಯೋಜನೆಗೆ ತಾತ್ವಿಕ ಒಪ್ಪಿಗೆಯನ್ನು ರಾಜಕೀಯ ಪಕ್ಷಗಳ ನಾಯಕರ ಕೆಲಮಟ್ಟಿನ ವಿರೋಧದ ನಡುವೆಯೂ ನೀಡುವಲ್ಲಿ

ಹೊಸ ನೀತಿಯ ಪ್ರಕಾರ. ಸ್ಕಿಲ್ ಸಂಸ್ಥೆಯ ಮೂಲ ಕೋರಿಕೆ 12 ಸಾವಿರ ಎಕರೆ ಇದ್ದರೂ ಎಸ್‌ಇಜೆಡ್‌ಗೆ ನೀಡಲಾಗುವ ಗರಿಷ್ಠ ಜಮೀನು 5 ಸಾವಿರ ಎಕರೆಗೆ ಸೀಮಿತಗೊಳಿಸಿದುದು ಸೂಕ್ತ ಕ್ರಮವಾಗಿದೆ. ರೈತರು ಇಷ್ಟವಿದ್ದರೆ ಜಮೀನು ಕೊಡಬಹುದು, ಸರ್ಕಾರ ಬಲವಂತ ಮಾಡದು ಎಂದಿರುವುದು, ರೈತರಿಗೆ ಸಾಂತ್ವನಕಾರಿ ವಿಷಯ. ಮಂಗಳೂರಿನಲ್ಲಿ ಪೆಟ್ರೋಕೆಮಿಕಲ್ಸ್ ಘಟಕ, ಕಿನ್‌ಫೋಟೆಕ್ ಸಾಫ್ಟ್‌ವೇರ್ ಕಂಪೆನಿ ವಿತ್ತ ವಿಲಯ ಇತ್ಯಾದಿಗಳಿಗೆ ಅನುಮತಿ ನೀಡಿರುವಲ್ಲಿ ಪ್ರಗತಿಯ ಬೆಳಸಿಗಾಗಿ ಕಾತರಿಸಿರುವುದಿದೆ. ಈ ವಿತ್ತ ವಲಯಗಳು (ಸ್ಕಿಲ್‌ಕಂಪೆನಿ ಯೋಜನೆ), ಕೈಗಾರಿಕೆ, ವಾಣಿಜ್ಯ, ವಸತಿ, ಜ್ಞಾನ, ಮನರಂಜನೆ, ವಿಶ್ವದರ್ಜೆಯ ಮೂಲ ಸೌಲಭ್ಯವನ್ನು ಕಲ್ಪಿಸುವುವು ಎಂಬುದು ಕಾರ್ಯಾನುಷ್ಠಗೊಳ್ಳುತ್ತ ಹೋದರೆ ಸ್ವೀಕಾರಾರ್ಹವಾದೀತು.

ಕೊಡಗಿನ ಭೂ ಮಾಲೀಕತ್ವದ ವಿಶೇಷವಾಗಿ ಜಮ್ಮ ಭೂಮಿಯ ಮೇಲಿನ ಹಕ್ಕು ವಂಶಪಾರಂಪರ್ಯವಾಗಿ ಹಾಲೇರಿ ಅರಸರ ಕಾಲದಲ್ಲಿ ಗಟ್ಟಿಗೊಂಡದ್ದಾಗಿದೆ. 1964ರ ಕರ್ನಾಟಕ ಭೂಕಂದಾಯ ಕಾಯ್ದೆ ಜಾರಿಗೆ ಬಂದಾಗ ಕೊಡಗಿನ ವಿವಿಧ ಭೂವರ್ಗಕ್ಕೆ ಅದು ಅನ್ವಯವಾಗಲಿಲ್ಲ. ಇದೀಗ ಕಂದಾಯ ಇಲಾಖೆಯ ಕಾರ್ಯದರ್ಶಿಯವರು ಜಮ್ಮಾ ಬಾಣೆ ಒಡೆತನ ಕುರಿತು ಹೊರಡಿಸಿದ ಸುತ್ತೋಲೆ, ಭೂಮಿ ಮೇಲಿನ ಹಕ್ಕಿಗೆ ಸಂಚಕಾರ ತರುತ್ತದೆ ಎನ್ನುವ ಭಾವ ಕೊಡಗಿನ ಜನಕ್ಕೆ ಬಂದು, ಅದರಿಂದಾಗಿ ಸುತ್ತೋಲೆ ವಿವಾದಕ್ಕೀಡಾಗಿ ಕೊಡಗು ಬಂದ್ ಕೂಡ ಆಯಿತು. ಆನಂತರ ಸುತ್ತೋಲೆ ವಾಪಸು ಪಡೆಯಲಾಗುವುದೆಂದು ಹೇಳಿಕೆ ಬಂದಿದೆ. ವಂಶಪಾರಂಪರ್ಯದ ಅನುಭವದ ಹಕ್ಕು ಭಾವನಾತ್ಮಕವಾದದ್ದು, ಸಾರ್ವಜನಿಕ ಸಮ್ಮತಿಯುಳ್ಳದ್ದು. ಅದಾಗಿ ಆ ಜನರ ಒಡೆತನವನ್ನು ಕಾಪಾಡುವುದರಲ್ಲಿ ಆ ಜನಕ್ಕೆ ಸಾಂತ್ವನ ಒದಗಿಸುತ್ತದೆ.

ರಾಯಚೂರು ಸಿಂಧನೂರು ತಾ.ಚಿತ್ರಾಲಿ ಗ್ರಾಮ ಹಾಗೂ ನೆರೆಯ ಗ್ರಾಮಗಳ ಜಮೀನುಗಳು ತುಂಗಭದ್ರಾ ಎಡದಂಡೆ ನಾಲೆಯ ಕೊನೆಯ ಭಾಗದಲ್ಲಿದೆ. ಮಳೆ ಆಶ್ರಿತ ಈ ಪ್ರದೇಶದ ರೈತರ ಜಮೀನಿಗೆ ತುಂಗಭದ್ರಾ ನದಿಯಿಂದ ಪೈಪುಗಳ ಮೂಲಕ ನೀರಾವರಿ ಮಾಡಲು ಅರ್ಧ ಜಮೀನು ಬಿಟ್ಟುಕೊಟ್ಟರೆ, ನೀರು ಒದಗಿಸುವ ಆಮಿಷವನ್ನು ಶ್ರೀಮಂತರು ಇಟ್ಟರು. ಅದನ್ನು ನಂಬಿ ಕೊಟ್ಟ ರೈತರ ಸಾವಿರಾರು ಎಕರೆ ಜಮೀನು ಶ್ರೀಮಂತರ ಪಾಲಾಗಿದೆ. ಗಂಗಾವತಿ, ಕಾರಟಗಿಯ ಜಮೀನುಗಳು ಶ್ರೀಮಂತ ದಣಿಗಳ ಪಾಲಾಗಿವೆ; ಆಂಧ್ರದ ಶ್ರೀಮಂತ ರೈತರೂ ಇಲ್ಲಿ ಬೇರು

ಬಿಟ್ಟು, ಗ್ರಾಮದ ಮಕ್ಕಳು ಪರಕೀಯರೆನಿಸುತ್ತಿದ್ದಾರೆ. ಮಣ್ಣಿನ ಹಾಡು ಅವರಿಗೂ ಕೇಳಿಸದಂತಾಗಿದೆ. ಈ ಬಗ್ಗೆ ಸರ್ಕಾರ ಕಾದು ನೋಡುವ ನೀತಿ ಅನುಸರಿಸಿದೆ.

ಭೂನ್ಯಾಯ ಮಂಡಳಿ ಅನುಭೋಗದ ಜಾಗದ ಮೇಲೆ ಹಕ್ಕು ನೀಡಿ 20–30 ವರ್ಷಗಳಾದರೂ ಆಸ್ತಿ ವಿವಾದ ಇತ್ಯರ್ಥವಾಗಿಲ್ಲ. ಅನುಭೋಗದಲ್ಲಿರುವವರಿಗೆ ಆಸ್ತಿಗಳ ಮೇಲೆ (ಮೂಲಗೇಣಿ) ಹಕ್ಕು ಹಾಗೂ ಒಡೆತನವಿಲ್ಲ ಎಂಬ ಮಾತಿದೆ. ಈ ಕುರಿತಂತೆ ಮಂಗಳೂರು, ಉಡುಪಿ ಹಾಗೂ ಕೊಡಗು ಜಿಲ್ಲೆಗಳಿಗೆ ಸೀಮಿತವಾಗಿ ಭೂ ಸುಧಾರಣೆ ಕಾಯ್ದೆಗೆ ತಿದ್ದುಪಡಿ ತರುವ ಬಗ್ಗೆ ಸರ್ಕಾರ ಹೇಳುತ್ತಿದೆ. ಇದು ಸಂಪುಟ ಸಭೆಯಲ್ಲಿ ಚರ್ಚೆಗೊಂಡು, ಚಾಲಗೇಣಿ ಮತ್ತು ಮೂಲಗೇಣಿದಾರರಿಗೆ ಮುಳಿ ಹಕ್ಕು ಅಥವಾ ಪಟ್ಟಾ ಹಕ್ಕು ಸಿಕ್ಕಿದರೆ ಮಾತ್ರ ನ್ಯಾಯ ದೊರೆತಂತಾದೀತು, ಎಂಬ ಅಭಿಪ್ರಾಯವನ್ನು ಅತ್ತಾವರದ ಡಿಸೋಜ ಅವರು ವ್ಯಕ್ತ ಪಡಿಸಿದ್ದಾರೆ. ಈ ಬಗ್ಗೆ ಸರ್ಕಾರ ಸಕ್ರಿಯವಾಗಿ ಅಧಿಕಾರಿಗಳಿಗೆ ತಾಕೀತು ಮಾಡಿ ತುರ್ತು ವಿಲೇವಾರಿ ಕ್ರಮ ಜರುಗಿಸಿದರೆ ಪ್ರಯೋಜನವಾದೀತು.

ಅತ್ಯಂತ ಫಲವತ್ತಾದ ಕೃಷಿ ಭೂಮಿಯಲ್ಲಿಯೇ (ಮ್ಯಾಂಚೆಸ್ಟರ್, ಲಂಕಾಶೈರ್‌ನಲ್ಲಿ) ಕೈಗಾರಿಕೆಗಳು ಇವೆ. ಕೈಗಾರಿಕೆಗಳು ಯಾವಾಗಲೂ ಕೃಷಿ ವಿರುದ್ಧ ಸ್ಪರ್ಧಿಸಿಯೇ ತೀರುತ್ತವೆ, ಎಂಬುದು ನೊಬೆಲ್ ಪ್ರಶಸ್ತಿ ವಿಜೇತ ಅಮರ್ತ್ಯಸೇನ್ ಅವರ ಮಾತು. ಅಂದರೆ ಕೈಗಾರಿಕೆಗೆ ಕೃಷಿ ಭೂಮಿ ಬಳಕೆ ನಿಷೇಧ ಬೇಡ ಎಂಬುದು ಮಥಿತಾರ್ಥ. ಕರ್ನಾಟಕದ ನಂದಗುಡಿ, ಬಂಗಾಲದ ನಂದಿಗ್ರಾಮ ಇತ್ಯಾದಿ ಸಂದರ್ಭದಲ್ಲಿ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಎದ್ದಿರುವ ಪ್ರಶ್ನೆ ಹಾಗೂ ಹೋರಾಟಗಳಿಗೆ ಬಂದಿರುವ ಪ್ರಾತಿನಿಧಿಕ ಅನಿಸಿಕೆ ಇದಾಗಿರುವಂತಿದೆ. ಆದರೆ ವಿ.ವಿ.ವಲಯ ಸ್ಥಾಪನೆಯ ನೆಪದಲ್ಲಿ ಸರ್ಕಾರ ರೈತರನ್ನು ಒಕ್ಕಲೆಬ್ಬಿಸುವುದಿಲ್ಲ ಎಂಬ ಹೇಳಿಕೆಯನ್ನು ಇತ್ತಿದೆ (2.8.07). ರೈತರ ಹಿತ ಕಾಯುವ ಉದ್ದೇಶದಿಂದಲೇ ಸಚಿವ ಸಂಪುಟದಲ್ಲಿ ಚರ್ಚಿಸಿ ಸುತ್ತೋಲೆ ಹೊರಡಿಸಿ ಭೂಸ್ವಾಧೀನಕ್ಕೆ ರೈತರ ಸಮ್ಮತಿ ಇದ್ದು ಖರೀದಿಸಿದರೆ ಮಾತ್ರ ಅವಕಾಶ ಎಂಬ ಶರತ್ತು ವಿಧಿಸಿರುವುದು ವಾಸ್ತವಿಕ ಅನ್ವಯದೃಷ್ಟಿ ಎನಿಸುತ್ತದೆ. ಹೀಗಾಗಿ ಇಲ್ಲಿ ಆಧುನಿಕ ಸಿದ್ಧಾಂತದ ಭ್ರಮೆ ಇಲ್ಲದೆ, ಹಳೆಯ ಸಿದ್ಧಾಂತದ ಒತ್ತಡವಿಲ್ಲದೆ ಆಗುವ ಕೆಲಸವಾಗುತ್ತದೆ.

ಕಾಂಟ್ರಾಕ್ಟ್ ಫಾರ್ಮಿಂಗ್ 2003ರಲ್ಲಿ ಮೊದಲಿಗೆ ಪ್ರವೇಶ ಮಾಡಿತು. ಅಂದರೆ ರೈತನಲ್ಲಿ ಐದೋ, ಹತ್ತೋ ಎಕರೆಗಳಿದ್ದಾಗ, ಖಾಸಗಿ ಕಂಪೆನಿಗಳು ಅವನಲ್ಲಿ ಒಪ್ಪಂದ ಮಾಡಿಕೊಳ್ಳುತ್ತವೆ. ಅದರಿಂದ ರೈತ ತನ್ನ ಜಮೀನಿನಲ್ಲಿ ಕಂಪೆನಿಗಳು ಹೇಳಿದ ಉತ್ಪನ್ನವನ್ನೆ ಬೆಳೆಯಬೇಕು. ಬೆಳೆಯುವ ಮೊದಲೇ ಬೆಳೆಯುವ ಉತ್ಪನ್ನಕ್ಕೆ ಪೂರ್ವ ಭಾವಿಯಾಗಿ ಕಂಪೆನಿಗಳು ಬೆಲೆಯನ್ನು ನಿಗದಿ ಪಡಿಸುತ್ತದೆ. ಅದರಂತೆ ಬೆಳೆ ಬಂದ ಮೇಲೆ ನಿಗದಿಯಾದ ಬೆಲೆ ನೀಡಿ ಉತ್ಪನ್ನ ಖರೀದಿ ಮಾಡುತ್ತವೆ. ಆದರೆ ಪಂಜಾಬ್, ಭಟಿಂಡಾ, ಮಾಳ್ವಾ ಪ್ರದೇಶಗಳಲ್ಲಿ ರೈತರಿಗೆ ವಾಗ್ದಾನ ಮಾಡಿದ್ದ ಬೆಲೆಗಳ ಅರ್ಧದಷ್ಟು ಕೊಟ್ಟು ಮೋಸ ಮಾಡಿರುವುದೂ ಉಂಟು. ಈ ರೀತಿಯಾಗುತ್ತ ಬಂದರೆ ಮುಂದೊಂದು ದಿನ ರೈತನು ತನ್ನ ಜಮೀನಿನಲ್ಲಿಯೇ ಕೂಲಿ ಕಾರ್ಮಿಕನಾಗಬೇಕಾದ ಪರಿಸ್ಥಿತಿ ಬಂದೀತು. ಬೆಲೆ ನಿಗದಿ ಮಾಡಬೇಕಾದವನು, ಅವನಾಗದ ಹೊರತು ಇಚ್ಛಿಸಿದ ಬೆಳೆಯನ್ನು ಬೆಳೆಯುವ ಸ್ವಾತಂತ್ರ್ಯವು ಅವನಿಗಿದ್ದ ಹೊರತು, ಕೇವಲ ಕಂಪೆನಿಯ ವಾಣಿಜ್ಯ ಬೆಳೆಯನ್ನೆ ಬೆಳೆಯುವ ಒತ್ತಡ ತೆಗೆಯದ ಹೊರತು ಈ ಬಗೆ **ಗುತ್ತಿಗೆ ಅವಕಾಶ** ಎಷ್ಟು ಸೂಕ್ತ ಎಂಬುದನ್ನು ಪರಿಶೀಲಿಸಬೇಕಿದೆ. ರೈತರ ಭೂಮಿಯನ್ನು ಗುತ್ತಿಗೆ ಪಡೆದು ಬರಿ ವಾಣಿಜ್ಯ ಬೆಳೆ ಬೆಳೆದು ಮಾರುಕಟ್ಟೆಗೆ ಸಾಗಿಸಿ, ಬಿಡಿ ಮಾರಾಟ ವ್ಯವಸ್ಥೆಯನ್ನು ಕಂಪೆನಿಯೇ ಮಾಡಿಕೊಳ್ಳುವಲ್ಲಿ ಬಹುಪಾಲು ಲಾಭಾಂಶ ಅದಕ್ಕೆ ದೊರೆಯುತ್ತದೆ. ರೈತರು ಮತ್ತು ವರ್ತಕರಿಗೆ ಇದು ಮಾರಕವಾದೀತು. ಎ.ಪಿ.ಎಂ.ಸಿ ಕಾಯ್ದೆ ತಿದ್ದುಪಡಿ ಮಸೂದೆ ವಿಧಾನಸಭೆಯಲ್ಲಿ ಅಂಗೀಕಾರವಾಗಿ, ರಾಜ್ಯ ಪಾಲರ ಅಂಕಿತ ಬೀಳಬೇಕಿದೆ. ರೈತ ತನ್ನ ಭೂಮಿ ಉತ್ತು ಬೆಳೆ ತೆಗೆದರೂ ಪೈರಿಗಾಗಲಿ, ಬೆಳೆಗಾಗಲಿ ಮಾಲೀಕನಾಗಿರದೆ ಕಂಪೆನಿಯೆ ಎಲ್ಲವನ್ನು ನಿಯಂತ್ರಿಸುತ್ತದೆ. ತಿದ್ದುಪಡಿ ಮಸೂದೆಯಿಂದ ಕೃಷಿ ಕಾರ್ಮಿಕರಿಗೆ ಸಂಕಷ್ಟ ಒದಗಲಿದೆ. ಇದಕ್ಕಾಗಿ ರಾಜ್ಯಾದ್ಯಂತ ಬಂದ್ ಕೂಡ ನಡೆಯಿತು ನಮ್ಮ ರೈತರು ವ್ಯಾಪಾರಕ್ಕಾಗಿ ಕೃಷಿ ಮಾಡಲಿಲ್ಲ. ಮಾನವನ ಅಸ್ತಿತ್ವಕ್ಕೆ, ಜನಬದುಕಿಗೆ ಕೃಷಿಯೇ ದೇವರು ಎಂದು ಅದನ್ನು ಪವಿತ್ರವಾಗಿ ಕಂಡವರು. ಈ ದೃಷ್ಟಿಯಿಂದ ತಿದ್ದುಪಡಿ ಬೇಡ ಎಂಬ ಅಭಿಪ್ರಾಯ ವ್ಯಕ್ತವಾಯಿತು.

ಇನ್ನು ಖಾಸಗಿ ಸಾಲ ಪಡೆದು ತೀರಿಸಲಾಗದಿದ್ದಾಗ ಖಾಸಗಿಯವರು ವಿಧಿಸುವ ಬಡ್ಡಿ ಚಕ್ರ ಬಡ್ಡಿ, ಮೀಟರ್ ಜೊತೆಗೆ ಮೂಲ ಸಾಲವನ್ನು ತೀರಿಸಲಾಗದೆ ರೈತರು ಆತ್ಮಹತ್ಯೆ ದಾರಿ ಹಿಡಿಯುತ್ತಾರೆ. ಈ ಕಾರಣ ಸಹಕಾರಿ ಬ್ಯಾಂಕ್‌ಗಳಿಂದ ಎಲ್ಲಾ ರೈತರಿಗೆ ಸಾಲಸಿಗುವಂತೆ ಮಾಡುವುದು; ಸಹಕಾರಿ ಸಾಲ ಮನ್ನಾ ಮಾಡಿದಂತೆ ಕೈ ಸಾಲವನ್ನು ಮನ್ನಾ ಮಾಡಲು ಸರ್ಕಾರ ಮುಂದಾಗಿದೆ. (2.8.07)

ರೈತರ ಸಾಲ ಮನ್ನಾ ಘೋಷಣೆಯಲ್ಲಿ ಸರಣಿ ಆತ್ಮಹತ್ಯೆ, ಸಮೂಹಸನ್ನಿಯಾಗಿ ನಡೆಯದಿರಲಿ ಎಂಬ ಇಚ್ಛೆ ಸರ್ಕಾರಕ್ಕಿರಬಹುದು. ಸಹಕಾರಿ ಬ್ಯಾಂಕ್‌ಗಳಲ್ಲಿ, ರೈತರ ಅಲ್ಪಾವಧಿ, ಮಾಧ್ಯಮಾವಧಿ, ಹಾಗೂ ದೀರ್ಘಾವಧಿ ಸಾಲವೆಲ್ಲ ಸೇರಿದರೆ ಸುಮಾರು 7500 ಕೋಟಿ ರೂ. ಅಂದಾಜಾಗುತ್ತದೆ. ಇದಲ್ಲದೆ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿಯ ರೈತರ ಸುಮಾರು 750 ಕೋಟಿ ರೂ. ಸಾಲ ಮನ್ನಾ ಮಾಡಬೇಕೆಂದರೆ ಆ ಹಣವನ್ನೆಲ್ಲ ಸರ್ಕಾರ ತುಂಬಿಕೊಡಬೇಕಾಗುತ್ತದೆ. ಕೃಷಿ ಸಾಲದ ಬಡ್ಡಿ ದರವನ್ನು ಶೇ.4 ರ ದರಕ್ಕೆ ಇಳಿಸಿರುವಲ್ಲಿ ಅದರ 250 ಕೋಟಿ ರೂ.ಗಳ ಹೊರೆಯನ್ನು ಸರ್ಕಾರ ಭರಿಸಬೇಕು. ಸಾಲ ಮರುಪಾವತಿಯಾಗದಿದ್ದರೆ ಬ್ಯಾಂಕ್‌ಗಳು ನಡೆಯುವುದೇ ಕಷ್ಟವಾಗುತ್ತದೆ. ಇದನ್ನೆಲ್ಲ ಭರಿಸಲು ಒತ್ತುವರಿ, ಕಬಳಿಕೆ ಆಗಿರುವ ಭೂಮಿ, ಕೆಲಮಟ್ಟಿನ ಅರಣ್ಯ ಪ್ರದೇಶಗಳನ್ನು ವಶ ಮಾಡಿಕೊಂಡು ಮಾರಿ ಬಂದ ಹಣದಿಂದ ಆಗುತ್ತದೆ ಎಂದರೂ ಅದು ಎಣಿಸಿದಷ್ಟು ಸುಲಭವಾಗದು. ಕಾನೂನು ತೊಡಕುಗಳು ಎದುರಾಗುತ್ತವೆ. ರೈತರು ಸಾಲ ಮನ್ನಾ ಎಂದಾಕ್ಷಣ ಶಕ್ತಿ ಮೀರಿ ಸಾಲಮಾಡುವುದನ್ನು ತಪ್ಪಿಸಬೇಕು. ಸಹಕಾರಿ ಬ್ಯಾಂಕ್‌ಗಳಲ್ಲಿ 50 ಸಾವಿರ ವರೆಗಿನ ರೈತರ ಕೃಷಿ ಸಾಲ ಮನ್ನಾ ಮಾತ್ರ ಎಂದಿದೆ. ಇದಕ್ಕೆ ಪರ್ಯಾಯ ಮಾರ್ಗವಾಗಿ ರೈತರ ಬೆಳೆ ಉತ್ಪನ್ನಗಳಿಗೆ ಸೂಕ್ತ ಮಾರುಕಟ್ಟೆ, ಮಧ್ಯವರ್ತಿಗಳ ನಿಯಂತ್ರಣ, ರಫ್ತು ಸಾಮರ್ಥ್ಯದ ತರಬೇತಿ ನೀಡಿಕೆ, ಸಕಾಲದಲ್ಲಿ ಬೀಜ ಹಾಗೂ ರಸ ಗೊಬ್ಬರ ಪೂರೈಕೆ, ಆಧುನಿಕ ತಂತ್ರಜ್ಞಾನ ಅಳವಡಿಕೆ, ಒಣಬೇಸಾಯಕ್ಕೆ ಒತ್ತು, ನೀರು ಮತ್ತು ವಿದ್ಯುತ್ತಿನ ಸಮರ್ಪಕ ಸರಬರಾಜು, ಇಂಗುಗುಂಡಿ, ಚೆಕ್‌ಡ್ಯಾಂಗಳ ನಿರ್ಮಾಣ ಮಳೆ ಕುಯ್ಲು ಮಾಡುವಿಕೆ ಇತ್ಯಾದಿಗಳ ಮೂಲಕ ರೈತರ ಸಮಸ್ಯೆಗೆ ಪರಿಹಾರ ಕಲ್ಪಿಸಬಹುದು ಎಂಬ ಸಲಹೆಗಳೂ ಇವೆ. ಆದರೆ ಇವೆಲ್ಲ ಕೆಲಮಟ್ಟಿಗೆ ಚಾಲೂ ಆಗಿದ್ದರೂ ಪೂರ್ಣ ಪರಿಹಾರ ಕಂಡಿಲ್ಲ. ಇದಕ್ಕೆ ಸಾಮೂಹಿಕ ಸ್ಪಂದನ ಎಲ್ಲ ವಲಯಗಳಲ್ಲಿ ಜಾಗೃತಗೊಂಡರೆ ಸಹ ಬಾಳ್ವೆಯ ನೈತಿಕ ನೆಲೆ ಗರಿಗಟ್ಟಿದಷ್ಟೂ ಪರಿಹಾರ ಹೆಚ್ಚು ನೇರ್ಪುಗೊಳ್ಳುತ್ತದೆ. ಕೈಗಾರಿಕಾ ಹಿಂತೆಗೆತದ ಪ್ರಕ್ರಿಯೆಗೆ ತಡೆಯೊಡ್ಡಿ, ಖಾಸಗಿ ವಲಯದ ಹೂಡಿಕೆಗೆ ಹಾಗೂ ಸುಧಾರಣಾ ನೀತಿಯನ್ನು ಅಳವಡಿಸಿಕೊಳ್ಳಬೇಕು. ಅಲ್ಲಿ ಜಾಗತಿಕ ಗುಣಮಟ್ಟದ ಉದ್ಯಮ ಸ್ಥಾಪನೆಗೆ ಗಮನ ಹರಿಸಬೇಕು. ರಿಯಲ್ ಎಸ್ಟೇಟ್ ಕಂಪೆನಿಗಳಿಗೆ ಭೂ ಕಬಳಿಕೆಗೆ ಅವಕಾಶ ಕೊಡಬಾರದು. ರೈತರಿಗೆ ಸೂಕ್ತ ಪರಿಹಾರ, ಸೂಕ್ತ ಪುನರ್ವಸತಿ, ಮೂಲ ಸೌಕರ್ಯ ಒದಗಣೆ, ಪರಿಸರ ಪರಿಣಾಮ ಗಮನಿಸಿ ಉದ್ಯಮಗಳ ಸಮರ್ಪಕ, ಸಮ್ಮತ ಬೆಳವಣಿಗೆಗೆ ಅವಕಾಶವಾಗಬೇಕು.

ಇಂದಿನ ಎಪಿಎಂಸಿ ಮಾರುಕಟ್ಟೆ ವ್ಯವಸ್ಥೆ ರೈತ ಮಿತ್ರನಾಗಿಲ್ಲ ಎಂಬ ಆಕ್ಷೇಪ ಇದೆ. ರೈತರ ಉತ್ಪನ್ನಗಳ ವರ್ಗೀಕರಣ, ಶೀಥಲೀಕರಣ ವ್ಯವಸ್ಥೆಯ ಕೊರತೆ ಕಾರಣ ಪರ್ಯಾಯ ಮಾರುಕಟ್ಟೆಯತ್ತ ರೈತರ ಒಲವಾಗಿದೆ. ಸರ್ಕಾರ ಬೆಂಬಲ ಬೆಲೆ ಘೋಷಿಸಿದ ಮೇಲೆ, ವರ್ತಕರು ಅದಕ್ಕಿಂತ ಕಡಿಮೆ ಬೆಲೆಯಲ್ಲಿ ಖರೀದಿ ಮಾಡದಂತೆ ನೋಡಿಕೊಂಡರೆ, ರೈತರಿಗೆ ನ್ಯಾಯ ದೊರಕುತ್ತದೆ. ಎಪಿಎಂಸಿ ಯಲ್ಲಿ ವರ್ತಕರ ಏಕಸ್ವಾಮ್ಯ ತಪ್ಪುತ್ತದೆ. ನಮ್ಮಲ್ಲಿ ಇರುವ ರೈತರಲ್ಲಿ ಮುಕ್ಕಾಲು ಭಾಗ ಸಣ್ಣ ಮತ್ತು ಅತಿ ಸಣ್ಣ ರೈತರು ಅವರು ಬಹುರಾಷ್ಟ್ರೀಯ ಕಂಪೆನಿಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಎದುರಿಸುವುದು ಸುಲಭವಲ್ಲ. ಅಂತಾಗಿ ಸಮುದಾಯಗಳಾಗಿ ನಿಂತು, ಗುಣಮಟ್ಟದ ಇಳುವರಿ ಕೊಟ್ಟು ಉತ್ತಮ ಬೆಲೆ ಪಡೆಯಬೇಕು; ರೈತ ತನ್ನ ಉತ್ಪನ್ನಕ್ಕೆ ಉತ್ತಮ ಮಾರುಕಟ್ಟೆ ಬೇಕೆನ್ನುತ್ತಾನೆ. ಸಬ್ಸಿಡಿಗಿಂತ ಅದು ಅವನಿಗೆ ಮುಖ್ಯ. ಈ ದೃಷ್ಟಿಯಿಂದ ಎಪಿಎಂಸಿ ಕಾಯಿದೆಗೆ ತಿದ್ದುಪಡಿ ತಂದರೆ ಬದಲಾವಣೆಗೆ ನಾಂದಿ ಎಂಬ ಅಭಿಪ್ರಾಯ ಕೃಷಿ ಬೆಲೆ ಆಯೋಗದ ಅಧ್ಯಕ್ಷ ಪ್ರೊ॥ ಬಿಸಲಯ್ಯ ಅವರದು. ಇದಲ್ಲದೆ ರೈತರ ಆತ್ಮಹತ್ಯೆ ತಡೆ ಮತ್ತು ಕೃಷಿ ಸಾಲದ ಬಗ್ಗೆ ಸಮಗ್ರ ನೀತಿ ನಿರೂಪಿಸುವ ಅಗತ್ಯವಿದೆ. ದೇಶದ ಆಹಾರ ಭದ್ರತೆ, ಬ್ಯಾಂಕ್‌ಗಳ ನೀತಿ, ಕೃಷಿ ಸಂಶೋಧನೆ ಹಾಗೂ ವಿವಿಧ ನಿಧಿಗಳ ಬಳಕೆ ಕುರಿತು ಸಮಗ್ರ ವರದಿ ನೀಡಲು ಪ್ರಧಾನಿಯವರು ಡಾ.ಎಂ.ಎಸ್.ಸ್ವಾಮಿನಾಥನ್ ಅವರ ನೇತೃತ್ವದ ಸಮಿತಿಯನ್ನು ರಚಿಸಿದ್ದಾರೆ. ಈ ವರದಿ ಕಾರ್ಯಾನುಷ್ಠಾನ ಗೊಂಡಾಗ ಅದರ ಸಾಧಕ – ಬಾಧಕಗಳೂ ತಿಳಿಯುತ್ತವೆ.

ಬರಗಾಲದಲ್ಲಿ ರೈತರು ಅನುಭವಿಸಿದ ನಷ್ಟಕ್ಕೆ ರೈತರಿಗೆ ಬೆಳೆ ವಿಮೆ ಪರಿಹಾರ ಸಿಗದಿದ್ದರೆ ಪ್ರಯೋಜನವೇನು? ಈ ಸಂದರ್ಭದಲ್ಲಿ ರೈತರ ಪರವಾಗಿ ರಾಜ್ಯ ಗ್ರಾಹಕರ ವೇದಿಕೆಯಲ್ಲಿ ವಾದಿಸಿ 1 ಕೋಟಿ ರೂ. ಬೆಳೆವಿಮೆ ಪರಿಹಾರ ಪಡೆದದ್ದು ಇದೆ. ರಾಜ್ಯ ಗ್ರಾಹಕ ಆಯೋಗ ರೈತರ ಪರವಾಗಿ ಕೊಟ್ಟ ಈ ತೀರ್ಪಿನಿಂದ 1400 ರೈತರಿಗೆ ಲಾಭವೂ ಆಯಿತು.

ರಾಜ್ಯದ 400 ಹೋಬಳಿ ಕೇಂದ್ರಗಳಲ್ಲಿ ನೆಮ್ಮದಿ ಯೋಜನೆಯನ್ನು ಸರ್ಕಾರ ಪ್ರಾರಂಭಿಸಿದೆ. ಈ ಕೇಂದ್ರಗಳಲ್ಲಿ ಪಹಣಿ, ಜನನ, ಮರಣ, ಆದಾಯ, ಜಾತಿ ಪ್ರಮಾಣ ಪತ್ರ, ವೃದ್ಧಾಪ್ಯ ಮತ್ತು ವಿಧವಾ ವೇತನ ಹಾಗೂ ಸಮಾಜ ಕಲ್ಯಾಣ ಇಲಾಖೆಯ ಮಾಹಿತಿಗಳನ್ನು ನೀಡಲಾಗುವ ಬಗ್ಗೆ ಕಂದಾಯ ಸಚಿವ ಶ್ರೀ ಜಗದೀಶ್ ಶೆಟ್ಟರ್ ತಿಳಿಸಿದ್ದಾರೆ. ಇದು ಗ್ರಾಮೀಣ ರೈತರಿಗೆ ಅನುಕೂಲಕರ ವಿದ್ಯಮಾನ ಸರಿ.

ಆದರೆ ಈ ಯೋಜನೆಯನ್ನು ಎಲ್ಲೆಡೆಯಲ್ಲಿ ಪ್ರಾರಂಭಿಸುವುದು ವಿಳಂಬವಾಗದೆ ರೈತರಿಗೆ ದಕ್ಕಿದರೆ ಅನುಕೂಲಕರವಾದೀತು.

ಪ್ರಧಾನಿ ಡಾ. ಮನಮೋಹನ್‌ಸಿಂಗ್ ಅವರು, ಆಗಸ್ಟ್ 2007ರ ಮೊದಲ ವಾರದಲ್ಲಿ ಕೃಷಿರಂಗದ ಪ್ಯಾಕೇಜ್ ಅನುಷ್ಠಾನದ ಕುರಿತು ಮೌಲ್ಯ ಮಾಪನದ ಸಂದರ್ಭದಲ್ಲಿ ವಿಧಾನಸೌಧದಲ್ಲಿ ಮಾತನಾಡುತ್ತ ಕೃಷಿಯ ವಾರ್ಷಿಕ ಬೆಳವಣಿಗೆಯನ್ನು ಹಾಲಿ ಇರುವ ಶೇ.2.5 ರಿಂದ ಶೇ.4.5ಕ್ಕೆ ಹೆಚ್ಚಿಸುವಂತೆ ತಿಳಿಸಿದ್ದಾರೆ. ಇದು 11ನೇ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ರಾಜ್ಯದಲ್ಲಿ ಆಗಬೇಕಾದ ಕಾರ್ಯ. ದೇಶದ ಕೃಷಿ ಬೆಳವಣಿಗೆಗೆ 25 ಸಾವಿರ ಕೋಟಿ ರೂ. ಮೀಸಲಿರುವಲ್ಲಿ ಕರ್ನಾಟಕಕ್ಕೆ ಅಗತ್ಯವಿರುವ ಹಣಕಾಸಿನ ನೆರವು ನೀಡುವ ಬಗ್ಗೆ ಹೇಳಿದ್ದಾರೆ. ಈ ಸಂದರ್ಭದಲ್ಲಿ 18 ಅಂಶಗಳ ಕೃಷಿ ಸೂತ್ರವನ್ನು ನೀಡಿದ್ದಾರೆ. ಆ ಗೊತ್ತುವಳಿಗಳೆಂದರೆ: ರಾಷ್ಟ್ರೀಯ ಆಹಾರ ಭದ್ರತಾ ಕಕ್ಷೆಗನುಗುಣವಾಗಿ ಹೆಚ್ಚುವರಿಯಾಗಿ 10 ಲಕ್ಷ ಟನ್ ಭತ್ತ 4 ಲಕ್ಷ ಟನ್ ಬೇಳೆ ಕಾಳು, 5 ಲಕ್ಷ ಟನ್ ಮೆಕ್ಕೆ ಜೋಳ, 9 ಲಕ್ಷ ಟನ್ ಎಣ್ಣೆಕಾಳು ಬೆಳೆಯುವುದು; ಜಿಲ್ಲಾವಾರು ಕೃಷಿ ಯೋಜನೆಗೆ ಕೇಂದ್ರದಿಂದ ಹಣಕಾಸಿನ ನೆರವು; ಹಿಂದುಳಿದ ಪ್ರದೇಶ ಅಭಿವೃದ್ಧಿ ನಿಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯ ನಿಧಿಯನ್ನು ಜಾನುವಾರು, ಮೀನುಗಾರಿಕೆ, ಕಿರು ನೀರಾವರಿ ಇತ್ಯಾದಿ ಅಭಿವೃದ್ಧಿ ಯೋಜನೆಗಳಿಗೆ ಸಮರ್ಪಕವಾಗಿ ಬಳಸುವುದು; ಹಾಗೂ ಭೂಸುಧಾರಣೆ ಫಲಾನುಭವಿಗಳನ್ನು ಈ ವ್ಯಾಪ್ತಿಗೆ ಅಡಕಗೊಳಿಸುವುದು; ತೋಟಗಾರಿಕೆ ಉತ್ಪನ್ನಗಳ ರಫ್ತಿಗೆ ಮೂಲಭೂತ ಸೌಕರ್ಯ ಹಾಗೂ ಹನಿನೀರಾವರಿಗೆ ಆದ್ಯತೆ; ಎಪಿಎಂಸಿ ಕಾಯ್ದೆಯ ತಿದ್ದುಪಡಿ ಜಾರಿಗೆ ಕಾಲ ಬದ್ಧತೆ, ಆಧುನಿಕ ಮಾರುಕಟ್ಟೆ ನಿರ್ಮಾಣ (ಟರ್ಮಿನಲ್) ಸಾಲ ಎತ್ತುವಳಿಗೆ ಅವಕಾಶ, ಹುಬ್ಬಳ್ಳಿ, ವಿಜಾಪುರದಲ್ಲಿ ಹೊಸ ಮಾರುಕಟ್ಟೆ ಸ್ಥಾಪನೆ; ಕೃಷಿ ಮಾರುಕಟ್ಟೆ ಮೂಲಭೂತ ಸೌಕರ್ಯದ ಹೆಚ್ಚಳ, ಗ್ರಾಮೀಣ ಮಾರುಕಟ್ಟೆ, ಗೋದಾಮುಗಳನ್ನು ಮೇಲ್ದರ್ಜೆಗೇರಿಸಿ, ಮೀನು, ಮಾಂಸ, ಕುಕ್ಕುಟ ಉತ್ಪನ್ನಗಳಿಗೆ ಹೆಚ್ಚಿನ ಅವಕಾಶ; ರೈತ ಸಂಪರ್ಕ ಕೇಂದ್ರ, ರೈತರ ಕಾಲ್‌ಸೆಂಟರ್‌ಗಳ ಅಭಿವೃದ್ಧಿ, ರೈತರು ಮತ್ತು ಸಿಬ್ಬಂದಿಗೆ ಕೃಷಿ ತರಬೇತಿ ಕೇಂದ್ರಗಳಲ್ಲಿ ಸೂಕ್ತ ತರಬೇತಿ ನೀಡಿಕೆ, ಕೃಷಿ ವಿಶ್ವವಿದ್ಯಾಲಯಗಳಿಂದ ರೈತರಿಗೆ ತಂತ್ರಜ್ಞಾನದ ಅರಿವು; ವೈದ್ಯನಾಥನ್ ಸಮಿತಿಯ ಸಹಕಾರಿ ಕ್ಷೇತ್ರದ ವರದಿಯಂತೆ ನಬಾರ್ಡ್ ಜೊತೆ ಒಪ್ಪಂದ; 16 ಲಕ್ಷ ರೈತರಿಗೆ ಸಾಲ ಸೌಲಭ್ಯ ಒದಗಣೆ; ಉತ್ತಮ ಮಟ್ಟದ ಬೀಜವು (ಭತ್ತ, ಕಾಳು, ಎಳ್ಳು, ಶೇಂಗಾ ಇತ್ಯಾದಿ) ಕೊರತೆಯಾಗದಂತೆ ಪೂರೈಕೆ;

ರಾಷ್ಟ್ರೀಯ ಬೀಜ ನಿಗಮದ ನೆರವು ಪಡೆದು ಬಿತ್ತನೆ ಬೀಜದ ಉತ್ಪಾದನೆಗೆ ಖಾಸಗಿ ಬೀಜ ಕಂಪೆನಿಗಳ ಸಹಭಾಗಿತ್ವ ಪಡೆದು ಉತ್ಪಾದನೆ ಹೆಚ್ಚಿಸುವುದು; ಬಿಟಿ ಕಾಟನ್ ಬೆಳೆಯುವ ಪ್ರದೇಶ ಹೆಚ್ಚುತ್ತಿರುವಲ್ಲಿ ಡಿ.ಎನ್.ಎ. ಫಿಂಗರ್ ಪ್ರಿಂಟ್ ಪ್ರಯೋಗಾಲಯ ಸ್ಥಾಪನೆ ಹಾಗೂ ಬೀಜ ಪರೀಕ್ಷಾ ಪ್ರಯೋಗಾಲಯಗಳ ಹೆಚ್ಚಳ; ಜಿಲ್ಲಾವಾರು ಮಣ್ಣು ಪರೀಕ್ಷಾ ಕೇಂದ್ರ, ಗೊಬ್ಬರ ಪರೀಕ್ಷಾ ಕೇಂದ್ರ ಸ್ಥಾಪನೆ; ನಕಲಿ ಕೀಟನಾಶಕಗಳ ಮಾರಾಟಕ್ಕೆ ತಡೆ; ಸವಳು ಜಮೀನು ಅಭಿವೃದ್ಧಿ ಯೋಜನೆ; 25 ಸಾವಿರ ಹೆಕ್ಟೇರ್ ಕೃಷಿ ಭೂಮಿ ಅಭಿವೃದ್ಧಿ; ಸುವರ್ಣ ಕೃಷಿ ಹೊಂಡ ಯೋಜನೆ ಅಭಿವೃದ್ಧಿ; ಜೈವಿಕ ಇಂಧನ ಅಭಿವೃದ್ಧಿಗೆ ವಿವಿಧ ಸಸ್ಯ ಜಾತಿಯ ಬೆಳವಣಿಗೆ; ಹಾಲು, ಮಾಂಸ, ಕೋಳಿ ಮೊಟ್ಟೆ, ಒಳನಾಡು ಮತ್ತು ಸಮುದ್ರ ಮೀನುಗಾರಿಕೆ ಉತ್ಪನ್ನ ಹೆಚ್ಚಿಸಲು ಕ್ರಿಯಾ ಯೋಜನೆ ಅನುಷ್ಠಾನ, ಇತ್ಯಾದಿಗಳೆ ಆಗಿವೆ. ಈ ಅಂಶಗಳನ್ನು ಗಮನಿಸಿದರೆ ನಮ್ಮ ರೈತರ ಚಳವಳಿಗೆ ಕಾರಣವಾಗಿರುವ ಅನೇಕ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸುವ ಸಾಕಷ್ಟು ಗೊತ್ತುವಳಿಗಳು ಕಾಣಬರುತ್ತವೆ. ಆದರೆ ಅನುಷ್ಠಾನದ ಜಾಗೃತಿಯೇ ಈ ನೀತಿ ಪಾಲನೆಗೆ ಅಡ್ಡಿ ಆತಂಕಗಳನ್ನು ತಡೆಯಬಲ್ಲದು. ಪ್ರಧಾನಿಯವರೇ ಸ್ವಯಂ ಬಂದು ಪ್ಯಾಕೇಜಿನ ಪರಾಮರ್ಶೆಗೆ, ಮೌಲ್ಯ ಮಾಪನಕ್ಕೆ ತೊಡಗಿಕೊಂಡದ್ದು ವಿಶೇಷ ಭರವಸೆ ಹುಟ್ಟಿಸುವಂಥದ್ದಾಗಿದೆ. ರೈತರ ಆತ್ಮಹತ್ಯೆ ಸಂದರ್ಭಕ್ಕೆ ಘೋಷಿತವಾದ ಪ್ಯಾಕೇಜ್ ಬಗ್ಗೆಯೂ ಇಂಥದೇ ಮೌಲ್ಯ ಮಾಪನ ನಿರಂತರ ನಡೆಯಬೇಕಿದೆ. ಈ ದಿಸೆಯಲ್ಲಿ ಭಾರತ ಸರ್ಕಾರದ ಕೃಷಿ ಮತ್ತು ಸಹಕಾರ ಇಲಾಖೆ ರಾಷ್ಟ್ರೀಯ ಕೃಷಿ ವಿಕಾಸ್ ಯೋಜನೆಯಲ್ಲಿ ಕೃಷಿಗೆ ಸಾರ್ವಜನಿಕ ಹೂಡಿಕೆಯ ಹೆಚ್ಚಳ, ಹವಾಮಾನ ತಂತ್ರಜ್ಞಾನ, ನೈಸರ್ಗಿಕ ಸಂಪನ್ಮೂಲ ಲಭ್ಯತೆ, ಸ್ಥಳೀಯ ಅಗತ್ಯಗಳ ಖಚಿತತೆ, ರೈತರಿಗೆ ಗರಿಷ್ಠ ಆದಾಯ ಒದಗಣೆ, ಕೇಂದ್ರದ ನಿಧಿ ನೆರವು ಇತ್ಯಾದಿಗಳ ಉದ್ದೇಶವನ್ನು ಪ್ರಕಟಪಡಿಸಿದೆ; ರಾಷ್ಟ್ರೀಯ ಆಹಾರ ಭದ್ರತಾ ಮಿಷನ್ ಕಾರ್ಯಕ್ರಮದಡಿ ಆಹಾರೋತ್ಪಾದನಾ ಹೆಚ್ಚಳ ಅರ್ಹರೈತರಿಗೆ ಆರ್ಥಿಕ ನೆರವು, ಉತ್ತಮ ಬೀಜ, ಫಾರಂ ಯಂತ್ರೋಪಕರಣ, ಜಲ ವ್ಯವಸ್ಥೆ ಕ್ರಿಮಿನಾಶಕಗಳ ಪರಿಣಾಮಕಾರಿ ಬಳಕೆ, ಕಾರ್ಯಾನುಷ್ಠಾನಗಳ ಪ್ಯಾಕೇಜ್‌ನ ಪ್ರತಿಪಾದನೆ, ಕೃಷಿಕರ ಕ್ಷೇತ್ರ ಶಾಲೆಗಳ ಸಂಘಟನೆ ಇತ್ಯಾದಿಗಳನ್ನು ತನ್ನ ಉದ್ದೇಶಗಳಲ್ಲಿ ಮಂಡಿಸಿದೆ (3.9.07).

ರಾಜ್ಯ ಸರ್ಕಾರವೂ ಕೃಷಿಕರಿಗೂ ಪಿಂಚಣಿ ನೀಡುವ ಕುರಿತು ಚಿಂತನೆ ನಡೆಸುತ್ತಿರುವ ಬಗ್ಗೆ ಉಪಮುಖ್ಯಮಂತ್ರಿ ಶ್ರೀ ಬಿ.ಎಸ್.ಯಡಿಯೂರಪ್ಪ ಹೇಳಿದ್ದಾರೆ.

ಇದು ಕಾರ್ಯಗತವಾದರೆ ಆತ್ಮಹತ್ಯೆಗೊಳ್ಳುವ ರೈತರ ಕುಟುಂಬಗಳಿಗೆ ಎಷ್ಟೋ ನೆಮ್ಮದಿ ಒದಗೀತು. ಮಂತ್ರಾಲಯದ ರಾಘವೇಂದ್ರ ಮಠವೂ ಆತ್ಮಹತ್ಯೆ ಮಾಡಿಕೊಂಡ ರೈತ ಕುಟುಂಬಗಳಿಗೆ ನೆರವು ನೀಡಲು ಮುಂದೆ ಬರುವ, ಆ ರೈತ ಕುಟುಂಬದವರಲ್ಲಿ ಮಾನಸಿಕವಾಗಿ ನಿಮ್ಮೊಂದಿಗೆ ಇದ್ದೇವೆ ಎಂಬ ಭರವಸೆ ನೀಡುವ ನಿಟ್ಟಿನಲ್ಲಿ ಪ್ರಕಟಣೆ ಮಾಡಿದೆ. (28.8.07) ಇದು ಸಾಮಾಜಿಕ ನೆಲೆಯ ರೈತನಿಗೆ, ಆಧ್ಯಾತ್ಮಿಕ ನೆಲೆಯ ಸಾಂತ್ವನ ದೊರಕುವಂಥ ಕ್ರಿಯೆ ಎನಿಸುತ್ತದೆ.

ನೀರಾ ಚಳವಳಿ ಹೋರಾಟಗಾರರು ರಸ್ತೆ ತಡೆ ನಡೆಸಿದಾಗ ಹೂಡಿದ್ದ ಮೊಕದ್ದಮೆಯನ್ನು ವಾಪಸ್ ಪಡೆಯಲು, ಹಾಪ್‌ಕಾಮ್ಸ್ ಸಂಸ್ಥೆಯನ್ನು ರಾಜ್ಯದಾದ್ಯಂತ ವಿಸ್ತರಿಸಲು ರಾಜ್ಯ ಸಂಚಿವ ಸಂಪುಟ ನಿರ್ಧರಿಸಿರುವುದು (31.8.07), ರೈತ ಸಾಂತ್ವನ ಕ್ರಿಯೆಗಳಿಗೆ ಮೊತ್ತಗೊಳ್ಳುವ ಪ್ರಯತ್ನ ಬಿಂದುಗಳೆನಿಸುತ್ತವೆ.

ಇತ್ತೀಚಿನ ವರದಿಗಳ ಪ್ರಕಾರ, 1980 ರಲ್ಲಿ 745 ಹೋಬಳಿ ಕೇಂದ್ರಗಳಲ್ಲಿ ರೈತ ಸಂಪರ್ಕ ಕೇಂದ್ರಗಳು ಆರಂಭವಾಗಿ, ಕೃಷಿ ಅಧಿಕಾರಿ, ಸಹಾಯಕ ಕೃಷಿ ಅಧಿಕಾರಿ ಕೃಷಿ ಸಹಾಯಕರು ಸೇರಿದಂತೆ ಪ್ರತಿ ದಿನ ಕೇಂದ್ರದಲ್ಲಿ ಈ ಐದೂ ಜನರೂ ಹಾಜರಿದ್ದು ರೈತರ ಸಮಸ್ಯೆಗಳಿಗೆ ಸ್ಪಂದಿಸಿ ಮಾರ್ಗದರ್ಶನ ಮಾಡಬೇಕೆಂದು ಉದ್ದೇಶವಿತ್ತು. ಆದರೆ 27 ವರ್ಷಗಳು ಕಳೆದ ಮೇಲೂ ಸಿಬ್ಬಂದಿಗಳ ಕೊರತೆಯಿಂದಾಗಿ ಆ ಕೇಂದ್ರದಲ್ಲಿ ವೆಬ್‌ಸೈಟ್ ಮೂಲಕ ಮಾಹಿತಿ ನೀಡಲು ಕಂಪ್ಯೂಟರ್‌ಗಳನ್ನು ನೀಡಿದ್ದರೂ, ಅವುಗಳ ಬಳಕೆ ಹಾಗೂ ಅವಲಂಬನೆ ಕುಂಠಿತಗೊಂಡಿದೆ. ಸಂಪರ್ಕ ಕೇಂದ್ರಗಳಿಗೆ ಮುಂಗಾರು ಹಾಗೂ ಹಂಗಾಮುಗಳಲ್ಲಿ ಸಬ್ಸಿಡಿ ದರದಲ್ಲಿ ಬಿತ್ತನೆ ಬೀಜ, ಗೊಬ್ಬರ, ಔಷಧಿ ಪಡೆಯಲು ಮಾತ್ರ ಬರುತ್ತಾರೆ. ಉಳಿದ ಹತ್ತು ತಿಂಗಳು ಕಾಲ ಕೇಂದ್ರದತ್ತ ತಿರುಗಿ ನೋಡುವುದಿಲ್ಲ. ಕೃಷಿ ಇಲಾಖೆಯ ಪೂರ್ಣ ಹೊಣೆಗೇ ಈ ಕೇಂದ್ರಗಳು ಸೀಮಿತಗೊಂಡಿವೆ. ಇತರ ಇಲಾಖೆಗಳ ಸಂಪರ್ಕಗಳು. ಇವುಗಳೊಡನೆ ಹೊಂದಿಕೊಂಡಿಲ್ಲ ಎಂಬ ಅಭಿಪ್ರಾಯವನ್ನು ಆರ್.ತಾರಾನಾಥ್ ವ್ಯಕ್ತ ಮಾಡಿದ್ದಾರೆ (27.9.07); ರೈತರ ನೆರವಿಗಾಗಿ ಇರುವ ರೈತ ಸಂಪರ್ಕ ಕೇಂದ್ರಗಳು ರೈತರನ್ನು ಆಕರ್ಷಿಸುವಲ್ಲಿ ವಿಫಲವಾಗುವ ಬದಲು, ಮಾಹಿತಿ, ತರಬೇತಿ, ವಿಚಾರ ವಿನಿಮಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡ ವರ್ಷಪೂರ್ತಿ ರೈತರ ಆಗುಹೋಗುಗಳಿಗೆ ಸ್ಪಂದಿಸಿದರೆ ಕೇಂದ್ರಗಳ ಸ್ಥಾಪನೆಯ ಉದ್ದೇಶ ಅರ್ಥಪೂರ್ಣವಾಗಿ ಮುಂದುವರಿಯುತ್ತದೆ. ಈ ದಿಸೆಯಲ್ಲಿ ರೈತರು ಹಾಗೂ ಅಧಿಕಾರಿ ವಲಯಗಳ ಸೌಹಾರ್ದ ಸಂಬಂಧ ಬೆಳೆದಷ್ಟೂ, ಕೃಷಿಯ ಆಯಾಮ ವಿಸ್ತರಿಸಬಲ್ಲದು.

ಹೀಗೆ ರೈತ ಸಾಂತ್ವನ ನೆಲೆಗಳು ಬಹುಮುಖಿಯಾಗಿದ್ದು, ಆ ಬಗ್ಗೆ ಸಾಮಾಜಿಕ, ಸಾಂಸ್ಕೃತಿಕ, ಸಮಾಧಾನಗಳನ್ನು ಮೂಡಿಸಿದಷ್ಟೂ ಐತಿಹಾಸಿಕ ಆಗುತ್ತದೆ ಆಯಾ ವರ್ತಮಾನದಲ್ಲಿ ಅವು ತಮಗೆ ಸೂಕ್ತವಾದ ಸಮಾಧಾನವನ್ನು ಆಯ್ಕೆ ಮಾಡಿಕೊಳ್ಳುತ್ತವೆ; ಇದೊಂದು ನಿರಂತರ ಪ್ರಕ್ರಿಯೆ. ಇವುಗಳ ಆಯಾಮ ವಿಸ್ತಾರವಾಗುತ್ತಲೇ ಹೋಗಿರುವುದು ಮುಂದಿನ ಅಧ್ಯಾಯಗಳಲ್ಲಿ ಇನ್ನಷ್ಟು ಉದಾಹರಣೆಗಳಿಂದಲೂ ವ್ಯಕ್ತವಾಗುತ್ತದೆ.

ಸಾಂತ್ವನ ತತ್ಕಾಲ ಘೋಷಣೆ ಅಲ್ಲ, ತತ್ಕಾಲದ ಪ್ರಯತ್ನಕ್ಕೆ ಮೀಸಲಿಲ್ಲ. ರೈತವರ್ಗದ ದೈನಂದಿನ ಸಮಸ್ಯೆಗಳಿಗೆ ಸರ್ಕಾರವೊಂದೇ ಪರಿಹಾರ ಮಾರ್ಗದರ್ಶಕವಾದರೆ ಪ್ರಯೋಜನವಾಗದು. ಹಾಗೆಂದು ಸರ್ಕಾರ ನಿರ್ಲಕ್ಷಿತ ಕಾಳಜಿ ತೋರುವಂತಿಲ್ಲ. ಅದರ ಪ್ರಯತ್ನಕ್ಕೆ ಸಾಮಾಜಿಕ ಸಹಕಾರ ಸಿಗಬೇಕು. ಸಾರ್ವಜನಿಕ ಅದರವೂ ದೊರೆಯಬೇಕು. ರೈತರ ಸ್ವಯಂ ಪ್ರೇರಿತ ಪ್ರಯತ್ನಗಳೂ ಬೇಕು. ಆಡಳಿತ ಮಾನವ ಘಟಕಗಳು, ಅಧಿಕಾರಿ ವಲಯವೂ ಈ ಸಾಂತ್ವನ ಕ್ರಿಯೆಗಳ ಚಾಲನೆಯಲ್ಲಿ ನಿಷ್ಠಾಮಗ್ನ ವಾಗಬೇಕು. ಮಾಧ್ಯಮಗಳು, ಮೊದಲಿಗಿಂತ ಈಗ ಕೃಷಿ ವಲಯದ ಮಾಹಿತಿಗಳನ್ನು, ಲೇಖನಗಳನ್ನೂ, ವರದಿಗಳನ್ನು ಪ್ರಕಟಿಸುತ್ತಿರುವುದೂ ಸಾಂತ್ವನ ದರ್ಶನಕ್ಕೆ ಸಹಾಯಕಾರಿಯಾಗಿದೆ. ಇದು ಸರ್ವಕಾಲ ನಡೆಯುತ್ತ ಬರುವುದೂ ಸಾಂತ್ವನ ಸೌಹಾರ್ದದ ಸಾಕ್ಷಿಯಾಗಬಲ್ಲದು.

# ಅಧ್ಯಾಯ–22

## ರೈತ ಚಳುವಳಿ ಪೂರಕ ವಿಷಯಗಳು; ಈಚಿನ ಬೆಳವಣಿಗೆಗಳು (ಜಲವಿವಾದ, ಕೃಷಿ ಸಮಸ್ಯೆಗಳು, ಹೋರಾಟಗಳು, ಸಾಂತ್ವನ ಸ್ವರೂಪಗಳು)

**ವಿಷಯ 1** : ಜಲವಿವಾದಗಳು

ಜಲವಿವಾದ ವಲಯಕ್ಕೆ ಸಂಬಂಧಿಸಿದಂತೆ ಬೆಳಗಾವಿ ಜಿಲ್ಲೆಯಲ್ಲಿ ಹುಟ್ಟುವ ಮಹದಾಯಿ ನದಿ, ಸಕಲೇಶಪುರದ ಬಳಿಯ ಪಶ್ಚಿಮಘಟ್ಟಗಳೊಳಗಿನ ಗುಂಡ್ಯ ಜಲವಿದ್ಯುತ್ ಯೋಜನೆ; ಗುಲ್ಬರ್ಗ ಮತ್ತು ಬಿಜಾಪುರ ಜಿಲ್ಲೆಯ ಬದುಕಿನ ಜೀವ ಜಲ ಭೀಮಾನದಿ ಸಂರಕ್ಷಣೆ ಕುರಿತು ರೈತವಲಯದ ಅಹವಾಲುಗಳಿವೆ.

**ಮಹದಾಯಿ ನದಿ** : ಕರ್ನಾಟಕದ ಪಶ್ಚಿಮಘಟ್ಟ ಪ್ರದೇಶವಾದ ಬೆಳಗಾವಿ ಜಿಲ್ಲೆ ಖಾನಾಪುರ ತಾಲ್ಲೂಕು ಜಾಂಬೋಟಿ ಅರಣ್ಯದಲ್ಲಿ ಹುಟ್ಟುವ ಕಳಸ ಬಂಡೂರ, ಸಾಲವಿ, ಜಿತೂರಿ ಇತ್ಯಾದಿ ಹನ್ನೊಂದು ಕಿರುಹಳ್ಳಗಳ ಕೂಟ ಮಹದಾಯಿ ನದಿ; ಇದು ಗೋವಾದವರ ಬಾಯಲ್ಲಿ 'ಮಾಂಡವಿ' ಎನಿಸಿಕೊಂಡಿದೆ. ಗುಡ್ಡಗಾಡು ನಿವಾಸಿಗಳಿಗೆ ಮಹಾತಾಯಿ ಆಗಿರುವ ಈ ಬೃಹತ್ ನದಿ 162 ಕಿ.ಮೀ. ಹರಿದು ಅರಬ್ಬಿ ಸಮುದ್ರ ಸೇರುತ್ತದೆ. ಆದರೆ ಸುಮಾರು ಇನ್ನೂರು ಟಿ.ಎಂ.ಸಿ ನೀರು ಅರಬ್ಬಿಸಮುದ್ರಕ್ಕೆ ಸುಮ್ಮನೆ ಸೇರಿಹೋಗುತ್ತದೆ. ಹೇರಳ ವೈವಿಧ್ಯಮಯ ಜೀವ ಸಂಕುಲ, ಸಸ್ಯಮೂಲಿಕಾ ಮಾದರಿಗಳಿಂದ ತುಂಬಿದ ಪ್ರದೇಶದಿಂದ ಬರುವ ಈ ಮಹಾದಾಯಿಯ ಕಳಸ ಬಂಡೂರಿ ಹಳ್ಳಗಳ ಪಾತ್ರವನ್ನು ತಿರುವಿ ಮಲಪ್ರಭೆಗೆ ಜೋಡಿಸುವುದು, ಹುಬ್ಬಳ್ಳಿ, ಧಾರವಾಡ ನಗರಕ್ಕೆ ಸೇರಿದಂತೆ 36 ಪಟ್ಟಣ ಗ್ರಾಮಗಳಿಗೆ ಕುಡಿಯುವ ನೀರು ಪೂರೈಸುವ ಯೋಜನೆಯ ಕಳಸ ಬಂಡೂರಿ ಯೋಜನೆ ಎನಿಸಿದೆ. 2002ರಲ್ಲಿ ಸಚಿವ ಎಚ್.ಕೆ. ಪಾಟೀಲರಿಂದ ರೂಪುಗೊಂಡ ಈ ಯೋಜನೆಯು ಕಳಸದಿಂದ 4 ಟಿ.ಎಂ.ಸಿ ಬಂಡೂರದಿಂದ 3.56 ಟಿ.ಎಂ.ಸಿ ನೀರು ಪಡೆಯಲನುಕೂಲಿಸುವ 100 ಕೋಟಿ ರೂ.ಗಳ ತಿರುವು ಯೋಜನೆಯೂ ಆಗಿದೆ. ಕುಡಿವ ನೀರಿನ ಯೋಜನೆ ಆಗಿದ್ದರೂ ಗೋವಾರಾಜ್ಯದ ವಿರೋಧದಿಂದಾಗಿ ವಿವಾದಕ್ಕೆ ಸಿಲುಕಿದೆ. ಆದರೆ ಗೋವಾ ಮತ್ತು ಮಹಾರಾಷ್ಟ್ರದ ಗಡಿಯ 'ಕಿಲಾರಿ'ಯ ಬಳಿ ಮಹಾರಾಷ್ಟ್ರ ಸರ್ಕಾರ ಈ ನದಿ ನೀರು ಬಳಸಿ 400 ಮೆಗಾವಾಟ್ ಜಲವಿದ್ಯುತ್ ಯೋಜನೆ ರೂಪಿಸಿರುವುದಕ್ಕೆ ಗೋವಾಕ್ಕೆ ಒಪ್ಪಿದೆ ಇದೆ. ಪರಿಸರವಾದಿಗಳಾದರೋ ಅಪರೂಪದ ಜೀವ ಸಂಕುಲ ಸಸ್ಯ ಸಂಪತ್ತಿಗೆ ಈ ನದಿ

ಜೀವನಾಧಾರವಾಗಿರುವಲ್ಲಿ ಅವನ್ನು ಹಾಳು ಮಾಡಬಾರದೆಂದಿದ್ದಾರೆ. ಇದರಿಂದ ರಾಷ್ಟ್ರಕ್ಕೆ ಬೃಹತ್ ಸಂಪನ್ಮೂಲವಾಗಲಿದ್ದ 3 ಬೃಹತ್ ಯೋಜನೆಗಳಿಗೆ ಹಿನ್ನಡೆಯಾಗಿದೆ. ನರಗುಂದ ರೈತ ಬಂಡಾಯದ ಬಳಿಕ ಸುದೀರ್ಘ ಹಾಗೂ ಅಷ್ಟೇ ವ್ಯಾಪಕ ಹೋರಾಟಕ್ಕೆ ಕಾರಣವಾಗಿರುವ ಯೋಜನೆ ಇದಾಗಿದೆ. ಜನತೆ ಈ ನೀರು ನಮ್ಮ ಹಕ್ಕು ಎಂದು ಗಂಭೀರವಾಗಿ ಪರಿಗಣಿಸಿಬಿಟ್ಟಿದೆ. ಕಳಸ ಬಂಡೂರಿ ಯೋಜನೆಗೆ ಹಿಂದಿನ ಸರ್ಕಾರದ ತಡೆಯಾಜ್ಞೆ ಕೊಟ್ಟಾಗ ಮಲಪ್ರಭಾ ಅಚ್ಚುಕಟ್ಟು ಪ್ರದೇಶದ ಸವದತ್ತಿ, ರಾಮದುರ್ಗ, ನರಗುಂದ, ನವಲಗುಂದ, ಹುಬ್ಬಳ್ಳಿ–ಧಾರವಾಡ, ಕುಂದಗೋಳ, ರೋಣ, ಗದಗ, ಬಾದಾಮಿ ತಾ. ಜನತೆ ಎಚ್ಚತ್ತು ಹೋರಾಟ ಶುರುಮಾಡಿದರು. 2002 ರಿಂದ 2004ರವರೆಗೆ ಏಕಪ್ರಕಾರ ಹೋರಾಟ ನಡೆಸುತ್ತ ನವಲುಗುಂದ ಕಳಸದವರೆಗೆ ಪಾದಯಾತ್ರೆ ಮಾಡುತ್ತ ರೈತರು ನಮ್ಮ ನೆಲ ನಮ್ಮ ನೀರು ಎಂಬ ಘೋಷಣೆಯೊಡನೆ ಹೋರಾಟ ನಡೆಸಿದರು. ಈ ಯೋಜನೆಯ ಅನುಷ್ಠಾನದಲ್ಲಿ ಪ್ರಗತಿ ಕಂಡಿಲ್ಲ. ಗಮನವೆಲ್ಲ ನ್ಯಾಯಾಧಿಕರಣದತ್ತ ಸಾಗಿದೆ. ಮಂಜೂರಾತಿಗೆ ಸರ್ವಪ್ರಯತ್ನ ನಡೆಯಬೇಕಿದೆ ಎಂಬುದು ಮಲ್ಲಿಕಾರ್ಜುನ ಸಿದ್ದಣ್ಣವರ್ ಪೂರಣ ಮಾಡಿರುವ ಮಾಹಿತಿಯಲ್ಲಿದೆ (12.12.2009) ಗೋವಾ ಸರ್ಕಾರದ ಒತ್ತಡಕ್ಕೆ ಮಣಿದು ಮಹಾದಾಯಿ ನೀರಿನ ಹಂಚಿಕೆ ಕುರಿತಂತೆ ವಿಷಯ ಸುಪ್ರೀಂಕೋರ್ಟಿನ ಮುಂದಿರುವಾಗ ಈ ಕುಡಿವ ನೀರಿನ ಯೋಜನೆ ಪ್ರಗತಿಯಲ್ಲಿರುವಾಗ ನ್ಯಾಯಾಧಿಕರಣ ರಚನೆಯು, ಅಗತ್ಯವಿರಲಿಲ್ಲ ಎಂಬುದು ಕರ್ನಾಟಕದ ನಿಲುವಾಗಿತ್ತು.

**ಕಳಸಾ ಬಂಡೂರಿ** ಯೋಜನೆ ಅಂತಿಮ ಹಂತದಲ್ಲಿರುವ ಸಂದರ್ಭದಲ್ಲಿ ಆರುವರ್ಷ ಕಾಲ ಸುಮ್ಮನಿದ್ದು ಈಗ ಹಠಾತ್ತನೆ ಕೇಂದ್ರ ಸರ್ಕಾರದ ನ್ಯಾಯಮಂಡಳಿ ರಚನೆ ಸೂಕ್ತವಾಗಲಿಲ್ಲ ಎಂಬುದು ಉತ್ತರ ಕರ್ನಾಟಕದ ನಾಯಕರ ನಿಲುವಾಗಿತ್ತು. ಕೇಂದ್ರ ಸರ್ಕಾರ ಸರ್ವೋನ್ನತ ನ್ಯಾಯಾಲಯಕ್ಕೆ ಪ್ರಮಾಣ ಪತ್ರ ಸಲ್ಲಿಸದೆ. ಮಾತುಕತೆಯಲ್ಲಿ ಪರಿಹಾರಗೊಳ್ಳಬಹುದಾಗಿದ್ದ ವಿಷಯವಿದು. ಗೋವಾ ಸರ್ಕಾರದ ಒತ್ತಡದಿಂದಾಗಿ, ನ್ಯಾಯಮಂಡಳಿ ರಚಿಸಿದೆ. ಅದನ್ನು ರಚಿಸಲಿ, ಅಭ್ಯಂತರವಿಲ್ಲ. ಆದರೆ ಮಧ್ಯಂತರ ಪರಿಹಾರವಾಗಿ ರಾಜ್ಯದ ಪಾಲಿನ 7.5 ಟಿ.ಎಂ.ಸಿ ಅಡಿ ನೀರನ್ನು ಕೊಟ್ಟು ನಂತರ ನ್ಯಾಯಮಂಡಳಿ ರಚಿಸಲಿ ಎಂಬ ಅಭಿಪ್ರಾಯ ಸಂಸದ ಶ್ರೀ ಪ್ರಲ್ಹಾದ ಜೋಶಿ ಅವರದಾಗಿತ್ತು. ಮಹಾದಾಯಿ ನದಿಯು ಸುಮಾರು 200 ಟಿ.ಎಂ.ಸಿ ನೀರು ಸಮುದ್ರದ ಪಾಲಾಗುತ್ತಿರುವಲ್ಲಿ ಆ ಪೈಕಿ 7.5 ಟಿ.ಸಿ.ಎಂ ನೀರು ಮಾತ್ರ ಬೇಕಾಗಿದೆ. ಇದನ್ನು ಕುಡಿಯುವ ನೀರಿಗೆ ಬಳಸಿಕೊಳ್ಳಲು ಯೋಜನೆ

ರೂಪಿಸಿದೆ. ಇದಕ್ಕೆ ಸಹಕರಿಸುವಂತೆ, ಗೋವಾ ಮುಖ್ಯಮಂತ್ರಿಗೆ ಮನವಿ ಮಾಡಿರುವ ಬಗ್ಗೆ ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪ ತಿಳಿಸಿದರು.

ಶ್ರೀ ಎಚ್.ಕೆ. ಪಾಟೀಲರು ಕೇಂದ್ರ ಸರ್ಕಾರ ಅಧಿಸೂಚನೆ ಹೊರಡಿಸುವ ಮುನ್ನ ನ್ಯಾಯಮಂಡಳಿ ನಿಬಂಧನೆಗಳು ರೂಪುಗೊಳ್ಳುವ ಮುನ್ನ, ಮುಖ್ಯಮಂತ್ರಿಗಳ ನೇತೃತ್ವದಲ್ಲಿ ಸರ್ವಪಕ್ಷ ನಿಯೋಗವು ರಾಜ್ಯ ಸರ್ಕಾರ ಸಿದ್ಧಪಡಿಸಿದ ಪ್ರತಿಪಾದನೆಯನ್ನು ಪ್ರಧಾನಿಯವರ ಮುಂದಿಡಬೇಕು ಎಂದರು. ಕಳೆದ ಎರಡು ವರ್ಷಗಳಿಂದ ಈ ಕೆಲಸ ಆಗಿಲ್ಲ ಈಗಲಾದರೂ ರಾಜ್ಯಕ್ಕೆ ದೊರೆಯಬೇಕಾದ ನೀರಿನ ಪ್ರಮಾಣವನ್ನು ಕೇಂದ್ರ ಸರ್ಕಾರದ ಮುಂದೆ ಸೂಕ್ಷ್ಮವಾಗಿ ಮಂಡಿಸಲು ಎಂದು ಒತ್ತಾಯವಿಟ್ಟರು ಕಾನೂನು, ಖಾತೆ, ಮಾಜಿಸಚಿವ ಶ್ರೀ ಬಸವರಾಜ ಹೊರಟ್ಟಿ ಅವರು ಮಹಾರಾಷ್ಟ್ರ ಮತ್ತು ಗೋವಾ ರಾಜ್ಯಗಳು ಒಂದಾಗಿ ನ್ಯಾಯಮಂಡಳಿ ರಚನೆಗೆ ಒತ್ತಾಯಹಾಕಿ ನಮಗೆ ದೊರಕಬೇಕಾದ ನೀರಿಗೆ ಅಡ್ಡ ಬಂದಿವೆ ಎಂದರು. ಕಳಸ ಬಂಡೂರಿ ಹೋರಾಟ ಸಮಿತಿ ಅಧ್ಯಕ್ಷ ಬಿ.ವಿ. ಸೋಮಾಪುರ ಅವರು ನಮ್ಮ ಪಾಲಿನ 7.5 ಟಿ.ಎಂ.ಸಿ ಅಡಿ ನೀರನ್ನು ಮೊದಲು ಒದಗಿಸಲು ನ್ಯಾಯಮಂಡಳಿ ಅನುಕರಿಸಲಿ ಎಂದು ಅಭಿಪ್ರಾಯಪಟ್ಟರು. ಇದೇ ಸಮಿತಿಯ ಎನ್.ಎಚ್. ಕೋನರೆಡ್ಡಿ ಅವರು ನಮ್ಮ ಪಾಲಿನ ನೀರನ್ನು ಕೊಟ್ಟರೆ ಮಾತ್ರ ನ್ಯಾಯಮಂಡಳಿ ರಚನೆಗೆ ರಾಜ್ಯ ಸರ್ಕಾರ ಸಹಮತ ವ್ಯಕ್ತಪಡಿಸಲಿ ಎಂದು ಸಲಹೆ ಮಾಡಿದರು (13.12.2009). ಇದೇ 13.1.2010 ರಂದು ಕೇಂದ್ರಕ್ಕೆ ರಾಜ್ಯವು ಸರ್ವಪಕ್ಷ ನಿಯೋಗವನ್ನು ಒಯ್ಯಲೆಳಸಿತು.

ಗುಂಡ್ಯ ಜಲವಿದ್ಯುತ್ ಯೋಜನೆ 20 ವರ್ಷಗಳ ಮುಂಚೆಯೆ ಸಕಲೇಶಪುರದ ಪಶ್ಚಿಮಘಟ್ಟದೊಳಗಣ ಗುಂಡ್ಯ ಬಳಿ 1119.56 ಕೋಟಿ. ರೂ ಅಂದಾಜು ವೆಚ್ಚದಲ್ಲಿ ಜಾರಿಗೊಳಿಸಲು ರಾಜ್ಯ ಸರ್ಕಾರ ಉದ್ದೇಶಿಸಿದ ಯೋಜನೆ ಆಗಿತ್ತು. ಭೂಸರ್ವೆಗೆ ಕೇಂದ್ರದ ಅನುಮತಿಯನ್ನು ಪಡೆದುಕೊಂಡಿತ್ತು. 774 ಹೆಕ್ಟೇರ್ ಅರಣ್ಯ ವ್ಯಾಪ್ತಿಯ ಈ ಪ್ರದೇಶದಲ್ಲಿ 102 ಹೆಕ್ಟೇರ್ ಕೃಷಿ ಭೂಮಿ ಇದೆ. 209 ಕುಟುಂಬಗಳು 12 ಗ್ರಾಮಗಳು ಇಲ್ಲಿದ್ದು ಅವೆಲ್ಲ ಈ ಯೋಜನೆ ಜಾರಿ ಆದರೆ ತಮ್ಮ ಇಲ್ಲಿನ ಅಸ್ತಿತ್ವವನ್ನು ಕಳೆದುಕೊಳ್ಳುತ್ತವೆ. ಇಲ್ಲಿದ್ದ ದಟ್ಟಕಾಡಿನ ಸು. 1ಲಕ್ಷ ಎಕರೆ ಕಾಡಿನ ವಿಸ್ತೀರ್ಣ 8 ಸಾವಿರ ಚ.ಕಿ.ಮೀ ವಿಸ್ತೀರ್ಣಕ್ಕೆ ಕ್ಷೀಣಿಸಿದ ಅ ಸಂಖ್ಯ ಜೀವ ವೈವಿಧ್ಯಕ್ಕೆ ಹಾನಿ ಆಗಿದೆ. ಯೋಜನೆಗಾಗಿ ಕೊರೆಯುವ ಸುರಂಗದಿಂದ ಪಶ್ಚಿಮಘಟ್ಟಗಳ ಶಿಲಾಪದರಕ್ಕೆ ಹಾನಿ ಆಗುತ್ತದೆ. ಸಸ್ಯರಾಶಿ ನೀರಿನಲ್ಲಿ

ಮುಳುಗುವುದರಿಂದ ಆಮ್ಲಜನಕ ಉತ್ಪಾದನೆ ಕುಸಿದು ಜೀವಿಗಳಿಗೆ ತೊಂದರೆ ಆಗುತ್ತದೆ. ಇತ್ಯಾದಿ ವಾದಗಳೂ ಇಲ್ಲಿ ಕಾಣುತ್ತವೆ. ಸರ್ಕಾರದ ದೃಷ್ಟಿಯಿಂದ ವಿದ್ಯುತ್ ಕ್ಷಾಮ ನಿವಾರಣೆ, ಹೆಚ್ಚು ಕಾಡುಗಳ ನಿರ್ವಹಣೆ, ಸ್ಥಳೀಯರಿಗೆ ಉದ್ಯೋಗ ಲಭ್ಯತೆ ನಿರಂತರ ವಿದ್ಯುತ್ ಸರಬರಾಜಿನಿಂದ ಕೈಗಾರಿಕಾ ಅಭಿವೃದ್ಧಿ ಕಾರಣವಾಗುತ್ತದೆ ಎಂಬುದಿದೆ. ಭೂ ಸರ್ವೇಕಾರ್ಯ ಮುಗಿದು ಮೇ, 3. 2009ರಂದು ಯೋಜನೆ ಕಾಮಗಾರಿ ಆರಂಭಕ್ಕಾಗಿ ಮುಖ್ಯಮಂತ್ರಿಗಳು ಭೂಮಿ ಪೂಜೆಯನ್ನು ಮಾಡಿದರು. ಆದರೆ ಕಾಮಗಾರಿ ಆರಂಭಿಸಲು ಅನುಮತಿ ನೀಡಿಲ್ಲ. ಯೋಜನೆ ಆರಂಭಿಸುವುದು ಬೇಡವೆಂದು ಕೇಂದ್ರವೂ, ರಾಜ್ಯಕ್ಕೆ ಸೂಚಿಸಿದೆ. ಸ್ಥಳೀಯರ ಪ್ರತಿಭಟನೆಯೂ ಇದೆ ಎನ್ನಲಾಗಿದೆ. ಮುಖ್ಯವಾಗಿ ಒಟ್ಟು 1002 ಮೆಗಾವ್ಯಾಟ್ ವಿದ್ಯುತ್ ಉತ್ಪಾದನೆ ಆಗಿ ವಿದ್ಯುತ್ ಅಭಾವ ನೀಗುತ್ತದೆ. ಎಂಬುದಲ್ಲದೆ, ಸಂತ್ರಸ್ತ ರೈತರಿಗೆ ಶೇ. 100ರಷ್ಟು ಪುನರ್ವಸತಿ ಕಲ್ಪಿಸಲಾಗುತ್ತದೆ ಎಂದೂ ರಾಜ್ಯ ಸರ್ಕಾರ ಹೇಳಿದೆ. ಈಚಿನ ಬೆಳವಣಿಗೆಯಲ್ಲಿ ಯೋಜನಾ ಪ್ರದೇಶದಲ್ಲಿ ಮರಗಣತಿಗೆ ಮುಖ್ಯಮಂತ್ರಿಗಳಿಂದ ನಿರ್ದೇಶನವಾದರೂ ತಾಂತ್ರಿಕ ಕಾರಣಗಳಿಂದಾಗಿ ಸಾಧ್ಯವಾಗಿಲ್ಲ. ಯೋಜನೆಯ ಅನುಷ್ಠಾನಕ್ಕೆ ವಿವಾದ ಕೇಂದ್ರ ಸರ್ಕಾರದ ನೆಲೆಯಲ್ಲಿದೆ. ನ್ಯಾಯಾಲಯದಲ್ಲಿಯೂ ಇದೆ. ಕೇಂದ್ರ ಅರಣ್ಯ ಮತ್ತು ಪರಿಸರ ಸಚಿವಾಲಯದ ಒಪ್ಪಿಗೆ ಇಲ್ಲದೆ ಮರಗಣತಿ ಸಾಧ್ಯವಿಲ್ಲ ಎಂದು ರಾಜ್ಯ ಪ್ರಧಾನ ಸಂರಕ್ಷಣಾಧಿಕಾರಿ ತಿಳಿಸಿರುವುದುಂಟು. ಇದರಿಂದ ಗುಂಡ್ಯಾ ಜಲವಿದ್ಯುತ್ ಯೋಜನಾ ಪ್ರದೇಶದಲ್ಲಿ ಕಡಿಯಬಹುದಾದ ಮರಗಳ ಗಣತಿಗೆ ರಾಜ್ಯ ವಿದ್ಯುತ್ ಪ್ರಸರಣ ನಿಗಮ ಮಾಡಿದ್ದ (ಕೆಪಿಸಿಎಲ್) ಮನವಿ ಸಫಲವಾಗಿಲ್ಲ. ಮಲೆನಾಡು ಜನಪದ ಹೋರಾಟ ಸಮಿತಿಯೂ ಈ ದಿಸೆಯಲ್ಲಿ ಆಕ್ಷೇಪ ವ್ಯಕ್ತಪಡಿಸಿದೆ. ಕೇಂದ್ರ ಅರಣ್ಯ ಮತ್ತು ಪರಿಸರ ಸಚಿವ ಜೈರಾಮ್‌ರಮೇಶ್ ಕೂಡ ಯೋಜನೆಯ ಪರವಾಗಿಲ್ಲ. ಅಂತಾಗಿ ಯೋಜನೆಯ ಅನುಷ್ಠಾನಕ್ಕೆ ಸಿದ್ಧವೆಂದಿರುವ ರಾಜ್ಯ ಸರ್ಕಾರಕ್ಕೆ ಅನುಷ್ಠಾನ ಕಾರ್ಯೋನ್ಮುಖಕ್ಕೆ ಮುಂದಾಗಿರುವ ಕೆಪಿಸಿಎಲ್‌ಗೆ ಕೇಂದ್ರದಲ್ಲಿ ಈ ಯೋಜನೆಯ ಕಡತಗಳಿಗೆ ವಿಮೋಚನೆ ದೊರಕಿಲ್ಲ (31.3.2010)ವಾಗಿ, ಮುನ್ನಡೆ ಆಗಿಲ್ಲ.

ಗುಂಡ್ಯ ಜಲವಿದ್ಯುತ್ ಯೋಜನೆಯಿಂದ ಭೂಸ್ವಾಧೀನವಾಗುತ್ತದೆ ಎಂದು ಮೆಣಸು, ಏಲಕ್ಕಿ, ಭತ್ತದ, ಬೇಸಾಯವನ್ನು ಹತ್ತಾರು ವರ್ಷಗಳಿಂದ ಮಾಡದೆ ಉಳಿದ ಸಕಲೇಶ್ವರಪುರ ತಾಲ್ಲೂಕಿನ ಹೆತ್ತೂರು ಹೋಬಳಿಯ 12 ಗ್ರಾಮಗಳ ರೈತರು ಆಸರೆ ತಪ್ಪುತ್ತಿದ್ದಾರೆ. ಸರ್ಕಾರದ ಮಾಹಿತಿಯೇ ಪ್ರಕಾರವೇ ಸುಮಾರು

209 ಕುಟುಂಬಗಳು ಭೂಮಿಯನ್ನು ಕಳೆದುಕೊಳ್ಳುತ್ತವೆ. ಭೂ ಸರ್ವೇ ನಡೆಸಿ ಜಮೀನು ಸ್ವಾಧೀನ ಮಾಡಿಕೊಂಡು ಸೂಕ್ತ ಪರಿಹಾರ ನೀಡಲಾಗುವುದೆಂದು ಸರ್ಕಾರ ಹೇಳಿದ್ದರೂ ಯೋಜನೆಯಾಗಲಿ ಭೂಸ್ವಾಧೀನ ಪ್ರಕ್ರಿಯೆಯಾಗಲಿ ಕಾರ್ಯೋನ್ಮುಖವಾಗಲಿಲ್ಲ. 1992ರಲ್ಲಿಯೇ ಗುಂಡ್ಯ ಯೋಜನೆಯನ್ನು ಆರಂಭಿಸಲು, ನಕ್ಷೆಯನ್ನು ತಯಾರಿಸಿದರೂ ಸರ್ಕಾರ ಭೂಸ್ವಾಧೀನವನ್ನು ಮಾಡಿಕೊಳ್ಳಲಿಲ್ಲ; ಪರಿಹಾರದ ಹಣವನ್ನು ನೀಡಲಿಲ್ಲ ಎಂದು ಇಲ್ಲಿನ ಕೃಷಿಕರಿಗೆ ಅಸಮಾಧಾನವಿದೆ. ಪರಿಸರವಾದಿಗಳು ಈ ಜಲವಿದ್ಯುತ್ ಯೋಜನೆಯ ಬದಲು ವಿದ್ಯುತ್ ಸೋರಿಕೆಗೆ ತಡೆ, ಸೋಲಾರ್, ಗಾಳಿ ಮತ್ತು ಕಲ್ಲಿದ್ದಲು ಮೂಲಕ ವಿದ್ಯುತ್ ತಯಾರಿಕೆ, ಮಾಡುವ ದಿಕ್ಕಿನಲ್ಲಿ ಸರ್ಕಾರ ಶ್ರಮಿಸುವುದು ಲೇಸು ಎಂದಿರುವ ಬಗ್ಗೆ ದಯಾಶಂಕರ ಮೈಲಿ ಗಮನ ಸೆಳೆಯುತ್ತಾರೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ರೈತರ ಸಮಸ್ಯೆಯನ್ನು ತವಿಸುವ ನಿಟ್ಟಿನಲ್ಲಿ ಹೊಂದಾಣಿಕೆ ಮಾಡಿಕೊಳ್ಳಬೇಕಾಗಿದೆ. ಖ್ಯಾತ ಪರಿಸರವಾದಿ ಸುಂದರ್‌ಲಾಲ್ ಬಹುಗುಣ ಅವರು ಗುಂಡ್ಯ ಯೋಜನೆಯನ್ನು ಖಂಡಿಸಿ ಪರಿಸರವಾದಿಗಳೊಂದಿಗೆ ಹಾಸನದಲ್ಲಿ ಪಾದಯಾತ್ರೆ ಮಾಡಿದರು. ಇಂದಿನ ವೈಭೋಗ ಜೀವನದಿಂದಾಗಿ ಪರಿಸರ ಹಾಳಾಗುತ್ತಿದೆ. ವಿದ್ಯುತ್ ಪಡೆಯಲು ಅಣೆಕಟ್ಟೆ ಕಟ್ಟುವ ಬದಲು ನಿಸರ್ಗದತ್ತವಾಗಿಯೆ ಅವಕಾಶವಿರುವುದನ್ನು ಬಳಸಿಕೊಳ್ಳಬೇಕು. ಪ್ರಕೃತಿಯನ್ನು ಉಳಿಸಿಕೊಂಡೇ ಮಾಡುವ ಅಭಿವೃದ್ಧಿ ಸಹಜವಾದದ್ದು ಎಂದರು.

**ಭೀಮಾನದಿ :** ಭೀಮಾನದಿಯಾದರೋ ಮಹಾರಾಷ್ಟ್ರದಿಂದ ರಾಜ್ಯಕ್ಕೆ ಬಂದು ಕರ್ನಾಟಕದ ವಿಜಾಪುರ ಗುಲ್ಬರ್ಗದ 165 ಹಳ್ಳಿಗಳಿಗೆ ಜೀವನದಿ ಎನಿಸಿದೆ. ಆದರೆ ಮಹಾರಾಷ್ಟ್ರದ ಅಕ್ರಮ ನೀರಾವರಿ ಯೋಜನೆಗಳಿಂದಾಗಿ ಅದರ ಪ್ರವಾಹ ಬತ್ತಿಹೋಗಿದೆ. ಅಂತಾಗಿ ಬಿಜಾಪುರ, ಗುಲ್ಬರ್ಗ ಜಿಲ್ಲೆಯ 165 ಹಳ್ಳಿಗಳ ರೈತರು 2002ರಲ್ಲಿ ನದಿ ಸಂರಕ್ಷಣೆ, ಪರಿಸರ, ಜೀವ ವೈವಿಧ್ಯ ಉಳಿಯಬೇಕೆಂದು ಸರ್ವೋಚ್ಚ ನ್ಯಾಯಾಲಯದಲ್ಲಿ ರೈತರು ಮೊರೆಇಟ್ಟರು. ನ್ಯಾಯಾಲಯವು ಈ ಜನರ ಬೇಡಿಕೆಗೆ ಸ್ಪಂದಿಸಿ, ಮಧ್ಯಂತರ ಆದೇಶ ನೀಡಿ ಜೀವನದಿಯ ಸಂರಕ್ಷಣೆ ಆಯಾ ರಾಜ್ಯ ಸರ್ಕಾರಗಳ ಹೊಣೆ ಎಂದು ಆದೇಶದಲ್ಲಿ ತಳಿಸಿತು. ರಾಜ್ಯ ಸರ್ಕಾರ, ರೈತರ ದಾವೆಯ ಸಂದರ್ಭದಲ್ಲಿ ಅಂದಿನ ರಾಜ್ಯ ಸರ್ಕಾರ ಕೃಷ್ಣಾನದಿ ಅಳವಿಗೆ ಭೀಮಾನದಿಯು ಬರುವಲ್ಲಿ 2ನೇ ಕೃಷ್ಣಾನದಿ ನ್ಯಾಯಾಧಿಕರಣ ರಚನೆಯಿಂದ ಸಮಸ್ಯೆ ಪರಿಹಾರವಾಗುತ್ತದೆ ಎಂದಿತ್ತು. ರೈತರ ದಾವೆಯನ್ನು ನ್ಯಾಯಾಧಿಕರಣಕ್ಕೆ ವರ್ಗಾಯಿಸಲ್ಪಡುವ ಸಂದರ್ಭವನ್ನು ಹೇಳಿತ್ತು. ಇದಕ್ಕೆ ಅನುಗುಣವಾಗಿ ಪರಿಹಾರ

ದೃಢೀಕರಣವನ್ನು ಸಲ್ಲಿಸಿ ಸರ್ವೋಚ್ಚ ನ್ಯಾಯಾಲಯದಿಂದ ದಾವೆಯನ್ನು ನ್ಯಾಯಾಧಿಕರಣಕ್ಕೆ ವರ್ಗಾಯಿಸಲು ಸಮ್ಮತಿ ಕೊಡಲಾಯಿತು. ಹೊಸ ನ್ಯಾಯಾಧಿಕರಣದಲ್ಲಿ ಭೀಮಾ ನೀರಿನ ಪಾಲಿನಲ್ಲಿ ರಾಜ್ಯಕ್ಕೆ ಶೇ. 50 ಮಹಾರಾಷ್ಟ್ರ ಹಾಗೂ ಆಂಧ್ರಕ್ಕೆ ತಲಾ ಶೇ 25ರಷ್ಟು ಹಂಚಿಕೆಯಾಗಬೇಕು; ಸರ್ಕಾರ ಭೀಮಾನದಿ ಪಾತ್ರದಲ್ಲಿ ಯೋಜನೆಗಳನ್ನು ನೀಡಿದ ಸದ್ಬಳಕೆಗೆ ಕೈಗೆತ್ತಿಕೊಳ್ಳಬೇಕು ಎಂಬ ಆಶಯ ಜನತೆಯದಾಗಿತ್ತು. ಆದರೆ ನ್ಯಾಯಧಿಕರಣ ರಚನೆ ಆಗಿ ಎರಡೂವರೆ ವರ್ಷ ಕಳೆದರೂ ರಾಜ್ಯದ ಪಾಲಿನ ನೀರಿನ ಹಕ್ಕಿನ ಸ್ಥಾಪನೆ ಬಗ್ಗೆ ವಾದವು ಮಂಡಿತವಾಗಿಲ್ಲ ಎಂಬುದು ಅಲ್ಲಿನ ರೈತರ ಕೊರಗು. ಸಮರ್ಥ ವಕಾಲತ್ತು ಮಾಡಲು ವಕೀಲ ಅನಿಲ ದಿವಾನ್ ಅವರ ಗಮನಕ್ಕೆ ನದಿ ನೀರಿನ ಹಂಚಿಕೆಯ ವಿಷಯದ ದಾವೆಯನ್ನು ತಂದಿರಲಿಲ್ಲವೆನ್ನಲಾಗಿದೆ. ತಾಂತ್ರಿಕ ಸಮಿತಿಯೂ ತಾಂತ್ರಿಕವಾದವನ್ನು ಮಂಡಿಸುವಲ್ಲಿ ರಾಜ್ಯ ಸರ್ಕಾರದ ಪರವಾದ ಅನಿಸಿಕೆಯನ್ನು ಹೇಳಲಿಲ್ಲ ಎಂಬುದೂ ಇದೆ; ಕೃಷ್ಣಾನದಿ ಪಾಲಿನ ನೀರಿನ ಬಳಕೆಯಲ್ಲಿ ರಾಜ್ಯಕ್ಕೆ ಅಡಚಣೆ ಎದುರಾಗುವ ಸಾಧ್ಯತೆ ಇದೆ, ಎಂದೂ ಅದು ಹೇಳಿದೆ. ಇದು ಭೀಮಾನದಿ ಅಳಿವು ಉಳಿವಿನ ಪ್ರಶ್ನೆಯಾಗಿ ಕಾಡಿದೆ.

**ಕೃಷ್ಣಾನದಿ :** ಮಹಾರಾಷ್ಟ್ರದ ಮಹದೇವ ಬೆಟ್ಟದಲ್ಲಿ ಹುಟ್ಟುವ ಕೃಷ್ಣ 1400 ಕಿ.ಮೀ. ಹರಿಯುವ ಹಾದಿಯಲ್ಲಿ, ಕರ್ನಾಟಕ ಮತ್ತು ಆಂಧ್ರಪ್ರದೇಶವನ್ನು ದಾಟುತ್ತದೆ. ಆಂಧ್ರದ ಬಾಪಟ್ಲಾ ಬಳಿ ಬಂಗಾಳಕೊಲ್ಲಿಯನ್ನು ಸೇರುತ್ತದೆ. ಕರ್ನಾಟಕದ ಘಟಪ್ರಭಾ, ಮಲಪ್ರಭಾ, ತುಂಗಭದ್ರಾ ಭೀಮ ಮತ್ತು ವೇದಾವತಿ ನದಿಗಳು ಇದಕ್ಕೆ ಉಪನದಿಗಳಾಗಿ ಸೇರುತ್ತದೆ. ಕೃಷ್ಣಾ ನದಿ ಕಣಿವೆಯಲ್ಲಿ ಹೆಚ್ಚು ನೀರು ಹರಿಯುವ ಪ್ರದೇಶ (1.11.959 ಚ.ಕಿ.ಮೀ) ಕರ್ನಾಟಕದ್ದೇ ಆಗಿದೆ. ಕ್ಷಾಮ ಪೀಡಿತ ತಾಲೂಕುಗಳು 54 ಇಲ್ಲಿವೆ. 1956ರಲ್ಲಿ ರಾಜ್ಯ ಪುನರ್ವಿಂಗಡನೆಯ ಸಂದರ್ಭದಲ್ಲಿ ಕರ್ನಾಟಕಕ್ಕೆ ಬೊಂಬಾಯಿ ಕರ್ನಾಟಕ ಹಾಗೂ ಹೈದಾರಾಬಾದ್ ಕರ್ನಾಟಕ ಪ್ರದೇಶಗಳು ಸೇರಿದವು. ಆಗ ಆಂಧ್ರಪ್ರದೇಶದ ಅಭಿವೃದ್ಧಿಗೆ ಹೋಲಿಸಿದರು ಅವೆಲ್ಲಾ ಬಹಳ ಕೆಳಸ್ಥಿತಿಯಲ್ಲಿದ್ದವು. ಬೊಂಬಾಯಿ ಸರ್ಕಾರ, ಘಟಪ್ರಭಾ ಕಣಿವೆ ಅಭಿವೃದ್ಧಿಗೆ ಹೈದರಾಬಾದ್ ಸರ್ಕಾರ ಕೃಷ್ಣಾ ಮೇಲ್ದಂಡೆ ಯೋಜನೆ ಭೀಮಾ ಯೋಜನೆಗಳನ್ನು ತಯಾರು ಮಾಡಿತ್ತು. ಆದರೆ ರಾಜ್ಯ ಪುರ್ನವಿಂಗಡನೆಯ ಸಂದರ್ಭದಲ್ಲಿ ಕರ್ನಾಟಕಕ್ಕೆ ಸೇರುವ ಶಂಕೆಯ ಕಾರಣ ಆ ಯೋಜನೆಗಳು ಅಲ್ಲಿ ಜಾರಿಗೊಳ್ಳದೆ ಕರ್ನಾಟಕದ ಹೊಣೆಗೇ ಬಿದ್ದವು. ಅಲ್ಲದೆ ಕೇಂದ್ರ ಜಲ ಅಯೋಗವು ಕೃಷ್ಣಾನದಿ ನೀರನ್ನು ಕಣಿವೆ ರಾಜ್ಯಗಳಿಗೆ ಹಂಚುವಿಕೆಯ ಯೋಜನೆಗೆ ಆಕ್ಷೇಪಣೆ ಎತ್ತಿದವು. ಈ ನಡುವೆ ತುಂಗಭದ್ರಾ

ನೀರಿನ ಹಂಚಿಕೆಯ ಒಪ್ಪಂದದ ಮೇಲೆ ಕರ್ನಾಟಕ, ಆಂಧ್ರದ ಮಧ್ಯೆ ವಿವಾದಗಳಿದ್ದವು. ಆಂಧ್ರವಂತು ಕರ್ನಾಟಕ, ಮಹಾರಾಷ್ಟ್ರಗಳ ವಿರೋಧವನ್ನು ಲೆಕ್ಕಿಸದೆ ನಾಗಾರ್ಜುನ ಸಾಗರ ಮತ್ತು ಶ್ರೀಶೈಲಂ ಯೋಜನೆಗಳನ್ನು ಮುಂದುವರಿಸಿತು. ವಿವಾದವು ಬೆಳೆಯಲಾಗಿ ಕೇಂದ್ರವು ಕೃಷ್ಣಾ ಜಲವಿವಾದ ನ್ಯಾಯಾಧಿಕರಣವನ್ನು ನ್ಯಾ॥ಮೂ॥ ಶ್ರೀ ಬಚಾವತ್ ಅವರ ಅಧ್ಯಕ್ಷತೆಯಲ್ಲಿ 10.4.1969ರಲ್ಲಿ ಅಧಿಸೂಚನೆ ಹೊರಡಿಸಿ ರಚಿಸಿತು. ಕೃಷ್ಣಾ ಕಣಿವೆ ರಾಜ್ಯಗಳು 1894ರಿಂದ 1920ರವರೆಗಿನ ಕೃಷ್ಣಾ ನದಿಯ ಹರಿವಿನ ಬಗ್ಗೆ ವಿವರಗಳನ್ನು ಸಲ್ಲಿಸಿದುವು. ಅವುಗಳನ್ನು ಅನುಲಕ್ಷಿಸಿ ನ್ಯಾಯಾಧಿಕರಣದ ನೀರನ್ನು ಹಂಚಿಕೆಮಾಡಿತು. ಅದು 24.12.1973 ರಲ್ಲಿ ಮೊದಲ ವರದಿಯನ್ನು 23.5.1976ರಲ್ಲಿ ಅಂತಿಮ ವರದಿಯನ್ನು ನೀಡಿತು. 31.5.2976ರಲ್ಲಿ ಆ ಬಗ್ಗೆ ರಾಜ್ಯಪತ್ರದಲ್ಲಿ ಪ್ರಕಟಣೆಯೂ ಆಯಿತು. ನ್ಯಾಯಾಧಿಕರಣವು ಸ್ಕೀಂ 'ಎ' ಹಂತವೆಂದು ನೀರಿನ ಪ್ರಮಾಣವನ್ನು ಮಹಾರಾಷ್ಟ್ರಕ್ಕೆ 560 ಟಿ.ಎಂ.ಸಿ ಕರ್ನಾಟಕಕ್ಕೆ 700 ಟಿ.ಎಂ.ಸಿ ಆಂಧ್ರಕ್ಕೆ 800 ಟಿ.ಎಂ.ಸಿ ಎಂದು ಹಂಚಿಕೆ ಮಾಡಿತು. ಪುನರ್ ಉತ್ಪತ್ತಿಯಾಗುವ ಹೆಚ್ಚು ವರಿ ನೀರಿನ (70 ಟಿ.ಎಂ.ಸಿ) ಹಂಚಿಕೆಯ ನಂತರ ಕೃಷ್ಣಾಕೊಳ್ಳದ ಹೆಚ್ಚುವರಿ ನೀರಿನ ಹಂಚಿಕೆಯನ್ನು ಸ್ಕೀಂ 'ಬಿ' ಹಂತವೆಂದು ಹೇಳಿ ಮಹಾರಾಷ್ಟ್ರಕ್ಕೆ ಶೇ. 25, ಕರ್ನಾಟಕಕ್ಕೆ ಶೆ. 50, ಆಂಧ್ರಕ್ಕೆ ಶೇ. 25 ಎಂದು ನಿಗದಿಪಡಿಸಿತು. ಈ ಬಗ್ಗೆ ಆಂಧ್ರದ ವಿರೋಧ ಬರಲಾಗಿ ಸ್ಕೀಂ 'ಬಿ' ಯಲ್ಲಿನ ಹಂಚಿಕೆಯನ್ನು ಅಂತಿಮ ಆದೇಶದಲ್ಲಿ ಸೇರಿಸಲಿಲ್ಲ.

ಕೃಷ್ಣಾ ಕಣಿವೆಯ ಹೆಚ್ಚುವರಿ ನೀರನ್ನು ಆಂಧ್ರವು, ತೆಲುಗು ಗಂಗಾ, ಶ್ರೀ ಶೈಲಂ ಬಲದಂಡೆ ಎಡದಂಡೆ ಕಾಲುವೆ, ಭೀಮಾ ಏತ ನೀರಾವರಿ ಯೋಜನೆಗಳಿಗೆ ಬಳಸಿಕೊಳ್ಳುವ ಯತ್ನಕ್ಕೆ ಕರ್ನಾಟಕ ಪ್ರತಿರೋಧ ತೋರಿತು. ಅದಕ್ಕೆ ಕೇಂದ್ರವಾಗಲಿ, ಆಂಧ್ರವಾಗಲಿ ಗಮನ ಕೊಡದ ಕಾರಣ ಸರ್ವೋಚ್ಚ ನ್ಯಾಯಾಲಯದಲ್ಲಿ ಕರ್ನಾಟಕವು 1997ರಲ್ಲಿ ದಾವೆ ಹೂಡಿತು.

ಆಲಮಟ್ಟಿ ಅಣೆಕಟ್ಟಿನ ಎತ್ತರವನ್ನು 515 ಮೀ.ಗಿಂತ ಹೆಚ್ಚಾಗಿ ಕರ್ನಾಟಕವು ಎತ್ತರಿಸುವುದನ್ನು ಆಕ್ಷೇಪಿಸಿ ಆಂಧ್ರವು ಸರ್ವೋಚ್ಛ ನ್ಯಾಯಾಲಯಕ್ಕೆ ತಡೆ ಆಜ್ಞೆ ನೀಡಲು ಅರ್ಜಿ ಸಲ್ಲಿಸಿತು. ಹೀಗೆಯೇ ಮಹಾರಾಷ್ಟ್ರವು ತನ್ನಲ್ಲಿಯ ಪ್ರದೇಶ ಆಲಮಟ್ಟಿ ಅಣೆಕಟ್ಟು ಹಿನ್ನೀರಿನಲ್ಲಿ ಮುಳುಗಡೆ ಆಗುವ ಸಂಭವವೆಂದು 9-4-1999 ರಂದು ಅರ್ಜಿಸಲ್ಲಿಸಿತು. ಆದರೆ ಇದಾವುದಕ್ಕೂ ಸರ್ವೋಚ್ಚ ನ್ಯಾಯಾಲಯ ತಡೆ ಆಜ್ಞೆ ನೀಡಲಿಲ್ಲ. ನ್ಯಾಯಾಧಿಕರಣದ ತೀರ್ಮಾನಕ್ಕೆ ವರ್ಗಾಯಿಸಿತು.

ನ್ಯಾಯಾಧಿಕರಣವು, ವಾದಗಳನ್ನು ಪರಿಶೀಲಿಸಿ ಹೆಚ್ಚುವರಿ ನೀರನ್ನು ಬಳಸಿಕೊಳ್ಳಲು ಆಂಧ್ರವು ನಿರ್ಮಿಸುತ್ತಿರುವುದು, ಅರ್ಹವಲ್ಲ, ಕರ್ನಾಟಕ, ಮಹಾರಾಷ್ಟ್ರ ರಾಜ್ಯಗಳು ಆಂಧ್ರದ ಉದ್ದೇಶದ ಬಗ್ಗೆ ಅನುಮಾನಿಸ ಕಾರಣಗಳಿವೆ. ಆಂಧ್ರವು ಹೆಚ್ಚುವರಿ ನೀರನ್ನು ಬಳಸಿಕೊಳ್ಳಲು ಹೊಸ ಯೋಜನೆಗಳನ್ನು ಆರಂಭಿಸುವ ಮೊದಲು ಕರ್ನಾಟಕ, ಮಹಾರಾಷ್ಟ್ರ ಹಾಗೂ ನ್ಯಾಯಾಧಿಕರಣದ ಗಮನಕ್ಕೆ ತರಬೇಕು. ಹಾಗೆ ಮಾಡದಿದ್ದರೆ ಆ ರಾಜ್ಯಗಳು ಹೆಚ್ಚುವರಿ ನೀರನ್ನು ಬಳಸಲು ಅರ್ಜಿ ಸಲ್ಲಿಸಿದರೆ ನ್ಯಾಯಾಧಿಕರಣವು ಆ ಕಣಿವೆ ರಾಜ್ಯಗಳಿಗೆ ಹಂಚಲು ಪರಿಗಣಿಸುತ್ತದೆ. ಮಧ್ಯಂತರ ಪರಿಹಾರವನ್ನು ನೀಡುವುದಿಲ್ಲ, ಎಂದೆಲ್ಲ ತಿಳಿಸಿತು. ಅಂತೂ ನ್ಯಾಯಮಂಡಳಿಯು ತನ್ನ ಕೊನೆಯ ವರದಿಯನ್ನು ನೀಡುವವರಿವಿಗೆ ಕಾದುನೋಡಲಾಯಿತು. ನೆರೆಹೊರೆ ರಾಜ್ಯಗಳ ನಡುವೆ ಸೌಹಾರ್ದಯುತ ಸಂಬಂಧಗಳನ್ನಿರಿಸಿಕೊಳ್ಳಲು, ರಾಷ್ಟ್ರೀಯ ಹಿತಾಸಕ್ತಿಯನ್ನು ಅನುಲಕ್ಷಿಸಿ ಕಣಿವೆ ಪ್ರದೇಶದ ಎಲ್ಲಾ ರಾಜ್ಯಗಳಲ್ಲೂ ಸಮಾನ ನೀರಾವರಿ ಅಭಿವೃದ್ಧಿಯಾಗಬೇಕೆಂದು ಆಶಯವನ್ನಿಟ್ಟುಕೊಂಡು ಜಲವಿವಾದಗಳನ್ನು ಮಾತುಕತೆಗಳ ಮೂಲಕ ಪರಿಹರಿಸಿಕೊಳ್ಳುವುದು ಸೂಕ್ತವೆನಿಸುತ್ತದೆ.* ಎಂಬ ಅಭಿಪ್ರಾಯ ಸಮುಚಿತವೆನಿಸುತ್ತದೆ.

ಇಲ್ಲಿ ಸರ್ಕಾರಿ ಮಟ್ಟದಲ್ಲಿ ವಿವಾದಗಳು ಎದುರುಬದುರಾದರೂ, ಅವುಗಳಿಗೆ ಕಾರಣವಾಗಿದ್ದ ರೈತಾಪಿ ಸಂಕಷ್ಟಗಳನ್ನು ರೈತರ ಅಹವಾಲನ್ನು, ಪ್ರತಿಭಟನೆಗಳನ್ನು, ಚಳುವಳಿಗಳ ಮೂಲಕ ಸರ್ಕಾರದ ಮುಂದೆ ಇಟ್ಟದ್ದನ್ನು ಗಮನಿಸಬೇಕು. ರೈತರು ಮುಖ್ಯವಾಗಿ ಈ ಸಮಸ್ಯೆಗಳಲ್ಲಿ ಸಿಲುಕಿದವರೆ. ಕುಡಿವ ನೀರಿನ ಸಮಸ್ಯೆಯ ಸಂದರ್ಭದಲ್ಲಿ ರೈತೇತರ ಜನತೆಯೂ ಸಹಜವಾಗಿ ಪಾಲುಗೊಂಡವರೆ ಆಗಿದ್ದಾರೆ.

**ದಂಡಾವತಿ ಅಣೆಕಟ್ಟು ಯೋಜನೆ :** ಶಿವಮೊಗ್ಗ ಜಿಲ್ಲೆಯ ದಂಡಾವತಿ ಅಣ್ಣೆಕಟ್ಟು ಯೋಜನೆಯಿಂದ ಸೊರಬ ತಾಲೂಕಿನ ನೀರಾವರಿ ಹಾಗೂ ಕುಡಿಯುವ ನೀರಿನ ಸಮಸ್ಯೆ ನೀಗುತ್ತದೆ. ಸುಮಾರು ಒಂದೂವರೆ ಸಾವಿರ ಎಕರೆ ಕೃಷಿ ಭೂಮಿ ಹಾಗೂ ಕೆಲವು ಗ್ರಾಮಗಳು ಮುಳುಗಡೆ ಆಗುತ್ತವೆ. ಆದರೆ ಅಪಾರ ಪ್ರಮಾಣದ ನೀರಾವರಿಗೆ ಅನುಕೂಲವಾಗುತ್ತದೆ. ಭೂಮಿ ಕಳೆದುಕೊಳ್ಳುವವರಿಗೆ ಸೂಕ್ತ ಪರಿಹಾರ ನೀಡಲಾಗುವುದು ಎಂದು ಸರ್ಕಾರದ ಪ್ರತಿಪಾದನೆ ಇದೆ. ದಂಡಾವತಿ ಚಿಕ್ಕನದಿ ಆಗಿದ್ದು ಅಣೆಕಟ್ಟು ನಿರ್ಮಿಸುವಷ್ಟು ನೀರಿನ ಲಭ್ಯತೆ ಇಲ್ಲ.

---

* ಎಂ. ಶ್ಯಾಮಲದೇವಿ, 'ಜಲವಿವಾದಗಳು', **ಅಭಿವೃದ್ಧಿ ಪಥ,** (ಸಂ) ಪ್ರೊ॥ ಹಿ.ಚಿ. ಬೋರಲಿಂಗಯ್ಯ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, 2007, ಪು-399.

ಬ್ಯಾರೇಜ್ ನಿರ್ಮಾಣಕ್ಕೆ ಮಾತ್ರ ಅವಕಾಶವಿದೆ. ಇದರಿಂದ ಸಹಸ್ರಾರು ಎಕರೆ ಫಲವತ್ತಾದ ಭೂಮಿ ಮುಳುಗಡೆಯನ್ನು ತಪ್ಪಿಸಬಹುದು ಎಂಬ ಪ್ರತಿಪಾದನೆಯೂ ಇದೆ. ದಂಡಾವತಿ ಯೋಜನೆಯನ್ನು ವಿರೋಧಿಸಿ ಶಿವಮೊಗ್ಗ ಜಿಲ್ಲೆ 'ಸೊರಬ ತಾಲೂಕಿನ ರೈತಪರ ಹೋರಾಟ ಸಮಿತಿ'ಯ ನಾಯಕರು ರಾಜಭವನಕ್ಕೆ (19.3.10) ಹೋಗಿ ಯೋಜನೆಯನ್ನು ಸ್ಥಗಿತಗೊಳಿಸುವಂತೆ ರಾಜ್ಯಸರ್ಕಾರಕ್ಕೆ ನಿರ್ದೇಶನ ನೀಡಲು ಕೋರಲಿದ್ದಾರೆ ಎಂದು ವರದಿಗೊಂಡಿದೆ. ಆಹಾರ ಮತ್ತು ನಾಗರಿಕ ಸರಬರಾಜು ಸಚಿವ ಹರತಾಳು ಹಾಲಪ್ಪನವರು ರಾಜ್ಯಪಾಲರಿಗೆ ಮನವಿ ಕೊಡಲಿ ಅದು ಬೇರೆ ವಿಚಾರ. ಸದ್ಯ ಯೋಜನೆಗೆ ಅಗತ್ಯವಾದ ಭೂಸ್ವಾಧೀನ ಪ್ರಕ್ರಿಯೆ ಅಂತಿಮ ಹಂತದಲ್ಲಿದೆ ಎಂದು ತಿಳಿಸಿದ ಬಗ್ಗೆ ವರದಿ ಆಗಿದೆ (28.3.10). ತತ್ಕಾಲಕ್ಕೆ ಈ ಯೋಜನೆ ಜಾರಿಗಿಲ್ಲ ಎಂದು ಮುಖ್ಯಮಂತ್ರಿಯವರು ತಿಳಿಸಿದ ಬಗ್ಗೆ 24.4.10ರ ಬಾನುಲಿ ವಾರ್ತೆ ಬಿತ್ತರಿಸಿದೆ.

**ವಿವಾದಿತ ಹೊಗೇನಕಲ್ ಯೋಜನೆ ಕಾಮಗಾರಿ** : ಹೊಗೇನಕಲ್ ಕುಡಿಯುವ ನೀರಿನ ಯೋಜನೆ ವಿವಾದಿತವಾದದ್ದು. ಕಾರಣ ಕರ್ನಾಟಕ ಮತ್ತು ತಮಿಳುನಾಡು ಉಭಯ ರಾಜ್ಯಗಳ ನಡುವಣ ಗಡಿರೇಖೆ ಸ್ಪಷ್ಟವಾಗಿಲ್ಲ, ಗುರುತಿಸಿಲ್ಲ. ಅಂತಾಗಿ ಈ ಯೋಜನೆಗೆ ಕರ್ನಾಟಕ ಸರ್ಕಾರ ಆಕ್ಷೇಪವೆತ್ತಿದೆ. ಮೂಲ ಯೋಜನೆಯ ರೀತ್ಯಾ ಈ ಯೋಜನೆಗೆ ಬಳಸುತ್ತಿದ್ದ ನೀರಿನ ಪ್ರಮಾಣ 1.4 (ಸಾವಿರ ದಶಲಕ್ಷ ಘನ ಅಡಿಗಳು) ಟಿ.ಎಂ.ಸಿ.ಎಫ್.ಟಿ.ಗಳು ಈಗಿನ ವಾಸ್ತವ ಬಳಕೆ 2.1 ಟಿ.ಎಂ.ಸಿ.ಎಫ್.ಟಿ.ಗಳಾಗಿವೆ. ಧರ್ಮಪುರಿ ಜಿಲ್ಲೆಯ ಶೇ. 34ರಷ್ಟು ಭಾಗ ಮಾತ್ರ ಕಾವೇರಿ ಕಣಿವೆಗೆ ಸೇರುತ್ತದೆ. ಉಳಿದ ಪ್ರದೇಶ ದಕ್ಷಿಣ ಪೆನ್ನಾರ್ ಕಣಿವೆಯಲ್ಲಿದೆ. ಕರ್ನಾಟಕಕ್ಕೆ ಸಂಬಂಧಿಸಿದಂತೆ ಬೆಂಗಳೂರಿನ ಎಲ್ಲ ಪ್ರದೇಶವೂ ಕಾವೇರಿ ಕಣಿವೆಯಲ್ಲಿಲ್ಲ ಎಂದು ತಮಿಳುನಾಡು ನಮ್ಮಲ್ಲಿಯ ಕುಕಡಿಯುವ ನೀರು ಪೂರೈಕೆ ಯೋಜನೆಗೆ ಅಡ್ಡಿಯಾಗಿತ್ತು. ಅದೇ ತಮಿಳುನಾಡು ಅಪೂರ್ಣವಾಗಿ ಕಾವೇರಿ ಕಣಿವೆಯಲ್ಲಿರುವ ಧರ್ಮಪುರಿ ಜಿಲ್ಲೆಯಲ್ಲಿ ಇಂಥ ಕುಡಿಯುವ ನೀರಿನ ಯೋಜನೆಯನ್ನು ಕೈಗೆತ್ತಿಕೊಂಡದ್ದಕ್ಕೆ ಕೇಂದ್ರ ಸರ್ಕಾರ ಅಧಿಕೃತ ಮುದ್ರೆ ಒತ್ತಿದ್ದು. ಕರ್ನಾಟಕಕ್ಕೆ ನ್ಯಾಯ ಒದಗಿಸಿದಂತಾಗಲಿಲ್ಲ. ಮೂಲ ಯೋಜನೆಯಲ್ಲಿ ಧರ್ಮಪುರಿ ಜಿಲ್ಲೆಯ 30 ಲಕ್ಷ ಫಲಾನುಭವಿಗಳಿಗೆ ಕುಡಿಯುವ ನೀರು ಪೂರೈಕೆ ಎನ್ನಲಾಗಿತ್ತು. ಈಗ ನೆರೆಯ ಕೃಷ್ಣಗಿರಿ ಜಿಲ್ಲೆಯನ್ನು ಈ ಯೋಜನೆಯ ವ್ಯಾಪ್ತಿಗೆ ತಂದು ಫಲಾನುಭವಿಗಳ ಸಂಖ್ಯೆಯನ್ನು 45 ಲಕ್ಷಕ್ಕೆ ಏರಿಸಿಕೊಳ್ಳಲಾಗಿದೆ. ತಮಿಳುನಾಡು ಸರ್ಕಾರ ಜಪಾನಿನ ಅಂತಾರಾಷ್ಟ್ರೀಯ ಸಹಕಾರಿ ಸಂಘಟನೆ ಜೆಐಸಿಎನ ಸಹಯೋಗದಲ್ಲಿ 1334 ಕೋಟಿ ರೂ. ವೆಚ್ಚದ ಅಂದಾಜಿನ ಹೊಗೇನಕಲ್ ಯೋಜನೆಗೆ

2009ರ ಫೆಬ್ರುವರಿಯಲ್ಲಿ ಕೇಂದ್ರ ಸರ್ಕಾರ ಅಧಿಕೃತ ಮುದ್ರೆಯೊತ್ತಿದೆ. ತಮಿಳುನಾಡು ಸರ್ಕಾರ, ಕರ್ನಾಟಕ ಕೇಳಿರುವ ಯೋಜನೆಯ ಸ್ಪಷ್ಟ ಚಿತ್ರಣ ನೀಡಬೇಕಾದ ಮುನ್ನವೇ ಕಾಮಗಾರಿಯನ್ನು ಶುರುಮಾಡಿದೆ. ತನ್ನ ಬಜೆಟ್‌ನಲ್ಲಿ 400 ಕೋಟಿ ರೂ.ಗಳನ್ನು ಯೋಜನೆಗೆ ನಿಗದಿಪಡಿಸಿ ವಿಧಾನಸಭೆಯಲ್ಲಿ ಬಜೆಟ್ ಮಂಡಿಸಿದ್ದು, 2012ರ ಡಿಸೆಂಬರ್ ಒಳಗೆ ಪೂರ್ಣಗೊಳಿಸುವುದಾಗಿ ಘೋಷಿಸಿದೆ. ಯೋಜನೆ ಮತ್ತು ತಮಿಳುನಾಡು ಸರ್ಕಾರದ ಪ್ರಸ್ತಾವದ ದಾಖಲೆ ಪರಿಶೀಲಿಸಿದ ಬಳಿಕ ಸೂಕ್ತ ಹೆಜ್ಜೆ ಇಡಲಾಗುವುದು. ವಿವಾದವನ್ನು ಮಾತುಕತೆಯ ಮೂಲಕ ಪರಿಹರಿಸಿಕೊಳ್ಳಲಾಗುವುದು ಎಂಬುದು ಕರ್ನಾಟಕ ಸರ್ಕಾರದ ಮಾತು.

ತಮಿಳುನಾಡು ಸರ್ಕಾರ ನಮ್ಮ ರಾಜ್ಯದ ಹಲವು ಯೋಜನೆಗಳಿಗೆ ಅಡ್ಡಿ ಪಡಿಸುತ್ತ ಬಂದಿದೆ. ಗಡಿ ಸರ್ವೆಗೆ ಒತ್ತಾಯಿಸುತ್ತ ಬಂದಿದ್ದರೂ ಅದು ಮುಂದಾಗುತ್ತಿಲ್ಲ. ಗಡಿ ವಿವಾದ ಇತ್ಯರ್ಥವಾಗುವವರೆವಿಗೂ ಹೊಗೇನಕಲ್ ಕುಡಿಯುವ ನೀರು ಯೋಜನೆಗೆ ಅನುಮತಿ ನೀಡಬಾರದೆಂದು ಕೇಂದ್ರ ಜಲಸಂಪನ್ಮೂಲ ಸಚಿವರಲ್ಲಿ ಒತ್ತಾಯಿಸುವ ಬಗ್ಗೆ ಚಾಮರಾಜನಗರ ಸಂಸದ ಧ್ರುವನಾರಾಯಣ್ ತಿಳಿಸಿದ್ದುಂಟು. ಹೊಗೇನಕಲ್ ಅಭಿವೃದ್ಧಿ ಹೋರಾಟ ಸಮಿತಿ ಅಧ್ಯಕ್ಷ ಕೆ. ವೀರಭದ್ರಸ್ವಾಮಿ ಅವರು ಹೊಗೇನಕಲ್ ಗಡಿರೇಖೆ ಗುರುತಿಸಿಲ್ಲವಾದ ಕಾರಣ ಆ ಯೋಜನೆಯನ್ನು ಕೈಗೆತ್ತಿಕೊಳ್ಳಲು ಮುಂದಾದರೆ ನಾವು ಸಹಿಸೆವು. ಉಪಗ್ರಹ ಆಧರಿತ ಸರ್ವೇ ನಡೆಸಿ ವಿವಾದ ಬಗೆಹರಿಸಬೇಕು ಎಂಬ ಸಲಹೆಯನ್ನು ಮುಂದಿಟ್ಟು ಹೋರಾಟದ ಜಾಗೃತಿಯನ್ನು ತೋರಿದ್ದಾರೆ (28.3.10) ಚಾಮರಾಜನಗರದಿಂದ ದೆಹಲಿಗೆ ತೆರಳಿದ್ದ ಜಿಲ್ಲಾ ಕನ್ನಡ ಸಂಘಟನೆಗಳ ಒಕ್ಕೂಟದ ಸದಸ್ಯರೊಡಗೂಡಿ ಮಾತನಾಡಿದ ಅಧ್ಯಕ್ಷ ಶಾ. ಮುರಳಿ ಅವರು ಹೊಗೇನಕಲ್ ಜಂಟಿ ಸರ್ವೇ ಮಾಡಬೇಕೆಂದು ಒತ್ತಾಯಿಸಿ, ಪ್ರತಿಭಟನೆ ನಡೆಸಿ ಪ್ರಧಾನಮಂತ್ರಿ ಮತ್ತು ರಾಷ್ಟ್ರಪತಿಗಳಿಗೆ ಮನವಿ ಸಲ್ಲಿಸಲಾಗಿತ್ತು; ಆದರೆ ಯಾವುದೇ ಕ್ರಮಕೈಗೊಳ್ಳದೆ ತಮಿಳುನಾಡಿನಿಂದ ಬರುವ ಎಲ್ಲಾ ಪ್ರಸ್ತಾಪಗಳಿಗೆ ಅನುಮೋದನೆ ನೀಡಿರುವಲ್ಲಿ ಕರ್ನಾಟಕದ ಜನರಿಗೆ ಅನ್ಯಾಯವಾಗಿದೆ ಎಂದು ಆರೋಪಿಸಿದರು.

ಹೊಗೇನಕಲ್ ಜಲಯೋಜನೆ ವಿವಾದದ ಸಂಬಂಧ ಉಭಯ ರಾಜ್ಯ ಸರ್ಕಾರಗಳ ಮುಖ್ಯ ಕಾರ್ಯದರ್ಶಿಗಳ ಮಟ್ಟದ ಸಭೆ ನಡೆಯಲು ತಮಿಳುನಾಡು ಸಮ್ಮತಿ ತೋರಿದೆ ಎಂದು ಉನ್ನತ ಮೂಲಗಳಿಂದ ತಿಳಿದುಬಂತು. ಸರಿ. ರಾಜ್ಯದ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ, ಜಲಸಂಪನ್ಮೂಲ ಸಚಿವ ಬಸವರಾಜ

ಬೊಮ್ಮಾಯಿ ಈ ದಿಸೆಯಲ್ಲಿ ಕೇಂದ್ರ ಸರ್ಕಾರ ಮಧ್ಯೆಪ್ರವೇಶಿಸಿ ವಿವಾದವನ್ನು ಬಗೆಹರಿಸಬೇಕು ಎಂದು ಒತ್ತಾಯಿಸಿದ್ದಾರೆ. ತಮಿಳುನಾಡಿನೊಡನೆ ಸೌಹಾರ್ದ ಸಂಬಂಧ ಸ್ಥಾಪಿಸುವ ಸಾಂಸ್ಕೃತಿಕ ಪ್ರಯತ್ನ ಮಾಡಿದ್ದ ಕರ್ನಾಟಕದ ನಿರೀಕ್ಷೆಗೆ ವಿರುದ್ಧವಾಗಿ ತಮಿಳುನಾಡು ಸರ್ಕಾರ ನಡೆದುಕೊಂಡಿದೆ. ತನ್ನ ಬಜೆಟ್‌ನಲ್ಲಿ ಹೊಗೇನಕಲ್ ಸಮಗ್ರ ಕುಡಿಯುವ ನೀರಿನ ಯೋಜನೆಗಾಗಿ 400 ಕೋಟಿ ಮೀಸಲಿಟ್ಟ 2012ರ ಡಿಸೆಂಬರ್ ಒಳಗೆ ಪೂರ್ಣಗೊಳಿಸುವುದಾಗಿ ಘೋಷಿಸಿದ್ದು ಎರಡು ರಾಜ್ಯ ನಡುವಣ ತಿಕ್ಕಾಟವನ್ನು ಮುಂದುವರಿಸಿದಂತಾಗಿದೆ. ಮೂಲ ನಿಲುವಿನಿಂದ ತಮಿಳುನಾಡು ಸರಿದಿಲ್ಲವೆಂದೂ ತಿಳಿಯುತ್ತದೆ. ಸಚಿವ ಬಸವರಾಜ ಬೊಮ್ಮಾಯಿ ಅವರಂತು ಹೊಗೇನಕಲ್ ವಿವಾದ ಸಂಬಂಧ ಜಂಟಿ ಸರ್ವೇ ವಿನಾ ಯೋಜನೆ ಕೈಗೆತ್ತಿಕೊಳ್ಳುವುದನ್ನು ರಾಜ್ಯ ಸರ್ಕಾರ ಬಲವಾಗಿ ವಿರೋಧಿಸುತ್ತದೆ ಎಂದಿದ್ದಾರೆ. ನಮ್ಮ ಕಳಸಾ-ಬಂಡೂರಿ ನಾಲಾ ಬಗ್ಗೆ ಗೋವಾ ಸರ್ಕಾರ ಆಕ್ಷೇಪವೆತ್ತಿದಾಗ ಅದಕ್ಕೆ ಕೇಂದ್ರ ಸರ್ಕಾರ ಮನ್ನಣೆ ನೀಡಿತು. ಅದೇ ಹೊಗೇನಕಲ್ ವಿವಾದ ಸಂಬಂಧ ತಮಿಳುನಾಡು ವಿರುದ್ಧ ರಾಜ್ಯ ಸರ್ಕಾರ ದೂರು ನೀಡಿದರೂ, ನಿರ್ಲಕ್ಷಿಸಿರುವುದು, ನಮ್ಮ ಮನವಿಗೆ ಕೇಂದ್ರ ಸರ್ಕಾರವು ಸಕಾರಾತ್ಮಕವಾಗಿ ಸ್ಪಂದಿಸುತ್ತಿಲ್ಲ ಎನ್ನುವಂತಾಗಿದೆ. ಕಳಸಾ-ಬಂಡೂರಿ ನಾಲಾ ಯೋಜನೆಗೆ ಒಂದು ನ್ಯಾಯ, ಹೊಗೇನಕಲ್ ಯೋಜನೆಗೆ ಒಂದು ನ್ಯಾಯ ಎಂಬ ಧೋರಣೆ ಸರಿಯಲ್ಲ ಎಂಬ ಅಭಿಪ್ರಾಯ ಅವರದಾಗಿತ್ತು. (31.3.10) ಮಹದಾಯಿ ಕುರಿತಂತೆ ಕೇಂದ್ರವು ನ್ಯಾಯಾಧಿಕರಣ ರಚಿಸುವ ನಿರ್ಧಾರ ಕೈಗೊಂಡ ಕೇಂದ್ರ ಹೊಗೇನಕಲ್ ವಿವಾದ ಸಂಬಂಧದಲ್ಲಿ ಮೌನ ತಾಳಿರುವುದೇಕೆ? ಎಂಬ ಪ್ರಶ್ನೆಯೂ ಅವರದಾಗಿದೆ.

ಹೊಗೇನಕಲ್ ಗಡಿವಿವಾದ 1956ದಿಂದಲೂ ಚಾಲ್ತಿಗಿದ್ದು, ಕಾನೂನು ತಜ್ಞರ ಪ್ರಕಾರ ಹೊಗೇನಕಲ್ ಸಂಪೂರ್ಣವಾಗಿ ಕರ್ನಾಟಕಕ್ಕೆ ಸೇರಬೇಕು. ಹಿಂದಿನ ಮದ್ರಾಸ್ ಸರ್ಕಾರ ಸಿದ್ದಪಡಿಸಿರುವ ನಕ್ಷೆಯಲ್ಲೂ ಇದು ಸ್ಪಷ್ಟವಾಗಿದೆ. ತಮಿಳುನಾಡು ಮಾತ್ರ ಆ ನಕ್ಷೆಯನ್ನು ತೋರಿಸಲು ಸಿದ್ಧವಿಲ್ಲ. ರಾಜ್ಯಗಳ ನಡುವೆ ಸಹಮತ ಮೂಡಿಸಬೇಕಾದ ಕೇಂದ್ರವೂ ರಾಜ್ಯ ಸರ್ಕಾರ ಬರೆದ ಪತ್ರಗಳಿಗೂ ತಲೆಕೆಡಿಸಿಕೊಳ್ಳುತ್ತಿಲ್ಲ ಎಂದು ಕೆ.ವಿ. ಪ್ರಭಾಕರ್ ಲೇಖನವೊಂದರಲ್ಲಿ ವಿಶ್ಲೇಷಿಸಿದ್ದಾರೆ. (4.4.10)

ಈಚೆಗೆ ಕರ್ನಾಟಕ ಮತ್ತು ತಮಿಳುನಾಡು ಕಾರ್ಯದರ್ಶಿಗಳ ನಡುವೆ ಹೊಗೇನಕಲ್ ಸಂಬಂಧ ಮಹತ್ವರ ಮಾತುಕತೆ ನಡೆಯಬೇಕಿದ್ದು ನಡೆಯಲಿಲ್ಲ.

ತಮಿಳುನಾಡು ಅದಕ್ಕೆ ಸಹಕರಿಸಿಲ್ಲ. ಕುಡಿಯುವ ನೀರಿನ ಯೋಜನೆಯಾದ್ದರಿಂದ 1998ರಲ್ಲಿ ಕರ್ನಾಟಕ ಯೋಜನೆಗೆ ಒಪ್ಪಿಗೆ ಕೊಟ್ಟಿತ್ತು. ಆದರೆ ವಿವಾದಿತ ಹೋಗೇನಕಲ್ ಯಾವ ರಾಜ್ಯಕ್ಕೆ ಸೇರಿದ್ದು ಎಂಬುದನ್ನು ತಿಳಿಯಲು ಜಂಟಿ ಸರ್ವೇ ಕರ್ನಾಟಕ ಪ್ರತಿಪಾದಿಸುತ್ತ ಬಂದಿದ್ದರೂ ಕೇಂದ್ರವು ಆ ಬಗ್ಗೆ ಲಕ್ಷ್ಯ ಹರಿಸಿಯೇ ಇಲ್ಲ. ತಮಿಳುನಾಡು ಸರ್ಕಾರ ತನ್ನ ಬಜೆಟ್‌ನಲ್ಲಿ ಈ ಯೋಜನೆಗೆ 400 ಕೋಟಿ ನಿಗದಿಪಡಿಸಿರುವುದು ಸಮಸ್ಯೆ ಬಿಗಡಾಯಿಸಲು ಕಾರಣವಾಗಿದೆ. ಕೇಂದ್ರ ಈ ಬಗ್ಗೆ ಮಧ್ಯೆ ಪ್ರವೇಶಿಸಿ ಜಂಟಿ ಸರ್ವೇ ಆಗದ ಹೊರತು ಯೋಜನೆ ಕೈಗೆತ್ತಿಕೊಳ್ಳಲು ಅವಕಾಶವಿಲ್ಲ ಎಂದಿದೆ. ಹಾಗೂ ಈ ಕಾನೂನು ಸಮರಕ್ಕೆ ಮುಂದಾಗುವ ಯೋಜನೆ ಮಾಡಿದೆ. (19.4.2010) ಆದರೂ ಕರ್ನಾಟಕ ಇತ್ತೀಚೆಗೆ ಶಿವನ ಸಮುದ್ರ ಜಲ ವಿದ್ಯುತ್ ಯೋಜನೆ ವಿದ್ಯುತ್ ಸ್ಥಾವರ ನಿರ್ಮಾಣಕ್ಕೆ ತಮಿಳುನಾಡು ಸಹಕರಿಸಿದರೆ ತಮಿಳುನಾಡಿನ ಮೇಲ್ಸೂಚಿತ ಯೋಜನೆಗೆ ಆಕ್ಷೇಪಿಸದಿರುವ ಚಿಂತನೆಯಲ್ಲಿರುವಂತಿದೆ. ಪ್ರಧಾನಿಯವರಲ್ಲಿಯೂ ಮಧ್ಯೆ ಪ್ರವೇಶ ಕೋರಲು ಪ್ರಯತಿಸಿರುವಂತಿದೆ ಇದು ಕೊಡು–ಕೊಳೆ ವಿಷಯ ತಮಿಳುನಾಡು ಸಹಕರಿಸಬೇಕು.

**ವಿಷಯ 2 :** ಕೃಷಿ ಸಮಸ್ಯೆಗಳು

**ಎಪಿಎಂಸಿ ಕಾಯಿದೆಗೆ ತಿದ್ದುಪಡಿ – ರೈತರ ಸಂಕಷ್ಟಗಳು**

ರಾಜ್ಯ ಕೃಷಿ ಮಾರುಕಟ್ಟೆ ವ್ಯವಹಾರ ನಿಯಂತ್ರಣ ಮಸೂದೆಗೆ, ರಾಜ್ಯ ಸರ್ಕಾರ ಕೇಂದ್ರದ ಆಶಯದಂತೆ ಸದನದಲ್ಲಿ ಅನುಮೋದನೆ ಪಡೆಯಿತು. ವರ್ತಕರ ಬಾಯಿ ದೊಡ್ಡದಾಗಿದೆ. ತಿದ್ದುಪಡಿಯನ್ನು ವಿರೋಧಿಸಿದ ರೈತರಿಗೆ ಅನುಕೂಲದ ಅರ್ಥವಾಗಿಲ್ಲ. ಸರ್ಕಾರ, ರೈತರಿಗೆ ಈ ಮಸೂದೆ ಹಿತಕಾರಿ ಎಂಬ ಸಮರ್ಥನೆಯೊಳಗಿದೆ ವರ್ತಕ ಸಂಘದ ಪರಂಪರೆಯಂತೆ ಖಾಸಗಿ ಕಂಪನಿಗಳು ಬಂದರೂ ಕಾನೂನಿನ ಚೌಕಟ್ಟಿನಲ್ಲಿ ಕಾರ್ಯನಿರ್ವಹಿಸಬೇಕು. ಖಾಸಗಿ ಕಂಪನಿಯವರದೇ ಬೇರೆ ಮಾರುಕಟ್ಟೆ ನಿರ್ಮಾಣವಾದರೆ ರಾಜ್ಯಾದ್ಯಂತ ಹರಡಿಕೊಂಡಿರುವ ಸುಮಾರು 8 ಲಕ್ಷ ವರ್ತಕರ ಪಾಡು ಏನು? ಸ್ವಂತ ಜಮೀನಿನಲ್ಲಿ ಬೇರೆಯವರು ದರ್ಬಾರು ಮಾಡತೊಡಗಿದರೆ, ಜಮೀನು ಒಡೆಯನ ಅಸ್ತಿತ್ವ ಏನಾಗುತ್ತದೆ? ಬೆಂಗಳೂರಿನ ವರ್ತಕರೇ ಸರ್ಕಾರಕ್ಕೆ ವಾರಕ್ಕೆ ಎರಡು ಕೋಟಿ ರೂ. ವಂತಿಗೆ ಸಂದಾಯ ಮಾಡುತ್ತಾರೆ. ಅಂಥವರೊಡನೆ ತಿದ್ದುಪಡಿ ಮಾಡುವಾಗ ಸಮಾಲೋಚಿಸ ಬೇಕಿತ್ತಲ್ಲವೆ! ಎಪಿಎಂಸಿ ದೀರ್ಘಕಾಲ ಅಂದರೆ ಏಳು ದಶಕಗಳಿಂದ ಅಸ್ತಿತ್ವದಲ್ಲಿದ್ದೂ ರೈತರು ನಿರಾಶವಾಗಿ ನೇಣಿಗೆ ತಲೆ ಒಡ್ಡುವುದೇಕೆ? ಅವು ರೈತರಿಗೆ ಉಪಯೋಗಕಾರಿ ಆಗಿಲ್ಲ ಎನ್ನುವ ಅಭಿಪ್ರಾಯವೂ ಇದೆ. ಮಧ್ಯವರ್ತಿಗಳು ರೈತರಿಂದ, ಗ್ರಾಹಕರಿಂದಲೂ ಶೇ 5ಕ್ಕೂ ಮೀರಿ ಒಳಹಣ ಪಡೆಯುತ್ತಿದ್ದಾರೆ ಎಂಬ ಆರೋಪ ಹಳೆಯದಾದರೂ, ಅವರ ಅಸ್ತಿತ್ವ ಕರಗಿಹೋಗಿಲ್ಲ. ರೈತರು

ತಮ್ಮ ಉತ್ಪನ್ನವನ್ನು ಎಪಿಎಂಸಿ ಮೂಲಕವೇ ಮಾಡಬೇಕು ಎಂಬ ಎಪಿಎಂಸಿ ನಿಯಮವಿದ್ದರೂ ಅದು ಪಾಲನೆ ಆಗುತ್ತಿಲ್ಲ. ಅದರ ವಿರುದ್ಧ ಕ್ರಮವೂ ಇಲ್ಲ. ಎಪಿಎಂಸಿಯಲ್ಲಿನ ಸಿಬ್ಬಂದಿಗಳ ಕೊರತೆ, ಭ್ರಷ್ಟಾಚಾರಕ್ಕೂ ಕಾರಣವೆನ್ನುವಂತಿದೆ. ಬೇಳೆದ ಅರ್ಧಭಾಗದಷ್ಟು ಪ್ರಮಾಣವನ್ನು ಮೀರಿ ರೈತರು ತಮ್ಮ ಉತ್ಪನ್ನಗಳನ್ನು ನೇರವಾಗಿ ಹೊಲದಲ್ಲಿಯೇ ಮಾರುತ್ತಿದ್ದಾರೆ. ಸರ್ಕಾರಿ ಕೋಲ್ಡ್‌ಸ್ಟೋರೇಜುಗಳಿಲ್ಲದೆ ರೈತರು ಖಾಸಗಿ ಸ್ಟೋರೇಜುಗಳನ್ನು ಅವಲಂಬಿಸಿದ್ದಾರೆ.

ಇನ್ನು ಮಧ್ಯವರ್ತಿಗಳು ಖರೀದಿದಾರರಿಂದ ಮಾತ್ರ ಕಮಿಷನ್ ಪಡೆಯಬೇಕಾಗಿದ್ದರೂ ರೈತರಿಂದಲೂ ವಸೂಲಿಮಾಡುತ್ತಾರೆ ಎಂಬ ಮಾತೂ ಇದೆ. ಇದು ರೈತರಿಗೆ ಏಜಂಟರಿಂದಾಗುವ ಶೋಷಣೆಯೆ ಮಾರುಕಟ್ಟೆಗೆ ತಂದ ಬೆಳೆ ಹೇಗೋ ಖರ್ಚುಮಾಡಿದರೆ ಸಾಕು ಎಂಬ ರೈತರ ಅಸಹಾಯಕತೆಯನ್ನು ದುರ್ಬಳಕೆ ಮಾಡಿಕೊಂಡು ಅವರ ಉತ್ಪನ್ನವನ್ನು ಕಡಿಮೆ ಬೆಲೆಗೆ ಮಾರಿಸಿ ಏಮಾರಿಸುವುದೂ ಉಂಟು. ಅನೇಕ ರೈತರು ಅನಿವಾರ್ಯವಾಗಿ ಮಧ್ಯವರ್ತಿಗಳ ಒಳ ಮುಂಗಡ ಪಡೆದು ಅವರ ಹಂಗಿಗೆ ಬಿದ್ದು ಬೆಳೆಗೆ ಅವರು ಕೊಟ್ಟಷ್ಟು ಹಣ ಪಡೆದು ಮೌನಿಗಳಾಗಿಬಿಡುತ್ತಾರೆ. ಕೃಷಿ ಉತ್ಪಾದನೆಯಲ್ಲಿ ಸಾಧಿಸಿದ ಕ್ರಾಂತಿಯಂತೆ ಉತ್ಪನ್ನಗಳ ಮಾರಾಟದಲ್ಲಿಯೂ ಅದು ಆಗಬೇಕಿದೆ. ಸದ್ಯದ ತಿದ್ದುಪಡಿಯನ್ನು ರೈತರ ಹಿತಾಸಕ್ತಿಯನ್ನು ಗಮನಿಸಿ ಮಾಡಿದೆ ಎನ್ನಬೇಕು; ಇದರಲ್ಲಿ ಖಾಸಗಿಯವರು ಬಂಡವಾಳ ಹಾಕಿ ರೈತರ ಹೊಲಗಳಿಂದ ನೇರವಾಗಿ ಉತ್ಪನ್ನಗಳನ್ನು ಖರೀದಿಸಬಹುದು. ಗುತ್ತಿಗೆ ನೀಡಬಹುದು ಖಾಸಗಿ ಮಾರುಕಟ್ಟೆಗಳನ್ನು ತೆರೆದುಕೊಳ್ಳಬಹುದು. ಇದು ಎಪಿಎಂಸಿ ಏಜಂಟರಿಗೆ ಹೊಡೆತ ಕೊಡಬಹುದು ಎನ್ನುವುದಿದೆ. ಆದರೆ ರೈತರಿಂದ ದ್ರಾಕ್ಷಿ, ಕೋಸು, ಆಲೂಗೆಡ್ಡೆ, ಟೊಮೆಟೋ, ಬೇಳೆಗಳನ್ನು ನೇರವಾಗಿ ಹೊಲ, ತೋಟಗಳಿಂದ ಕಟಾವು ಮಾಡಿಸಿಕೊಂಡು ಹೋಗುವ ಗ್ರಾಹಕರೂ ಮೊದಲಿನಿಂದಲೂ ಇದ್ದಾರೆ. ಗುತ್ತಿಗೆ ಪದ್ಧತಿ ಪುಷ್ಪ ಕೃಷಿಯಲ್ಲಿ ಕಂಡುಬಂದಿದೆ. ಇದರಿಂದ ರೈತರು ಬಂಡವಾಳ ಹೂಡಿಕೆ, ಸಾಗಾಣಿಕೆ, ಮಾರಾಟದ ಕಿರಿಕಿರಿಗಳಿಂದ ತಪ್ಪಿಸಿಕೊಳ್ಳುವ ಅನುಕೂಲವೂ ಇದೆ. ತೋಟದ ಬದಿಯ ಹಾದಿ ಮಾರಾಟವೂ ರಾಷ್ಟ್ರೀಯ ಹೆದ್ದಾರಿಗಳಲ್ಲಿ ಕಾಣಬಂದು ರೈತರಿಗೆ ಹಾಗೂ ಗ್ರಾಹಕರಿಗೆ ಅನುಕೂಲಕರ ಬೆಲೆಯಲ್ಲಿ ಬೇಳೆಗಳು ಲಭ್ಯವಾಗುತ್ತಿವೆ. ಆದರೆ ನಮ್ಮಲ್ಲಿ ಉತ್ಪಾದನೆ, ಸಂಸ್ಕರಣ, ಶೀಥಲೀಕರಣ, ಮಾರಾಟ ವ್ಯವಸ್ಥೆ ಇತ್ಯಾದಿಗಳು ಕ್ರಮಬದ್ಧ ರೂಢಿಯಾಗಿ ಬರುತ್ತಿಲ್ಲ. ರೈತರನ್ನು ಶೋಷಿಸುವಿಕೆಯನ್ನು ಎಪಿಎಂಸಿ

ಕಾರ್ಯಕ್ಷಮತೆ ಹೆಚ್ಚಿದ ಹೊರತು ತಪ್ಪಿಸಲಾಗುವುದಿಲ್ಲ. ಭೂ ಬೆಲೆಯ ಆಕರ್ಷಣೆಗೆ ಒಳಗಾಗಿ ಜಮೀನು ಮಾರಿ ಹೋಗುವ ಲೆಕ್ಕಾಚಾರವು ಕೃಷಿಯ ನೆಲೆಯನ್ನು ಕುಗ್ಗಿಸುತ್ತ ಬರುತ್ತಿದೆ. ಆದರೆ ಹಣದ ಮೊತ್ತಕ್ಕೆ ಬೇರೆಡೆಯಿಂದ ಕೊಳ್ಳುವ ಉತ್ಪನ್ನವಾದರೂ ಕೃಷಿಯಿಂದ ಬರಬೇಕು ತಾನೆ! ಸ್ವಾವಲಂಬಿ ಬದುಕು ಬಿಟ್ಟು ಐಷಾರಾಮಿಯ ಬಲೆಗೆ ಸಿಕ್ಕುವುದು ಭವಿಷತ್ತಿನ ಬಾಳಿಗೆ ಸುಖಕರವಾಗುವುದಿಲ್ಲ. ಈ ದೃಷ್ಟಿಯಿಂದ ಸ್ವಾವಲಂಬಿ ದುಡಿಮೆಯಿಂದ ರೈತೋಪಯೋಗಿಯಾಗಿ ಎಪಿಎಂಸಿ ವ್ಯವಸ್ಥೆಯನ್ನು ಪುನಾರೂಪುಗೊಳಿಸುವಲ್ಲಿ ಕಾಯ್ದು ತಿದ್ದುಪಡಿ ಸಹಾಯಕವಾದರೆ ಅದು ಸ್ವಾಗತಾರ್ಹವಾದೀತು. ಎಪಿಎಂಸಿಯನ್ನು ಲಾಭದಾಯಕವಾಗಿ ನಡೆಸಿಕೊಂಡು ಹೋಗಿದ್ದರೆ ತಿದ್ದುಪಡಿಯ ಪ್ರಮೇಯವೇನಿರುತ್ತಿತ್ತು? ಎಂಬ ಕಟ್ಟೆಗುರುರಾಜ್ ಅವರ ಪ್ರಶ್ನೆ ಈ ನಿಟ್ಟಿನಲ್ಲಿ ಸಜವಾಗಿದೆ (24.7.2007). ಸಮಸ್ಯೆಯ ಮೂಲವನ್ನು ಕೆದಕಬೇಕಾದುದು ಹೀಗೆಯೆ. ಅದಕ್ಕೆ ಸೂಚಿತವಾದ ಪರಿಹಾರ ಸಾಧಕ ಬಾಧಕಗಳನ್ನು ಪರಿಶೀಲಿಸಬೇಕಾದುದು ಸರಿಯೆ.

**ಬೇಳೆಕಾಳುಗಳ ಬೆಲೆ ಏರಿಕೆ; ಹೆಚ್ಚಿದ್ದ ದಾಸ್ತಾನು ಮುಟ್ಟುಗೋಲು; ಹೊರ ರಾಜ್ಯಕ್ಕೆ ವರ್ಗಾವಣೆ ನಿಷೇಧ** : ತೊಗರಿ ಸಹಿತವಾಗಿ ಬಹುತೇಕ ಎಲ್ಲ ಬೇಳೆಕಾಳುಗಳ ಬೆಲೆ ಗಗನಕ್ಕೇರಿತ್ತು. ತೊಗರಿ ಬೆಲೆಯು 3 ತಿಂಗಳ ಹಿಂದಿನ ದರಕ್ಕಿಂತ ಶೇ. 100ರಷ್ಟು ಏರಿತ್ತು. ಕೆ.ಜಿ.ಗೆ 35–40ರೂ ಇದ್ದದ್ದು 82–85ರೂ ಗಳಿಗೆ ಏರಿತ್ತು. ಇದಕ್ಕೆ ಕಾರಣ ದೇಶಾದ್ಯಂತ ಬಹುತೇಕ ದಿನಸಿ ಧಾನ್ಯಗಳ ಉತ್ಪಾದನೆಯಲ್ಲಿ ಸುಮಾರು ಮೂರನೇ ಒಂದು ಭಾಗದಷ್ಟು ಕುಸಿತವಾಗಿರುವುದು; ಮುಂದೆ ಹೊಸ ಬೆಳೆ ಬರುವವರಿವಿಗೆ ಇದೇ ಪರಿಸ್ಥಿತಿ ಇರುತ್ತದೆ. ಇದಲ್ಲದೆ ಬೃಹತ್ ಮಾರಾಟ ಕಂಪನಿಗಳು ಭಾರಿ ಪ್ರಮಾಣದಲ್ಲಿ ಬೆಳೆಯನ್ನು ದಾಸ್ತಾನು ಮಾಡಿಕೊಂಡಿರುವುದು. ತಮಿಳುನಾಡು ಕರೆದಿರುವ ಹೆಚ್ಚಿನ ಬೆಲೆಯ ಟೆಂಡರ್‌ನತ್ತ ವರ್ತಕರು ಕಣ್ಣಿಟ್ಟಿರುವುದು; ಗುಲ್ಬರ್ಗ, ಬೀದರ್, ರಾಯಚೂರು, ಇತ್ಯಾದಿ ಬೇಳೆಕಾಳು ಕಣಜ ಪ್ರದೇಶದಲ್ಲಿ ಬಿತ್ತನೆಯ ಪ್ರಮಾಣ ಶೇ. 40 ಭಾಗದಷ್ಟು ಆಗದಿರುವುದು ಹೀಗೆ ಸಂಕಷ್ಟಗಳ ಸರಮಾಲೆಯೆ ಆಗಿತ್ತು. ಭಾರತವೇನೋ ಬರ್ಮಾ, ತಾಂಜಾನಿಯ, ಚೀನಾದಿಂದ ತನ್ನ ಕೊರತೆಯ ಬೆಳೆಯ ಪ್ರಮಾಣವನ್ನು ಆಮದಿನಿಂದ ಸರಿಪಡಿಸಿಕೊಂಡರೂ, ಬೇಡಿಕೆಯ ಒತ್ತಡಕ್ಕನುಗುಣವಾಗಿ ಅವು ಬೆಲೆಯ ಹೆಚ್ಚಳ ಮಾಡುವ ಅವಕಾಶವೂ ಇದೆ. ಈ ಹಿನ್ನೆಲೆಗಳನ್ನು ಗಮನಿಸಿದರೆ ರಾಜ್ಯದ ತೊಗರಿ ಬೆಳೆಯನ್ನು ಯಾವುದೇ ಕಾರಣಕ್ಕೂ ಹೊರರಾಜ್ಯಗಳಿಗೆ ಮಾರಾಟ ಮಾಡದಂತೆ ಮುಖ್ಯಮಂತ್ರಿ ಯಡಿಯೂರಪ್ಪನವರು ವರ್ತಕರಿಗೆ, ಅಧಿಕಾರಿಗಳಿಗೆ ಆದೇಶಿಸಿರುವುದು; ವರ್ತಕರು

ಮತ್ತು ತೊಗರಿ ರೈತರಲ್ಲಿ ಅಗತ್ಯಕ್ಕಿಂತ ಹೆಚ್ಚಿನ ದಾಸ್ತಾನಿದ್ದರೆ, ಮುಟ್ಟುಗೋಲು ಜಪ್ತಿ ಎಂಬ ಎಚ್ಚರಿಕೆ ನೀಡಿರುವುದು ಅಗತ್ಯವಾಗಿರುವ ಕ್ರಮ ಎನಿಸುತ್ತದೆ. ರಾಜ್ಯದಲ್ಲಿ ಈ ಬಾರಿ ಹೆಚ್ಚಾಗಿ ತೊಗರಿ ಬಿತ್ತನೆ ಮಾಡುವಂತೆ ರೈತರನ್ನು ಪ್ರೋತ್ಸಾಹಿಸಲು ಕಾರ್ಯಕ್ರಮ ಹಾಕಿಕೊಂಡು ವಿಶೇಷ ರಿಯಾಯಿತಿ ನೀಡುವ ಬಗ್ಗೆಯೂ ಮುಖ್ಯಮಂತ್ರಿಗಳು ಹೇಳಿರುವುದು ಸಮಸ್ಯೆಯ ಪರಿಹಾರಕ್ಕೆ ಮುಂದಾದ ಕ್ರಮವೇ ಆಗಿತ್ತು. (21.9.09)

**ರೈತರಿಗೆ ಸಾಲಮನ್ನಾ ಯೋಜನೆ ತಲುಪಿಲ್ಲ; ಸಂಸತ್ತಿನಲ್ಲಿ ಪ್ರಸ್ತಾಪ :** ಮಾಜಿ ಮುಖ್ಯಮಂತ್ರಿ ಸಂಸದ ಎಚ್.ಡಿ ಕುಮಾರಸ್ವಾಮಿ ಅವರು ಸಂಸತ್ತಿನಲ್ಲಿ (20.7.2009), ಮಾತನಾಡುತ್ತ, ಕೇಂದ್ರ ಸರ್ಕಾರದ ಸಾಲಮನ್ನಾ ಯೋಜನೆ, ಅತಿ ಸಣ್ಣ ಮತ್ತು ಸಣ್ಣ ರೈತರ ಸಂಕಷ್ಟವನ್ನು ತಪಿಸುವಲ್ಲಿ ಸೋತಿದೆ. ಇದಕ್ಕೆ ಕೇಂದ್ರ ಸರ್ಕಾರದ ಅಂಕಿಅಂಶಗಳೇ ಸಾಕ್ಷಿ ಆಗಿವೆ. ನನ್ನ ಕ್ಷೇತ್ರದ ಸಣ್ಣ ರೈತವರ್ಗದ ಈರ್ವ ಮಹಿಳೆಯರ 2 ಎಕರೆ ಜಮೀನು ಬೋರ್‌ವೆಲ್ ಸಾಲಕ್ಕೆ ನಲುಗಿಹೋಯಿತು. ಒಕ್ಕಲುತನದ ಕಷ್ಟ ನಿಷ್ಠುರಗಳಿಗೆ, ರೈತರ ಆತ್ಮಹತ್ಯೆಗಳಿಗೆ ಸಾಲದ ಬಾಧೆಯೂ ಕಾರಣವಾಗಿದೆ. ರಾಷ್ಟ್ರೀಯ ಸರಾಸರಿಗಿಂತಲೂ ಹೆಚ್ಚಿಗಿರುವ ಶೇ. 61.6 ರಷ್ಟು ರೈತ ಕುಟುಂಬಗಳು ಸಾಲದಲ್ಲಿ ಮುಳುಗಿವೆ. ಶೇ 73.5 ರಷ್ಟು ರೈತ ಕುಟುಂಗಳು ಸುಮಾರು 2 ಹೆಕ್ಟೇರ್‌ಗಿಂತಲೂ ಕಡಿಮೆ ಜಮೀನು ಇರುವವನಾಗಿ ಸಾಲದ ಹಂಗಿನಲ್ಲಿವೆ. ಕೇಂದ್ರದ 72 ಸಾವಿರ ಕೋಟಿ ರೂ.ಗಳ ಸಾಲಮನ್ನಾ ಯೋಜನೆಯ ಲಾಭ ಈ ಸಾಲದ ಬಲೆಯ ರೈತರಿಗೆ ದೊರೆತಿದೆ ಎಂಬ ಬಗ್ಗೆ ರಾಜ್ಯವಾರು ಅಂಕಿಅಂಶಗಳ ಸಹಿತ ಕೃಷಿ ಸಚಿವರು ಹೇಳಬೇಕು. ಎಲ್ಲ ಅತಿ ಸಣ್ಣ ಮತ್ತು ಸಣ್ಣ ರೈತರ ಎಲ್ಲ ಸಾಲವನ್ನು ಮನ್ನಾ ಮಾಡಿ, ಬ್ಯಾಂಕುಗಳು ನೀಡುವ ಸಾಲಗಳಲ್ಲಿ ಶೇ. 18ರಷ್ಟನ್ನು ಈ ರೈತರಿಗೆ ನೀಡಬೇಕು. ನಬಾರ್ಡ್ ಬಾಂಡ್‌ಗಳನ್ನು ನೀಡುವ ಕಣ್ಣೊರಸುವ ಮಾರ್ಗ ಬಿಟ್ಟು, ಭಾರಿ ಬೆಳೆ ಹಾನಿಯ ಅಂದಾಜಿಗೆ ಕೇಂದ್ರವು ತುರ್ತಾಗಿ ಉನ್ನತ ಮಟ್ಟದ ಅಧ್ಯಯನ ತಂಡವನ್ನು ರಾಜ್ಯಕ್ಕೆ ಕಳುಹಿಸಿ ಪರಿಹಾರ ಘೋಷಿಸಬೇಕು. ಕೃಷಿ ವ್ಯವಸ್ಥೆಯ ಪುನಶ್ಚೇತನಕ್ಕೆ ಅನುಕೂಲಿಸುವ ಶ್ವೇತಪತ್ರ ಹೊರತರಬೇಕು ಎಂದೆಲ್ಲ ಸಮಸ್ಯೆಗಳತ್ತ ಗಮನ ಸೆಳೆದು ಪರಿಹಾರಗಳನ್ನು ಸೂಚಿಸಿದರು. ಸಚಿವರು ಈ ಮಾತುಗಳಿಗೆ ಉತ್ತರಿಸುತ್ತ ಈ ಸಾಲಿನಲ್ಲಿ ಮುಂಗಾರುಮಳೆ ಅನಿಶ್ಚಿತವಾಗುತ್ತಿರುವ ಕಾರಣ ಕೇಂದ್ರ ಸರ್ಕಾರವು ಕೃಷಿಕರಿಗೆ ನೆರವಾಗಲು ರಾಜ್ಯ ಸರ್ಕಾರಗಳಿಗೆ ಹೆಚ್ಚಿನ ನಿಧಿ ನೆರವು ನೀಡುವ ಬಗ್ಗೆ ಹಾಗೂ ಹೊಸ ಪರಿಹಾರ ಯೋಜನೆ ರೂಪಿಸುವ ಬಗ್ಗೆಯೂ ತಿಳಿಸಿದರು. (21.7.09)

**ನೆರೆ ಹಾವಳಿ ಹಾಗೂ ಪರಿಹಾರ ವಿಳಂಬದ ಚಿತ್ರಗಳು :** ತುಂಬಿದ ಮಳೆಬಾನಿಂದ ಅದನ್ನು ತಾರಾಮಾರಾ ಗುಡಿಸಿಕೊಂಡು ಇಳೆಗೆ ಭೋರ್ಗರೆದು ಬಂದು ಇಲ್ಲಿನ ಜನ, ಜಾನುವಾರು ಜಮೀನುಗಳನ್ನು ಕೊಚ್ಚಿಹಾಕಿದುದಷ್ಟೇ ಮನಗಳು ಕುಸಿದು ಮಣ್ಣುಪಾಲು, ಕೊಡಿಟ್ಟ ಬೆಲ್ಲದ ಚೀಲ, ಹಣ, ಗೊಬ್ಬರ, ಚಪ್ಪರ ಬಿದ್ದುಸತ್ತ ಸಾಕಿದ್ದ ಮೇಕೆಯ ಗುಂಪು, ಮುಳುಗಿದ ಗ್ರಾಮ, ಚಿಂದಿಯಾದ ಟಾರುರಸ್ತೆಗಳು, ಕೆಸರಾದ ಮಣ್ಣು ನೆಲ, ಕೊಳೆತು ಹೋದ ಅಕ್ಕಿಯ ಮೂಟೆ ಎಲ್ಲಾ ಮಳೆಯ ಜವರಾಯನ ಆಟವಾಗಿತ್ತು ಕ್ರೂರಕ್ರೀಡೆ ಆಗಿತ್ತು. ಇಂಥ ಸನ್ನಿವೇಶದಲ್ಲಿ ಯಾರು ಬಂದು ಬಟ್ಟೆ, ಬುತ್ತಿ, ಗಂಜಿ ಕೇಂದ್ರದಲ್ಲಿ ಗಂಜಿಕೊಟ್ಟರೂ ಬಾಳಿ ಬಂದಿದ್ದ ಜೀವಿಗಳಿಗೆ ಅದೇ ಮೇಲುಕಾಗಿತ್ತು. ಸರ್ಕಾರ ಹಾಗು ಸಂಘ ಸಂಸ್ಥೆಗಳು ನೆರವು ಕೊಟ್ಟರೂ, ಅದು ತಲುಪಿದ ಬಗ್ಗೆ, ತಲುಪಿಸಿದವರ ಬಗ್ಗೆ ಕೆಲವು ಅನುಮಾನಗಳು ಎದ್ದಿದ್ದೂ ಉಂಟು. ಕೃಷ್ಣಾನದಿ ತೀರದಲ್ಲಿ ಊರಿಗೆ ಊರೇ ಮುಳುಗಿ ಅಲ್ಲಿಯ ಗ್ರಾಮೀಣರು ದೂರದ ತಾತ್ಕಾಲಿಕ ಶೆಡ್‌ಗೆ ಸ್ಥಳಾಂತರಗೊಂಡು ಗಂಜಿ ಕೇಂದ್ರದ ಗಂಜಿಯನ್ನು ತುತ್ತಿನ ಜಲವಾಗಿ ಪಡೆದಿದ್ದರು. ತುಂಗಭದ್ರಾ ತೀರದ ಚಿಕ್ಕಹಳ್ಳಿಯ ಜನರ ಪಾಡು ಇದಕ್ಕಿಂತ ಭಿನ್ನವಾಗೇನೂ ಇರಲಿಲ್ಲ. ಇಷ್ಟೆಲ್ಲಾ ಕಷ್ಟಗಳ ನಡುವೆಯೂ ಉಳುವ ನೆಲಮನೆ ಮಠ ಕಳೆದುಕೊಂಡ ಈ ಜನಕ್ಕೆ ಬಂದ ನೆರವಿನ ತುತ್ತು ತತ್ಕಾಲಕ್ಕೆಂಬ ಅರಿವೂ ಇತ್ತು. ಅಂತಾಗಿ ಅವರೊಳಗಿನ ಸ್ವಾಭಿಮಾನದ ಹರವು ಬದುಕನ್ನು ಮತ್ತೆ ತಾವೇ ಕಟ್ಟಿಕೊಳ್ಳುವ ಪ್ರಯತ್ನಗಳನ್ನು ಮಾಡುತ್ತಿದ್ದುದನ್ನು ಕಣ್ಣಾರೆ ಕಂಡು ಹೇಳುತ್ತಿದ್ದುದೇ ಆಗಿತ್ತು. ಆದರೂ ಸರ್ಕಾರದ ಹೊಣೆಯಂತು ಇದ್ದೇ ಇರುತ್ತದಲ್ಲ.

ಬಹುತೇಕ ಕಡೆ ನವಗ್ರಾಮ ನಿರ್ಮಾಣ ಕಾಮಗಾರಿ, ನವಗ್ರಾಮ ಯೋಜನೆಗೆ ಮುಖ್ಯಮಂತ್ರಿಗಳು ಅಡಿಗಲ್ಲು ಹಾಕಿ ಹೋದಮೇಲೂ ಆಮೆ ವೇಗದಲ್ಲಿಯೇ ಸಾಗಿ ಬಂದಿತ್ತು. ಪ್ರವಾಹದ ಹಾವಳಿಗೀಡಾಗಿದ್ದ ಗುಲ್ಬರ್ಗ ಜಿಲ್ಲೆಯ ಬಂಡೋಳಿ ನವಗ್ರಾಮದಲ್ಲಿ ಮನೆಕಟ್ಟೋಣಗಳಿಗೆ ರೋಟರಿ, ಪೇಜಾವರ ಮಠ, ಸೇವಾಭಾರತಿ ಸಂಸ್ಥೆಗಳು ಹೊಣೆ ಹೊತ್ತಿದ್ದುವು. ಆದರೆ ನಿವೇಶನಗಳ ವಿಳಾಸ ಲಭ್ಯತೆಯ ಕೊರತೆ, ಜಿಲ್ಲಾಡಳಿತ ನೀಡಬೇಕಾದ ವಿವರ, ಹಣಕಾಸಿನ ಬಿಕ್ಕಟ್ಟುಗಳಿಂದಾಗಿ ಅದು ವಿಳಂಬವಾಗಿತ್ತು. ಪ್ರವಾಹ ಪೀಡಿತ ಸುರಪುರ, ಶಹಾಪುರ, ಅಫ಼ಜಲ್ಪೂರ, ಸೇಡಂ, ಯಾದಗಿರಿ, ಚಿತ್ತಾಪುರ, ಗುಲ್ಬರ್ಗ ತಾಲೂಕುಗಳಲ್ಲಿ ಸಂತಸ್ತರು ಆಸರೆಗಾಗಿ ಪರಿತಪಿಸುವಂತಾಗಿತ್ತು ಎಂದು ಶೇಷಮೂರ್ತಿ ಅವಧಾನಿ ಅವರು ಜನಸಂಕಟದ ಚಿತ್ರಣ ನೀಡಿದ್ದಾರೆ.

ಬಿಜಾಪುರ ತಾ. ಕೋಟ್ಯಾಳ ಗ್ರಾಮದಲ್ಲಿ ಸಂತಸ್ತರಿಗೆ ಮನೆ ನಿರ್ಮಾಣಕ್ಕೆ ಗ್ರಾಮಸ್ಥಳಾಂತರಕ್ಕೆ (ನವಗ್ರಾಮ) ಶಂಕುಸ್ಥಾಪನೆ ಮಾಡಿ ಹೋದ ಮೇಲೆ, ಮನೆಗಳ ನಿರ್ಮಾಣಕ್ಕೆ ಸುತ್ತೂರು ಮಠದವರು ತುದಿಗಾಲ ಮೇಲೆ ನಿಂತಿದ್ದರೂ ಅಭಿಯಂತರರು ಮನೆ ನಿರ್ಮಾಣದ ಪ್ಲಾನ್ ರೆಡಿ ಮಾಡಿಲ್ಲವಾಗಿ, ನವಗ್ರಾಮ ನಿರ್ಮಾಣ ನೆನೆಗುದಿಗೆ ಬಿದ್ದಿತ್ತು. ಬಿಜಾಪುರ ತಾ. ಉಕುಮನಾಳ ಗ್ರಾಮದ ಪುನರ್ ನಿರ್ಮಾಣಕ್ಕೆ ಬೆಂಗಳೂರಿನ ಸೇವಾ ಭಾರತಿ ಮುಂದೆ ಬಂದಿದೆ. ಮುದ್ದೆ ಬೀಹಾಳ ತಾ.ನ ಬಾಡಿಹಾಳ, ಹಡಗಿನಾಳ ಗ್ರಾಮದಲ್ಲಿ ಟಿವಿ ವಾಹಿನಿಯೊಂದು ಮನೆ ನಿರ್ಮಿಸಿಕೊಡಲು ಮುಂದೆ ಬಂದಿದೆ. ಆದರೆ ನವಗ್ರಾಮ ನಿರ್ಮಾಣಕ್ಕೆ ಅಡಿಗಲ್ಲು ಬಿದ್ದಿಲ್ಲ. ಪ್ಲಾನ್ ಲೇ ಔಟ್ ಕೂಡ ಆಗಿಲ್ಲ. ಇಂಡಿ.ತಾ ತೆಗ್ಗಿಹಳ್ಳಿ, ಅರ್ಜುಣಗಿ ಗ್ರಾಮಗಳಲ್ಲಿ ಮುಂಬೈನ ಎಸ್.ಆರ್. ಗ್ರೂಪ್, ರೇಣುಕಾ ಶುಗರ್ ಸಂಸ್ಥೆಗಳು ಮುಂದೆ ಬಂದಿದ್ದರೂ ಅವುಗಳಿಗೆ ಮೂಲಭೂತ ಸೌಕರ್ಯವನ್ನು ಒದಗಿಸಿಲ್ಲ. ಅತಿವೃಷ್ಟಿಯಿಂದ ಬಿಜಾಪುರ ಜಿಲ್ಲೆಯಲ್ಲಿ ಒಟ್ಟು 1014.17 ಕೋಟಿ ರೂ ಹಾನಿಯಾಗಿದೆ. 280.65 ಕೋಟಿ ರೂ ಬೆಳೆ ಹಾನಿ ಆಗಿದೆ. ವಿತರಿಸಿರುವ ಪರಿಹಾರ ರೈತರಿಗೆ ಸಮಾಧಾನ ತಂದಿಲ್ಲ. ನವಗ್ರಾಮಗಳಲ್ಲಿ ಮನೆ ನಿರ್ಮಾಣಕ್ಕೆ ಸಂಘ, ಸಂಸ್ಥೆ, ಮಠಗಳ ಮುಂದಾಗಿ ಬಂದರೂ, ಮೂಲಭೂತ ಸೌಕರ್ಯದ ಒದಗಣೆಯ ವಿಳಂಬದಿಂದಾಗಿ ಸರ್ಕಾರದ ಆಸರೆ ಯೋಜನೆಗೆ ಅಡ್ಡಿ ಒದಗಿದೆ ಎಂದು ರುದ್ರಪ್ಪ ಆಸಂಗಿ ಅವರ ವರದಿಯಿಂದ (11.12.09) ತಿಳಿಯುತ್ತದೆ.

**ಗ್ರಾಮದ ಉಳವಿಗೆ ಸ್ವಂತ ಹೊಲತ್ಯಾಗ ಮಾಡಿದ ರೈತ :** ರೋಣ ತಾಲೂಕಿನ ಕೌಜಗೇರಿಯ ರೈತ ಮಂಜುನಾಥ ಕುಬೇರಗೌಡ ಪಾಟೇಲ ಇವರಿಗೆ ಇದ್ದ ನಾಲ್ಕು ಎಕರೆ ಹೊಲ ಗ್ರಾಮಕ್ಕೆ ಕುಡಿಯುವ ನೀರು ಒದಗಿಸುವ ಕೆರೆಗೆ ತಾಗಿಕೊಂಡಂತಿತ್ತು. ಪ್ರಮುಖ ಆರ್ಥಿಕ ಬೆಳೆ ಈರುಳ್ಳಿ, ಅಂತರ್ ಬೇಸಾಯವಾಗಿ ಮೆಣಸಿನಕಾಯಿ ತಮ್ಮ ಹೊಲದಲ್ಲಿ ಬೆಳೆದಿದ್ದರು. ಆರು ದಿನಗಳ ಕಾಲ ಸತತವಾಗಿ ಬಿದ್ದ ಮಳೆಯಿಂದಾಗಿ ಕೆರೆಯು ಭರ್ತಿಯಾಯಿತು. ಆದರೆ ಕೆರೆಯ ಒಡ್ಡು ಒಡೆದು ಪ್ರವಾಹದಿಂದ ಇಡೀ ಗ್ರಾಮವೇ ಕೊಚ್ಚಿ ಹೋಗುವ ಸಾಧ್ಯತೆ ಕಂಡು ಗ್ರಾಮಸ್ಥರಿಗೆ ಆತಂಕ ಶುರುವಾಯಿತು ಮಳೆ ನಿಲ್ಲುವ ಲಕ್ಷಣವೂ ಕಾಣಲಿಲ್ಲ. ಆಗ ಗ್ರಾಮಸ್ಥರ ಕೋರಿಕೆಯಂತೆ ಮಂಜುನಾಥ ಕುಬೇರಗೌಡರು ತಮ್ಮ ಹೊಲದ ಕಡೆಗೆ ಇರುವ ಕೆರೆಯ ಒಡ್ಡನ್ನು ಒಡೆದು ನೀರು ಹರಿಯಬಿಟ್ಟು ಗ್ರಾಮ ಉಳಿಯುವಂತೆ ಮಾಡಿದರು. ಹೊಲದ ಬೆಳೆ ಈ ನೀರಿನಿಂದ ಪೂರ್ಣವಾಗಿ ಕೊಚ್ಚಿಹೋದರೂ ಗ್ರಾಮ ಉಳಿಸಿದ ತ್ಯಾಗಜೀವಿ ಎನಿಸಿದರು. ಇದರಿಂದ ಅವರ ಹೊಲದ ಫಲವತ್ತಿನ ಮಣ್ಣು

ಕೊಚ್ಚಿಹೋಗಿ ಅದು ಬರಡಾಗಿ ನಿಂತಿದೆ. ಗ್ರಾಮಸ್ಥರೇನೋ ಅವರಿಗೆ ಸಾಂತ್ವನ ಹೇಳಿದ್ದಾರೆ. ಶಾಸಕರು ಜಮೀನಿಗೆ ಭೇಟಿ ನೀಡಿ ಮಂಜುನಾಥಗೌಡರಿಗೂ ನ್ಯಾಯ ಒದಗಿಸುವ ಭರವಸೆ ನೀಡಿದ್ದಾರೆ. ಮೂರು ಲಕ್ಷಕ್ಕೂ ಹೆಚ್ಚಿನ ಹಾನಿ ಈ ಹೊಲದೊಡೆಯನಿಗೆ ಆಗಿದೆ. ಗ್ರಾಮಸ್ಥರೆಲ್ಲಾ ಸೇರಿ ಲಿಖಿತವಾಗಿ ಸರ್ಕಾರ ವಿಶೇಷ ಪ್ಯಾಕೇಜ್ ರೂಪಿಸಿ ರೈತನಿಗೆ ಪರಿಹಾರ ನೀಡಬೇಕೆಂದು ಅಮಲ್ದಾರರ ಮೂಲಕ ಸರ್ಕಾರಕ್ಕೆ ಮನವಿ ಇಟ್ಟಿದ್ದಾರೆ. ಈ ರೈತನ ಮಾದರಿ ತ್ಯಾಗಕ್ಕೆ ಸರ್ಕಾರ ಜನಪ್ರತಿನಿಧಿಗಳು ಸಕಾರಾತ್ಮಕವಾಗಿ ಸ್ಪಂದಿಸಿ ಸೂಕ್ತ ಪರಿಹಾರ ನೀಡುವುದೇ ಎಂಬ ಪ್ರಶ್ನೆ ಶಿವಕುಮಾರ ಕುಷ್ಟಗಿಯವರದಾಗಿದೆ. ಈ ರೈತ ಗ್ರಾಮದ ಋಣತೀರಿಸಲು, ನೆರೆಹೊರೆಯವರಿಗೆ ನೆಮ್ಮದಿ ತರಲು ಗ್ರಾಮವನ್ನು ಉಳಿಸಿ ತನ್ನ ತುತ್ತಿನ ನೆಲವನ್ನು ಬೆಳೆಯನ್ನು ಧಾರೆ ಎರೆದ ಅವನ ಸಮಯೋಚಿತ ತ್ಯಾಗಕ್ಕೆ ಸಮಾಜ, ಸರ್ಕಾರ ಸ್ಪಂದಿಸಿ ಅವನ ಬಾಳುವೆಗೆ ದಿಕ್ಕಾಗಿ ನಿಲ್ಲಬೇಕು.

**ಬಿಟಿ ಹತ್ತಿ ಬಗೆಗಿನ ವೈರುಧ್ಯಗಳು :** ಇನ್ನು ಬಿ.ಟಿ ತಳಿಗಳ ಮುಂಚೂಣಿಯ ಬಹುರಾಷ್ಟ್ರೀಯ ಕಂಪೆನಿ ಮಾನ್ಸಾಂಟೋ ಬಿಟಿ ಹತ್ತಿಯ ಕುರಿತ ಈಚೆಗಿನ ಹೇಳಿಕೆ ಈವರೆಗಿನ ಬಿಟಿಪರ ವಾದಕ್ಕೆ ಅಳುಕು ತಂದಿದೆ. ಗುಜರಾತ್‌ನ 4 ಜಿಲ್ಲೆಗಳಲ್ಲಿ ಬೆಳೆದಿದ್ದ ಬಿ.ಟಿ ಹತ್ತಿ ಕೀಟ ಬಾಧೆನೆ ತುತ್ತಾಗಿ ವಿಫಲವಾಗಿದೆ; ಬಿಟಿ ಹತ್ತಿ ಬೆಳೆ ಬಗ್ಗೆ ಈ ಪ್ರದೇಶಗಳಲ್ಲಿ ಅಧ್ಯಯನ ನಡೆಸಿರುವ ಮಾನ್ಸಂಟೋ ಕಂಪೆನಿಯೆ, ಬಿಟಿ ಹತ್ತಿ ತಳಿಯು ಸಾಮಾನ್ಯ ಕೀಟವನ್ನು ಪ್ರತಿರೋಧಿಸುವ ಶಕ್ತಿಯನ್ನು ಕಳೆದುಕೊಂಡಿದೆ ಎಂದು ಹೇಳಿರುವ ಬಗ್ಗೆ ವರದಿಗೊಂಡಿದೆ. ಈ ಹೇಳಿಕೆ ಬಿಟಿ ಉದ್ಯಮಿಗಳಿಗೆ ಆಘಾತವೆನಿಸಿದೆ. ವಿಜ್ಞಾನಿಗಳು ಈ ಬಗ್ಗೆ ಪರೀಕ್ಷಿಸುವ ಮಾತುಗಳನ್ನಾಡಿದ್ದಾರೆ. ಇದು ಪ್ರಾಥಮಿಕ ವರದಿಯ ವಿಷಯ; ಸಮಗ್ರ ವರದಿ ಬಂದಿಲ್ಲ. ರೈತರು ಸರಿಯಾದ ರೀತಿಯಲ್ಲಿ ಬಿತ್ತನೆ ಮಾಡಿಲ್ಲದಿರುವ ಸಾಧ್ಯತೆಯೂ ಇದೆ. ಹೀಗಾಗಿ ಬಿಟಿ ಬದನೆ ವಿಫಲವಾಗಿದೆ ಎನ್ನುವ ಮಾತಿಗಿಂತ, ಕೀಟಗಳ ವಿರುದ್ಧ ಹೋರಾಡುವ ರೀತಿಯಲ್ಲಿ ತಳಿ ಅಭಿವೃದ್ಧಿಗೊಳಿಸಲಾಗುವುದು ಎಂದು ಜಿಇಸಿ ಸಮಿತಿ ತಿಳಿಸಿದೆ (ಕನ್ನಡ ಪ್ರಭ : 8.3.2010) ಇನ್ನೊಂದು ಮಾಹಿತಿಯ ರೀತ್ಯಾ ಜೈವಿಕ ತಂತ್ರಜ್ಞಾನ ತಳಿಯನ್ನು ಪ್ರಚಲಿತಗೊಳಿಸಿರುವ ಮಾಯ್ಕೊ–ಮಾನ್ಸಂಟೊ ಕಂಪೆನಿಯ ದುಬಾರಿ ಬೆಲೆಯ ಬೋಲ್‌ಗಾರ್ಡ್ – II ಅನ್ನು ಅಮೇರಿಕನ್ ಬೋಲ್‌ವರ್ಮ್ (ಕಾಯಿಕೊರಕಹುಳು) ಹಾಗೂ ನೇರಳೆವರ್ಣದ ಬೋಲ್‌ವರ್ಮ್ ಮೇಲೆ ಬದಲಾದ ಸನ್ನಿವೇಶದಲ್ಲಿ ಸಾಮಾನ್ಯ *ಬೋಲ್‌ಗಾರ್ಡ್‌ಗಿಂತ* ಹೆಚ್ಚು ಪರಿಣಾಮಕಾರಿಯಾಗಿ ಕೆಲಸ ಮಾಡಬಲ್ಲದು ಎಂದು ಮಾರುಕಟ್ಟೆಯಲ್ಲಿ ಚಾಲ್ತಿಗೆ ತರುವ ಹುನ್ನಾರ

ಮಾಡುತ್ತಿದೆ ಎಂಬುದು ನಾಗಪುರದ ಸೆಂಟ್ರಲ್ ಇನ್ಸ್‌ಟಿಟ್ಯೂಟ್ ಆಫ್ ಕಾಟನ್ ರೀಸರ್ಚ್ (ಹತ್ತಿ ಸಂಶೋಧನಾ ಕೇಂದ್ರೀಯ ಸಂಸ್ಥೆ – CICR) ಸಂಸ್ಥೆಯ ಪ್ರತಿಪಾದನೆ ಆಗಿದೆ. ಬೋಲ್‌ಗಾರ್ಡ್ ಬೀಜಗಳ ತಲಾ ಪ್ಯಾಕೆಟ್ಟಿಗೆ 150 ರೂ.ಗಳಿದ್ದರೆ ಬೋಲ್‌ಗಾರ್ಡ್ II ಹತ್ತಿ ಬೀಜಗಳ ಪ್ರತಿಪ್ಯಾಕೆಟ್ ಬೆಲೆ 250ರೂ ಅಂದರೆ ಶೇ 67ರಷ್ಟು ಹೆಚ್ಚು ಬೆಲೆ ಕೊಟ್ಟಂತಾಗುತ್ತದೆ. ಇದು ಅತಿ ಲಾಭಕೋರತನದ ದುರಾಸೆಯೇ ನೇರಳೆವರ್ಣದ ಬೋಲ್‌ವರ್ಮ್ ಗುಜರಾತಿನ 4 ಜಿಲ್ಲೆಗಳ ಬಿಟಿ ಬೆಳೆ ತೋಟಗಳಲ್ಲಿ ಹತ್ತಿಯ ಮೇಲೆ ಆಕ್ರಮಣ ಮಾಡಿದ್ದು ಕಂಡುಬಂದಿತು. ಅದೇ ಸುಧಾರಿತ (2006ರಲ್ಲಿ ಮಾರುಕಟ್ಟೆಗೆ ಬಂದ) ಬೋಲ್‌ಗಾರ್ಡ್ – II ಬೀಜಗಳನ್ನು ರೈತರು ಬಳಸಿದ ಕಡೆ ಬಿಟಿ ಹತ್ತಿಗೆ ತೊಂದರೆ ಕಂಡು ಬಂದಿಲ್ಲ ಎಂಬ ಹೇಳಿಕೆ ಕಂಪೆನಿಯದಾಗಿದೆ. ಮಾನ್ಸಾಂಟೋ ಕಂಪೆನಿಯ ಶೋಧವನ್ನು CICR) ಶಂಕಿಸಿ ಆರೋಪ ಮಾಡಿರುವುದೂ ಕೂಡ, ಸಂದೇಹಕ್ಕೀಡಾಗಿದೆ. ಕಾರಣ ಆ ಸಂಸ್ಥೆಯು ಸರ್ಕಾರದಿಂದ ಸಮ್ಮತಗೊಂಡಿರುವ ತನ್ನ ಏಕ ವಂಶವಾಹಿ ಹೈಬ್ರಿಡ್ ಹತ್ತಿ ಬೀಜವನ್ನು ಮಾರುಕಟ್ಟೆಗೆ ಬಿಡುಗಡೆ ಮಾಡುವ ಪ್ರಯತ್ನದಲ್ಲಿರುವುದಾಗಿದೆ. ಅಂದರೆ ಉಭಯ ಸಂಸ್ಥೆಗಳ ಸ್ಪರ್ಧಾಂತರಂಗವಿದೆನ್ನಬೇಕು. ಒಂದು ರೀತಿಯಲ್ಲಿ ವಿಜ್ಞಾನವೂ ವಾಣಿಜ್ಯದ ಕೆಸರಿನಲ್ಲಿ ಸಿಲುಕಿಕೊಂಡಿದ್ದು ಯಾರನ್ನು ನಂಬದ ಸ್ಥಿತಿಯಲ್ಲಿದ್ದೇವೆ ಎಂದು ಲಾಭರಹಿತ ಸಂಸ್ಥೆಯಾದ ಖೇತಿ ವೀರಾಸತ್ ಮಿಷನ್ ಅಭಿಪ್ರಾಯ ಪಡುತ್ತದೆ. ವಾಸ್ತವವಾಗಿ ಮೊದಲಿಗೆ ಬಿಟಿ ಹತ್ತಿ ಹೊಲಗಳಲ್ಲಿ ಕಾಯಿಕೊರಕಹುಳುಗಳು ಕಾಣಬಂದಿವೆಯೆ ಎಂಬುದನ್ನು ತಿಳಿಯಬೇಕಿದೆ. ವಿದರ್ಭ ಆರ್ಗಾನಿಕ್ ಫಾರ್ಮರ್ಸ್ ಅಸೋಸಿಯೇಷನ್ (ಸಾವಯವ ಕೃಷಿ ರೈತರ ಸಂಸ್ಥೆ) ಬಿಟಿ ಬ್ಯಾಕ್ಟೀರಿಯವು ಹೊಂದಿರುವ ಕೀಟನಾಶಕ 'ಕ್ರೈ I ಎಸಿ' ಪ್ರೋಟೀನ್ ನಂಜು, ಹತ್ತಿಗಿಡದಲ್ಲಿ ಮೂರು ತಿಂಗಳ ಕಾಲ ಮಾತ್ರ ಉಳಿಯಬಲ್ಲದು. ಅಂತಾಗಿ ಸುಮಾರು ನಾಲ್ಕು ತಿಂಗಳ ಕಾಲ ಇರಬಲ್ಲ ಹತ್ತಿ ಗಿಡಗಳಿಗೆ ಕಾಯಿಕೊರಕಹುಳು ಅಪಾಯ ತಂದೊಡ್ಡಬಲ್ಲದು.

ಇದಕ್ಕೆ ಮಾನ್ಸಂಟೊ ಕಂಪೆನಿ ಕೊಡುವ ಕಾರಣಗಳೆಂದರೆ 'ಕ್ರೈ I ಎಸಿ' ಪ್ರೋಟೀನ್ ನಂಜಿಗೆ ಕಾಯಿಕೊರಕ ಹುಳುಗಳು ಪ್ರತಿರೋಧಶಕ್ತಿ ಬೆಳೆಸಿ ಕೊಂಡಿರಬಹುದು; ಬಿಟಿ ಬೆಳೆ ಹೊಲದ ಸಮೀಪದಲ್ಲಿ ಬಿಟಿಯೇತರ ಬೆಳೆಗಳ ಹೊಲಗಳಿದ್ದು ಉಭಯ ಹೊಲಗಳ ಕೀಟಗಳ ಸಂಪರ್ಕಗೊಂಡು ಪ್ರತಿರೋಧ ಶಕ್ತಿ ರಹಿತವಾಗಿರಲೂ ಸಾಧ್ಯ ಎನ್ನುತ್ತದೆ. ಹೀಗಾಗಿ ಬೋಲ್‌ಗಾರ್ಡ್ – II

ತನ್ನಲ್ಲ 'ಕ್ರೈ I ಎಸಿ' ಮತ್ತು ಕ್ರೈ I ಎಬಿ ಎಂಬ (cryI Ac and cryI Ab) ಎಂಬ ಎರಡು ಪ್ರೋಟೀನ್‌ಗಳನ್ನೂ ಬಳಸಿ ಹೆಚ್ಚು ಶಕ್ತಿಯುತ ಕ್ರೀಟ ನಿರೋಧಕವಾಗಿದೆ ಎಂದು ಮಾನ್ಸಾಂಟೋ ಹೇಳುತ್ತಿದೆ. ಅಂದರೆ ಮಾರುಕಟ್ಟೆಯಿಂದ ಸಾಮಾನ್ಯ ಬೋಲ್‌ಗಾರ್ಡ್ ಅನ್ನು 2011ನೇ ಇಸವಿಯಿಂದ ಹಿಂದಕ್ಕೆ ತೆಗೆದುಕೊಳ್ಳಬೇಕಾಗಿರುವುದರಿಂದ ಇಂಥ ಉಪಾಯಗಳು ಮುಂದಾಗುತ್ತಿವೆ ಎನ್ನಬೇಕು. ಕೆಲಕಾಲಾನಂತರ ಕಂಪೆನಿಯ ಬೋಲ್‌ಗಾರ್ಡ್ – II ನಿರೋಧಕ ಶಕ್ತಿ ಕಡಿಮೆಯಾಗಿದೆ. ಬೋಲ್‌ಗಾರ್ಡ್ – III ಬಗೆ ಬೀಜಗಳನ್ನು ಬಳಸಬೇಕು ಎಂದೂ ಹೇಳಬಹುದು. ಆಫ್ರಿಕನ್ ಸೆಂಟರ್ ಆಫ್ ಬೈಯೋ ಸೇಫ್ಟಿ (ಜೋಹಾನ್ನಿಸ್‌ಬರ್ಗ್) ಸಂಸ್ಥೆಯು ತನ್ನ ಅಧ್ಯಯನವೊಂದರಿಂದ ಪಡೆದ ಮಾಹಿತಿಯಿಂದ ಗಿಡದ ಬೀಜದಲ್ಲಿ ಒಂದಕ್ಕಿಂತ ಹೆಚ್ಚು ಸಂಖ್ಯೆಯಲ್ಲಿ ನಿರ್ದಿಷ್ಟ ಕೀಟನಾಶಕ ನಂಜು ಹೊಂದಿರುವ ಬಿಟಿ ಪ್ರೋಟೀನ್, ಸಸ್ಯ ಲೋಕದಲ್ಲಿ ಹೊಸ ರೂಪದ ಮಾಲಿನ್ಯವನ್ನು ಸೃಷ್ಟಿಸಬಲ್ಲ ಶಕ್ತಿಯನ್ನು ಪಡೆದಿರುವಂಥಾಗಿರುತ್ತದೆ ಎಂದಿದೆ.** ಅಂದರೆ ಹೊಸ ಸೋಂಕುಗಳ ನಿರ್ಮಾಣಕ್ಕೆ ಮಾನ್ಸೆಂಟೋವಿನ ಮಾರುಕಟ್ಟೆ ಲಾಭೈಕ ದೃಷ್ಟಿ ಹೊಂದಿದ ತಳಿಶೋಧಗಳು ಕಾರಣವಾಗಬಲ್ಲವು ಎಂಬ ಎಚ್ಚರಿಕೆ ಇಲ್ಲಿದೆ.

**ಬಿಟಿ ಬದನೆಗೆ ಮುಂದುವರಿದ ವಿರೋಧ :** ಬಿಟಿ ತಂತ್ರಜ್ಞಾನ, ಜನ, ಜಾನುವಾರ, ಆರೋಗ್ಯ, ಪರಿಸರ, ಇವುಗಳ ಮೇಲೆ ದುಷ್ಪರಿಣಾಮ ಬೀರುವ ಕುಲಾಂತರಿ ಬದನೆ ಬೆಳೆದು ಬಿಡುಗಡೆಗೆ ಜಿಇಸಿಎ ಕುಲಾಂತರಿ ತಂತ್ರಜ್ಞಾನ ಒಪ್ಪಿಗೆ ಸಮಿತಿ ಸಮ್ಮತಿಸಿದ್ದು ಸರಿಯಲ್ಲ ಎಂದು ರೈತಸಂಘದ ಕಾರ್ಯಾಧ್ಯಕ್ಷ ಕೋಡಿಹಳ್ಳಿ ಚಂದ್ರಶೇಖರ್ ಕೇಂದ್ರ ಸರ್ಕಾರವನ್ನು ಒತ್ತಾಯಿಸಿದರು. ಕೇಂದ್ರವು ಈ ಬದನೆಗೆ ಸಮ್ಮತಿಸಿದ್ದು ಸರಿಯಲ್ಲ. ಕಾನ್ಸರ್ ಕಾರಕ್ ಬಿಟಿ ಬದನೆಕಾಯಿ ತಳಿ ತಂದು ಇಲ್ಲಿನ ವಂಶವಾಹಿಗಳನ್ನು (ದೇಶೀಯ) ನಾಶ ಮಾಡುವ ಹುನ್ನಾರ ಆಗಬಾರದು. ಇದು ಮುಂದುವರಿದರೆ ಈ ಹಿಂದೆ ಮಾನ್ಸೆಂಟೊ, ಕೆಂಟಕಿ ಕಂಪೆನಿಗಳ ವಿರುದ್ಧ ಪ್ರತಿರೋಧ ತೋರಿದಂತೆ ಈ ಕುಲಾಂತರಿ ಬಿತ್ತನೆ ಬೀಜಗಳ ವಿರುದ್ಧವೂ ಪ್ರತಿಭಟನೆ ಮಾಡುವ ಬಗ್ಗೆ ತಿಳಿಸಿದ್ದರು (16.10.09). ಕೇಂದ್ರ ಸರ್ಕಾರವಾದರೋ ರೈತರು, ವಿಜ್ಞಾನಿಗಳೊಂದಿಗೆ ಚರ್ಚಿಸಿದ ನಂತರವೆ ಕುಲಾಂತರಿ ಬದನೆ ತಳಿಯನ್ನು ಭಾರತೀಯ ಕೃಷಿ ವಲಯಕ್ಕೆ ಪರಿಚಯಿಸಲಾಗುತ್ತದೆ ಎಂದು ಸ್ಪಷ್ಟಪಡಿಸಿತು.

** *RAVLEEN KAUR., 'Pink bollworm resistant to Bt: Monsanto;* ***Down To Earth*** *(Fortnightly) April 1-15, 2010, p.19.*

2010ನೇ ಸಾಲಿನ ಆರಂಭದ ತಿಂಗಳುಗಳಲ್ಲಿ ರೈತರು, ಸರ್ಕಾರೇತರ ಸಂಸ್ಥೆಗಳು, ವಿಜ್ಞಾನಿಗಳೊಂದಿಗೆ, ಸಾರ್ವಜನಿಕರು ಸಹಿತವಾಗಿ ಚರ್ಚೆನಡೆಸಿ ಅಭಿಪ್ರಾಯಗಳನ್ನು ಈ ಬಗ್ಗೆ ಆಹ್ವಾನಿಸಲಾಗುವುದು ಎಂದು ಕೇಂದ್ರ ಅರಣ್ಯ ಮತ್ತು ಪರಿಸರ ಇಲಾಖೆ ಸಚಿವ ಜೈರಾಂ ರಮೇಶ್ ನುಡಿದರು (15.10.09). ಈ ಬಗ್ಗೆ 2010 ಫೆಬ್ರವರಿ ತಿಂಗಳಲ್ಲಿ ನಡೆದ ಸರ್ವ ಸಮಾಲೋಚನೆ, ಅಭಿಪ್ರಾಯ, ಬಿಟಿ ತಳಿಗೆ ತಾತ್ಕಾಲಿಕ ಕಡೆಗೆ ನಿರ್ಧಾರವಾದ ಬಗ್ಗೆ ವಿವರವಾಗಿ ಈ ಹಿಂದೆಯೇ ನೀಡಲಾಗಿದೆ.

ಬಹುರಾಷ್ಟ್ರೀಯ ಬೀಜ ಕಂಪೆನಿಗಳಿಗೆ ಭಾರತದ ಜನ ಪ್ರಯೋಗ ಪಶುಗಳಾಗುತ್ತಿದ್ದಾರೆ. ಬಿಟಿ ಆಹಾರದಿಂದ ತಕ್ಷಣ ಅಡ್ಡ ಪರಿಣಾಮಗಳು ಕಾಣದಿರಬಹುದು. ಆದರೆ ಕಾಲಾಂತರದ ಪರಿಣಾಮದಲ್ಲಿ ಬಿಟಿ ಬೀಜದ ಯಾವುದೇ ಬೆಳೆಯ ಸೊಪ್ಪು ತಿಂದರೂ, ಮನುಷ್ಯರಲ್ಲಿ ಹಸುಗಳಲ್ಲಿ ಚರ್ಮರೋಗ ಕಾಣಿಸಿಕೊಂಡದ್ದು ಕಂಡು ದಕ್ಷಿಣ ಅಮೇರಿಕ, ಆಫ್ರಿಕದಲ್ಲಿ ಆ ಬೆಳೆಗೆ ತೀವ್ರ ವಿರೋಧ ಕಂಡು ಬಂದಿದೆ. ಸಾವಯುವ ಕೃಷಿ ದುಬಾರಿ ರೈತರಿಗೆ ಲಾಭವೇನನ್ನು ತರುವುದಿಲ್ಲ ಎಂಬ ಹುಯಿಲೂ ಹಸಿಸುಳ್ಳಿನ ಅಪರಾವತಾರವಾಗಿದೆ. ರಾಸಾಯನಿಕ ಕೃಷಿಯಿಂದ ವಿಮುಖರಾಗಿ ರೈತರು ಸಾವಯುವ, ಸಹಜ ಕೃಷಿಯತ್ತ ಬಾಗಿರುವುದು ಬಹುರಾಷ್ಟ್ರೀಯ ಕಂಪೆನಿಗಳಲ್ಲಿ ತಳಮಳವನ್ನುಂಟುಮಾಡಿದೆ. ಹೀಗಾಗಿ ತಮ್ಮ ಕುಲಾಂತರಿ ತಳಗಳ ಮೂಲಕ ಒಪ್ಪಂದಗಳಲ್ಲಿ ರೈತರನ್ನು ಕಟ್ಟಿ ಹಾಕಬಯಸುವ, ಬೀಜಕ್ಕಾಗಿ ಅವರನ್ನೇ ಅವಲಂಬಿಸುವಂಥ ಹುನ್ನಾರಗಳನ್ನು ರೂಪಿಸಿರುವ ಆ ಕಂಪೆನಿಗಳು ನ್ಯಾಯಾಲಯದ ಆಸರೆ ಪಡೆಯಬಹುದು. ಆಗ ನಮ್ಮ ರೈತರು ದುಡಿಮೆ ಬಿಟ್ಟು ಕಟಕಟಯಲ್ಲಿ ನಿಂತು ವಾದಿಸಲು ಸಾಧ್ಯವೆ! ಬಿಟಿ ಬದನೆ ಉತ್ಪಾದನೆಯಿಂದ ಭಾರಿ ಲಾಭವೆನ್ನವಾಗುತ್ತಿದೆ. ಭಾರತವು ವಿಶ್ವದಲ್ಲಿಯೆ ಅತಿ ಹೆಚ್ಚು ಬದನೆ ಬೆಳೆಯುವ ಎರಡನೆಯ ಸ್ಥಾನದಲ್ಲಿದೆ. ನಮ್ಮ ದೇಶೀಯ ತಳಿಯೆ ಉನ್ನತ ಘಟ್ಟದಲ್ಲಿದೆ. ಇಂಥ ಸಂದರ್ಭವಿರುವಲ್ಲಿ ಅವಶ್ಯಕತೆ ಏನಿದೆ? ಎಂದು **ವೀರಭದ್ರಪ್ಪ** ಬಿಸ್ಲಳ್ಳಿ ಅವರು ಸಮುಚಿತವಾಗಿ ತಾಂತ್ರಿಕ ಪ್ರಶ್ನೆಯನ್ನು ಎತ್ತಿದ್ದಾರೆ. **(2.11.09)**

**ಬಿಟಿ** ಬದನೆ ಪುರ ವಿರೋಧ ಸಂವಾದಗಳು ದೇಶದೆಲ್ಲೆಡೆ ನಡೆದು **ಬಂದಿವೆ.** ಈ ಸಂದರ್ಭದಲ್ಲಿ ಕೇರಳದ ಮರಾಠಿಕುಳಂನಲ್ಲ ಬೆಳೆದ ದೇಸಿ ತಳಿಯ **ಬದನೆ ಬಿಟಿ** ಬದನೆ ಎದುರು ತನ್ನ ಯಶೋಗಾಥೆಯನ್ನು ಬಿಂಬಿಸುತ್ತದೆ. ರೈತರ **ಸ್ವಾವಲಂಬಿ** ಶಕ್ತಿಯನ್ನು ಎತ್ತಿ ತೋರಿದೆ. ಈ ಪ್ರದೇಶದ ಜನ ತಮಗಿದ್ದ ಸಣ್ಣ

ಮರಳು ಮಣ್ಣಿನ ಸಣ್ಣ ಜಮೀನಿನಲ್ಲಿ ತುಸು ಬೇಸಾಯ ನಾಡಿನ ಕಸಬು, ಮೀನುಗಾರಿಕೆಯಿಂದ ಬದುಕು ಸಾಗಿಸುತ್ತಿದ್ದರು. ಬೇರಿನ ರೋಗಕ್ಕೆ ತುತ್ತಾಗಿ ತೆಂಗಿನ ನಾರು ದಕ್ಕದಾದಾಗ ಸಂಕಷ್ಟಕ್ಕೆ ಸಿಲುಕಿದ ರೈತರನ್ನು ಗ್ರಾಮ ಪಂಚಾಯಿತಿ ಸಾವಯವ ತರಕಾರಿಯಾಗಿ ಬದನೆ ಬೆಳೆಯಲು ಉತ್ತೇಜನ ನೀಡಿ, ಮಾರುಕಟ್ಟೆ ವ್ಯವಸ್ಥೆಯನ್ನು ಮಾಡಿತು. ಉದ್ದನೆಯ ಹಸಿರು ಬಣ್ಣದ ಈ ಬದನೆ ಎಲ್ಲ ಋತುಗಳಲ್ಲಿಯೂ ಬೆಳೆಯುತ್ತದೆ. ಕೇರಳದ ರೈತರು ತಲೆತಲೆಮಾರುಗಳಿಂದ ಬೆಳೆಯುತ್ತ ಬಂದು 'ಕರಪ್ಪುರಂ ಬದನೆ' ಎಂದೇ ಪ್ರಸಿದ್ಧಿಗೆ ತಂದಿದ್ದರು. ಹೊಸ ತಳಿಗಳು, ಹಾಗೂ ಕೇರಳದ ಕೃಷಿ ವಿಶ್ವವಿದ್ಯಾಲಯ ಬಿಡುಗಡೆ ಮಾಡಿ ನಾಲ್ಕು ಹೊಸ ತಳಿಗಳಿದ್ದರೋ (ನೀತಿಮಾ, ಸೂರ್ಯ, ಹರಿತ, ಶ್ವೇತ ಇತ್ಯಾದಿ) ಗ್ರಾಮ ಪಂಚಾಯತಿ ಮಾಡಿಕುಳಂ ಬದನೆಯತ್ತವೆ ಗಮನ ಹರಿಸಿತು. ಊರಿನ ಹಿರಿಯರೂ ಈ ತಳಿಯ ಬಗ್ಗೆ ಹೆಚ್ಚಿನ ಮಾಹಿತಿ ನೀಡಿದರು. ಈ ದಿಸೆಯಲ್ಲಿ ಪಂಚಾಯಿತಿಯು ಕೆಲವಾರು ಮಾಡಿಕುಳಂ ಬದನೆ ಬೆಳೆಯುತ್ತಿದ್ದ ರೈತರನ್ನು ಗುರುತಿಸಿ, ಪ್ರೋತ್ಸಾಹ ಧನ ನೀಡಿ ಹೆಚ್ಚಿನ ಪ್ರಮಾಣದಲ್ಲಿ ಬೀಜವನ್ನು ಉತ್ಪಾದಿಸುವಂತೆ ಮಾಡಿ, ಅಭಿವೃದ್ಧಿ ಸೊಸೈಟಿಗೆ ಒದಗಿಸುವಂತೆ ಮಾಡಿದರು. ಕುಲಾಂತರಿ ತಳಿಯ ದುಷ್ಪರಿಣಾಮವನ್ನು ತಿಳಿಸುವ ಸಾಕ್ಷ್ಯ ಚಿತ್ರವೂ ತಯಾರಾಯಿತು. ಬಿಟಿ ತಳಿಗಳಿಂದಾಗಿ ಭಾರತದ ವೈವಿಧ್ಯಮಯ ಹತ್ತಿ ತಳಿಗಳ ಮಾಯವಾದದ್ದು, ರೈತರಿಗೆ ಬಿತ್ತನೆ ಬೀಜ ಆಯ್ದುಕೊಳ್ಳುವ ಸ್ವಾತಂತ್ರ್ಯ ಹರಣ ಇತ್ಯಾದಿಗಳು ರೈತರ ಮನಸ್ಸಿಗೆ ಬಿಂದುವು. ಮಾರಿಕುಳಂನಲ್ಲಿ ಬದನೆ ಉತ್ಸವವನ್ನು ಹಮ್ಮಿಕೊಂಡರು. ಹಸಿರು ಮನೆ ಪರಿಣಾಮವೂ ನಗಣ್ಯವಾಗಿ ಒಂದೇ ತಿಂಗಳಲ್ಲಿ ಬದನೆಯ ಸಸಿಗಳನ್ನು (40 ಸಾವಿರ) ಬೆಳಸಿ ಹಂಚಿದರು. ಬದನೆಯ ವೈವಿಧ್ಯಮಯ ಪಾಕಗಳನ್ನು, ಉಪ್ಪಿನಕಾಯಿಯನ್ನು ತಯಾರಿಸಿ ಕೇರಳಿಗರು ದೇಶಾದ್ಯಂತ ಪ್ರಚಾರ ಮಾಡಿದರು. ಹೀಗಾಗಿ ಈ ಬದನೆಯ ವೈವಿಧ್ಯತೆಯ ಅಧ್ಯಯನಕ್ಕೆ ಗುಣಮಟ್ಟದ ರಕ್ಷಣೆಗೆ ಪಂಚಾಯಿತಿಯು ಮುಂದಾಗಿರುವ ಬಗ್ಗೆ ಶ್ರೀ ಪಡ್ರೆ ಅವರು ಸಿವಿಲ್ ಸೊಸೈಟಿ ನಿಯತಕಾಲಿಕೆಯಿಂದ ಹೆಕ್ಕಿ ವಿವರಿಸಿದ್ದಾರೆ. (28.3.2010). ಇದು ಸ್ವಾವಲಂಬಿಯಾಗಿ ಸಾಂಪ್ರದಾಯಿಕ ಸೂಕ್ತ ದೇಸೀ ತಳಿಯನ್ನು ಪ್ರಚುರ ಪಡಿಸುವ ಪ್ರಕಾರವೆನಿಸುತ್ತದೆ. ಗುರುತಿಸಲು ಕಣ್ಣು ಮನಸ್ಸು ಇದ್ದಾಗ ಇದೆಲ್ಲ ಸಾಧ್ಯವಾಗುತ್ತದೆ.

ಇನ್ನು ಬಿಟಿ ಬದನೆ ಕೃಷಿ ಕುರಿದಂತೆ ದೇಶದ ವಿವಿಧ ಕಡೆ ನಡೆದ ವಾದ–ವಿವಾದ ಚಳುವಳಿಗಳ ಕಾರಣ ಅದರ ಪರಿಚಯ ಹಾಗೂ ಬಳಕೆಗೆ ವಿಧಿ

ಇಲ್ಲದೆ ತಾತ್ಕಾಲಿಕವಾಗಿಯಾದರೂ ನಿಷೇಧವನ್ನು ಕೇಂದ್ರ ಸರ್ಕಾರ ಹೇರಬೇಕಾಯಿತು. ಇಲ್ಲ ರೈತ ಸಮುದಾಯವನ್ನು ಜಾಗೃತಗೊಳಿಸಬಲ್ಲ ಜಾಗತಿಕ ರೈತ ನಾಯಕತ್ವವು ರೂಪುಗೊಂಡಿದ್ದೇನೋ ಸರಿ. ಆದರೆ ಕೇಂದ್ರ ಸರ್ಕಾರವಾಗಲಿ. ಅರಣ್ಯ ಪರಿಸರ ಸಚಿವರಾಗಲಿ, ಕೃಷಿ ವಿಜ್ಞಾನಿಗಳ ಅಭಿಪ್ರಾಯವನ್ನು ನಗಣ್ಯ ಮಾಡಿದರೆನ್ನುವಂತಿಲ್ಲ. ರೈತರು ಹಾಗೂ ಕೃಷಿ ವಿಜ್ಞಾನಿಗಳ ಅನುಭವ, ಅಭಿಪ್ರಾಯ ಸಂಶೋಧನೆಗಳಿಗೆ ಹೊಂದಾಣಿಕೆಯ ಸೇತು ಅಗತ್ಯವಾಗಿತ್ತು. ಸಂವಹನ ಸಾಮರಸ್ಯ ನಿರ್ಮಾಣ ಮಾಡುವ ಪ್ರಯತ್ನ ಮೂಡಿಬರಬೇಕಾಗಿತ್ತು. ಸಾರ್ವಜನಿಕ ವಿಚಾರ ವಿನಿಮಯ ಕಾರ್ಯಕ್ರಮವನ್ನು ಈ ಕಾರಣ ಕೇಂದ್ರ ಸಚಿವರು ವ್ಯವಸ್ಥೆ ಮಾಡಿದ್ದುದು ಸೂಕ್ತವಾಗಿತ್ತು. ದಿಟ ರೈತರು ಪರವಾಗಿ ಚಳುವಳಿ ರೂಪಿಸಿದವರ ಅಭಿಪ್ರಾಯಗಳನ್ನು ವಿಜ್ಞಾನಿಗಳು ಆಲಿಸಿದಂತೆ ವಿಜ್ಞಾನಿಗಳು ಹೇಳುವ ಸಂಗತಿಗಳನ್ನು ರೈತನಾಯಕರೂ ಗಮನಿಸಿದರೆ ಪ್ರಗತಿಯ ಹೆಜ್ಜೆ ಇಡುವ ದಾರಿಯಲ್ಲಿ ಇತಿಮಿತಿಗಳನ್ನು ಸರಿಪಡಿಸಿಕೊಳ್ಳುವ ಕಾರ್ಯವೂ ಆಗುತ್ತದೆ. ಈ ಬಗ್ಗೆ ಪತ್ರಿಕಾ ಸಂಪಾದಕೀಯಗಳಲ್ಲೂ ಸಲಹೆಗಳು ವ್ಯಕ್ತವಾಗಿವೆ (11.12.2010) ಇದೇ ರೀತಿ 'ರೈತ ತೀರ್ಪು'ವಿನಂಥ ರೈತಜ್ಯೂರಿಗಳು ರೈತರು-ಕೃಷಿ ವಿಜ್ಞಾನಿಗಳು-ಸಾರ್ವಜನಿಕರು ಕೂಡಿ ಸಂವಾದ ಸಮಾಗಮ ಕಾರ್ಯಕ್ರಮಗಳು ಶಿಖರಗಳು ನಡೆಯಬೇಕು. ರೈತರ ಅನುಭವಗಳಿಗೂ ಮಾನ್ಯತೆ ಒದಗಬೇಕು. ಕೃಷಿ ವಿಜ್ಞಾನಿಗಳ ಸಂಶೋಧನೆಯ ಫಲಿತಗಳು ರೈತರಲ್ಲಿ ಅನ್ವಯ ಮುಖಿ ಆಗಬೇಕು. ಅಂದರೆ ರೈತರ ಅನುಭವಕ್ಕೂ ವೈಜ್ಞಾನಿಕ ಮಾನ್ಯತೆ, ಕೃಷಿ ವಿಜ್ಞಾನಿಗಳ ಶೋಧಕ್ಕೂ ಸಾಮಾಜಿಕ ಸ್ವೀಕರಣ ದೊರೆತು ಉಭಯ ಪ್ರಯೋಜನವಾಗಬೇಕು. ಆಗ ಸಾಂಪ್ರದಾಯಿಕ Versus (Vs) ಜಾಗತಿಕ ಹಮ್ಮಿನ ಮೇಲಾಟಗಳಿಗೆ ಅವಕಾಶವಾಗದೆ ಅನುಭವ, ಸಂಶೋಧನೆಗಳ ವಿನಿಮಯಗಳು ಆಗಿ ಉಭಯ ಪಕ್ಷಗಳೂ ಪ್ರಯೋಜನ ಸಾಮರಸ್ಯ ಒದಗುತ್ತದೆ. ಅಂತೇ ಜೈವಿಕ ಭಯೋತ್ಪಾದನೇ Bio terrorism ಎಂಬ ಆರೋಪದಿಂದ ಕುಲಾಂತರಿ ತಂತ್ರಜ್ಞಾನವು ಮುಕ್ತವಾಗುವಂಥ ಶೋಧಗಳನ್ನು ನೀಡಬೇಕು.

**ಜಮೀನು ಕಲ್ನಾರು ಮಣ್ಣು ಗುತ್ತಿಗೆ ಕೊಟ್ಟು ಬೇಸಾಯ ಕಳಕೊಂಡ ರೈತರು:**

ಮೈಸೂರು ಜಿಲ್ಲೆ ಕೆ.ಆರ್. ನಗರ, ಸಾಲಿಗ್ರಾಮ ಹೋಬಳಿ ಕಾಳಮ್ಮನ ಕೊಪ್ಪಲು, ಬೆಟ್ಟಹಳ್ಳಿ, ರಾಮನಾಥ ಪುರದ ಬಳಿಯ ಜಮೀನುಗಳು, ಭೇರ್ಯ, ಹಳ್ಳಿ ಮೈಸೂರು ಇತ್ಯಾದಿ ಗ್ರಾಮಗಳ ರೈತರ ಜಮೀನುಗಳು ಕಲ್ನಾರು ಮಣ್ಣು ಕೂಡಿದಂಥವು; ನೀರಿನ ಪೈಪು, ಸ್ಯಾನಿಟರಿ ಪೈಪು ತಯಾರಿಸಲು ಈ ಮಣ್ಣು ಅನುಕೂಲಕರ

ಹೀಗಾಗಿ ಮೈಸೂರಿನ ಉದ್ಯಮಿಗಳಿಗೆ ಇದರ ಮೇಲೆ ಕಣ್ಣು ಬಿದ್ದು ರೈತರ ಮನೆಬಾಗಿಲಿಗೇ ಜಮೀನು ಗುತ್ತಿಗೆ ಪಡೆಯಲು ಬಂದರು.

ಹೇಮಾವತಿ ನದಿನಾಲಾ ನೀರಿನ ಒದಗಣೆಯ ಕಾರಣ ಭತ್ತ, ಕಬ್ಬು, ಸಹಿತವಾಗಿ ನೀರಾವರಿ ಬೆಳೆಗಳಿಲ್ಲಿವೆ. ನಾಲಾ ನೀರಿಲ್ಲದಾಗಲೂ ಜೋಳ, ರಾಗಿ, ಬೆಳೆಯುತ್ತಿದ್ದರು. ಹೇಮಾವತಿ ನಾಲೆಯ ಕೊನೆಯ ಸಾಲಿಗೆ ಇರುವ ಸಾಲಿಗ್ರಾಮ ಹೋಬಳಿಯ ಅನೇಕ ಗ್ರಾಮಗಳಿಗೆ ಕೆಲವು ವರ್ಷಗಳ ಹಿಂದೆ ನೀರು ಸರಿಯಾಗಿ ಬರುತ್ತಿರಲಿಲ್ಲ. ಆ ಸಂದರ್ಭದಲ್ಲಿಯೆ ಉದ್ಯಮಿಗಳು ಅಲ್ಲಿಗೆ ಕಾಲಿಟ್ಟರು. ಎಕರೆಗೆ 15 ರಿಂದ 20 ಸಾವಿರ ರೂಗಳಿಗೆ ವಾರ್ಷಿಕ ಗುತ್ತಿಗೆ ಕೊಟ್ಟರು. ಆಗ ಆ ಮಣ್ಣು, ಲಕ್ಷ್ಮಿಯ ಬೊಕ್ಕಸವನ್ನು ರೈತರಿಗೆ ತಂದುಕೊಟ್ಟಿತು. ನಂತರ ರೈತರೂ ಎಚ್ಚೆತ್ತುಕೊಂಡು ವಾರ್ಷಿಕ ಗುತ್ತಿಗೆ ಬದಲು ಲೋಡ್ ಮಣ್ಣಿಗೆ ಸುಮಾರು 500 ರೂ.ಗಳವರೆಗೆ ಪಡೆದು ಮಣ್ಣು ತೆಗೆದುಕೊಳ್ಳಲು ಅವಕಾಶಕೊಟ್ಟರು. ಇಂಥ ಅನುಮತಿ ಸಿಕ್ಕದ್ದೇ ತಡ ದಿನಕ್ಕೆ ಜೆಸಿಬಿ ಯಂತ್ರಗಳಿಂದ 10–12 ಲೋಡ್ ಮಣ್ಣು ತೆಗೆದೂತೆಗೆದು, ಸಮತಟ್ಟಾದ ಗದ್ದೆಗಳೆಲ್ಲ ಗುಂಡಿಗಳಾದುವು. ಜಮೀನು ಗುಂಡಿಗಳಲ್ಲಿ ನಾಲೆಯ ನೀರು ತುಂಬಿ ಬೆಳೆಗೆ ನೆಲೆಯೇ ಇಲ್ಲದಂತಾಗಿದೆ. ರೈತರು ಭವಿಷ್ಯವನ್ನು ನೋಡದೆ ವರ್ತಮಾನದ ದುಡ್ಡಿನ ಆಮಿಷದಲ್ಲಿ ಹಳ್ಳಕ್ಕೆ ಬಿದ್ದಂತಾಗಿದೆ, ಎಂಬ ಅಭಿಪ್ರಾಯ ರವೀಂದ್ರಭಟ್ಟ ಅವರದಾಗಿದೆ. (13.12.09)

**ಮೆಣಸು, ಕಬ್ಬು ಬೆಳೆಹಾನಿ** : 2009ರ ಸೆಪ್ಟೆಂಬರಿನಲ್ಲಿ ಆದ ಭಾರಿ ಮಳೆಯಿಂದಾಗಿ ಕೆಂಪು ಮೆಣಸಿನಕಾಯಿ ಬೇರು ಕೊಳೆತು ಬಿಳಿ ಬಣ್ಣಕ್ಕೆ ತಿರುಗಿ ಹುಬ್ಬಳ್ಳಿ ಬ್ಯಾಡಗಿ, ಗದಗ ಇತ್ಯಾದಿ ನೆಲೆಗಳ ಮಾರುಕಟ್ಟೆಗಳಲ್ಲಿ ಅದಕ್ಕೆ ಗ್ರಾಹಕರೇ ಇಲ್ಲದಂತಾಗಿತ್ತು. ಎಪಿಎಂಸಿಗಳಿಗೆ ಶೇ 40 ರಷ್ಟು ಮೆಣಸಿನಕಾಯಿ ಬೆಳೆ ಬಂದರೂ ಶೇ. 10ರಷ್ಟು ಮಾತ್ರ ಉತ್ತಮವಾಗಿತ್ತು ಎಂದರೆ ರೈತರ ಪಡಿಪಾಟಲು ಬಗ್ಗೆ ಹೇಳುವುದೇ ಬೇಡ. ಇಳುವರಿ ಕುಸಿತದ ಜೊತೆಗೆ ಬೆಲೆಯ ಬನ್ನವೂ ಅವರ ಬೆನ್ನು ಹತ್ತಿತ್ತು. ನೆರೆ ಕಾರಣದಿಂದ ಸರ್ಕಾರ ರೈತರಿಗೆ ನೀಡಿದ ಪರಿಹಾರ ಸಾಲದೆ ಹೆಚ್ಚು ಬೇಕಾಗಿದೆ ಎಂಬುದು ರೈತರ ಒತ್ತಾಯವಾಗಿತ್ತು ಎಂಬುದು ಬಸವರಾಜ ಹಿರೇಮಠರಿಗೆ ಕಂಡು ಬಂದ ಸನ್ನಿವೇಶ, ಬರವೊಂದು ಕಡೆ ಮತ್ತೆ ಪ್ರವಾಹ ಇವೆರಡರ ನಡುವೆ ಕಬ್ಬು ಬೆಳೆಗೆ ಹೂವು ಆಕರಿಸಿ, ವಯಸ್ಸು ಆಗಿ ಬೆಳೆ ನಿಂತ ಸಂಕೇತವಾಗಿತ್ತು. ಇದ್ದಷ್ಟನ್ನು ಕಟಾವು ಮಾಡಲೇಬೇಕಾದ ಅನಿವಾರ್ಯತೆ ಕಾರ್ಖಾನೆಗಳು ಎಲ್ಲ ಕಬ್ಬನ್ನು ನುರಿಸಲೇ ಬೇಕಾದ ಪರಿಸ್ಥಿತಿ. ಇಲ್ಲವೆಂದರೆ

ಇಳುವರಿ ಕುಸಿತದಲ್ಲಿ ಒಣಗಿ ಸಾಯುವ ಕಬ್ಬು ರೈತರಿಗೆ, ಕಾರ್ಖಾನೆಗಳಿಗೆ ನಷ್ಟವನ್ನು ಆರೋಪಿಸುತ್ತದೆ. ಇಥರೇಲ್ ಸಿಂಪರಣೆ, ನೀರು ಕುಗ್ಗಿಸುವುದು ಇತ್ಯಾದಿಗಳಿಂದ ಹೂವು ಬಿಟ್ಟು ವಯಸ್ಸಾಗುವ ಕಬ್ಬಿನ ಪ್ರಕ್ರಿಯೆಯನ್ನು ನಿಯಂತ್ರಿಸುವ ಕಾಲವೂ ಮುಗಿದಿತ್ತು. ಇದ್ದ ಕಬ್ಬಿನ ಕಟಾವಿಗೆ ಕೃಷಿ ಕೂಲಿಗಳ ಅಭಾವ, ಕಬ್ಬು ಕಟಾವಿಗೆ ಕಾರ್ಖಾನೆ ತಡೆ ಇತ್ಯಾದಿಗಳು ಸಕ್ಕರೆ ಉತ್ಪಾದನೆ ಕುಸಿತವಾಗುತ್ತದೆ ಎಂಬುದು ಎಂ.ಕೆ. ಹೆಗಡೆ ಅವರು ವಿಶ್ಲೇಷಿಸಿದ ವಿಷಯ (30.12.09). ಇದೇ ಸಂದರ್ಭದಲ್ಲಿ ಬೆಂಗಳೂರಿನಲ್ಲಿ ನಡೆದ ಕರ್ನಾಟಕ ಪ್ರಾಂತ ರೈತ ಸಂಘದ 14ನೇ ಸಮ್ಮೇಳನದಲ್ಲಿ ವಿಶ್ವವಾಣಿಜ್ಯ ಸಂಸ್ಥೆ ನೀತಿಯು ಕೃಷಿ ಕೇತ್ರದ ಮೇಲೆ ಅನುಕೂಲಕರ ಪರಿಣಾಮ ಬೀರದೆ ಕೃಷಿ ಚಟುವಟಿಕೆ ದೇಶದಲ್ಲಿ ಕುಂಠಿತವಾಗುವಂತೆ ಮಾಡಿದೆ. ರೈತರು ಜಾನುವಾರು ಮಾರಿ ನಗರಗಳಿಗೆ ವಲಸೆ ಹೋಗುತ್ತಿದ್ದಾರೆ. ವಲಸೆ ಹೋಗುವರಿಗೂ ಹಳ್ಳಿಯಲ್ಲಿ ಹಿಂದೆ ಅನುಭವಿಸಿದ್ದ ನೆಮ್ಮದಿಯಂತು ಸಿಕ್ಕದ ಬಣ್ಣದ ಜಗತ್ತಿನಲ್ಲಿ ಕಳೆದುಹೋಗಿದ್ದಾರೆ. ರೈತರ ದುಡಿಮೆಗೆ ತಕ್ಕ ಪ್ರತಿಫಲವಿಲ್ಲ. ಸಕ್ಕರೆಗೆ ಬೆಲೆ ಇದೆ. ಆದರೆ ಕಬ್ಬಿಗೆ ದರ ಸಿಗುತ್ತಿಲ್ಲ. ಇಂಥ ಸ್ಥಿತಿ ಇರುವಾಗ, ಉತ್ತಮ ಗುಣಮಟ್ಟದ ಬಿತ್ತನೆ ಬೀಜ, ನೆರೆ, ಬರೆ, ಪ್ರಕೃತಿ ವಿಕೋಪದಿಂದ ಬೆಳೆಹಾನಿ ಆದಾಗ ಸೂಕ್ತ ಪರಿಹಾರ ವಿಮೆ ನೀಡಿಕೆ ಅಗತ್ಯವಿದೆ ಎಂಬುದು ಸಮ್ಮೇಳನದ ಆಶಯವಾಗಿ ವ್ಯಕ್ತವಾಗಿತ್ತು. ಜನವರಿ 7 ರಿಂದ 10ರತನಕ ಇವನ್ನೆಲ್ಲ ಈಡೇರಿಸುವ ಬಗ್ಗೆ ಒತ್ತಾಯಿಸಲು ಆಂಧ್ರದಲ್ಲಿ ರಾಷ್ಟ್ರೀಯ ರೈತ ಸಮಾವೇಶವನ್ನು ಹಮ್ಮಿಕೊಳ್ಳುವ ಆಶಯವೂ ವ್ಯಕ್ತವಾಗಿತ್ತು.

**ದಾಳಿಂಬೆ ಬೆಳೆಗಾರರಿಗೆ ಸಂಕಷ್ಟ :** ಚಿತ್ರದುರ್ಗ, ಬಳ್ಳಾರಿ, ಕೊಪ್ಪಳ, ಬಿಜಾಪುರ, ಬಾಗಲಕೋಟೆ ಜಿಲ್ಲೆಗಳ ರೈತರು ದಾಳಿಂಬೆ ಬೆಳೆ ಲಾಭದಾಯಕ ಎಂದು ಭತ್ತದ ಕೃಷಿ ಬಿಟ್ಟು ದಾಳಿಂಬೆ ಕಡೆ ವಾಲಿದ್ದರು. ಎಕರೆಗೆ 5–10 ಲಕ್ಷ ರೂ. ಬೆಳೆ ಒದಗುತ್ತಿದ್ದುದು ಅವರ ಆಕರ್ಷಣೆಗೆ ಕಾರಣವಾಗಿತ್ತು. ಆದರೆ ದಾಳಿಂಬೆಗೆ ತೋಗ ತಗುಲಿ ಅವರಿಗೆ ಸಂಕಷ್ಟ ತಂದೊಡ್ಡಿತ್ತು. ಜೊತೆಗೆ ಬ್ಯಾಕ್ಟೀರಿಯಲ್ ಬ್ಲೈಟ್ ರೋಗ ಈ ಬೆಳೆಯನ್ನು ಬಾಧಿಸುತ್ತ ಬಂದಿದ್ದರೂ, ರಾಷ್ಟ್ರೀಯ ತೋಟಗಾರಿಕಾ ಮಿಷನ್‌ನಲ್ಲಿ ರೋಗ ತಡೆಗೆಂದಿದ್ದ 12 ಕೋಟಿ ರೋಗಗಳನ್ನು ಬಳಸಿರಲಿಲ್ಲ. ಫಲಾನುಭವಿಗಳಿಲ್ಲವೆಂದು ಈ ಹಣವನ್ನು ತೋಟಗಾರಿಕಾ ಬೆಳೆ ಮತ್ತು ರೈತರ ಯಂತ್ರೋಪಕರಣಗಳಿಗೆ ನೀಡಲಾಗಿತ್ತು. ಕೃಷಿ ವಿಶ್ವವಿದ್ಯಾಲಯದ ವಿಜ್ಞಾನಿಗಳು ಈ ರೋಗ ನಿಯಂತ್ರಿಸಲು ಪ್ರಯತ್ನ ಮಾಡಿದರೂ ಔಷಧ ಒದಗಿಲ್ಲ.

ಕೀಟನಾಶಕಗಳಿಗೂ ಈ ರೋಗ ಬಗ್ಗಿಲ್ಲ, ರೋಗವನ್ನು ತಡೆಯಲಾಗಿಲ್ಲ, ಸರ್ಕಾರದಿಂದ ಸಹಾಯಧನವೂ ಇಲ್ಲ. ಹೀಗಾಗಿ ನಷ್ಟಕ್ಕೊಳಗಾದವರ ಪೈಕಿಯವರಾದ ಹಿರಿಯೂರಿನ 600 ರೈತರು ಬೆಳೆದ ದಾಳಿಂಬೆ ಗಿಡಗಳನ್ನು ಕಿತ್ತಸೆದಿರುವುದನ್ನು ಡಿ.ಎಸ್. ಶ್ರೀಕಲಾ ಅವರು ಗಮನಿಸಿ ಹೇಳಿದ್ದಾರೆ. (4.1.2010)

**ಜಮೊನುನಲ್ಲಿದ್ದ ಬೆಳೆನಷ್ಟಕ್ಕೆ ಪರಿಹಾರ :** ಕೇಂದ್ರ ಸರ್ಕಾರ ಪರಿಹಾರ ವಿಕೋಪ ನಿಧಿ ನೀಡಿಕೆಗೆ ಇರುವ ನಿಯಮಗಳಲ್ಲಿ ಗದ್ದೆ, ಹೊಲದಲ್ಲಿದ್ದ ಫಸಲು ಶೇ. 50 ಕ್ಕಿಂತ ಹೆಚ್ಚು ನಷ್ಟಗೊಂಡಿದ್ದರೆ ಮಾತ್ರ (ಹೆಕ್ಟೇರ್ ಖುಷ್ಕಿ ಬೆಳೆಗೆ 2000 ರೂ ತರಿ ಬೆಳೆಗೆ 4000 ರೂ ದೀರ್ಘಾವಧಿ ಬೆಳೆಗೆ 6000 ರೂ) ಪರಿಹಾರ ನೀಡುವ ಬಗ್ಗೆ ಇದೆ. ಕಣದಲ್ಲಿ ಬಣವೆ ಹಾಕಿ ಬೆಳೆ ನಷ್ಟವಾಗಿದ್ದರೆ ಪರಿಹಾರ ದೊರಕದ್ದು. ಬೆಳೆಗೆ ವಿಮೆ ಮಾಡಿಸಿದ್ದರೆ ಮಾತ್ರ ಪರಿಹಾರಕ್ಕೆ ಅರ್ಹರು. ಬೆಳೆಕಳೆದು ಕೊಂಡವರಿಗೆ ಮಾತ್ರ ಪರಿಹಾರ ಕಣದ ಭತ್ತದ ಹುಲ್ಲು ಅತಿಯಾದ ಮಳೆಗೆ ಸಿಕ್ಕಿ ನಾಶವಾದರೂ ಪರಿಹಾರವಿಲ್ಲ ಎಂದರೆ ಅದು ಅನ್ಯಾಯ ಎಂಬುದು ಆರ್. ತಾರಾನಾಥ್ ಅವರ ಅಭಿಪ್ರಾಯ. (5.1.10)

**ಬಿತ್ತನೆ ಬೀಜ ಸಬ್ಸಿಡಿ :** ರಾಗಿ ಭತ್ತ ನೆಲಗಡಲೆ, ಅವರೆ, ಸಾಸಿವೆ, ಹತ್ತಿ, ತೊಗರಿ, ಹುರುಳಿ, ಮೆಕ್ಕೆಜೋಳ, ಮುಸುಕಿನ ಜೋಳ ಇತ್ಯಾದಿ ಬೆಳೆಗಳಿಗೆ ಶೆ 50ರಷ್ಟು ಸಬ್ಸಿಡಿಯನ್ನು ಸರ್ಕಾರ ರೈತರಿಗೆ ನೀಡಿ ವಿತಸಿರುತ್ತಿದೆ. ಮುಂಗಾರು ವಾರ್ಷಿಕ ಆರಂಭವಾಗುತ್ತಿದ್ದಂತೆ ರೈತ ಸಂಪರ್ಕ ಕೇಂದ್ರ, ಬಿತ್ತನೆ ಬೀಜ ಮಾರಾಟ ಕೇಂದ್ರಗಳಿಗೆ ಬಿತ್ತನೆ ಬೀಜ ಪಡೆಯಲು ಹೋಗುತ್ತಾರೆ. ಈ ಸಮಯದಲ್ಲಿ ಸಾಂದರ್ಭಿಕ ಒತ್ತಡದಿಂದಾಗುವ ದೊಂಬಿ, ಗಲಭೆಗಳನ್ನು ನಿಯಂತ್ರಿಸಲು ಗೋಲಿಬಾರ್, ಲಾಠಿಪ್ರಹಾರ ಪ್ರಕರಣಗಳೂ ಜರುಗಿದೆ. ಈ ಸಮಸ್ಯೆಯನ್ನು ಪರಿಹರಿಸಲು, ರೈತರಲ್ಲಿ ಸಾವಯವ ಕೃಷಿಗೆ ಪ್ರೇರಣೆ, ಕಂಪೆನಿಗಳಿಂದ ಕಳಪೆ ಬೀಜ ಪೂರೈಕೆಗೆ ಕಡಿವಾಣ, ದೇಶಿ ಬೇಸಾಯೋತ್ಪನ್ನ ಗುಣಮಟ್ಟದ ಬಿತ್ತನೆ ಬೀಜ ಮಹತ್ವದ ಬಗ್ಗೆ ತಿಳುವಳಿಕೆ, ಆರ್ಥಿಕ ನಷ್ಟ ಕಡಿತ, ಬಿತ್ತನೆ ಬೀಜ ಶೇಖರಣಾ ಪ್ರವೃತ್ತಿಗೆ ಪ್ರೋತ್ಸಾಹ ಇತ್ಯಾದಿಗಳ ಬಗ್ಗೆ ಸರ್ಕಾರ ಕಾಳಜಿ ವಹಿಸಿರುವುದನ್ನು ಗಿರೀಶ್ ಮಾದೇನಹಳ್ಳಿ ಅವರು ವರದಿ ಮಾಡಿದ್ದಾರೆ. (18.2.10) ಹೀಗಾಗಿ ರೈತರು ಬಿತ್ತನೆ ಬೀಜ ಸಂಗ್ರಹಕ್ಕೆ ಮುಂದಾಗಬೇಕಾಗುತ್ತದೆ. ಬಿತ್ತನೆ ಬೀಜ ತಯಾರಿಸಲು ಸಿದ್ಧವಾಗಬೇಕಾಗುತ್ತದೆ. ರೈತರೇ ಬಿತ್ತನೆ ಬೀಜ ತಯಾರಿಸಿಕೊಳ್ಳುವುದಾದರೆ ಬೀಜ ಸಬ್ಸಿಡಿ ನೀಡುವ ಪ್ರಶ್ನೆ ಉಳಿಯುವುದಿಲ್ಲ. ಕರ್ನಾಟಕ ರಾಜ್ಯ ಬೀಜ ನಿಗಮ ವಿತರಿಸುವ ಬಿತ್ತನೆ ಬೀಜ

ಕಡಿಮೆ ಪ್ರಮಾಣದ್ದು ಎಂದರೆ ಬಿತ್ತನೆ ಬೀಜದ ಅಭಾವ, ರೈತರ ಕೋಪ ಎದುರಿಸಬೇಕಾದ ಸರ್ಕಾರ ಮೇಲಿನ ಉದ್ದೇಶಗಳನ್ನು ಪೂರೈಸಿಕೊಂಡರೆ ಬಿತ್ತನೆ ಬೀಜದ ಸಬ್ಸಿಡಿ ನೀಡಿಕೆ ತನಗೆ ತಾನೆ ರದ್ದಾಗಬಹುದು.

**ರೈತರ ಜಮೀನು ಜಪ್ತಿಗೆ ಅವಕಾಶ :** 2010ರ ತಿಂಗಳ ವಿಧಾನಮಂಡಲದ ಅಧಿವೇಶನದಲ್ಲೆ ಭೂಸುಧಾರಣಾಕಾಯ್ದೆಗೆ ತಿದ್ದುಪಡಿಯನ್ನು ರೈತರ ಮಕ್ಕಳ ಶೈಕ್ಷಣಿಕ ಅನುಕೂಲಕ್ಕೆಂದು ತರಲಾಗಿದೆ. ರೈತರ ಮಕ್ಕಳಿಗೆ ಶೈಕ್ಷಣಿಕ ಸಾಲ ನೀಡಲು ಬ್ಯಾಂಕಿಗೇ ಸ್ಥಿರಾಸ್ತಿ ಗ್ಯಾರಂಟಿ ಕೊಡಬೇಕೆಂದರೆ ಮನೆಗಳ ಮೌಲ್ಯ ಸಾಕಾಗುತ್ತಿರಲಿಲ್ಲ. ಅದು ಕಾರಣ ಜಮೀನು ಗ್ಯಾಂಟಿ ನೀಡಲು ಭೂಸುಧಾರಣಾ ಕಾಯ್ದೆ ಅಡಿ ಇಲ್ಲದಿದ್ದ ಅವಕಾಶಕ್ಕಾಗಿ ಈಗೆ ತಿದ್ದುಪಡಿ ಮಾಡಿ ಅವಕಾಶಕ್ಕೆ ಅನುವು ಮಾಡಲಾಗಿದೆ. ಅದು ಸುದ್ದೇಶದ್ದು. ಆದರೆ ರೈತರು ಸಾಲ ತಿರಿಸದಿದ್ದರೆ ರೈತರ ಜಮೀನಿನ ಬೆಳೆ ಜಪ್ತಿ. ನಂತರ ಜಮೀನು ಮಾರಾಟಕ್ಕೆ ಬ್ಯಾಂಕಿಗೆ ಅವಕಾಶ ಮಾಡಿಕೊಡಲಾಗಿದೆ. (25.3.10) ಇದರಿಂದ ಇಡೀ ಜಮೀನಿನ ಮೇಲೆ ಬ್ಯಾಂಕ್ ತನ್ನ ಹಿಡಿತ ಸಾಧಿಸಲು ಅವಕಾಶ ಮಾಡಿಕೊಟ್ಟಂತಾಗಿದೆ. ರೈತರ ಮುಂದಿನ ಭವಿಷ್ಯದ ಬದುಕು ಹೇಗೆ ಎಂಬುದಕ್ಕೂ ಇಲ್ಲಿ ಉತ್ತರ ಬೇಕಾಗುತ್ತದೆ.

**ಕೃಷಿಗೆ ರೈತರ ವಿಮುಖ : ಕಾಡಾನೆಗಳ ಹಾವಳಿ :** ಕಾಡು ಆನೆಗಳ ಆಹಾರಧಾಮ, ವಿಹಾರ ನೆಲೆ, ನೆಮ್ಮದಿಯ ಬೀಡು ಎಂಬುದು ಗತಕಾಲದಿಂದ ರೈತರ, ರೈತೇತರ ಜನತೆಯ ಅರಿವಿಗಿದ್ದ ವಿಷಯ. ಇಂದು ಅದಕ್ಕೆಲ್ಲ ಸಂಚಕಾರ ಬಂದಿದೆ. ಕಾಡುಗಳ ಒತ್ತುವರಿಯಿಂದ ಆನೆಗಳು ಆಹಾರಕ್ಕಾಗಿ ಊರಿನ ತೋಟಗಳನ್ನು, ಗದ್ದೆಗಳನ್ನು ಎಡತಾಕುತ್ತಿದೆ. ಕಾಡಾನೆಗಳಿಗೆ ಹೆದರಿ ರೈತರು ಕೃಷಿಯನ್ನು ಕೈಬಿಟ್ಟು ಕುಳಿತಿರುವ ಸಂಗತಿ ತಿಳಿದು ಬರುತ್ತಿದೆ. ಕೈಗಾರಿಕೆಗಳಿಗೆ ಫಲವತ್ತಾದ ರೈತರ ಜಮೀನು ಸ್ವಾಧೀನಕ್ಕೆ ಮುಂದಾಗಿರುವ ಪ್ರಯತ್ನಗಳಿಗೆ ತೀವ್ರ ಪ್ರತಿಭಟನೆಗಳು ನಡೆಯುತ್ತ ಬಂದಿವೆ.

ಸಕಲೇಶಪುರ ತಾ. ಹೊಂಗಡಹಳ್ಳಿ ಗ್ರಾಮದ ತಮ್ಮ 25 ಎಕರೆ ಜಮೀನಿನಲ್ಲಿ ಆನೆಗಳ ಕಾಟದಿಂದ ವಕೀಲ ಕಿಶೋರ್‌ಕುಮಾರ್ ಬೇಸಾಯ ನಿಲ್ಲಿಸಿದ್ದಾರೆ; ದೇವರ ಕೆರೆಗ್ರಾಮದ ರೈತ ನಾಗಯ್ಯ, ರೈತಮುಖಂಡ ಕಣಗಾಲು ಮೂರ್ತಿ ಆನೆಗಳನ್ನು ಸರ್ಕಾರ ದೂರದ ಕಾಡಿಗೆ ಅಟ್ಟಲಾಗದಿದ್ದರೆ, ಗ್ರಾಮಗಳನ್ನು ಸ್ಥಳಾಂತರಿಸಿ ಬೇರೆಡೆ ಪುನರ್ವಸತಿ ಕಲ್ಪಿಸಲಿ ಎನ್ನುತ್ತಾರೆ. ಹಾಸನ ಜಿಲ್ಲೆಯ ಆಲೂರು ತಾಲೂಕಿನ ಮಗ್ಗೆ, ರಾಯರಕೊಪ್ಪಲು, ಕೆಂಚಮ್ಮನ ಹಾಗೂ ಕೋಟೆ, ಸುಳುಗೋಡು ಹೋಬಳಿ,

ಸಕಲೇಶಪುರ ತಾಲೂಕಿನ ಹೆಂಗಡಹಳ್ಳಿ, ಹೆತ್ತೂರು, ದೇವಲಕೆರೆ, ಅರಕಲಗೂಡು ತಾ. ಮಲ್ಲಿಪಟ್ಟಣ ಹೋಬಳಿ, ಕೊಡಗು ಜಿಲ್ಲೆ ಸೋಮವಾರ ಪೇಟೆ ತಾ. ಕೊಡ್ಲಿಪೇಟೆ, ಶನಿವಾರ ಸಂತೆ ಗ್ರಾಮಗಳಲ್ಲಿ ಹೇರಳವಾಗಿ ರಾಗಿ, ಜೋಳ, ಮೆಣಸು, ಏಲಕ್ಕಿ, ಬಾಳೆ, ಕಾಫಿ, ಬೆಳೆಯುತ್ತಿದ್ದ ರೈತರು ಜಮೀನಿನಿಂದ ದೂರ ಉಳಿದಿದ್ದಾರೆ. ಕಾಡಾನೆಗಳು ರೈತರನ್ನು ಕಂಡಕೂಡಲೆ ಅಟ್ಟಿಸಿಕೊಂಡು ಬರುತ್ತವೆ. ಕೊಲ್ಲುತ್ತವೆ ನಾಗರ ಹೊಳೆ ಅರಣ್ಯದಿಂದ ಆಹಾರದ ಅಲೆದಾಟದಲ್ಲಿ ಸಕಲೇಶಪುರ, ಆಲೂರು ತಾಲೂಕುಗಳ ನಡುವಣ ದೊಡ್ಡಬೆಟ್ಟ, ಕರಡಿ ಬೆಟ್ಟ ಹಾಗೂ ಹಾಡ್ಲಿ ಅರಣ್ಯ ಪ್ರದೇಶಗಳಲ್ಲಿ ಬೀಡುಬಿಟ್ಟು ರೈತರ ಜಮೀನಿನ ಬೆಳೆಗಳನ್ನು ಹಾಳು ಮಾಡಿವೆ. ಸಮೀಪದ ಹೇಮಾವತಿ ಜಲಾಶಯವು ಅವುಗಳ ನೀರಾಟಕ್ಕೆ ಅನುಕೂಲಿಸಿದೆ. 2009ರಲ್ಲಿ ಇಂಥ ಆನೆಗಳಿಗೆ 20 ರೈತರು ಬಲಿಯಾಗಿದ್ದಾರೆ. 2010ರಲ್ಲಿಯೂ ಕೆಲವು ರೈತರು ಆನೆಗಳಿಂದ ಪ್ರಾಣ ಕಳೆದುಕೊಂಡಿದ್ದಾರೆ. ಇದಕ್ಕೆಲ್ಲ ಪರಿಹಾರವೆಂಬಂತೆ ಆನೆಗಳಿಗೆ ಅರವಳಿಕೆ ಚುಚ್ಚುಮದ್ದು ಕೊಟ್ಟು ಪ್ರಜ್ಞೆ ತಪ್ಪಿಸಿ ವನ್ಯಜೀವಿ ಸಂರಕ್ಷಣಾ ಕಾಯ್ದೆರೀತ್ಯಾ ಬೇರೆಡೆ ಸಾಗಿಸಬೇಕು. ಆದರೆ ಅರಣ್ಯಾಧಿಕಾರಿಗಳಿಗೆ ಆ ಚುಚ್ಚುಮದ್ದಿನ ಕೊರತೆ ಆಗಿದೆ. ಇನ್ನು ಒತ್ತುವರಿ ಆಗಿರುವ ಎಲಿಫೆಂಟ್ ಕಾರಿಡಾರ್ ಅಂದರೆ ಆನೆಗಳ ಅಬಾಧಿತ ಸಂಚಾರ ಮಾರ್ಗವನ್ನು ಸರ್ಕಾರ ವಶಕ್ಕೆ ತೆಗೆದುಕೊಂಡು, ಅರಣ್ಯ ಪ್ರದೇಶವೆಂದು ಘೋಷಿಸುವುದು ಆನೆಗಳ ಸಂಖ್ಯೆ ನಿಯಂತ್ರಿಸಲು ಸಂತಾನ ಹರಣ ಚಿಕಿತ್ಸೆ ಮಾಡುವುದು, ಕಂದಕಗಳ ನಿರ್ಮಾಣ ಅರಣ್ಯ ಗಣಿಗಾರಿಕೆಯನ್ನು ನಿಲ್ಲಿಸುವುದು ಇತ್ಯಾದಿಗಳು ಆನೆಗಳ ಹಾವಳಿಯನ್ನು ನಿಯಂತ್ರಿಸಿಬಲ್ಲವು ಎಂಬುದು ದಯಾಶಂಕರ ಮೈಲಿ ಅವರು ಹೆಕ್ಕಿರುವ ವಿಷಯವಾಗಿದೆ. (11.2.2010)

**ಏಷಿಯಾದ ಗಾಳಿ ಮಾಲಿನ್ಯ (1)** : ವಿಲಿಯಂ ರಾಂಡೆಲ್ ನೇತೃತ್ವದಲ್ಲಿ ಅಮೆರಿಕ, ಇಂಗ್ಲೆಂಡ್, ಕೆನಡಾದ ವಿಜ್ಞಾನಿಗಳ ತಂಡವೊಂದು ಏಷ್ಯಾದ ರಾಷ್ಟ್ರಗಳಲ್ಲಿ ಉತ್ಪನ್ನವಾಗುವ ಮಲಿನ ಗಾಳಿ ವಾಯುಮಂಡಲದ ಅತಿ ಎತ್ತರದಲ್ಲಿ ಅಳಿಯದೆ ಉಳಿದಿದೆ; ಅದರಿಂದ ಭೂಮಿಯ ವಾಯುಗುಣದ ಮೇಲೆ ಪರಿಣಾಮಕಾರಿ ಬದಲಾವಣೆಗಳು ಆಗಬಹುದು ಎಂಬ ಅಭಿಪ್ರಾಯವನ್ನು ಸೈನ್ಸ್ ಪತ್ರಿಕೆಯಲ್ಲಿ ಪ್ರಕಟ ಮಾಡಿರುವ ಬಗ್ಗೆ ಕೊಳ್ಳೇಗಾಲ ಶರ್ಮ ಅವರು ಗಮನ ಸೆಳೆದಿದ್ದಾರೆ. ಈ ತಂಡ 2001 ರಿಂದ 2007ರ ವರೆಗಿನ ಅವಧಿಯಲ್ಲಿ ಜಗತ್ತಿನ ವಿವಿಧ ಭಾಗದಲ್ಲಿರುವ ಸ್ತರಗೋಲದ ಹೈಡ್ರೋಜನ್ ಸಯನೈಡ್ (ಎಚ್.ಸಿ.ಎನ್) ಅನಿಲದ ಪ್ರಮಾಣ

ಅಳೆಯಿತು. ಮರಮಟ್ಟುಗಳು ಉರಿದಾಗ ಉಂಟಾಗುವ ಎಚ್.ಸಿ.ಎನ್, ನೆಲದ ಬಳಿ ಉಳಿಯುವುದು ಬಹಳ ಕಡಿಮೆ 2005-2007ನೇ ಸಾಲಿನಲ್ಲಿ ಸ್ತರಗೋಲದಲ್ಲಿ ಎಚ್.ಸಿ.ಎನ್ ಪ್ರಮಾಣ ಅತಿಹೆಚ್ಚಿನದಾಗಿದ್ದನ್ನು ರಾಂಡೆಲ್ ತಂಡ ಗುರುತಿಸಿದ್ದೇವೆ ಎಂದಿದೆ. ಮುಂಗಾರು ಮಾರುತವೇ ಈ ಅನಿಲವನ್ನು ಮೇಲೆತ್ತಿರ ಬಹುದಾದರೆ ಎಚ್.ಸಿ.ಎನ್‌ನ ಮೂಲ ಏಷಿಯಾ ರಾಷ್ಟ್ರಗಳ ಮಲಿನಗಾಳಿ ಎಂದು ರಾಂಡೆಲ್ ತಂಡ ತೀರ್ಮಾನಿಸಿದೆ. ಭಾರತವೂ ಸೇರಿದಂತೆ ಏಷಿಯಾದ ಪ್ರಮುಖ ರಾಷ್ಟ್ರಗಳಲ್ಲಿ ಕೃಷಿ ಚಟುವಟಿಕೆಗೆ ಆಧಾರವಾಗಿ ಮುಂಗಾರು ಇದೆ. ಅದರ ಮಾರುತಗಳು ಭೂಮಿಯ ವಾಯುಗುಣದ ಮೇಲೆ ಪ್ರಭಾವ ಬೀರುತ್ತವೆ. ಮುಂಗಾರು ಮಾರುತ ರೂಪುಗೊಳ್ಳುವುದೇ ಏಷಿಯಾದ ಸಾಗರ ಪ್ರದೇಶದಲ್ಲಿ ಆಗಿದೆ. 2005-2007ನೇ ಸಾಲಿನಲ್ಲಿ ಎಚ್.ಸಿ.ಎನ್ ಪ್ರಮಾಣ ಅತಿ ಹೆಚ್ಚಾಗಿ ಗೋಚರಿಸಿತ್ತು. ಇಂಡೋನೇಷ್ಯಾದ ಕಾಡುಗಳಲ್ಲಿ ಎಂದಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಕಾಡ್ಗಿಚ್ಚು ಕಾಣಿಸಿಕೊಂಡ ಕಾರಣವನ್ನು ಇದಕ್ಕೆ ನೀಡಲಾಗಿದೆ. ಈ ಸಮಯದಲ್ಲಿ ಸೃಷ್ಟಿಗೊಂಡ ಎಚ್.ಸಿ.ಎನ್ ಸ್ತರಗೋಲವನ್ನು (Stratosphere – ನೆಲದಿಂದ 50 ಕಿ.ಮೀ ಎತ್ತರಲ್ಲಿರುವ ಗಾಳಿ ಅತಿ ವಿರಳವಾಗಿರುವ ವಾಯುಮಂಡಲವಿದು. ಆಮ್ಲಜನಕಕ್ಕಿಂತಲೂ ಹೀಲಿಯಂ, ಕಾರ್ಬನ್ ಮಾನಾಕ್ಸೈಡ್, ಓಜೋನ್‌ನಂಥ ಅನಿಲಗಳೇ ಇಲ್ಲಿ ಹೆಚ್ಚು) ತಲುಪಿರಬೇಕು ಎಂಬುದು ತಂಡದ ಊಹೆ ಆಗಿದೆ. ಹಿಂದೆ ಅಮೆರಿಕೆಯ ಮೇಲ್ಭಾಗದಲ್ಲಿ ಧೂಳು ಹಾಗೂ ಕಾರ್ಬನ್ ಕಣಗಳು ಕಂಡುಬಂದಿದ್ದುವು. ಅದು ಅಚ್ಚರಿ ಎನಿಸಿತ್ತು. ಕಾರಣ ಅಲ್ಲಿ ಗಾಳಿಯ ಸಂಚಲನ ಇರುವುದಿಲ್ಲ. ಅಂದರೆ ಹೀಗೆ ಕಂಡುಬಂದ ಧೂಳು, ಕಾರ್ಬನ್ ಕೂಡ ಏಷಿಯಾದಲ್ಲಿ ಹುಟ್ಟಿ ಮುಂಗಾರಿನ ಬೆನ್ನೇರಿ ಬಂದ ಮಾಲಿನ್ಯವಿರಬಹುದೇ? ಎಂಬ ಊಹಾಪ್ರಶ್ನೆಯೂ ರಾಂಡೇಲ್ ತಂಡದ್ದು. ಇಲ್ಲಿ ಗಮನಿಸಬೇಕಾದ ಎರಡು ಅಂಶಗಳಿವೆ. ಒಂದು ಈ ತಂಡದ ವಿಜ್ಞಾನಿಗಳೆಲ್ಲ ಅಭಿವೃದ್ಧಿ ಸಿದ್ಧಿ (ಶ್ರೀಮಂತ) ರಾಷ್ಟ್ರಗಳಿಗೆ ಸೇರಿದವರಾಗಿದ್ದಾರೆ. ಕೋಪನ್ ಹೇಗನ್‌ನಲ್ಲಿ ಅಭಿವೃದ್ಧಿ ಸಾಧಕ ರಾಷ್ಟ್ರಗಳು ತಮ್ಮಿಂದಾಗುವ ತಲಾವಾರು ಮಾಲಿನ್ಯ ಅಭಿವೃದ್ಧಿ ಸಿದ್ಧ ರಾಷ್ಟ್ರಗಳಿಗಿಂತ ಅತ್ಯಂತ ಕಡಿಮೆ ಎಂದು ಪ್ರತಿಪಾದಿತ ಸವಾಲು ಇಟ್ಟ ಕೆಲವೇ (ಡಿಸೆಂಬರ್ 2009) ಸಮಯದ ನಂತರ ಅಮೆರಿಕ ಹಾಗೂ ಯುರೋಪಿನ ವಿಜ್ಞಾನಿಗಳಿಂದ ಈ (ಊಹಾತ್ಮಕ) ಸುದ್ಧಿ ಪ್ರಕಟವಾಗಿರುವುದು ಕಾಕತಾಳೀಯವೇ? ಎಂಬುದು ಶರ್ಮ ಅವರ ಪ್ರಶ್ನೆಯೂ ಆಗಿದೆ (31.3.2010). ಇದಲ್ಲದೆ ಕೈಗಾರಿಕೆಗಳೇ ಹೆಚ್ಚಿರುವ ಅಭಿವೃದ್ಧಿ ಸಿದ್ಧಿ ರಾಷ್ಟ್ರಗಳು ಮೂಡುವ ಹೆಚ್‌ಸಿಎನ್‌ಗಿಂತ **ಅಭಿವೃದ್ಧಿ ಸಾಧಕ ರಾಷ್ಟ್ರಗಳ ಕೃಷಿ ಚಟುವಟಿಕೆ** ದೂಡುವ ಎಚ್.ಸಿ.ಎನ್ ಹೆಚ್ಚಿನ

ಪ್ರಮಾಣದ್ದಾಗಿರಬಲ್ಲುದೇ? ಮಾಹಿತಿ ಸಂಗ್ರಹವಾಗಿರುವುದೂ ಕೂಡ ದೀರ್ಘಕಾಲೀನದ್ದಲ್ಲ. ಏರುಪೇರುಗಳನ್ನು ಗಮನಿಸಿ ಹೇಳಿರುವರೆ? ಎಂಬುದೂ ಸ್ಪಷ್ಟವಿಲ್ಲ. ಇನ್ನು ಸ್ಟ್ರಾಟೋಸ್ಟೆಯರ್‌ನಲ್ಲಿ ಗಾಳಿ ಸಂಚಲನೆ ಇರುವುದಿಲ್ಲವೆಂದ ಮೇಲೆ ಏಷಿಯಾದ ಹೆಚ್‌ಸಿಎನ್ ಅಮೆರಿಕದ ಸ್ತರಗೋಲಕ್ಕೆ ಹೋಗಲು ಹೇಗೆ ಸಾಧ್ಯ! **ಅಭಿವೃದ್ಧಿ ಸಿದ್ಧಿ ರಾಷ್ಟ್ರಗಳು ತಮ್ಮ ದೋಷಗಳನ್ನು ಮುಚ್ಚಿಕೊಳ್ಳುವುದಕ್ಕೆ ಹೀಗೆ ವಿಜ್ಞಾನವನ್ನು ಅಡವಿಟ್ಟುಕೊಳ್ಳುತ್ತಿದ್ದಾರೆಯೆ**? ಎನಿಸುತ್ತದೆ. ಅನುಕೂಲಕರ ವಲಯ ಲಾಬಿಯನ್ನು ವಿಜ್ಞಾನ ಕ್ಷೇತ್ರಕ್ಕೂ ಹಬ್ಬಿಸುವ–ಹಬ್ಬಿಸಿರುವ ಸೂಚನೆಯೂ ಇದಾಗಿರಬಹುದೆ? ಎನಿಸುತ್ತದೆ. ವಿಜ್ಞಾನ ಪ್ರಾಮಾಣಿಕತೆಯನ್ನು ಪ್ರಶ್ನಿಸಬಹುದು ಎನ್ನುವುದಕ್ಕಿಂತ ರಾಂಡೆಲ್ ತಂಡವೂ ತೀರ್ಮಾನವನ್ನು ಊಹೆಯ ಅಂಗಳದಲ್ಲಿಯೇ ಇಟ್ಟಿದೆ ಎಂಬುದು ಗಮನಾರ್ಹ.

**ತಂಬಾಕು ಬೆಳೆಗಾರರ ಸಮಸ್ಯೆ :** ಕರ್ನಾಟಕ ಉತ್ಕೃಷ್ಟ ಗುಣಮಟ್ಟದ ತಂಬಾಕು ಬೆಳೆಯುತ್ತಿದೆ. ಶೇ. 80 ರಷ್ಟು ಈ ಬೆಳೆಯು ರಫ್ತುಗೊಳ್ಳುತ್ತಿದೆ. ಬ್ರೆಜಿಲ್, ಜಿಂಬಾಬ್ವೆ, ಯುರೋಪ್‌ನಲ್ಲಿ ತಂಬಾಕು ಇಳುವರಿ ಕುಸಿತವಾಗಿದೆ. ಅದಾಗಿ ತಂಬಾಕಿಗೆ ಬೇಡಿಕೆ ಹೆಚ್ಚಿ ವ್ಯವಹಾರವು 520 ಕೋಟಿ ರೂ.ಗಳಿಂದ 1250ಕೋಟಿ ರೂ.ಗೆ ಮುಟ್ಟಿದೆ. ಪ್ರತಿ ಹೆಕ್ಟೇರಿಗೆ ರೈತರಿಗೆ ಒದಗುತ್ತಿರುವ ಆದಾಯ 75 ಸಾವಿರ ರೂ. ಇಂಥ ತಂಬಾಕನ್ನು ಬೆಳೆಯಲು ಕರ್ನಾಟಕಕ್ಕೆ ಪ್ರತಿ ಬ್ಯಾರನ್ನಿಗೆ 1740 ಕೆ.ಜಿ ತಂಬಾಕು ಎಂದು ನಿರ್ಬಂಧಗೊಳಿಸಿ ಆಂಧ್ರಕ್ಕೆ 2150ಕೆ.ಜಿ ಬೆಳೆಯಲು ಅವಕಾಶ ಕೊಟ್ಟಿರುವುದು ತಾರತಮ್ಯವೆಸಗಿದಂತಾಗಿದೆ. ಅನಧಿಕೃತವಾಗಿ ಬೆಳೆಯುವ ತಂಬಾಕು ವಹಿವಾಟಿನ ಮೇಲೆ ಶೇ. 30ರಷ್ಟು ಲೆವಿ ಹಾಕುವ ಬಗ್ಗೆ ಮಂಡಳಿ ಎಚ್ಚರಿಸಿದೆ. ತಂಬಾಕಿಗೆ ಬೇಡಿಕೆ ಹೆಚ್ಚಿರುವಾಗ ಲಾಭ ಮಾಡಿಕೊಳ್ಳಲು ರಾಜ್ಯದ ರೈತರಿಗೆ ಅವಕಾಶವಾಗದೆ ವಂಚಿತವಾಗುತ್ತಿದ್ದಾರೆ. ತಂಬಾಕು ಹರಾಜಿಗಿರುವ ಮೂಲ ಸೌಕರ್ಯಗಳನ್ನು ಉನ್ನತ ದರ್ಜೆಗೆ ಏರಿಸಬೇಕು. ಹರಾಜು ಪ್ರಾಂಗಣ ಸಾಮರ್ಥ್ಯವನ್ನು 60 ದಶಕಲ್ಷ ಕೆ.ಜಿ.ಯಿಂದ 114 ದಶಲಕ್ಷ ಕೆ.ಜಿ.ಗೆ ಹೆಚ್ಚಿಸಬೇಕು ವ್ಯಾಪಾರದಲ್ಲಿ ಪಾರದರ್ಶಕತೆ ತರಲು **'ಇ–ಹರಾಜು'** ಪದ್ಧತಿ ಜಾರಿಗೆ ತರಬೇಕು. ಕಾರಣ ಮಾರುಕಟ್ಟೆಯಲ್ಲಿ ಹರಾಜಿನಲ್ಲಿ ಬೆಳೆಗಾರರಿಗೆ ದೊರೆತ ಸರಾಸರಿ ದರ ಕೆ.ಜಿ.ಗೆ 110ರೂ.ಗಳಾದರೆ, ಇ–ಹರಾಜಿನಲ್ಲಿ ಕೆ.ಜಿ.ಗೆ 114ರೂ ದರ ದಕ್ಕಿದೆ. ತಂಬಾಕು ಕೃಷಿ ಸಂಬಂಧಿಸಿದಂತೆ ಕರ್ನಾಟಕ ಆಂಧ್ರ ನಡುವಣ ತಾರತಮ್ಯ ಸರಿಪಡಿಸಬೇಕು; ತಂಬಾಕಿಗೆ ಶೇ. 30ರಷ್ಟು ದಂಡ ವಿಧಿಸುವ ಬೆದರಿಕೆ ತಪ್ಪಬೇಕು ಎಂದೆಲ್ಲ ಬೇಡಿಕೆಗಳನ್ನು

ಕೇಂದ್ರ ಕಾನೂನು ಸಚಿವ ಎಂ. ವೀರಪ್ಪ ಮೊಯಿಲಿ ನೇತೃತ್ವದಲ್ಲಿ ಕೇಂದ್ರ ವಾಣಿಜ್ಯ ಸಚಿವ ಆನಂದ ಶರ್ಮ ಅವರನ್ನು 5-6-2009ನೇ ಶುಕ್ರವಾರದಂದು ಭೇಟಿ ಮಾಡಿ ಮುಂದಿಟ್ಟು ಈಡೇರಿಸುವಂತೆ ರಾಜ್ಯದ ತಂಬಾಕು ಬೆಳೆಗಾರರು ಒತ್ತಾಯಿಸಿದರು. ಲೋಕಸಭಾ ಸದಸ್ಯರಾದ ಎಚ್. ವಿಶ್ವನಾಥ್ ಹಾಗೂ ಧ್ರುವನಾರಾಯಣ್ ಬೆಳೆಗಾರರ ನಿಯೋಗದಲ್ಲಿದ್ದರು. ಬೆಳೆಗಾರರ ಬೇಡಿಕೆಗಳನ್ನು ಸಹಾನುಭೂತಿಯಿಂದ ಪರಿಶೀಲಿಸುವ ಬಗ್ಗೆ ಸಚಿವ ಆನಂದಶರ್ಮ ಭರವಸೆ ನೀಡಿದ್ದು ವರದಿಗೊಂಡಿದೆ. (7.6.09) ಅಂದರೆ ತಂಬಾಕು ಬೆಳೆಯುವ ಪ್ರಮಾಣದ ಬಗ್ಗೆ ಕರ್ನಾಟಕ ಮತ್ತು ಆಂಧ್ರದ ನಡುವಣ ತಾರತಮ್ಯ ಇನ್ನೂ ಮುಂದುವರಿದಿರುವುದಕ್ಕೆ ಹಿನ್ನೆಲೆ ಬೇರೆ ಇರಬಹುದೆ? ಎನಿಸುತ್ತದೆ.

**ನೀರಾ ಅಸ್ತಿತ್ವ** : ರಾಜ್ಯ ಸರ್ಕಾರ ವಿಧಾನಸಭೆಯಲ್ಲಿ ರೈತರಿಗೆ ಭರವಸೆ ಕೊಟ್ಟಂತ **ನೀರಾ ಅಭಿವೃದ್ಧಿ ಮಂಡಳಿ** ರಚಿಸುವ ಬಗ್ಗೆ 24.12.2009ರ ವಿಧಾನ ಸಭಾಧಿವೇಶನದಲ್ಲಿ ಘೋಷಿಸಿತು. 2001ರಲ್ಲಿ ನೀರಾ ಚಳುವಳಿ ಭರಾಟೆ ಇದ್ದು. ವಿಠಲೇನ ಹಳ್ಳಿಯಲ್ಲಿ ಆ ಸಂಬಂಧ ಗೋಲಿಬಾರ್ ಆಗಿ ಇಬ್ಬರು ರೈತರ ಬಲಿದಾನವೂ ಆಯಿತು. ಆ ನಂತರ ನೀರಾ ಇಳಿಕೆಗೆ ಅನುಮತಿ, ನೀರಾ ರೈತರ ಮೇಲೆ ಹಲ್ಲೆ ನಡೆದಿದ್ದುವು. ಸದನದಲ್ಲಿ 2007ರ ವರೆಗೂ ನೀರಾ ಬಗ್ಗೆ ಚರ್ಚೆಗಳೂ ನಡೆದು, ನೀರಾ ಇಳಿಕೆಗೆ ಅನುಮತಿಯೂ ಸಿಕ್ಕಿತು. ನೆರೆಯ ರಾಜ್ಯಗಳಲ್ಲಿ ನೀರಾ ಉದ್ಯಮ ವ್ಯವಸ್ಥಿತವಾಗಿ ನಡೆಯುತ್ತಿದೆ. ನಮ್ಮ ರಾಜ್ಯದಲ್ಲಿ ಮಾತ್ರ ನೆಲಕಚ್ಚಿದೆ. ನೀರಾ ಉದ್ಯಮವನ್ನು ರಾಜ್ಯದಲ್ಲಿ ಬೆಳೆಯಗೊಡಬಾರದೆಂದು ತಂಪು ಪಾನೀಯ, ಲಿಕ್ಕರ್ ಉದ್ಯಮದ ಲಾಬಿ ನಡೆಯುತ್ತಿದೆ, ಎಂದು ನೀರಾಪರ ಹೋರಾಟಗಾರರ ಆರೋಪ. ಸಾರಾಯಿ ಲಾಬಿಯೂ ನೀರಾ ವಿರುದ್ಧವೆ ಇದ್ದು ಸರ್ಕಾರದ ಮೇಲೆ ಒತ್ತಡ ತಂದದ್ದುಂಟು. 2006ರಲ್ಲಿ ನೀರಾ ನೀತಿ ರಚಿತವಾಗಿ, ನೀರಾ ಉಪಉತ್ಪನ್ನಗಳ ಮಾರಾಟಕ್ಕೆ ಅನುಮತಿ, ಸಂಸ್ಕರಣೆ, ಸಂಶೋಧನೆ, ನೀರಾ ಪಾರ್ಕ್ ಸ್ಥಾಪನೆ ವಿಷಯಗಳಿದ್ದರೂ, ಆ ನೀತಿ ಜಾರಿ ಆಗಿಲಿಲ್ಲ. ಈ ಹಿನ್ನೆಲೆಯಲ್ಲಿ ಸದ್ಯದ ಮಂಡಳಿ ರಚನೆ ಸ್ವಾಗತಾರ್ಹವಾಗಿದೆ.

**ಆನೆ ಹಾವಳಿ; ರೈತರ ಮದ್ದು** : ಮೈಸೂರು ಜಿಲ್ಲೆಯ ನಂಜನಗೂಡು, ಎಚ್.ಡಿ ಕೋಟೆ, ಗುಂಡ್ಲುಪೇಟೆ ತಾಲೂಕಿನ ಗ್ರಾಮಗಳಲ್ಲಿ ಆನೆಗಳು, ಹಂದಿಗಳ ಹಾವಳಿಯಿಂದ ಬೆಳೆ ಹಾನಿಗೊಳ್ಳುತ್ತಿದ್ದುವು. ವಿಶೇಷತಃ ಆನೆಗಳಿಂದ ಬೆಳೆಗಳನ್ನು ರಕ್ಷಿಸುವ ಕಾರ್ಯದಲ್ಲಿ ಅರಣ್ಯ ಇಲಾಖೆಯೂ ಸಫಲವಾಗಿಲ್ಲ ಎಂಬುದು ರೈತರ

ಆರೋಪ. ಹಾಗೂ ಈ ಬೆಳೆ ಹಾನಿಗೆ ಸರ್ಕಾರವೂ ಸೂಕ್ತ ಪರಿಹಾರ ನೀಡಿಲ್ಲ. ಹೀಗಾಗಿ ರೈತರು ರಾಗಿ ಮುದ್ದೆಯೊಳಗೆ ಸಿಡಿಮದ್ದುಗಳಂಥ ವಿಷಕಾರಿ ವಸ್ತುಗಳನ್ನು ಸೇರಿಸಿ ಜಮೀನಿನಲ್ಲಿ ಇಡಲಾರಂಭಿಸಿದರು. ಇದನ್ನು ತಿಂದ, ಆನೆ ಹಂದಿಗಳು ಎಲ್ಲಿಯೋ ಹೋಗಿ ಸತ್ತು ಕೊಳೆತ ಸ್ಥಿತಿಯಲ್ಲಿ ಗಮನಕ್ಕೆ ಬಂದುವು. ಕಾಡು ಪ್ರಾಣಿಗಳು ಇದರಿಂದ ಹೆದರಿ ಬರುವುದೂ ಕಡಿಮೆಯಾಗುತ್ತದೆ. ಅರಣ್ಯ ಇಲಾಖೆಗೆ ಹಾವಳಿ ಬಗ್ಗೆ ತಿಳಿಸಿದರೆ ಬೇಗ ಬಂದು ಸಮಸ್ಯೆಗೆ ಪರಿಹಾರ ಮಾಡುವುದಿಲ್ಲವಾದ ಕಾರಣ ಬೆಳೆನಷ್ಟ, ಆನೆ ಹಾವಳಿ ತಪ್ಪಿಸಿಕೊಳ್ಳಲು ಹೀಗೆ ಮಾಡಬೇಕಾಯಿತು ಎಂಬುದು ರೈತ ನಾಯಕರು ಮುಂದಿಟ್ಟ ಮಾತು. ಆದರೆ ಇಂಥ ಕ್ರಮ ಕಾನೂನು ರೀತ್ಯಾ ಅಪರಾಧ; ಕ್ರಿಮಿನಲ್ ಮೊಕದ್ದಮೆ ಹೂಡಲು ಅವಕಾಶವಾಗುತ್ತದೆ; ಈ ಬಗ್ಗೆ ರೈತರಿಗೆ ತಿಳಿವಳಿಕೆಯನ್ನು ಮೂಡಿಸಲಾಗುತ್ತಿದೆ ಎಂದಿರುವ ಅರಣ್ಯಾಧಿಕಾರಿಗಳ ಮಾತನ್ನು ಎಂ. ಮಹೇಶ್ ಭಗೀರಥಿ ವರದಿ ಮಾಡಿದ್ದಾರೆ (18.3.2010). ರೈತರ ಸಂಕಷ್ಟದಲ್ಲಿಯೂ ಸತ್ಯವಿದೆ. ಅರಣ್ಯ ಅಧಿಕಾರಿಗಳ ಎಚ್ಚರಿಕೆಯೂ ಸಹಜವಾಗಿದೆ. ಆದರೆ ಸಮಸ್ಯೆ ಬಗೆಹರಿಸುವ ಅಧಿಕಾರವಿದ್ದರೂ, ವಿಳಂಬ ಮಾಡಿದಷ್ಟು ರೈತರ ನೆಮ್ಮದಿ ಕೆಡುತ್ತದೆ. ಸಂಬಂಧಿಸಿದವರು ಇವೆಲ್ಲಕ್ಕೂ ಲಕ್ಷ್ಯ ಕೊಡಬೇಕಾದ ಸಂಗತಿ ಇದಾಗಿದೆ. ಇತ್ತೀಚೆಗೆ ಆನೆಗಳ ಲದ್ದಿಗೆ ಖಾರದ ಪುಡಿ ಬೆರಸಿ ಬೆಂಕಿಹಚ್ಚಿ ಘಾಟು ತರಿಸುವ ಪ್ರಯೋಗ ಮಾಡಿ ಆನೆ ಓಡಿಸುತ್ತಾರೆ.

**ವಿಷಯ 3 :** ಹೋರಾಟಗಳು; ಪ್ರತಿಭಟನೆಗಳು

**ಕಬ್ಬು ಬೆಳೆಗಾರರ ಹೋರಾಟ :** ಬಿಜಾಪುರ ಜಿಲ್ಲೆಯ ಸಿಂದಗಿ ಮತ್ತು ಇಂಡಿ ತಾಲೂಕಿನಲ್ಲಿ ಅತಿ ಹೆಚ್ಚಿನ ಪ್ರಮಾಣದಲ್ಲಿ ಕಬ್ಬು ಬೆಳೆಯಲಾಗಿತ್ತು. ಈ ತಾಲೂಕುಗಳಿಂದ ಸುಮಾರು ಐದು ಲಕ್ಷಟನ್ ಕಬ್ಬು ಸಕ್ಕರೆ ಕಾರ್ಖಾನೆಗೆ ಸಾಗಾಣಿಕೆ ಆಗದೆ ರೈತರಿಗೆ ಸಂಕಷ್ಟವಾಗಿತ್ತು. ಹಾಗೆ ಸಾಗಾಣಿಕೆ ಆಗದೆ ಉಳಿದ ಪ್ರತಿ ಹೆಕ್ಟೇರ್ ಕಬ್ಬಿಗೆ 25 ಸಾವಿರ ರೂ. ಪರಿಹಾರ ನೀಡುವ ಬಗ್ಗೆ ಸರ್ಕಾರ ಪ್ರಕಟಿಸಿದ್ದರೂ ಯಾವ ಪರಿಹಾರವೂ ಆ ಬೆಳೆಗಾರರಿಗೆ ತಲುಪಿರಲಿಲ್ಲ. ಅಂತಾಗಿ ಉಳಿದ ಪ್ರತಿ ಹೆಕ್ಟೇರ್ ಕಬ್ಬಿಗೆ ಈ ಪರಿಹಾರವನ್ನು ಅಕ್ಟೋಬರ್ 25ರೊಳಗೆ ನೀಡಬೇಕು. ಇಲ್ಲವಾದರೆ ಜಿಲ್ಲಾಧಿಕಾರ ಕಛೇರಿ ಎದುರು ಸಾಮೂಹಿಕ ಆತ್ಮಹತ್ಯೆ ಮಾಡಿಕೊಳ್ಳುವುದಾಗಿ ಕಬ್ಬು ಬೆಳೆಗಾರರು ಬೆದರಿಕೆಯನ್ನು ಹಾಕಿದರು. ಬೆಳೆಗಾರರ ಸಂಘದ ಪದಾಧಿಕಾರಿಗಳು ಜಿಲ್ಲಾಧಿಕಾರಿಗಳಿಗೆ ಈ ಸಂದರ್ಭವಾಗಿ ಮನವಿಯನ್ನು ಸಲ್ಲಿಸಿದ ಬಗ್ಗೆ ಸುದ್ದಿ ಪ್ರಕಟವಾಯಿತು (16.10.2007). ಇಲ್ಲಿನ ಪ್ರತಿಭಟನೆ ಎಂದರೆ ಆತ್ಮಹತ್ಯೆಯ ಮೂಲಕ ತೋರುವುದಾಗಿತ್ತು.

ರಾಜ್ಯದಲ್ಲಿ ನಾಲ್ಕುಕೋಟಿ ಟನ್‌ಗೂ ಮೀರಿ ಕಬ್ಬು ಬೆಳೆಯಲಾಗಿತ್ತು. 50 ಕಾರ್ಖಾನೆಗಳು ಕಬ್ಬು ಅರೆಯಲು ಸಿದ್ಧವಾಗುತ್ತಿದ್ದುವು. ಆದರೆ ಕಬ್ಬಿಗೆ ಬೆಲೆ ನಿಗದಿ ಪಡಿಸದೆ ರೈತರಿಗೆ ಕಷ್ಟವೆನಿಸಿತು. ಅಂತಾಗಿ ಹಿಂದಿನ ವರ್ಷದಂತೆ ಪ್ರತಿ ಟನ್ ಕಬ್ಬಿಗೆ 1100ರೂ. ಬೆಲೆ ನಿಗದಿ ಪಡಿಸಬೇಕು; ಸಕ್ಕರೆ ರಫ್ತು ಮಾಡಲು ಅವಕಾಶ ಮಾಡಿಕೊಡಬೇಕು ಎಂದು ರಾಜ್ಯ ರೈತ ಸಂಘದ ಶ್ರೀ ಪುಟ್ಟಣ್ಣಯ್ಯ ಬಣವು ರಾಜ್ಯಪಾಲರಿಗೆ ಮನವಿ ಸಲ್ಲಿಸಿತು. ರಾಜ್ಯದ ಕಾರ್ಖಾನೆಗಳು ಅರೆಯಲಾಗದೆ ಉಳಿಯುವ ಹೆಚ್ಚುವರಿ ಕಬ್ಬನ್ನು ನೆರೆಯ ರಾಜ್ಯಗಳಿಗೆ ಸಾಗಿಸಲು ಅನುಕೂಲವಾಗುವಂತೆ ಸಾಗಣೆ ವೆಚ್ಚಕ್ಕೂ ಸರ್ಕಾರ ಸಬ್ಸಿಡಿಯನ್ನು ಕೊಡಬೇಕು. ಬೆಲೆ ಕುಸಿತ ತಡೆಯಲು ರಫ್ತು ವ್ಯವಹಾರ ಹೆಚ್ಚಿಸುವ ಕ್ರಮ ಕೈಗೊಳ್ಳಬೇಕು. ಮೈಶುಗರ್ ಕಾರ್ಖಾನೆ ಕಾರ್ಯಾರಂಭ ಮಾಡಲು ವಿಳಂಬವಾಗಲಾಗಿ ಆ ಪ್ರದೇಶದ ರೈತರಿಗೆ ಮೂರು ಲಕ್ಷ ಟನ್‌ಗೂ ಅಧಿಕ ಕಬ್ಬು ಅವಧಿ ಮೀರಿ ನಷ್ಟ ಸಂಭವಿಸಿದೆ. ಈ ಕಾರಣ ಸಾಗಣೆ ವೆಚ್ಚವನ್ನು ಸರ್ಕಾರವೆ ಭರಿಸಬೇಕು. ಹತ್ತಿ ಹೊಗೆಸೊಪ್ಪು, ಕಾಫಿ ಮೊದಲಾದ ಆರ್ಥಿಕ ಬೆಳೆಗಳಂತೆ ಕಬ್ಬಿಗೆ ಸಾಗಣೆ ಆಗದ ಸಂದರ್ಭದಲ್ಲಿ ವಿಶೇಷ ಕಾರ್ಯಕ್ರಮ ರೂಪಿಸಬೇಕು. ರೈತರಿಗೆ ಬಡ್ಡಿರಹಿತ ಸಾಲಸೌಲಭ್ಯ ಒದಗಿಸಿ ರೈತರ ನಷ್ಟ ತಡೆಯಬೇಕು. ಕಾರ್ಖಾನೆಗಳಲ್ಲಿ ಉಪ ಉತ್ಪನ್ನಗಳನ್ನು ತಯಾರಿಸುವ ಘಟಕವನ್ನು ಶುರುಮಾಡಬೇಕು. ಕಬ್ಬಿನ ತಳಿ ಅಭಿವೃದ್ಧಿಗಾಗಿ ಸಂಶೋಧನಾ ಕೇಂದ್ರವನ್ನು ಸ್ಥಾಪಿಸಬೇಕು. ನಿಗದಿಪಡಿಸಿದ ಅವಧಿಯೊಳಗೆ ಬೆಳೆದ ಎಲ್ಲ ಕಬ್ಬನ್ನು ಅರೆಯಬೇಕು. ಕಾಯಿದೆಯ ರೀತ್ಯಾ ಕಬ್ಬು ಸರಬರಾಜಾದ 14 ದಿನಗಳೊಳಗೆ ರೈತರಿಗೆ ಹಣ ಪಾವತಿ ಆಗಬೇಕು. ಕೇಂದ್ರದ ಮಾದರಿಯಲ್ಲಿ ಸಕ್ಕರೆ ಅಭಿವೃದ್ಧಿ ನಿಧಿ ಸ್ಥಾಪನೆ ರಾಜ್ಯದಲ್ಲಿಯೂ ಆಗಬೇಕು. ಎಂದೆಲ್ಲ ಸುದ್ದಿ ಗೋಷ್ಠಿಯಲ್ಲಿ (19.10.2007) ಶ್ರೀ ಪುಟ್ಟಣ್ಣಯ್ಯ ತಮ್ಮ ಸಲಹೆಗಳನ್ನು ಮುಂದು ಮಾಡಿದರು.

ಕಬ್ಬಿನ ಬೆಲೆ ನಿಗದಿಯಾಗದಿರುವ ಕಾರಣ ಕಾರ್ಖಾನೆಗಳು ಟನ್‌ಗೆ 500 ರಿಂದ 700 ಕೊಡುತ್ತಿವೆ. 58 ಸಕ್ಕರೆ ಕಾರ್ಖಾನೆಗಳಲ್ಲಿ 52 ಕಾರ್ಖಾನೆಗಳು ಕಬ್ಬು ನುರಿಯಲು ಆರಂಭಿಸಿವೆ. ರೈತರಿಗೆ ಸೂಕ್ತಬೆಲೆ ನೀಡುತ್ತಿಲ್ಲ. ರಾಜ್ಯದಲ್ಲಿ 35ಲಕ್ಷಕ್ಕೂ ಹೆಚ್ಚು ಕಬ್ಬು ಬೆಳೆಗಾರರಿದ್ದಾರೆ. ಹಿಂದಿನ ವರ್ಷ 275 ಲಕ್ಷ ಟನ್ ಅರೆದೂ 13ಲಕ್ಷ ಟನ್ ಉಳಿದಿತ್ತು. ಈ ಬಾರಿ ಅದಕ್ಕಿಂತ ಹೆಚ್ಚಿನ ಉತ್ಪಾದನೆ ಆಗಿ, ಬೆಲೆ ನಿಗದಿಯೂ ಆಗದೆ, 2006–07ನೇ ಸಾಲಿನ 190 ಕೋಟಿ ರೂ.ಗಳನ್ನು ಕಾರ್ಖಾನೆಗಳು ಪಾವತಿಸದೆ ಬಾಕಿ ಮಾಡಿವೆ. ಅವುಗಳ ಮೇಲೆ ಕ್ರಮ ಕೈಗೊಳ್ಳಬೇಕು. ಕಬ್ಬು

ಬೆಳೆಗಾರರಿಗೆ ಎಕರೆಗೆ 25ಸಾವಿರ ರೂ.ಗಳನ್ನು ಬಡ್ಡಿ ರಹಿತ ಸಾಲ ನೀಡಬೇಕು ಕಳೆದ ವರ್ಷ 59ಕ್ಕೂ ಹೆಚ್ಚು ಕಬ್ಬು ಬೆಳೆಗಾರರು ಆತ್ಮಹತ್ಯೆ ಮಾಡಿಕೊಂಡರು. ಈ ಬಗ್ಗೆ ಕಬ್ಬು ಬೆಳೆಗಾರರ ಸಂಘವು ರೈತರೊಡನೆ ಆಯಾ ಕುಟುಂಬದವರೊಡನೆ ಸಮಲೋಚಿಸಿ ಸಾಂತ್ವನ ಹೇಳಿದ್ದಾರೆ. ಈ ಬಗೆಗೆಲ್ಲ ಗಮನಿಸಿ ಕಬ್ಬಿಗೆ ದರ ನಿಗದಿ ಸೇರಿದಂತೆ ಬೇಡಿಕೆ ಈಡೇರಿಕೆಗೆ ಒತ್ತಾಯಿಸಿ 29.10.2007ರಂದು 'ರಾಜ್‌ಭವನ ಚಲೋ' ಯಾತ್ರೆಯನ್ನು ರೈಲ್ವೆ ನಿಲ್ದಾಣದಿಂದ ಕೈಗೊಳ್ಳುವ ಬಗ್ಗೆ ಸುದ್ದಿ ಗೋಷ್ಠಿಯಲ್ಲಿ (24.10.07) ಸಂಘದ ಅಧ್ಯಕ್ಷ ಶ್ರೀ ಕುರುಬೂರು ಶಾಂತಕುಮಾರ್ ತಿಳಿಸಿದರು. ತದನುಗುಣವಾಗಿ, ಸ್ವಾಮಿನಾಥನ್ ಅಯೋಗದ ಶಿಫಾರಸ್ಸಿನಂತೆ ಕಬ್ಬು ಬೆಳೆಗೆ ಜಮೀನಿನಲ್ಲಿಯೇ ದರ ನಿಗದಿ, ಕಬ್ಬು ಖರೀದಿ ತೆರಿಗೆ ಮನ್ನಾ, ಕಳೆದ ವರ್ಷದ ಬಾಕಿ ಅರೆಯದ ಕಬ್ಬನ್ನು ಅರೆಯುವಿಕೆ ಇತ್ಯಾದಿ ಬೇಡಿಕೆಗಳ ಪೂರೈಕೆಗೆ ಒತ್ತಾಯಿಸಿ ರಾಜ್ಯದ ಕಬ್ಬು ಬೆಳೆಗಾರರು ಬೃಹತ್ ಪ್ರತಿಭಟನಾ ರ್‍ಯಾಲಿಯು ಕಬ್ಬು ಬೆಳೆಗಾರರ ಸಂಘದ ಅಧ್ಯಕ್ಷ ಕುರುಬೂರು ಶಾಂತಕುಮಾರ್, ಸಾರಂಗಮಠ, ತೇಜಸ್ವಿ ಪಟೇಲ್ ಅವರ ನೇತೃತ್ವದಲ್ಲಿ 29.10.2007ರಂದು ನಡೆಯಿತು. ಕಬ್ಬು ಬೆಳೆಗಾರರ ಸಮಸ್ಯೆಯನ್ನು ರೈತ ಮುಖಂಡರು, ಹಾಗೂ ಕಾರ್ಖಾನೆ ಮಾಲೀಕರ ಸಭೆಯನ್ನು ಕರೆದು ಬಗೆಹರಿಸುವುದಾಗಿ ರಾಜ್ಯಪಾಲ ರಾಮೇಶ್ವರ ಠಾಕೂರ್, ಅವರು ಮನವಿ ಸಲ್ಲಿಸಿದ ಕಬ್ಬು ಬೆಳೆಗಾರರಿಗೆ ಭರವಸೆ ನೀಡಿದರು. (30.10.2007)

**ಭದ್ರಾ ನೀರಿಗಾಗಿ ಹೋರಾಟ :** ಅಕ್ರಮ ಪಂಪ್‌ಸೆಟ್ ಹಾವಳಿಯಿಂದಾಗಿ ಭದ್ರಾ ನಾಲೆಯ ಕೊನೆಯ ಭಾಗದ ಅಚ್ಚುಕಟ್ಟುದಾರರಿಗೆ ನೀರು ದುರ್ಲಭವಾಗಿತ್ತು. ಅದಕ್ಕಾಗಿ ಭಾರತೀಯ ರೈತ ಒಕ್ಕೂಟ ದಾವಣಗೆರೆಯಲ್ಲಿ ನಡೆಸಿದ ಅಚ್ಚುಕಟ್ಟು ರೈತರ ಸಭೆಯಲ್ಲಿ ಶಾಸಕರು ನೀರಾವರಿ ಅಧಿಕಾರಿಗಳ ಕಾರ್ಯವೈಖರಿ ವಿರುದ್ಧ ತೀವ್ರ ಟೀಕೆ ಮಾಡಿದರು. ಅಧಿಕಾರಿಗಳನ್ನು ತರಾಟೆಗೆ ತೆಗೆದುಕೊಂಡ ರೈತರು ತಿಂಗಳಾಂತ್ಯದೊಳಗೆ ನಾಲೆ ಕೊನೆ ಭಾಗಕ್ಕೆ ನೀರು ಸಿಗದಿದ್ದರೆ ಪರಿಣಾಮ ನೆಟ್ಟಗಿರುವುದಿಲ್ಲ ಎಂದು ರೈತರು ತೀವ್ರವಾಗಿ ಎಚ್ಚರಿಸಿದರು. ಅಧಿಕಾರಿಗಳು ತುರ್ತಾಗಿ ನಾಲಾ ಕೊನೆಯ ಭಾಗಕ್ಕೆ ಒದಗುವಂತೆ ನೀರು ಕೊಡುವ ಬಗ್ಗೆ ಭರವಸೆ ನೀಡಿದರು. (6.2.2006)

***ವಿಧಾನಸೌಧದಲ್ಲಿ ಸರ್ಕಾರ ಮತ್ತು ರೈತರ ಸಭೆ :*** ರೈತರ ಸಮಸ್ಯೆಗಳ ಬಗ್ಗೆ ಚರ್ಚಿಸಲು ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ 27.11.2008ರಂದು ಸಭೆಯನ್ನು ಕರೆಯಲಾಗಿತ್ತು. ಪ್ರಾಂತ ರೈತ ಸಂಘ, ಕಬ್ಬು ಮತ್ತು ತೆಂಗುಬೆಳೆಗಾರರು, ರೈತ

ಸಂಘಟನಾ ನಾಯಕರು ಈ ಸಭೆಯಲ್ಲಿ ನೂರಕ್ಕೂ ಮೀರಿದ ಸಂಖ್ಯೆಯಲ್ಲಿ ಪಾಲ್ಗೊಂಡಿದ್ದರು. ಕೃಷಿ ಪಂಪ್‌ಸೆಟ್‌ಗಳಿಗೆ ನಿರಂತರ ವಿದ್ಯುತ್, ಬೆಳೆವಿಮೆ, ಕೃಷಿ ಉತ್ಪನ್ನಗಳಿಗೆ ವೈಜ್ಞಾನಿಕ ಬೆಲೆ, ಕಬ್ಬಿಗೆ ಬೆಂಬಲ ಬೆಲೆ, ಹಾನಿಗೀಡಾದ ಆಲೂಗೆಡ್ಡೆ, ನೆಲ ಗಡಲೆ, ಮತ್ತು ಈರುಳ್ಳಿಗೆ ಪರಿಹಾರ ದೊರಕಿಸಬೇಕೆಂದು ಹಾಗೂ ವಿವಿಧ ರೈತ ಸಮಸ್ಯೆಗಳ ಬಗ್ಗೆಯೂ ಸಭೆಯಲ್ಲಿ ಚರ್ಚೆಆಯಿತು. ಕಬ್ಬಿಗೆ ಟನ್‌ಗೆ ಈ ಹಿಂದೆ 160ರೂ. ಪ್ರೋತ್ಸಾಹಧನ ನೀಡಲಾಗಿತ್ತು. ಅದನ್ನು ಪ್ರಸಕ್ತವರ್ಷದಲ್ಲಿಯೂ ಮುಂದುವರಿಸಬೇಕು; ಹಿಂದಿನ ಪ್ರೋತ್ಸಾಹಧನ ಬಾಕಿಯನ್ನು ವಿತರಿಸಬೇಕು. ಕಬ್ಬು ಬೆಳೆ ಹಾನಿ ಆದ ಪ್ರದೇಶದಲ್ಲಿ ಹೆಕ್ಟೇರ್‌ಗೆ 25ಸಾವಿರ ಪರಿಹಾರ ಬಿಡುಗಡೆ ಮಾಡಬೇಕು ಎಂದೆಲ್ಲ ಕಬ್ಬು ಬೆಳೆಗಾರರ ಸಂಘದ ಅಧ್ಯಕ್ಷ ಶ್ರೀ ಕುರುಬೂರು ಶಾಂತಕುಮಾರ್ ಅವರು ಮನವಿಯನ್ನು ಮುಖ್ಯಮಂತ್ರಿಗಳಲ್ಲಿ ಮಾಡಿದರು. ಆದರೆ ಆ ಬಗೆಗೆಲ್ಲ ಸ್ಪಷ್ಟ ಭರವಸೆ ಸಿಗದೆ, ಅವರಿಗೆ ಅಸಮಾಧಾನವಾಗಿತ್ತು ಎನ್ನಲಾಗಿದೆ.

ಸಭೆಯಲ್ಲಿ ಮಾತನಾಡಿದ ಶ್ರೀ ಬಸವರಾಜ್ ತಂಬಾಕೆ ಅವರು ರೈತರು ಬೆಳೆದ ಉತ್ಪನ್ನಗಳಿಗೆ ಸಬ್ಸಿಡಿ ಬದಲು ವೈಜ್ಞಾನಿಕ ಬೆಲೆ ಕೊಡಬೇಕು. ಹಾಲಿಗೆ ಸೂಕ್ತ ಬೆಲೆ ನಿಗದಿ ಪಡಿಸಬೇಕು. ವಿದ್ಯುತ್ ಸಮಸ್ಯೆ ಬಗೆ ಹರಿಸದಿದ್ದರೆ ರೈತರು ಬೀದಿಗಳಿದು ಹೋರಾಟ ಮಾಡುವುದೆ ಮಾರ್ಗವಾಗುತ್ತದೆ ಎಂದರು. ಶ್ರೀ ಕೋಡಿಹಳ್ಳಿ ಚಂದ್ರಶೇಖರ್ ಅವರು ಬೆಳೆಹಾನಿ ಸಂಬಂಧ ನೀಡಿದ ಪರಿಹಾರದ ಚೆಕ್‌ನ ಹಣ ರೈತರ ಖಾತೆಗೆ ಜಮೆ ಆಗುತ್ತಿಲ್ಲ. ಕೊಬ್ಬರಿಗೆ ಕ್ವಿಂಟಾಲ್‌ಗೆ 8600ರೂ ಇದ್ದದ್ದು 4ಸಾವಿರಕ್ಕೆ ಕುಸಿದಿದೆ. ಅದಕ್ಕೆ ಸೂಕ್ತ ಬೆಲೆ ಕೊಡಿಸಬೇಕು. ರೈತರ ಪಂಪ್‌ಸೆಟ್‌ಗೆ ನಿರಂತರ ವಿದ್ಯುತ್ ಒದಗಿಸಬೇಕು. ಬಿಟಿ ಬಿತ್ತನೆ ಬೀಜಗಳನ್ನು ಕೇರಳದಲ್ಲಿ ನಿಷೇಧಿಸಿರುವಂತೆ ರಾಜ್ಯದಲ್ಲಿಯೂ ನಿಷೇಧಿಸಬೇಕು, ಎಂದೆಲ್ಲ ಒತ್ತಾಯಿಸಿದರು. ಬಯ್ಯಾರೆಡ್ಡಿ ಅವರು ರೈತರ ಭೂಮಿಯನ್ನು ಬೆಂಗಳೂರು ಅಕ್ಕಪಕ್ಕ ಸ್ವಾಧೀನ ಪಡಿಸಿಕೊಳ್ಳುವಾಗ ಸರಿಯಾದ ಪರಿಹಾರ ನೀಡಬೇಕು, ಎಂದರು. ಶ್ರೀ ಎಚ್.ಆರ್. ಬಸವರಾಜಪ್ಪನವರ ಭೂಸರ್ವೆಯನ್ನು ಖಾಸಗೀಕರಣಗೊಳಿಸಿದರೆ ಬಡವರು ಭೂರಹಿತರಾಗುತ್ತಾರೆ. ಅವರಿಗೆ ಅನ್ಯಾಯವಾಗುತ್ತದೆ ಎಂದರು. ರೈತ ಸಂಘಟನಾ ನಾಯಕ ಶ್ರೀ ಕೆ.ಎಸ್. ಪುಟ್ಟಣ್ಣಯ್ಯ ಅವರು, ಆನೆ ಇತ್ಯಾದಿ ಕಾಡುಪ್ರಾಣಿಗಳ ಹಾವಳಿಯಿಂದ ರೈತರ ಬೆಳೆ ರಕ್ಷಿಸಬೇಕು. ಖುಷ್ಕಿ ಪ್ರದೇಶಕ್ಕೆ ಪ್ರತ್ಯೇಕ ಕೃಷಿ ನೀತಿ ನಿರೂಪಿಸಬೇಕು. ರೈತರಿಗೆ ಎತ್ತಿನ ಗಾಡಿ ಸಾಲ ಕೊಡಬೇಕು. ಕೆ.ಆರ್.ಎಸ್. ಸುತ್ತ ಗಣಿಗಾರಿಕೆಗೆ ನೀಡಿರುವ ಅನುಮತಿಯನ್ನು ಹಿಂದೆಗೆದುಕೊಳ್ಳಬೇಕು. ನೀರಾವರಿ

ಸಲಹಾಸಮಿತಿಗೆ ರೈತರನ್ನು ಸದಸ್ಯರನ್ನಾಗಿ ನೇಮಿಸಿಕೊಳ್ಳಬೇಕು. ಚೀನಾ ಪ್ರವಾಸಕ್ಕೆ ರೈತ ಸಂಘಟನೆಯ ಸದಸ್ಯರನ್ನೂ ಕರೆದುಕೊಂಡು ಹೋಗಬೇಕು ಎಂದೆಲ್ಲ ಒತ್ತಾಯವಿಟ್ಟರು. ಸಭೆಯಲ್ಲಿ ಮುಖ್ಯಮಂತ್ರಿ ಶ್ರೀಯಡಿಯೂರಪ್ಪ ಅವರು, ಅನ್ಯರಾಜ್ಯಗಳಿಂದ ಹೆಚ್ಚಿನ ಪ್ರಮಾಣದಲ್ಲಿ ವಿದ್ಯುತ್ ಖರೀದಿಸಿ ಸಮಸ್ಯೆಯನ್ನು ಪರಿಹರಿಸಲಾಗುವುದು. ರಾಷ್ಟ್ರೀಕೃತ್ ಬ್ಯಾಂಕ್‌ಗಳಿಂದಲೂ ಶೇ. 3ರ ಬಡ್ಡಿದರದಲ್ಲಿ ಬೆಳೆಸಾಲ ಒದಗಿಸುವಂತೆ ಕೇಂದ್ರದ ಮೇಲೆ ಒತ್ತಡತರಲಾಗುವುದು. ಹೋರಾಟದ ಸಂದರ್ಭಗಳಲ್ಲಿ ರೈತರ ಮೇಲೆ ಹಾಕಿರುವ ಕೇಸ್‌ಗಳನ್ನು ಹಿಂದೆಗೆದುಕೊಳ್ಳಲಾಗುವುದು. ಬೆಳೆ ವಿಮೆ ಪದ್ಧತಿಯಲ್ಲಿ ಸುಧಾರಣೆಗೆ ತರಲು ಕ್ರಮ ಕೈಗೊಳ್ಳಲಾಗುವುದು. ಶೇಂಗಾ, ಆಲೂಗೆಡ್ಡೆ ಮತ್ತು ಈರುಳ್ಳಿ ಬೆಳೆಗಳಿಗೆ ಹಾನಿನಷ್ಟವನ್ನು ತುಂಬಿಕೊಡಲಾಗುವುದು, ಎಂದೆಲ್ಲ ಭರವಸೆ ನೀಡಿದರು. ಆದರೂ ಸ್ಪಷ್ಟ ಭರವಸೆ ಸಿಗಲಿಲ್ಲ ಎಂದು ರೈತರಲ್ಲಿ ಅಸಮಾಧಾನವೂ ಕಾಣುತ್ತಿತ್ತು.

**ಜಕ್ಕೂರು ಭೂಪರಭಾರೆ ವಿರುದ್ಧ ರೈತರ ಹೋರಾಟ : ಆತ್ಮಹತ್ಯಾ ಪ್ರಯತ್ನ:** ಅರ್ಕಾವತಿ ಲೇಔಟ್ ನಿರ್ಮಾಣಕ್ಕಾಗಿ ಬಿಡಿಎ ಸಂಸ್ಥೆಯು ರೈತರಿಂದ ಭೂಸ್ವಾಧೀನ ಪಡೆಯುವಲ್ಲಿ ಸರ್ಕಾರವು ಎಕರೆಗೆ 12 ಲಕ್ಷರೂ. ನಂತೆ ನಿಗದಿ ಮಾಡಿ. ಅದನ್ನೂ ತಾನು ಎಕರೆಗೆ 4.75ಕೋಟಿ ರೂ.ಗೆ ಹರಾಜು ಹಾಕಿತು. ಇದು ತೀರ ತಾರತಮ್ಯದ ವಿಷಯವಾಗಿದೆ. ಸುಪ್ರೀಂಕೋರ್ಟು ಅರ್ಕಾವತಿ ಲೇಔಟ್‌ನ ನಿರ್ಮಾಣ ಕುರಿತಾಗಿ ಇನ್ನೂ ತೀರ್ಪು ಕೊಟ್ಟಿಲ್ಲದಿರುವ ಸಂದರ್ಭದಲ್ಲಿ ಮೆಟ್ರೋಪಾಲಿಟನ್ ಕೋ ಆಪರೇಟಿವ್ ಹೌಸಿಂಗ್ ಸೊಸೈಟಿ (MCHS) ಯು ಐ.ಎ.ಎಸ್ ಮತ್ತು ಐ.ಪಿ.ಎಸ್ ಅಧಿಕಾರಿಗಳಿಗೆ ಮನೆ ಕಟ್ಟಿಕೊಡಲು ಈ ರೀತಿ ಹರಾಜು ಹಾಕಿರುವುದು, ಪರಿಹಾರ ತಾರತಮ್ಯ ಮಾಡಿರುವದು ಅನ್ಯಾಯ ಎಂದು ರೈತರು ಪ್ರತಿಭಟನೆಯಲ್ಲಿ ತೊಡಗಿದರು.

ಈ ಸಂದರ್ಭದಲ್ಲಿ ಒಬ್ಬ ರೈತ, ಪ್ರತಿಭಟನಾ ಸೂಚಕವಾಗಿ, ಸಜೀವ ದಹನವಾಗಲು ಯತ್ನಿಸಿದರೆ, ಇನ್ನೊಬ್ಬ ರೈತನಿಂದ ವಿಷ ಸೇವನೆ ಮಾಡುವ ಪ್ರಯತ್ನವಾಯಿತು. ಇದು ನೂರಾರು ರೈತರ ಪ್ರತಿಭಟನೆಯ ನಡುವೆ ಒದಗಿದ ಉದ್ವೇಗದ ಸಂದರ್ಭವಾಯಿತು. ನಗರದಲ್ಲಿ ನಾನೂರು ಎಕರೆಗಳನ್ನು ಹೊಂದಿರುವಂಥ.. ಮಾಜಿ ಸಚಿವರ, ಬಲಾಢ್ಯರ ಗೋಜಿಗೆ ಹೋಗದೆ ರೈತರ ಜಮೀನುಗಳ ಮೇಲೆ ಏಕೆ ಕಣ್ಣು ಹಾಕಬೇಕು? ಎಂಬ ಪ್ರತಿಭಟನಾತ್ಮಕ ಪ್ರಶ್ನೆ ರೈತರದಾಗಿತ್ತು. ಪೋಲೀಸರು ಹಾಗೂ ರೈತರ ನಡುವೆ ಈ ಬಗೆ ಮಾತಿನ ಚಕಮಕಿಯೂ ನಡೆಯಿತು. ಆದರೆ ಉಚ್ಚನ್ಯಾಯಾಲಯವು ಅರ್ಕಾವತಿ ಲೇಔಟ್

ನೆರೆಯಲ್ಲಿರುವ 24 ಎಕರೆಗೂ ಮೀರಿ ಇದ್ದ ಭೂಮಿಯನ್ನು MCHS ಸಂಸ್ಥೆಗೆ ಕೊಟ್ಟ ಬಗ್ಗೆ ಇದ್ದ ತಡೆ ಅಜ್ಞೆಯನ್ನು ತೆರವುಗೊಳಿಸಿದೆ. ತೆರವು ಆಜ್ಞೆ ಆಗಿರುವ ಜಾಗದಲ್ಲಿ ಮಾತ್ರ ನಿರ್ಮಾಣ ಕಾರ್ಯವನ್ನು MCHS ಸಂಸ್ಥೆಯಿಂದ ಕೈಗೊಳ್ಳಲಾಗಿದೆ ಎಂಬುದು ಅಧಿಕಾರಿಗಳು ಹಾಗೂ ಸಚಿವರ ಸಮಜಾಯಿಷಿ ಆಗಿತ್ತು. (7.5.2009)

**ಬಳ್ಳಾರಿ ವಿಮಾನ ನಿಲ್ದಾಣ ನಿರ್ಮಾಣಕ್ಕೆ ಭೂಸ್ವಾಧೀನಕ್ಕೆ ರೈತರ ಪ್ರತಿಭಟನೆ:** ವಿಮಾನ ನಿಲ್ದಾಣ ನಿರ್ಮಾಣಕ್ಕೆ ಭೂಮಿ ನೀಡಲು ಸಿರವಾರ ಮತ್ತು ಜಾಗನೂರು ರೈತರು ನಿರಾಕರಿಸಿ ಒಂದು ತಿಂಗಳಿನಿಂದ ರಾಷ್ಟ್ರೀಯ ಹೆದ್ದಾರಿ 63ರ ಗೋಡೆಹಾಳ್ ಕ್ರಾಸ್ ಬಳಿ ನಡೆಸುತ್ತಿದ್ದ ಪ್ರತಿಭಟನೆ ವಿಕೋಪಕ್ಕೆ ತಿರುಗಿತ್ತು.

ರೈತರು ಮತ್ತು ಪೋಲಿಸರ ನಡುವಣ ಮಾತಿನ ಚಕಮಕಿಯಿಂದಾಗಿ ಪೋಲೀಸರಿಂದ ಲಾಠಿ ಪ್ರಹಾರ ನಡೆಯಿತು. ಗಾಳಿಯಲ್ಲಿ ಗುಂಡು ಹಾರಿಸಲಾಯಿತು. ಪೋಲೀಸ್‌ರತ್ತ ರೈತರು ಕಲ್ಲು ತೂರಾಟ ನಡೆಸಿದರು. ಹಿನ್ನೆಲೆ ಎಂದರೆ ನಿಲ್ದಾಣ ಸ್ಥಾಪನೆಗೆ ರೈತ ಪ್ರತಿಭಟನೆ ತೀವ್ರಗೊಳ್ಳುತ್ತಿದ್ದಂತೆ ಜಿಲ್ಲಾಡಳಿತ ರೈತರ ಸಭೆ ಕರೆದು ಚರ್ಚಿಸಿದರೂ ಸಫಲವಾಗಲಿಲ್ಲ. ಐಡೆ ಸಂಸ್ಥೆಯ ಮೂಲಕ ಜಾಗನೂರಿನಿಂದ ಭೂಮಿ ಸಮೀಕ್ಷೆ ಆರಂಭವಾದಾಗ ಅಲ್ಲಿನ ರೈತರು ವಿರೋಧ ಮಾಡಿದರು. ಸಿರವಾರದ ಗ್ರಾಮದ ರೈತರು ಅನಿರ್ದಿಷ್ಟಾವಧಿ ಪ್ರತಿಭಟನೆಗೆ ಸಿರವಾರ ಕ್ರಾಸ್ ಬಳಿ ಮುಂದಾದರು. ಒಣಭೂಮಿಯ ಪ್ರದೇಶವನ್ನು ನೀಡಲು ಕೆಲವು ರೈತರು ಮುಂದೆ ಬಂದರು. ಅದನ್ನು ನೆಪಮಾಡಿಕೊಂಡು ನಿಲ್ದಾಣಕ್ಕೆ ರೈತರು ಭೂಮಿ ಕೊಡಲು ಒಪ್ಪಿದ್ದಾರೆ ಎಂದು ಪ್ರಚಾರ ಗೊಂಡಾಗ ರೈತರು ಆಕ್ರೋಶಗೊಂಡರು. ಸಿರವಾರಕ್ರಾಸ್ ಬಳಿಯಿಂದ ಸರ್ಕಾರದ ವಿರುದ್ಧ **ಉರುಳುಸೇವೆಯ** ಮೂಲಕ ಪ್ರತಿಭಟನೆಯನ್ನು ವ್ಯಕ್ತಮಾಡಿದರು. ಕೃಷಿಭೂಮಿಯನ್ನು ಉಳಿಸಿಕೊಳ್ಳಲು ಅವರ ಹೋರಾಟ ಮುಂಚೂಣಿಯಲ್ಲಿತ್ತು. (16.2.2010)

ಹೀಗೆ ನೀರಾವರಿ ಭೂಮಿಯಲ್ಲಿ ಏರ್‌ಪೋರ್ಟ್ ವಿರೋಧಿಸಿ 15.2.12009ರಂದು ಗೋಡೆಹಾಳ್ ಕ್ರಾಸ್‌ನಲ್ಲಿ ರೈತರು ರಸ್ತೆ ತಡೆ ನಡೆಸಲು ಶುರುಮಾಡಿದಾಗ ಪೋಲೀಸರು ಗೋಲಿಬಾರ್ ಮಾಡಿದರು. ಈ ಸಮಯದಲ್ಲಿ ಪೋಲೀಸ್ ಅಧಿಕಾರಿ ಡಿವೈಎಸ್‌ಪಿ ಸಂಗೀತಾ ಅವರ ಮೇಲೆ ಹಲ್ಲೆ ನಡೆಯಿತು. ಪೋಲೀಸ್ ವಾಹನಗಳನ್ನು ಜಖಂಗೊಳಿಸಲಾಯಿತು. ಈ ಎಲ್ಲ ಸಂಬಂಧ ಕ್ರಿಮಿನಲ್ ಪ್ರಕರಣಗಳನ್ನು ದಾಖಲಿಸಲಾಯಿತು.

ರೈತರು 11.3.2009ರಂದು ಚಾಗನೂರಿನಿಂದ ಬಳ್ಳಾರಿಯವರೆಗೆ ಎತ್ತಿನ ಬಂಡಿ ಜಾಥಾ 15.3.2009ರಂದು ಚಾಗನೂರಿನಿಂದ ಬೆಂಗಳೂರು ವರೆಗೆ ರೈತರು ಹನ್ನೊಂದು ದಿನಗಳ ಪಾದಯಾತ್ರೆ ಮಾಡಿ ಮಾರ್ಚ 25ರಂದು ರಾಜ್ಯಪಾಲ ರಾಮೇಶ್ವರ ಠಾಕೂರ್ ಅವರಿಗೆ ಮನವಿ ಸಲ್ಲಿಸಿದರು. ಈ ನಡುವೆಯೂ ಭೂಮಿಯನ್ನು ವಶಪಡಿಸಿಕೊಳ್ಳಲು ಸರ್ಕಾರವು ನೋಟಿಫಿಕೇಶನ್ ಹೊರಡಿಸಿದುದನ್ನು ವಿರೋಧಿಸಿ 2009ರ ಜುಲೈ 2ನೇ ತಾರೀಖಿನಂದು ಚಾಗನೂರಿನಲ್ಲಿ ಶವಯಾತ್ರೆ ನಡೆಸಲಾಯಿತು, ಎಂದು ಶಶಿಧರ ಮೇಟಿ ವರದಿ ಮಾಡಿದ್ದಾರೆ.

24.7.2009ನೇ ಶುಕ್ರವಾರದಂದೂ ವಿಮಾನ ನಿಲ್ದಾಣಕ್ಕೆ ಭೂಸ್ವಾಧೀನ ವಿರೋಧಿಸಿ ಚಾಗನೂರು ಸಿರಿವಾರ ನೀರಾವರಿ ಭೂರಕ್ಷಣಾ ಹೋರಾಟ ಸಮಿತಿಯ ನೇತೃತ್ವದಲ್ಲಿ ನೂರಾರು ರೈತರು ಎತ್ತಿನಬಂಡಿ ಜಾಥಾ ಮೂಲಕ ಬಳ್ಳಾರಿಗೆ ಬಂದರು. ಬಂದು 'ಘನ ಆಹಾರ ನಿರಾಕರಣ ಚಳವಳಿ' ಶುರುಮಾಡಿದರು. ಬಳ್ಳಾರಿಗೆ 4ಕಿ.ಮೀ ದೂರದಲ್ಲಿ ಪೋಲೀಸರು ಜಾಥಾವನ್ನು ತಡೆದಾಗ ರೈತರು, ಪೋಲೀಸರ ನಡುವೆ ಮಾತಿನ ಚಕಮಕಿ ನಡೆಯಿತು. ಆಗ ಬಂದ ಗ್ರಾಮೀಣ ಡಿವೈಎಸ್‌ಪಿ ರವಿನಾರಾಯಣ ಅವರು ಶಾಂತಿಯುತವಾಗಿ ಜಾಥಾ ಮುಗಿಸಲು ಅವಕಾಶ ನೀಡಿದರು. ತಾರಾನಾಥ ಆಯುರ್ವೇದ ಕಾಲೇಜು ಬಳಿ ರೈತರು ಬಂದು ಎತ್ತುಗಳನ್ನು ಬಂಡಿಯ ಹಿಂದೆ ಕಟ್ಟಿದರು. ನೊಗಕ್ಕೆ ಹೆಗಲುಕೊಟ್ಟು, ಪ್ರಮುಖ ಬೀದಿಗಳ ಮೂಲಕ ಜಿಲ್ಲಾಧಿಕಾರಿಗಳ ಕಛೇರಿ ಬಳಿ ಬಂದು ಸಭೆ ನಡೆಸಿದರು.

29.3.10ರ ಸೋಮವಾರ ನಡೆದ ಸಚಿವ ಸಂಪುಟ ಸಭೆಯಲ್ಲಿ ರೈತರ ಮೇಲೆ (ಹಾವೇರಿ, ಶಿವಮೊಗ್ಗ, ಹಾಸನ) ಹೂಡಿರುವ ಪ್ರಕರಣಗಳನ್ನು ಹಿಂದೆಗೆದುಕೊಳ್ಳುವ ನಿರ್ಧಾರವಾಯಿತೆಂದು ಹೇಳಲಾಗಿದೆ.

**ಬ್ಯಾಡಗಿ ಹಿರೆಕರೂರು, ನಂಜನಗೂಡು ತಾಲೂಕಿನಲ್ಲಿ, ಬಿತ್ತನೆ ಬೀಜ ಅಕ್ರಮ ಸಾಗಾಣಿಕೆ; ಗೊಬ್ಬರ ಅಭಾವಕ್ಕೆ ರೈತರಿಂದ ರಸ್ತೆ ತಡೆ ಪ್ರತಿಭಟನೆ :** ಜುಲೈ ತಿಂಗಳಲ್ಲಿ ಮಳೆಯಾಗಿ ಬೆಳೆ ಬಿತ್ತಿದ್ದ ರೈತರಿಗೆ ಯೂರಿಯಾ ಗೊಬ್ಬರದ ಅವಶ್ಯಕತೆ ಇತ್ತು. ಅದಕ್ಕಾಗಿ ಟಿಎಪಿಸಿಎಂ ಬಳಿ ಬೆಳಗಿನಿಂದ ಸರದಿ ಸಾಲಿನಲ್ಲಿ ಸಂಜೆಯವರೆಗೆ ಕಾದು ನಿಂತರೂ ಗೊಬ್ಬರ ಸಿಗದೆ, ಬ್ಯಾಡಗಿ ಪಟ್ಟಣದ ಬಸ್ ನಿಲ್ದಾಣದ ಎದುರು ತಾಲೂಕು ರೈತರು ರಸ್ತೆ ತಡೆ ಮಾಡಿ ಪ್ರತಿಭಟನೆ ನಡೆಸಿದರು. ಪ್ರತಿಭಟನಾ ಸ್ಥಳಕ್ಕೆ

ಸಹಾಯಕ ಕೃಷಿ ನಿರ್ದೇಶಕರು ಬಂದು ಗೊಬ್ಬರ ವಿತರಣೆ ಬಗ್ಗೆ ಭರವಸೆ ನೀಡಿದ ಮೇಲೆ ಪ್ರತಿಭಟನೆಯನ್ನು ನಿಲ್ಲಿಸಿದರು. (14.7.2009)

ಹೀಗೆಯೇ ಗೊಬ್ಬರದ ಅಭಾವದ ಕಾರಣ ಹಿರೇಕೆರೂರಿನಲ್ಲಿ ತಾಲೂಕು ರೈತ ಸಂಘದ ನೇತೃತ್ವದಲ್ಲಿ ರೈತರು ಸರ್ವಜ್ಞ ವೃತ್ತದಿಂದ ಮೆರವಣಿಗೆ ಬಂದು ಸಹಾಯಕ ಕೃಷಿ ನಿರ್ದೇಶಕರ ಕಛೇರಿಗೆ ಬೀಗ ಹಾಕಿ ಪ್ರತಿಭಟನೆ ಸೂಚಿಸಿದರು. ಗೊಬ್ಬರ ವಿತರಣೆ ಆಗುವವರಿಗೂ ಪ್ರತಿಭಟನೆ ನಿಲ್ಲದು ಎಂದು ನುಡಿದರು. ನಂಜನಗೂಡು ತಾ. ಚಿಕ್ಕಯ್ಯನ ಛತ್ರ ರೈತ ಸಂಪರ್ಕ ಕೇಂದ್ರಕ್ಕೆ ಪೂರೈಕೆಯಾಗಿದ್ದ ಬಿತ್ತನೆ ಬೀಜವನ್ನು ಅಕ್ರಮವಾಗಿ ಸಾಗಿಸುತ್ತಿದ್ದುದನ್ನು ಮಾಲು ಸಮೇತ ಹಿಡಿದು ಪ್ರತಿಭಟನೆಯನ್ನು ಮಾಡಿದರು. ನಂತರ ತನಿಖೆಗೆ ಆಗ್ರಹಿಸಿದರು. ಆಗ ಜಂಟಿ ಕೃಷಿ ನಿರ್ದೇಶಕರು, ತಹಸೀಲ್ದಾರ್ ಹಾಗೂ ತಾಲೂಕು ಪಂಚಾಯಿತಿ ಅಧಿಕಾರಿಗಳು ಸ್ಥಳಕ್ಕೆ ಬಂದು ಬಿತ್ತನೆ ಬೀಜವನ್ನು ಎಪಿಎಂಸಿ ರೈತ ಭವನದಲ್ಲಿ ಡಿಸಿ. ಬೀಗ ಮುದ್ರೆ ಹಾಕಿಸಿದರು (14.7.2009).

**ಕಬ್ಬುಬೆಳೆಗಾರರ ಎಫ್‌ಆರ್‌ಪಿ ಶಾಸನ ವಿರುದ್ಧ ಹೋರಾಟ; ಕೇಂದ್ರ ಸರ್ಕಾರದ ಸ್ಪಂದನೆ :** ಚಳಿಗಾಲದ ಲೋಕಸಭಾ ಅಧಿವೇಶನದ ಮೊದಲದಿನವೇ ಕೇಂದ್ರ ಸರ್ಕಾರವು ಕಬ್ಬಿಗೆ ಏಕರೂಪದ ಬೆಲೆ ನಿಗದಿಗೆ ಸುಗ್ರೀವಾಜ್ಞೆ ಮೂಲಕ (22.10.2009) ಜಾರಿಗೆ ತಂದ 'ನ್ಯಾಯಯುತ ಮೌಲ್ಯ ವರ್ಧಿತ ಬೆಲೆ ನಿಯಮವು' ರೈತ ವಿರೋಧಿಯಾಗಿದೆ, ಎಂದು ಕಬ್ಬು ಬೆಳೆಗಾರರು ರಾಜಧಾನಿ ದಿಲ್ಲಿಯಲ್ಲಿ ಭಾರಿ ಪ್ರತಿಭಟನೆಯನ್ನು ಮಾಡಿದರು. ಇದಕ್ಕೆ ರೈತರು ಕೊಡುವ ಕಾರಣಗಳು ಹೀಗೆವೆ. ಈ ಎಫ್‌ಆರ್‌ಪಿ (Fair and Remunerative price) ಶಾಸನದ ರೀತ್ಯಾ, ರೈತರಿಗೆ ಕೇಂದ್ರ ನಿಗದಿ ಬೆಲೆಗಿಂತ ದುಪ್ಪಟ್ಟು ಹೆಚ್ಚು ಸಿಗುತ್ತಿದ್ದ ಬೆಲೆ ರದ್ದಾಗುತ್ತದೆ; ಸುಗ್ರೀವಾಜ್ಞೆ ವಿರುದ್ಧ ಯಾರೂ ನ್ಯಾಯಾಲಯಕ್ಕೆ ಅಹವಾಲು ಸಲ್ಲಿಸುವಂತಿಲ್ಲ; ಖಾಸಗಿ ಸಕ್ಕರೆ ಕಾರ್ಖಾನೆಗಳ ಪರ ಈ ಶಾಸನವಾಗಿದೆ; ಕಬ್ಬು ಬೆಳೆಗಾರರು ಹಾಳಾಗುವಂಥ ಅನ್ಯಾಯದ ಬೆಲೆ ನಿಗದಿ ಆಗಿದೆ; 1966ರ ಕಬ್ಬು ನಿಯಂತ್ರಣಾ ಅದೇಶದ 5(ಎ) ಕಾಯ್ದೆ ಅನ್ವಯ ಕಬ್ಬಿನ ಉಪ ಉತ್ಪನ್ನಗಳಿಂದ ಒದಗುತ್ತಿದ್ದ ಲಾಭಾಂಶಂದಲ್ಲಿ ಶೇ. 50ರಷ್ಟುನ್ನು ನೀಡಲಾಗುತ್ತಿದ್ದುದ್ದನ್ನು ಬೆಳೆಗಾರರ ಗಮನಕ್ಕೆ ತರದೆಯೆ ಏಕಾಏಕಿ ಕಾಯ್ದೆಯಿಂದ ತೆಗೆದು ಹಾಕಲಾಗಿದೆ; ಕರ್ನಾಟಕದಲ್ಲಿ ಸದ್ಯ ಸಕ್ಕರೆ ಕಾರ್ಖಾನೆಗಳು ರೈತರಿಗೆ ಟನ್‌ಕಬ್ಬಿಗೆ ನೀಡುತ್ತಿರುವ 2200ರೂ.ಗಳ ಬದಲು ಎಫ್ ಆರ್‌ಪಿ ಪ್ರಕಾರ 1298ರೂ. ಗಳಿಗಿಳಿದು, 902ರೂ. ಗಳಷ್ಟು ಕಡಿತವಾಗುತ್ತದೆ.

ಅರ್ಥಾತ್ ಕಬ್ಬು ಬೆಳೆಗಾರನಿಗೆ ಪ್ರತಿಟನ್‌ಗೆ ಆಗುವ ಹಾನಿ ಇದು. ಇನ್ನು ಮೊಲಾಸಿಸ್ ಮಾರಾಟ, ವಿದ್ಯುತ್ ಉತ್ಪಾದನೆಯಿಂದ ಸಕ್ಕರೆ ಕಾರ್ಖಾನೆಗಳು ಗಳಿಸುವ ಆದಾಯದಲ್ಲಿ ಪಾಲು ರೈತರಿಗೆ ಮುಂದೆ ಸಿಗುವುದಿಲ್ಲ. ಇದಲ್ಲದೆ ದೇಶಕ್ಕೆ ಪ್ರತಿವರ್ಷ ಅಗತ್ಯ ವಿರುವ 22.5 ದಶ ಲಕ್ಷ ಟನ್‌ಗಳ್ಲಿ 15.5ದಶಲಕ್ಷ ಟನ್ ಮಾತ್ರ ಉತ್ಪಾದನೆಯಾಗುತ್ತಿದೆ ಶೇ. 15ರಷ್ಟು ಮಾತ್ರ ಗೃಹ ಬಳಕೆಗಿದ್ದು ಉಳಿದ ಶೇ. 85ರಷ್ಟು ಸಕ್ಕರೆ, ಬಹುರಾಷ್ಟ್ರೀಯ ಕಂಪನಿಗಳಾದ ಪೆಪ್ಸಿ, ಕೋಕಾಕೋಲಾ ಬೇಕರಿ ಉದ್ಯಮಗಳಿಗೆ ಹೋಗುವಲ್ಲಿ ರೈತರ ದುಡಿಮೆಗೆ ಪ್ರತಿಫಲ ಸೂಕ್ತವಾಗಿದೆಯೆ? ಎಂಬ ಪ್ರಶ್ನೆಯೂ ರೈತರಲ್ಲಿದೆ.

ಇಂಥ ಸಂದರ್ಭಗಳ ಕಬ್ಬಿನ ಬೆಲೆ ನೀತಿ ವಿರುದ್ಧ ಪ್ರತಿಪಕ್ಷಗಳೂ ಲೋಕಸಭೆಯಲ್ಲಿ ಎದುರು ನಿಂತುವು. ಆಡಳಿತಾರೂಢ ಪಕ್ಷಗಳೂ ರೈತರ ಬೆಂಬಲಕ್ಕೆ ನಿಂತ ಕಾರಣ ಕೇಂದ್ರ ಸರ್ಕಾರಕ್ಕೆ ಇರಿಸುಮುರಿಸಾಯಿತು. ಸಂಸತ್ ಕಲಾಪವನ್ನು ಮುಂದೂಡಬೇಕಾಯಿತು. ಹಿನ್ನೆಲೆ ಹೀಗಿದೆ : ದೇಶದೆಲ್ಲೆಡೆಯಿಂದ ಬಂದಿದ್ದ ರೈತರು ದಿಲ್ಲಿಯ ರಮಾಲಿಯಾ ಮೈದಾನದಿಂದ ಜಂತರ್ ಮಂತರ್‌ವರೆಗೆ ಮೆರವಣಿಗೆ ನಡೆಸಿದ್ದರು. ಸಂಸದರು ಎಫ್‌ಆರ್‌ಸಿ ಬೆಲೆ ನಿಯಮಕ್ಕೆ ಆಕ್ಷೇಪ ವ್ಯಕ್ತಪಡಿಸಿದರು.

ಕೇಂದ್ರ ಸರ್ಕಾರದ (ಯುಪಿಎ) ಅಂಗಪಕ್ಷಗಳಾದ ಡಿ.ಎಂ.ಕೆ, ತೃಣಮೂಲ ಕಾಂಗ್ರೆಸ್ ಕೂಡಾ ಆಕ್ಷೇಪ ಮಾಡಿದುವು. ಅಧಿವೇಶನದ ಆರಂಭಕ್ಕೆಯೆ ಪ್ರತಿಪಕ್ಷ ಮತ್ತು ಮೈತ್ರಿಕೂಟದ ಕೆಲಸದಸ್ಯರು ಶಾಸನದ ವಿರುದ್ಧ ಘೋಷಣೆ ಕೂಗಿದರು. ಮಧ್ಯಾಹ್ನ 12ಗಂಟೆಯವರೆಗೆ ಸ್ಪೀಕರ್ ಮೀರಾಕುಮಾರ್ ಕಲಾಪ ಮುಂದೂಡಿ, ಮತ್ತೆ ಸದನ ಸೇರಿದಾಗ ಗದ್ದಲ ಮುಂದುವರಿಯಿತು. ಮಾರನೆದಿನಕ್ಕೆ (ಶುಕ್ರವಾರ) ಕಲಾಪವನ್ನು ಮುಂದೂಡಲಾಯಿತು. ರಾಜ್ಯಸಭೆಯಲ್ಲೂ ಈ ವಿಚಾರದ ಬಗ್ಗೆ ಶೂನ್ಯವೇಳೆಯಲ್ಲಿ ಪ್ರತಿಪಕ್ಷವು ನಿಲುವಳಿ ಸೂಚನೆ ಮಂಡಿಸಲು ತೀರ್ಮಾನಿಸಿತ್ತು.

ಸಂಸತ್ ಭವನದ ಹೊರಭಾಗದಲ್ಲಿ ಕಬ್ಬು ಬೆಳೆಗಾರರು ಕಬ್ಬಿನ ಜಲ್ಲೆ ಹಿಡಿದು ಘೋಷಣೆ ಮಾಡಿ ಕೇಂದ್ರದ ನಿರ್ಧಾರದ ಬಗ್ಗೆ ಟೀಕಿಸಿದರು. ರೈತ ನಾಯಕ ಮಹೇಂದ್ರ ಸಿಂಗ್ ಟಿಕಾಯತ್ ಕಬ್ಬಿಗೆ ಹೊಸದಾಗಿ ಬೆಲೆ ನಿಗದಿ ಮಾಡಲು ಆಗ್ರಹಿಸಿದರು. ರೈತರು ಭತ್ತಕ್ಕೂ ಬೆಂಬಲ ಬೆಲೆ ಘೋಷಿಸಲು ಒತ್ತಾಯಿಸಿದರು.

ಸಂಸದರು, ಈ ಹೊಸನೀತಿ ಕೈಗಾರಿಕೆಗಳಿಗೆ ನೆರವಾಗಿ, ರೈತರ ಆತ್ಮಹತ್ಯೆ ಹೆಚ್ಚಿಸುತ್ತದೆ; ಸಕ್ಕರೆ ಕಾರ್ಖಾನೆ ಮಾಲೀಕರಿಗೆ ನೆರವಾಗಿದೆ. ಬ್ರೆಜಿಲ್‌ನಿಂದ ಸಕ್ಕರೆ ಆಮದು ಮಾಡಲು ಅನುಮತಿ ನೀಡುವ ಮೂಲಕ ಕಾರ್ಖಾನೆ ಮಾಲೀಕರಿಗೆ ನೆರವಾಗುತ್ತದೆ, ಎಂದೆಲ್ಲ ಟೀಕಿಸಿದರು.

ಈ ಪ್ರತಿ ಕ್ರಿಯೆಗಳಿಂದಾಗಿ ಸರ್ಕಾರವು ಪ್ರಧಾನಿ ನೇತೃತ್ವದಲ್ಲಿ ಸಭೆ ನಡೆಸಿತು. ಸುಗ್ರೀವಾಜ್ಞೆಗೆ ತಿದ್ದುಪಡಿತರುವ ಬಗ್ಗೆ ತೀರ್ಮಾನಿಸಲಾಯಿತು. ಪ್ರತಿಭಟನೆಯ ಕಾವಿನಿಂದಾಗಿ ಸಂಸದರು, ಸಚಿವರ, ಪಕ್ಷದ ಪ್ರಧಾನ ಕಾರ್ಯದರ್ಶಿಗಳ ಅಹವಾಲು ಮಾತುಗಳನ್ನು ಆಲಿಸಿದ ಪ್ರಧಾನಿ ಮನಮೋಹನ್ ಸಿಂಗ್ ಅವರು ಕಾನೂನಿನಲ್ಲಿ ತಿದ್ದುಪಡಿ ಮಾಡುವ ಭರವಸೆ ನೀಡಿದರು. ಈ ಸಂಬಂಧ 23.11.09ನೇ ಸೋಮವಾರ ಸರ್ವಪಕ್ಷಗಳ ಸಭೆಯನ್ನು ಕರೆಯ ಬೇಕೆಂದಿದ್ದುದನ್ನು ಬಿಟ್ಟು ಶುಕ್ರವಾರವೇ (20.11.09) ಸಭೆಯನ್ನು ನಡೆಸಿತು.

ಸಭೆಯಲ್ಲಿ ರಾಜ್ಯಗಳ ಎಸ್‌ಎಪಿ ವ್ಯವಸ್ಥೆಯನ್ನು ಜಾರಿಗೊಳಿಸಲು ನಿರ್ಧರಿಸಲಾಯಿತು. ಕಳೆದ ಮೂರು ವರ್ಷಗಳಿಂದ ರಾಜ್ಯದ ಕಬ್ಬು ಬೆಳೆಗಾರರು ಎಸ್‌ಎಪಿ (State advisory price) ಗಾಗಿಯೇ ಹೋರಾಟ ನಡೆಸಿಕೊಂಡು ಬಂದಿದ್ದಾರೆ. ಸಭೆಯ ನಿರ್ಧಾರದಂತೆ ಸದ್ಯ ಜಾರಿಗಿರುವ ಸುಗ್ರೀವಾಜ್ಞೆ ಬದಲಾಗಿ ಹೊಸ ತಿದ್ದುಪಡಿ ಮಸೂದೆಯನ್ನು ಸೋಮವಾರವೇ (23.11.09) ಸಂಸತ್ತಿನಲ್ಲಿ ಮಂಡಿಸಲು ಕೇಂದ್ರಸರ್ಕಾರ ಒಪ್ಪಿಕೊಂಡಿತು. ಎಫ್‌ಆರ್‌ಪಿ ಮತ್ತು ಎಸ್‌ಎಪಿ ಯನ್ನು ಕೂಡಿಸಿ ಮಂಡಿಸಿದ ಮಸೂದೆ ಕಾಯ್ದೆಯಾದರೆ, ಸರ್ಕಾರ ಸಲಹಾ ಬೆಲೆಯನ್ನು ಪ್ರಕಟಿಸಿದಾಗ ಸಕ್ಕರೆ ಕಾರ್ಖಾನೆಗಳು ಸರ್ಕಾರ ನಿಗದಿ ಮಾಡಿದಂತೆ ಹೆಚ್ಚುವರಿ ಹಣ ನೀಡುತ್ತವೆ; ಕಬ್ಬಿನ ಬಾಕಿ ಹಣ ಪಾವತಿ ಮಾಡುವ ಹೊಣೆಯನ್ನು ಹೊತ್ತುಕೊಳ್ಳಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಸರ್ಕಾರದ ನಿರ್ಧಾರವನ್ನು ಪ್ರಮುಖ ರಾಜಕೀಯ ಪಕ್ಷಗಳೆಲ್ಲ ಸ್ವಾಗತಿಸಿದುವು (21.11.09) ಸಂಸತ್‌ನ ಉಭಯ ಸದನಗಳ ಕಲಾಪಗಳನ್ನು ಸುಗ್ರೀವಾಜ್ಞೆಯ ಸಂಬಂಧದ ಗೊಂದಲಗಳು ನುಂಗಿ ಹಾಕಿದ್ದುವು. ಬೆಳೆಗಾರರ ಹೋರಾಟಕ್ಕೆ ಸಂಸದರು, ಬೆಂಬಲ ಸೂಚಿಸಿದ ಕಾರಣ ಸಮಸ್ಯೆಯ ಗಹನತೆಯನ್ನು ಅರಿತು ತಿದ್ದುಪಡಿಗೆ ಒಪ್ಪುವ ಮೂಲಕ, ಸರ್ಕಾರ ರೈತರ ಬೇಡಿಕೆಯನ್ನು ಮಾನಿಸಿದಂತಾಗಿತ್ತು.

ಇಂಥದೇ ಒಂದು ಸಂದರ್ಭ ಹತ್ತು ಸಾವಿರ ಮೆಗಾವಾಟನ್ ದಾದ್ರಿ ಅನಿಲ ಆಧಾರಿತ ವಿದ್ಯುತ್ ಸ್ಥಾವರ ಸ್ಥಾಪನೆಗೆ ಅನಿಲ್ ಅಂಬಾನಿ ನೇತೃತ್ವದ RNRL ಭೂಸ್ವಾಧೀನ ಪ್ರಕ್ರಿಯೆಗೆ ರೈತರು ಉತ್ತರ ಪ್ರದೇಶದ ದಾದ್ರಿಯಲ್ಲಿ 'ಸಹಯೋಗ ಸೊಸೈಟಿ'ಯೊಡನೆ ಕೂಡಿ ತೀವ್ರ ಪ್ರತಿಭಟನೆ ತೋರಿದ್ದರು. ಕಾರಣ ಸ್ವಾಧೀನ ಪಡಿಸಿಕೊಂಡ ಭೂಮಿಗೆ ಅತಿಕಡಿಮೆ ಪರಿಹಾರ ನೀಡುವುದಾಗಿತ್ತು. ರೈತರಿಗೆ ಆದಾಯದ ಮೂಲವಾಗಿದ್ದ ಭೂಮಿಯ ಸ್ವಾಧೀನ ಪ್ರಕ್ರಿಯೆಯನ್ನು ಸ್ಥಗಿತಗೊಳಿಸಲು ಅಲಹಾಬಾದ್ ಹೈಕೋರ್ಟ್ ಆದೇಶವಾಯಿತು. ಇದು ರೈತರಿಗೆ ದಕ್ಕಿದ ಗೆಲುವಾಗಿತ್ತು. (5.12.09)

**ಚಾಮರಾಜನಗರ, ದಾವಣಗೆರೆ ರೈತರ ಪ್ರತಿಭಟನೆ ಮತ್ತು ಬೇಡಿಕೆಗಳು :** ಚಾಮರಾಜನಗರದಲ್ಲಿ ರೈತ ಸಂಘ ಮತ್ತು ಹಸಿರು ಸೇನೆಯ ಕಾರ್ಯಕರ್ತರು, 24ಗಂಟೆಗಳ ತ್ರಿಫೇಸ್ ವಿದ್ಯುತ್ ಪೂರೈಕೆ, ಕೃಷಿಗೆ ಉಚಿತ ವಿದ್ಯುತ್ ನೀಡಿದೆ, ಕೃಷಿ ಅಭಿವೃದ್ಧಿಗೆ ಪ್ರತ್ಯೇಕ ಬಡ್ಜೆಟ್ ಮಾಡಬೇಕು ಎಂಬ ಬೇಡಿಕೆ ಇಟ್ಟು ಜಿಲ್ಲಾ ಆಡಳಿತ ಭವನದ ಮುಂದೆ 1.12.2009ರಿಂದ 5 ದಿನಗಳ ಕಾಲ ಶಾಂತಿಯುತ ಧರಣಿ ಸತ್ಯಾಗ್ರಹ ನಡೆಸುತ್ತಿದ್ದರು. ಸರ್ಕಾರದ ಗಮನ ಸೆಳೆಯುವ ಸಲುವಾಗಿ 9.12.09ನೇ ಬುಧವಾರ ಎತ್ತಿನಗಾಡಿ ಮೆರವಣಿಗೆ, ಗುರುವಾರ ಪೊರಕೆ ಚಳವಳಿಯನ್ನು ಮಾಡಿದ್ದರು.

ದಾವಣಗೆರೆ ದೊಡ್ಡ ಬಾತಿಯಲ್ಲೂ ಭೂಸ್ವಾಧೀನ ಕೈಬಿಡುವಂತೆ ರೈತರು ಒತ್ತಾಯಿಸಿ ಪ್ರತಿಭಟನೆ ಮಾಡುತ್ತಿದ್ದರು. ಎರಡೂ ಸಂದರ್ಭಗಳಲ್ಲಿ ಪೋಲೀಸರು 11.12.09ನೇ ಶುಕ್ರವಾರ ರೈತರ ಮೇಲೆ ಲಾಠಿಪ್ರಹಾರ ಮಾಡಲಾಗಿ ಅನೇಕ ರೈತರು ಗಾಯಗೊಂಡರು. ಅಂತಾಗಿ ಚಾಮರಾಜನಗರದ ಸರ್ಕಾರಿ ಆಸ್ಪತ್ರೆಯಲ್ಲಿ ಒಳರೋಗಿಗಳಾಗಿ ಚಿಕಿತ್ಸೆ ಪಡೆಯಬೇಕಾಯಿತು. ಕೆಲವು ರೈತ ಮಹಿಳೆಯರಿಗೂ ಪೆಟ್ಟುಗಳು ಬಿದ್ದು ಗಾಯಗಳಾದವು. ದಾವಣಗೆರೆಯಲ್ಲಿ ನಡೆದ ಲಾಠಿಪ್ರಹಾರದಲ್ಲಿ ಕೆಲವಾರು ರೈತರು ಮತ್ತು ರೈತ ಮಹಿಳೆಯರಿಗೂ ಗಾಯಗಳಾಗಿದ್ದುವು. ಚಾಮರಾಜನಗರದಲ್ಲಿ 12.12.2009ನೇ ಶನಿವಾರದಂದು ಬಂದ್‌ಗೆ ಕರೆ ನೀಡಲಾಯಿತು. ಚಾಮರಾಜನಗರ ಪ್ರವಾಸಿ ಮಂದಿರದಿಂದ ಟ್ರಾಕ್ಟರ್‌ಗಳನ್ನು ಮೆರವಣಿಗೆ ಹೊರಟು ಜಿಲ್ಲಾ ಆಡಳಿತ ಭವನದ ಮುಖ್ಯದ್ವಾರದವರೆಗೆ ಬಂದಾಗ ಮೆರವಣಿಗೆಯನ್ನು ತಡೆಯಲಾಯಿತು. ರೈತರು ರಸ್ತೆಯಲ್ಲಿಯೇ ಧರಣಿ ಕುಳಿತರು. ಟ್ರಾಕ್ಟರ್‌ಗಳನ್ನು ತೆರವುಗೊಳಿಸಲು ರೈತರು ಒಪ್ಪಲಿಲ್ಲ. ಪೋಲೀಸರು ಅವನ್ನು

ಜಪ್ತಿಮಾಡಲು ಮುಂದಾದರು. ರೈತರು ಪ್ರತಿರೋಧಿಸಿದರು. ಪೋಲೀಸರು ಮತ್ತು ರೈತರ ನಡುವೆ ಮಾತಿನ ಚಕಮಕಿ ನಡೆಯಿತು. ಪರಿಸ್ಥಿತಿ ವಿಕೋಪಕ್ಕೆ ಹೋಗಲು ಪೋಲೀಸರು ಲಾಠಿ ಚಾರ್ಜ್ ಮಾಡಿದರು. ಪ್ರತಿಭಟನಾ ನಿರತ ನೂರಾರು ರೈತರನ್ನು ಬಂಧಿಸಿದರು. ಪ್ರತಿಭಟನೆ ನಿಲ್ಲಲಿಲ್ಲ.

ರೈತರ ಮೇಲೆ ಶುಕ್ರವಾರ ಪೋಲೀಸರು ಮಾಡಿದ ಲಾಠಿ ಪ್ರಹಾರವನ್ನು ಖಂಡಿಸಿ ಚಾಮರಾಜನಗರ ಬಂದ್‌ಗೆ ಕನ್ನಡ ಸಂಘಟನೆಗಳ ಒಕ್ಕೂಟ, ವರ್ತಕರ ಸಂಘ, ಚಲನಚಿತ್ರ ಮಾಲೀಕರ ಸಂಘ, ಚಿತ್ರಪ್ರದರ್ಶಕರ ಸಂಘ, ಕರ್ನಾತಕ ರಕ್ಷಣಾವೇದಿಕೆ ಕೂಡಿದಂತೆ ವಿವಿಧ ಸಂಘಟನೆಗಳು ಕರೆ ನೀಡಿದ್ದುವು. ನಿಷೇಧಾಜ್ಞೆಯನ್ನು ನಗರದಾದ್ಯಂತ ಪೋಲೀಸರು ಜಾರಿಗೊಳಿಸಿದ್ದರು. ಆದರೂ ಪ್ರತಿಭಟನೆಯಲ್ಲಿ ಪಾಲ್ಗೊಳ್ಳಲು ಹಳ್ಳಿಗಳಿಂದ ರೈತರು ಬರುತ್ತಿದ್ದರು. ಜಿಲ್ಲಾರೈತ ಸಂಘದ ಉಪಾಧ್ಯಕ್ಷ ಅಣಗಳಿ ಬಸವರಾಜು ನೇತೃತ್ವದಲ್ಲಿ ಕೊಳ್ಳೆಗಾಲದಿಂದ ಬರುತ್ತಿದ್ದ 30ಕ್ಕೂ ಹೆಚ್ಚು ಮಂದಿ ರೈತರನ್ನು, ಗುಂಡ್ಲುಪೇಟೆ ಕಡೆಯಿಂದ ಆಟೋದಲ್ಲಿ ಬರುತ್ತಿದ್ದ 20ಕ್ಕೂ ಹೆಚ್ಚು ಮಂದಿ ರೈತರನ್ನು, ಬಂಧಿಸಲಾಯಿತು. ಮಧ್ಯಾಹ್ನದ ವೇಳೆಗೆ ರೈತ ಸಂಘ ಹಾಗೂ ಹಸಿರು ಸೇನೆಯ ಹೋರಾಟದ ಆರ್ಭಟಕ್ಕೆ ಮಣಿದು ಬಂಧಿತ ರೈತರನ್ನು ಪೋಲೀಸರು ಬಿಡುಗಡೆ ಮಾಡಿದರು.

ಚಾಮರಾಜನಗರ ಶಾಸಕ ಶ್ರೀ ಪುಟ್ಟರಂಗಶೆಟ್ಟಿ, ಜಿಲ್ಲಾ ಪಂಚಾಯಿತ್ ಸದಸ್ಯ ಶ್ರೀ ಶಿವಕುಮಾರ್ ರೈತರಿಗೆ ಬೆಂಬಲ ವ್ಯಕ್ತಪಡಿಸಿ ಅವರೊಡನೆ ಸೇರಿಕೊಂಡರು. ಪ್ರವಾಸಿ ಮಂದಿರಕ್ಕೆ ಸಾಗಿ ಅಲ್ಲಿ ಕಬ್ಬು ಬೆಳೆಗಾರರ ಸಂಘದ ರಾಜ್ಯಾಧ್ಯಕ್ಷ ಕುರುಬೂರು ಶಾಂತಕುಮಾರ್ ಮತ್ತು ಇತರ ರೈತರು ಸಭೆ ಆರಂಭಿಸಿದರು. ರಾಜ್ಯ ರೈತ ಸಂಘದ ನಾಯಕ ಕೆ.ಎಸ್. ಪುಟ್ಟಣ್ಣಯ್ಯ, ಕೋಡಿಹಳ್ಳಿ ಚಂದ್ರಶೇಖರ್, ಪಚ್ಚೆ ನಂಜುಂಡಸ್ವಾಮಿ, ಬಡಗಲಪುರ ನಾಗೇಂದ್ರ ಮುಂತಾದವರು ಸಹಸ್ರಾರು ರೈತರೊಡನೆ ಸಭೆಗೆ ಸೇರಿದರು. ರೈತರು ಐದು ನಿರ್ಣಯಗಳನ್ನು ಕೈಗೊಂಡರು. ಅವುಗಳಲ್ಲಿ ಅಧಿಕಾರಿಗಳ ಮೇಲೆ ಕ್ರಮ, ಬಂಧಿತರನ್ನು ಬೇಷರತ್ ಬಿಡುಗಡೆ ಮಾಡುವುದು ಹಾಗೂ ಮೊಕದ್ದಮೆ ಹೂಡದಿರುವುದು, ವಶಪಡಿಸಿಕೊಂಡ ಟ್ರಾಕ್ಟರ್‌ಗಳನ್ನು ಹಿಂದಿರುಗಿಸುವುದು ಇವೆಲ್ಲ ಆಗಬೇಕು. ಇದಕ್ಕೆ ಸರ್ಕಾರ 14.12.09ನೇ ಸೋಮವಾರದೊಳಗೆ ಸ್ಪಂದಿಸದಿದ್ದರೆ ರಾಜ್ಯಾದ್ಯಂತ ಚಳವಳಿಯನ್ನು ತೀವ್ರಗೊಳಿಸುವ ಬಗ್ಗೆ ರೈತ ಮುಂಖಡರು ನಿರ್ಣಯ ಮಾಡಿದರು. ಡಿಸೆಂಬರ್ 21, 2009 ರಂದು ರಾಜ್ಯ ಬಂದ್‌ಗೆ ಕರೆ ನೀಡಿ 29.12.09ರಂದು ರೈತರ ಬೃಹತ್

ಸಮಾವೇಶವನ್ನು ನಡೆಸುವ ಬಗ್ಗೆ ಕೆ.ಎಸ್. ಪುಟ್ಟಣ್ಣಯ್ಯ ಮತ್ತು ಕೋಡಿಹಳ್ಳಿ ಚಂದ್ರಶೇಖರ್ ಸಮಾಲೋಚಿಸುವುದಾಗಿ ತಿಳಿಸಿದರು. ರೈತರು ಪ್ರತಿಭಟನೆಯ ನಂತರ ಶಾಂತಿಯುತವಾಗಿ ತೆರಳಲು ಮನವಿ ಮಾಡಿದರು. ಚಾಮರಾಜನಗರ ಬಂದ್ ಅಂತು ಭಾಗಶಃ ಯಶಸ್ವಿಯಾಗಿತ್ತು. ದಾವಣಗೆರೆ ಸಂದರ್ಭದಲ್ಲಿ ಭೂಸ್ವಾಧೀನ ಪ್ರಕ್ರಿಯೆ ಕುರಿತಂತೆ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆದ 'ದೂಡಾ' ಮತ್ತು ರೈತರ ಸಭೆ ವಿಫಲವಾಗಿ, ರೈತರ ಆಕ್ರೋಶ ಹೆಚ್ಚಲಾಗಿ ಲಘು ಲಾಠಿ ಪ್ರಹಾರ ನಡೆಯಿತು. ಎಸ್ಪಿ ಅವರು ಸ್ಥಳಕ್ಕೆ ಬಂದು ಪರಿಸ್ಥಿತಿಯನ್ನು ತಿಳಿಗೊಳಿಸಿದ್ದುಂಟು (12.12.2009). ಕೃಷಿ ಮತ್ತು ಜಿಲ್ಲಾ ಉಸ್ತುವಾರಿ ಸಚಿವ ರವೀಂದ್ರನಾಥ ಅವರು, ರೈತರ ಮೇಲೆ ಲಾಠಿ ಪ್ರಹಾರ ಅಗತ್ಯವಿರಲಿಲ್ಲ; ಹಾಗೆಯೇ ರೈತರ ಹಟವೂ ಅಗಬಾರದಿತ್ತು. ಎಂಬ ಅಭಿಪ್ರಾಯವನ್ನು ವ್ಯಕ್ತಮಾಡಿದ್ದುಂಟು, ಇವೆಲ್ಲದರ ಫಲಿತವಾಗಿ ದಾವಣಗೆರೆ ಮತ್ತು ಚಾಮರಾಜನಗರದಲ್ಲಿ ರೈತ ಪ್ರತಿಭಟನೆಯ ಸಂದರ್ಭದಲ್ಲಿ ಬಂಧಿತರಾಗಿದ್ದ ರೈತರನ್ನೆಲ್ಲ ಬಿಡುಗಡೆ ಮಾಡಲು ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪನವರು ಆದೇಶಿಸಿದರು. ರೈತರ ವಿರುದ್ಧ ದಾಖಲಿಸಿದ್ದ ಮೊಕದ್ದಮೆಗಳನ್ನು ಹಿಂದಕ್ಕೆ ಪಡೆಯಲು ನಿರ್ಧಾರವೂ ಆಯಿತು. ಘಟನೆ ಕುರಿತು ವಿಭಾಗೀಯ ಆಯುಕ್ತರಿಂದ ತನಿಖೆ ನಡೆಸಲು ಸರ್ಕಾರ ತೀರ್ಮಾನಿಸಿತು (13.12.09)

**ಅಕ್ರಮಗಣಿಗಾರಿಕೆ : ಸಿ.ಬಿ.ಐ ತನಿಖೆಗೆ ಆಗ್ರಹ :** ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ ಕಾರ್ಯಕರ್ತರು ಅಕ್ರಮ ಗಣಿಗಾರಿಕೆ ಕುರಿತಂತೆ ಲೋಕಾಯುಕ್ತರ ವರದಿಯನ್ನು ಪರಿಗಣಿಸಿ ಸಿಬಿಐ ತನಿಖೆ ನಡೆಸಬೇಕು ಎಂದು ಆಗ್ರಹಿಸಿ 11.12.09ನೇ ಶುಕ್ರವಾರ ಪ್ರತಿಭಟನೆ ಮಾಡಿದರು. ಪ್ರತಿಭಟನೆಯ ಸಂದರ್ಭದಲ್ಲಿ ಸಂಘದ ಅಧ್ಯಕ್ಷ ಕೆ.ಎಸ್. ಪುಟ್ಟಣ್ಣಯ್ಯ ಅವರು ರಾಜ್ಯದಲ್ಲಿ ನಿರಂತರವಾಗಿ ನಡೆಯುತ್ತಿರುವ ಅಕ್ರಮ ಗಣಿಗಾರಿಕೆಯನ್ನು ಕೂಡಲೇ ನಿಲ್ಲಿಸಬೇಕು ಎಂದು ನುಡಿದರು. ಪ್ರತಿಭಟನೆಯ ನಂತರ ರಾಜ್ಯಪಾಲರಿಗೆ ಮನವಿ ಸಲ್ಲಿಸಿದರು. ತನಿಖೆ ಪಾರದರ್ಶಕವಾಗಿ ನಡೆಯಬೇಕು ಎಂದು ಆಗ್ರಹಿಸಿದರು.

**ಬೆಂಗಳೂರಿಗೆ ರೈತ ಸ್ವಾಭಿಮಾನ ಪಾದಯಾತ್ರೆ :** ಚಾಮರಾಜನಗರದ ಜಿಲ್ಲಾಡಳಿತ ಭವನದ ಬಳಿ ಸ್ವಾಭಿಮಾನದ ಹಕ್ಕುಗಳನ್ನು ಗಳಿಸಲು, ರೈತರು ಪೋಲೀಸ್ ದೌರ್ಜನ್ಯವನ್ನು ಖಂಡಿಸಿ 12 ದಿನಗಳ ಕಾಲ ನಡೆಸಿದರು. ರಾಜ್ಯ ರೈತರ ಸಂಘ ಮತ್ತು ಹಸಿರು ಸೇನೆಯ ನೂರಾರು ಕಾರ್ಯಕರ್ತರು ಈ ಜಿಲ್ಲಾಡಳಿತ ಭವನದಿಂದ 19.12.2009ನೇ ಶನಿವಾರದಂದು ವಿಧಾನ ಸೌಧದ ವರೆಗೆ ಆರಂಭಿಸಿದ

ರೈತ ಸ್ವಾಭಿಮಾನ ಯಾತ್ರೆಗೆ ರೈತ ಸಂಘದ ಅಧ್ಯಕ್ಷ ಕೆ.ಎಸ್.ಪುಟ್ಟಣ್ಣಯ್ಯ ಕಾರ್ಯಾಧ್ಯಕ್ಷ ಕೋಡಿಹಳ್ಳಿ ಚಂದ್ರಶೇಖರ್ ಚಾಲನೆ ನೀಡಿದರು. ರೈತ ಮುಖಂಡರೊಡನೆ ತಾಲೂಕಿನ ಹೊಂಡರಬಾಳು ಗ್ರಾಮದ ಸನಿಹದ ಅಮೃತ ಭೂಮಿಯಲ್ಲಿ ದಿ॥ ರೈತ ಬೌದ್ಧಿಕ ನಾಯಕ ಪ್ರೊ॥ ಎಂ.ಡಿ. ನಂಜುಂಡಸ್ವಾಮಿ ಅವರ ಸಮಾಧಿಗೆ ಗೌರವ ಸಲ್ಲಿಸಿ ಬಂದು ಕೊಂಬು ಕಹಳೆ ಊದಿ ತಮಟೆ ಬಡಿದು ಘೋಷಣೆಗಳೊಡನೆ ಪಾದಯಾತ್ರೆ ಆರಂಭಿಸಿದರು. ರೈತರಾದ ನಾವು ನಮ್ಮ ಸ್ವಾಭಿಮಾನದ ಬದುಕನ್ನು ರೂಪಿಸಿಕೊಳ್ಳಲು ಸರ್ಕಾರದ ಮುಂದೆ ಹೋಗುತ್ತಿದ್ದೇವೆ. ಅಧಿಕಾರಿಗಳು ರೈತರ ಮೇಲೆ ದರ್ಬಾರು ಮಾಡುವುದರ ವಿರುದ್ಧ ನಮ್ಮ ಹೋರಾಟವಿದೆ. ಮಣ್ಣಿನ ಮಕ್ಕಳಾದ ನಮಗೆ ದುಡಿಯುವುದು. ನಾಡಿಗೆ ತುತ್ತುಕೊಡುವುದು ಮಾತ್ರ ಗೊತ್ತು. ಇಂತಲ್ಲಿ ರೈತರಾದ ನಮ್ಮ ಮೇಲೆ ಲಾಠಿ ಪ್ರಹಾರ, ಬಂಧನ ಸರಿಅಲ್ಲ ಎಂಬ ಎಚ್ಚರಿಕೆಯನ್ನು ಸರ್ಕಾರಕ್ಕೆ ನೀಡುವ ಉದ್ದೇಶ ಮೇಲೆ ಲಾಠಿಪ್ರಹಾರ, ಬಂಧನ ಸರಿಅಲ್ಲ ಎಂಬ ಎಚ್ಚರಿಕೆಯನ್ನು ಸರ್ಕಾರವು ನೀಡುವ ಉದ್ದೇಶದಿಂದ ಈ ರೈತ ಸ್ವಾಭಿಮಾನದ ಪಾದಯಾತ್ರೆ ಎಂಬುದು ರೈತ ನಾಯಕರ ಮಾತುಗಳಲ್ಲಿ ಪ್ರತಿಧ್ವನಿಸಿತ್ತು. ಕೇಂದ್ರ ಸರ್ಕಾರವು ಪ್ರತ್ಯೇಕ ಕೃಷಿ ಆಯೋಗವನ್ನು ರಚಿಸಬೇಕು ರೈತರ ದುಡಿಮೆಗೆ ತಕ್ಕ ಪ್ರತಿಫಲ ಸಿಗಬೇಕು ಎಂಬ ದಿಟ್ಟ ಆಶಯ ಅವಗ ಮಾತುಗಳಲ್ಲಿತ್ತು. ಚಾಮರಾಜನಗರದಿಂದ 19.12.2009ರಂದು ಹೊರಟ ಪಾದಯಾತ್ರೆ 26.12.2009ರಂದು ಬೆಂಗಳೂರನ್ನು ರಾಮಸಮುದ್ರ ಬೂದಿತಿಟ್ಟು, ಆಲೂರು, ಹೊಮ್ಮ, ಕುಂತೂರು ಮಾರ್ಗವಾಗಿ ತಲುಪುವ ಗುರಿ ಹೊಂದಿತ್ತು (20.12.2009)

ಚಾಮರಾಜನಗರದಿಂದ ಬೆಂಗಳೂರಿನತ್ತ ಪಾದಯಾತ್ರೆ ಬರುತ್ತಿದ್ದ ರೈತರನ್ನು ನಗರ ಹೊರವಲಯ ಬಿಡದಿಯ ಕೆಂಚನ ಕುಪ್ಪೆಯಲ್ಲಿ 23.12.2009ನೇ ಬುಧವಾರ ರಾತ್ರಿ ಬಸ್ಸಿನಲ್ಲಿ ಬಂದ ಮುಖ್ಯಮಂತ್ರಿ ಯಡಿಯೂರಪ್ಪ ಮತ್ತು ಸಚಿವರು ಭೇಟಿ ಮಾಡಿದರು. ರೈತ ಮುಖಂಡರು, ಸಂಘಸಂಸ್ಥೆಗಳ ಪ್ರತಿನಿಧಿಗಳೊಂದಿಗೆ ಸಮಾಲೋಚನೆ ನಡೆಸಿದ, ಮುಖ್ಯಮಂತ್ರಿಗಳು ರೈತರ ಬೇಡಿಕೆಗಳನ್ನು ಈಡೇರಿಸುವ ಭರವಸೆ ನೀಡಿ ಮನವೊಲಿಸಿ ತಮ್ಮ ಮುತ್ಸದ್ದಿತನವನ್ನು ತೋರಿದರು. ವಿಧಾನ ಸಭೆಯ ಅಧಿವೇಶನದಲ್ಲಿ ರೈತರಿಗೆ ಕೊಟ್ಟಿರುವ ಭರವಸೆಗಳನ್ನು ಅನುಷ್ಠಾನಕ್ಕೆ ತರುವ ಅಧಿಕೃತ ಹೇಳಿಕೆ ಪ್ರಕಟಿಸಿದ ಹಿನ್ನೆಲೆಯಲ್ಲಿ 5 ದಿನಗಳ ಕಾಲ ರೈತರು ನಡೆಸಿದ ನಿರಂತರ ಪಾದಯಾತ್ರೆಯನ್ನು ಅಂತ್ಯಗೊಳಿಸಿ ಬಿಡದಿಯಿಂದ ಬಸ್‌ಗಳಲ್ಲಿ ತಮ್ಮೂರುಗಳಿಗೆ ಹೊರಟರು. ಪರಿಹಾರ ಸೂತ್ರಗಳು ಇಂತಿದ್ದುವು : ವಿದ್ಯುತ್

ಸಮಸ್ಯೆಯ ಪರಿಹಾರಕ್ಕೆ ಕ್ರಮ; ರೈತ ಚಳವಳಿಯ ಸಂಬಂಧದ ಎಲ್ಲ ದಾವೆಗಳ ವಾಪಸ್; ಯಾವುದೇ ಸಂದರ್ಭದಲ್ಲಿ ರೈತ ಕೆಲಸ ಮಾಡುವಾಗ ಹಾಗೂ ಕಾಡು ಪ್ರಾಣಿಯ ಹಾವಳಿಗೀಡಾಗಿ ಆಕಸ್ಮಿಕವಾಗಿ ಮೃತಪಟ್ಟರೆ ಒಂದು ಲಕ್ಷರೂ. ಪರಿಹಾರ; ರೈತ ಮಹಿಳೆಗೆ ಹೆರಿಗೆ ವೇಳೆ ಉಚಿತ ಚಿಕಿತ್ಸೆ; ಜಾತಿ ಪ್ರಮಾಣ ಪತ್ರವನ್ನು ಒಂದೇ ಸಾರಿಗೆ ವಿತರಣೆ, ನೀರಾ ನೀತಿ ನಿರೂಪಣೆ; ಎಪಿಎಂಸಿಯಲ್ಲಿ ರೈತರಿಗೆ ಕನಿಷ್ಠ ಬೆಂಬಲ ಬೆಲೆ; **ರೈತ ದಿನಾಚರಣೆ ಘೋಷಣೆ** ಗ್ರಾಮೀಣ ವಿದ್ಯಾರ್ಥಿಗಳ ಕ್ರೀಡಾ ಸಾಮರ್ಥ್ಯಕ್ಕೆ ಅಂಕ ನೀಡಿಕೆ; ತೆಂಗು ಬೆಳೆಗಾರರ ರಕ್ಷಣೆ; ಚಾಮರಾಜನಗರ ದಾವಣಗೆರೆ ಘಟನೆ ಸಂಬಂಧ (26.12.2009)ರಂದು ರೈತ ನಾಯಕರೊಂದಿಗೆ ಸಭೆ; ಹಣಕಾಸಿನ ಇತಿಮಿತಿಯಲ್ಲಿ ರೈತ ಸಮುದಾಯಕ್ಕೆ ನ್ಯಾಯ ಒದಗಿಸುವಿಕೆ ಇತ್ಯಾದಿ 12 ಅಂಶದ ಪರಿಹಾರ ಸೂತ್ರವನ್ನು ವಿಧಾನಮಂಡಲ ಅಧಿವೇಶನದಲ್ಲಿ ಘೋಷಿಸುವುದಾಗಿ ಮುಖ್ಯಮಂತ್ರಿಗಳು ತಿಳಿಸಿದರು. ವಿಧಾನಸಭೆಯಲ್ಲಿ ಪ್ರತಿಪಕ್ಷಗಳು ಈ ವಿಷಯದ ಬಗ್ಗೆಯೆ ಸರಕಾರದೊಡನೆ ಮುಖಾಮುಖಿಯಾಗಿದ್ದುವು. ಸರ್ಕಾರದ ಉತ್ತರವನ್ನು ಈ ಬಗೆಗೆ ಒಪ್ಪದೆ ಸಭಾತ್ಯಾಗ ಮಾಡಿದ್ದುವು. (ವಿವರ ಮುಂದಿದೆ). ಸದ್ಯ ಮುಖ್ಯಮಂತ್ರಿಗಳು ರೈತರಿಗೆ ಈ ಬಗೆಗೆಲ್ಲ ಭರವಸೆ ನೀಡಿ ರೈತರ ಮನವೊಲಿಸಿದರು. ಇದೊಂದು ರೀತಿ ಹೋರಾಟ ಮತ್ತು ಸಾಂತ್ವನಗಳ ನಡುವಣ ಸೇತುವಿನಂತಿತ್ತು. 23.12.09ನೇ ಬುಧವಾರ ವಿಧಾನಮಂಡಲದಲ್ಲಿ ಚಾಮರಾಜನಗರ ಮತ್ತು ದಾವಣಗೆರೆಯಲ್ಲಿ ನಡೆದ ಲಾಠಿ ಪ್ರಹಾರ ಪ್ರಕರಣದ ತೀವ್ರವಾಗಿ ಪ್ರಸ್ತಾಪಗೊಂಡಿತ್ತು. ಅನಂತರ ಸರ್ಕಾರ ರೈತರ ಮೇಲೆ ದಾಖಲಿಸಿರುವ ದಾವೆಗಳನ್ನು ಹಿಂದಕ್ಕೆ ಪಡೆಯುವ ಬಗ್ಗೆ ಘೋಷಿಸಿತು. ರೈತರ ಪ್ರತಿಭಟನೆ, ಚಳವಳಿ ಸಂದರ್ಭಗಳಲ್ಲಿ ಪೋಲೀಸರು ವಹಿಸಬೇಕಾದ ಸಂಯಮ ವರ್ತನೆಯ ಬಗ್ಗೆ ಕಟ್ಟುನಿಟ್ಟಿನ ಆದೇಶ, ಪಾದಯಾತ್ರೆಯ ರೈತರೊಡನೆ ಮಾತುಕತೆ, ವಿದ್ಯುತ್ ಅನ್ನು ದಿನದಲ್ಲಿ ಹೆಚ್ಚು ಸಮಯ ನೀಡುವಿಕೆ, ಕೃಷ್ಯುತ್ಪನ್ನಗಳಿಗೆ ವೈಜ್ಞಾನಿಕ ಬೆಲೆ ನಿಗದಿ ಕುರಿತು ರೈತರೊಡನೆ ಸಮಾಲೋಚನೆ ಮಾಡುವ ಬಗ್ಗೆ ಮುಖ್ಯಮಂತ್ರಿಗಳು ತಿಳಿಸಿದರು. ದಾವಣಗೆರೆ ಭೂಸ್ವಾಧೀನ ಪ್ರಕ್ರಿಯೆಯನ್ನು ಕೈಬಿಡದೆ ಬಡವರಿಗೆ ನಿವೇಶನ ಹಂಚಿಕೆ ಮಾಡುವ ಉದ್ದೇಶದಿಂದ ಹಿಂದೆ ಸರಿಯುವುದಿಲ್ಲ. ರೈತರ ಮನವೊಲಿಸಿ ಉತ್ತಮ ಪರಿಹಾರ ನೀಡಿ ಸಾಧ್ಯವಾದರೆ ಭೂಮಾಲೀಕರಿಗೆ ಅಭಿವೃದ್ಧಿ ಪಡಿಸಿದ ಬಡಾವಣೆಯಲ್ಲಿ ನಿವೇಶನ ಕೊಡಲು ಕ್ರಮ ಕೈಗೊಳ್ಳಲಾಗುವುದು ಎಂದೆಲ್ಲ ಹೇಳಿದರು. ಪ್ರತಿಪಕ್ಷದ ಮುಖಂಡರು ಈ ಭರವಸೆಗಳನ್ನು ಒಪ್ಪದೆ ಪ್ರತಿಪಕ್ಷ ನಾಯಕ ಸಿದ್ಧರಾಮಯ್ಯನವರ ನೇತೃತ್ವದಲ್ಲಿ ಸಭಾತ್ಯಾಗ ಮಾಡಿದರು (24.12.09)

**ವಿಧಾನಸೌಧಕ್ಕೆ ನೆರೆ ಸಂತ್ರಸ್ತ ರೈತರ ಮುತ್ತಿಗೆ :** ಗದಗ, ಧಾರವಾಡ, ಬಾಗಲಕೋಟೆ ಹಾಗೂ ಹಾವೇರಿ ಜಿಲ್ಲೆಯ ಸಾವಿರಾರು ಸಂತ್ರಸ್ತ ರೈತರು ಬೆಂಗಳೂರು ಫ್ರೀಡಂ ಪಾರ್ಕಿನಲ್ಲಿ (29.12.09)ನೇ ಮಂಗಳವಾರ ಬೆಳಗ್ಗೆ ಸಭೆಸೇರಿ ನೆರೆ ಪರಿಹಾರವನ್ನು ಸರ್ಕಾರ ಸಕಾಲದಲ್ಲಿ ನೀಡಿಲ್ಲ ಎಂದು ಆಕ್ಷೇಪಿಸಿದರು. ನಂತರ ಅಲ್ಲಿಂದ ಸಹಸ್ರಾರು ಸಂತ್ರಸ್ತ ರೈತರು ಪ್ರತಿಪಕ್ಷದ ನಾಯಕ ಸಿದ್ಧರಾಮಯ್ಯ, ಆರ್.ವಿ.ದೇಶಪಾಂಡೆ, ಎಚ್.ಕೆ.ಪಾಟೀಲ್, ಡಿ.ಕೆ. ಶಿವಕುಮಾರ್, ಬಿ.ಸಿ. ಪಾಟೀಲ್, ವಿ.ಎಸ್. ಉಗ್ರಪ್ಪ, ರಾಮಲಿಂಗಾರೆಡ್ಡಿ ಕೃಷ್ಣ ಬೈರೇಗೌಡ ಇತ್ಯಾದಿ ಮುಖಂಡರ ನೇತೃತ್ವದಲ್ಲಿ ವಿಧಾನಸೌಧದತ್ತ ಪ್ರತಿಭಟನಾ ಘೋಷಣೆಗಳನ್ನು ಕೂಗುತ್ತ ಸಾಗಿದರು. ರೈತ ಪ್ರತಿನಿಧಿಗಳು ಲೋಕಾಯುಕ್ತ ಸಂತೋಷ ಹೆಗ್ಗಡೆ ಅವರಿಗೆ ಸಂತ್ರಸ್ತರ ಪರಿಹಾರ ನೀಡಿಕೆಯಲ್ಲಿರುವ ಲೋಪದೋಷಗಳ ಕುರಿತು ಸರ್ಕಾರ ಸರಿಯಾಗಿ ಸ್ಪಂದಿಸುತ್ತಿಲ್ಲ ಎಂದು ವಿಧಾನಸೌಧದತ್ತ ಹೋಗುವ ಮೊದಲು ಮನವಿ ಪತ್ರವನ್ನು ಸಲ್ಲಿಸಿದರು. ಮುತ್ತಿಗೆ ಹಾಕಿ ಪ್ರತಿಭಟಿಸಲು ಬಂದ ನಾಯಕರು ಹಾಗೂ ರೈತರನ್ನು ಪೋಲೀಸರು ಬಂಧಿಸಿ ಬಿಡುಗಡೆ ಮಾಡಿದರು. ಪ್ರತಿಭಟನೆ ಮಾಡುತ್ತಿದ್ದ ಸ್ಥಳಕ್ಕೆ ಸಚಿವದ್ವಯರಾದ ಬಸವರಾಜ್ ಬೊಮ್ಮಾಯಿ ಮತ್ತು ಉದಾಸಿ ಅವರು ರೈತರ ಮನವಿ ಆಲಿಸಲು ಬಂದಿರುವ ಬಗ್ಗೆ ಹೇಳುವ ವೇಳೆಗೆ ಪ್ರತಿಭಟನಾಕಾರರು ಚದುರಿಹೋಗಿದ್ದರು. ಸಂತ್ರಸ್ತರೈತರು ಸಭೆ ನಡೆಸುತ್ತಿದ್ದ ಜಾಗಕ್ಕೆ ಸಂಬಂಧಿಸಿದ ಮಂತ್ರಿಗಳು ಬಂದು ಅವರ ಸಮಸ್ಯೆಗಳನ್ನು ಆಲಿಸಬೇಕಿತ್ತು ಎಂಬುದು ಆರ್.ವಿ. ದೇಶಪಾಂಡೆಯವರ ಮಾತಾಗಿತ್ತು. ನಾವು ಬರುವ ವೇಳೆಗೆ ಪ್ರತಿಭಟನಕಾರರೇ ಇರಲಿಲ್ಲ, ರೈತ ರೊಡನೆ ಮಾತನಾಡಿ ಆಗಿದೆ ಎಂದು ಸಚಿವ ಬೊಮ್ಮಾಯಿ ನುಡಿದುದಾಗಿತ್ತು. (30.12.2009)

**ಜೈಲಿನಲ್ಲಿ ರೈತರ ಸರದಿ ಉಪವಾಸ ಸತ್ಯಾಗ್ರಹ :** ಭದ್ರಾ ಸಹಕಾರಿ ಕಾರ್ಖಾನೆ ಪುನರಾರಂಭ; ದಾವಣಗೆರೆ ದೊಡ್ಡಬಾತಿ ಸರ್ವೆ ನಂ. 9ರಿಂದ 145ರವರೆಗಿನ 180ಎಕರೆ ಭೂಮಿ ಸ್ವಾಧೀನ ಪ್ರಕ್ರಿಯೆ ಕೈಬಿಡಬೇಕು ಎಂಬ ಬೇಡಿಕೆ ಇಟ್ಟು ರಾಜ್ಯಾದ್ಯಂತ ರೈತರು 25.12.09ರಿಂದ 'ಜೈಲ್ ಭರೋ' ಚಳುವಳಿ ಆರಂಭಿಸಿದರು. ಹೀಗೆ ಚಳವಳಿ ಆರಂಭಿಸಿ ಜೈಲಿಗೆ ಸೇರಿದ ಧಾರವಾಡ, ಬಳ್ಳಾರಿ, ಚಿತ್ರದುರ್ಗ, ದಾವಣಗೆರೆಯ ರೈತರು 28.12.09ನೇ ಸೋಮವಾರದಿಂದ ಜೈಲಿನಲ್ಲಿಯೆ ಸರದಿ ಉಪವಾಸ ಸತ್ಯಾಗ್ರಹವನ್ನು ಮಾಡತೊಡಗಿದರು. ಬೇಡಿಕೆ ಈಡೇರುವವರೆವಿಗೂ ಸತ್ಯಾಗ್ರಹವನ್ನು ನಿಲ್ಲಿಸುವುದಿಲ್ಲ ಎಂಬುದು ರೈತನಾಯಕ ತೇಜಸ್ವಿ ವಿ.ಪಟೇಲ್ ಅವರ ಮಾತಾಗಿತ್ತು. (29.12.09).

ಫಲವತ್ತು ಭೂಸ್ವಾಧೀನ ಪ್ರಕ್ರಿಯೆ ಕೈಬಿಡಬೇಕು ಹಾಗೂ ಭದ್ರಾ ಸಕ್ಕರೆ ಕಾರ್ಖಾನೆ ಪುನರಾರಂಭವಾಗಬೇಕು ಎಂಬ ಬೇಡಿಕೆ ಇಟ್ಟು ಜೈಲ್ ಭರೋ ಚಳವಳಿಯ ಅಂಗವಾಗಿ ಸೆರೆಯಾದ 75ರೈತರ ಪೈಕಿ ಕೆಲವರು ಧಾರವಾಡದ ಕೇಂದ್ರ ಕಾರಾಗೃಹದಲ್ಲಿ ಅಮರಣಾಂತ ಉಪವಾಸದೀಮದ ಅಸ್ವಸ್ಥಗೊಂಡರು. ಎರಡು ದಿನದಲ್ಲಿ ಸಮಸ್ಯೆ ಬಗೆಹರಿಸುವ ಬಗ್ಗೆ ಸರ್ಕಾರ ಭರವಸೆ ಕೊಟ್ಟಿತ್ತು. ಅದು ಈಡೇರದಿದ್ದ ಕಾರಣ ಉಪವಾಸ ಕೈಗೊಂಡವರ ಪೈಕಿ ಅಸ್ವಸ್ಥಗೊಂಡವರನ್ನು ಆಸ್ಪತ್ರೆಗೆ ಒಯ್ಯಲು ಕಾರಾಗೃಹದ ವೈದ್ಯರು ಸೂಚನೆ ನೀಡಿದ್ದರು. ಈ ಅಸ್ವಸ್ಥರು ರಾಜಕೀಯ ಕೈದಿಗಳು ಎಂಬ ಪರಿಜ್ಞಾನವಿಲ್ಲದೆ ಕೈಗೆ ಬೇಡಿ ತೊಡಿಸಿ ಆಸ್ಪತ್ರೆಗೆ ಪೇದೆಗಳ ಮೂಲಕ ಕರದೊಯ್ಯಲು ಪ್ರಯತ್ನಿಸಿದಾಗ ನಾಲ್ವರು ರೈತರು ಪ್ರತಿಭಟಿಸಿದರು. ಅಂತು ಮೂವರು ರೈತರನ್ನು ಹಾಗೆ ಬೇಡಿ ತೊಡಿಸಿ ಕರೆದುಕೊಂಡು ಜಿಲ್ಲಾಸ್ಪತ್ರೆಗೆ ಹೋಗಲಾಯಿತು. ಉಪವಾಸ ಸತ್ಯಾಗ್ರಹವನ್ನು ನಿಲ್ಲಿಸುವಂತೆ ಮನವಿ ಇಟ್ಟ ದಾವಣಗೆರೆ ಜಿಲ್ಲಾಧಿಕಾರಿಗಳನ್ನು ರೈತರ ಘೇರಾವ್ ಮಾಡಿದರು. 18ಜನ ಮಹಿಳೆಯರು ಸೇರಿದಂತೆ 25ಮಂದಿ ರೈತರು ಜೈಲಿನಲಲಿ ಉಪವಾಸ ಆರಂಭಿಸಿದ್ದರು. ಇದು ಸರ್ಕಾರಕ್ಕೆ ನುಂಗಲಾರದ ಬಿಸಿತುಪ್ಪವೆನಿಸಿತ್ತು. 6.1.2010 ಗುರುವಾರದಂದು ರಾಷ್ಟ್ರೀಯ ಹೆದ್ದಾರಿಯ ನೆರೆಗಿರುವ ದಾವಣಗೆರೆ ತಾ. ಹೊನ್ನೂರು ಗೊಲ್ಲರಹಟ್ಟಿ, ಮಲ್ಲಶೆಟ್ಟಿಹಳ್ಳಿಯಲ್ಲಿ ರೈತರ ಬೃಹತ್ ಸಮಾವೇಶ ನಡೆಯಲಿತ್ತು. ರೈತ ಸಂಘವು ಕೃಷಿಭೂಮಿ ಸ್ವಾಧೀನದ ವಿರುದ್ಧ ಎಚ್ಚರಿಕೆ ಫಲಕವನ್ನು ನೆಡುವ ಬಗ್ಗೆ ತಿಳಿಸುತ್ತು (5.1.10). ಭೂಸ್ವಾಧೀನ ವಿರೋಧಿಸಿ ದಾವಣಗೆರೆಯಲ್ಲಿ ಎತ್ತಿನ ಬಂಡಿ ಮೆರವಣಿಗೆ ಮೂಲಕ ರೈತರು 4.1.10ನೇ ಮಂಗಳವಾರದಂದು ಪ್ರತಿಭಟನೆ ಮಾಡಿದರು. ಅಂದು ರೊಟ್ಟಿ ಬುತ್ತಿ ಕಟ್ಟಿಕೊಂಡು ಮನೆಮಂದಿಯ ಜೊತೆಗೆ ಎತ್ತಿನಗಾಡಿಯಲ್ಲಿ ಬಂದು ಗಾಂಧಿವೃತ್ತದಲ್ಲಿ ಬಿಡಾರ ಮಾಡಿದರು. ನಂತರ ಮೆರವಣಿಗೆ ಮಾಡಿದರು. ಚಿತ್ರದುರ್ಗ ಜೈಲಿನಲ್ಲಿಯೂ ರೈತರ ನಿರಶನ ನಡೆದಿತ್ತು. ದಾವಣಗೆರೆ ಬೀರಲಿಂಗೇಶ್ವರ ದೇಗುಲದಲ್ಲಿ 7.1.10ನೇ ಶುಕ್ರವಾರದಂದು, **'ರೈತರ ಭೂಹಕ್ಕು ರಕ್ಷಣಾ ಹೋರಾಟ ದೀಕ್ಷಾ'** ಚಳವಳಿಯನ್ನು ರೈತರು ಹಮ್ಮಿಕೊಳ್ಳಲಾಶಿಸಿದ್ದರು.

ರೈತರ ತೀವ್ರ ಹೋರಾಟದ ಹಿನ್ನೆಲೆಯಲ್ಲಿ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪನವರು ವಸತಿಯೋಜನೆಗೆಂದು ಆಶಿಸಿದ ಭೂಸ್ವಾಧೀನ ಪ್ರಕ್ರಿಯೆಗೆ ತಾತ್ಕಾಲಿಕವಾಗಿ ತಡೆ ನೀಡಿ ರೈತರ ಮನವೊಲಿಸಿದ ನಂತರವೆ ಅದನ್ನು ಪಡೆದುಕೊಳ್ಳಲಾಗುವುದು; ಯಾವ ಕಾರಣಕ್ಕೂ ಬಲಾತ್ಕಾರ ಸ್ವಾಧೀನವಿಲ್ಲ ಎಂದು

ಸುದ್ದಿಗಾರರಿಗೆ ತಿಳಿಸಿದ್ದುಂಟು. ಕೃಷಿ ಸಚಿವ ರವೀಂದ್ರ ನಾಥ್, ಸ್ವಾಧೀನ ಪ್ರಕ್ರಿಯೆಯನ್ನು ವಿರೋಧಿಸಿದವರಲ್ಲಿ ರೈತೇತರರು (ಸಕ್ಕರೆ ಕಾರ್ಖಾನೆ ನೌಕರರು) ಸೇರಿಕೊಂಡಿದ್ದರು. ಹಾಗಾಗಿ ಎಲ್ಲರೂ ರೈತರಲ್ಲ ಎಂದಿದ್ದರು.

ಮುಖ್ಯಮಂತ್ರಿಗಳು ಧಾರವಾಡದಲ್ಲಿ ರೈತರಿಗೆ ಕೈಕೋಳ ತೊಡಿಸಿದ ಪ್ರಕರಣ ಅಕ್ಷಮ್ಯ ಅಪರಾಧ; ತಪ್ಪಿತಸ್ಥರ ವಿರುದ್ಧ ಕ್ರಮ ಕೈಗೊಳ್ಳಲಾಗುವುದು ಎಂದು ತಿಳಿಸಿದರು. ಈ ಬಗ್ಗೆ ತನಿಖೆಗೆ ಮಾನವ ಹಕ್ಕುಗಳ ಆಯೋಗವು ಆದೇಶಿಸಿತು. ರೈತರ ಯಾವುದೇ ಸಮಸ್ಯೆಯನ್ನು ಬಗೆ ಹರಿಸಲು ಸರ್ಕಾರ ಸಿದ್ಧವಿದೆ. ರೈತರು ಈ ಹೋರಾಟವನ್ನು ಕೈಬಿಡಬೇಕೆಂದು ಮುಖ್ಯಮಂತ್ರಿಗಳು ಮನವಿ ಮಾಡಿದರು.

ರೈತಸಂಘದ ಕಾರ್ಯಾಧ್ಯಕ್ಷ ಕೋಡಿಹಳ್ಳಿ ಚಂದ್ರಶೇಖರ್, ದಾವಣಗೆರೆ ಜಿಲ್ಲೆಯಲ್ಲಿ ಸುಮಾರು ಮೂರುಸಾವಿರದ ಎಕರೆ ಕೃಷಿಭೂಮಿ ಸ್ವಾಧೀನ ಪ್ರಕ್ರಿಯೆಯನ್ನು ಕೈಬಿಟ್ಟಿರುವ ಬಗ್ಗೆ ಲಿಖಿತ ಆದೇಶವನ್ನು ಸರ್ಕಾರದ ಮುಖ್ಯಕಾರ್ಯದರ್ಶಿ ಹೊರಡಿಸುವವರಿವಿಗೆ ಚಳವಳಿ ನಿಲ್ಲದು ಎಂದರು. ರೈತರಿಗೆ ಕೈಕೋಳ ತೊಡಿಸಿ ಅವಮಾನಿಸಬಾರದಿತ್ತು. ಎಂದು ಧಾರವಾಡದ ಜೈಲಿನಲ್ಲಿದ್ದ ರೈತರ ಅಂಬೋಣವಾಗಿತ್ತು. ದಾವಣಗೆರೆ ಜಿಲ್ಲಾಧಿಕಾರಿ ಕೆ. ಅಮರ್‌ನಾರಾಯಣ್ ಅವರು ಭೂಸ್ವಾಧೀನ ಪ್ರಕ್ರಿಯೆಯನ್ನು ಕೈಬಿಡಲು ಸರ್ಕಾರಕ್ಕೆ ಪ್ರಸ್ತಾವ ಸಲ್ಲಿಸಿರುವ ಬಗ್ಗೆ ಸುದ್ದಿಗೋಷ್ಠಿಯಲ್ಲಿ ತಿಳಿಸಿದರು. ಧಾರವಾಡ ಜೈಲಿನಲ್ಲಿದ್ದ ದಾವಣಗೆರೆ ರೈತರು ಮುಖ್ಯಮಂತ್ರಿಗಳಿಂದ ಬಂದ ಭರವಸೆಯಿಂದ ಸಮಾಧಾನಗೊಂಡು ಉಪವಾಸ ಬಿಟ್ಟು 6.1.10ರ ರಾತ್ರಿ ನೆಮ್ಮದಿಯಿಂದ ಊಟವನ್ನು ಸೇವಿಸಿದರು.

ಇದಕ್ಕೆಲ್ಲ ಹಿನ್ನೆಲೆಗಳು ಹೀಗಿವೆ : ದಾವಣಗೆರೆ – ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ, ಕರ್ನಾಟಕ ಕೈಗಾರಿಕಾ ಅಭಿವೃದ್ಧಿ ಮಂಡಳಿ, ಕೈಗಾರಿಕಾಭಿವೃದ್ಧಿ ಯೋಜನೆಯ ಹೆಸರಿನಲ್ಲಿ ಕೆಐಎಡಿಬಿ ವಸತಿ ಯೋಜನೆಯೆಂದು ದೂಡಾ, ಭೂಸ್ವಾಧೀನಕ್ಕೆ ಯತ್ನಿಸಿದ್ದುವು. ಇದು ಸುಮಾರು ಮೂರುಸಾವಿರ ಎಕರೆ ಭೂಸ್ವಾಧೀನದ ಮಾತಾಗಿತ್ತು. ಇದರ ವಿರುದ್ಧ ರೈತರ ಹೋರಾಟಗಳೂ ಸಾಗಿ ಬಂದಿದ್ದುವು. 2002ರಲ್ಲಿ ವಸತಿ ಯೋಜನೆಗಾಗಿ ದೊಡ್ಡಬಾತಿ ಗ್ರಾಮಪಂಚಾಯಿತಿ ವ್ಯಾಪ್ತಿಯಲ್ಲಿ ಭೂಸ್ವಾಧೀನ ಪ್ರಕ್ರಿಯೆಯು ಆರಂಭಗೊಂಡಿತು. ಅದಕ್ಕೆ ವಿರುದ್ಧವಾಗಿ 2009ರಲ್ಲಿ ದಾವಣಗೆರೆಯಿಂದ ಬೆಂಗಳೂರು ಚಲೋ ಪಾದಯಾತ್ರೆ; ಕರಿಲಕ್ಕೇನಹಳ್ಳಿ, ಕುರ್ಕಿ, ಹೊನ್ನೂರು, ಗೊಲ್ಲರಹಟ್ಟಿ ರೈತರಿಗೆ ಭೂಸ್ವಾಧೀನದ ಬಗ್ಗೆ ತಿಳುವಳಿಕೆ

ಪತ್ರ ನೀಡಲಾಗಿತ್ತು. ಅದನ್ನು ವಿರೋಧಿಸಿ ವಿಷದ ಬಾಟಲಿಯೊಡನೆ ರೈತರ ಪ್ರತಿರೋಧ; ದೂಡಾ ಅಧ್ಯಕ್ಷರ ಕಾರಿಗೆ ರೈತರ ಮುತ್ತಿಗೆ, ಲಾಠಿಪ್ರಹಾರ, ರೈತರಿಂದ ಸಚಿವ, ಸಂಸದ ದೂಡಾ ಅಧ್ಯಕ್ಷರನ್ನು ಭೂಸ್ವಾಧೀನವನ್ನು ಪ್ರಕ್ರಿಯೆಯನ್ನು ನಿಲ್ಲಿಸಲು, ಆಗ್ರಹಿಸಿ ಅವರ ಪ್ರತಿಕೃತಿ ದಹನ ಇತ್ಯಾದಿಗಳು ನಡೆದುವು. ದೂಡಾ ಕಛೇರಿ ಎದುರು 15.12.2009ರಂದು ಪ್ರತಿಭಟನೆಯನ್ನು ಜಾನುವಾರುಗಳಿಗೆ ಮೇವು ನೀರು ಒದಗಿಸುವಂತೆ ಕೇಳಿ ಮಾಡಿದರು. ರೈತರಿಗೆ ರಾಜಕೀಯ ಪಕ್ಷಗಳ ಬೆಂಬಲವು ದೊರತಿತ್ತು. ರೈತರ ಪಾಲಿಗೆ ಸರ್ಕಾರ ಜೀವಂತ ಇಲ್ಲ ಎಂದು ತಿಥಿಯೂಟ ಮಾಡಿದ ರೈತರು ವಸತಿಹೀನ ರೈತರಿಗೆ ನಿವೇಶನ ನೀಡಿಕೆಗೆ ಒತ್ತಾಯಿಸಿದರು. ದಾವಣಗೆರೆ ಬಂದ್‌ಗೆ ಕರೆ ಕೊಟ್ಟರು. ದುಡಾ ಅಧ್ಯಕ್ಷರು ರೈತರೇ ಅಲ್ಲ ಎಂದು ವಾದ ಮಾಡುತ್ತಿದ್ದರು.

ದಾವಣಗೆರೆ ತಾ. ಮಲ್ಲಶೆಟ್ಟಿಹಳ್ಳಿಯಲ್ಲಿ ಅಸ್ತಿತ್ವಕ್ಕೆ ಬಂದ ಹೋರಾಟ ಸಮಿತಿ, ಸಿಂಗೂರ್ ಮಾದರಿ ಹೋರಾಟಕ್ಕೆ ಸಂಕಲ್ಪ ಮಾಡಿತ್ತು. ರೈತರು, ರೈತ ಮಹಿಳೆಯರು, ಕಾರ್ಮಿಕರು ಕೂಡಿದಂತೆ ಜೈಲ್‌ಭರೋ (25.12.2009) ಚಳವಳಿ ಮನವಿ ಪತ್ರವನ್ನು ಸರ್ಕಾರಕ್ಕೆ ಅರ್ಪಣೆ; ಬೈಕ್‌ರ್ಯಾಲಿ, ಜಿಲ್ಲಾಧಿಕಾರಿ ಕಛೇರಿ ಎದುರು ಚಟ್ಟೋಬನಹಳ್ಳಿ ರೈತರ ಕುಟುಂಬ ಸಹಿತ ಹೋರಾಟ; 3.1.2010ರಿಂದ ಅರೆಬೆತ್ತಲೆ ಮೆರವಣಿಗೆ, ಜೈಲಿನಲ್ಲಿ ಅಸ್ವಸ್ಥ ರೈತರಿಗೆ ಕೋಳ ತೊಡಿಸಿದುದರ ವಿರುದ್ಧ ಖಂಡಿಸಿ ಪ್ರತಿಭಟನೆ; ದಾವಣಗೆರೆ ಡಿ.ಸಿ.ಯವರಿಂದ ರೈತರು ಉಪವಾಸ ನಿಲ್ಲಿಸಲು ಮನವಿ, ಗಾಡಿ, ರೆಂಟೆ, ಕುಂಟೆ ಸಹಿತ ಬೀದಿ ಹೋರಾಟ ಮಾಡಿದ ರೈತರು, 6.1.2010ರಂದು ಕೋಡಿಹಳ್ಳಿ ಚಂದ್ರಶೇಖರ್ ನಾಯಕತ್ವದಲ್ಲಿ ಬೈಕ್‌ರ್ಯಾಲಿ, ಹೊನ್ನೂರು ಗೊಲ್ಲರಹಟ್ಟಿ ಕರೂರಲ್ಲಿ ರೈತರ ಪ್ರತಿಭಟನೆ ಇತ್ಯಾದಿಗಳು ನಡೆದ ಬಗ್ಗೆ ನಾಗರಾಜ ಬಡದಾಳ್ ನಮೂದಿಸಿದ್ದಾರೆ (ಕ.ಪ್ರ : 7.1.2010). ಕೃಷಿ ಭೂಮಿ ಕಳೆದುಕೊಂಡರೆ ಅಶನಕ್ಕೆ ಕಲ್ಲು ಎಂದಷ್ಟೇ ಅಲ್ಲದೆ ಮನೆತನವು ತಲತಲಾಂತರಗಳಿಂದ ಹಕ್ಕುದಾರನಾಗಿ ಆ ಭೂಮಿಯೊಡನೆ ಬೆಳೆಸಿಕೊಂಡ ಆತ್ಮೀಯತೆ ಕಳಚಿಕೊಳ್ಳಬಾರದೆಂಬ ಛಲ, ರೈತರ ಪ್ರತಿಭಟನೆಯ ಹಿಂದೆ ಕೆಲಸಮಾಡಿತ್ತೇನ್ನಬೇಕು. ಇವೆಲ್ಲದರ ಫಲವಾಗಿ ವಸತಿ ಯೋಜನೆಗಾಗಿ ದೊಡ್ಡಬಾತಿ ಗ್ರಾಮದ 180 ಎಕರೆ ಭೂಸ್ವಾಧೀನ ಪ್ರಕ್ರಿಯೆಯನ್ನು ಕೈಬಿಟ್ಟ ಬಗ್ಗೆ ನಿರ್ಣಯನ್ನು ಜಿಲ್ಲಾಧಿಕಾರಿ ಮತ್ತು ಪ್ರಾಧಿಕಾರದ ಅಧ್ಯಕ್ಷರು ಚಳವಳಿ ನಿರತ ರೈತರಿಗೆ ನೀಡುತ್ತಿದ್ದಂತೆ ರೈತರ ಮೂರು ಬೇಡಿಕೆಗಳನ್ನು ಈಡೇರಿಸಿದ ಕಾರಣ ಹೋರಾಟವನ್ನು

ಅಂತ್ಯಗೊಳಿಸಲಾಗಿದೆ ಎಂದು ಚಳುವಳಿಯ ನೇತಾರ ತೇಜಸ್ವಿ ಪಟೇಲ್ ಘೋಷಿಸಿದರು. ರೈತರು ಪಡೆದ ಜಯವಿದಾಗಿತ್ತು.

**ರೈತಪರ ಭೂಸ್ವಾಧೀನ ನೀತಿಗೆ ಆಗ್ರಹ :** ಕರ್ನಾಟಕ ರಾಜ್ಯ ರೈತ ಸಂಘವು ಬೆಂಗಳೂರು ನಗರದಲ್ಲಿ ನಡೆಸಿದ ತನ್ನ 14ನೇ ರಾಜ್ಯ ಸಮ್ಮೇಳನದಲ್ಲಿ ರೈತಪರ ಭೂಸ್ವಾಧೀನ ನೀತಿ ಜಾರಿಗೆ ಬರಬೇಕೆಂದು ಸರ್ಕಾರವನ್ನು ಒತ್ತಾಯಿಸುವ ನಿರ್ಣಯವನ್ನು ಕೈಗೊಳ್ಳಲಾಯಿತು. ಬಳ್ಳಾರಿಯಲ್ಲಿ ಹತ್ತಾರು ಸಾವಿರ ಎಕರೆ ನೀರಾವರಿ ಪ್ರದೇಶದಲ್ಲಿ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣವನ್ನು ನಿರ್ಮಿಸುವ ಬದಲು ಒಣಭೂಮಿ ಪ್ರದೇಶದಲ್ಲಿ ನಿರ್ಮಿಸಬೇಕು. ಎಕ್ಸ್‌ಪ್ರೆಸ್ ಹೆದ್ದಾರಿಗೆಂದು ಬೆಂಗಳೂರು – ಮೈಸೂರು ರಸ್ತೆ ಬಳಿ ಹೆಚ್ಚಿನ ಭೂಮಿ ನೀಡುವ ಅಗತ್ಯವಿಲ್ಲ. ಜಮೀನು ಪರಭಾರಗೆ ಸರಿಯಾದ ಪರಿಹಾರ ನೀತಿಯನ್ನು ತರಾತುರಿ ಮಾಡದೆ ಸೂಕ್ತರೀತಿಯಲ್ಲಿ ರೂಪಿಸಬೇಕು. ಅಭಿವೃದ್ಧಿಯ ಹೆಸರಿನಲ್ಲಿ ರೈತರಿಗೆ ಆಹಾರಭದ್ರತೆ (ರೇಷನ್ ಕಡಿತ ಮಾಡಿ) ಇಲ್ಲದೆ ಹೋದರೆ ಅದನ್ನು ರೈತ ಸಂಘವು ಬಲವಾಗಿ ವಿರೋಧಿಸುತ್ತದೆ ಎಂದೆಲ್ಲ ನಿರ್ಣಯಗಳಾದವು (29.12.09).

ಬೆಂಗಳೂರು – ಮೈಸೂರು ಇನ್‌ಫ್ರಾಸ್ಟ್ರಕ್ಚರ್ (ಬಿಎಂಐಸಿ) ಯೋಜನೆಯ ವಿರುದ್ಧವೂ ಅಂದರೆ ರಸ್ತೆಗಾಗಿ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಅಕ್ರಮಗಳಾಗಿವೆ ಎಂದು ಆರೋಪಿಸಿ ಮಾಜಿ ಪ್ರಧಾನಿ ಹೆಚ್.ಡಿ.ದೇವೇಗೌಡರ ನೇತೃತ್ವದಲ್ಲಿ ಹೋರಾಟಗಳು ನಡೆದು ಬಂದಿವೆ. (10.1.2010) ಅದಿನ್ನೂ ಕೊನೆಮುಟ್ಟಿಲ್ಲ. ಅಂತಾಗಿ ಹೆಚ್ಚಿನ ವಿವರಗಳನ್ನು ಇಲ್ಲಿ ನೀಡಿಲ್ಲ.

ಯಲಹಂಕ ಸುತ್ತಮುತ್ತಲಿನ 17 ಗ್ರಾಮಗಳ ವ್ಯಾಪ್ತಿಯ 3456 ಎಕರೆ ಭೂಸ್ವಾಧೀನವನ್ನು ಶಿವರಾಮ ಕಾರಂತ ಬಡಾವಣೆ ನಿರ್ಮಾಣಕ್ಕೆಂದು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಮಾಡಿಕೊಳ್ಳಲು ಮುಂದಾಗಿರುವುದಕ್ಕೆ ರೈತರು ತೀವ್ರ ವಿರೋಧ ಮಾಡಿದರು. 1400 ಕೊಳವೆ ಭಾವಿಗಳಿದ್ದು, ದ್ರಾಕ್ಷಿ, ಬಾಳೆ ಹಣ್ಣು ತರಕಾರಿ ಬೆಳೆದು ಜೀವನ ಸಾಗಿಸುತ್ತಿರುವ ರೈತರನ್ನು ಈ ಫಲವತ್ತಿನ ಭೂಮಿಯಿಂದ ಒಕ್ಕಲೆಬ್ಬಿಸುವುದು ಸರಿಯಲ್ಲ. ಶಿಡ್ಲಘಟ್ಟ ಬೆಂಗಳೂರಿನಿಂದ 50 ಕಿ.ಮೀ.ದೂರದಲ್ಲಿದ್ದು ಅಲ್ಲಿ ಎಕರೆಗೆ 50ಲಕ್ಷ ರೂ. ದರದಲ್ಲಿ ಗೃಹ ಮಂಡಳಿಯು ಖರೀದಿಸಿದೆ. ಅದೇ ಬೆಂಗಳೂರು ಸುತ್ತಮುತ್ತ ಇರುವ ಭೂಮಿಗೆ ಎಕರೆಗೆ 5 ರಿಂದ 10 ಲಕ್ಷ ನಿಗದಿ ಮಾಡಿದರೆ ನ್ಯಾಯ ಹೇಗೆ ಎಂದು ಶಾಸಕ ಶ್ರೀ ವಿ.ಎಸ್. ಉಗ್ರಪ್ಪ ಅವರ

ಪ್ರಶ್ನೆಯಾಗಿತ್ತು. ಭೂಸ್ವಾಧೀನ ಪ್ರಕ್ರಿಯೆಯನ್ನು ಕೈಬಿಡುವಂತೆ ಆಗ್ರಹಿಸಿ 11.1.10ರಂದು ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ನವರಿಗೆ ಮನವಿಯನ್ನು ಪಾದಯಾತ್ರೆಯ ಮೂಲಕ ಹೋಗಿ ಸಲ್ಲಿಸುವ ಬಗ್ಗೆ ಹಿತರಕ್ಷಣಾ ಸಮಿತಿಯ ಪದಾಧಿಕಾರಿಗಳು ನುಡಿದರು (10.1.2010).

**ಕಬ್ಬಿನ ಬೆಲೆ ನಿಗದಿಗೆ ಬೆಳೆಗಾರರ ಒತ್ತಾಯ** : ಕಬ್ಬಿನ ಬೆಳೆಗೆ ಉತ್ತಮ ಧಾರಣೆ ಇಲ್ಲದೆ ರೈತರು ಸಂಕಷ್ಟ ಪರಿಸ್ಥಿತಿಯಲ್ಲಿ ಇದ್ದಾರೆ. 62ಸಕ್ಕರೆ ಕಾರ್ಖಾನೆಗಳಿದ್ದು 54ಸಕ್ಕರೆ ಕಾರ್ಖಾನೆಗಳು ಮಾತ್ರ ಸಕ್ರಿಯವಾಗಿದ್ದು ಉಳಿದವು ರೋಗಗ್ರಸ್ತವಾಗಿದ್ದು ರೈತರಿಗೆ ತೊಂದರೆ ಆಗಿದೆ. ರಾಜ್ಯ ಸರ್ಕಾರ ಪ್ರತಿ ಟನ್ ಕಬ್ಬಿಗೆ 3ಸಾವಿರ ರೂ. ಧಾರಣೆ ನಿಗದಿ ಪಡಿಸಬೇಕು. 5ಲಕ್ಷ ಕಬ್ಬು ಬೆಳೆಗಾರರು ರಾಜ್ಯದಲ್ಲಿದ್ದು, ಕಬ್ಬು ಬೆಳೆಗೆ ಸರಿಯಾದ ಧಾರಣೆ ಸಿಗದೆ ಕಬ್ಬು ವ್ಯವಸಾಯದಿಂದ ಮುಖತಿರುಗಿಸುತ್ತಿದ್ದಾರೆ. ಹೀಗಾದರೆ ದೇಶದಲ್ಲಿ ಸಕ್ಕರೆ ಕ್ಷಾಮ ಸಂಭವಿಸೀತು. ಈ ಹಿನ್ನೆಲೆಯಲ್ಲಿ 19.1.2010ರಂದು ವಿಧಾನಸೌಧ ಮುತ್ತಿಗೆ ಕಾರ್ಯಕ್ರಮವನ್ನೂ ಕಬ್ಬು ಬೆಳೆಗಾರರ ಸಂಘ ಹಮ್ಮಿಕೊಳ್ಳುವ ಬಗ್ಗೆ ಅಧ್ಯಕ್ಷ ಕುರುಬೂರು ಶಾಂತಕುಮಾರ್ 11.1.2010ರಂದು ಬೆಳೆಗಾರರ ಸಭೆಯಲ್ಲಿ ತಿಳಿಸಿದರು. ಬೆಂಗಳೂರು ನಗರ ರೈಲು ನಿಲ್ದಾಣದಿಂದ ಮೆರವಣಿಗೆ ಹೊರಟು ವಿಧಾನಸೌಧಕ್ಕೆ ಮುತ್ತಿಗೆ ಹಾಕುವ ಬಗ್ಗೆ ತಿಳಿಸಿದರು. ಸರ್ಕಾರ ಸಕ್ಕರೆ ಕಾರ್ಖಾನೆಗಳಿಗೆ ಸಕ್ಕರೆ ಅನುಕೂಲ ಮಾಡಿಕೊಟ್ಟು ರೈತರಿಗೆ ಸಿಪ್ಪೆ ನೀಡುತ್ತಿದೆ. ಎಂದು ಅವರ ಆರೋಪವಿತ್ತು. ಒಂದು ಎಕರೆ ಗದ್ದೆಯಲ್ಲಿ ಕಬ್ಬು ಬೆಳೆಯಲು. ಬಿತ್ತನೆ ಬೀಜ ಗೊಬ್ಬರ, ನೀರು ಹಾಯ್ಸಣೆ ಕೂಲಿ, ಕಳೆ ನಿರ್ಮೂಲನ ಕೂಲಿ ಎಲ್ಲ ಸೇರಿ 70ಸಾವಿರ ರೂ. ಖರ್ಚು ಬರುತ್ತದೆ. ಉತ್ಪನ್ನವಾಗುವ ಕಬ್ಬಿನ ಪ್ರಮಾಣ ಸರಾಸರಿ 40ಟನ್, ಸಿಗುವ ಆದಾಯ ಪ್ರತಿಟನ್‌ಗೆ 2000ದಿಂದ 2200ರೂನಂತೆ ಸರಾಸರಿ 80ರಿಂದ 88ಸಾವಿರ ರೂಪಾಯಿ ಆಗುತ್ತದೆ. ರೈತನಿಂದ ಕಾರ್ಖಾನೆ ಖರೀದಿಸಿದ ಕಬ್ಬಿನಿಂದ ಕ್ವಿಂಟಾಲ್ ಸಕ್ಕರೆಗೆ 4 ಸಾವಿರ ರೂ. ಆದಾಯ ಅಲ್ಲದೆ ಬರುವ ಕಬ್ಬಿನ ಸಿಪ್ಪೆಯಿಂದ ವಿದ್ಯುತ್ ಹಾಗೂ ಗ್ಯಾಸ್ ಉತ್ಪನ್ನಗಳು ಮಾಡಿಕೊಳ್ಳುತ್ತವೆ. ಹೀಗಾಗಿ ಕಾರ್ಖಾನೆಗೆ 5500 ರೂ.ಗಳಿಗಿಂತಲೂ ಸಕ್ಕರೆ ಹಾಗೂ ಉಪ ಉತ್ಪನ್ನಗಳಿಂದ ಒದಗುತ್ತದೆ. ಅಂದರೆ ರೈತನಿಗಿಂತ 3500ರೂ ಹೆಚ್ಚು ಆದಾಯ ಟನ್ ಕಬ್ಬಿಗೆ ಬರುವಲ್ಲಿ ಲಾಭಾಂಶ ಮಾತ್ರ ರೈತರಿಗೆ ದಕ್ಕುವುದಿಲ್ಲ, ಹೊಸ ಎಫ್ ಆರ್‌ಪಿ ಕಾಯ್ದೆಯಲ್ಲಿ ಸೆಕ್ಷನ್ 5(ಎ) ಅಂಶವನ್ನು ಹಿಂದಿದ್ದಂತೆ ಸೇರಿಸಿ, ಲಾಭಾಂಶದ ನಿಗದಿ ಪಾಲು ರೈತರಿಗೂ ಸಲ್ಲುವಂತಾಗಬೇಕು. ರಾಜ್ಯ

ಸಲಹಾ ಬೆಲೆ (ಸ್ಟೇಟ್ ಅಡವೈಸ್‌ರಿ ಪ್ರೈಸ್) ಜಾರಿಗೆ ತರುವಲ್ಲಿ, ಕಬ್ಬು ಬೆಳೆಗಾರರು, ಸರ್ಕಾರ, ಸಕ್ಕರೆ ಕಾರ್ಖಾನೆ ಪ್ರತಿನಿಧಿಗಳು ಕೂಡಿ ನಿಗದಿ ಮಾಡುವಂಥ ಬೆಲೆ ಇದಾಗಿರುವಲ್ಲಿ ರಾಜ್ಯ ಸರ್ಕಾರ ರೈತರಿಗೆ ಹೆಚ್ಚು ಹಣ ಸಿಗುವ ನಿಟ್ಟಿನಲ್ಲಿ ಕಾರ್ಯೋನ್ಮುಖವಾಗಬೇಕು, ಎಂದೆಲ್ಲ ತಾಂತ್ರಿಕ ಹಾಗೂ ಕೃಷಿ ಅನುಭವಿಕ ನೆಲೆಯಲ್ಲಿ ವಿವರಿಸಿದರು. ಈ ಹಿನ್ನೆಲೆಗಳನ್ನೆಲ್ಲ ಗಮನದಲ್ಲಿಟ್ಟುಕೊಂಡು ಕಬ್ಬು ದರ ನಿಗದಿ, ರೈತರಿಗೆ ಕಾರ್ಖಾನೆಯ ಲಾಭದ ಪಾಲು ನೀಡಿಕೆ, ಕಬ್ಬು ಅಭಿವೃದ್ಧಿ ಮಂಡಳಿ ರಚನೆ ಸೇರಿದಂತೆ ಹನ್ನೊಂದು ಬೇಡಿಕೆಗಳನ್ನು ಮುಂದಿಟ್ಟು ರಾಜ್ಯ ಕಬ್ಬು ಬೆಳೆಗಾರರ ಸಂಘದ ನೇತೃತ್ವದಲ್ಲಿ 19.1.2010ನೇ ಮಂಗಳವಾರ ಸಾವಿರಾರು ಕಬ್ಬು ಬೆಳೆಗಾರರು ವಿಧಾನಸೌಧದ ಮುತ್ತಿಗೆಗೆ ಯತ್ನಿಸಿದರು. ಪ್ರತಿಭಟನಾ ರೈತರನ್ನು ಉದ್ದೇಶಿಸಿ ಕುರುಬೂರು ಶಾಂತಕುಮಾರ್ ಬೇಡಿಕೆಗಳ ಬಗ್ಗೆ ಆಗ್ರಹಿಸಿದ ಮೇಲೆ ಮನವೊಲಿಸಲು ಸ್ಥಳಕ್ಕೆ ಆಗಮಿಸಿದ ಸಕ್ಕರೆ ಸಚಿವ ಶಿವರಾಜ್ ಎಸ್.ತಂಗಡಿ ಬೇಡಿಕೆಗಳ ಇತ್ಯರ್ಥಕ್ಕೆ 15ದಿನಗಳ ಕಾಲಾವಕಾಶ ಕೋರಿದರು. ಸರ್ಕಾರ ಬೆಳೆಗಾರರೊಡನೆ ಸಮಾಲೋಚನೆಗೆ ಮುಂದಾಯಿತು. ಹೀಗಾಗಿ 20.1.2010ನೇ ಬುಧವಾರ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಅವರು ಮಾತುಕತೆಗೆ ಬೆಳೆಗಾರರನ್ನು ಆಹ್ವಾನಿಸಿದರು. ಆ ಹಿನ್ನೆಲೆಯಲ್ಲಿ ಪ್ರತಿಭಟನೆಗೆ ತಾತ್ಕಾಲಿಕ ವಿರಾಮವನ್ನು ಬೆಳೆಗಾರರು ನೀಡಿದರು (20.1.2010).

**ಕೇಂದ್ರದ ಐಟಿಐಆರ್ ಯೋಜನೆ ವಿರುದ್ಧ ದೇವನಹಳ್ಳಿ ರೈತರ ಹೋರಾಟ :**

ಕೇಂದ್ರ ಸರ್ಕಾರದ ಇನ್‌ಫರ್ಮೇಷನ್ ಟೆಕ್ನಾಲಜಿ ಇನ್‌ವೆಸ್ಟ್‌ಮೆಂಟ್ ರೀಜನ್ (ITIR) ಯೋಜನೆಗೆಂದು ದೇವನಹಳ್ಳಿಯ ಕೃಷಿ ಭೂಮಿ (6011 ಎಕರೆ), ಸರ್ಕಾರಿ ಭೂಮಿ (3044 ಎಕರೆ) ಸೇರಿದಂತೆ ಸುಮಾರು ಹತ್ತು ಸಾವಿರ ಎಕರೆ ಜಮೀನನ್ನು ಸ್ವಾಧೀನ ಪಡಿಸಿಕೊಳ್ಳುವ ಪ್ರಯತ್ನವಾಯಿತು. ದೇವನಹಳ್ಳಿಯ 19ಗ್ರಾಮಗಳ, ದೊಡ್ಡಬಳ್ಳಾಪುರದ 10 ಗ್ರಾಮಗಳ ರೈತರು ಇದಕ್ಕೆ ವಿರೋಧ ವ್ಯಕ್ತಪಡಿಸಿದರು. ಕರ್ನಾಟಕ ರಾಜ್ಯ ಹಸಿರು ಸೇನೆ ಫೆಬ್ರವರಿ ತಿಂಗಳಲ್ಲಿ ದೇವನಹಳ್ಳಿಯಲ್ಲಿ ಪ್ರತಿಭಟನೆಯನ್ನು ಈ ಬಗ್ಗೆ ಹಮ್ಮಿಕೊಂಡಿತು. ದೊಡ್ಡಬಳ್ಳಾಪುರ ತಾಲೂಕಿನ 10 ಹಳ್ಳಿಗಳ ಅನೇಕ ರೈತರು ಜಮೀನು ನೀಡಿಕೆಗೆ ವಿರೋಧವಾಗಿದ್ದರು. ಕೊನಗಟ್ಟ, ಕೋಡಿಹಳ್ಳಿಯಲ್ಲಿ ಪ್ರತಿಭಟನೆಗಳೂ ನಡೆದುವು. ಇಲ್ಲಿ ಲಾಭವಿಲ್ಲದ ಕೃಷಿ ಮತ್ತು ಕೃಷಿ ಭೂಮಿ ರಕ್ಷಣೆ ಇವೆರಡರ ನಡುವಣ ಚಿಂತನೆಗಳಲ್ಲಿ ರೈತರು ಸಂಧಿಗ್ಧಗಳನ್ನು ಎದುರಿಸುತ್ತಿದ್ದಾರೆ. ಮಳೆಯಾಧಾರಿತ ಕೃಷಿಗಾರಿಕೆ ನಡೆಯುವ ಈ 29 ಹಳ್ಳಿಗಳ ಪ್ರದೇಶದಿಂದ ರಾಗಿ, ಭತ್ತ, ಹುರುಳಿ, ಮೆಕ್ಕೆ ಜೋಳ – ಇವು

ಮುಖ್ಯವಾಗಿ ಮಾರುಕಟ್ಟೆಗೆ ಒದಗುತ್ತವೆ. ಹೈನುಗಾರಿಕೆ ಇಲ್ಲಿ ಶೇ 30ರಷ್ಟು ಸಾರ್ಥಕತೆಯನ್ನು ಪಡೆದಿದೆ. ದೇವನಹಳ್ಳಿವಿಮಾನ ನಿಲ್ದಾಣ ಸ್ಥಾಪನೆಗೆ ಮುನ್ನ, ಕೊಯಿರ್, ವಿಶ್ವನಾಥಪುರ ಗ್ರಾಮಗಳಲ್ಲಿ ಇದ್ದು ರೇಷ್ಮೆ ಕೃಷಿ ಈಗ ಇಳಿಮುಖವಾಗಿದೆ. ರೇಷ್ಮೆ ಬೆಳೆಗಾರರ ಸಂಖ್ಯೆಯೂ ಕುಸಿದಿದೆ. ಸದ್ಯದ ಯೋಜನೆಗೆ ಭೂಮಿ ವಶಗೊಂಡರೆ, ರೇಷ್ಮೆ ಪೂರ್ಣವಾಗಿ ಕುಂಠಿತಗೊಳ್ಳುತ್ತದೆ. ತರಕಾರಿ ಬೆಳೆಗಳಿಗೆ (ಆಲೂಗೆಡ್ಡೆ, ಸೊಪ್ಪು, ಹುರುಳಿ, ಟೊಮೊಟೊ, ಹುರುಳಿಕಾಯಿ, ಎಲೆಕೋಸು) ಸೇವತಿಂಗೆ ಇತ್ಯಾದಿಗಳಿಗೆ ಹಾನಿ ತಟ್ಟುತ್ತದೆ ಎಂಬುದು ಪ್ರತಿಭಟನೆಕಾರರ ಮನಸ್ಸಿನಲ್ಲಿತ್ತು ಎಂಬುದು ಸ್ಪಷ್ಟ, ಕಟ್ಟೆಗುರುರಾಜ್ ಇವರು ಈ ಅಂಶಗಳೆಲ್ಲ ರೈತರ ಹೋರಾಟಕ್ಕೆ ನಾಂದಿ ಹಾಡುತ್ತವೆ ಎಂಬ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ (4.2.2010) ರಿಯಲ್ ಎಸ್ಟೇಟ್ ದರಗಳಿಗೆ ಈ 29ಹಳ್ಳಿಗಳಲ್ಲಿ ಶೇ 50ರಷ್ಟು ನೆಲೆಯೂ ಸಿಗುವಂತಿದೆ. ಈ ದರಗಳು ಎಕರೆಗೆ ಕನಿಷ್ಠ 16 ಲಕ್ಷದಿಂದ ಎದ್ದು ಕಾಣುವಂತೆ 50 ಲಕ್ಷ ರೂ.ಗಳ ವರೆಗೆ ತೂಗಾಡುವಲ್ಲಿ ಮಾರುಕಟ್ಟೆಯ ಈ ಆಕರ್ಷಕ ಆರ್ಥಿಕ ಮೇಲಾಟದ ನಡುವೆ ರೈತರ ಮನಸ್ಸು ಉಯ್ಯಾಲೆಯಲ್ಲಿದೆ. ಆದರೆ ಈ ನೆಲದಲ್ಲಿ ತಲೆತಲಾಂತರದಿಂದ ಉಂಡ ಮನಸ್ಸು ಪ್ರತಿಭಟನೆಯತ್ತವೂ ವಾಲುತ್ತಿದೆ. ಕಾರಣ ವಿಶ್ವವಿಖ್ಯಾತ ನಂದಿ ಬೆಟ್ಟದ ತಪ್ಪಲು, ಅರ್ಕಾವತಿ ನದಿ ಮೂಲ ಪ್ರದೇಶದ ಅಸ್ತಿತ್ವವನ್ನು ಈ ಮಾಹಿತಿ ತಂತ್ರಜ್ಞಾನ ಹೂಡಿಕೆ ವಲಯವು (ITIR) ಕಸಿಯುವಂತಿದೆ. ಆದರೆ ಪ್ರಗತಿಯನ್ನು ದೂರಮಾಡುವಂತಿಲ್ಲ.

**ಮಾಜಿ ಪ್ರಧಾನಿಗಳಿಂದ ಭೂಸ್ವಾಧೀನ ಅಧಿಸೂಚನೆ ವಾಪಸಾತಿಗೆ ಆಗ್ರಹ :** ಕೈಗಾರಿಕೆ ಸ್ಥಾಪನೆಯ ನೆಪದಲ್ಲಿ, ಸರ್ಕಾರದ 23,776 ಎಕರೆ, ರೈತರ 1,47,575 ಎಕರೆ ಕೃಷಿ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲು ಅಧಿಸೂಚನೆಯನ್ನು ಹೊರಡಿಸಿರುವ ವಿರುದ್ಧ ರೈತ ಜಾಗೃತಿ ಪ್ರವಾಸವನ್ನು ರಾಜ್ಯಾದ್ಯಾಂತ (6.2.2010 ರಿಂದ 21.2.2010)ರವರೆಗೆ ನಡೆಸಲಿರುವ ಬಗ್ಗೆ ಮಾಜಿ ಪ್ರಧಾನಿ ಎಚ್.ಡಿ. ದೇವೇಗೌಡರು ಪ್ರಕಟಿಸಿದರು. ಸಾವಿರಾರು ರೈತ ಕುಟುಂಬಗಳು ಬೀದಿಗೆ ಬರುವುದನ್ನು ತಡೆಯಲು ಈ ಪ್ರವಾಸವಿದೆ; ಕೈಗಾರಿಕೆ ಹಾಗೂ ಇತರೆ ಸೂಕ್ತಯೋಜನೆಗಳಿಗೆ ಅಗತ್ಯವಿರುವಷ್ಟು ಮಾತ್ರ ಭೂಸ್ವಾಧೀನಗೊಂಡರೆ ತಕರಾರಿಲ್ಲ. ಮೀತಿ ಮೀರಿ ಸ್ವಾಧೀನಗೊಳ್ಳಬಾರದಷ್ಟೆ, ಎಂದಿದ್ದಾರೆ. ಇದಕ್ಕೆ ಎಡಪಕ್ಷಗಳು ಹಾಗೂ ರೈತ ಮುಖಂಡರ ಬೆಂಬಲವಿದೆ. ತುಮಕೂರು, ಬೆಳಗಾವಿ, ಧಾರವಾಡ, ಹಾವೇರಿ, ಗದಗ, ರಾಯಚೂರು, ಬಳ್ಳಾರಿ, ಚಿತ್ರದುರ್ಗ, ಮೈಸೂರು ಮುಂತಾದ ಕಡೆ ರೈತನಾಯಕರೊಡನೆ ಸಭೆ, ಬೆಂಗಳೂರು, ಬೆಂಗಳೂರು ಗ್ರಾ., ರಾಮನಗರ ಜಿಲ್ಲೆಯ ರೈತರ ಸಮಾವೇಶವನ್ನು ನಡೆಸುವ ಬಗ್ಗೆ ತಿಳಿಸಿದರು.

**ದಾವಣಗೆರೆ ತಾ. ಆನಗೋಡು ಹೋಬಳಿ ಗ್ರಾಮಗಳ ಭೂಸ್ವಾಧೀನಕ್ಕೆ ಪ್ರತಿಭಟನೆ :** ಕೈಗಾರಿಕಾಭಿವೃದ್ಧಿ ಹೆಸರಿನಲ್ಲಿ ಆನೆಗೋಡು ಹೋಬಳಿ ಕರಿಲಕ್ಕೇನಹಳ್ಳಿ (425.03 ಎಕರೆ), ಮಲ್ಲಶೆಟ್ಟಿಹಳ್ಳಿಯಲ್ಲಿ (236.11 ಎಕರೆ), ಕುರ್ಕಿಗ್ರಾಮದಲ್ಲಿ (329.16 ಎಕರೆ), ಚಟ್ಟೋಬನಹಳ್ಳಿಯಲ್ಲಿ (360.28ಎಕರೆ) ಹೀಗೆ 1351.18ಎಕರೆ ಭೂಮಿಯನ್ನು ಕೆ.ಐ.ಎ.ಡಿ.ಬಿ ಸ್ವಾಧೀನ ಪಡಿಸಿಕೊಳ್ಳ ಹೊರಟಿದೆ ಎಂದು ರೈತರು ದೂರಿದ್ದರು. ಸರ್ಕಾರ ಭೂಸ್ವಾಧೀನಕ್ಕೆ ನೋಟೀಸ್ ಜಾರಿಮಾಡಿರುವುದು ರೈತರ ಬದುಕಿಗೆ ಸಂಕಷ್ಟವಾಗಿತ್ತು; ಅವರ ಸಹನೆ ಮೀರುವಂತಾಗಿತ್ತು ಸುಮಾರು 500–600 ಸಣ್ಣ ಮತ್ತು ಅತಿಸಣ್ಣ ರೈತ ಕುಟುಂಬಗಳು ಈ ಭೂಮಿಯ ಫಸಲನ್ನು ಬೆಳೆದು ಬಾಳುತ್ತಿದ್ದವು. ಆ ನೆಮ್ಮದಿಯನ್ನು ಸರ್ಕಾರ ಕೆಡಿಸಿದೆ ಎಂದು ರೈತರ ಆರೋಪವಿತ್ತು. ಬೇಳೆ, ಮೆಕ್ಕೆಜೋಳ, ಅಡಕೆ ತೋಟಗಳಿಂದ ಕೂಡಿದ್ದು ಫಲವತ್ತಿನ ಖುಷ್ಕಿ ಭೂಮಿಯ ಸ್ವಾಧೀನದ ಬಗ್ಗೆ ಸರ್ಕಾರ ಗೆಜೆಟ್ ನೋಟಿಫಿಕೇಷನ್ ಕೂಡ ಮಾಡಿತ್ತು. ವಿಮಾನ ನಿಲ್ದಾಣಕ್ಕೆಂದು ಕರಿಲಕ್ಕೇನಹಳ್ಳಿ ಪ್ರದೇಶವನ್ನು ಈ ಹಿಂದೆ ಪರಿಶೀಲಿಸಲಾಗಿತ್ತು. ಅದು ಬಿಟ್ಟು ಆನಗೋಡು ಹೋಬಳಿ ರೈತರಿಗೆ ಗ್ರಾಮಪಂಚಾಯಿತಿಗಳಿಗೆ ಭೂಸ್ವಾಧೀನದ ನೋಟೀಸ್ ಜಾರಿಮಾಡಿದ್ದು ರೈತಾಪಿ ವರ್ಗದಲ್ಲಿ ಅಸಮಾಧಾನ ಭುಗಿಲೆದ್ದಿತ್ತು. ಜಿಲ್ಲಾಕೇಂದ್ರವಲ್ಲಿ ಭೂಸ್ವಾಧೀನದ ವಿರುದ್ಧ ನಡೆದಿರುವ ಹೋರಾಟಕ್ಕೆ ಆನಗೋಡು ಹೋಬಳಿ ರೈತರೂ ಪಾಲುಗೊಳ್ಳುವ ಸಂಭವ ನಿರ್ಮಾಣವಾಗಿತ್ತು. (23.12.09)

**ನಾಲಾ ಕಳಪೆ ಕಾಮಗಾರಿಗೆ ಪ್ರತಿಭಟನೆ :** ಭದ್ರಾನಾಲೆ ಆಧುನೀಕರಣಕ್ಕೆ ಸರ್ಕಾರ ಭಾರಿ ಹಣವನ್ನು ಮೀಸಲು ಮಾಡಿತ್ತು. ಹೊಲಗಾಲುವೆ ಉಪನಾಲೆ ಕಾಮಗಾರಿಯು ಇಲಾಖೆಯ ಅನುಮೋದನೆಗೆ ಮುನ್ನವೆ ನಡೆದಿದ್ದು ಕಳಪೆ ಆಗಿತ್ತು. ದಾವಣಗೆರೆ ಜಿಲ್ಲೆಯಾದ್ಯಂತ ನಡೆದಂತಹ ನಾಲೆ ಆಧುನೀಕರಣ ಕಳಪೆ ಆಗಿದೆ ಎಂದು ಕೂಗು ಎದ್ದಿತ್ತು. ಈ ಕಾಮಗಾರಿಯ ತಪಾಸಣೆಯನ್ನು ಮೂರನೇ ವ್ಯಕ್ತಿಯಿಂದ ಮಾಡಿಸಬೇಕು. ತಪ್ಪಿತಸ್ಥರ ವಿರುದ್ಧ ಕ್ರಮ ಕೈಗೊಳ್ಳಬೇಕು. ಮಾಡಿರುವ ಕಾಮಗಾರಿಯ ಬಿಲ್‌ಗಳನ್ನು ತಡೆ ಹಿಡಿಯ ಬೇಕು ಎಂದು ಒತ್ತಾಯಿಸಿದ ರೈತರು ನಾಲೆ ಕಾಮಗಾರಿಗೆ ಬಳಸಿದ್ದ ಕಾಂಕ್ರೀಟ್ ಅನ್ನು ಒಡೆದು ಹಾಕಿದರು. ಆಧುನೀಕರಣವು ಕಳಪೆ ಆಗಿರುವುದನ್ನು ಖಂಡಿಸಿ ಹರಿಹರ ತಾ. ಮಲೆಬೆನ್ನೂರು ನೀರಾವರಿ ಇಲಾಖಾ ಕಚೇರಿಗೆ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ ಕಾರ್ಯಕರ್ತರು ಬೀಗ ಹಾಕಿ ಪ್ರತಿಭಟಿಸಿದರು. ನಾಲೆ ಆಧುನೀಕರಣಕ್ಕೆ ಸರ್ಕಾರ

ಏನೂಹಣ ಬಿಡುಗಡೆ ಮಾಡದಿರುವಲ್ಲಿ ಗುತ್ತಿಗೆದಾರರೇ ಕಾಮಗಾರಿಗೆ ಹಣ ಹೂಡಬೇಕಾಗಿ ಬಂದುದು ಕುರಿತೆಲ್ಲ ರೈತರ ಅಸಮಾಧಾನಕ್ಕೆ ಕಾರಣವಾಗಿತ್ತು (13.1.10).

**ವ್ಯವಸಾಯದ ವಿಪತ್ತುಗಳು :** ಹಸಿರುಕ್ರಾಂತಿ ಆರಂಭವಾದ 70 ದಶಕದ ದಿನಗಳಲ್ಲಿ ರಸಗೊಬ್ಬರ, ಕೀಟನಾಶಕಗಳ ಸುಲಭಲಭ್ಯತೆ, ಇಳುವರಿಯ ಸೊಂಪು ನೋಡಿ ಹಿಗ್ಗಿದ್ದ ಕೃಷಿಕಾರರು ಮುಂದಿನ ದಶಕಗಳಲ್ಲಿ ಭ್ರಮನಿರಸನಗೊಂಡರು. ಅತಿ ರಾಸಾಯನಿಕಗಳಿಂದಾಗಿ ಭೂಫಲವತ್ತತೆ, ಇಳುವರಿ ಕುಸಿತ, ರಸಗೊಬ್ಬರದ ದುಬಾರಿ ದರ, ದುಬಾರಿ ಕೃಷಿ ಕೂಲಿ ಅಂತರ್ಜಲ ಮಟ್ಟ ಕುಸಿದು ನೀರಾವರಿಗೆ ದುಸ್ಥಿತಿ, ಏರುತ್ತಿರುವ ಆಹಾರ ಬೆಲೆ, ತೊಂದರೆಗೊಳಗಾಗಿರುವ ಗ್ರಾಮೀಣ ಅರ್ಥವ್ಯವಸ್ಥೆ, ಬೇಸಾಯದಿಂದ ದೂರ ಸರಿದು ನಗರಕ್ಕೆ ವಲಸೆ ಹೋದರೂ ಮೂಲಸೌಕರ್ಯಗಳ ಕೊರತೆ ಅನುಭವಿಸುತ್ತಿದ್ದಾರೆ. 90ರ ದಶಕದ ನಮ್ಮ ಜೆಡಿಪಿಯ ಅರ್ಥಾತ್ ಆಂತರಿಕ ಒಟ್ಟು ಉತ್ಪನ್ನ ಶೇ 25ರಷ್ಟು ಕೃಷಿಯಿಂದ ಒದಗುತ್ತಿದ್ದುದು ಅದರಲ್ಲಿ ಒಂದು ಶೇ. 9ರಷ್ಟು ಕಡಿತಗೊಂಡಿದೆ. ಇಂಥ ಸ್ಥಿತಿಯಲ್ಲಿಯೂ ಶೇ. 70ರಷ್ಟು ಜನ ಹಳ್ಳಿಗಾಡಿನಲ್ಲಿಯೇ ಉಳಿದಿರುವಲ್ಲಿ ಕೃಷಿಕೇತ್ರದ ಬಿಕ್ಕಟ್ಟಿಗೆ ಪರಿಹಾರ ಹುಡುಕಬೇಕು ಎಂಬುದು, ಆಕಾಶ್ ಕಪೂರ್ ಅವರ ಆಶಯ. ಹೀಗಾಗಿ ಕೃಷಿಯನ್ನು ಮತ್ತೆ ಜೀವನೋಪಾಯದ ಹಾದಿ ಎಂದು ಬಿಂಬಿಸಲು ಪ್ರಯತ್ನಿಸಿದರೆ ಕೃಷಿ ಸೌಭಾಗ್ಯ ಕಂಡೀತು. ಕೃಷಿಕ ಸಮುದಾಯ ಮಣ್ಣಿನ ವಾಸನೆಯನ್ನು ಜೀವಂತವಿಟ್ಟು ಹರಡಲು ಅನುಕೂಲವಾದೀತು. ವ್ಯವಸಾಯದ ವಿಪತ್ತು, ತವಿಯುವಂತಾದೀತು. ರೈತ ಪ್ರತಿಭಟನೆಗಳಿಗೆ ಸಮಾಧಾನ ದೊರೆಯುವಂತಾದೀತು.

**ಶಿಗ್ಗಾವಿ ತಾ. ರೈತರ ಹೆದ್ದಾರಿ ತಡೆ ಚಳುವಳಿ :** ಹಾವೇರಿ ಜಿಲ್ಲೆಯ ಶಿಗ್ಗಾವಿ ಮತ್ತು ಬಂಕಾಪುರ ಹೋಬಳಿಗಳಲ್ಲಿ ಅತಿವೃಷ್ಟಿಯಿಂದ ಬೆಳೆಹಾಳಾಯಿತು ಫಸಲು ಕೈಗೆ ಬರದೆ ರೈತರಿಗೆ ಸಂಕಷ್ಟಗಳೊದಗಿದವು. ಈ ಹಾನಿಗೆ ಜಿಲ್ಲಾಡಳಿತವೂ ಏನೂ ಪರಿಹಾರ ನೀಡಲಿಲ್ಲ, ಹಿಂದೆ ಬರಗಾಲದಿಂದ ರೈತರು ಕಂಗೆಟ್ಟಾಗಲೂ ಶಿಗ್ಗಾವಿ ತಾಲೂಕನ್ನು 'ಬರಗಾಲ ಪೀಡಿತ' ಪ್ರದೇಶ ವೆಂದು ಸರ್ಕಾರ ಆಡಳಿತದ ನಿರ್ಲಕ್ಷ್ಯದ ಕಾರಣ ಘೋಷಿಸಿರಲಿಲ್ಲ. ತತ್ಫಲವಾಗಿ ರೈತರು ಗುಳೆ ಹೋಗುವುದು, ಅತ್ಮಹತ್ಯೆ ಮಾಡಿಕೊಳ್ಳುವುದಾಯಿತು. ಈ ಹಿನ್ನೆಲೆಗಳಲ್ಲಿ ಬೆಳೆಹಾನಿ ಪರಿಹಾರ ಬಯಸಿ ಶಿಗ್ಗಾವಿ ತಾಲೂಕು ರೈತ ಒಕ್ಕೂಟದ ರೈತರು 5.11.2007ನೇ ಸೋಮವಾರದಂದು ಬಂಕಾಪುರದ ಬಳಿ ಪುಣೆ ಬೆಂಗಳೂರು ರಾಷ್ಟ್ರೀಯ ಹೆದ್ದಾರಿ

ತಡೆ ಚಳವಳಿ ಮಾಡಿದ್ದರು. ಬಂಕಾಪುರ ಕೋಟೆ ಬಳಿಯಿಂದ ಗ್ರಾಮದ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ನಡೆಸಿ ನಂತರ ರಸ್ತೆ ತಡೆ ನಡೆಸಿದರು.

**ಅರ್ಕಾವತಿ ಲೇಔಟ್ ವಿವಾದಿತ ಜಾಗದ ಸಮೀಕ್ಷೆಗೆ ವಿರೋಧ; ಆತ್ಮಾಹುತಿ ಪ್ರಯತ್ನ :** ಐ.ಎ.ಎಸ್ ಮತ್ತು ಐ.ಪಿ.ಎಸ್ ಅಧಿಕಾರಿಗಳ ಸಂಘವು ಬೆಂಗಳೂರಿನ ಹೊಸ ಅರ್ಕಾವತಿ ಬಡಾವಣೆಯ ತಮ್ಮ ಭಾಗದ ಜಾಗದ ಸಮೀಕ್ಷೆ ನಡೆಸಲು 6.5.2009ರಂದು ಮುಂದಾಯಿತು. ಇಲ್ಲಿ ಭೂಮಿ ಕಳೆದುಕೊಂಡ ರೈತರಿಗೆ ಸೂಕ್ತಪರಿಹಾರ ಕೊಟ್ಟಿಲ್ಲ. ಬೆಳೆಬೆಳೆಯಲೂ ಬಿಡಿಎ ಅವಕಾಶ ಕೊಟ್ಟಿಲ್ಲ. 2003ರಲ್ಲಿ ಬಡಾವಣೆಗಾಗಿ ಭೂಸ್ವಾಧೀನ ಪಡಿಸಿಕೊಳ್ಳುವಾಗ ಎಕರೆಗೆ 9ಲಕ್ಷ ರೂ.ನಿಂದ 10.50 ಲಕ್ಷ ರೂವರೆಗೆ ಬಿಡಿಎ ಬೆಲೆ ನಿಗದಿಮಾಡಿತ್ತು. ಸದ್ಯ ಅಲ್ಲಿ ಎಕರೆ ಭೂಮಿಯ ಬೆಲೆ ಸುಮಾರು ನಾಲ್ಕು ಕೋಟಿ ರೂ. ಇದೆ. ನಿವೇಶನವನ್ನು ರೈತರಿಗೆ ಕೊಡುವ ಬಗ್ಗೆ, ಪರಿಹಾರ ಕೊಡುವ ಬಗ್ಗೆ ಬಿಡಿಎ ಕೊಟ್ಟ ಭರವಸೆ ಈವರೆಗೆ ಫಲವಾಗಿಲ್ಲ. ಭೂಸ್ವಾಧೀನ ಸಂಬಂಧದ ತಕರಾರು ಬಂದಾಗ ಹೈಕೋರ್ಟ್, ಸರ್ಕಾರ ಹಾಗೂ ಬಿಡಿಎ ದ ಭೂಸ್ವಾಧೀನ ಕ್ರಮದ ಪರವಾಗಿ ತೀರ್ಪು ನೀಡಿತ್ತು. 2006ರ ಆರಂಭದಲ್ಲಿ ಸುಮಾರು 9ಸಾವಿರ ನಿವೇಶನಗಳನ್ನು ತಕರಾರು ಇಲ್ಲದ ಭಾಗದಲ್ಲಿ ಅಭಿವೃದ್ಧಿಪಡಿಸಿ ಹಂಚಿಕೆ ಮಾಡಿತು. ಆಗ ರೈತರು ಸುಪ್ರೀಂಕೋರ್ಟ್‌ಗೆ ಹೋಗಲಾಗಿ ಭೂಸ್ವಾಧೀನಕ್ಕೆ ತಡೆಯಾಜ್ಞೆ ನೀಡಿತು. ಇಂಥ ಹಿನ್ನೆಲೆ ಇರುವಲ್ಲಿ ಸಮೀಕ್ಷೆಗೆ ಅವಕಾಶವಿಲ್ಲ ಎಂದು ರೈತರ ಪ್ರತಿಭಟನೆ ಶುರುವಾಯಿತು. ಪ್ರತಿಭಟನೆಯ ಸಂದರ್ಭದಲ್ಲಿ ರಾಜಪ್ಪ ಎಂಬ ರೈತ ಸೀಮೆಎಣ್ಣೆಯನ್ನು ಮೈಮೇಲೆ ಸುರಿದುಕೊಂಡು ಬೆಂಕಿಹಚ್ಚಿಕೊಳ್ಳುವ ಪ್ರಯತ್ನವನ್ನು, ರವಿ ಎಂಬಾತ ವಿಷಸೇವಿಸಿ ಆತ್ಮಹತ್ಯೆ ಮಾಡಿಕೊಳ್ಳುವ ಪ್ರಯತ್ನವನ್ನು ಪೋಲೀಸರು ವಿಫಲಗೊಳಿಸಿದರು. ರೈತರ ಆತ್ಮಹತ್ಯಾ ಪ್ರಯತ್ನ ತೀವ್ರ ಪ್ರತಿಭಟನೆಯ ನಡುವೆಯೂ ನಿರ್ಮಾಣದ ಗುತ್ತಿಗೆದಾರರು ಗುದ್ದಲಿ ಪೂಜೆ ಮಾಡಿದರು, ಭೂಮಿ ಸಮೀಕ್ಷೆಯೂ ನಡೆಯಿತು. (7.5.2009). ಇಲ್ಲಿ ರೈತರ ಆತ್ಮಹತ್ಯಾ ಪ್ರಯತ್ನ ಪ್ರತಿಭಟನೆಯ ಒಂದು ಮಾದರಿ ಎನಿಸಿದರೂ, ಅದು ಸಾಲಬಾಧೆ, ಮಾನಹಾನಿ, ಬೆಳೆಹಾನಿ ಸಂದರ್ಭವಾಗಿರಲಿಲ್ಲ. ಏಕಾಂಗಿತನದಲ್ಲಿ ನಡೆದ ಆತ್ಮಹತ್ಯಾ ಪ್ರಯತ್ನವಾಗಿರಲಿಲ್ಲ. ಬದಲು ರೈತ ಸಮುದಾಯಕ್ಕೆ ತನಗೂ ಸೇರಿದಂತೆ ಸಿಗದಿರುವ ಸೂಕ್ತ ಪರಿಹಾರ, ಈಡೇರದಿದ್ದ ನಿವೇಶನ ಲಭ್ಯ ಭರವಸೆ ಇವುಗಳ ಕಾರಣವಾಗಿ ಸಮೂಹದ ಮಧ್ಯೆ ನಡೆದ ಪ್ರತಿಭಟನಾ ಆತ್ಮಹತ್ಯೆಯ ರೈತ ಪ್ರಯತ್ನವಾಗಿತ್ತು. ಬಲವಂತವಾಗಿ ಭೂಸ್ವಾಧೀನಕ್ಕೆ ಸಮೀಕ್ಷೆಯು ನ್ಯಾಯಾಲಯ ತೀರ್ಪು

ಬಂದಿಲ್ಲದಿದ್ದರೂ ನಡೆದಿರುವ ಬಗ್ಗೆ ತಳೆದ ಮಾನಸಿಕ ಆಕ್ರೋಶ, ರೈತರ ಪ್ರಬಲ ಪ್ರತಿಭಟನೆಗೂ ಫಲ ದೊರಕಲಿಲ್ಲವೆಂಬ ನಿರಾಶೆಯೆ ಆತ್ಮಹತ್ಯಾ ಪ್ರಯತ್ನಕ್ಕೆ ಕಾರಣವಾಗಿದ್ದಂತೆ ತೋರುತ್ತದೆ. ಇದು ತೆರೆದಂಗಳದಲ್ಲಿ ರೈತ ಸಮೂಹದ ಮಧ್ಯೆಯೇ, ಗುತ್ತಿಗೆದಾರರ ಅಧಿಕಾರಿಗಳ ಧಾರ್ಷ್ಟೀಕ ಪ್ರಯತ್ನಕ್ಕೆ ತೋರಿದ ಪ್ರತಿಭಟನಾ ಆತ್ಮಹತ್ಯೆಯ ಪ್ರಯತ್ನದಂತಿತ್ತು. ಸುಪ್ರೀಂಕೋರ್ಟ್ ಈಚೆಗೆ ತಡೆಯಾಜ್ಞೆಯನ್ನು ತೆರವು ಮಾಡಿದೆ.

**ಟೊಮೆಟೊ ಬೆಳೆಗಾರರಿಗೆ ಬೆಲೆ ವ್ಯತ್ಯಾಸದ ಹಣ ಬಾಕಿ; ರೈತರ ಪ್ರತಿಭಟನೆ:** 2008ರ ಜೂನ್ ತಿಂಗಳಾಂತ್ಯದಲ್ಲಿ ಕೋಲಾರ ಜಿಲ್ಲೆಯ ಎಪಿಎಂಸಿ ಯಲ್ಲಿ ಟೊಮೆಟೊ ಬೆಲೆ ದಿಢೀರ್ ಕುಸಿದಿತ್ತು. ಆಗ ರೈತರು ಬೆಂಬಲ ಬೆಲೆಗೆ ಆಗ್ರಹಿಸಿ ಪ್ರತಿಭಟನೆ ಮಾಡಿದರು. ಪ್ರತಿಭಟನೆಯ ತೀವ್ರತೆ ಕಂಡು ಸರ್ಕಾರವು 16.7.2008ರಂದು ಬೆಂಬಲ ಬೆಲೆ ನೀಡುವ ಬದಲು ವ್ಯತ್ಯಾಸದ ಮೊತ್ತ ನೀಡುವ ಬಗ್ಗೆ ನಿಯಮಗಳಿಟ್ಟು ಆದೇಶ ಹೊರಡಿಸಿತು ಅದರ ರೀತ್ಯಾ ರೈತರಿಂದ ಪ್ರತಿ ಹೆಕ್ಟೇರಿಗೆ ಗರಿಷ್ಠ 10ಟನ್ ಟೊಮೆಟೊ ಖರೀದಿಗೆ ಮಾತ್ರ ಮಿತಿಗೊಳಿಸಿತ್ತು; ರೈತರು ಮಾತ್ರ ಹಣ ಪಡೆಯಲು ಅರ್ಹರೆಂದಿತ್ತು. ಜುಲೈ 31ರವರೆಗೆ ಮಾತ್ರ ಹಣ ವಿತರಣೆಗೆ ಅವಕಾಶವೆಂದಿತ್ತು ಆದರೆ ಬೆಂಬಲ ಬೆಲೆ ವ್ಯತ್ಯಾಸದ ಮೊತ್ತವಾದ 1,84,66,000(1.84ಕೋಟಿ ರೂ.)ರೂವನ್ನು ಟೊಮೆಟೊ ಖರೀದಿ ಮಾಡಿ, ಆದೇಶವಾಗಿ 11 ತಿಂಗಳಾಗಿದ್ದರೂ ಸರ್ಕಾರ ನೀಡಿರಲಿಲ್ಲ. ಅದಕ್ಕೆ ಆಗ್ರಹಿಸಿ ಹಲವು ಬಾರಿ ಪ್ರತಿಭಟನೆಗಳನ್ನು ಮಾಡಿದ್ದರು. ಜನಪ್ರತಿನಿಧಿಗಳೂ ಈ ಬಗ್ಗೆ ಗಮನ ಹರಿಸಿಲ್ಲ ಎಂಬ ದೂರು ರೈತರದಾಗಿತ್ತು. ರಾಜ್ಯಪ್ರಾಂತ ರೈತ ಸಂಘ ಈ ಬಗ್ಗೆ ಖಂಡಿಸಿ, ಉಗ್ರಪ್ರತಿಭಟನೆ ಮಾಡುವ ಎಚ್ಚರಿಕೆಯನ್ನು ನೀಡಿತು. (8.5.09)

**ಏರ್‌ಪೋರ್ಟ್ ಭೂಸ್ವಾಧೀನ ಪ್ರಕ್ರಿಯೆಗೆ ವಿವಾದ :** ಬಳ್ಳಾರಿ ಚಾಗನೂರು ಪ್ರದೇಶದ ಏರ್‌ಪೋರ್ಟ್ ನಿರ್ಮಾಣಕ್ಕೆ ಸಲ್ಲಿಸಿದ್ದ ಅರ್ಜಿಗೆ ತಹಸೀಲ್ದಾರ್ ಕಛೇರಿಯಲ್ಲಿ ಯೋಜನೆ ವಿರೋಧಿಸಿ ಕೊಟ್ಟ ಅಹವಾಲು ಸ್ವೀಕಾರವಾಗಲಿದ್ದ ಸಂದರ್ಭ. ಆದರೆ ಫಲವತ್ತಾದ ಕೃಷಿಭೂಮಿಯನ್ನು ಕೊಡಲು ರೈತರು ಸಿದ್ಧವಿಲ್ಲ ಎಂದು ಮಲ್ಲಿಕಾರ್ಜುನ ರೆಡ್ಡಿ ಮತ್ತು ಬೆಂಬಲಿಗರ ಒಂದು ರೈತರು ಗುಂಪು ಹೇಳಿತು. ಇದಕ್ಕೆ ಪ್ರತಿಯಾಗಿ ಗ್ರಾಮದ ರೈತರ ಮತ್ತೊಂದು ಗುಂಪು ಪ್ರತಿ ಎಕರೆಗೆ 15ಲಕ್ಷ ರೂ. ನೀಡಿದರೆ ಭೂಮಿ ಕೊಡಲು ಸಿದ್ಧ ಎಂದಿತು. ಹೀಗಾಗಿ ಉಭಯ ತಂಡಗಳಲ್ಲಿ ವಾಗ್ವಾದವಾಗಿತ್ತು. ಯೋಜನೆಯ ವಿಷಯವು ನ್ಯಾಯಾಲಯದಲ್ಲಿ ಆಕ್ಷೇಪಣಾ ಅರ್ಜಿಗಳ ಸಲ್ಲಿಕೆಯಾಗಿದ್ದ ಕಾರಣ ವಿಚಾರಣೆಯ

ಹಂತದಲ್ಲಿದೆ. ಈ ಸಂದರ್ಭದಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಅಧಿಕಾರಿಗಳು ಅರ್ಜಿಗಳ ಅಹವಾಲು ಆಲಿಸಲು ಬಂದಿರುವುದು ನ್ಯಾಯಾಂಗ ನಿಂದನೆ ಎಂದು ಚಾಗನೂರು ರೈತ, ನ್ಯಾಯವಾದಿ ಮಲ್ಲಿಕಾರ್ಜುನ ರೆಡ್ಡಿ ಅವರ ಆರೋಪವಾಗಿತ್ತು. ಇದರಿಂದಾಗಿ ನ್ಯಾಯಾಲಯಕ್ಕೆ ಮತ್ತೊಮ್ಮೆ ಮೊರೆ ಹೋಗುವ ಬಗ್ಗೆ ತಿಳಿಸಿದರು. ಒಂದು ಕಡೆ ಅಂತಾರಾಷ್ಟ್ರೀಯ ಮಾದರಿ ವಿಮಾನ ನಿಲ್ದಾಣ ನಿರ್ಮಿತವಾಗ ಬೇಕೆಂಬುದು ಸರ್ಕಾರದ ನಿಲುವು. ಇನ್ನೊಂದೆಡೆ ಕೃಷಿ ಭೂಮಿಗಳಲ್ಲಿ ನಿರ್ಮಾಣ ಬೇಡ ಎಂಬುದು ಚಾಗನೂರು – ಸಿರವಾರ ರೈತರಂಥವರಿಂದ ತೀವ್ರ ವಿರೋಧ. ಈ ಸಂಗತಿ ರಾಜ್ಯಾದಂತ ಗಮನ ಸೆಳೆದಿತ್ತು. (15.10.09)

**ಆತ್ಮಹತ್ಯೆಯ ಮುಂದುವರಿದ ಪ್ರಕರಣಗಳು :** ಬಿಜಾಪುರದಲ್ಲಿ ಕಬ್ಬು ಸಕ್ಕರೆ ಕಾರ್ಖಾನೆಗೆ ಸಾಗಾಣಿಕೆ ಆಗದೆ ಉಳಿದಿರುವಲ್ಲಿ ಪರಿಹಾರ ಕೊಡದಿದ್ದರೆ ಜಿಲ್ಲಾಧಿಕಾರಿ ಕಛೇರಿ ಎದುರು ಸಾಮೂಹಿಕ ಆತ್ಮಹತ್ಯೆ ಮಾಡಿಕೊಳ್ಳುವ ಬೆದರಿಕೆಯು ಬೆಳೆಗಾರರಿಂದ ಆಯಿತು.

ಸಿಂದಗಿ ಸ್ಟೇಟ್ ಬ್ಯಾಂಕ್‌ನಲ್ಲಿ ಟ್ರಾಕ್ಟರ್ ಖರೀದಿಗಾಗಿ ಮತ್ತು ಚಿಕ್ಕ ಅಲ್ಲಾಪುರ ಗ್ರಾಮದ ಪ್ರಾಥಮಿಕ ಕೃಷಿಪತ್ತಿನ ಸಹಕಾರಿ ಬ್ಯಾಂಕ್‌ನಲ್ಲಿ ಬೆಳೆಸಾಲವನ್ನು, ಗ್ರಾಮದ ಸಾತಪ್ಪ ಬಸವಂತಪ್ಪ ಪೂಜಾರಿ (45) ಪಡೆದಿದ್ದ. ಸಾಲ ಮರು ಪಾವತಿಸಲಾಗಿರಲಿಲ್ಲ. ಬ್ಯಾಂಕ್ ನೋಟೀಸ್ ಬಂತು. ಮಾನಸಿಕವಾಗಿ ದಿಕ್ಕೆಟ್ಟು ವಿಷಸೇವಿಸಿ ಆತ್ಮಹತ್ಯೆ ಮಾಡಿಕೊಂಡ (16.10.07)

ಕರ್ನಾಟಕದಲ್ಲಿ 2007ರಲ್ಲಿ 2135ರೈತರು ಆತ್ಮಹತ್ಯೆ ಮಾಡಿಕೊಂಡರೆ ದೇಶಾದಾದ್ಯಂತ 16632ರೈತರು ಆತ್ಮಹತ್ಯೆ ಮಾಡಿಕೊಂಡರು. 2006ರಲ್ಲಿ 17060ರೈತರು ಆತ್ಮಹತ್ಯೆಯ ದಾರಿ ಸಾಗಿದ್ದರು. 1997ರಿಂದ 2008ರವರೆಗೆ 1,81,936 ಕೃಷಿಕರು ಆತ್ಮಹತ್ಯೆ ಮಾಡಿ ಕೊಂಡರು. ರೈತರ ಆತ್ಮಹತ್ಯೆ ಪ್ರಕರಣಗಲ್ಲಿ ರಾಜ್ಯವು ಎರಡನೆ ಸ್ಥಾನದಲ್ಲಿದೆ. ಮೊದಲ ಸ್ಥಾನದಲ್ಲಿ, ಮಹಾರಾಷ್ಟ್ರ. ಉಳಿದ ಆಂಧ್ರಪ್ರದೇಶ (1797), ಛತ್ತೀಸ್‌ಗಡ(1593), ಮಧ್ಯಪ್ರದೇಶ (1263), ಕೇರಳ (1263), ಪಶ್ಚಿಮ ಬಂಗಾಳ (1102), ಇವೆಲ್ಲ ಅನುಕ್ರಮಸ್ಥಾನದಲ್ಲಿವೆ. ಕರ್ನಾಟಕ ಕೇರಳ, ಪಶ್ಚಿಮ ಬಂಗಾಳದಲ್ಲಿ ರೈತರ ಆತ್ಮಹತ್ಯೆ ಪ್ರಕರಣಗಳು ಹೆಚ್ಚಿಗಿವೆ (15.12.2008).

ಸಿರಗುಪ್ಪ ತಾಲೂಕಿನ ಅರಳಿಗನೂರು ಗ್ರಾಮದ ರೈತ ಚೆಲವಾದಿ ವಿರೇಶಪ್ಪ ಬೆಳಗಾಗಿ ಲಕ್ಷಾಂತರ ರೂ.ಗಳ ಸಾಲ ಮಾಡಿದ್ದ. ನೆರೆ ಹಾವಳಿಯಿಂದ ಹೊಲದ

ಬೆಳೆ ಹಾಳಾಗಿದ್ದುದನ್ನು ಕಂಡು ಹತಾಶನಾಗಿ ವಿಷಸೇವಿಸಿದ. ಚಿಕಿತ್ಸೆಗಾಗಿ ಆಸ್ಪತ್ರೆಗೆ ಸೇರಿಸಿದರೂ ಬದುಕಲಿಲ್ಲ. ಹೀಗೆಯೇ ಬಳ್ಳಾರಿ ತಾಲೂಕಿನ ರೂಪನಗುಡಿ ಬಳಿಯ ತಿರುಮಲನಗರ ಕ್ಯಾಂಪ್‌ನ ರೈತ ಪೋತಪ್ಪ ಬೆಳೆಹಾನಿಗೊಂಡದ್ದನ್ನು ಕಂಡು ಕೃಷಿ ಉತ್ಪನ್ನ ಮಾರುಕಟ್ಟೆಯಲ್ಲಿ ವಿಷಸೇವಿಸಿ ಆತ್ಮಹತ್ಯೆ ಮಾಡಿಕೊಂಡಿದ್ದ (15.9.2009)

ಅಕ್ಟೋಬರ್ 2009ರಲ್ಲಿ ಧಾರವಾಡ, ಹಾವೇರಿ, ಗದಗ ಜಿಲ್ಲೆಗಳ ರೈತರಾದ ಎರೆಬೂದಿಹಾಳದ ನೀಲಪ್ಪ ಮ್ಯಾಗೇರಿ (54), ಮಹಮದ್ ಸಂಶಿ (50), ಚೆನ್ನವ್ವ ತಿಪ್ಪಣ್ಣ ಬ್ಯಾಹಟ್ಟಿ (40), ವಿರೂಪಾಕ್ಷಪ್ಪ ದೊಡ್ಡಮಲ್ಲಾಪುರ (51), ಬಸಪ್ಪ ಸುಣಗಾರ (38), ಸಿದ್ಧಲಿಂಗಪ್ಪ ಸಣ್ಣಪ್ಪನವರ (62), ಶೇಖರಪ್ಪ ನೀರಲಿ (56), ಮಹಾದೇವಪ್ಪ ಹಾನಗಲ್ (45) ರಂಗಪ್ಪ ತಾಲಿ (52), ಹೀಗೆ 9 ಜನ ಸರಣಿಯಲ್ಲಿ ನೆರೆಹಾವಳಿಯಿಂದ ಬೆಳೆ ಹಾಳಾಗಿದ್ದು ಕಂಡು ಆತ್ಮಹತ್ಯೆ ಮಾಡಿಕೊಂಡರು. ಮೆಣಸಿನ ಬೆಳೆ ಕೊಚ್ಚಿಹೋದದ್ದು ಕಂಡು ವಿಷಕುಡಿದವರು, ಸೊಯಾಬಿನ್ ಬೆಳೆ ಹಾಳಾದದ್ದನ್ನು ಕಂಡು, ಮಕ್ಕಳನ್ನು ಬಿಟ್ಟು ಮಲಪ್ರಭಾ ಬಲದಂಡೆ ಕಾಲುವೆಗೆ ಹಾರಿ ಪ್ರಾಣ ಬಿಟ್ಟಾಕೆ, ಸಾಲಮಾಡಿ 4 ಎಕರೆ ಲಾವಣಿ ಹಿಡಿದು ಮೆಣಸಿನ ಕಾಯಿ, ಶೇಂಗಾ ಬೆಳೆದು, ಅವು ನೆರೆಯಿಂದ ಕೊಳೆತಾಗ ನೇಣು ಹಾಕಿಕೊಂಡವರು ಈ ಪ್ರಕರಣದಲ್ಲಿದ್ದಾರೆ. ಈ ಹಿಂದೆ ನಡೆದ 183 ಪ್ರಕರಣಗಳಲ್ಲಿ 67ರೈತ ಕುಟುಂಬಗಳಿಗೆ ಮಾತ್ರ ಸರ್ಕಾರದ ಪರಿಹಾರ ದೊರೆತಿದೆ. ಈ ಸರಣಿ ಆತ್ಮಹತ್ಯೆ ನೆರೆಹಾವಳಿಯಿಂದಾಗಿ ಮಾರುಕಳಿಸಿರುವಲ್ಲಿ ನೆರೆಪರಿಹಾರ ಕಾರ್ಯವಲ್ಲದೆ, ಆತ್ಮಸ್ಥೈರ್ಯಕಳೆದುಕೊಂಡ ರೈತರಲ್ಲಿ ವಿಶ್ವಾಸ ತುಂಬುವ ಕಾರ್ಯ, ಭರವಸೆಗಳಿಗಷ್ಟೆ ಮಿತಿಗೊಳ್ಳದೆ ತುರ್ತುಕಾರ್ಯೋನ್ಮುಖಿ ವಾಗಬೇಕು ಸರ್ಕಾರ, ಎಂಬ ಕಳಕಳಿಯನ್ನು ಮಲ್ಲಿಕಾರ್ಜುನ ಸಿದ್ದಣ್ಣವರ ವ್ಯಕ್ತಮಾಡಿದ್ದಾರೆ (16.10.09).

ಬಾಗಲಕೋಟೆ ಜಿಲ್ಲೆ ಹುನಗುಂದ ತಾ. ಇಳಕಲ್ಲ ಗ್ರಾಮದ ಮಲ್ಲಯ್ಯ ರಾಚಯ್ಯ ಕಂದಕೂರ (35), ತನ್ನ ಹೊಲದಲ್ಲಿ ಕೆಲವರು ಆಡುಗಳನ್ನು ಮೇಯಿಸಲು ಬಿಟ್ಟಿದ್ದರು. ಅದನ್ನು ಕಂಡು ಕುರಿಕಾಯುವವರನ್ನು ಬೈದು ಅವರಲ್ಲಿಯ ಹುಡುಗನೊಬ್ಬನಿಗೆ ಏಟು ಕೊಟ್ಟು ಕಳುಹಿಸಿದ. ಕುರಿಕಾಯುವವರ ತಂಡದವರು ಬಂದು ಮಲ್ಲಯ್ಯನನ್ನು ಹೊಡೆದು ಕುಷ್ಟಗಿ ಠಾಣೆಯಲ್ಲಿ ದೂರು ಸಲ್ಲಿಸಿದರು. ಅದನ್ನು ತಿಳಿದು ಏಟು ತಿಂದ ಮಲ್ಲಯ್ಯನೂ ಕುಷ್ಟಗಿ ಠಾಣೆಗೆ ತಾನೂ ದೂರು ಸಲ್ಲಿಸಲು ಹೋದ ಅಲ್ಲಿಯ ಪೋಲೀಸರು ದೂರು ಸ್ವೀಕರಿಸಲಿಲ್ಲ. ಅದಕ್ಕಾಗಿ ಇಲಕಲ್ಲ ಠಾಣೆಗೆ ಬಂದು ದೂರು ಕೊಡಲು ಹೋದಾಗ, ಪ್ರಕರಣವನ್ನು ದಾಖಲು

ಮಾಡಿಕೊಳ್ಳಲಿಲ್ಲ. ಅದರಿಂದ ಹತಾಶನಾಗಿ ಠಾಣೆ ಎದುರೇ ವಿಷಸೇವಿಸಿ ಆತ್ಮಹತ್ಯೆಗೆ ಯತ್ನಿಸಿದ. ಪೋಲೀಸರು ತಕ್ಷಣವೆ ಆಸ್ಪತ್ರೆಗೆ ಸೇರಿಸಿದರೂ ಚಿಕಿತ್ಸೆ ಫಲವಾಗದೆ ಅವನು ಮೃತಪಟ್ಟ. ಅಂದರೆ ತನ್ನ ಹೊಲದ ಆಕ್ರಮಣದ ವಿರುದ್ಧ ಅರಕ್ಷಕರಲ್ಲಿ ದೂರು ಕೊಡ ಹೋದಾಗ ಅದನ್ನು ಸ್ವೀಕರಿಸಲಿಲ್ಲವಾಗಿ ರೈತ ಆತ್ಮಹತ್ಯೆ ಮಾಡಿ ಕೊಂಡದ್ದಕ್ಕೆ ರಕ್ಷಣೆ ಮಾಡಬೇಕಾದವರೇ ಕಾರಣವಾದದ್ದು ವಿಪರ್ಯಾಸ.

ರೈತರ ಆತ್ಮಹತ್ಯೆಯ ಪ್ರಕರಣಗಳು 1997ರಲ್ಲಿ 7236ರಷ್ಟು ಇದ್ದು. ಅದು ವರ್ಷವರ್ಷೇ ಹೆಚ್ಚುತ್ತಲೇ ಬಂದು ಮುಂದೆ 11,809ಕ್ಕೆ ಏರಿತ್ತು. 2005ರಲ್ಲಿ ಅದು ಸ್ವಲ್ಪಮಟ್ಟಿಗೆ ಇಳಿಮುಖವಾಗಿತ್ತು. ರೈತರ ಕಲ್ಯಾಣಕ್ಕಾಗಿ ಹಮ್ಮಿಕೊಂಡ ಸಾವಿರಾರು ಕೋಟಿರೂ.ಗಳ ಕಾರ್ಯಕ್ರಮಗಳು, ನಿರೀಕ್ಷಿಸಿದಷ್ಟು ಯಶಕಂಡಿಲ್ಲದಿರುವುದು. ಇಂದಿಗೂ ಆತ್ಮಹತ್ಯೆ ಪ್ರಕರಣಗಳು ಪೂರ್ತಿಯಾಗಿ ನಿಂತಿಲ್ಲವೆಂಬುದರ ಕುರುಹಾಗಿದೆ.

ಭಾರತದ ಆರ್ಥಿಕತೆಯ ಬೆನ್ನೆಲುಬಾದ ರೈತರ ಬದುಕು ಅಸಹನೀಯವಾಗುತ್ತಿದೆ. ಕೃಷ್ಯುತ್ಪನ್ನಗಳ ಮೇಲೆ ಬಹುರಾಷ್ಟ್ರೀಯ ಕಂಪೆನಿಗಳ ಹಿಡಿತ, ಉತ್ತಮ ಬೀಜ ಖರೀದಿಯಿಂದ ಹಿಡಿದು ಬೆಳೆದ ಬೆಳೆಯ ಮಾರಾಟದವರೆಗೂ ಶೋಷಣೆಯ ಕಾರಣವೂ ರೈತರ ಆತ್ಮಹತ್ಯೆಗೆ ಕಾರಣವಾಗಿವೆ. ರೈತರ ಆತ್ಮಹತ್ಯಾ ಪ್ರಕರಣಗಳು ಮಾನವ ಹಕ್ಕುಗಳ ಉಲ್ಲಂಘನೆಯ ಭಾಗವಾಗಬೇಕಾದರೆ ಮಾನವ ಹಕ್ಕು ಉಲ್ಲಂಘಟನೆಯ ವ್ಯಾಖ್ಯೆ ಬದಲಾಯಿಸಬೇಕು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಈ ಬಗ್ಗೆ ಗಂಭೀರ ಚಿಂತನೆ ನಡೆಸಬೇಕು. ಮಾನವ ಹಕ್ಕುಗಳ ಗಂಭೀರ ಉಲ್ಲಂಘನೆಯಾಗಿರುವಲ್ಲಿ ಮಾಧ್ಯಮಗಳು ರೈತರ ಆತ್ಮಹತ್ಯೆ ಪ್ರಕರಣಗಳಿಗೆ ಇತ್ತೀಚೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡುತ್ತಿಲ್ಲ. ರೋಚಕ ಸುದ್ದಿಗಳ ಆಡಂಬರದಲ್ಲಿ ರೈತರ ಆತ್ಮಹತ್ಯೆ ಪ್ರಕರಣಗಳು ಪತ್ರಿಕೆಗಳ ಒಳಪುಟ ಸೇರುತ್ತಿವೆ. 1997ರಿಂದ 2003ರವರೆಗೆ ದೇಶಾದ್ಯಂತ ಒಟ್ಟು 1.12ಲಕ್ಷ ರೈತರು ಆತ್ಮಹತ್ಯೆಗೆ ಒಡ್ಡಿಕೊಂಡಿದ್ದಾರೆ. ಇಂಥ ಆತಂಕಕಾರಿ, ಮಾನವ ಹಕ್ಕುಗಳ ಉಲ್ಲಂಘನೆಯಾಗಿರುವ ಆತ್ಮಹತ್ಯೆಗಳು ತಪ್ಪಬೇಕು ಎಂದು ವಿಧಾನ ಪರಿಷತ್ತಿನ ಪ್ರತಿಪಕ್ಷದ ನಾಯಕರಾಗಿದ್ದ ಎಚ್.ಕೆ. ಪಾಟೀಲ್ ಅವರು ನುಡಿದಿದ್ದುಂಟು. (17.11.2007).

**ವಿಷಯ 4 :** ಸಾಂತ್ವನ ಸ್ವರೂಪಗಳು

**ಕೃಷಿ ರಂಗದಲ್ಲಿ ಮೋಸ–ವಂಚನೆಗಳಿಂದ ರಕ್ಷಣೆ :** ಉತ್ತಮ ಗುಣಮಟ್ಟದ ಬೀಜ, ರಸಗೊಬ್ಬರ ಮತ್ತು ಕೀಟನಾಶಕಗಳು ದೊರಕಿಸಬೇಕಾದುದು ಸರ್ಕಾರದ ಉದ್ದೇಶ, ವಂಚಕರಾದರೋ ನಕಲಿ ರೂಪದಲ್ಲಿ ಇವನ್ನೆಲ್ಲ ಸಿದ್ಧಪಡಿಸಿ ಜಾಲರೂಪಿಸಿಕೊಂಡು ಮುಗ್ಧ ರೈತರ ಶೋಷಣೆಗೆ ಕಾರಣರಾಗಿದ್ದಾರೆ. ಇವರ ಸಂಖ್ಯೆ ಹೆಚ್ಚುತ್ತಿದ್ದು. ಅದಕ್ಕೆ ಕಡಿವಾಣ ಹಾಕಬೇಕಿದೆ. ಬೀಜಕಾಯ್ದೆ ಇದ್ದು ಕೇಂದ್ರದ ಅಧಿಕಾರದಲ್ಲಿದೆ. ಕೀಟನಾಶಕ, ರಸಗೊಬ್ಬರ ಪಡೆಯುವ ಸಂದರ್ಭದಲ್ಲಿ ಆಗುವ ಮೋಸವನ್ನು ತಡೆಯಲು ರೈತನ ನೆರವಿಗೆ ಬರುವವರಿಲ್ಲ. ಮೋಸಗಾರರಿಗೆ ಶಿಕ್ಷೆಯೂ ಇಲ್ಲ. ಇದಕ್ಕಾಗಿ ಜಿಲ್ಲಾ ಕೃಷಿ ಜಂಟಿ ನಿರ್ದೇಶಕರ ನಿರ್ದೇಶನದ ವಿಚಕ್ಷಣಾದಳದ ಮುಖ್ಯಸ್ಥರಾಗಿದ್ದರೂ ವಂಚಕರ ವಿರುದ್ಧ ಸಮರಸಾರಲು ಸ್ಥಳೀಯ ಮುಲಾಜುಗಳಿಂದ ಸಾಧ್ಯವಾಗುತ್ತಿಲ್ಲ. ಹೀಗಾಗಿ ಪ್ರತ್ಯೇಕ ಕಾರ್ಯಪಡೆ (permanent enforcement wing)ರೂಪಿಸಿ, ಅದು ಮಿಂಚಿನ ಧಾಳಿ ನಡೆಸಿ ಸ್ಥಳದಲ್ಲಿಯೇ ಪ್ರಕರಣ ದಾಖಲಿಸುವ ಅಧಿಕಾರವನ್ನು ನೀಡಲಾಗುತ್ತದೆ. ಒಕ್ಕಲು ಮಕ್ಕಳನ್ನು ಮೋಸ–ವಂಚನೆಯಿಂದ ರಕ್ಷಿಸಿ, ಗುಣಮಟ್ಟದ ಬೀಜ, ಗೊಬ್ಬರ ದೊರಕುವಂತೆ ಮಾಡಲಾಗುತ್ತದೆ. ಬೀಜ ಹಂಚಿಕೆ ಕೆಲಸದ ಮೇಲೆ ನಿಗಾ ಇಡಲಾಗಿದೆ. ಹಂಚಿಕೆ ಕೆಲಸ ಮುಗಿದ ಮೇಲೆ ಮೂರನೇ ಪಕ್ಷದಿಂದ ಅದನ್ನು ಪರಿಶೀಲಿಸಲಾಗುತ್ತದೆ. ರೈತ ಸಂಪರ್ಕ ಕೇಂದ್ರಗಳಿಂದ ರೈತರ ಹೊಲಗಳವರೆಗೆ ಈ ಪರಿಶೀಲನಾಕಾರ್ಯ ಗಂಭೀರವಾಗಿ ನಡೆಯುತ್ತದೆ. ರಿಯಾಯ್ತಿ ಬೀಜಯೋಜನೆ ರೈತರಿಗೆ ತಲುಪಿರುವ ಬಗ್ಗೆ ದೃಢೀಕರಿಸಿಕೊಳ್ಳುವುದೆ ಈ ಕ್ರಮದ ಹಿಂದಿರುವ ಉದ್ದೇಶವಾಗಿದೆ. ಎಂಬುದು ಸುದ್ಧಿಗಾರರಿಗೆ ಕೃಷಿ ಸಚಿವ ಬಂಡೆಪ್ಪ ಖಾಶೆಂಪೂರ ಅವರು ತಿಳಿಸಿದ ಮಾತು (2.7.07).

**ರೈತ ಸಂಘದ ಬಣಗಳ ವಿಲೀನ :** ರೈತ ಸಂಘವು ಬಣಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ಪ್ರೊ॥ ಎಂ.ಡಿ.ಎನ್ ಅವರ ಸಮಾಧಿ ಜಾಗ ಅಮೃತ ಭೂಮಿಯಲ್ಲಿ 3.2.2006ನೇ ಶುಕ್ರವಾರದಂದು ವಿಲೀನ ಪ್ರತಿಜ್ಞೆಗೈದು ಒಂದುಗೊಂಡವು. ಪ್ರೊ॥ ಎಂ.ಡಿ.ಎನ್ ನಿಧನರಾಗಿ ಎರಡನೇ ವರ್ಷದ ಸ್ಮರಣೆಯ ಸಂದರ್ಭದಲ್ಲಿ ಈ ಕಾರ್ಯಕ್ರಮ ಚಾಲನೆಗೊಂಡಿತು. ಇದರಲ್ಲಿ ಪಾಲ್ಗೊಂಡ ಸಾವಿರಾರು ರೈತ ಸಂಘದ ಕಾರ್ಯಕರ್ತರು ಒಟ್ಟಾಗಿರುವ ಪ್ರತಿಜ್ಞೆ ಮಾಡಿದರು. ರೈತ ಮುಖಂಡ ಬಸವರಾಜು ತಂಬಾಕೆ ಪ್ರತಿಜ್ಞಾವಿಧಿ ಬೋಧಿಸಿದರು. ಉಭಯ ಬಣಗಳ ಐದ್ವೈದು ಮಂದಿ ಸೇರಿ ಪದಾಧಿಕಾರದ ಶರತ್ತುಗಳಿಲ್ಲದೆ ಸೇರಿ ಒಗ್ಗಟ್ಟಾದ

ರೈತ ಸಂಘವನ್ನು ಬಲಿಷ್ಠವಾಗಿ ನಡೆಸಿಕೊಂಡು ಹೋಗಬೇಕೆಂದಾಗಿತ್ತು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ರೈತ ಪರ ನೀತಿಯನ್ನು ಅನುಸರಿಸುವಂತೆ ಮಾಡಬೇಕೆಂಬುದು ಈ ಒಗ್ಗಟ್ಟಿನ ಫಲಶ್ರುತಿ ವಾಕ್ಯವಾಗಿತ್ತು. ಈ ಕಾರ್ಯಕ್ರಮದ ಚಾಲನೆಯೆ ರೈತರಲ್ಲಿ ವಿಶ್ವಾಸ ತುಂಬಿತು. ರೈತರ ನಾಯಕರಾದ ಕೋಡಿಹಳ್ಳಿ ಚಂದ್ರಶೇಖರ್, ಕೆ.ಎಸ್. ಪುಟ್ಟಣ್ಣಯ್ಯ, ಚುಕ್ಕಿ ನಂಜುಂಡಸ್ವಾಮಿ ಮುಂತಾದವರು ಈ ಸಂದರ್ಭದಲ್ಲಿ ಮಾತನಾಡಿದರು (4.2.2006). ರೈತರ ಹಿತಕ್ಕಾಗಿ ರೈತರ ಸರ್ಕಾರ ಬರಬೇಕು. ಪದಾಧಿಕಾರಕ್ಕಾಗಿ ಈ ವಿಲೀನ ಅಲ್ಲ ಎಂಬ ಮಾತುಗಳೂ ಅವರಿಂದ ವ್ಯಕ್ತವಾಗಿದ್ದವು.

**ಕೃಷಿ ಪಂಡಿತ ಪ್ರಶಸ್ತಿಗಳನ್ನು** ಪ್ರಗತಿಪರ ರೈತರಿಂದ ನೀರಾವರಿ ಹಾಗೂ ಉತ್ತಮ ಸಾಗುವಳಿ ವಿಧಾನಕ್ಕಾಗಿ, ಸಾವಯವ ಮತ್ತು ನೈಜ ಕೃಷಿ ಸಾಧನೆಗಾಗಿ, ಸಾಂಪ್ರದಾಯಿಕ ಬೆಳೆಗಳಾದ ಕಾಫಿ, ಏಲಕ್ಕಿ ಹಾಗೂ ಇತರ ಕ್ಷೇತ್ರಗಳಲ್ಲಿ ಹೆಚ್ಚು ಇಳುವರಿ ಪಡೆದುದಕ್ಕಾಗಿ, ಸ್ವಾವಲಂಬಿ ಕೃಷಿ ಅಳವಡಿಕೆಯ ರೈತ ಮಹಿಳೆಗೆ, ಸಮಗ್ರ ಕೀಟ ನಿಯತ್ರಣ ಅಳವಡಿಕೆ, ತೆರೆದ ಕಾಲುವೆ ನಿರ್ವಹಣೆ, ಈ ಕ್ಷೇತ್ರಗಳಲ್ಲಿ ರೈತರು ಮಾಡಿದ ಸಾಧನೆಗಳನ್ನು ಅನುಲಕ್ಷಿಸಿ ಕೊಡಲಾಗುತ್ತಿದೆ. 'ಮಾನ್ಯ ಸಿ.ಬೈರೇಗೌಡ ಕೃಷಿ ಪಂಡಿತ ಪ್ರಶಸ್ತಿ' ಎಂಬ ಹೆಸರಿನಲ್ಲಿ 2005-06ನೇ ಸಾಲಿನಿಂದ ಮುಂದುವರಿಸಲು ಸರ್ಕಾರ ಉದ್ದೇಶಿಸಿತು. 2002ರಿಂದ 2005ರವರೆಗೆ 58 ರೈತ ಸಾಧಕರಿಗೆ ಈ ಪ್ರಶಸ್ತಿಯನ್ನು 10 ಸಾವಿರದಿಂದ 30ಸಾವಿರ ರೂ.ಗಳ ವರೆಗಿನ ನಿಧಿಯೊಡನೆ ನೀಡಲಾಗಿದೆ. ಅಲ್ಲದೆ ಪ್ರತಿವರ್ಷ 'ರೈತರ ದಿನಾಚರಣೆ'ಯನ್ನು ಸರ್ಕಾರವು ಆಚರಿಸುವ ತೀರ್ಮಾನ ಕೈಗೊಂಡಿತು. 2009ರ ಹೆಬ್ಬಾಳದ ಗಾಂಧಿ ಕೃಷಿ ವಿಜ್ಞಾನ ಕೇಂದ್ರದ ಕೃಷಿ ಮೇಳದಲ್ಲಿ 17ಜಿಲ್ಲೆಗಳ 34 ಒಕ್ಕಲು ಮಕ್ಕಳ ಸಾಧನೆಗೆ ಅತ್ಯುತ್ತಮ ರೈತ, ರೈತ ಮಹಿಳೆ ಪ್ರಶಸ್ತಿ ನೀಡಲಾಯಿತು.

**ಚೆಕ್‌ಡ್ಯಾಮ್ ನಿರ್ಮಾಣ :** ಆಂಧ್ರಪ್ರದೇಶದ ರಂಗಾರೆಡ್ಡಿ ಜಿಲ್ಲೆಯ ಸರೂರ್ ನಗರ ಮಂಡಲ ವ್ಯಾಪ್ತಿಯ 'ನಾದೇರ್ ಗುಲ್' ಗ್ರಾಮದ ಉದಾಹರಣೆ ಯಾಗಿರಬಹುದು. ಆದರೆ ಕೃಷಿ ದೃಷ್ಟಿಯಿಂದ ವಿಶಿಷ್ಟ ಮಾದರಿ ಉದಾಹರಣೆಯಾಗಿ ನಿಲ್ಲುವ ಕಾರಣ ಇಲ್ಲಿ ಪ್ರಸ್ತಾಪಿಸಲಾಗಿದೆ. 16ಸಾವಿರ ಜನಸಂಖ್ಯೆಯ ಈ ಗ್ರಾಮದ ಕೆರೆಗಳು ಹೂಳು ತುಂಬ ಬಯಲಾಗಿದ್ದುವು. ಬೆಳೆ ಬೆಳೆಯುವುದಿರಲಿ ಕುಡಿವ ನೀರಿಗೂ ಪರದಾಡುವ ಸ್ಥಿತಿ ಇಲ್ಲಿಯದಾಗಿತ್ತು. ಇದು 2005ಕ್ಕೂ ಮುನ್ನಿನ ಮಾತು. ಸ್ಥಳೀಯ ಸರ್ಕಾರೇತರ ಸಂಸ್ಥೆ ಸ್ಮರಣ್ ಮತ್ತು ಹಿಂದೂಸ್ಥಾನ್

ಕೋಕೋಕೋಲಾ ಬೀವರೇಜಸ್ ಲಿಮಿಟೆಡ್ ಹಾಗೂ ನಾದೇರ್ ಗುಲ್ **ಗ್ರಾಮಸ್ಥರು ಸೇರಿ ಶ್ರಮದಾನ ಮಾಡಿ ಚೆಕ್‌ಡ್ಯಾಮ್ ನಿರ್ಮಿಸಿದರು.** ಈ ಡ್ಯಾಮ್ ನಿರ್ಮಾಣದಿಂದ 24ಸಾವಿರ ಕಿಲೋಲೀಟರ್ ನೀರು ಸಂಗ್ರಹ ಮಾಡಲಾಗಿದೆ. ನೂರಕ್ಕೂ ಹೆಚ್ಚಿನ ರೈತ ಕುಟುಂಬಗಳು ವಾರ್ಷಿಕವಾಗಿ ಎರಡು ಬೆಳೆ ತೆಗೆಯುತ್ತಿವೆ. ತರಕಾರಿಗಳನ್ನು ಬೆಳೆಯಲಾಗುತ್ತಿದೆ. ಸಾವಿರ ಎಕರೆ ಕೃಷಿ ಸರಾಗವಾಗಿ ನಡೆಯುತ್ತಿದೆ. 160ಕ್ಕೂ ಹೆಚ್ಚಿನ ಭಾವಿಗಳಲ್ಲಿ ಅಂತರ್ಜಲ ವೃದ್ಧಿಸಿದೆ. ವಾರ್ಷಿಕವಾಗಿ ಇಲ್ಲಿ ಬೀಳುವ ಮಳೆ 600 ಮಿಲಿಮೀಟರ್. ಇಂದು ಚೆಕ್ ಡ್ಯಾಮ್ ನಿರ್ಮಾಣದ ನಂತರ ಮಾರ್ಪಾಟುಗೊಂಡ ಈ ಗ್ರಾಮ ಹಸಿರಿನಿಂದ ಮೈದುಂಬಿ ನಿಂತಿದೆ. ಕೆರೆಗಳು ನೀರಿನಿಂದ ಸಮೃದ್ಧಿಗೊಂಡಿವೆ. ಸುತ್ತಮುತ್ತಲಿನ ತೆರೆದ ಭಾವಿ ಮತ್ತು ಕೊಳವೆ ಭಾವಿಗಳಲ್ಲಿ ನೀರು ವಿಪುಲವಾಗಿ ಲಭ್ಯವಾಗುತ್ತಿದೆ. ಸಮುದಾಯದ ಅಭಿವೃದ್ಧಿಗೆ ಕಂಪೆನಿಯೂ ತನ್ನ ಚಟುವಟಿಕೆಯನ್ನು ವಿಸ್ತರಿಸಿಕೊಂಡಿರುವುದು ವರದಿಗೊಂಡಿದೆ (ಕ.ಪ್ರಭ; 14.10.2009); ಇದು ರೈತರ ಬದುಕಿನ ಸಂಕಷ್ಟಗಳನ್ನು ತವಿಸುವಂಥ ಸಾಂಸ್ಥಿಕ ಸಾಂತ್ವನ ಕ್ರಿಯೆ ಆಗಿದೆ.

**ಮೆಕ್ಕೆಜೋಳ ಬೆಂಬಲ ಬೆಲೆ, ಲಾಭ :** ಬೆಂಬಲ ಬೆಲೆಗೆ ಖರೀದಿ ಆದಾಗ ಸರ್ಕಾರಕ್ಕೆ ಹೊರೆ ಎಂಬ ಭಾವನೆಗೆ ಎದುರಾಗಿ ಕೊಪ್ಪಳ ಜಿಲ್ಲೆಯಲ್ಲಿ ಅದಕ್ಕೆ ಲಾಭವಾದ ಸಂಗತಿ ತಿಳಿದು ಬಂದಿದೆ. 2005–06ನೇ ಸಾಲಿನಲ್ಲಿ ಬೆಂಬಲಬೆಲೆಗೆ ಖರೀದಿ ಮಾಡಿ ಮಾರಿ ಬಂದ ಹಣ 3397699 ರೂ. ಲಾಭವಾಗಿತ್ತು. 33 ಲಕ್ಷರೂ. ಅಧಿಕಲಾಭವದು. ಈ ಹಣವನ್ನು ಗೋದಾಮು ವೆಚ್ಚ, ಹಮಾಲಿ ವೆಚ್ಚಕ್ಕೂ ಖರ್ಚುಮಾಡಲಾಗಿದೆ. ಕರ್ನಾಟಕ ಸ್ಟೇಟ್ ಕೋ ಆಪರೇಟಿವ್ ಮಾರ್ಕೆಟಿಂಗ್ ಫೆಡೆರೇಷನ್ ಮೂಲಕ ಮೆಕ್ಕೆಜೋಳ ಬೆಂಬಲ ಬೆಲೆ ಖರೀದಿ ಕೇಂದ್ರದಿಂದ 37846 ಕ್ವಿಂಟಾಲ್ ಖರೀದಿ ಮಾಡಲಾಗಿ ರೈತರಿಗೆ ಬಹಳ ಅನುಕೂಲವಾಯಿತು. ಮಾರುಕಟ್ಟೆಯಲ್ಲಿ ವಿಪರೀತ ದರ ಏರಿಕೆಯಾಗಿತ್ತು. ಸರ್ಕಾರ ಖರೀದಿ ಮಾಡಿದ ಮೆಕ್ಕೆಜೋಳವನ್ನು ಟೆಂಡರ್ ಮೂಲಕ ಮಾರಾಟ ಮಾಡಲಾಗಿ ಮೇಲ್ನೂಚಿತ ಲಾಭ ಒದಗಿತು. 2007ರ ಉತ್ತಮ ಮಳೆಯ ಕಾರಣ ಮೆಕ್ಕೆಜೋಳ ಬಂಪರ್ ಬೆಳೆ ಬಂದಿರುವುದು ಸಹಜ. ಅಂತಾಗಿ ಮಾರುಕಟ್ಟೆಯಲ್ಲಿ ಮೆಕ್ಕೆಜೋಳದ ದರ ಕುಸಿತವಾಗಲಾರಂಭಿಸಿರುವಲ್ಲಿ ಸರ್ಕಾರ ತುರ್ತಾಗಿ ಬೆಂಬಲ ಬೆಲೆ ಖರೀದಿ ಕೇಂದ್ರ ತೆಗೆಯುವ ಅವಶ್ಯಕತೆ ಇದೆ ಎಂಬ ಸಲಹೆ ಸೋಮರೆಡ್ಡಿ ಅಳವಂಡಿ ಅವರದಾಗಿತ್ತು (17.10.07).

**ವೆನಿಲ್ಲಾ ಬೆಳೆ ಮತ್ತು ಕೃಷಿ ಋಷಿ ಪರಿವಾರ :** 'ವೆನಿಲ್ಲಾ' ಬೆಳೆಯನ್ನು 'ಹಸಿರು ಚಿನ್ನ' ಎಂದು ಕರೆಯಲಾಗುತ್ತಿತ್ತು. ಅದರ ಅಭಿವೃದ್ಧಿ ಕಂಡ ಮತ್ಸರಿಗರು ಕೃತಕ ಮಾರುಕಟ್ಟೆ ವೈಪರೀತ್ಯ ಸೃಷ್ಟಿಸಿ, ಅದರ ದರ ಕುಸಿತಕ್ಕೆ ಕಾರಣರಾದರು. ರೈತರು ಕಂಗಾಲಾದರು. ಅಂತಾಗಿ ವೆನಿಲ್ಲಾ ಹಾಗೂ ಇತರ ಸಾಂಬಾರ ಬೆಳೆಗಾರರ ಹಿತ ಕಾಪಾಡಲು ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲೂಕಿನಲ್ಲಿ '**ಕೃಷಿ ಋಷಿ ಪರಿವಾರ**' ಎಂಬ ಸಂಘಟನೆ ಹುಟ್ಟಿಕೊಂಡಿತು. ಅಡ್ಡಾದಿಡ್ಡಿಯಾಗಿ ವೆನಿಲ್ಲಾವನ್ನು ಮಾರುವಂತೆ ಮಾಡುವ ಕುತಂತ್ರಗಳಿಗೆ ಅದು ಎದುರು ನಿಂತಿತು. ಈ ಪರಿವಾರದ ಆಯ್ದ ರೈತರ ನಿಯೋಗವೊಂದು ಐರೋಪ್ಯ ದೇಶಗಳ ಸಾಂಬಾರ ಪದಾರ್ಥಗಳ ಖರೀದಿದಾರರ ಭೇಟಿಗೆ ಪ್ರಯತ್ನವನ್ನು ಮಾಡಿತು. ವೆನಿಲ್ಲಾ ಸಂಸ್ಕರಣೆಯ ತರಬೇತಿ ರೈತರ ಸ್ವ–ಸಹಾಯ ಗುಂಪುಗಳಿಗೆ ಮಾರ್ಗದರ್ಶನ, ರೈತರು ಇಚ್ಛಿಸಿದಲ್ಲಿ ಅವರಿಂದಲೇ ವೆನಿಲ್ಲಾ ಮಾರಾಟ, ಹಸಿವೆನಿಲ್ಲಾ ಸಂಸ್ಕರಣೆಗೆ ನಿಗದಿತ ಸಂಸ್ಕರಣಾ ಶುಲ್ಕ ಇತ್ಯಾದಿಗಳ ವ್ಯವಸ್ಥೆ ಮಾಡುವ ಗುರಿ ಅದಕ್ಕಿತ್ತು. ಹೀಗೆ ಖಾಸಗಿ ರೈತ ಹಿತಾಕಾಂಕ್ಷಿ ಪರಿವಾರಗಳು ಬೆಲೆ ಕುಸಿತ ತಡೆದು ಸಾಂತ್ವನ ಕ್ರಿಯೆಯಲ್ಲಿ ಪಾಲ್ಗೊಂಡ ಉದಾಹರಣೆ ಇದಾಗಿದೆ (6.11.07)

**ಸಾವಯವ ಕೃಷಿ ಪದ್ಧತಿ ಮತ್ತು ಅಜೋಲ ಬೆಳೆ :** ಇದು ನೀರಿನ ಪಾಚಿ ಜಾತಿಗೆ ಸೇರಿದ ನೀರಿನ ಮೇಲೆ ತೇಲುವ ಒಂದು ಪುಟ್ಟ ಜರೀಗಿಡದಂಥ ಸಸ್ಯ. ಜಾನುವಾರುಗಳ ಹಾಲಿನ ಇಳುವರಿ, ಭತ್ತದ ಅಧಿಕ ಇಳುವರಿ ಇದರ ಸೇವನೆಯಿಂದ ಹೆಚ್ಚುವ ಸಾಮರ್ಥ್ಯ ಉಳ್ಳಂಥದ್ದು. ಸಾವಯವ ಕೃಷಿ ಒಂದು ಇಡಿಯಾದ ಕೃಷಿ ವ್ಯವಸ್ಥೆ; ಎಲ್ಲ ಬೆಳೆಗಳಿಗೂ, ಎಲ್ಲ ಮಣ್ಣುಗಳಿಗೂ, ಎಲ್ಲ ವಾತಾವರಣಗಳಲ್ಲೂ ಅಳವಡಿಸಬಹುದಾದ ಈ ಸಾವಯವ ಕೃಷಿ ಪದ್ಧತಿಯ ಒಂದು ಭಾಗ ಅಜೋಲ ಬೆಳೆಯುವಿಕೆ. 2004ರಲ್ಲಿ ಸರ್ಕಾರ ಸಾವಯವ ಕೃಷಿ ನೀತಿಯನ್ನು ಜಾರಿಗೊಳಿಸಿತು. ಈ ಪದ್ಧತಿಯಲ್ಲಿ ಆಳವಾದ ಉಳುಮೆ, ಸಕಾಲದಲ್ಲಿ ಬಿತ್ತನೆ, ಕೊಟ್ಟಿಗೆ ಗೊಬ್ಬರ ಬಳಕೆ, ಎರೆಹುಳು/ ಕೋಳಿ ಗೊಬ್ಬರ/ ಇತರ ಪ್ರಾಣಿಜನ್ಯ ಗೊಬ್ಬರ ಇತ್ಯಾದಿ ಸಾವಯವ ಗೊಬ್ಬರ ಹಾಗೂ ಹಸಿರೆಲೆಗೊಬ್ಬರ ಬಳಕೆ, ಬ್ಯಾಕ್ಟೀರಿಯಾ ಸಂಪದ್ಭರಿತ ದ್ರವರೂಪಿ ಸಾರವಾದ 'ಜೀವಾಮೃತದ' ಬಳಕೆ, ನೈಸರ್ಗಿಕ ಪೀಡೆ ನಿರ್ವಹಣೆ, ಜಲಸಂರಕ್ಷಣೆ, ತ್ಯಾಜ್ಯ ಸಂರಕ್ಷಣೆ, ತ್ಯಾಜ್ಯ ನಿರ್ವಹಣೆ ಇವೆಲ್ಲ ಇದರಲ್ಲಿ ಇವೆ.

ಅಜೋಲ ಬೆಳೆ ಒಂದು ಉತ್ತಮ ಪಶುಆಹಾರ. ಜಾನುವಾರುಗಳಿಗೆ ಹಿಂಡಿ ಜೊತೆ ಸೇರಿಸಿ ಕೊಡಬಹುದು. ಇದರಿಂದ ಹಾಲಿನಲ್ಲಿ ಕೊಬ್ಬಿನ ಅಂಶ

ಹೆಚ್ಚಿ, ಮೂರು ಕಟ್ಟೆಯಲ್ಲಿ ಉತ್ತಮ ಬೆಲೆ ಸಿಗುತ್ತದೆ. ಜೈವಿಕ ಗೊಬ್ಬರವಾಗಿಯೂ ಬಳಕೆಗೆ ಬರುತ್ತದೆ. ರೈತರಿಗೆ ಇದರ ಬಗ್ಗೆ ಆಸಕ್ತಿ ಮೂಡಿರುವುದು, ತಾಲೂಕು ಮಟ್ಟದಲ್ಲಿ ಸಾವಯವ ಕೃಷಿ ಪ್ರಯೋಗವನ್ನು ಕೈಗೊಂಡಿರುವ ಸ್ವಯಂಸೇವಾ ಸಂಸ್ಥೆಗಳು ಅಜೋಲ ಬೆಳೆಯನ್ನು ಜನಪ್ರಿಯಗೊಳಿಸುತ್ತಿರುವುದು ರೈತರಿಗೆ ಒದಗಿದ ನೆಮ್ಮದಿಯ ಕುರುಹೇ ಆಗಿದೆ. ಈ ಬೆಳೆಯಲ್ಲಿ ಅಜೋಲ ಫಿಲಿಕಾಯ್ಡಸ್ – ಮೆಕ್ಸಿಕಾನ್ – ಕರೋಲಿನಿಯಾನ್ ಎಂಬ ಪ್ರಮುಖ ತಳಿಗಳ ಸಹಿತವಾಗಿ ಆರು ತಳಿಗಳಿವೆ(17.11.07).

**ಕೃಷಿ ಮೇಳ** : ಹೆಬ್ಬಾಳದ ಗಾಂಧಿ ಕೃಷಿ ವಿಜ್ಞಾನ ಕೇಂದ್ರದ (ಜಿಕೆವಿಕೆ) ಆಶ್ರಯದಲ್ಲಿ ವಾರ್ಷಿಕ ಕೃಷಿಮೇಳವು 19.11.2009ನೇ ಗುರುವಾರ ರೈತರಿಗೂ ಅನುಕೂಲಿಸುವಂತೆ ಏರ್ಪಟ್ಟು, ಕೃಷಿಕ್ಷೇತ್ರದ ವೈಜ್ಞಾನಿಕವಾದ, ತಂತ್ರಜ್ಞಾನದ ನೂತನ ತಳಿಯ ಆವಿಷ್ಕಾರಗಳನ್ನು ವೃತ್ತಿಪರ ರೈತರಿಗೆ, ವಿದ್ಯಾರ್ಥಿಗಳಿಗೆ ತಲುಪಿಸುವ ಕೆಲಸವಾಯಿತು. ಈ ಮೇಳದಲ್ಲಿ ರೈತರಿಂದ ರೈತರಿಗಾಗಿ ಚರ್ಚೆ, ಸಂವಾದ, ವಿಜ್ಞಾನಿಗಳಗೋಷ್ಠಿ, ಹೊಸ ತಳಿಗಳ ಪ್ರದರ್ಶನ, ಆಧುನಿಕ ಕೃಷಿ ಯಂತ್ರೋಪಕರಣಗಳು ಕೂಡ ಎಲ್ಲರ ಕಣ್ಣಿಗೆ ಬೀಳುವಂತಾಯಿತು. ಸಾವಯವ ಕೃಷಿಪ್ರದರ್ಶನ, ವಿವಿಧ ಸಹಾಯ ಸಂಘಗಳ ಮಳಿಗೆಯಲ್ಲಿ ಗೃಹ ಕೈಗಾರಿಕೆ, ಕರಕುಶಲ ವಸ್ತುಗಳ ಮಾರಾಟ, ಪ್ರದರ್ಶನ, ಕೊನೆಯದಿನ ರೈತ ಪ್ರಶಸ್ತಿ ಪುರಸ್ಕಾರ ಕುರಿತಾಗಿ ಮಾಹಿತಿಗಳ ವಿವರಣೆ ಅಲ್ಲಿ ಒದಗಿತ್ತು.

ಜೈವಿಕ ಅನಿಲಸ್ಥಾವರಗಳಿಂದ ಬಲೂನ್ ಮಾದರಿ ಚೀಲಕ್ಕೆ ಅನಿಲ ಪಂಪ್ ಮಾಡುವ, ಅಗತ್ಯವಿದ್ದೆಡೆ ಕೊಂಡೊಯ್ಯಬಲ್ಲ ಸಂಚಾರಿ ಜೈವಿಕ ಇಂಧನ ತಂತ್ರಜ್ಞಾನ (ಮೊಬೈಲ್ ಬೈಯೋಗ್ಯಾಸ್)ದ ಪ್ರದರ್ಶನ, ಬೆಳೆಕುಯ್ಲು ಮತ್ತು ಬತ್ತ ಬೇರ್ಪಡಿಸುವ ಗಂಟೆಯೊಂದಕ್ಕೆ ಎಕರೆ ಬೆಳೆ ಕಟಾವು ಮಾಡುವ ಯಂತ್ರವನ್ನು ಪ್ರದರ್ಶನಕ್ಕಿಡಲಾಗಿತ್ತು. 20.11.2009ನೇ ಶುಕ್ರವಾರದಂದು ನಡೆದ ರೈತರಿಂದ ರೈತರಿಗಾಗಿ ಚರ್ಚೆಯಲ್ಲಿ ರೈತರು ಪರಸ್ಪರ ಪೂರಕವಿರುವ ಸಮಗ್ರ ಕೃಷಿ ಪದ್ಧತಿ ಅಳವಡಿಸಿಕೊಂಡರೆ ಮಾತ್ರ ನೆಮ್ಮದಿಯ ಬದುಕು ಎಂಬುದು ದೊಡ್ಡ ಬಳ್ಳಾಪುರ ತಾ. ಅಂತರವಳಿ ಗ್ರಾಮದ ರೈತ ಮಹಿಳೆ ಚಿನ್ನಮ್ಮ ಅವರ ಅಭಿಪ್ರಾಯವಾಗಿತ್ತು. ಹಿರಿಯೂರು ತಾಲೂಕಿನ ಹರಿಯಬ್ಬೆ ಗ್ರಾಮದ ಬಿ.ಎಸ್.ರಘುನಾಥ್ ಅವರು ರೈತರು ಬೆಳೆದ ಉತ್ಪನ್ನಗಳ (ತರಕಾರಿ) ಸಾಗಾಣಿಕೆ ಸಂದರ್ಭದಲ್ಲಿ ಮಾರುವ ಮುನ್ನವೆ ಮೂರನೇ ಒಂದು ಭಾಗ ಹಾಳಾಗುತ್ತದೆ. ಇದಾಗದಂತೆ

ನೋಡಿಕೊಳ್ಳುವುದಷ್ಟೇ ಅಲ್ಲ, ಬೆಳೆದ ಉತ್ಪನ್ನಗಳಿಗೆ ಲಾಭಾದಾಯಕ ಬೆಲೆ ಬರುವಂತೆ ನೀತಿ ನಿರೂಪಕರು ಹಾಗೂ ಸರ್ಕಾರ ಕ್ರಮ ಕೈಗೊಳ್ಳಬೇಕು ಎಂದರು. ಗಂಧದ ಮರದ ಬೆಳವಣಿಗೆಗೆ ರೈತರೆಲ್ಲರ ಒಗ್ಗಟ್ಟಿನ ಸಹಕಾರವಿದ್ದದೆ ಹಣದ ಲಾಭ, ರಕ್ಷಣೆಯ ನೆಮ್ಮದಿ ದೂರಕುತ್ತದೆ. ಎಂಬುದು ತರೀಕೆರೆಯ ರೈತ ವಿಶುಕುಮಾರ್ ಅವರ ಸಲಹೆ ಆಗಿತ್ತು. ಬೆಂಗಳೂರು ಅಮೃತಹಳ್ಳಿ ಗ್ರಾಮದ ಅಯಪ್ಪ ಮಸಗಿ ನೀರಿನ ಮಹತ್ವ ಮತ್ತು ಸಂರಕ್ಷಣೆ ಕುರಿತಂತೆ, ಅಯನೂರು ಶಿವಾನಂದಪ್ಪ ಕೃಷಿಮಾರುಕಟ್ಟೆ ಕುರಿತಂತೆ ವಿವರಿಸಿದರು. ಹಾಸನ ಜಿಲ್ಲೆಯ ರೈತ ಮಹಿಳೆ ಹೇಮಾ ಅನಂತ ಅವರು ಮತ್ತು ದ್ರಾಕ್ಷಿ ಬೆಳೆಗಾರ ದೇವನಹಳ್ಳಿ ತಾ. ಹಾರೋಹಳ್ಳಿ ಮಂಜುನಾಥ್ ಅವರು ಸಾವಯವ ಕೃಷಿಯ ಮಹತ್ವದ ಬಗ್ಗೆ ಮಾತನಾಡಿದರು. (22.11.09) ಹೀಗೆ ರೈತರ ಅನುಭವಗಳಲ್ಲಿ, ಸಾಂತ್ವನ ರೇಖೆಗಳ ಆಯಾಮಗಳೂ ದಟ್ಟವಾಗಿ ಕಾಣಬರುತ್ತಿತ್ತು. ಅತ್ಯುತ್ತಮ ರೈತ; ರೈತ ಮಹಿಳೆ ಪ್ರಶಸ್ತಿಗಳನ್ನು 17ಜಿಲ್ಲೆಗಳ 34ಒಕ್ಕಲುಮಕ್ಕಳಿಗೆ ವಿಶ್ವವಿದ್ಯಾಲಯ ಕೊಟ್ಟಿದ್ದು, ಒಕ್ಕಲುಮಕ್ಕಳ ಸಾಧನೆಗೆ ಸಂದ ಮಾನ್ಯತೆ ಆಗಿತ್ತು.

ಕೃಷಿ ವಿಶ್ವವಿದ್ಯಾಲಯದಿಂದ ಏರೋಬಿಕ್ಸ್ ಭತ್ತ, ಹೊಸ ರಾಗಿ ತಳಿಗಳು ಮೂಡಿಗೆರೆ ಏಲಕ್ಕಿ ಚಕ್ಕೋತ, ಸ್ವರ್ಣಹಲಸು ಇತ್ಯಾದಿ ತಳಿಗಳು ಬಿಡುಗಡೆಗೊಂಡವು. ಪ್ರಾತ್ಯಕ್ಷಿಕೆಗಳಿಂದ ಮಾಹಿತಿಯನ್ನು ನೀಡಲಾಯಿತು. ಸುಮಾರು 50 ಸಾವಿರಕ್ಕೂ ಮೀರಿದ ಹೆಚ್ಚಿನ ಸಂಖ್ಯೆಯಲ್ಲಿ ರೈತರು, ಶಾಲಾಮಕ್ಕಳು ಕೃಷಿ ಮೇಳದಲ್ಲಿ ಆರಂಭದಲ್ಲಿಯೆ ಪಾಲ್ಗೊಂಡಿದ್ದರು. ಗಮನಾರ್ಹವಾಗಿತ್ತು. ನೆರೆ ಮತ್ತು ಬರ ಪರಿಸ್ಥಿತಿಯ ಸಂದರ್ಭಗಳಲ್ಲಿ ರೈತರು ಪರ್ಯಾಯ ಬೆಳೆಗಳನ್ನು ಬೆಳೆಯುವ ರೀತಿಯನ್ನು ಪ್ರಾತ್ಯಕ್ಷಿಕೆಯ ಮೂಲಕ ಮನದಟ್ಟು ಮಾಡಲಾಯಿತು. ಉದ್ಘಾಟನಾ ಭಾಷಣ ಸಂದರ್ಭದಲ್ಲಿಯೆ ಕರ್ನಾಟಕ ಕೃಷಿ ಕಮಿಷನ್ ಅಧ್ಯಕ್ಷ, ಡಾ. ಎಸ್.ಎ. ಪಾಟೀಲ್ ಮಾತನಾಡುತ್ತ ಕೃಷಿ ವಿಶ್ವವಿದ್ಯಾಲಯಗಳಲ್ಲಿ ರೈತರು ಮತ್ತು ಕೃಷಿ ವಿಜ್ಞಾನಿಗಳನ್ನೊಳಗೊಂಡಂತೆ ರೈತರಿಗೆ ಪ್ರತ್ಯೇಕ ಅಧ್ಯಯನ ಪೀಠ, ಎಂಜನಿಯರಿಂಗ್ ಘಟಕಗಳ ನಿರ್ಮಾಣವಾಗಬೇಕು ಎಂದು ಒತ್ತಾಯಿಸಿದುದು ಸ್ವಾಗತಾರ್ಹವಾಗಿತ್ತು. ರೈತರಿಗಾಗಿ ನಡೆಸಿದ ಚರ್ಚಾಗೋಷ್ಠಿಯಲ್ಲಿ ಸಾವಯುವ ಕೃಷಿ, ರಾಜ್ಯ ಕೃಷಿ ಉತ್ಪನ್ನಗಳ ಸಂಸ್ಕರಣೆ ಮತ್ತು ನಿಗಮದ ಚಟುವಟಿಕೆ, ಕೃಷಿ ಮಾರುಕಟ್ಟೆ ಕುರಿತಾಗಿಯು ಚರ್ಚೆ ಹಮ್ಮಿಕೊಂಡಿದ್ದು, ಅದರಲ್ಲಿ ರೈತರು ತೋರಿದ ಅನುಭವದ ಜಾಗೃತಿ ವಿಶೇಷವೆನಿಸಿತ್ತು.

**ಮಠೀಯ ಸಂಸ್ಥೆಗಳ ರೈತಕಾಳಜಿ, ಇತಿಹಾಸ ಹಾಗೂ ಸಾಹಿತ್ಯ ಸಂಸ್ಥೆಗಳ ರೈತ ಪರ ಸ್ಪಂದನ :** ಬಾಳೆಹೊನ್ನರಿನಲ್ಲಿ ಶ್ರೀಮದ್ರಂಭಾಪುರಿ ಪೀಠವು ಕ್ಷೇತ್ರನಾಥ ಶ್ರೀ ವೀರಭದ್ರಸ್ವಾಮಿ ಮಹಾರಥೋತ್ಸವ ಹಾಗೂ ಶ್ರೀ ಜ. ರೇಣುಕಾಚಾರ್ಯ ಜಯಂತಿ ಯುಗಮಾನೋತ್ಸವ ಸಂದರ್ಭದಲ್ಲಿ ಉತ್ಸವದ ಅಂಗವಾಗಿ ಕೃಷಿ ಮೇಳ ಹಮ್ಮಿಕೊಂಡು ವಿಚಾರ ಗೋಷ್ಠಿಗಳನ್ನು ನಡೆಸಿದೆ. ಈ ಸಂದರ್ಭಕ್ಕೆ ಬರುವ ಸಹಸ್ರಾರು ರೈತರಿಗೆ ಕೃಷಿಯ ಹೊಸ ಶೋಧಗಳು ಹಾಗೂ ರೈತ ಸಂಬಂಧೀ ಮಾಹಿತಿಗಳ ಪೂರಣವಾಗುವುದು ಮಠಗಳಿಂದ ನಡೆಯುವ ರೈತ ಸಾಂತ್ವನ ಸ್ವಾಗತಾರ್ಹ ಕಾರ್ಯಕ್ರಮವಾಗಿ ಆರಂಭಗೊಂಡಿದೆ. ಕಾಫಿ ಬೆಳೆಗೆ ತಗಲುವ ಕಾಯಿಕೊರಕದ ನಿಯಂತ್ರಣ, ಮಣ್ಣಿನ ಸಂರಕ್ಷಣೆ, ತೋಟಗಾರಿಕೆ ಬೆಳೆಗಳು, ರೈತರಿಗೆ ಸರ್ಕಾರದ ಸವಲತ್ತುಗಳು ಸಾವಯುವ ಕೃಷಿ, ಅಡಿಕೆ ಬೆಳೆ, ಸಂರಕ್ಷಣೆ, ಪಶುಸಮಗೋಪನೆ, ರೈತ ಹೋರಾಟ ಮತ್ತು ಸಂಘಟನೆ ಕುರಿತು 17.3.2008ರಂದು ಹಾಗೂ 26.2.2010ರಂದು ಉಪನ್ಯಾಸ ಕಾರ್ಯಕ್ರಮಗಳು ನಡೆದದ್ದು ರೈತೋಪಯೋಗಿ, ಮಾಹಿತಿಯ ನೀಡಿಕೆ, ರೈತ ಜಾಗೃತಿ, ಸಾಂತ್ವನದ ಕಾರ್ಯಕ್ರಮ ಎಂದೇ ಎದ್ದು ಕಾಣುತ್ತದೆ. ಹೀಗೆಯೇ ಸಿದ್ಧಗಂಗಾಮಠದ ಕೃಷಿ ಮೇಳ, ವಸ್ತುಪ್ರದರ್ಶನ ಸುತ್ತೂರು ಮಠದ ಕೃಷಿ ಉಪನ್ಯಾಸ ಕಾರ್ಯಕ್ರಮ, ತರಬೇತಿ ಕಾರ್ಯಕ್ರಮಗಳು ಆದಿಚುಂಚನ ಗಿರಿ ಮಹಾಸಂಸ್ಥಾನ ಮಠದ ಕೃಷಿ ಸಾಹಿತ್ಯ ಪ್ರಕಟನೆ ಹಾಗೂ ಕೃಷಿ ಉಪನ್ಯಾಸ ಕಾರ್ಯಕ್ರಮಗಳಿದ್ದುವು. ಇವಲ್ಲದೆ, ಜಿಲ್ಲೆ ಮತ್ತು ರಾಜ್ಯ ಸಾಹಿತ್ಯ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ಕೃಷಿ ಹಾಗೂ ರೈತರ ಬದುಕಿನ ಕುರಿತಾದ ವಿಷಯಗಳು ಸಮಸ್ಯೆಗಳು, ಪರಿಹಾರ ಸೂಚನೆಗಳು ಗೋಷ್ಠಿಗಳಲ್ಲಿ ಮಂಡಿತವಾಗುತ್ತಿರುವುದು ಇವೆಲ್ಲ ಸಾಹಿತ್ಯಕ ಸಂಸ್ಥೆಗಳ ರೈತ ಸಾಂತ್ವನದ ಸ್ಪಂದನದ ದ್ಯೋತಕವಾಗಿದೆ. ಗದಗದಲ್ಲಿ 19,20,21ನೇ ಫೆಬ್ರುವರಿ 2010ರಲ್ಲಿ ನಡೆದ 76ನೆಯ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ 'ಬೇಸಾಯ ಮತ್ತು ಬದುಕು' ಎಂಬ ಗೋಷ್ಠಿ ಏರ್ಪಾಡಾಗಿತ್ತು. ಗೋಷ್ಠಿಯಲ್ಲಿ ಜಾಗತೀಕರಣದ ಮತ್ತು ರೈತ ಹೋರಾಟ, ಬೇಸಾಯ ಮತ್ತು ಮಾಹಿತಿ, ರೈತ ಕೂಲಿಕಾರ್ಮಿಕರು, ಹಸಿವು, ದುಡಿಮೆ ಮತ್ತು ಲಾಭಕೋರತನ, ಎಂಬ ವಿಷಯಗಳ ಮೇಲೆ ಪ್ರಬಂಧೋಪನ್ಯಾಸಗಳು ನಡೆದುವು. 2010ರ ಜನವರಿ 20,21,ರಂದು ಕೊಡಗು ಜಿಲ್ಲೆಯ ಶನಿವಾರ ಸಂತೆಯಲ್ಲಿ ನಡೆದ 'ಕೊಡಗಿನ ರೈತರ ಸವಾಲುಗಳು' ಗೋಷ್ಠಿಯಲ್ಲಿ ರೈತರ ಬದುಕು ಮತ್ತು ಬವಣೆ, ಸಾವಯುವ ಪದ್ಧತಿಯ ಅನುಕೂಲಗಳು, ಕೃಷಿಯಲ್ಲಿ ಪರ್ಯಾಯ ಚಿಂತನೆಗಳು, ಎಂಬ ವಿಷಯಗಳಲ್ಲಿ

ಉಪನ್ಯಾಸಗಳಾದುವು. ಸಾಹಿತ್ಯಕ ಸಂಸ್ಥೆಗಳು ಸಮಾಜ ಮುಖಿಯಾಗಿ ರೈತ ಜಾಗೃತಿ ಕುರಿತು ತೋರಿರುವ ಕಾಳಜಿಗಳು ಹೀಗೆ ವ್ಯಕ್ತವಾಗಿವೆ. ಬಾದಾಮಿಯ ಶಿವಯೋಗ ಮಂದಿರದ ಶತಮಾನೋತ್ಸವ ಸಂದರ್ಭದಲ್ಲಿ ಸಾವಯವ ಕೃಷಿಕರ ಸಮಾವೇಶಕ್ಕೂ ಆದ್ಯತೆ ದೊರೆತಿದೆ (9.4.2010). ನವದೆಹಲಿಯ ಭಾರತೀಯ ರೈತ ಸಂಘಟನೆಗಳ ಒಕ್ಕೂಟ ಹಾಗೂ ಕರ್ನಾಟಕ ರಾಜ್ಯ ಕಬ್ಬು ಬೆಳೆಗಾರರ ಸಂಘದ ಆಶ್ರಯದಲ್ಲಿ ರಾಜ್ಯ ಮಟ್ಟದ ಭತ್ತದ ಬೆಳೆ ರೈತರ ಕಾರ್ಯಾಗಾರವನ್ನು ಮೈಸೂರಿನಲ್ಲಿ 8.11.2008ರಲ್ಲಿ ಹಮ್ಮಿಕೊಳ್ಳಲಾಗಿತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಭತ್ತದ ಸ್ಥಿತಿಗತಿ, ಭತ್ತ ಬೆಳೆಯುವ ನೂತನ ತಂತ್ರಜ್ಞಾನ, ಭತ್ತದ ತಳಿಗಳ ಹೆಚ್ಚು ಉತ್ಪಾದನೆ ಮಾರುಕಟ್ಟೆ ಮತ್ತು ಬೆಂಬಲ ಬೆಲೆ ಕುರಿತಾಗಿ ಗೋಷ್ಠಿ ಪ್ರಬಂಧೋಪಾನ್ಯಾಸಗಳ ಮೂಲಕ ಕಾರ್ಯಾಗಾರವು ರೈತ ಪ್ರಮುಖರಿಗೆ ಮಾಹಿತಿ ನೀಡಿತು. ಇದು ರೈತ ಸಂಘಟನೆಗಳು ರೈತ ಸಾಂತ್ವನ ಪ್ರಕ್ರಿಯೆಯಲ್ಲಿ ಪಾಲ್ಗೊಂಡ ಬಗೆಗಳಲ್ಲಿ ಒಂದಾಗಿತ್ತು.

ಸೋಂದಾ ಸ್ವರ್ಣವಲ್ಲೀ ಮಠವು 6.5.2009, 7.5.2009ರಂದು ಕೃಷಿ ಜಯಂತಿಯನ್ನು ಹಮ್ಮಿಕೊಂಡಿತ್ತು. ಹಳ್ಳಿಗಳಲ್ಲಿ ಕೃಷಿಯೋಗ್ಯ ಜಮೀನು ಇದ್ದರೂ ಬೇಸಾಯದತ್ತ ನಿರ್ಲಕ್ಷವಾಗಿದೆ. ಭತ್ತ, ಅಡಕೆ, ಕಬ್ಬು, ತೆಂಗು, ಇತ್ಯಾದಿ ಬೆಳೆ ಕೃಷಿಯಲ್ಲೂ ಹಿನ್ನೆಡೆ ಕಾಣಬರುತ್ತಿದೆ. ಉದ್ಯಮದ ಉತ್ಪನ್ನಗಳಿಗಿರುವಂತೆ ಕೃಷಿ ಉತ್ಪನ್ನಗಳ ಬೆಲೆಯನ್ನು ರೈತರೇ ನಿರ್ಧರಿಸಿ ಮಾರುಕಟ್ಟೆಗೆ ಕಳುಹಿಸುವ ವ್ಯವಸ್ಥೆ ಆಗಬೇಕು. ವಾಣಿಜ್ಯ ಬೆಳೆಗಳತ್ತವೇ ಹೆಚ್ಚು ಗಮನ ಹೋಗಿ ಆಹಾರ ಬೆಳೆಗಳ ಕೊರತೆಯಾಗುವ ಆತಂಕವಿದೆ. ಅಂತಾಗಿ ಆಹಾರ ಬೆಳೆಯನ್ನು ಪ್ರೋತ್ಸಾಹಿಸುವುದು ಸಾವಯವ ಕೃಷಿಗೆ ಒತ್ತು ನೀಡುವುದು ಕೃಷಿ ಜಯಂತಿಯ ಉದ್ದೇಶವಾಗಿತ್ತು. ರೈತರಿಗೆ ತಜ್ಞರಿಂದ ಮಾರ್ಗದರ್ಶನ, ಸಮಾಲೋಚನೆ, ಪ್ರಾತ್ಯಕ್ಷಿಕೆ, ಕೃಷಿ ಉತ್ಪನ್ನ ಹಾಗೂ ಉಪಕರಣಗಳ ಪ್ರದರ್ಶನ, ಕೃಷಿ ಸಾಧನೆಯ ವ್ಯಕ್ತಿ ಹಾಗೂ ಸಂಘಟನೆಗೆ, ಸಂಪೂರ್ಣ ಕೃಷಿ ಕುಟುಂಬವೊಂದಕ್ಕೆ ಪುರಸ್ಕಾರ ಕಾರ್ಯಕ್ರಮಗಳನ್ನು ಈ ಸಂದರ್ಭದಲ್ಲಿ ಹಮ್ಮಿಕೊಳ್ಳಲಾಗಿತ್ತು.

ಅಂತಾರಾಷ್ಟ್ರೀಯ ಘನತೆಯ ಸಾಂಸ್ಕೃತಿಕ ಐತಿಹಾಸಿಕ ಸಂಸ್ಥೆ ಬೆಂಗಳೂರಿನ ಮಿಥಿಕ್ ಸೊಸೈಟಿಯು ತನ್ನ ಶತಮಾನೋತ್ಸವ ವರ್ಷದಲ್ಲಿ 28.2.2009 ರಿಂದ 1.3.2009ರ ವರೆಗೆ 'ಭಾರತೀಯ ಸಂಸ್ಕೃತಿ ಮತ್ತು ಕೃಷಿ' ಎಂಬ ವಿಷಯ ಕುರಿತು ವಿಚಾರ ಸಂಕಿರಣವನ್ನು ನಡೆಸಿತು. ವಿಚಾರ ಸಂಕಿರಣದಲ್ಲಿ ರೈತರು, ಕೃಷಿ

ವಿಜ್ಞಾನಿಗಳು, ಕೃಷಿ ಆರ್ಥಿಕ ತಜ್ಞರು. ಕೃಷಿ ವಿಶ್ವವಿದ್ಯಾಲಯದ ಕುಲಪತಿಗಳು ಪಾಲ್ಗೊಂಡು ಪ್ರಬಂಧ ಮಂಡನೆ ಮಾಡಿದರು. ಪ್ರತ್ಯೇಕವಾಗಿ ವ್ಯವಸ್ಥೆ ಮಾಡಿದ್ದ ರೈತ ಸಂವಾದದಲ್ಲಿಯೂ ಪಾಲ್ಗೊಂಡರು. ಪ್ರಾಚೀನ ಕೃಷಿ ಪರಂಪರೆ, ಸಸ್ಯೋತ್ಪನ್ನಗಳು ಆಧುನಿಕ ಕೃಷಿಯ ಆಯಾಮಗಳು, ಪಶುಸಂಗೋಪನೆಯ ಆರ್ಥಿಕ ಮೂಲಗಳು ಕೃಷಿ ವಾಣಿಜ್ಯ ನೆಲ-ಜಲ ಹವಾಮಾನ ಕುರಿತಂತೆ ಪ್ರಬಂಧಗಳು ಮಂಡಿತವಾದುವು ಅದನ್ನು ಪುಸ್ತಕ ರೂಪದಲ್ಲಿಯೂ ಹೊರತರಲಾಯಿತು. ಇಂಥ ಸಂದರ್ಭಗಳಲ್ಲಿ ಇರುವ ರೈತರ ಪಾಲುದಾರಿಕೆ ಅವರಿಗೆ ಆತ್ಮವಿಶ್ವಾಸ ತರುವುದಲ್ಲದೆ, ಸಾಂತ್ವನ ನೆಲೆಯೂ ವಿಸ್ತರಿಸುತ್ತದೆ. ಕೃಷಿವಿಜ್ಞಾನ ಮತ್ತು ನೆಲದ ಅನುಭವದ ಪಾಂಡಿತ್ಯಗಳ ವಿನಿಮಯ ಕೃಷಿ ಸೌಹಾರ್ದವೇ ಸಾಂತ್ವನದ ನೆಲೆ ಎಂಬುದಕ್ಕೆ ರೈತ ಸಂವಾದ ಕಾರ್ಯಕ್ರಮ ಸಾಕ್ಷಿಯಾಗಿತ್ತು.

**ರೈತರ ಆತ್ಮಹತ್ಯೆ ಪ್ರಕರಣಗಳ ಇಳಿಮುಖ :** ರಾಜ್ಯದಲ್ಲಿ 1997ರ ಸಮಯದಿಂದ ಹೆಚ್ಚಾಗಿ ಆರಂಭಗೊಂಡ ರೈತರ ಸರಣಿ ಆತ್ಮಹತ್ಯೆಗಳು ಈಚೆಗಿನ ವರ್ಷಗಳಲ್ಲಿ ಇಳಿಮುಖವಾದಂತಿವೆ. 2000-01 ಸಾಲಿನಲ್ಲಿ 2360 ರೈತರು, ಆತ್ಮಹತ್ಯೆ ಮಾಡಿಕೊಂಡಿದ್ದಾರೆ. 2005-06ರಲ್ಲಿ 163, 2006-07ರಲ್ಲಿ 343, 2007-08ರಲ್ಲಿ 340 ರೈತರು 2008-09ನೇ ಸಾಲಿನಲ್ಲಿ 185 ರೈತರ ಆತ್ಮಹತ್ಯೆ ಪ್ರಕರಣಗಳು ವರದಿಯಾಗಿವೆ. ಚಿಕ್ಕಬಳ್ಳಾಪುರ, ಉಡುಪಿ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ಚಾಮರಾಜನಗರ, ಹೀಗೆ ರಾಜ್ಯದ ಆರು ಜಿಲ್ಲೆಗಳಲ್ಲಿ 2008ರ ಏಪ್ರಿಲ್ ಸೆಪ್ಟೆಂಬರ್ ಅವಧಿಯಲ್ಲಿ ರೈತರ ಆತ್ಮಹತ್ಯೆಗಳು ನಡೆದಿಲ್ಲದಿರುವುದು, ಹಿಂದಿನ ಆರು ವರ್ಷಗಳಿಗೆ ಹೋಲಿಸಿದರೆ ಸಾಂತ್ವನಗೊಂಡ ರೈತರ ವಿಷಯವೆನಿಸುವಂತಿದೆ. ಆತ್ಮಹತ್ಯೆಯ ಪಿಡುಗು ತವಿಯಲು, ಕೇಂದ್ರ ಸರ್ಕಾರ ಪ್ರಕಟಿಸಿದ ಪ್ರಧಾನಮಂತ್ರಿಗಳ ವಿಶೇಷ ಪ್ಯಾಕೇಜ್‌ನಲ್ಲಿ ಆಂಧ್ರಕ್ಕೆ 9650 ಕೋಟಿ ರೂ, ಕರ್ನಾಟಕಕ್ಕೆ 2689 ಕೋಟಿ ರೂ, ಮಹಾರಾಷ್ಟ್ರಕ್ಕೆ 3873 ಕೋಟಿ ರೂ, ಕೇರಳಕ್ಕೆ 765 ಕೋಟಿ ರೂ ಪರಿಹಾರವನ್ನು 2007ರಲ್ಲಿ ಘೋಷಿಸಲಾಗಿತ್ತು. 2009ರ ವರೆಗೆ ಇದ್ದ ಪ್ರಧಾನಿ ಪ್ಯಾಕೇಜ್ ಅನ್ನು 2011ರ ವರೆಗೆ ಕೇಂದ್ರ ಸರ್ಕಾರ ವಿಸ್ತರಿಸಿದೆ. ರಾಜ್ಯ ಸರ್ಕಾರ ಈ ಬಾಬಿನಲ್ಲಿ 1900 ಕೋಟಿ ರೂಗಳನ್ನು ವೆಚ್ಚಮಾಡಿದೆ. ಕ.ವ್ರಾ. ರವಿಶಂಕರ್ ಅವರನ್ನುವಂತೆ ಆತ್ಮಹತ್ಯಾ ಪ್ರಕರಣಗಳು ಇಳಿಮುಖವಾಗಿರುವುದು ನೆಮ್ಮದಿತರುವ ಸುದ್ದಿ ಎನಿಸುತ್ತದೆ. (25.11.08)

2009ರ ಜನವರಿ 26ರಂದು ಸಾವಯವ ರೈತರ ಬೃಹತ್ ಸಮಾವೇಶವನ್ನು ನಡೆಸುವಲ್ಲಿ ಯಾವುದೇ ಕಾರಣಕ್ಕೂ ಆತ್ಮಹತ್ಯೆ ಮಾಡಿಕೊಳ್ಳುವುದಿಲ್ಲ. ಭೂದೇವಿಗೆ ರಾಸಾಯನಿಕ ಗೊಬ್ಬರವನ್ನು (ವಿಷ) ಉಣಿಸುವುದಿಲ್ಲ. ಜೀವಮಾನ ಪೂರ್ತಿ ಸಾವಯವ ಕೃಷಿಯನ್ನೆ ಮಾಡುತ್ತೇವೆ ಎಂಬ ಪ್ರತಿಜ್ಞಾ ವಿಧಿಯನ್ನು ರಾಜ್ಯದ ಸುಮಾರು 50 ಸಾವಿರ ಸಾವಯವ ಕೃಷಿಕರು ಮಾಜಿ ರಾಷ್ಟ್ರಪತಿ ಡಾ. ಅಬ್ದುಲ್ ಕಲಾಂ ಅವರಿಂದ ಬೋಧಿಸಿಕೊಂಡು ಸ್ವೀಕರಿಸುತ್ತಾರೆ ಎಂದು 15.1.2009ರ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪನವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಸಾವಯವ ಕೃಷಿ ಮಿಷನ್ ಅಧ್ಯಕ್ಷ ಅ ಶ್ರೀ. ಆನಂದ್ ತಿಳಿಸಿದ ವಿಷಯವಾಗಿತ್ತು. (26.1.2009ರಂದು ಅದರಂತೆ 50 ಸಾವಿರ ರೈತರು ವಿಧಾನಸೌಧದ ಮುಂಭಾಗದಲ್ಲಿ ಪ್ರತಿಜ್ಞೆಯನ್ನು ಸ್ವೀಕರಿಸಿದರು. ಡಾ. ಕಲಾಂ ಅದಕ್ಕೆ ಸಾಕ್ಷಿ ಆದರು) ಅದು ರೈತ ಸಾಂತ್ವನಕ್ಕೆ ಪ್ರಜ್ಞಾಜಾಗೃತಿಯ ಸಂಕೇತವಾಗಿತ್ತು ಎನ್ನಬಹುದು. 'ರೈತರ ದತ್ತು' ಯೋಜನೆಯೂ ಅಂದು ಚಾಲನೆಗೊಂಡದ್ದು ವಿಶಿಷ್ಟವೆನಿಸುತ್ತದೆ. ರೈತನನ್ನು ದತ್ತು ತೆಗೆದುಕೊಳ್ಳುವುದೆಂದರೆ ಅವನಲ್ಲಿ ಉತ್ಪನ್ನವಾದ ಸಾವಯುವ ಪದಾರ್ಥಗಳನ್ನು 'ಸಾವಯವ ಕೃಷಿ ಪರಿವಾರ' ಸಂಘಟನೆಯು ನಿಗದಿಪಡಿಸಿದ ಮೊತ್ತಕ್ಕೆ ದತ್ತು ಪಡೆದವರೇ ಅಗತ್ಯವಿದ್ದಷ್ಟು ಕೊಳ್ಳುವುದು, ಸಾಧ್ಯವಾದಷ್ಟು ರೈತರ ಕೊರತೆಗಳನ್ನು ಪೂರೈಸುವುದು ಸಹಕಾರ ನೀಡುವ ರೀತಿಯನ್ನು ಚಿಂತಿಸುವುದು, ಗ್ರಾಹಕ–ರೈತರ ನಡುವೆ ನೇರ ಸಂಪರ್ಕ ಏರ್ಪಡಿಸುವುದು ಎಂದೆಲ್ಲ ಆಗಿದೆ. ಶ್ರೀಕಾಂತ್ ಭಟ್ ಅವರ ರೀತ್ಯಾ 'ಸಾವಯವ ಕೃಷಿ ಪರಿವಾರ'ವೊಂದು ಸಾವಯವ ರೈತರ ಸಂಘಟನೆ, ಇದರಲ್ಲಿ 'ದತ್ತು' ಎಂದರೆ ಧೈರ್ಯಗೆಡದಿರು, ರೈತ ನಾವಿದ್ದೇವೆ ಎಂದು ತೋರಿಸುವ ಪ್ರಯತ್ನವಾಗಿದೆ. (16.1.2009). ಅಂದರೆ ರೈತರಲ್ಲಿ ಆತ್ಮವಿಶ್ವಾಸ ಮಾನಸಿಕ ಸ್ಥೈರ್ಯ ಪ್ರಜ್ಞಾ ಪ್ರಾಬಲ್ಯಕ್ಕೆ ಅವಕಾಶವಾಗುತ್ತದೆ ಎನ್ನಬೇಕು. ಈ ಸಾವಯವ ಕೃಷಿ ಮೆಷಿನ್, ಆರಂಭಿಸಲಿರುವ ಕರೆಕೇಂದ್ರ ಕಾಲ್‌ಸೆಂಟರ್ ಕೇವಲ ಮಾರುಕಟ್ಟೆಯ ಮಾಹಿತಿಯಷ್ಟೇ ಅಲ್ಲದೆ ರೈತ ಸಲಹೆಗಾರನಾಗಿಯೂ ಸೇವೆಸಲ್ಲಿಸಲು ಉದ್ದೇಶಿಸಿದೆ. ರಾಜ್ಯ ಸಾವಯವ ಕೃಷಿ ಮಿಷನ್ ಮತ್ತು ಕಾರ್ಪೊರೇಷನ್ ಬ್ಯಾಂಕ್–ಎರಡೂ ಸಂಸ್ಥೆಗಳು, ಕೃಷಿಗೆ ಹಾಗೂ ರೈತರಿಗೆ ಪ್ರೋತ್ಸಾಹ ಕೊಡುವ ದಿಸೆಯಲ್ಲಿ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ನವರ ಸಮ್ಮುಖದಲ್ಲಿ ಬ್ಯಾಂಕಿಂಗ್ ಸೌಲಭ್ಯದ ಒಪ್ಪಂದ ಮಾಡಿಕೊಂಡಿವೆ. ಅದರ ರೀತ್ಯಾ ಸಾವಯವ ಕೃಷಿ ಮೆಷಿನ್ ಯೋಜನೆ ಅನುಷ್ಠಾನಕ್ಕೆ ಆದ್ಯತೆಯ ಬ್ಯಾಂಕಾಗಿ ಕಾರ್ಯ ನಿರ್ವಹಣೆ, ಸಾವಯವ ಕೃಷಿ ಚಟುವಟಿಕೆಗಳಿಗೆ ಸಾಲ ನೀಡಿಕೆ, 176 ತಾಲೂಕುಗಳಲ್ಲಿ ಬೀಜ ಕೇಂದ್ರ ಮಾರುಕಟ್ಟೆ

ವ್ಯವಸ್ಥೆ; ಕಂಪ್ಯೂಟರ್ ತರಬೇತಿ ಕೇಂದ್ರ, ಗ್ರಂಥಾಲಯ ಮತ್ತು ಗೋಶಾಲೆಗಳನ್ನು ತೆರೆಯಲು ಬ್ಯಾಂಕ್ ನೆರವು ಇತ್ಯಾದಿಗಳು ಸೇರಿದೆ. ಇದಕ್ಕೆ ಸಹಕಾರಿಯಾಗಿ ಮಿಷನ್‌ನ ಘಟಕಗಳು ಕಾರ್ಪೊರೇಷನ್ ಬ್ಯಾಂಕ್‌ನಲ್ಲಿಯೆ ವಹಿವಾಟು ನಡೆಸುವುದು ಒಪ್ಪಂದದಲ್ಲಿ ಸೇರಿದೆ. ಗ್ರಾಮೀಣ ಪ್ರದೇಶದ ಜನರಿಗೆ ಬ್ಯಾಂಕಿಂಗ್ ಸೌಲಭ್ಯ ಒದಗಿಸಲು ಸಂಚಾರಿ ಬ್ಯಾಂಕಿಂಗ್ ವ್ಯವಸ್ಥೆಯನ್ನು ಜಾರಿಗೆ ಕಾರ್ಪೊರೇಷನ್ ಬ್ಯಾಂಕ್ ತಂದಿದೆ. ಸದ್ಯ 200 ಗ್ರಾಮಗಳಿಗಿರುವ ಈ ಸೌಲಭ್ಯವನ್ನು 1200 ಗ್ರಾಮಗಳಿಗೆ ವಿಸ್ತರಿಸುವ ಗುರಿಯನ್ನು ಅದು ಹೊಂದಿದೆ. (7.5.09)

**ಅರುಣೋದಯ :** ಕರ್ನಾಟಕ ವಿದ್ಯುತ್ ನಿಗಮದಿಂದ ರೈತರಿಗಾಗಿಯೇ ರೂಪುಗೊಂಡ ಸೌರಶಕ್ತಿಯ ಬಳಕೆಯ ನವಯೋಜನೆ 'ಅರುಣೋದಯ' – ಸೌರ ಶಕ್ತಿ ವಿದ್ಯುತ್ ಒದಗಿಸುವಂತೆ ಯೋಜನೆ ಆಗಿದೆ. ವಾರ್ಷಿಕ 4 ದಶಲಕ್ಷ ಯೂನಿಟ್ ವಿದ್ಯುತ್ ಉತ್ಪಾದನೆಯ ಗುರಿ ಹೊಂದಿರುವ ಈ ಯೋಜನೆಯಲ್ಲಿ 10 ಹೆಚ್‌ಪಿಯ ಸುಮಾರು 400 ನೀರಾವರಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಒದಗಿಸಬಹುದು, ಸುಮಾರು 1200 ಎಕರೆಯನ್ನು ನೀರಾವರಿಗೆ ಒಳಪಡಿಸಬಹುದು. ಭತ್ತ, ಗೆಡ್ಡೆಕೋಸು, ಕ್ಯಾರೇಟ್, ರೇಷ್ಮೆಯನ್ನು ಬೆಳೆಯುಬಹುದು. ಹಸಿರುಮನೆ ಅನಿಲ ಮಾಲಿನ್ಯವನ್ನು ತಪ್ಪಿಸಿ ಪರಿಸರ ಸಂರಕ್ಷಣೆ ಮಾಡಬಹುದು. 75 ಕೋಟಿ ರೂಗಳ ಈ ಯೋಜನೆ 9 ತಿಂಗಳಲ್ಲಿ ಪೂರ್ಣಗೊಳಿಸಬೇಕೆಂದು ತೀರ್ಮಾನಿಸಿ ಕೋಲಾರ ಜಿಲ್ಲೆ ಬಂಗಾರಪೇಟೆ ತಾ. ಎಳೇಸಂದ್ರ ಗ್ರಾಮದಲ್ಲಿ 9.1.2009ರಂದು ರಾಜ್ಯದ ಮುಖ್ಯಮಂತ್ರಿಗಳು ಶಿಲಾನ್ಯಾಸವನ್ನು ನೆರವೇರಿಸಿದರು.

**ಕೃಷಿ ಮಾರುಕಟ್ಟೆಗೆ ನಬಾರ್ಡ್ ನೆರವು :** ಬಹುರಾಷ್ಟ್ರೀಯ ಕಂಪೆನಿಗಳು ಹಾಗೂ ದೇಶೀಯ ಕಂಪೆನಿಗಳು ರೈತರ ರಕ್ಷಣೆಗೊಂಡಿರುವ ಕೃಷಿ ಆಹಾರ ಉತ್ಪನ್ನಗಳ ಮಾರುಕಟ್ಟೆಯ ಮೇಲೆ ಅಂಕೆಯನ್ನು ಹೆಚ್ಚಿಸಿಕೊಳ್ಳುವ ಪ್ರಯತ್ನಗಳು ಕಾಣಬಂದಿದೆ. ಹೀಗಾಗಿ ರಾಷ್ಟ್ರೀಯ ಗ್ರಾಮೀಣಾಭಿವೃದ್ಧಿ ಬ್ಯಾಂಕ್ (ನಬಾರ್ಡ್) ಕೃಷ್ಯುತ್ಪನ್ನ ಆಧಾರಿತ ಮಾರುಕಟ್ಟೆ ವ್ಯವಸ್ಥೆಗೆ ನಿಧಿ ನೆರವು ನೀಡಿ ರೈತರ ರಕ್ಷಣೆಗೆ ಮುಂದಾಗಿದೆ. ಆರ್.ಎಂ.ಸಿ, ಎಪಿಎಂಸಿಗಳಿಂದ ರೈತರ ದುಡಿಮೆಗೆ ಪ್ರತಿಫಲವನ್ನು ಸೂಕ್ತವಾಗಿ ದೊರಕಿಸಲಾಗುತ್ತಿಲ್ಲ. ರೈತರು ಮತ್ತು ಗ್ರಾಹಕರು ಇಬ್ಬರಿಗೂ ಅನುಕೂಲವಾಗುವಂತೆ ಕೃಷಿ ಸಾಲ ಒದಗಿಸುವ ಸಹಕಾರಿ ಸಂಘಗಳ ಮೂಲಕವೋ, ಇಲ್ಲವೆ ಅದೇ ಬಗೆಯಲ್ಲಿ ಪರ್ಯಾಯ ಕೃಷಿ ಆಹಾರ ಉತ್ಪನ್ನಗಳ ಮಾರಾಟ ಜಾಲ ನಿರ್ಮಿಸುವುದರ ಮೂಲಕವೋ ಯೋಜನೆಯನ್ನು ಆಗುಮಾಡುವ

ಉದ್ದೇಶವಿದೆ. ದೇಶಾದ್ಯಂತ ಇರುವ ಸಹಕಾರಿ ಬ್ಯಾಂಕ್‌ಗಳಿಗೆ ಮೂಲಧನ ಒದಗಿಸುವ ನಬಾರ್ಡ್ ಮಾರುಕಟ್ಟೆ ಜಾಲವನ್ನು ನಿರ್ಮಿಸಬಲ್ಲುದು. ಸ್ವಸಹಾಯ ಸಂಘಗಳನ್ನು ಅದು ಪೋಷಿಸಿ ಬೆಳೆಸುತ್ತಿರುವಲ್ಲಿ ಆ ಜಾಲ ಮತ್ತಷ್ಟು ವಿಸ್ತಾರಗೊಳ್ಳಲನುಕೂಲಿಸುತ್ತದೆ. ಇದಕ್ಕಾಗಿ ರಾಷ್ಟ್ರವಾಪಿ ಮಾರುಕಟ್ಟೆ ಸಮೀಕ್ಷೆ ಮಾಡಿ ವರದಿ ನೀಡಲು ಅರ್ಜಿಯನ್ನು ಆಹ್ವಾನಿಸಿದೆ. ಈ ಸಮೀಕ್ಷೆಯಲ್ಲಿ ಎಲ್ಲಾ ಪ್ರಮುಖ ಸರಕುಗಳು, ಪ್ರಮುಖ ರಾಜ್ಯಗಳು ಒಳಗೊಳ್ಳಬೇಕು; ಸಂಘಟಿತ, ಅಸಂಘಟಿತ ವಲಯದ, ಪಾತ್ರಗಳು, ಚಿಲ್ಲರೆ ಮಾರಾಟದ ಸ್ಥಿತಿಗತಿ, ಕಾರ್ಪೊರೇಟ್ ವಲಯದ ಹೂಡಿಕೆ ಹಾಗೂ ಅದರ ಮುಂದಿನ ಬೆಳವಣಿಗೆಯ ಸಾಧ್ಯತೆ, ಮಾರಾಟ ವಲಯಗಳಲ್ಲಿ ಬಳಸಿರುವ ತಂತ್ರಜ್ಞಾನ ಹಾಗೂ ಮಾಡುತ್ತಿರುವ ಹೊಸಶೋಧ; ಎಲ್ಲ ಕೃಷ್ಯುತ್ಪನ್ನಗಳ ಸರಬರಾಜಿನ ಹಾಲಿ ವ್ಯವಸ್ಥೆ, ಧಾರಣೆಗಳ ಏರಿಳಿತ ಮಾರುಕಟ್ಟೆಯ ಅಸ್ಥಿರತೆಯ ಸಂಕಷ್ಟಗಳು, ಸಾಲದ ಮೂಲಗಳು, ಹೊಸ ಕೃಷ್ಯುತ್ಪನ್ನಗಳ ವಿತರಣಾ ಜಾಲದಿಂದಾಗಬಲ್ಲ ಉದ್ಯೋಗ ಸೃಷ್ಟಿ ಹಾಗೂ ಆರ್ಥಿಕ ಪರಿಣಾಮಗಳ ವಿಶ್ಲೇಷಣೆ ಕುರಿತೆಲ್ಲದರ ಸಮೀಕ್ಷೆ ಇರುವ ಬಗ್ಗೆ ನಬಾರ್ಡ್‌ನ ಸೂಚನೆಗಳಿವೆ. ರೇಣುಕಾಪ್ರಸಾದ್ ಹಾಡ್ಯ ಅವರು ನಬಾರ್ಡ್ ರೈತರ ರಕ್ಷಣೆಗಾಗಿ ಹುಡುಕಿರುವ ಪರ್ಯಾಯ ಮಾರ್ಗದ ಬಗ್ಗೆ ಹೀಗೆ ಗಮನ ಸೆಳೆದಿದ್ದಾರೆ (16.2.2009).

**ಹವಾಮಾನ ಆಧಾರಿತ ಕೃಷಿ ವಿಮೆ :** ಭಾರತೀಯ ಕೃಷಿ ವಿಮಾಸಂಸ್ಥೆ (AICI) (2009–10) ನೇ ಸಾಲಿನಿಂದ, ಮಳೆಪ್ರಮಾಣವನ್ನು 15 ದಿನಗಳಿಗೊಮ್ಮೆ ಪ್ರಕಟಿಸುವ ವ್ಯವಸ್ಥೆ ಮಾಡುತ್ತಿದೆ. 3 ತಿಂಗಳಿಗೊಮ್ಮೆ ಪ್ರಕಟಿಸುತ್ತಿದ್ದ ಮಳೆ ಪ್ರಮಾಣ ಅಳೆಯುವ ಮಾನದಂಡದ ಬಗ್ಗೆ ಇದ್ದ ಅನುಮಾನಗಳನ್ನು ನಿವಾರಿಸುವಂತೆ ಆಧುನೀಕರಣ ಮಾಡಿದೆ ಹಾಗೂ ಸಾಮಾನ್ಯ ಕೃಷಿ ವಿಮಾ ಯೋಜನೆಗಿಂತ ಹೆಚ್ಚು ಲಾಭಕರವಾದ ಹವಾಮಾನ ಆಧಾರಿತ ಕೃಷಿ ವಿಮಾ ಯೋಜನೆಯನ್ನು 2 ವರ್ಷಗಳ ಹಿಂದೆಯೇ ಜಾರಿಗೆ ತರಲಾಗಿದೆ. ಮೊದಲಿಗೆ ಆಯ್ದು ಕೆಲವು ತಾಲೂಕುಗಳಲ್ಲಿ ಮಾತ್ರ ಜಾರಿಗಿದ್ದ ಈ ಯೋಜನೆಯನ್ನು ರಾಜ್ಯದ 16 ಜಿಲ್ಲೆಗಳಿಗೆ ಆಯ್ದ ಬ್ಲಾಕ್‌ಗಳಲ್ಲಿ ಜಾರಿಗೊಳಿಸಲಾಗಿದೆ. ಈ ಯೋಜನೆಯ ಸೌಲಭ್ಯವನ್ನು ಬಾಗಲಕೋಟೆ, ಬೆಳಗಾಂ, ಬಳ್ಳಾರಿ, ಬಿಜಾಪುರ, ಕೊಪ್ಪಳ, ರಾಯಚೂರು, ಬೀದರ್, ಚಿತ್ರದುರ್ಗ, ದಾವಣಗೆರೆ, ಧಾರವಾಡ, ಗುಲ್ಬರ್ಗ, ಹಾವೇರಿ, ಕೋಲಾರ, ಬೆಂಗಳೂರು, ಚಿಕ್ಕಬಳ್ಳಾಪುರ, ತುಮಕೂರು ಜಿಲ್ಲೆಗಳ 6.71 ಲಕ್ಷ ರೈತರು ಬಳಸಿ ಕೊಂಡಿದ್ದಾರೆ. ಅವರು ಪಾವತಿಸಿರುವ ಹಣ 145.5 ಕೋಟಿ ರೂ.ಗಳಾಗಿವೆ ನೆಮ್ಮದಿಯ ನೆಲೆ ಹೀಗೂ ಇದೆ.

**'ಅಮೃತ ಭೂಮಿ'ಯಲ್ಲಿ ಅಂತಾರಾಷ್ಟ್ರೀಯ ಬೀಜ ಜಾತ್ರೆ :** ಚಾಮರಾಜನಗರದ ಹೊಂಡರ ಬಾಳು ಬಳಿಯ 'ಅಮೃತ ಭೂಮಿ'ಯಲ್ಲಿ 'ವಿಶ್ವರೈತ ಹುತಾತ್ಮದಿನ'ವಾದ ಏಪ್ರಿಲ್ 17 ರಂದು ಅಂತರಾಷ್ಟ್ರೀಯ ಬೀಜ ಜಾತ್ರೆ ರೈತ ಬೀಜ ಬ್ಯಾಂಕ್ ಉದ್ಘಾಟನೆಗೆ ಇಟಲಿಯ ಡೇನಿಯಲ್ ಕಾಮೆಂಡುಲ್ಲಿ, ಲುಚಿಯಾ ಬಿಯಾಂಚಿ, ರೈತ ಸಂಘದ ಸುರೇಶ್ ಬಾಬು ಪಾಟೀಲ, ದೆಹಲಿಯ ಯುದ್ಧವೀರಸಿಂಗ್ ಮತ್ತಿತರರ ತಂಡವು ಅಮೃತಭೂಮಿಯನ್ನು ಸಿದ್ಧಮಾಡಿತು. ಏಪ್ರಿಲ್ 18,19ರಂದು ಮೈಸೂರಿನ ರಾಷ್ಟ್ರೀಯ ಭಾಷಾ ಸಂಸ್ಥೆಯ ಆಶ್ರಯದಲ್ಲಿ ಕೃಷಿಯಲ್ಲಿ ಜೈವಿಕ ತಂತ್ರಜ್ಞಾನದ ಬಗ್ಗೆ ಅಂತಾರಾಷ್ಟ್ರೀಯ ವಿಚಾರ ಸಂಕಿರಣದ ಏರ್ಪಾಟು ಆಗಿತ್ತು. ನೈಸರ್ಗಿಕ ಕೃಷಿ, ಬೀಜಕಾಯ್ದೆ, ರೈತರ ಹಕ್ಕುಗಳು ಕುಲಾಂತರಿ ಬೀಜ ಮುಂತಾದ ವಿಷಯಗಳು ವಿಚಾರ ಸಂಕಿರಣದ ವಿಷಯಗಳಾಗಿದ್ದುವು. ಬೀಜ ಬ್ಯಾಂಕ್‌ಗಳನ್ನು ತಮ್ಮ ಅಂಕೆಯಲ್ಲಿಟ್ಟುಕೊಳ್ಳಲು ಬಹುರಾಷ್ಟ್ರೀಯ ಕಂಪೆನಿಗಳ ಹುನ್ನಾರವನ್ನು ತಪ್ಪಿಸಲು, ಅಮೃತಭೂಮಿಯಲ್ಲಿ ಸಂಪೂರ್ಣ ಬೀಜ ಬ್ಯಾಂಕ್ ನಿರ್ಮಿಸಿ, ರೈತರಿಗೆ ಯಾವುದೇ ಬೀಜವನ್ನು ಉಚಿತವಾಗಿ ನೀಡುವ ಉದ್ದೇಶವಲ್ಲಿತ್ತು. ಈ ಮೂಲಕ ಪೇಟೆಂಟ್ ಕಾಯ್ದೆಯನ್ನು ಭಂಗಗೊಳಿಸುವುದೂ ಉದ್ದೇಶವಾಗಿತ್ತು. ಈ ಬೀಜ ಜಾತ್ರೆಗೆ ಎರಡು ಸಾವಿರಕ್ಕೂ ಮೀರಿದ ಸಂಖ್ಯೆಯಲ್ಲಿ ರೈತರು ಪಾಲ್ಗೊಳ್ಳಲು ವ್ಯವಸ್ಥೆ ಮಾಡಲಾಗಿತ್ತು. (11.4.2009) ಇದೊಂದು ರೀತಿಯಲ್ಲಿ ಅಭಿವೃದ್ಧಿ ಸಿದ್ಧಿ ದೇಶಗಳ ಪ್ರತಿನಿಧಿಗಳಾದ (ಅಥವಾ ಏಜೆಂಟ್ ಅನ್ನಬಹುದೆ?) ಬಹುರಾಷ್ಟ್ರೀಯ ಕಂಪೆನಿಗಳ ಸವಾಲುಗಳಿಗೆ, ಹುನ್ನಾರಗಳಿಗೆ ದೇಸೀ ಪ್ರಯತ್ನಗಳ ಗಂಡು ಉತ್ತರವೆಂಬಂತೆ ಕಾಣುತ್ತಿತ್ತು.

**ಕೃಷಿ ಸರ್ವತೋಮುಖ ಅಭಿವೃದ್ಧಿಗೆ ಕ್ರಮಗಳು :** 17 ಲಕ್ಷ ರೈತರಿಗೆ ಅನುಕೂಲಿಸುವ 10 ಹೆಚ್.ಪಿ ವರೆಗಿನ ನೀರಾವರಿ ಪಂಪ್‌ಸೆಟ್‌ಗಳಿಗೆ ಉಚಿತ ವಿದ್ಯುತ್ ಸರಬರಾಜು (2008 ಆಗಸ್ಟ್ 1 ರಿಂದ) ಒಣ ಬೇಸಾಯ ಆಶ್ರಿತ 20 ಲಕ್ಷ ಸಣ್ಣ ಮತ್ತು ಅತಿ ಸಣ್ಣ ರೈತ ಕುಟುಂಬಗಳಿಗೆ 210 ಕೋಟಿ ರೂಗಳ ಸಹಾಯಧನ ವಿರತಣೆಗೆ ಬಿಡುಗಡೆ, ಸಹಕಾರಿ ಸಂಘಟನೆಗಳಿಗೆ ಹಾಲು ಸರಬರಾಜು ಮಾಡುವ ಗ್ರಾಮೀಣ ಮಹಿಳೆಯರಿಗೆ ಸಹಾಯಧನ ಬಿಡುಗಡೆ, ರೈತರು ನೇಕಾರರು, ಮೀನುಗಾರಿಕೆ ಸಹಕಾರ ಸಾಲ, ಕೃಷಿ ಮತ್ತು ತತ್ಸಂಬಂಧೀ ಕ್ಷೇತ್ರಗಳ ಸಮಗ್ರ ಅಭಿವೃದ್ಧಿಗೆ ಮುಖ್ಯಮಂತ್ರಿಗಳ ಅಧ್ಯಕ್ಷತೆಯ 'ಕೃಷಿ ಮಿಷನ್' ಸ್ಥಾಪನೆ, ತೋಟಗಾರಿಕಾ ಕಾಲೇಜ್ (ಬಾಗಲಕೋಟೆ) ಸ್ಥಾಪನೆ, ಸಾವಯವ ಕೃಷಿ ಮಿಷನ್ ಕಾರ್ಯಾರಂಭ ಮತ್ತು ರೈತರ ನೋಂದಣಿ, ರೈತರಿಗೆ ಕೃಷಿ ಯಾಂತ್ರೀಕರಣ ನೆರವು ಇತ್ಯಾದಿ

ಸರ್ಕಾರದ ವಿನೂತನ ಕೃಷಿ ರಂಗದ ಕಾರ್ಯಕ್ರಮಗಳಾಗಿವೆ. 2009ರಲ್ಲಿಯೆ ಜಾರಿಗೊಳಿಸಬಯಸಿರುವಲ್ಲಿ, ಅನುಷ್ಠಾನ ಸಕಾಲದಲ್ಲಿ ಸೂಕ್ತವಾಗಿ ಆದರೆ ರೈತರ ಸಾಂತ್ವನದ ಹೆಜ್ಜೆಗಳು ಹರುಷಮಯವಾಗುತ್ತವೆ.

**ಬರಪರಿಸ್ಥಿತಿಯಲ್ಲಿ ರೈತರ ರಕ್ಷಣೆಗೆ ಆದೇಶ :** ಬರಪೀಡಿತ ಜಿಲ್ಲೆಗಳಿಂದ ರೈತರು ಗುಳೆ ಹೋಗದಂತೆ ಪರಿಹಾರ ಕಾರ್ಯಕೈಗೊಳ್ಳುವುದು ಜಿಲ್ಲಾಧಿಕಾರಿಗಳ ಹೊಣೆ; ಕುಡಿಯುವ ನೀರಿಗೆ ಆದ್ಯತೆ, ಮೇವು ಬ್ಯಾಂಕ್, ಗೋಶಾಲೆ ಸ್ಥಾಪನೆಗೆ ಗಮನ, ದುಡಿಯುವ ಕೈಗಳಿಗೆ ಕೆಲಸ ಖಾತ್ರಿ ಕೊಡಬೇಕು, ಉದ್ಯೋಗ ಖಾತರಿ ಯೋಜನೆಯಡಿ ಗ್ರಾಮಪಂಚಾಯತ್ ಮಟ್ಟದಲ್ಲಿ ಕಾಮಗಾರಿ ಕೈಗೊಳ್ಳುವ ಬದಲು ಪ್ರತಿಹಳ್ಳಿಯಲ್ಲೂ ಕೆಲಸ ಆರಂಭಿಸುವಂತಾಗಬೇಕು, ರೈತರು ಬೆಳೆದ ಮೇವನ್ನು ಸರ್ಕಾರವೇ ಖರೀದಿಸುವ ವ್ಯವಸ್ಥೆ ಮಾಡಬೇಕು, 100 ಕ್ಕಿಂತ ಕಡಿಮೆ ಜನಸಂಖ್ಯೆ ಇರುವ ಉಪಗ್ರಾಮಗಳಲ್ಲಿ ಕೊಳವೆ ಬಾವಿ ನಿರ್ಮಿಸಲು ಅವಕಾಶವಿಲ್ಲದಿದ್ದರೂ ನಿಯಮವನ್ನು ಸಡಿಲಿಸಿ, ಸೌಲಭ್ಯವನ್ನು ವಿಸ್ತರಿಸಬೇಕು, ಉದ್ಯೋಗ ಖಾತರಿ ಯೋಜನೆಯಡಿ ಪ್ರಗತಿ ಕುಂಠಿತವಾಗದಂತೆ ನೋಡಿಕೊಳ್ಳಬೇಕು, ಪಂಜಾಬಿನಿಂದ ಮೇವು ತರಿಸುವ ಬದಲು ಪಂಪ್‌ಸೆಟ್ ಹೊಂದಿರುವ ರೈತರಿಗೆ ತಮ್ಮಲ್ಲಿಯೆ ಮೇವು ಬೆಳೆಯುವಂತೆ ಪ್ರೋತ್ಸಾಹಿಸಬೇಕು, ಎಂದೆಲ್ಲ ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪನವರು 22.8.2009ನೇ ಶನಿವಾರ ತಮ್ಮ ಗೃಹ ಕಛೇರಿ ಕೃಷ್ಣಾನದಿ ಬರಪೀಡಿತ ಜಿಲ್ಲೆಗಳ ಜಿಲ್ಲಾಧಿಕಾರಿಗಳು, ಜಿಲ್ಲಾಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಹಿರಿಯ ಅಧಿಕಾರಿಗಳೊಂದಿಗೆ ನಡೆಸಿದ ವೀಡಿಯೋ ಕಾನ್ಫರೆನ್ಸ್ ಸಮಯದಲ್ಲಿ ಆದೇಶ ನೀಡಿ ಎಚ್ಚರಿಸಿದರು. ಸಂಬಂಧಿಸಿದ ಸಚಿವರು, ಸರ್ಕಾರದ ಮುಖ್ಯ ಕಾರ್ಯದರ್ಶಿ, ಮುಖ್ಯ ಮಂತ್ರಿಗಳ ಪ್ರಧಾನ ಕಾರ್ಯದರ್ಶಿಗಳು ಈ ಸಂದರ್ಭದಲ್ಲಿ ಹಾಜರಿದ್ದ ರೈತರಿಗೆ ರಕ್ಷಣಾ–ಸಾಂತ್ವನ ಕ್ರಮಗಳನ್ನು ಕೈಗೊಳ್ಳಬೇಕೇನ್ನುವ ಆದೇಶಕ್ಕೆ ಸಾಕ್ಷಿಯಾಗಿದ್ದರು.

**ಪಂಪ್‌ಸೆಟ್‌ಗಳಿಗೆ ಸಮರ್ಪಕ ವಿದ್ಯುತ್ ಸರಬರಾಜು :** ಕೇಂದ್ರ ಸರ್ಕಾರವು ಬರದಿಂದಾಗಿ ಆಹಾರ ಉತ್ಪಾದನೆ ಕುಸಿದೀತು ಎಂದು 'ಬರನಿರ್ವಹಣಾ ತಂತ್ರ 2009'ರ ಪ್ರತಿಗಳ ಮೂಲಕ ಕೃಷಿಗೆ ಆದ್ಯತೆಯ ಮೇಲೆ ವಿದ್ಯುತ್ ಒದಗಿಸುವುದು ಸೇರಿದಂತೆ ರಾಜ್ಯ ಸರ್ಕಾರಗಳಿಗೆ ಸೂಚನೆಗಳನ್ನು ನೀಡಿತು. ರೈತರ ಪಂಪ್‌ಸೆಟ್‌ಗಳಿಗೆ ಸಮರ್ಪಕ ವಿದ್ಯುತ್ ಸರಬರಾಜು ಮಾಡಬೇಕು ಎಂಬುದು ಆದ್ಯ ಸೂಚನೆ ಆಗಿತ್ತು. ರಾಜೀವಗಾಂಧಿ ಗ್ರಾಮೀಣ ವಿದ್ಯುತ್ ಯೋಜನೆಯಡಿ ವಿದ್ಯುತ್ ಪಂಪ್‌ಸೆಟ್

ಒದಗಿಸಿ ಡೀಸೆಲ್ ಪಂಪ್‌ಸೆಟ್‌ಗಳಿಂದ ಮುಕ್ತಗೊಳಿಸಬೇಕು. ಮಳೆಯೊಡನೆ ಮುಂಗಾರು, ಹಿಂಗಾರು ಬೆಳೆ ಇಳುವರಿ ಭಾರಿ ಪ್ರಮಾಣದಲ್ಲಿ ಕುಸಿಯುವ ಸಂಭವವಿದೆ. 81 ಪ್ರಮುಖ ಜಲಾಶಯಗಳಲ್ಲಿ ನೀರಿನ ಸಂಗ್ರಹ ಪ್ರಮಾಣ ಕುಸಿಯಲಿದೆ. ಮಳೆ ಆಶ್ರಿತ ಕೃಷಿ ಪ್ರದೇಶದ ರೈತರು ಮರುಬಿತ್ತನೆ ಕಾರ್ಯ ಮಾಡಬೇಕಿದೆ. ನದಿ ನೀರು ಅಂತರ್ಜಲವನ್ನು ಮಿತವಾಗಿ ಬಳಸಬೇಕು, ಸೆಪ್ಟೆಂಬರ್ 2009ರಿಂದ ಜೂನ್ 2010ರವರೆಗೆ ಅಗತ್ಯ ಮೇವು ಸಂಗ್ರಹಣೆ ಮಾಡಬೇಕು. ಜಾನುವಾರು ಶಿಬಿರಗಳು, ಮೇವು ಶಿಬಿರಗಳಿಗೆ ಸಿದ್ಧತೆ ಆಗಬೇಕು. ಬರಗಾಲ ಪ್ರದೇಶಕ್ಕೆ ಸೂಕ್ತ ಬೆಲೆ ಆಯ್ಕೆ ಹಾಗೂ ಬೆಳೆಯುವ ವಿಧಾನದ ಅಳವಡಿಕೆ, ಉದ್ಯೋಗ ಸೃಷ್ಟಿಯಿಂದ ಕೃಷಿಯೇತರ ಮೂಲದಿಂದ ಉಪ ಆದಾಯ ಹೆಚ್ಚಿಸಿಕೊಳ್ಳಬೇಕು, ರಾಷ್ಟ್ರೀಯ ಗ್ರಾಮೀಣ ಖಾತರಿ ಯೋಜನೆ, ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ, ರಾಷ್ಟ್ರೀಯ ಆಹಾರ ಭದ್ರತಾ ಮಿಷನ್ ಇತ್ಯಾದಿ ಯೋಜನೆಗಳನ್ನು ಬರಪೀಡಿತ ಪ್ರದೇಶಗಳಲ್ಲಿ ಆದ್ಯತೆಯನ್ನು ಗುಣವಾಗಿ ಅನುಷ್ಠಾನ, ಮಾಹಿತಿ ತಂತ್ರಜ್ಞಾನದ ಬಳಕೆ, ಕುಡಿಯುವ ನೀರಿಗೆ ಆದ್ಯ ಆದ್ಯತೆ ನೀಡಬೇಕು. ನಾಲಾ ತುದಿ ರೈತರಿಗೆ ಆದ್ಯತೆ ಮೇಲೆ ನೀರು ತಲುಪುವಂಥ ಸ್ಥಿತಿ ರೂಪಿಸಬೇಕು, ಪಂಪ್‌ಸೆಟ್‌ಗಳಿಗೆ ರಿಯಾಯ್ತಿ ದರದಲ್ಲಿ ಡಿಸೆಲ್ ಕೊಡಬೇಕು ಎಂದೆಲ್ಲ ಸಲಹೆಗಳೂ ಇದ್ದವು (23.8.09).

**ರೈತರ ಅಹವಾಲುಗಳು; ಮುಖ್ಯಮಂತ್ರಿಗಳ ಸ್ಪಂದನ :** ವಿಧಾನಸೌಧದ ಸಮ್ಮೇಳಮ ಸಭಾಂಗಣದಲ್ಲಿ 26.9.09ನೇ ಶನಿವಾರದಂದು ರೈತ ಸಂಘ ಹಾಗೂ ಹಸಿರುಸೇನೆಯ ಮುಖಂಡರೊಡನೆ ಒಂದೂವರೆ ಗಂಟೆಗಳ ಕಾಲ ಮುಕ್ತ ಸಂವಾದವನ್ನು ಮುಖ್ಯ ಮಂತ್ರಿ ಬಿ.ಎಸ್. ಯಡಿಯೂರಪ್ಪ ಅವರು ಮಾಡಿ ಬೇಡಿಕೆಗಳ ಈಡೇರಿಕೆಯ ಭರವಸೆ ನೀಡಿದರು. ರೈತರ ಬೇಡಿಕೆಗಳಲ್ಲಿ, ರೈತರ ಮೇಲೆ ಹೂಡಿರುವ ಎಲ್ಲ ಮೊಕದ್ದಮೆಗಳ ವಾಪಸಾತಿ (ಇಂಧನ ಇಲಾಖೆ ಜಾಗೃತದಳ, ರೈಲ್ವೆ ಇಲಾಖೆಯವು) ಹಾವು ಕಡಿದು ಸತ್ತ ಕೃಷಿ ಕಾರ್ಮಿಕರಿಗೆ ಸ್ಥಳದಲ್ಲಿಯೆ 2 ಲಕ್ಷ ರೂಗಳ ಪರಿಹಾರ ಘೋಷಣೆ; ಜಾನುವಾರು ಮೇವು, ಕಬ್ಬಿನ ಗದ್ದೆ ಬೆಂಕಿಬಿದ್ದ ಆಕಸ್ಮಿಕಗಳಿಗೆ ವೈಜ್ಞಾನಿಕ ಆಧಾರದ ಮೇಲೆ ಪರಿಹಾರ ನಿಗದಿ, ಪ್ರಕೃತಿ ವಿಕೋಪದಿಂದ ಗ್ರಾಮೀಣ ಮನೆಗಳು ಆಕಸ್ಮಿಕ ಈಡಾದರೆ ಜಿಲ್ಲಾಡಳಿತ ವರದಿ ಪಡೆದು ತಕ್ಷಣ ಪರಿಹಾರ ನೀಡಿಕೆ, ಮಹಿಳೆಯರ ಹೆರಿಗೆ ತೊಂದರೆ, ಗರ್ಭಕೋಶದ ಕಾಯಿಲೆಗಳಿಗೆ ಉಚಿತ ವೈದ್ಯಕೀಯ ಸೌಲಭ್ಯ, ಶಾಶ್ವತ ಜಾತಿ ದೃಢೀಕರಣ ಪತ್ರ ನೀಡಿಕೆ ಹಾಗೂ ಸರ್ಕಾರಿ ಶಾಲೆಗಳಲ್ಲಿ ಆದಾಯ ಮತ್ತು ಜಾತಿ

ದೃಢೀಕರಣ ಪತ್ರವನ್ನು ಒತ್ತಾಯಿಸದಿರುವುದು, ಶೇ 15 ಅಂಕಗಳನ್ನು ಪ್ರಾಥಮಿಕ ಶಿಕ್ಷಣ ಹಂತದಿಂದಲೇ ಮೀಸಲಿಡುವುದು – ಇತ್ಯಾದಿ ಬೇಡಿಕೆಗಳಿದ್ದವು.

ರೈತ ಮುಖಂಡ ಕೆ.ಎಸ್.ಪುಟ್ಟಣ್ಣ ಅವರು ಇಟ್ಟ ಬೇಡಿಕೆಗಳಲ್ಲಿ ರೈತ ಗರ್ಭಿಣಿಯರಿಗೆ ಯಶಸ್ವಿನಿ ಮಾದರಿ ವಿಮಾ ವ್ಯವಸ್ಥೆ ಜಾರಿಗೊಳ್ಳಬೇಕು, ಜಮೀನುಗಳನ್ನು ಬಾಡಿಗೆಗೆ ತೆಗೆದುಕೊಂಡು ಯೋಜನೆಗಳನ್ನು ಕಾರ್ಯಗತಗೊಳಿಸಬೇಕು ಸೇರಿದ್ದುವು, ಹೀಗೆಯೇ ಕೋಡಿಹಳ್ಳಿ ಚಂದ್ರಶೇಖರ್ ಅವರು ಮುಂದಿಟ್ಟ ಬೇಡಿಕೆಗಳಲ್ಲಿ ರೈತನಾಯಕ ದಿ. ಪ್ರೊ. ನಂಜುಂಡಸ್ವಾಮಿಗೆ ಕರ್ನಾಟಕ ರತ್ನ ಪ್ರಶಸ್ತಿ ಘೋಷಿಸಬೇಕು, ರೈತರ ಮೇಲೆ ಕಾನೂನು ಉಲ್ಲಂಘಿಸಿ ದೌರ್ಜನ್ಯ ನಡೆಸುವ ಅಧಿಕಾರಿಗಳ ವಿರುದ್ಧ ಕ್ರಮ ಜರುಗಿಸಬೇಕು ಎಂದಿದ್ದವು. ಮಹೇಶ್ ಪ್ರಭು ಅವರು ಚಾಮರಾಜನಗರಕ್ಕೆ ಆಗಮಿಸಿ ಸಂಪುಟ ಸಭೆ ನಡೆಸಬೇಕು ಎಂದರು. ಬಸವರಾಜಪ್ಪ, ಬಸವರಾಜ್ ತಂಬಾಕೆ ಅವರೂ ಸೇರಿದಂತೆ ಇದ್ದ ಈ ಸಭೆಯ ರೈತ ನಾಯಕರು ಮುಂದಿಟ್ಟ ಬೇಡಿಕೆಗಳ ಈಡೇರಿಕೆಗೆ ನೀಡಿರುವ ಸಲಹೆಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಚರ್ಚಿಸಿ ಕ್ರಮಕೈಗೊಳ್ಳಲು ಮುಖ್ಯ ಕಾರ್ಯದರ್ಶಿ ಎಸ್.ವಿ. ರಂಗನಾಥ್ ನೇತೃತ್ವದಲ್ಲಿ ಉನ್ನತ ಮಟ್ಟದ ಅಧಿಕಾರಿಗಳ ಸಮಿತಿ ರಚಿಸಲಾಗುವುದು ಎಂದು ಭರವಸೆ ನೀಡಿದ ಮುಖ್ಯಮಂತ್ರಿಗಳು ರೈತರ ಬೇಡಿಕೆಗಳನ್ನು ಸರ್ಕಾರ ಈಡೇರಿಸುವಲ್ಲಿ ಸರ್ಕಾರದ ಎರಡು ಮನವಿಗಳನ್ನು ರೈತರೂ ಒಪ್ಪಿಕೊಳ್ಳಲು ಕೋರಿದರು. ಸರ್ಕಾರವೇ ಉಚಿತವಾಗಿ ಕೃಷಿಗೆ ಬಳಸುವ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಮೀಟರ್ ಅಳವಡಿಕೆ, ಆರು ತಿಂಗಳಲ್ಲಿ ಈ ಬಗ್ಗೆ ರೈತರು ನಿರ್ಧಾರ ತೆಗೆದುಕೊಳ್ಳುವುದು ಹಾಗೂ ಸರಿ ಎನಿಸಿದರೆ ಎಲ್ಲೆಡೆ ಅಳವಡಿಕೆ, ಸಂಬಂಧಪಟ್ಟ ಅಧಿಕಾರಿಗಳಿಂದ ಅನುಮತಿ ಪಡೆದ ಮೇಲೆಯೆ ಕೊಳವೆ ಬಾವಿಯನ್ನು ಕೊರೆಯಬೇಕು, ಎಂದೆಲ್ಲ ಮನವಿ ಇತ್ತು. ಇದೊಂದು ರೀತಿ ವಿಶಿಷ್ಟ ವಿನಿಮಯ ಸಮ್ಮತಿ, ನೇರಾನುಪಾತ ಸ್ಪಂದನವಾಗಿತ್ತು (Directly proportional acceptance progress).

**ಕಾಫಿ ಸಮಸ್ಯೆಗಳು ಮತ್ತು ಖಾಸಗಿ ಸ್ವ-ಸಾಂತ್ವನದ ಪ್ರಯತ್ನಗಳು :** ಬಿಡುವಿಲ್ಲದ ಅಕಾಲಿಕ ಮಳೆ ಮಲೆನಾಡಿನ ಕಾಫಿ, ಏಲಕ್ಕಿ, ಮೆಣಸು ಇತ್ಯಾದಿ ಬೆಳೆಗಳನ್ನು ನೆಲಕಚ್ಚಿಸಿತು, ಆಗ ಕಾಫಿ ಬೆಳೆಗಾರರ ಒಕ್ಕೂಟವು ಕೇಂದ್ರಕ್ಕೆ ಪರಿಹಾರ ಪ್ಯಾಕೇಜ್ ಪ್ರಸ್ತಾವನೆ ಸಲ್ಲಿಸಿತ್ತು. ಕೇಂದ್ರವು ಪ್ರಸ್ತಾವನೆಯ ಮಿತಿಗಳನ್ನು ತೋರಿಸಿ ಅದನ್ನು ಕಡಿತಗೊಳಿಸಿದ್ದುಂಟು. ರೋಗ ಬಾಧೆ ಗೀಡಾದ ಕಾಫಿ ಬೆಳೆ, ಇಳುವರಿ ಕುಸಿತ

ಬೆಲೆ ಕುಸಿತ ಅನುಭವಿಸಿದ್ದುಂಟು. ಬೆಳೆಗಾರ ಬ್ಯಾಂಕ್ ಸಾಲ–ಕಿರುಕುಳಗಳಿಗೆ ಈಡಾದದ್ದುಂಟು. ಕಾಫಿ ಫಸಲು ನಷ್ಟದ ಬಗ್ಗೆ ಆತಂಕಗೊಳ್ಳುವ ಮಂಡಳಿ ಸರ್ಕಾರಕ್ಕೆ ಸರಿಯಾದ ಮಾಹಿತಿ ನೀಡದೆ ಬೆಳೆಗಾರನಿಗೆ ಸಂಕಷ್ಟವಾಗಿದೆ. ಪರಿಹಾರದ ಪ್ಯಾಕೇಜ್‌ಗು ಅಡ್ಡಿ ಆಗಿದೆ ಎಂಬುದು ಡಾ. ಶಿವಕುಮಾರ ಕಣಸೋಗಿ ಅವರು ಗಮನಿಸಿರುವ ಅಂಶಗಳು. (20.1.10)

ಇಂಥ ಸಂಕಷ್ಟಗಳ ನಡುವೆ ಮಲೆನಾಡಿನ ರೈತರು ಹಳ್ಳಿಹಬ್ಬವನ್ನು ಉಪಯೋಗಕರವಾಗಿ ಆಚರಿಸಿರುವುದು ಅವರ ಜೀವನೋತ್ಸಾಹಗಳ ಪ್ರತೀಕವಾಗಿದೆ. ಡಿಸೆಂಬರ್ 2009 ರಲ್ಲಿ ಮೂಡಿಗೆರೆ ತಾಲೂಕು ದೇವವೃಂದದಲ್ಲಿ ಕಾಫಿ ಸೀಮೆಯ ಸಮರ್ಥ ವೈಭವ ಈ 'ಹಳ್ಳಿ ಹಬ್ಬ'ದಲ್ಲಿ ಕಂಡು ಬಂದಿತು. ಕಾಫಿ ಬೆಳೆಗಾರರ ಸಮಸ್ಯೆಗಳ ಬಗ್ಗೆ ಚರ್ಚೆ ಉತ್ತಮ ಕಾಫಿ ಬೆಳೆಗಾರರನ್ನು ಗುರುತಿಸಿ ಗೌರವಿಸುವುದು, ಕೃಷಿ ಮಾಹಿತಿ ಮಳಿಗೆಗಳು, ಹಳ್ಳಿಯ ರುಚಿಕರ ಖ್ಯಾದಗಳ ತಯಾರಿಕೆಯ ನೇರ ಪ್ರದರ್ಶನ, ಸೊಪ್ಪಿನ ಚಟ್ನಿಗಳು, ತರಕಾರಿ ಹಲ್ವಗಳು ಸೊಪ್ಪು, ಸಗಣಿ ಮತ್ತು ಸೊಪ್ಪುಗಳಿಂದ ಸಿದ್ಧಪಡಿಸುವ ನೈಸರ್ಗಿಕ ಸೊಳ್ಳೆ ಬತ್ತಿ ಪ್ರದರ್ಶನ, ಚಿಕ್ಕಮಗಳೂರಿನ ಭೂಮಿ ಸುಸ್ಥಿರ ಅಭಿವೃದ್ಧಿ ಸಂಸ್ಥೆ ಮತ್ತು ಒಳನಾಡು ಮೀನುಗಾರಿಕ ಸಂಸ್ಥೆ ಇವುಗಳಿಂದ ಕೃಷಿ ಮಾಹಿತಿ ವಿತರಣೆ, ಕೃಷಿ ಸಾಹಿತ್ಯ ತಂತ್ರಜ್ಞಾನದ ವಿವರಗಳ ಪೋಸ್ಟರ್ ಪ್ರದರ್ಶನ, ಹಳ್ಳಿ ಮನೆ ನಿರ್ಮಿಸಿ ಅದರೊಳಗೆ ನೈಜ ಬಳಕೆಯ ವಸ್ತುಗಳ ಅಲಂಕೃತ ಜೋಡಣೆ–ಬೈನೆ ಬಳ್ಳಿಯ ಸಿಂಗಾರದ ಗುಡಿಸಲು, ಕಾಫಿಹಣ್ಣು, ಭತ್ತದ ತೆನೆ, ಗೊರಬು, ಬೀಸುವ ಕಲ್ಲು, ಒರಳು ಕಲ್ಲು, ತೆರೆದ ಬಾವಿ ಇತ್ಯಾದಿ ಮೊಬೈಲ್ ಮನೆ, ನಾಟಿಯ ನೇರ ಪ್ರಾತ್ಯಕ್ಷಿಕೆ, ಭತ್ತದ ಕೊಯ್ಲು ಪ್ರಾತ್ಯಕ್ಷಿಕೆ, ಜೀವಾಮೃತ, ದೇಸಿಯೂರಿಯಾ ಗೊಬ್ಬರ, ಗೋಮಯ ಹುಡಿ, ಅಮೃತ ಜಲ, ಮಡಕೆ ಗೊಬ್ಬರ, ಪಂಚಗವ್ಯ ಇತ್ಯಾದಿ ಜೀವಂತ ಪ್ರಾತ್ಯಕ್ಷಿಕೆಗಳು, ಪ್ರಶಸ್ತಿಯ ಭಾಗ್ಯ ಪಡೆದ ಬೆಳೆಗಾರರು ಇವನ್ನೆಲ್ಲ ದಾಖಲಿಸಿ ಚಾರಿತ್ರಿಕ ಚಿತ್ರಣ ಮಾಡಿದ್ದಾರೆ. ಜಿ.ಎಸ್. ಅವರು (21.1.2010 ಪ್ರವಾ). ಇಂಥ ಹಳ್ಳಿಯ ಹಬ್ಬ, ಬೆಳೆಗಾರದ ಜೀವನೋತ್ಸಾಹಕ್ಕೆ ನಡೆಮುಡಿ ಹಾಸಿಕೊಂಡು ಹೋಗುತ್ತದೆ. ರೈತ ಮನಸ್ಸುಗಳಿಗೆ ಸಾಂತ್ವನದ ಚೇತನವನ್ನು ತುಂಬುತ್ತದೆ. ಇದು ಖಾಸಗಿಯಾಗಿ ಜಯರಾವ್ ಅವರು ಸಂಘಟಿಸಿದ ಕಾರ್ಯಕ್ರಮವಾದರೂ ಸಾಮಾಜಿಕ ಕಾಳಜಿಯ ರೈತ ಬಾಂಧವ್ಯಗಳನ್ನು ಬೆಳೆಸುವ ಸಾಂತ್ವನ ಸಂತೋಷವನ್ನು ತಂದುಕೊಡುತ್ತವೆ.

**ರೈತರಿಗೆ ಕೃಷಿ ತಂತ್ರಜ್ಞಾನ ಮಾಹಿತಿ ನೀಡುವ ಕಿಯೋಸ್ಕ್ :** ಕೃಷಿ ಕುರಿತು ವೈಜ್ಞಾನಿಕ ಮಾಹಿತಿ ರೈತರಿಗೆ ತಲುಪಲಿ ಎಂಬ ಆಶಯ ಸರ್ಕಾರದ್ದು. ಅದಕ್ಕಾಗಿ ಎಟಿಎಂ ಮಾದರಿಯ (ಟಚ್‌ಸ್ಕ್ರೀನ್) ಸ್ಪರ್ಶ ಸ್ಪಂದನ ಪರದೆ ಯಂತ್ರಗಳನ್ನು ಜಿಲ್ಲೆಯ ಎಲ್ಲ ಕೃಷಿ ಸಹಾಯಕ ನಿರ್ದೇಶಕರ ಕಛೇರಿ, ಎಪಿಎಂಸಿ ಹಾಗೂ ಹಲವಾರು ರೈತ ಸಂಪರ್ಕ ಕೇಂದ್ರಗಳಲ್ಲಿ ಅಳವಡಿಸಲಾಗಿತ್ತು. ಬೇಸಾಯ ಪದ್ಧತಿ, ವೈಜ್ಞಾನಿಕ ತಳಿಗಳು, ಗೊಬ್ಬರ, ಸಸ್ಯಸಂರಕ್ಷಣೆ, ಸಸ್ಯರೋಗಗಳು, ಕೀಟನಾಶಕ ಸಿಂಪರಣೆ ಮಾಹಿತಿಯು ಈ ಯಂತ್ರದಲ್ಲಿ ಅಳವಡಿಕೆ ಆಗಿದೆ. ಆದರೆ ರೈತರು ಈ ಯಂತ್ರವನ್ನು ಬಳಸಲು ಮುಂದೆ ಬರುತ್ತಿಲ್ಲ. 2008ರಲ್ಲಿ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ ಅಡಿಯಲ್ಲಿ ಧಾರವಾಡ ಕೃಷಿ ವಿಶ್ವವಿದ್ಯಾಲಯದ ವತಿಯಿಂದ ಜಿಲ್ಲೆಗೆ ಇಂಥ ಕೃಷಿ ತಂತ್ರಜ್ಞಾನ ಮಾಹಿತಿಯ ಕಿಯೋಸ್ಕ್ ಯಂತ್ರಗಳನ್ನು ಒದಗಿಸಲಾಗಿದೆ. ಬಳ್ಳಾರಿ ಜಿಲ್ಲೆಯ ಬಹಳಷ್ಟು ಕಡೆಯ ಈ ಯಂತ್ರಗಳಿಗೆ, ವೈರಿಂಗ್ ಆಗಿಲ್ಲ; ಅಗತ್ಯ ಮಾಹಿತಿ ಅಳವಡಿಕೆ ಆಗಿಲ್ಲ. ಕೆಟ್ಟುನಿಂತ ಯಂತ್ರಗಳ ದುರಸ್ತಿಯು ಇಲಾಖೆಯಿಂದ ಆಗಿಲ್ಲ, ಕೆಲವಡೆ ಒದಗಿಸಿದುವ ಯಂತ್ರದ ಪ್ಯಾಕಿಂಗ್ ಕೂಡ ಬಿಚ್ಚಿಲ್ಲ, ಹೊಸಪೇಟೆ ಎಪಿಎಂಸಿಯಲ್ಲಿರುವ ಯಂತ್ರದಲ್ಲಿ ತಾಂತ್ರಿಕ ದೋಷವಿದೆ. ಸೊಂಡೂರಿನ ಕೃಷಿ ನಿರ್ದೇಶಕರ ಕಛೇರಿಯ ಯಂತ್ರದ ಪರದೆ ತೆರೆದು ಕೊಳ್ಳುತ್ತಿಲ್ಲ. ಚೋರನೂರು ರೈತ ಸಂಪರ್ಕ ಕೇಂದ್ರದಲ್ಲಿ ವೈರಿಂಗು ಆಗದೆ ಯಂತ್ರ ಸುಮ್ಮನೆ ನಿಂತಿದೆ. ಈ ಬಗ್ಗೆ ದುರಸ್ತಿ ಮಾಡಲು ಧಾರವಾಡ ಕೃಷಿ ವಿಶ್ವವಿದ್ಯಾಲಯವನ್ನು ಕೋರಿದೆ. ಸಾಂತ್ವನಕರ ಮಹತ್ವದ ಇಂಥ ಯೋಜನೆಗಳು ವ್ಯರ್ಥವಾಗಬಾರದೆಂದು ಶಿಶಿಧರ ಮೇಟಿ ಅವರ ಕಳಕಳಿ ಆಗಿದೆ (2.3.2010).

**'ರೈತತೀರ್ಪು' :** ಕೃಷಿ ಸಂಶೋಧನೆಯ ಪ್ರಜಾತಾಂತ್ರೀಕರಣ ಒಕ್ಕೂಟವು ರೈತ ತೀರ್ಪು ಕಾರ್ಯಾಗಾರವನ್ನು ಹಮ್ಮಿಕೊಂಡಿತ್ತು. ಕೃಷಿಯೇತರ ಉತ್ಪಾದನಾ ವಸ್ತುಗಳಿಗೆ ಉತ್ಪಾದಕರೇ ಬೆಲೆ ನಿಗದಿ ಮಾಡುತ್ತಾರೆ. ಕೃಷಿಕರ ಉತ್ಪನ್ನಗಳಿಗೆ ಮಾತ್ರ ಮಾರುಕಟ್ಟೆಯ ದರವನ್ನು ನಿಗದಿಗೊಳಿಸುತ್ತದೆ. ಅದಾಗಿ ಉತ್ಪನ್ನದ ಸಿಗುವ ದರ ಮತ್ತು ಮಾರುಕಟ್ಟೆಯ ದರಕ್ಕೂ ಬಹಳ ವ್ಯತ್ಯಾಸ ಕಾಣುತ್ತದೆ. ಇದನ್ನು ಸರಿಪಡಿಸುವುದು ಹೇಗೆ ಎಂಬ ಪ್ರಶ್ನೆ ಎತ್ತಿದವರು ಕೂಡ್ಲಿಗಿಯ ರೈತ ಮಹಿಳೆ ಮುನಿಯಮ್ಮ. ಕಾರ್ಯಾಗಾರದಲ್ಲಿ ರೈತ ನ್ಯಾಯಮಂಡಲಿ ಸದಸ್ಯರಾಗಿ ದಲಿತರು, ಬುಡಕಟ್ಟು ಜನರು, ಸಣ್ಣ ಮತ್ತು ಅತಿ ಸಣ್ಣ ರೈತರು ಸೇರಿ ವಿಚಾರಣೆ ಮಾಡಿ 'ರೈತ ತೀರ್ಪನ್ನು' ಕೃಷಿ ತಂತ್ರಜ್ಞರ ಸಂಸ್ಥೆಯಲ್ಲಿ ಮಂಡಿಸಲಾಯಿತು. ರೈತತೀರ್ಪಿನ

ಮಹತ್ವದ ಕುರಿತು ರೈತ ನಾಯಕರು ಮಾತನಾಡಿದರು. ರೈತರ ತೀರ್ಪಿಗೆ ಪ್ರತಿಸ್ಪಂದಿಸಿದವರು ಕೃಷಿ ವಿಜ್ಞಾನಿಗಳು, ಬುಡಕಟ್ಟು ಜನಾಂಗದ ಮುಂದಾಳುಗಳು ವಕೀಲರು. ಇದೊಂದು ರೀತಿ ರೈತರು ಮತ್ತು ಕೃಷಿಯೇತರ ವಲಯದ ಗಣ್ಯರು ವಿನಿಮಯ ಬೌದ್ಧಿಕ ಹಾಗೂ ಕಾಯಕ ಸಂದರ್ಭಗಳಿಗೆ ಸ್ಪಂದಿಸಿದ ಕ್ರಿಯೆಯಂತಿತ್ತು. ರೈತಾಪಿ ವಲಯ ಹಾಗೂ ನಗರದ ವಿದ್ಯಾವಂತರ ವಲಯಗಳ ಸಮಾಲೋಚನೆ, ಸಮಸ್ಯೆಗಳ ಪರಿಹಾರಕ್ಕೆ ಚಿಂತನಗಳ ಮಂಡನೆಗೆ ಅವಕಾಶವಾಗಿತ್ತು. ರೈತನ ತುಮುಲಗಳು ಸಮಾಜದ ನೆಲೆಗಳಲ್ಲಿ ಪ್ರತಿಧ್ವನಿಸಿದ ಬಗೆಯೂ ಆಗಿತ್ತು.

ಬಹುರಾಷ್ಟ್ರೀಯ ಕಂಪನಿಗಳು ಮಿತ್ರತಳಿ ಬೀಜ, ರಾಸಾಯನಿಕ ಗೊಬ್ಬರ, ಕೀಟನಾಶಕಗಳ ಹೊರತಾಗಿ ಬೇಸಾಯ ಫಲವಿಲ್ಲ ಎಂಬ ಸನ್ನಿವೇಶವನ್ನು ನಿರ್ಮಿಸಿದೆ ಎನ್ನುವುದಿದೆ. ಕೃಷಿ ಸಂಶೋಧನೆಗಳು ಕೃಷಿ ಭೂಮಿಯ ವಾಸ್ತವಕ್ಕೆ ಸಂಬಂಧಗೊಳ್ಳುತ್ತಿಲ್ಲ, ರೈತಾಪಿ ಪರವಾಗಿರದೆ, ಕಾರ್ಪೊರೇಟ್ ವಲಯಕ್ಕೆ ಮುಖಮಾಡಿವೆ. ಜಾಗತೀಕರಣದ ಈ ಹುರುಡಿನಲ್ಲಿ ಕುಲಾಂತರಿ ತಳಿಗಳು, ಜೈವಿಕ ಇಂಧನ, ಗುತ್ತಿಗೆ ಕೃಷಿ, (Contract farming) ಸಂಕರತಳಿ ಅವಕ್ಕೆ ಪೂರಕವಾದ ಮಾರುಕಟ್ಟೆಗಳ ಮೇಲಾಟವಾಗಿದೆ. ಸಣ್ಣ ರೈತ, ಮಧ್ಯಮ ರೈತ, ಅಂಚಿನ ರೈತ, ಈ ಜಾಗತಿಕ ಅತ್ಯಾವಸರದಲ್ಲಿ ಬದುಕುವುದೇ ಕಷ್ಟ ಎಂಬ ವ್ಯವಸ್ಥೆ ಉಂಟಾಗಿದೆ. ಇಂಥ ಸಂದರ್ಭಗಳನ್ನು ಅನುಲಕ್ಷಿಸಿ ಹೈದರಾಬಾದಿನ ಡೆಕ್ಕನ್ ಡೆವಲಪ್‌ಮೆಂಟ್ ಸೊಸೈಟಿ, ಬೆಂಗಳೂರಿನ ಇನ್‌ಸ್ಟಿಟ್ಯೂಟ್ ಫಾರ್ ಕಲ್ಚರಲ್ ರೀಸರ್ಚ್ ಅಂಡ್ ಆ್ಯಕ್ಷನ್ (ಇಕ್ರಾ), ಹಿತ್ತಲಗಿಡ, ಧಾರವಾಡದ ಸೆಂಟರ್ ಫಾರ್ ಅಗ್ರಿಕಲ್ಚರಲ್ ಮೀಡಿಯಾ, ಶರಸಿಯ ಅಪ್ಪಿಕೋ ಇತ್ಯಾದಿ ಸಂಘಟನೆಗಳು ಸೇರಿದಂಥ ಕೃಷಿ ಸಂಶೋಧನಾ ಪ್ರಜಾತಾಂತ್ರಿಕರಣ ಒಕ್ಕೂಟವು ಮೇಲಿನ 'ರೈತ ತೀರ್ಪು' ಕಾರ್ಯಕ್ರಮವನ್ನು ಹಮ್ಮಿಕೊಂಡಿತ್ತು. ರಾಜ್ಯದ ಎಲ್ಲ ಕಡೆಗಳಿಂದ ಆಯ್ಕೆ ಮಾಡಿದ 30 ಜನ ರೈತ ಜ್ಯೂರಿಗಳಲ್ಲಿ ಸಣ್ಣ, ಅತಿಸಣ್ಣ ಪ್ರಯೋಗಶೀಲ ರೈತರಲ್ಲಿ 15 ಮಂದಿ ರೈತ ಮಹಿಳೆಯರೂ ಇದ್ದರು. 'ರೈತತೀರ್ಪಿ'ನಲ್ಲಿ ರೈತರು ನ್ಯಾಯಾಧೀಶರಾಗಿ ಕುಳಿತದ್ದು; ಕೃಷಿ ಕ್ಷೇತ್ರದ ಸಂಶೋಧಕರು ತಮ್ಮ ಸಂಶೋಧನೆಯ ಉಪಯುಕ್ತತೆಯನ್ನು ಸಮರ್ಥಿಸಿಕೊಳ್ಳಲೆತ್ನಿಸಿದ್ದು; ವಾದಗಳ ಮೇಲುಸ್ತುವಾರಿಗೆ (ನಿ) ಮುಖ್ಯ ನ್ಯಾಯಮೂರ್ತಿ ಎಂ.ಎನ್. ವೆಂಕಟಾಚಲಯ್ಯ ನೇತೃತ್ವದ ತಂಡ ಇದ್ದದ್ದು. ವಿಶಿಷ್ಟವೆನಿಸಿತ್ತು. ಪಾರಂಪರಿಕ ಬೇಸಾಯಕ್ಕೆ ಜೋತು ಬೀಳಲಾಗದೆ, ಆಧುನಿಕ ಕೃಷಿಯನ್ನು ಜೀರ್ಣಿಸಿಕೊಂಡಿಲ್ಲದ ರೈತ ಸಮುದಾಯಕ್ಕೆ ಅನುಕೂಲಿಸುವ ಸಂಶೋಧನೆ

ಬೇಕು. ರೈತ ತನ್ನ ಜಮೀನಿನಲ್ಲಿ ಮಾಡುವ ಪ್ರಯೋಗಗಳಿಗೆ ಸರ್ಕಾರದ ಮನ್ನಣೆ, ರೈತರೇ ಉತ್ಪಾದಿಸುವ ಪರಿಸರ ಸೂಕ್ತವಾದ ರುಚಿಕರವಾದ ಮೇವು ಕೊಡುವ ಜವಾರಿ ತಳಿಗಳ ಸಂಶೋಧನೆ ಅಗತ್ಯ ಎಂಬ ಅಭಿಪ್ರಾಯಗಳು ಹೊರಹೊಮ್ಮಿದುವು. ಸಂಚಾರಿ ಮಣ್ಣು ಪರೀಕ್ಷೆ ಕೇಂದ್ರಗಳು ಎಂಬ 'ರೈತತೀರ್ಪಿ'ನಲ್ಲಿ ಒಡಮೂಡಿದ ಶಿಫಾರಸ್ಸುಗಳು ಅನುಭವ ಮತ್ತು ಸಂಶೋಧನೆಗಳ ನಡುವೆ ಮುಖಾಮುಖಿಯಾಗಿ, ಇತಿಮಿತಿಗಳ ಒಕ್ಕಣೆ ಮಾಡಿದ್ದುವು ಎನ್ನಬೇಕು. ರೈತರ ಅನುಶೋಧನೆಗಳಿಗೂ ಆದ್ಯತೆ ನೀಡಬೇಕು. ಹವಾಮಾನದ ಸಮಗ್ರ ಮಾಹಿತಿ ರೈತ ವಿರೋಧಿ ಬೀಜಕಾನೂನು ವರ್ಜ್ಯತೆ, ಕೃಷಿಗೆ ಪ್ರತ್ಯೇಕ ಬಜೆಟ್, ಬೀಜ ಬ್ಯಾಂಕುಗಳ ಸ್ಥಾಪನೆ ಆಗಬೇಕು ಎಂಬುದು ರೈತರ ತೀರ್ಪು ಆಗಿತ್ತು (6.12.09 ಪ.ವಾ). ಶ್ರೀ ಪದ್ಮರಾಜ ದಂಡಾವತಿ ಅವರು ಕೈಗಾರಿಕೆ ಬೆಳವಣಿಗೆಗಿಂತ ಕೃಷಿ ಬೆಳವಣಿಗೆ ಸಕಾರಾತ್ಮಕವಾಗಿರುವ ಸಂದರ್ಭದಲ್ಲಿ 'ಜಗತ್ತಿನಲ್ಲಿ ಮೊದಲ ಬಾರಿಗೆ ಕರ್ನಾಟಕದಲ್ಲಿ ನಡೆದ ಈ ಪ್ರಯೋಗ ಯಶಸ್ಸು ಕಂಡು ಸರ್ಕಾರ ಮತ್ತೆ ರೈತ ಪರ ನಿಲುವು ತೆಗೆದುಕೊಳ್ಳುವುದು ಸಾಧ್ಯವಾದರೆ ಅದಕ್ಕಿಂತ ದೊಡ್ಡ ಯಶಸ್ಸು ಬೇರೆ ಏನೂ ಇಲ್ಲ, ಹಾಗೂ ರೈತರ ಜತೆಗೆ ಮಾಧ್ಯಮಗಳೂ ನಿಲ್ಲಬೇಕಿದೆ ಎಂದಿದ್ದಾರೆ. (20.12.09 ಪ್ರ.ವಾ) ಈ ಮಾತು ವಾಸ್ತವ ಕಾಳಜಿಗಳ ಅನುರಣನದಂತಿದೆ. ಕೃಷಿ ಬದುಕು ಮತ್ತು ಸಂಶೋಧನೆ ಸಮಾಜಶೀಲವಾಗಿ ಸಮರಸಗೊಂಡಾಗಲೆ ಉಭಯತ್ರ ಸಾಂತ್ವನದ ನೆಲೆಗಳು ದಕ್ಕುತ್ತವೆ. ತೆಕ್ಕಯಲ್ಲಿನ ಆಶಯಗಳು ಹದವಾಗಿ ಗುರಿ ಸಾಧಿಸುತ್ತವೆ ಎನ್ನಬೇಕು. ಹೋರಾಟಕ್ಕೂ, ಸಾಂತ್ವನಕ್ಕೂ ನಡುವಣ ಸೇತುವಾಗಿ ಮೇಲ್ಲೂಚಿತ ಪ್ರಯತ್ನಗಳು ಪುಟಗೊಳ್ಳುತ್ತವೆ ಎನ್ನಬೇಕು. ಶಾಲಾ ಪಠ್ಯದಲ್ಲಿ ಕೃಷಿ ವಿಷಯ ಅಳವಡಿಕೆ, ಕೃಷಿ ವಿಶ್ವವಿದ್ಯಾಲಯ ಹಾಗೂ ಸರ್ಕಾರಿ ಸಂಶೋಧನಾ ಸಂಸ್ಥೆಯಲ್ಲಿ ರೈತರ ಸಹಭಾಗಿತ್ವಕ್ಕೆ ಅವಕಾಶವಿರಬೇಕು ಎಂದೆಲ್ಲ ತೀರ್ಪಿನ ಅಂಶಗಳಲ್ಲಿ ಒಡಮೂಡಿದ್ದು ಅನುಭವ ಮತ್ತು ಪ್ರಗತಿಯ ಸಮರಸ ಚಿಂತನೆಯಾಗಿತ್ತೆನ್ನಬೇಕು. ಬಹುಶಃ ಈ ಕಾರ್ಯಕ್ರಮ ಮೊದಲ ಬಾರಿಗೆ ಕರ್ನಾಟಕದಲ್ಲಿ ನಡೆದು ಕೃಷಿರಂಗದ ಹೊಸ ಆಯಾಮಗಳನ್ನು ತೆರೆದು ತೋರಿದೆ ಎನ್ನಬೇಕು. ಕೃಷಿ ತಂತ್ರಜ್ಞಾನ ಹಾಗೂ ಸಂಶೋಧನಾ ಮಾಹಿತಿಗಳು ಸ್ಥಳೀಯ ಭಾಷೆಯಲ್ಲಿ ಸಂವಹನ ಶೀಲವಾಗಿರಬೇಕು, ಕಬ್ಬು ಬೆಳೆ ಅಭಿವೃದ್ಧಿ ಹಾಗೂ ಕೃಷಿ ಸಂಶೋಧನೆಗಾಗಿ ಕಬ್ಬು ಸಂಶೋಧನಾ ಕೇಂದ್ರವೂ ಬೇಕು; ಸರ್ಕಾರದ ಬಂಡವಾಳ ಹೂಡಿಕೆಯಲ್ಲಿ ಹೋಬಳಿ ಮಟ್ಟದ ಗುಡಿ ಕೈಗಾರಿಕೆಗಳ ಸ್ಥಾಪನೆ ಆಗಬೇಕು, ಇದಕ್ಕೆ ರೈತರ ಸಹಭಾಗಿತ್ವವಿರಬೇಕು ವಿಶೇಷ ವಿತ್ತವಲಯ ಹಾಗೂ ಅಭಿವೃದ್ಧಿಯ ಹೆಸರಿನಲ್ಲಿ ಕೃಷಿ ಭೂಮಿಯನ್ನು

ರೈತರಿಂದ ಕಸಿಯಬಾರದು. ಗೋಮಾಳ ಮತ್ತು ಕೆರೆಗಳು ರೈತ ಸಮುದಾಯಕ್ಕೆ ಸಿಗುವಂತೆ ಮಾಡಬೇಕು. ಕುರಿ ಅಭಿವೃದ್ಧಿ ಮಂಡಳಿಯಲ್ಲಿ, ನೀತಿ ನಿರೂಪಣೆಯಲ್ಲಿ ಕುರಿಗಾಹಿಗಳಿಗೆ ಪ್ರಾತಿನಿಧ್ಯವಿರಬೇಕು, ಮುಂತಾದ ಶಿಫಾರಸುಗಳೂ ರೈತ ತೀರ್ಪಿನಲ್ಲಿದ್ದು ರೈತ ಸಾಂತ್ವನದ ವಿವಿಧ ಮಾರ್ಗಮುಖಿಗಳ ಹಸಿರು ನಿಶಾನೆಯನ್ನು ತೋರುವಂತಿದ್ದುವು. 2009ರ ನವೆಂಬರ್ 30ರಿಂದ ಡಿಸೆಂಬರ್ 4ರವರೆಗೆ ನಡೆಸಿದ ಚರ್ಚೆ, ವಿಚಾರ ವಿನಿಮಯ, ವಿಷಯ ಮಂಡನೆಗಳು ಫಲಶ್ರುತಿ 'ರೈತತೀರ್ಪು' ಶನಿವಾರ 5.12.2009ರಂದು ಹೊರಬಿದ್ದಿತ್ತು.

**ರೈತರಿಗೆ ಜಮೀನು ನಿವೇಶನ ಖರೀದಿಗೆ ರಿಯಾಯಿತಿ :** ಕೃಷಿ ಜಮೀನನ್ನು ಸರ್ಕಾರದ ವಿವಿಧ ಅಭಿವೃದ್ಧಿ ಕಾರ್ಯಗಳಿಗೆ ಜಮೀನು ಕೊಡುವ ರೈತರಿಗೆ ದಕ್ಕುವ ಪರಿಹಾರ ಅಷ್ಟಕ್ಕಷ್ಟೆ. ಕೃಷಿ ಬಿಟ್ಟು ಬೇರೆ ಕಸುಬು ಗೊತ್ತಿಲ್ಲದ ರೈತರು ಮತ್ತೆ ಬೇರೆ ಕಡೆ ಕೃಷಿ ಭೂಮಿ ನಿವೇಶನ ಖರೀದಿಸಿದರೆ ಅಂಥವರಿಗೆ ನೋಂದಣಿ ಮತ್ತು ಮುದ್ರಾಂಕ ಶುಲ್ಕದಲ್ಲಿ ಶೇ. 50 ರಷ್ಟು ರಿಯಾಯಿತಿ ಕೊಡಲು, ರೈತರು ಬೇಡಿಕೆ ಇಟ್ಟಂತೆ, ಸರ್ಕಾರ ಆಲೋಚಿದೆ. ಆದರೆ ರೈತರು ಶುಲ್ಕದಲ್ಲಿ ಸಂಪೂರ್ಣ ರಿಯಾಯಿತಿಗೆ ಒತ್ತಾಯಿಸಿದರು. ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಕ್ಯಾಬಿನೆಟ್ ಒಪ್ಪಿಗೆ ನಂತರವೆ ಆ ಬಗ್ಗೆ ಅಂತಿಮ ತೀರ್ಮಾನ ಒದಗುವುದು. ಈ ಬಗ್ಗೆ ಕಾರ್ಯಶೀಘ್ರತೆ ರೈತ ಸಾಂತ್ವನಕ್ಕೆ ಎಡೆ ಕೊಡುತ್ತದೆ. ರೈತರನ್ನು ನೆಲದ ಉಳುಮೆ ತಜ್ಞರೆಂದು ಗೌರವಿಸಿದಾಗಲೇ ಜನತಾ ವಿಜ್ಞಾನ ಮತ್ತು ಸರ್ಕಾರದ ವೈಶಾಲ್ಯತೆ, ಸ್ವೀಕರಣವೆನಿಸುತ್ತದೆ.

**ರೈತರ ಖಾಸಗಿ ಕಾಲ ಸಂಕಷ್ಟ ನಿವಾರಣೆ, ಕೇಂದ್ರದ ನೆರವು :** ಕೇಂದ್ರ ಸರ್ಕಾರವು ರೈತರನ್ನು ಸಾಲದಿಂದ ಮುಕ್ತರನ್ನಾಗಿ ಮಾಡುವ ಮಾರ್ಗೋಪಾಯವನ್ನು ಸೂಚಿಸಲು ರಾಷ್ಟ್ರೀಯ ಕೃಷಿ ಗ್ರಾಮೀಣಾಭಿವೃದ್ಧಿ ಬ್ಯಾಂಕ್–ನಬಾರ್ಡ್ ಅಧ್ಯಕ್ಷದ ನೇತೃತ್ವದಲ್ಲಿ 16 ಸದಸ್ಯರ ಕಾರ್ಯಪಡೆಯನ್ನು ರಚಿಸಿತು. ಅವರೆಲ್ಲ ಕೃಷಿ ಮತ್ತು ಬ್ಯಾಂಕಿಂಗ್ ಕ್ಷೇತ್ರದವರು. ಈ ಕಾರ್ಯಪಡೆಯು ವಿವಿಧ ರಾಜ್ಯಗಳಲ್ಲಿ ಖಾಸಗಿ ಸಾಲ ನಿಯಂತ್ರಣ ಕಾಯ್ದೆಗಳ ಹಾಗು ನೀತಿಗಳ ಪರಾಮರ್ಶೆ ಮಾಡಬೇಕಿತ್ತು. ಹಾಲಿ ಕ್ರೆಡಿಟ್ ಕಾರ್ಡ್ ವಿತರಣಾ ನಿಯಮಗಳನ್ನು ಪರಿಷ್ಕರಿಸಿ ಎಲ್ಲ ರೈತರಿಗೆ ಕಿಸಾನ್ ಕ್ರೆಡಿಟ್ ಕಾರ್ಡ್ ದೊರೆಯುವಂತೆ ಮತ್ತು ಸಾಲದ ಮೇಲಿನ ಮಿತಿಯನ್ನು ಹೆಚ್ಚಿಸುವ ಬಗ್ಗೆ ಪರಾಮರ್ಶೆ ಮಾಡಬೇಕಿತ್ತು. ಕೇಂದ್ರ ಸರ್ಕಾರ ಕಳೆದ ಸಾಲಿನಲ್ಲಿ ರೂಪಿಸಿದ 60 ಸಾವಿರ ಕೋಟಿ ರೂಪಾಯಿ ಸಾಲ ಮನ್ನಾ ಯೋಜನೆ ವ್ಯಾಪ್ತಿಗೆ

ಒಳಪಟ್ಟಿರಲಿಲ್ಲ. ಅದು ಸಹಕಾರಿ ಬ್ಯಾಂಕ್, ವಾಣಿಜ್ಯ ಬ್ಯಾಂಕ್‌ಗಳಲ್ಲಿ ಸಾಲ ಪಡೆದವರಿಗೆ ಮಾತ್ರ ಅನ್ವಯವಾಗಿತ್ತು. ಈ ಸಾಲವನ್ನು (60 ಸಾವಿರ ಕೋಟಿ) ಯೋಜನೆಯ ಜಾರಿಯ ನಂತರವೂ ರೈತರ ಆತ್ಮಹತ್ಯಾ ಪ್ರಕರಣಗಳು ಕೊನೆಯಾಗಲಿಲ್ಲ. ಕೇಂದ್ರ ಕೃಷಿ ಸಚಿವಾಲಯ ಮತ್ತು ನಬಾರ್ಡ್ ಈ ಬಗ್ಗೆ ಸಮೀಕ್ಷೆ ಮಾಡಿದಾಗ ಖಾಸಗಿ ವ್ಯಕ್ತಿ ಮತ್ತು ಸಂಸ್ಥೆಗಳಿಂದ ಸಾಲ ಪಡೆದ ರೈತರು, ಪ್ರವಾಹ ಹಾಗೂ ಬರ ಇತ್ಯಾದಿಗಳಿಂದ ಬೆಳೆ ನಷ್ಟವಾಗಿ ಆತ್ಮಹತ್ಯೆಯ ದಾರಿ ಹುಡುಕಿಕೊಂಡರು. ಇಂಥ ಖಾಸಗಿ ಸಾಲದ ಅವಲಂಬನೆ ತಪ್ಪಿಸಿ ರೈತರಿಗೆ ಸಾಂಸ್ಥಿಕ ಹಣಕಾಸು ಹಂಚಿಕೆ ಮತ್ತು ವಿಮಾ ವ್ಯಾಪ್ತಿಗೊಳಪಡಿಸುವುದು ಸರ್ಕಾರ ಕಂಡುಕೊಂಡಿರುವ ಸಾಂತ್ವನ ಪ್ರಕ್ರಿಯೆ. ಹೀಗಾಗಿ ಈ ದಿಸೆಯಲ್ಲಿ ರಾಷ್ಟ್ರವ್ಯಾಪಿ ಸಮಸ್ಯೆಗಳನ್ನು ಅಧ್ಯಯನ ಮಾಡಿ ಕೇಂದ್ರ ಸರ್ಕಾರಕ್ಕೆ 31.3.2010ರೊಳಗೆ ವರದಿ ಸಲ್ಲಿಸುವಂತೆ ಸೂಚಿಸಿತು. (10.12.2009)

**ವಿಧಾನಮಂಡಲದಲ್ಲಿ ನೆರೆ ರೈತರ ಸಾಲ ಮನ್ನಾಕ್ಕೆ ಒತ್ತಾಯ :** 21.12.2009ರ ವಿಧಾನ ಸಭಾಧಿವೇಶದಲ್ಲಿ ಪ್ರತಿಪಕ್ಷದ ನಾಯಕ ಶ್ರೀ ಸಿದ್ಧರಾಮಯ್ಯ ಅವರು ನೆರೆಪೀಡಿತ ಪ್ರದೇಶದ ರೈತರ ಸಾಲ ಮನ್ನಾ ಮಾಡಬೇಕು. ನೆರೆ ಪರಿಹಾರ ವಿತರಣೆಯಲ್ಲಾಗಿರುವ ಅನ್ಯಾಯ ಸರಿಪಡಿಸಲು ಜಂಟಿ ಸದನ ಸಮಿತಿ ರಚಿಸುಬೇಕು ಎಂದು ಹಕ್ಕೊತ್ತಾಯವಿಟ್ಟರು. ರೈತರಿಗೆ ನೆರೆ ಪರಿಹಾರ ನೀಡುವಾಗ ಪಕ್ಷಾತೀತವಾಗಿ ನೀಡಬೇಕು. ಸಕಾಲದಲ್ಲಿ ರಾಜ್ಯ ಸರ್ಕಾರ ಕ್ರಮಕೈಗೊಂಡಿದ್ದರೆ ಹಾನಿಯ ಪ್ರಮಾಣವು ತಗ್ಗುತ್ತಿತ್ತು. ನೆರೆಹಾನಿ ಕುರಿತಂತೆ ಮರು ಸಮೀಕ್ಷೆ ನಡೆಯಬೇಕು ಎಂದು ಆಗ್ರಹಿಸಿದರು. ಪ್ರಶ್ನೋತ್ತರ ವೇಳೆ ಮುಗಿದ ಮೇಲೆ ನೆರೆ ಮತ್ತು ಬರಪರಿಹಾರ ಕುರಿತು ನಿಲುವಳಿ ಸೂಚನೆ ಮಂಡನೆಗೆ ಪ್ರಸ್ತಾಪ ಮಾಡಿದರು. ಆದರೆ ಸಭಾಧ್ಯಕ್ಷ ಶ್ರೀ ಕೆ.ಜಿ. ಬೋಪಯ್ಯ ಅವರು ಈ ಪ್ರಸ್ತಾಪಕ್ಕೆ ಅವಕಾಶವಿಲ್ಲವೆಂದು ನಿಯಮ 69ರ ರೀತ್ಯಾ ಚರ್ಚೆಗೆ ಅವಕಾಶ ಕಲ್ಪಿಸಿದರು.

ಚರ್ಚೆ ಆರಂಭಿಸುವ ಶ್ರೀ ಸಿದ್ಧರಾಮಯ್ಯ ಅವರು ರಾಜ್ಯದ ಉತ್ತರ ಭಾಗದಲ್ಲಿ ನೆರೆ ಬಂದು ಜನರು ಸಂಕಷ್ಟದಲ್ಲಿದ್ದಾಗ ಮುಖ್ಯಮಂತ್ರಿಗಳಿಗೆ ನಿಜವಾದ ಕಾಳಜಿ ಇದ್ದಿದ್ದರೆ ತಕ್ಷಣವೆ ನೆರೆಸಂತ್ರಸ್ತರ ನೆರವಿಗೆ ಧಾವಿಸಬೇಕಿತ್ತು. ರಾಜ್ಯದಲ್ಲಿರುವ ಮುಖ್ಯಮಂತ್ರಿಗಳ ಅಧ್ಯಕ್ಷತೆಯ ಪ್ರಕೋಪ ನಿರ್ವಹಣಾ ಸಮಿತಿ ರಾಜ್ಯದ ಬರ ನೆರೆ ಪರಿಸ್ಥಿತಿ ನಿಭಾಯಿಸಲು ಮುಂಜಾಗ್ರತಾ ಕ್ರಮಕೈಗೊಂಡಿದ್ದರೆ ಇಷ್ಟೆಲ್ಲಾ ಅನಾಹುತವಾಗುತ್ತಿರಲಿಲ್ಲ. ಪರಿಹಾರ ನೀಡಿಕೆಯಲ್ಲಿ ಅವ್ಯವಹಾರ ನಡೆದಿದೆ ಎಂದು

ಲೋಕಾಯುಕ್ತದ ಸಮೀಕ್ಷಾ ವರದಿ ತಿಳಿಸಿದೆ. ಲೋಕಾಯುಕ್ತರು ಮುಖ್ಯ ಕಾರ್ಯದರ್ಶಿಗಳಿಗೆ ಈ ಬಗ್ಗೆ ಪತ್ರ ಬರೆದಿದ್ದರೂ ಸಹ ಏನೂ ಕ್ರಮಕೈಗೊಂಡಿಲ್ಲ. ಪರಿಹಾರ ನೀಡಲು ನಷ್ಟದ ಮರು ಸಮೀಕ್ಷೆ ನಡೆಸಬೇಕು. ಸಾಲಮನ್ನಾ ಮಾಡಬೇಕು ಎಂಬ ಬೇಡಿಕೆಯನ್ನು ಸದನದಲ್ಲಿ ಮಂಡಿಸಿದರು.

**ರೈತರಿಗೆ ಈಡೇರಿದ ಭರವಸೆ :** 24.12.2009ನೇ ಗುರುವಾರ ವಿಧಾನ ಸಭಾಧಿವೇಶನದಲ್ಲಿ, ಚಾಮರಾಜನಗರದ ರೈತರನ್ನು ಬಿಡದಿ ಬಳಿ ಭೇಟಿ ಮಾಡಿ ನ್ಯಾಯಯುತ ಬೇಡಿಕೆಗಳನ್ನು ಈಡೇರಿಸುವುದಾಗಿ ಮಾತುಕೊಟ್ಟಂತೆ ಕೃಷಿಕರು ಮತ್ತು ಕೃಷಿ ಕಾರ್ಮಿಕರಿಗೆ ಅನ್ವಯವಾಗಿ ಅನುಕೂಲಗಳನ್ನು ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರು ಪ್ರಕಟಿಸಿದರು ರೈತರ ಮೇಲಿದ್ದ ಎಲ್ಲ ಪ್ರಕರಣಗಳ ವಾಪಸಾತಿ, ರೈಲ್ವೆ ಪೋಲೀಸರು ದಾಖಲಿಸಿರುವ ಕೇಸ್‌ಗಳನ್ನು ಕೈಬಿಡಲು ಕೇಂದ್ರ ಸರ್ಕಾರಕ್ಕೆ ಪತ್ರ ಬರೆಯುವ ಬಗ್ಗೆ ಘೋಷಿಸಿದರು. ಬೆಂಕಿಗಾಹುತಿಯಾದ ತೆನೆಬಣವೆ, ಮೇವು ಬಣವೆಗಳಿಗೆ ಎಕರೆಗೆ ಸಾವಿರ ರೂ.ಗಳಂತೆ 5 ಎಕರೆವರೆಗೆ ಪರಿಹಾರ, ತೆಂಗು ಸಂಶೋಧನೆ ಮತ್ತು ಮಾರುಕಟ್ಟೆ ಬಲಪಡಿಸಲು 'ನೀರಾ ಅಭಿವೃದ್ಧಿ ಮಂಡಳಿ' ರಚನೆ ಇತ್ಯಾದಿಗಳನ್ನು ಉಳಿದ ಬೇಡಿಕೆಗಳ ಜೊತೆಗೆ ಪೂರೈಸುವ ಬಗ್ಗೆ ಪ್ರಕಟಿಸಿದರು.

ಪ್ರತಿಪಕ್ಷದ ನಾಯಕ ಶ್ರೀ ಸಿದ್ಧರಾಮಯ್ಯ ಅವರು ಕಾಡಾನೆ, ಜಿಂಕೆ, ಕಾಡುಹಂದಿ, ಕಾಡುಕೋಣಗಳಿಂದ ಆಗುವ ಪ್ರಾಣಹಾನಿ, ಬೆಳೆಹಾನಿ, ಸಮಸ್ಯೆಗಳನ್ನು ಎದುರಿಸುತ್ತಿರುವ ರೈತರಿಗೂ ಸರ್ಕಾರ ಅನುಕೂಲ ಕಲ್ಪಿಸಬೇಕು; ಪರಿಹಾರದ ಪಟ್ಟಿಯಲ್ಲಿ ಅವರನ್ನು ಸೇರಿಸಬೇಕು ಎಂದು ಒತ್ತಾಯಿಸಿದರು. ಶ್ರೀ ಹೆಚ್.ಡಿ. ರೇವಣ್ಣನವರು ತೆಂಗು ಬೆಳೆಗಾರರಂತೆ ಕಬ್ಬು ಬೆಳೆಗಾರರೂ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಹಾಸನದಲ್ಲಿ ಕಬ್ಬು ಬೆಳೆಗಾರರ 10 ಕೋಟಿ ರೂ.ಗೂ ಹೆಚ್ಚು ಬಿಲ್ ಬಾಕಿ ಉಳಿದಿದೆ. ಕಬ್ಬು ನೀಡಿ ಆರು ತಿಂಗಳಾದರೂ ಬಿಲ್ ಬಾಕಿಗಾಗಿ ಅಲೆದಾಡುವುದು ತಪ್ಪಿಲ್ಲ. ಸರ್ಕಾರದ ಕಬ್ಬು ಬೆಳೆಗಾರರ ಸಮಸ್ಯೆಗೆ ಸ್ಪಂದಿಸಬೇಕು ಎಂದು ಅಗ್ರಹಿಸಿದರು. (25.12.2009). ಮುಖ್ಯಮಂತ್ರಿಗಳು ಭರವಸೆ ಈಡೇರಿಕೆ ಬಗ್ಗೆ ಮಾಡಿದ ಘೋಷಣೆ, ಪ್ರತಿಪಕ್ಷನಾಯಕರ ರೈತರಿಗೆ ಬೇರೆ ಬೇರೆ ಸೌಲಭ್ಯಗಳ ಈಡೇರಿಕೆಗೆ ಕೊಟ್ಟ ಸಲಹೆಗಳು, ರೈತರಿಗೆ ಸಾಂತ್ವನದ ಉಡುಗೊರೆಯಾಗಿಯೆ ಕಾಣಬಂದುವು.

**ಮಹಾತ್ಮಗಾಂಧಿ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ :** ಇದು ಕೇಂದ್ರ ಸರ್ಕಾರದ ಒಂದು ಜನಪ್ರಿಯ ಯೋಜನೆ ಮಳೆ ಕುಯ್ಲು, ಮಣ್ಣು ಸಂರಕ್ಷಣೆ, ಜಲಾಶಯ ನಿರ್ವಹಣೆ ಇತ್ಯಾದಿ ಸಂದರ್ಭಗಳಲ್ಲಿ ಗ್ರಾಮೀಣರನ್ನು ತೊಡಗಸಿದಾಗ, ಅದು ಉದ್ಯೋಗ ಒದಗಿಸುವುದಲ್ಲದೆ, ಆಹಾರ ಭದ್ರತೆಗೂ ಅವಕಾಶವಾಗುತ್ತದೆ ಅಂತರ್ಜಲ ಸೌಲಭ್ಯ ಉತ್ತಮವಾಗಿರುವ ಕಡೆಗಳಲ್ಲಿ ಕೃಷಿ ಕಾರ್ಯಗಳ ವಿಸ್ತರಣೆಯಾಗಬೇಕು ಎಂದು ಕೃಷಿ ವಿಜ್ಞಾನಿಗಳು ಸೂಚಿಸುತ್ತಾರೆ. ಈ ಯೋಜನೆಯಿಂದ ಕೆಲಕಾಲವಾದರೂ ಎಷ್ಟೋ ಮಂದಿಗೆ ಕೆಲಸ ಖಾತ್ರಿಯಾಗಿರುತ್ತದೆ. ಬಡತನದ ರೇಖೆಗಿಂತ ಕೆಳಗಿರುವ ಫಲಾನುಭವಿಗಳಿಗೆ ಇದು ನಿರಾಳ ಆಸರೆ ಆಗಿದೆ. ಇದರ ಮುಖ್ಯ ಉದ್ದೇಶ ಬಡವರಿಗೆ ನೂರು ದಿನಗಳಷ್ಟು ಕೆಲಸ ಕೊಡುವುದು. ಮೋರಿ ರಿಪೇರಿ, ರಸ್ತೆ ರಿಪೇರಿ ಇತ್ಯಾದಿ ಕೆಲಸಗಳನ್ನು ಸರ್ಕಾರದಿಂದ ನೇರ ಮಾಡಿಸುವುದರಿಂದ ಗುತ್ತಿಗೆದಾರರ ಹಾವಳಿಯಿಂದ ಫಲಾನುಭವಿಗಳನ್ನು ದೂರವಿರಿಸಿ ದುಡಿಮೆಯ ಹಣವು ಪೂರ್ಣವಾಗಿ ಫಲಾನುಭವಿಗಳಿಗೆ ದಕ್ಕುವಂತೆ ಮಾಡುವುದಾಗಿದೆ. ಆದರೆ ಇಲ್ಲಿ ಹೆಚ್ಚು ಕೂಲಿ ಪಡೆಯುವವ ರೈತನ ಮನೆಗೆ ಮಣ್ಣಿನ ಕೆಲಸಕ್ಕೆ ಕೃಷಿ ಕಾರ್ಯಗಳಿಗೆ ಬಂದಾಗ ಕಡಿಮೆ ಕೆಲಸ, ಕಡಿಮೆ ಸಮಯದಲ್ಲಿ ಹೆಚ್ಚಿನ ಕೂಲಿಯನ್ನು ಬಯಸುತ್ತಾನೆ. ಬೇಕೆಂದಾಗ ಕೆಲಸ ಒದಗಬೇಕು ಎಂಬ ಮನೋಭಾವ ಬೆಳೆದಿರುವಾಗ ವರ್ಷಪೂರ್ತಿ ಕೆಲಸ ಕೊಡಬಲ್ಲ ಬೇಸಾಯಗಾರ ರೈತರಿಗೆ ಇಂಥ ಶರತ್ತು ಒಂದು ದೊಡ್ಡ ಹೊಡೆತ ಕೊಟ್ಟಂತಾಗುತ್ತದೆ. ರೈತರ ಗೋಳು ಎದ್ದು ಕಾಣುವುದು ಇಲ್ಲಿಯೆ. ಕಡಿಮೆ ಬಡ್ಡಿಗೆ ಸಾಲ, ಸಾಲಮನ್ನಾ ಯೋಜನೆಗಳಿವೆ ಸರಿ. ಆದರೆ ಕೃಷಿ ಕೂಲಿಯ ನಿರಂತರ ನೀಡಿಕೆಯೆ ಇಂದು ರೈತರಿಗೆ ಸಮಸ್ಯೆ ಆಗಿದೆ. ಇಂಥ ಸಂದರ್ಭದಲ್ಲಿ ಉದ್ಯೋಗ ಖಾತ್ರಿಯೋಜನೆಯನ್ನು ಗ್ರಾಮಪಂಚಾಯಿತಿಯ ಮೂಲಕ ಜಾರಿಗೊಳಿಸಿದರೆ ಸ್ಥಳೀಯ ಕೃಷಿ ಇತ್ಯಾದಿ ಸ್ಥಳೀಯ ಕೆಲಸ ಕಾರ್ಯಗಳ ಚಾಲೂ ಸಮಯ ಹಾಗೂ ಮುಕ್ತಾಯ ಸಮಯದ ಅರಿವಿರುವಲ್ಲಿ ರೈತರ ಅನುಕೂಲಕ್ಕೆ ಈ ಯೋಜನೆಯು ಸೂಕ್ತ ಅನ್ವಯವಾಗಬಲ್ಲುದು. ಕೂಲಿಗೆ ಸರಿಯಾದ ದುಡಿಮೆ ಆಗಲೇಬೇಕು ಎಂದಾಗ ಸೋಮಾರಿಗಳಿಗೆ ಉದ್ಯೋಗವೆಂಬುದು ತಪ್ಪಿ ರೈತರಿಗೆ ಸಹಾಯವಾಗುತ್ತದೆ ಎಂಬುದು ಕೆ.ಎಸ್. ನಿರುಪಮಾ ಅವರ ಅಭಿಪ್ರಾಯವಾಗಿದೆ. (3.3.10) ಉದ್ಯೋಗ ಖಾತ್ರಿಯೋಜನೆ ಋಣಾತ್ಮಕ ಸಂದೇಶವನ್ನು ತಲುಪಿಸುವಂತಾಗಬಾರದು. ಬದಲು ದುಡಿಮೆಗೆ ತಕ್ಕಕೂಲಿ ಉತ್ಪನ್ನ ಖರ್ಚಿಗನುಗುಣವಾಗಿ ಬೆಳೆಗೆ ಬೆಲೆ ದೊರಕಿಸಿದರೆ ರೈತರಿಗೆ ಅದನ್ನೆಲ್ಲ ಸಂಭಾಳಿಸುವ ಶಕ್ತಿ ಬಂದೀತು. ಜಾಗತೀಕರಣದ ನೆಲೆ ಧನಾತ್ಮಕವಾಗಿ

ಬಡರಾಷ್ಟ್ರಗಳ ರೈತರನ್ನು ಸಂಪದ್ಭರಿತರನ್ನಾಗಿ ಮಾಡುವತ್ತ ಶ್ರಮಿಸಬೇಕು. ಪ್ರಧಾನಿ ಮನಮೋಹನ್ ಸಿಂಗ್ ಇದನ್ನೆಲ್ಲ ಗಮನದಲ್ಲಿಟ್ಟುಕೊಂಡು 'ಬಡತನವನ್ನು ಚಿರಸ್ಥಾಯಿಗೊಳಿಸುವುದು ಸಲ್ಲ' ಎಂದಿರಬೇಕು.

ಹಿವರೆಬಜಾರ್ ಹಳ್ಳಿಯ ಜನ ಉದ್ಯೋಗ ಖಾತ್ರಿ ಯೋಜನೆಯ ಹಣವನ್ನು ಸಮರ್ಪಕವಾಗಿ ಬಳಸಿಕೊಂಡ ಉದಾಹರಣೆಯನ್ನು ಒಂದೆಡೆ ಪದ್ಮರಾಜ್ ದಂಡಾವತಿ ಅವರು ನೀಡಿದ್ದಾರೆ (27.9.09). ಫಲವತ್ತತೆ ಹೆಚ್ಚಿಸಲು, ಮಣ್ಣಿನ ಸಂಸ್ಕರಣೆ, ಮಳೆ ನೀರು ಸಂಗ್ರಹಕ್ಕೆ ಕಾಂಟೂರ್ ನಿರ್ಮಾಣ, ಅಂತರ್‌ಜಲ ವಿದ್ಯುತ್ ಇಂಗುಕೆರೆ ಮತ್ತು ಚೆಕ್‌ಡ್ಯಾಂ ನಿರ್ಮಾಣ, ಗುಡ್ಡದಲ್ಲಿ ಗಿಡನೆಡುವಿಕೆ ಇತ್ಯಾದಿಗಳತ್ತ ಗಮನಕೊಟ್ಟು ಖಾತ್ರಿಯೋಜನೆಯ ಹಣವನ್ನು ಸದುಪಯೋಗ ಪಡಿಸಿಕೊಂಡರು.

ಕಾಡಾನೆಗಳ ಹಾವಳಿ ಚಾಮರಾಜನಗರ ಜಿಲ್ಲೆಯ ಹಲವಾರು ಗ್ರಾಮಗಳಲ್ಲಿ ಹೇಳತೀರದಷ್ಟು ಇತ್ತು. ಇಲ್ಲಿಯ ರೈತರಿಗೆ ಮಹಾತ್ಮಗಾಂಧಿ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯು ವರದಾನವಾಗಿ ಬಂದು, ಆ ಯೋಜನೆಯಡಿ ಸಂಬಳ ಪಡೆದು ತಮ್ಮ ಹೊಲಗಳನ್ನು ತಾವೇ ರಕ್ಷಿಸಿಕೊಳ್ಳುತ್ತಿರುವಂಥ ಉದಾಹರಣೆಯನ್ನು ದೇವರಾಜು ಕಪ್ಪಸೋಗೆ ಅವರು ನೀಡಿದ್ದಾರೆ. (1.3.10) : ಇಂಥ ಪ್ರಯೋಗ ಬಂಡೀಪುರ ರಾಷ್ಟ್ರೀಯ ಉದ್ಯಾನದಲ್ಲಿ ನಡೆಯುತ್ತಿದೆ. ರೈತರು ಹಗಲು ವೇಳೆ ತಮ್ಮ ಹೊಲದ ಕೆಲಸ ಮುಗಿಸಿಕೊಳ್ಳುತ್ತಾರೆ. ರಾತ್ರಿವೇಳೆ ಉದ್ಯೋಗ ಖಾತ್ರಿ ಯೋಜನೆಯಡಿ ಕೆಲಸ ಮಾಡುವ ಮೂಲಕ ತಮ್ಮ ಹೊಲ-ತೋಟಗಳನ್ನು ರಕ್ಷಿಸಿಕೊಳ್ಳುತ್ತಿದ್ದಾರೆ. ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ ತಾಲೂಕಿನ ರಾಘವಾಪುರ, ಹುಂಡೀಪುರ, ಬೇರಂಬಾಡಿ, ಮಂಗಲ, ಕೋಟೆಕೆರೆ, ಕಣ್ಣೇಗಾಲ, ಆಲತ್ತೂರು, ಭೀಮನಬೀಡು, ಬೊಮ್ಮನಹಳ್ಳಿ, ಬಾಚಹಳ್ಳಿ ಗ್ರಾಮಪಂಚಾಯ್ತಿ ವ್ಯಾಪ್ತಿಯಲ್ಲಿ ಹೀಗೆ ಹೊಲ-ತೋಟಗಳ ರಕ್ಷಣೆ ಆಗುತ್ತಿದೆ. ಅರಣ್ಯ ಇಲಾಖೆ ರೈತರ ಜಮೀನುಗಳಿಗೆ ಆನೆ ಹಾವಳಿ ತಪ್ಪಿಸಲು ಈ ಯೋಜನೆಯಡಿ 10 ಗ್ರಾಮ ಪಂಚಾಯಿತಿ ವ್ಯಾಪ್ತಿಯ 1211 ಮಂದಿ ಕಾರ್ಮಿಕರು ಆನೆ ಕಾಯುವಲ್ಲಿ ಕಾರ್ಯನಿರತರನ್ನಾಗಿಸಿದೆ. ಅವರಿಗೆ ಲಕ್ಷಾಂತರ ರೂ. ಮೌಲ್ಯದ ಪಟಾಕಿಗಳನ್ನು, ಆನೆ ಓಡಿಸಲನು ಕೂಲಿಸಲು ನೀಡಿದೆ. ಲಾಟೀನು ಬ್ಯಾಟರಿಗಳನ್ನು ಕೊಟ್ಟು ರಾತ್ರಿ ಸಂಚಾರಕ್ಕೆ ಜೀಪ್ ವ್ಯವಸ್ಥೆಯನ್ನು ಮಾಡಲಾಗಿದೆ. ಹೀಗಾಗಿ ರೈತರೇ ಮುತುವರ್ಜಿ ವಹಿಸಿ ಆನೆ ಕಾಯುತ್ತಾರೆ.

ಅಭಿವೃದ್ಧಿ ಕಾಮಗಾರಿ ದೃಷ್ಟಿಯಿಂದ ಹೇಳಿದರೆ, ಹಾಸನ ತಾಲೂಕಿನಲ್ಲಿ 1.50 ಲಕ್ಷ ರೂ. ವೆಚ್ಚದಲ್ಲಿ ಕಾಲುವೆ ನಿರ್ಮಾಣ, ಅರಕಲಗೂಡು ತಾ. ಕಟ್ಟೆಮಲ್ಲೇನ ಹಳ್ಳಿ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಒಂದು ಲಕ್ಷ ರೂ. ವೆಚ್ಚದಲ್ಲಿ ರಸ್ತೆ ನಿರ್ಮಾಣ, ಹೊಳೆನರಸೀಪುರ ತಾ. ಮೂಡಲಹಿಪ್ಪೆ ಗ್ರಾಮಪಂಚಾಯತ್ ವ್ಯಾಪ್ತಿಯಲ್ಲಿ 6 ಲಕ್ಷ ರೂ. ವೆಚ್ಚದಲ್ಲಿ ಚೆಕ್‌ಡ್ಯಾಂ ನಿರ್ಮಾಣ; ಗೂಳಿ ಸಾತೇನಹಳ್ಳಿ ಶಾಲಾವರಣದಲ್ಲಿ 1.34 ಲಕ್ಷ ರೂ. ವೆಚ್ಚದಲ್ಲಿ ನೆಲಸಮತಟ್ಟು ನಿರ್ವಹಣೆ; ಬೇಲೂರು ತಾ, ಬಿ.ಎಲ್. ಕೊಪ್ಪಲು ಗ್ರಾಮದ ತೋಟದಲ್ಲಿ ಹೊಸದಾಗಿ ಗಿಡ ನೆಡುವಿಕೆ ಹಾಗೂ ಹಾಲಿ ಹಿಪ್ಪುನೇರಳೆ ತೋಟವನ್ನು 0.10 ಲಕ್ಷ ರೂ. ವೆಚ್ಚದಲ್ಲಿ ಅಭಿವೃದ್ಧಿ ಇವನ್ನೆಲ್ಲ ಮಾಡಲಾಗಿದೆ. ಈ ಸಂದರ್ಭಗಳ ಕೂಲಿದರವನ್ನು ದಿನವೊಂದಕ್ಕೆ 82ರೂ. ಗಳಿಂದ 100 ರೂ. ಗಳಿಗೆ 1.4.2009ರಿಂದ ಅನ್ವಯವಾಗುವಂತೆ ಪರಿಷ್ಕರಿಸಿ ಸರ್ಕಾರದ ಆದೇಶವಾಗಿದೆ. ಈ ಖಾತ್ರಿ ಯೋಜನೆಯು 4 ವರ್ಷಗಳನ್ನು ಯಶಸ್ವಿಯಾಗಿ ಪೂರ್ಣಗೊಳಿಸಿದ ಸಂದರ್ಭವಾಗಿ 'ಸಮ್ಮೇಳನ 2010' ಅನ್ನು ದೆಹಲಿಯ ವಿಜ್ಞಾನ ಭವನದ ಪ್ಲೇನರಿ ಹಾಲಿನಲ್ಲಿ 2.2.2010 ರಂದು ಹಮ್ಮಿಕೊಳ್ಳಲಾಗಿತ್ತು. ಕರ್ನಾಟಕದಿಂದ 28 ಮಹಿಳಾ ಕಾರ್ಮಿಕರು, ಗ್ರಾಮಪಂಚಾಯಿತಿ ಪ್ರತಿನಿಧಿಗಳು, ಅಧಿಕಾರಿಗಳು ಪಾಲ್ಗೊಂಡಿದ್ದರು. ಪ್ರಧಾನಮಂತ್ರಿಗಳು ತಮ್ಮ ಭಾಷಣದಲ್ಲಿ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಿಂದಾಗಿ ಬಡತನ ನಿರ್ಮೂಲನೆಯಾಗಿರುವುದಲ್ಲದೆ ಗ್ರಾಮೀಣ ಜನರು ಸ್ವಾಭಿಮಾನದ ಬದುಕನ್ನು ಕಂಡುಕೊಂಡಿದ್ದಾರೆ ಎಂದು ನುಡಿದರು. ಶ್ರೀಮತಿ ಸೋನಿಯಾ ಗಾಂಧಿ ಅವರು ಈ ಯೋಜನೆಯು ಇತರೆ ಅಭಿವೃದ್ಧಿ ಪರ ಯೋಜನೆಗಳಿಗೆ ಒಂದು ಅತ್ಯುತ್ತಮ ಮಾದರಿ ಎಂದು ತಿಳಿಸಿದರು. ಇಂಥ ಯೋಜನೆಗೆ ಯಶಸ್ವಿಯಾಗಿ ಶ್ರಮಿಸಿದ ಅಧಿಕಾರಿಗಳಿಗೆ `Award of Excellence' ಗೌರವ ನೀಡಿ ಸನ್ಮಾನಿಸಲಾಯಿತು. ಈ ಸಮ್ಮೇಳನದಲ್ಲಿ 100 ದಿನ ಕಾಮಗಾರಿ ಪೂರೈಸಿದ ದೇಶದ ಎಲ್ಲಾ ರಾಜ್ಯಗಳ ಕಾರ್ಮಿಕರ ಪಾಲ್ಗೊಂಡಿದ್ದರು. ಯೋಜನೆಯ ಫಲಾನುಭವಿಗಳು ಬಹುಮಟ್ಟಿಗೆ ಮಹಿಳೆಯರೇ ಆಗಿದ್ದುದು ವಿಶೇಷ.

ನಕ್ಸಲ್ ಬಾಧಿತ ಪ್ರದೇಶಗಳಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬೇಕೆಂದು ಜನಪ್ರತಿನಿಧಿಗಳು ಒತ್ತಾಯಿಸಿದ್ದಾರೆ. ಹೀಗಾಗಿ ಈ ಕಾರ್ಯಕ್ಕೆ ಪ್ರಥಮ ಆದ್ಯತೆ ನೀಡಿ ತ್ವರಿತ ಕ್ರಮಕೈಗೊಳ್ಳಲು ಆದೇಶವೂ ಸರ್ಕಾರದಿಂದಾಗಿದೆ (**ಕರ್ನಾಟಕ ವಿಕಾಸ,**

ಮಾರ್ಚ್ 2010). ಈ ಯೋಜನೆಯ ಉಪಯೋಗಗಳು: ಶ್ರಮದಾನದ ಪರಿಕಲ್ಪನೆ, ನಾವೆಲ್ಲ ಒಂದು ಎಂಬ ಏಕಾತ್ಮಿಕ ಭಾವದ ಬೆಳಸು ಪಂಚಾಯಿತಿ ನಮ್ಮದು ಎಂಬ ಭಾವನೆ, ಭಿನ್ನಾಭಿಪ್ರಾಯ ನಿವಾರಣೆ, ಆರೋಗ್ಯಕರ ಸ್ಪರ್ಧೆ, ಸಾರ್ವಜನಿಕ ಆಸ್ತಿ ರಕ್ಷಣೆ, ದುಡಿಮೆಯ ಮಹತ್ವ ಅರಿವಾಗುವಿಕೆ ಎಂಬುದೆಲ್ಲ ಒದಗುತ್ತವೆ ಎಂಬ ಆಶಯಗಳೂ ವ್ಯಕ್ತವಾಗಿವೆ. (**ಕರ್ನಾಟಕ ವಿಕಾಸ:** ಮೇ 2009)

ಈ ಯೋಜನೆಯ ಸಂಬಂಧ ಮಿತಿಯೊಂದು ಕಾಣಬರುತ್ತದೆ. ಗ್ರಾಮೀಣ ಜನರಿಗೆ ವರವೆಂಬಂತಿರುವ ಈ ಯೋಜನೆ ಅಲ್ಲಿನ ವಿಧವೆಯರ ಪಾಲಿಗೆ ಸಂಕಷ್ಟವನ್ನು ತಂದೊಡ್ಡಿದೆ. ವಿಧವಾ ವೇತನ ಪಡೆಯಲು ವಾರ್ಷಿಕ ಆದಾಯ ಮಿತಿಯನ್ನು 6 ಸಾವಿರ ರೂ.ಗಳಿಗೆ ನಿಗದಿಮಾಡಲಾಗಿದೆ. ಉದ್ಯೋಗ ಖಾತ್ರಿ ಯೋಜನೆಯಡಿ ವಿಧವೆಯರೂ ಸೇರಿದಂತೆ ಗ್ರಾಮೀಣ ಪ್ರದೇಶದ ಬಡಜನರಿಗೆ ದಿನಕ್ಕೆ ತಲಾ 100 ರೂಗಳಂತೆ, ಉದ್ಯೋಗ ನೀಡಲಾಗುತ್ತದೆ. ಅಂದರೆ 100 ದಿನಗಳಲ್ಲಿಯೆ 10 ಸಾವಿರ ರೂಗಳು ಒದಗಿ ಆದಾಯದ ಮಿತಿ 6 ಸಾವಿರವನ್ನು ಈ ಯೋಜನೆಯಡಿ ಕೆಲಸ ಮಾಡುವ ವಿಧವೆಯರಿಗೆ ದಾಟುತ್ತದೆ. ಆಗ ರೈತ ಮಹಿಳೆಯ ಪೈಕಿಯೂ ಇರುವ ವಿಧವೆಯರ ವಿಧವಾ ವೇತನಕ್ಕೆ ಸಂಚಕಾರ ಒದಗುತ್ತದೆ. ಬ್ಯಾಂಕಿನ ಮೂಲಕ ಯೋಜನೆಯ ಫಲಾನುಭವಿಗಳಿಗೆ ಕೂಲಿವೇತನ ಕೊಡುವ ಕಾರಣ ಅವರ ಬಗೆಗಿನ ಮಾಹಿತಿಯೂ ಸಿಗುತ್ತದೆ. ಇದರಿಂದ ರಾಜ್ಯ ಸರ್ಕಾರ ಪ್ರತಿ ತಿಂಗಳು ನೀಡುವ 400 ರೂ ವಿಧವಾ ವೇತನವನ್ನು ತಡೆಹಿಡಿಯ ಬೇಕಾಗುತ್ತದೆ. ಸದ್ಯ ಆದಾಯಮಿತಿ ದಾಟಿದ ಕಾರಣ ವಿಧವಾ ವೇತನ ವಂಚಿತರು 9 ಜಿಲ್ಲೆಗಳಲ್ಲಿ 46,709 ಮಂದಿ ವಿಧವೆಯರಿದ್ದಾರೆ (15.3.2010). ಉಳಿದ ಜಿಲ್ಲೆಗಳ ಅಂಕಿ ಅಂಶಗಳು ದೊರೆತರೆ ಈ ಸಂಖ್ಯೆ ಬಹುಶಃ ಒಂದೂವರೆ ಲಕ್ಷವನ್ನು ಸಮೀಪಿಸಬಹುದು. ಇನ್ನು 100 ದಿನಗಳ ಕಾಲ ಉದ್ಯೋಗ ಮಾಡಿದವರಿಗೆ ಉಳಿದ 265 ದಿನ ಖಾಲಿ ಕೈ ಆದರೆ ಅದು ಸಂಕಷ್ಟದ ಬಾಳು ಆಗುತ್ತದೆ. ಅದು ಕಾರಣ ವರ್ಷಪೂರ್ತಿ ಉದ್ಯೋಗ ಖಾತ್ರಿ ಯೋಜನೆ ಮುಂದುವರಿಸುವುದು ಅಥವಾ ವಿಧವಾವೇತನಕ್ಕೆ ಹಾಕಿರುವ ಮಿತಿಯನ್ನು ಹೆಚ್ಚಿಸುವುದು ಸೂಕ್ತವಾಗುತ್ತದೆ.

**ಸಾವಯುವ ಕೃಷಿ; ಬ್ಯಾಂಕ್ ಸಹಕಾರ :** ಸಾವಯುವ ಕರ್ನಾಟಕ, ಎಂಬ ಪರಿಕಲ್ಪನೆ ಇಂದಿನ ಸರ್ಕಾರದ್ದು. ಈ ದಿಸೆಯಲ್ಲಿ ಕಾರ್ಪೊರೇಷನ್ ಬ್ಯಾಂಕ್, ತಾನು ಸಾವಯುವ ಕೃಷಿ ಮಿಷನ್‌ನೊಡನೆ ಮಾಡಿಕೊಂಡ ಒಪ್ಪಂದದಂತೆ ವಿವಿಧ

ಕ್ಷೇತ್ರಗಳಲ್ಲಿ ಸಹಕರಿಸಲು ಮುಂದಾಯಿತು. ಪ್ರಥಮ ಹಂತದಲ್ಲಿ ಆರು ಯೋಜನೆಗಳನ್ನು ರೂಪಿಸಿತು ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪನವರಿಗೆ ಬ್ಯಾಂಕ್‌ನ ಹಿರಿಯ ಅಧಿಕಾರಿಗಳು ವಿವರಣೆಗಳನ್ನು ನೀಡುವುದಾಗಿತ್ತು. ಯೋಜನೆಯ ರೀತ್ಯಾ ರೈತರಿಗೆ ಸಾವಯುವ ಕೃಷಿ ತರಬೇತಿ ನೀಡುವಲ್ಲಿ ತರಬೇತಿ ಕೇಂದ್ರದಲ್ಲಿ ಊಟ, ವಸತಿ, ಎಲ್‌ಸಿಡಿ ಪ್ರೊಜೆಕ್ಟರ್, ಕಂಪ್ಯೂಟರ್ ಸೇರಿದಂತೆ ಹೈಟೆಕ್ ತರಬೇತಿ ನೀಡುವುದು; ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಹವಾನಿಯಂತ್ರಿತ ಸಾವಯುವ ಕೃಷಿ ಉತ್ಪನ್ನ ವಿನಿಮಯ ಕೇಂದ್ರಗಳನ್ನು ಕಟ್ಟಿಸಿ ಕೊಡುವುದು ಹಾಗೂ ಅಲ್ಲಿ ಸಾವಯುವ ಕಾಫಿ, ಟೀ, ಕಬ್ಬಿನ ಹಾಲು, ಗ್ರಾಮೀಣ ಪೇಯ ಪಾನಕಗಳು, ರೈತರ ಬೆಳೆ ಉತ್ಪನ್ನಗಳ ಮಾರಾಟ ಮಾಡುವುದು; ರೈತರು ಬೆಳೆದ ಉತ್ಪನ್ನಗಳನ್ನು ಸಾಗಿಸಲು ಏಳು ಶೈತ್ಯಾಗಾರ ವಾಹನಗಳನ್ನು ನೀಡಿ, ವಿವಿಧ ಸ್ಥಳಗಳಲ್ಲಿ ಮಾರಾಟಕ್ಕೆ ಸಹಕಾರಿಯಾಗುವುದು, ಗೋಶಾಲೆ ಪ್ರಾರಂಭಿಸಿ ಅಲ್ಲಿಂದ ಕೇಂದ್ರೀಕೃತ ಗೋಬರ್ ಗ್ಯಾಸ್ ಮೂಲಕ ಗ್ರಾಮಗಳಿಗೆ ಗೋಬರ್ ಅನಿಲ ಸರಬರಾಜು ಮಾಡುವುದು; ಜಿಲ್ಲೆಗಳಲ್ಲಿ ಸಾವಯವ ಕೃಷಿ ಬೀಜಗಳ ಪ್ರದರ್ಶನ ಕೇಂದ್ರ ಸ್ಥಾಪನೆ ಹಾಗೂ ರೈತರಿಗೆ ಸ್ಯಾಂ ಪಲ್‌ಸೀಡ್ (ಮಾದರಿ ಬೀಜ) ವಿತರಣೆ ಮಾಡುವುದು; ರೈತರಿಗೆ ನೀಡುವ ತರಬೇತಿಗೆ ಆಗುವ ಖರ್ಚನ್ನು ಸರ್ಕಾರ ಮತ್ತು ಸಾವಯವ ಕೃಷಿ ಪರಿವಾರ ಹಾಗೂ ಖರ್ಚಿನ ಕೆಲಭಾಗವನ್ನು ಬ್ಯಾಂಕ್ ಭರಿಸುವುದಾಗಿರುತ್ತದೆ. (15.3.10) ಎಂಬುದು ಶ್ರೀಕಾಂತಭಟ್ ಅವರ ವರದಿಯ ಸಾರಾಂಶವಾಗಿದೆ. ಇಲ್ಲಿ ಖಾಸಗಿ ಸಂಸ್ಥೆಗಳಲ್ಲದೆ, ಆರ್ಥಿಕ ಸಂಸ್ಥೆಗಳೂ ರೈತ ಮುಖಿಗಳಾಗಿ ಸಾಮಾಜಿಕ ಸ್ಪಂದನೆವನ್ನು ತೋರಿರುವುದು ಗಮನಾರ್ಹ.

**ಭೂ ಚೇತನ ಕಾರ್ಯಕ್ರಮ; ಸಮಗ್ರ ಕೃಷಿ ಪದ್ಧತಿ :** ಧಾರವಾಡ ಕೃಷಿ ವಿಶ್ವ ವಿದ್ಯಾಲಯದ ಕೃಷಿ ವಿಸ್ತರಣಾ ನಿದೇಶನನಾಲಯದ ಸಮಗ್ರ ಕೃಷಿ ಪದ್ಧತಿ ಯೋಜನೆಯ ಅನುಷ್ಠಾನದ ಉತ್ಪಾದನೆ ಮಾಡಿದ ಕೃಷಿ ಸಚಿವ ಎಸ್.ಎ. ರವೀಂದ್ರನಾಥ್ ಅವರು ನಿರ್ದೇಶನಾಲಯವು ಎಸ್‌ಸಿ-ಎಸ್‌ಟಿ ಪಂಗಡಗಳ ಸಬಲೀಕರಣಕ್ಕೆ ಅನುಷ್ಠಾನಗೊಳಿಸುತ್ತಿರುವ ಈ ಯೋಜನೆ ದೇಶದಲ್ಲಿಯೆ ಮೊದಲನೆಯದೆನಿಸಿದೆ ಎಂದು ನುಡಿದರು. ಮೊದಲು ಕುಟುಂಬ ನಿರ್ವಹಣೆಗಾಗಿ ಕೃಷಿ ಮಾಡುವಲ್ಲಿ ರೈತರು ಕಡಿಮೆ ಉತ್ಪಾದನೆಗೆ ಸಾಕಾಗುವಷ್ಟು ಪರಿಕರಗಳನ್ನು ಮಾತ್ರ ಬಳಸುತ್ತಿದ್ದರು. ಇಂದು ಕೃಷಿ ಉತ್ಪನ್ನಗಳನ್ನು ಹೆಚ್ಚಿಸಬೇಕಿದೆ. ರೈತರ ಆರ್ಥಿಕ ಮಟ್ಟವನ್ನು ಹೆಚ್ಚುಗೊಳಿಸಬೇಕಿದೆ. ಅದಕ್ಕಾಗಿ ಆಧುನಿಕ ಕೃಷಿ ಪದ್ಧತಿಗಳನ್ನು

ಅಳವಡಿಸಿಕೊಳ್ಳಬೇಕು. 2009ರಲ್ಲಿ ಶುರು ಮಾಡಿದ ಭೂ ಚೇತನ ಕಾರ್ಯಕ್ರಮದಡಿ ಲಘು ಪೋಷಕಾಂಶವನ್ನು ಬಳಸಲಾಯಿತು. ಅದರಿಂದ ಉತ್ಪಾದನೆ ಶೇ. 20–25ರಷ್ಟು ಹೆಚ್ಚಾಯಿತು ಎಂದು ತಿಳಿಸಿದರು. ಜಿಲ್ಲಾ ಉಸ್ತುವಾರಿ ಸಚಿವ ಮುರುಗೇಶ್ ನಿರಾಣಿ ಅವರು ಮಾತನಾಡಿ ಲಭ್ಯ ಸಂಪನ್ಮೂಲಗಳನ್ನು ಸಮರ್ಥವಾಗಿ ಬಳಸಿ ಬಾಳಲು ಸಮಗ್ರ ಕೃಷಿ ಪದ್ಧತಿ ಅನುಕೂಲಕರವಾಗಿದೆ. ಕೃಷಿ ವಿಶ್ವವಿದ್ಯಾಲಯವು ರೈತರಿಗೆ ಮಣ್ಣಿನಫಲವತ್ತತೆ ಕಾಯ್ದುಕೊಳ್ಳುವ ತಾಂತ್ರಿಕತೆಯ ಬಗ್ಗೆ ಸಹ ತಿಳುವಳಿಕೆ ನೀಡಬೇಕು ಎಂದು ಸೂಚಿಸಿದರು. (15.3.10) ಉಭಯ ಸಚಿವರ ಮಾತುಗಳಿಂದ, ಕೃಷಿ ಅನುಭವ, ತಂತ್ರಜ್ಞಾನ, ಕೃಷಿ ಪ್ರಗತಿಯ ಕುರಿತ ಸರ್ಕಾರದ ಚಿಂತನೆ ಮತ್ತು ಕಾರ್ಯಕ್ರಮ ಇವುಗಳಲ್ಲಿ ಹೊಂದಾಣಿಕೆ, ಕೊಡು–ಕೊಳ್ಳು ವಿಚಾರವಿದ್ದಾಗ ಕೃಷಿ ಬಾಳ್ವೆ ಸಾರ್ಥಕ ಎಂಬ ಭಾವನೆ ತಟ್ಟುತ್ತದೆ.

**ಕೈ ತೋಟ ಬೀಜದ ಹಬ್ಬ :** ಗುಡಿಯಿಂದ ಊರೊಳಕ್ಕೆ ತೇರು ಮೇಲೆ ಕುಳಿತು ಬಂದ ದೇವರಿಗೆ ಹಣ್ಣು ದವನವನ್ನು ಹರಕೆಯಾಗಿ, ಭಕ್ತಿಯಿಂದ ಎಸೆಯುವುದು ಪಾರಂಪರಿಕ ಪದ್ಧತಿ. ಹೃದಯದ ಭಾವ, ಭಕ್ತಿ ಹೊತ್ತು ದವನ ತೇರ ದೇವರ ಒಳಗೆ ಸಾಗುವ ಬಗ್ಗೆ ಹಾಗೆ ಇದಕ್ಕಿಂತ ವಸ್ತು ಬಳಕೆ ಹಾಗು ರೀತಿ ಭಿನ್ನವಾದ ರೈತ ಪದ್ಧತಿಗಳೂ ನಮಗೆ ಕಾಣಬರುತ್ತವೆ. ಹರಿಹರ ಸಮೀಪದ ಉಕ್ಕಡಗಾತ್ರಿಯ ಕರಿಬಸವ ತೇರಿಗೆ ಬೀಜಗಳನ್ನು ಎಸೆಯುತ್ತಾರೆ. ಎಸೆದಾಗ ಕೆಳಗೆ ಬೀಳುವ ಬೀಜಗಳನ್ನು ಪ್ರಸಾದ ಬೀಜವಾಗಿ ಒಯ್ಯುತ್ತಾರೆ, ಬಿತ್ತುತ್ತಾರೆ.

ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾ. ಉಜ್ಜಿನಿಯ ಮರುಳುಸಿದ್ಧೇಶ್ವರನಿಗೆ ತೈಲಾಭಿಷೇಕ ನಡೆಯುವ ದಿನದಂದು ಅವನ ಒಕ್ಕಲುಗಳು ತರಕಾರಿ ಬೀಜಗಳನ್ನು ಅರ್ಪಿಸುತ್ತಾರೆ. ಬೀಜ ಇಲ್ಲದವರಿಗೆ ಎರಡು ಬೀಜಗಳನ್ನು ಕೊಟ್ಟು ಅರ್ಪಿಸಿಸುತ್ತಾರೆ. ತೈಲಾಭಿಷೇಕಕ್ಕೆ ಹಾಕಿದ ಯಾವ ಬೀಜವೂ ನಷ್ಟವಾಗದೆ ಸೊಂಪಾಗಿ ಬೆಳೆದು ಫಲ ಕೊಡುತ್ತವೆ ಎಂಬುದು ಅಲ್ಲಿನ ರೈತರ ಶ್ರದ್ಧೆ, ಆ ಆಚರಣೆಯ ಪರಂಪರೆಯಾಗಿ ಹರಿದು ಬಂದಿದೆ. ಶಿಂದೋಗಿ ಗ್ರಾಮದ ರೈತರೂ ಬಿತ್ತನೆ ಬೀಜ ತಂದು ಅರ್ಪಿಸಿ ಪ್ರಸಾದ ಬೀಜ ಪಡೆಯುವಲ್ಲಿ ಬೀಜ ವಿನಿಮಯದ ವೈಜ್ಞಾನಿಕತೆ ಕಾಣುತ್ತದೆ.

2009ರಲ್ಲಿ ನಡೆದ ತೈಲಾಭಿಷೇಕಕ್ಕೆ ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ ಮತ್ತು ಹೆರವನಹಳ್ಳಿ ಸೇರಿದಂತೆ ಸುಮಾರು 25 ಹಳ್ಳಿಗಳ ರೈತರು 'ಸಾವಯವ ರೈತರ ಪ್ರಯೋಗ ಪರಿವಾರ'ದ ಸಭೆಸೇರಿ ಪ್ರತಿಕುಟುಂಬವೂ ತರಕಾರಿ ಬೀಜಗಳನ್ನು ಹಾಕಬೇಕೆಂದು ತೀರ್ಮಾನಿಸಿ ಗ್ರಾಮದವರೆಲ್ಲ ಸೇರಿ ಅಂದು ಕೈ ತೋಟದ ಹಬ್ಬ

ಆಚರಿಸಲು ತೀರ್ಮಾನಿಸಿದರು. ಸುಮಾರು 30 ಗ್ರಾಮಗಳ ಎರಡು ಸಾವಿರ ರೈತ ಕುಟುಂಬಗಳು ತಮ್ಮಲ್ಲಿರುವ ಬೀಜಗಳನ್ನು ಕಲೆಹಾಕಿ ಹಂಚಿಕೊಂಡು ಕೈ ತೋಟದ ಹಬ್ಬದಲ್ಲಿ ಭಾಗವಹಿಸಿದರು. ಅಂದು ಹಾಕಿದ ಪಡವಲ, ತುಪ್ಪದ ಹೀರೆ, ಹಾಲುಗುಂಬಳ, ಬೂದುಗುಂಬಳ, ಚಪ್ಪರದವರೆ, ಹೀರೆ, ಹಾಗಲಬಳ್ಳಿ ಇವೆಲ್ಲ ಸೊಗಸಾಗಿ ಬಳ್ಳಿಯಾಗಿ ಹರಡಿ ವಿಪುಲವಾಗಿ ಫಸಲು ಕೊಟ್ಟವು. ಕುಟುಂಬಕ್ಕೂ ಆಧಾರವಾದುವು. ಸಾವಯವ ರೀತಿಯಲ್ಲಿ ಬೆಳೆದ ತರಕಾರಿಗಳು ಮನೆಗೂ ಆಗಿ ಮಾರಾಟಕ್ಕೂ ಆಗಿ ಕಾಸು ತಂದುಕೊಟ್ಟವು; ದಲಿತ ರೈತ ಕುಟುಂಬಗಳು ತಮಗೆ ದೊರೆತ ಬಳ್ಳಿ ತರಕಾರಿ ಬೀಜಗಳನ್ನು ವಸತಿ ಇದ್ದ ಕಡೆ ಬಿತ್ತಿ ಬೆಳೆ ಪಡೆದರು. ಈಗ ಪ್ರತಿ ಕುಟುಂಬಗಳೂ ಎಂಟು ಹತ್ತು ಬಗೆಯ ಹೊಸ ತರಕಾರಿ ಬೀಜಗಳನ್ನು ಸಂಗ್ರಹಿಸಿಟ್ಟುಕೊಂಡು **ತೈಲಾಭಿಷೇಕದ ದಿನ (ಚಿಕ್ಕರ ಕಣ್ಣಿಗೆ)** ಕಾಯುತ್ತಿದ್ದಾರೆ. ಮರುಳುಸಿದ್ಧೇಶ್ವರನ ತೈಲಾಭಿಷೇಕದ ನೆಪದಲ್ಲಿ ಶುರುವಾದ ಕೈ ತೋಟದ ಹಬ್ಬ ಈ ಪ್ರದೇಶದಲ್ಲಿ ಆಂದೋಲನವಾಗಿ ಜಾಗೃತಿ ಮೂಡಿಸಿದೆ ಎಂದು ಕೊಟ್ಟೂರಿನ ಇಕ್ರಾ ಬಳಗ ಸಂತೋಷದಿಂದ ಹೇಳಿಕೊಂಡಿದೆ. (18.3.2010; ಪ್ರ.ವಾ); ಒಂದು ಧರ್ಮೋ-ಸಾಂಸ್ಕೃತಿಕ ಆಚರಣೆಯೂ ರೈತರ ಶ್ರದ್ಧಾಭಕ್ತಿಗಳನ್ನು ಅವರ ಬದುಕಿನ ಆಸರೆಯನ್ನಾಗಿಯೆ ಮಾರ್ಪಡಿಸಿರುವ ಪಾರಂಪರಿಕ ಪದ್ಧತಿಯ ವೈಭವ ಇಲ್ಲಿ ಕಾಣುತ್ತದೆ. ಹಸಿರಿನ ಉಣಿಸು ತರುವ ತರಕಾರಿಯ ವೈಭವ ಮರುಳುಸಿದ್ಧೇಶ್ವರ ಕೃಪೆ ಎಂಬುದಷ್ಟೆ ಈ ರೈತರಿಗೆ ಬೇಕಾದ ನೆಮ್ಮದಿಯ ಮಾತೇ ವಿನಾ ನಾನು ಬೆಳೆದ ಎಂಬ ಹಮ್ಮಿನ ಶಬ್ದ ಅವರ ನಾಲಿಗೆಯಿಂದ ಹೊರಟಿಲ್ಲ. ಇಂಥ ನಮ್ಮಲ್ಲಿಯ ಬೀಜ ವಿನಿಮಯ ಸಾಂಸ್ಕೃತಿಕ ಪದ್ಧತಿ ಮರೆತು, ಮೂಡನಂಬಿಕೆ ಎಂದು ಅದನ್ನು ಬಿಟ್ಟು ಬಹುರಾಷ್ಟ್ರೀಯ ಕಂಪೆನಿಗಳ ಹಂಗಿಗೆ ಬೀಳುವ ಸಾಲುಸರತಿ ಬೇಡಿಕೆ ಹಿಂದೆ ಇರಲಿಲ್ಲ ಎಂಬುದಕ್ಕೆ 'ಚಿಕ್ಕರ ಕಣ್ಣಿ' ಸಮಯವು ಎದ್ದು ತೋರುವ ಸಾಕ್ಷಿ ಆಗಿದೆ. ವೈಜ್ಞಾನಿಕ ಪದ್ಧತಿಯೊಂದರ ಪ್ರತೀಕವಾಗಿ ಇದು ನಮ್ಮ ಸಾಂಸ್ಕೃತಿಕ ಪರಂಪರೆಯನ್ನು ಎತ್ತಿ ಹೇಳುವಂತಿದೆ.

**'ಸಾಮರಸ್ಯ ಗ್ರಾಮ' ಯೋಜನೆ;** ಕೃಷಿ ಉತ್ಪನ್ನಗಳ ಬೆಲೆ ನಿರ್ಮಾಣ : 2010ರ ಮಾರ್ಚ್ ತಿಂಗಳ ವಿಧಾನಸಭೆಯ ಬಜೆಟ್ ಅಧಿವೇಶನದಲ್ಲಿ ತಂಬಾಕು ಉತ್ಪನ್ನಗಳ ಮೇಲಿನ ಪ್ರವೇಶ ತೆರಿಗೆಯನ್ನು ಶೇ 4 ರಿಂದ 2ಕ್ಕೆ ಇಳಿಸುವುದು, ಗ್ರಾಮೀಣ ಪ್ರದೇಶದ ಸಂಘರ್ಷ ಮುಕ್ತ ಸಾಮರಸ್ಯ ಗ್ರಾಮ ಯೋಜನೆ, ಬೆಂಬಲ ಬೆಲೆ ಕುರಿತು ಬಜೆಟ್ ಮೇಲಿನ ಚರ್ಚೆಗೆ 18.3.2010ರಂದು ಉತ್ತರ ನೀಡಿ ಹೊಸ ಘೋಷಣೆಗಳನ್ನು ಮುಖ್ಯಮಂತ್ರಿ ಬಿ.ಎಸ್. ಯಡಿಯೂರಪ್ಪ ಅವರು ಮಾಡಿದರು.

ತಂಬಾಕು ಉತ್ಪನ್ನಗಳ ಮೇಲಿನ ತೆರಿಗೆಯನ್ನು ಶೇ. 12.5ರಿಂದ ಶೇ 15ಕ್ಕೆ ಏರಿಸುವಿಕೆ ಹಾಗೂ ಅವುಗಳ ಮೇಲೆ ಗರಿಷ್ಠ ಚಿಲ್ಲರೆ ಬೆಲೆ ಆಧಾರಿತ ಮೌಲ್ಯ ವರ್ಧಿತ ತೆರಿಗೆ ವಿಧಿಸುವ ಬಗ್ಗೆ ಬಜೆಟ್‌ನಲ್ಲಿ ಪ್ರಸ್ತಾಪಿಸಲಾಗಿತ್ತು. ಪ್ರತಿಪಕ್ಷದ ನಾಯಕ ಸಿದ್ಧರಾಮಯ್ಯ ಅವರು ನೆರೆಯ ತಮಿಳುನಾಡು, ಕೇರಳ ಹಾಗೂ ಆಂಧ್ರಪ್ರದೇಶದಲ್ಲಿ ತೆರಿಗೆ ದರ ಕಡಿಮೆ ಇದೆ. ಅಕ್ರಮವಾಗಿ ಆ ರಾಜ್ಯಗಳಿಂದ ತಂಬಾಕು ತಂದು ಕರ್ನಾಟಕದಲ್ಲಿ ಮಾರಿ ತೆರಿಗೆ ವಂಚಿಸುವ ಸಾಧ್ಯತೆ ಬಗ್ಗೆ ಹೇಳಿದರು. ಅದು ಕಾರಣ ತಂಬಾಕು ಉತ್ಪನ್ನಗಳ ಪ್ರವೇಶ ತೆರಿಗೆಯುನ್ನು ಶೇ. 4 ರಿಂದ 2ಕ್ಕೆ ಇಳಿಸಲು ತೀರ್ಮಾನಿಸಲಾಯಿತು, ಎನ್ನಲಾಗಿದೆ. ಸರ್ಕಾರ ಗ್ರಾಮಪಂಚಾಯಿತಿ ಅಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡು 'ಸಾಮರಸ್ಯ ಗ್ರಾಮ' ಎಂಬ ಹೊಸ ಯೋಜನೆಯನ್ನು ಘೋಷಿಸಿತು. ಇದರ ಮೂಲ ಕಾರಣ ಹೀಗಿರುವಂತಿದೆ. ಗ್ರಾಮೀಣ ಪ್ರದೇಶಗಳಲ್ಲಿ ಸಂಘರ್ಷದ ವತಾವರಣವನ್ನು ತವಿಸಿ ಸಾಮರಸ್ಯವಾಗಿ ಬಾಳುವಂಥದ್ದಕ್ಕೆ ನಾಂದಿಹಾಕಿ, ಅಭಿವೃದ್ಧಿ ಪ್ರಕ್ರಿಯೆಯನ್ನು ಸುಧಾರಿಸಲು ಪ್ರಸಕ್ತ ಸಾಲಿನಿಂದಲೇ ಪ್ರೋತ್ಸಾಹ ಧನ ನೀಡಲು ಯೋಜನೆ ಆರಂಭಿಸಲಾಗುವುದು. ಈ ಯೋಜನೆಯಡಿಯಲ್ಲಿ ಪ್ರೋತ್ಸಾಹಧನ ದೊರಕಬೇಕಾದರೆ ಗ್ರಾಮವು ಸಂಘರ್ಷ, ಘರ್ಷಣೆ, ಜಗಳ, ತಂಟೆಗಳಿಂದ ಮುಕ್ತವಾಗಿರಬೇಕು. ಗ್ರಾಮದಲ್ಲಿ ಸೌಹಾರ್ದ ಹಾಗೂ ಸಾಮರಸ್ಯದ ವಾತಾವರಣ ಇರಬೇಕು.

ಗ್ರಾಮದ ಸಮಸ್ಯೆಗಳನ್ನು ಪರಸ್ಪರ ಮಾತುಕತೆಯ ಮೂಲಕ ಬಗೆಹರಿಸಿಕೊಳ್ಳಬೇಕು. ಒಗ್ಗಟ್ಟು ಪ್ರದರ್ಶಿಸುವ ಮೂಲಕ ಶಾಂತಿ, ಸುವ್ಯವಸ್ಥೆ, ಸಾಮಾಜಿಕ ಸಾಮರಸ್ಯ ಕಾಪಾಡಿಕೊಳ್ಳಬೇಕು. ಚುನಾವಣೆ ಅಥವಾ ಇನ್ನಿತರ ವಿಷಯಗಳಲ್ಲಿ ಭಿನ್ನಮತವು ವೈಷಮ್ಯಕ್ಕೆಡಮೂಡದೆ ಒಮ್ಮತ ಮೂಡಿಸುವ ವಾತಾವರಣವಿರಬೇಕು, ಎಂದೆಲ್ಲ ಇದೆ.

**ತೆಂಗು, ಕೊಬ್ಬರಿ ಖರೀದಿ :** ವಿಷಯವನ್ನು ಪ್ರಸ್ತಾಪಿಸುತ್ತ ಮುಖ್ಯಮಂತ್ರಿಗಳು ಈ ಕೃಷಿ ಉತ್ಪನ್ನಗಳ ಬೆಲೆ ಕನಿಷ್ಠ ಬೆಂಬಲ ಬೆಲೆಗಿಂತ ಕಡಿಮೆಯಾದ ಸಂದರ್ಭಗಳಲ್ಲಿ ಸರ್ಕಾರವು ರೈತರಿಗೆ ನೆರವಾಗಿ ಹಣ ಬಿಡುಗಡೆ ಮಾಡಿ ಮಾರುಕಟ್ಟೆ ಮಧ್ಯಪ್ರವೇಶ ಮಾಡಿದೆ. 2009–10ನೇ ಸಾಲಿನಲ್ಲಿ ಮೆಕ್ಕೆ, ಜೋಳ, ಅಡಿಕೆಯನ್ನು ಖರೀದಿಸಿದೆ. 2010–11ರಲ್ಲಿ ತೆಂಗು ಕೊಬ್ಬರಿಯನ್ನು ಖರೀದಿಸಲು ಉದ್ದೇಶಿಸಲಾಗಿದೆ ಎಂದೆಲ್ಲ ಬಜೆಟ್ ಅಂಶಗಳನ್ನು ಹೇಳಿದರು. ಆದರೆ ಬಜೆಟ್ ಮೇಲಿನ ಚರ್ಚೆಗೆ ಮುಖ್ಯಮಂತ್ರಿಗಳ ಉತ್ತರದಿಂದ ತೃಪ್ತರಾಗದೆ ಪ್ರತಿಪಕ್ಷಗಳ ಸದಸ್ಯರು ಸಭಾತ್ಯಾಗ ಮಾಡಿದರು.

ಬಜೆಟ್‌ನಲ್ಲಿ ಸಾಮರಸ್ಯ ಗ್ರಾಮ ಯೋಜನೆ, ತಂಬಾಕು ಉತ್ಪನ್ನಗಳ ಮೇಲಿನ ಪ್ರವೇಶ ತೆರಿಗೆ ಕಡಿತ, ಕೃಷಿ ಉತ್ಪನ್ನಗಳ ಬೆಲೆಗಳ ನಿಯಂತ್ರಣ ಇತ್ಯಾದಿ ಅಂಶಗಳು ರೈತ ಸಾಂತ್ವನ ಕ್ರಿಯೆಯ ಹಾದಿಯೆ ಆಗಿತ್ತು. ಗ್ರಾಮದ ಬದುಕಿನ ಶಾಂತಿಗೆ ಹೊಸ ಘೋಷಣೆಗಳು ಪೂರಕವಾಗಿದ್ದುವು. ಶಿಥಿಲಗೊಳ್ಳುತ್ತಿದ್ದ ಗ್ರಾಮೀಣ ಮೌಲ್ಯಗಳ ಪುನರುತ್ಥಾನಕ್ಕೆ ಇದು ನೆರವಾಗುವಂಥದ್ದಾಗಿದೆ.

**ಎಣ್ಣೆಕಾಳು–ಬೇಳೆಕಾಳು ತ್ವರಿತ ಉತ್ಪಾದನೆ :** ರಾಜ್ಯದಲ್ಲಿ ಕಾಳುಗಳು ಇಳುವರಿಯಲ್ಲಿ ಹಿನ್ನೆಡೆಗೊಂಡಿದ್ದವು. ಹೈಬ್ರಿಡ್ ತಳಿಗಳ ಕೊರತೆ, ಫಲವತ್ತತೆ ಕುಸಿತ, ಅಂಚಿನ ಪ್ರದೇಶಗಳಲ್ಲಿ ಮಿಶ್ರ ಬೆಳೆಯಾಗಿ ಬೆಳೆದು ಪ್ರಾಮುಖ್ಯ ಕಡಿಮೆಯಾಗಿರುವುದು ಪೋಷಕಾಂಶ ಕೊರತೆ ಮಿತಿಯಲ್ಲಿ ಆಧುನಿಕ ಪರಿಕರ ಬಳಕೆ, ವೈಜ್ಞಾನಿಕ ಪದ್ಧತಿ ಬಳಸದಿರುವುದು ಮಧ್ಯಮ ಮತ್ತು ಸಣ್ಣ ರೈತರಲ್ಲಿ ಇವೆಲ್ಲ ಕಾಣಬರುವ ಅಂಶವಾಗಿತ್ತು. ಜೊತೆಗೆ ಆರ್ಥಿಕ ಬೆಳೆಯೆಂದು ಪರಿಗಣಿಸದೆಯೂ ಉತ್ಪಾದನೆ ಕುಸಿತವಾಗಿತ್ತು. ಇದು ಕಾರಣ 2010–11ನೇ ಸಾಲಿನಲ್ಲಿ ಕೃಷಿ ಇಲಾಖೆ ಕಾಳುಗಳ ಉತ್ಪಾದನೆಯನ್ನು ಹೆಚ್ಚಿಲು 'ಕರ್ನಾಟಕ ಬೇಳೆ ಕಾಳುಗಳ ತ್ವರಿತ ಉತ್ಪಾದನೆ ಹಾಗೂ ಎಣ್ಣೆಕಾಳುಗಳ ಅಭಿವೃದ್ಧಿ' ಕಾರ್ಯಕ್ರಮವನ್ನು ಜಾಲೂ ಮಾಡಿದೆ. ಶೇ 30ರಷ್ಟು ಅಭಿವೃದ್ಧಿಯನ್ನು ಸದ್ಯ ಸಾಧಿಸುವುದು, ರೈತರಿಗೆ ತಜ್ಞರಿಂದ ಆಧುನಿಕ ಬೆಳೆ ಪದ್ಧತಿಗಳ ಬಗ್ಗೆ ತಿಳುವಳಿಕೆ, ಮಣ್ಣಿನ ಸಮಗ್ರ ಪೋಷಕಾಂಶ ನಿರ್ವಹಣೆ, ಅರೆಮಲೆನಾಡು ಪ್ರದೇಶಗಳ ಅಂತಾರಾಷ್ಟ್ರೀಯ ಬೆಳೆ ಸಂಶೋಧನಾ ಕೇಂದ್ರ ಹಾಗೂ ಕೃಷಿ ವಿಶ್ವವಿದ್ಯಾಲಯದ ತಜ್ಞ ವಿಜ್ಞಾನಿಗಳು ಶೋಧಗಳ ತಿಳುವಳಿಕೆ ಪಡೆಯುವುದು, ಈ ಕಾರ್ಯಕ್ರಮದಲ್ಲಿ ಉದ್ದೇಶಗೊಂಡಿವೆ.

ಈ ಯೋಜನೆಗನುಗುಣವಾಗಿ ಮೊದಲಿಗೆ ಗುಲ್ಬರ್ಗ, ಬೀದರ್ ಜಿಲ್ಲೆಗಳ ಒಂದು ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ತೊಗರಿ, ಚಿತ್ರದುರ್ಗ, ತುಮಕೂರು ಜಿಲ್ಲೆಗಳ ಆರು ತಾಲೂಕುಗಳ ಒಂದು ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ನೆಲಗಡಲೆ, ಧಾರವಾಡ ಮತ್ತು ಬೆಳಗಾವಿಯ 50 ಸಾವಿರ ಹೆಕ್ಟೇರ್ ಪ್ರದೇಶದಲ್ಲಿ ಸೋಯಾ ಅವರೆ ಬೇಳೆಗಳ ಉತ್ಪಾದನೆಯನ್ನು ಶೇ. 30ರಷ್ಟು ಹೆಚ್ಚಿಸಲು ಕೃಷಿ ಇಲಾಖೆ ಮುಂದಾಗಿದೆ. ಸದ್ಯ ರಾಜ್ಯದಲ್ಲಿ 26 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ತಲಾ ಹೆಕ್ಟೇರ್‌ನಲ್ಲಿ ಸರಾಸರಿ 500 ಕೆ.ಜಿ ಬೆಳೆಯಾಗುತ್ತಿದೆ. ಈ ಬೇಳೆಗಳ ಉತ್ಪಾದನೆ ಹೆಚ್ಚಿಸುವ ಉದ್ದೇಶದ ಸಂದರ್ಭದಲ್ಲಿ ಸರ್ಕಾರದಿಂದ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ ಹಾಗೂ ರಾಷ್ಟ್ರೀಯ ಆಹಾರ ಭದ್ರತಾ ಮಂಡಳಿ ಅನುದಾನದಿಂದ ರೈತರಿಗೆ ಶೇ. 50 ರಷ್ಟು

ಸಹಾಯಧನವನ್ನು ಕೃಷಿ ಪರಿಕರಗಳ ರೂಪದಲ್ಲಿ ನೀಡಲಾಗುವುದು. ಸ್ಪ್ರಿಂಕ್ಲರ್ ಮೂಲಕ ಸಣ್ಣ ನೀರಾವರಿ ಪದ್ಧತಿ ಅಳವಡಿಸಿಯೂ ರೈತರಿಗೆ ಕಾಳುಗಳನ್ನು ಉತ್ಪಾದಿಸಲು ಉತ್ತೇಜನ ನೀಡುವುದು ಈ ಕಾರ್ಯಕ್ರಮದ ವಿಶೇಷವಾಗಿದೆ.

ರೈತರಿಗೆ ವೈಜ್ಞಾನಿಕ ಕೃಷಿ ತರಬೇತಿ, ಶೈಕ್ಷಣಿಕ ಪ್ರವಾಸ, ರೈತರ ಬೆಳವಣಿಗೆ ರಾಷ್ಟ್ರೀಯ ಮಾರುಕಟ್ಟೆ ಒದಗಿಸುವುದು ಇತ್ಯಾದಿಗಳೂ ಅಭಿವೃದ್ಧಿ ಕಾರ್ಯಕ್ರಮದಡಿ ನೇರ್ಪುಗೊಳಿಸಿರುವ ಬಗ್ಗೆಯೂ ಶ್ಯಾಮ ಹೆಬ್ಬಾರ್ ವರದಿ ಮಾಡಿದ್ದಾರೆ. (25.3.10) ಈ ಸಂದರ್ಭದಲ್ಲಿ ಡಾ. ಎಂ.ಎಸ್.ಸ್ವಾಮಿನಾಥನ್ ಅವರ ಮಾತುಗಳು ಸಲಹೆಗಳು ಮುಂದಿರುವಂತೆ ಗಮನ ಸೆಳೆಯುತ್ತವೆ.

**ಕೃಷಿ ಉತ್ಪಾದನಾ ವೆಚ್ಚದ ದರ** : 2010–11 ಬಜೆಟ್ ಮತ್ತು ಆಹಾರ ಸುರಕ್ಷತೆ ವಿಷಯ ಕುರಿತು ವಾಣಿಜ್ಯ ಮತ್ತು ಕೈಗಾರಿಕಾ ಸಂಘ ವ್ಯವಸ್ಥೆ ಮಾಡಿದ್ದ ಕಾರ್ಯಕ್ರಮ. ಆ ಬಗ್ಗೆ ಕೃಷಿ ವಿಜ್ಞಾನಿ ಸಂಸದ ಡಾ. ಎಂ.ಎಸ್.ಸ್ವಾಮಿನಾಥನ್ ಅವರು ಉಪನ್ಯಾಸ ನೀಡುವಲ್ಲಿ ಕೃಷಿ ಉತ್ಪನ್ನಗಳಿಗೆ ಒಟ್ಟು ಉತ್ಪಾದನಾ ವೆಚ್ಚದ ಮೇಲೆ ಶೇ. 50ರಷ್ಟು ಹೆಚ್ಚು ದರ ನಿಗದಿ ಮಾಡಬೇಕು ಎಂದಿದ್ದಾರೆ. ಕಾರಣ ವೆಚ್ಚ ಮತ್ತು ದರ ನಿಗದಿ ಅಯೋಗ ಒಟ್ಟು ಉತ್ಪಾದನೆಯ ಶೇ. 15ರಷ್ಟು ಹೆಚ್ಚು ದರವನ್ನು ಕನಿಷ್ಠ ಮಾರಾಟ ಬೆಲೆ ಎಂದು ನಿಗದಿಗೊಳಿಸಿದ ಸಂದರ್ಭಕ್ಕೆ ಬಂದ ವಿಜ್ಞಾನಿಯ ಪ್ರತಿಕ್ರಿಯೆ ಆಗಿದೆ. ಅಲ್ಲದೆ ರಾಷ್ಟ್ರದಲ್ಲಿ ಬೇರೆ ಯಾವ ಉದ್ಯಮದಲ್ಲಿ ಇಷ್ಟು ಕಡಿಮೆ ಲಾಭದಲ್ಲಿ ವ್ಯವಹಾರ ಮಾಡುವುದಿಲ್ಲ. ಕೃಷಿ ಉತ್ಪನ್ನಗಳ ಬೆಲೆ ಏರಿಕೆ ರೈತರ ಹಿತದೃಷ್ಟಿಯಿಂದ ಸರಿಯಾಗಿದೆ ಎಂದು ವಾದಿಸುವ ಸ್ವಾಮಿನಾಥನ್ ಬೆಲೆ ಏರಿಕೆ ಲಾಭ ಮಾತ್ರ ವಾಸ್ತವವಾಗಿ ದುಡಿದ ರೈತರಿಗೆ ದಕ್ಕುತ್ತಿಲ್ಲ ಎನ್ನುತ್ತಾರೆ. ಬಜೆಟ್‌ನಲ್ಲಿ ಕೃಷಿಗೆ ಒದಗಿಸಿರುವ ಅನುದಾನ ಕಡಿಮೆ ಇದೆ. ಹೀಗಾಗಿ ರಾಷ್ಟ್ರೀಯ ಕೃಷಿ ಮಿಷನ್, ಆಹಾರ ಸುರಕ್ಷತಾ ಯೋಜನೆ ಇವೆಲ್ಲವನ್ನು ಒಂದೆ ಅಂಕಣಕ್ಕೆ ತಂದು ಅನುಷ್ಠಾನಗೊಳಿಸಬೇಕಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ. (25.3.10) ಅಂದರೆ ಉದ್ಯಮಗಳು ನಗರನಿಷ್ಠವಾಗಿ ಲಾಭವನ್ನೆ ಪರಮಗುರಿಯನ್ನಾಗಿಟ್ಟುಕೊಂಡಿದ್ದರೂ ವಿವಿಧ ಒಳ ಕಾರಣಗಳ ಹಿನ್ನೆಲೆಯಲ್ಲಿ ಅವುಗಳಿಗೆ ಹೆಚ್ಚು ಮಾತಿಲ್ಲದೆ ಒಪ್ಪಿಗೆ ಸಿಕ್ಕಿಬಿಡುತ್ತದೆ. ಅದೇ ದುಡಿದು ಪರರ ಹಿತಕ್ಕೂ ಸಲ್ಲಿಸುವ ತ್ಯಾಗಜೀವಿ ಬಡ ರೈತನ ಉತ್ಪಾದನಾ ವೆಚ್ಚದ ಮೇಲೆ ಹೆಚ್ಚಿನ ದರ ನಿಗದಿ ಮಾಡಲು ಹಿಂದೇಟು ಎನ್ನುವುದಕ್ಕಿಂತ ಆಡಳಿತದ ನಿರ್ಲಕ್ಷ್ಯ ಕಾರಣವೇ ಎಂಬ ಅನುಮಾನಗಳಿಗೆ ಕಾರಣವಾಗುತ್ತದೆ. ಆದರೆ ಸಮಸ್ಯೆಗಳು ರೈತ ಹೋರಾಟಗಳು

ಮುಂದೆ ಕಾಣಿಸಿಕೊಂಡಾಗ ಸಾಂತ್ವನ ಪ್ರಯತ್ನಗಳೂ ನಡೆಯುವುದಿಲ್ಲವೆನ್ನುಂತಿಲ್ಲ. ಇಂಥ ಸನ್ನಿವೇಶದಲ್ಲಿ ಕೃಷಿ ವಿಜ್ಞಾನಿ ಡಾ. ಸ್ವಾಮಿನಾಥನ್ ಅಂಥವರ ಮಾತಿಗೆ ಹೆಚ್ಚು ಗಮನ ಹೋಗಬೇಕಾಗುತ್ತದೆ.

**ಸರ್ಕಾರದಿಂದ ಸಕ್ಕರೆ ಸಾರ್ಖಾನೆಗಳ ವಿದ್ಯುತ್ ಖರೀದಿ ಹಾಗೂ ಸಕ್ಕರೆಗಡ್ಡೆ:** ಕರ್ನಾಟಕ ಸಕ್ಕರೆ ಸಂಸ್ಥೆ ಮತ್ತು ಬೆಲ್ಜಿಯಂನ ಸೆಸ್ವೆಂಡರ್ ಹ್ಯಾವ್ ಸಂಸ್ಥೆಗಳು 26.3.2010ರಂದು ಹಮ್ಮಿಕೊಂಡಿದ್ದ ವಿಚಾರಗೋಷ್ಠಿಯಲ್ಲಿ ಪಾಲ್ಗೊಂಡ ರಾಜ್ಯದ ಕೈಗಾರಿಕಾ ಸಚಿವ ಶ್ರೀ ಮುರುಗೇಶ್ ನಿರಾಣಿ ಅವರು ಮಾತನಾಡುತ್ತ ರಾಜ್ಯದ ಸಕ್ಕರೆ ಕಾರ್ಖಾನೆಗಳು ಒಟ್ಟು ವಿದ್ಯುತ್ ಉತ್ಪಾದನಾ ಸಾಮರ್ಥ್ಯ 500 ಮೆಗಾವ್ಯಾಟ್ ಆಗಿದೆ. ಸಕ್ಕರೆ ಕಾರ್ಖಾನೆಗಳು ಕೋಜನರೇಷನ್ ಮೂಲಕ 300–350 ಮೆಗಾವ್ಯಾಟ್ ವಿದ್ಯುತ್ ಅನ್ನು ಉತ್ಪಾದಿಸುತ್ತಿವೆ. ಹೀಗಾಗಿ ಈ ಕಾರ್ಖಾನೆಗಳಿಂದ ಜೂನ್‌ವರೆಗೆ ಪ್ರತಿ ಯೂನಿಟ್‌ಗೆ 5.30ರೂ ದರದಲ್ಲಿ 350 ಮೆಗಾವ್ಯಾಟ್ ವಿದ್ಯುತ್ ಖರೀದಿಸಲಾಗುತ್ತದೆ. ಆಲಮಟ್ಟಿ ಹಿನ್ನೀರಿನ ಪ್ರದೇಶ ಹಾಗೂ ಸುತ್ತಮುತ್ತಲ ಪ್ರದೇಶ ಸಕ್ಕರೆ ಕಾರ್ಖಾನೆ ಆರಂಭಿಸಲು ಅನುಕೂಲವಾಗಿರುವುದರಿಂದ 2010–11 ನೇ ಸಾಲಿನಲ್ಲಿ 2–3 ಸಕ್ಕರೆ ಕಾರ್ಖಾನೆಗಳನ್ನು ಶುರುಮಾಡಲು ಅನುಮತಿ ನೀಡಲಾಗುವುದು ಎಂದಿದ್ದಾರೆ.

ಸಕ್ಕರೆಗಡ್ಡೆಯು ಕಬ್ಬಿನ ಪರ್ಯಾಯ ಬೆಳೆ ಆಗುವಂಥದ್ದು. ಸಕ್ಕರೆ ಗಡ್ಡೆಯಿಂದ ಸಕ್ಕರೆ, ವಿದ್ಯುತ್, ಎಥನಾಲ್, ಸಿಎನ್‌ಜಿ ಹಾಗೂ ಅನಿಲ ಉತ್ಪಾದಿಸಬಹುದಾಗಿದೆ. ಬ್ರೆಜಿಲ್ ಚೈನಾ, ಆಸ್ಟ್ರೇಲಿಯ ಇತ್ಯಾದಿ ದೇಶಗಳಲ್ಲಿ ಇವನ್ನು ಹೀಗೆ ಉತ್ಪಾದಿಸಲಾಗುತ್ತಿದೆ. ಈ ಗಡ್ಡೆಯಿಂದ ವರ್ಷಕ್ಕೆ ಎರಡು ಬೆಳೆಯನ್ನು ತೆಗೆಯಬಹುದು. ಕಬ್ಬಿನಲ್ಲಿ ಸಕ್ಕರೆ ಅಂಶ ಶೇಕಡ 10 ರಿಂದ 11ರಷ್ಟು ಇದ್ದರೆ ಸಕ್ಕರೆ ಗಡ್ಡೆಯು ಶೇ. 15ರಷ್ಟು ಹೊಂದಿದೆ. ನೀರೂ ಈ ಬೆಳೆಗೆ ಹೆಚ್ಚು ಬೇಕಿಲ್ಲ. ಉಪಉತ್ಪನ್ನಗಳನ್ನು ಈ ಬೆಳೆಯಿಂದ ಪಡೆಯುಬಹುದಾದ ಕಾರಣ ರೈತರಿಗೂ ಈ ಬೆಳೆ ಲಾಭದಾಯಕವಾಗುತ್ತದೆ. ತಂಪಿನ ವಾತಾವರಣದಲ್ಲಿ ಇದು ಬೆಳೆಯುವ ಬೆಳೆಯಾಗಿದೆ. ಉತ್ತರ ಕರ್ನಾಟಕದ ಭಾಗದಲ್ಲಿ ಕಬ್ಬಿಗೆ ಪರ್ಯಾಯವಾಗಿ ಅಲ್ಲಿನ ಹವಾಮಾನಕ್ಕೆ ಒಗ್ಗಿಕೊಳ್ಳುವ ಬೆಳೆಯಾಗಬಲ್ಲದೆ ಎಂಬ ಬಗ್ಗೆ ಸಂಶೋಧನೆ ನಡೆಯುತ್ತಿದೆ. ಬೆಳಗಾವಿಯ ರೈತರು ಹಾಗೂ ಇತರರೊಡನೆ ಈ ಬಗ್ಗೆ ಸಮಾಲೋಚಿಸಲಾಗುವುದು. ಪ್ರಯೋಗಾರ್ಥವಾಗಿ ಹಾಕಿರುವ ಬೆಳೆಯು 30ರಿಂದ 40 ಟನ್ ಒದಗುವ ನಿರೀಕ್ಷೆ ಇದೆ. ಹಾಗೆ ಒದಗಿದರೆ ಬ್ರೆಜಿಲ್ ಕಂಪನಿಯಿಂದ ತಾಂತ್ರಿಕ ನೆರವು, ಅಗತ್ಯ

ಪರಿಕರ ಬಳಸಿ, ಸಕ್ಕರೆಗಡ್ಡೆಯಿಂದ ಸಕ್ಕರೆ ಉತ್ಪಾದಿಸುವ ಕಾರ್ಯಕ್ಕೆ ರಾಜ್ಯ ಸರ್ಕಾರ ಮುಂದಾಗುತ್ತದೆ ಎಂಬ ಭರವಸೆಯನ್ನು ಸಚಿವರು ನೀಡಿದರು. (27.3.10) ವಿದ್ಯುತ್ ಅಭಾವ ಹಾಗೂ ಕಬ್ಬು ನಿರ್ವಹಣೆಯ ತೊಂದರೆಗಳು ಹೆಚ್ಚುತ್ತಿರುವಲ್ಲಿ ಮೇಲಿನ ಪ್ರಯತ್ನಗಳು ಯಶಸ್ವಿಯಾದಷ್ಟೂ ರೈತರಿಗೆ ಸಾಂತ್ವನದ ಬದುಕು ಒದಗುತ್ತದೆ.

**ರೈತರ ವಿರುದ್ಧದ ಹಾವೇರಿ ಗೋಲಿಬಾರ್ ಸಂಬಂಧದ ಮೊಕದ್ದಮೆ ವಾಪಸಾತಿ** : ರಸಗೊಬ್ಬರ ಕೊರತೆಯ ಕಾರಣಕ್ಕಾಗಿ ಹಾವೇರಿಯಲ್ಲಿ 2008 ಜೂನ್ 10 ರಂದು ರೈತರು ಪ್ರತಿಭಟನೆಯ ಸಂದರ್ಭದಲ್ಲಿ ಗೋಲಿಬಾರ್ ನಡೆದಿತ್ತು. ರೈತರೇ ಇದಕ್ಕೆ ಹೊಣೆ ಎಂದು ಅವರ ವಿರುದ್ಧ ಪ್ರಕರಣಗಳನ್ನು ದಾಖಲಿಸಲಾಗಿತ್ತು. ರೈತ ಸಂಘಟನೆಗಳು ಹಾಗೂ ರಾಜಕೀಯ ಪಕ್ಷಗಳು ಅದರ ವಾಪಸಾತಿಗೆ ಒತ್ತಾಯಿಸುತ್ತಿದ್ದುವು. ಅಂತಾಗಿ ಹಾವೇರಿಯಲ್ಲದೆ, ಶಿವಮೊಗ್ಗ, ಹಾಸನ ಹಾಗೂ ಇತರ ಜಿಲ್ಲೆಗಳಲ್ಲಿ ಪ್ರತಿಭಟನೆ ವೇಳೆ ಹೂಡಿದ್ದ ಹಲವಾರು ಪ್ರಕರಣಗಳನ್ನು 29.3.10ನೇ ಸೋಮವಾರದಂದು ನಡೆದ ಸಚಿವ ಸಂಪುಟದ ಸಭೆಯಲ್ಲಿ ಹಿಂದಕ್ಕೆ ಪಡೆಯುವ ತೀರ್ಮಾನವನ್ನು ಕೈಗೊಂಡಿದ್ದು ರೈತರಿಗೆ ಸಂತೋಷ ತರುವ ವಿಷಯವಾಗಿತ್ತು.

**ರೈತರಿಗೆ ಅನುಕೂಲಿಸುವ ಕೈಗಾರಿಕೆಗಳಿಗೆ ತಾತ್ವಿಕ ಅನುಮೋದನೆ : ಉತ್ತರ.** ಕರ್ನಾಟಕ ರೈತರಿಗೆ ವಿಶೇಷತ ಹಾವೇರಿ ಜಿಲ್ಲೆ ರೈತರಿಗೆ ಅನುಕೂಲವಾಗುವಂಥದ್ದು ಮೆಕ್ಕೆ. ಜೋಳ ಆಧಾರಿತ ಕೈಗಾರಿಕೆ ಅದಕ್ಕಾಗಿ ನೂರು ಕೋಟಿ ರೂ ಹೂಡಿಕೆಗೆ ಗುಜರಾತ್ ಅಂಬುಜ ಎಕ್ಸ್‌ಪೋರ್ಟ್ ಲಿಮಿಟೆಡ್‌ನವರಿಗೆ, ಮುಖ್ಯಮಂತ್ರಿ ಯಡಿಯೂರಪ್ಪನವರ ಅಧ್ಯಕ್ಷತೆಯಲ್ಲಿ ನಡೆದ ಕೈಗಾರಿಕಾ ಸಚಿವ ಮುರುಗೇಶ್ ನಿರಾಣಿ ಹಾಗೂ ಹಿರಿಯ ಅಧಿಕಾರಿಗಳನ್ನೊಳಗೊಂಡ ಉನ್ನತಮಟ್ಟದ ಸಮಿತಿ ಸಭೆಯಲ್ಲಿ ಸಮ್ಮತಿಸಲು ತೀರ್ಮಾನಿಸಲಾಯಿತು. ಹೀಗೆಯೇ ಒಟ್ಟು 34 ಪ್ರಮುಖ ಕೈಗಾರಿಕಾ ಯೋಜನೆಗಳಿಗೆ 94,300 ಕೋಟಿ ರೂ.ಗಳ ಬಂಡವಾಳ ಹೂಡಿಕೆಗೆ ಸರ್ಕಾರ ತಾತ್ವಿಕ ಅನುಮೋದನೆ ನೀಡಿರುವಲ್ಲಿ 98,300 ಮಂದಿಗೆ ಉದ್ಯೋಗಾವಕಾಶವಾಗಲಿದೆ ಎಂಬುದು ನಿರೀಕ್ಷೆ. ಉತ್ತರ ಕರ್ನಾಟಕಕ್ಕೆ ಅವುಗಳಲ್ಲಿ ಶೇಕಡ 68ಕ್ಕೂ ಹೆಚ್ಚು ಯೋಜನೆಗಳು ದಕ್ಕಲಿವೆ. ಕೃಷಿ ಆಧಾರಿತ 2 ಘಟಕಗಳು, 201 ಕೋಟಿ ರೂ ಹೂಡಿಕೆ, 1751 ಉದ್ಯೋಗಾವಕಾಶ ವಿದ್ಯುತ್ ಉತ್ಪಾದನೆಯ 4 ಘಟಕಗಳಿಗೆ 10635 ಕೋಟಿ ರೂ. ಹೂಡಿಕೆ, 9415 ಉದ್ಯೋಗಾವಕಾಶ; ಸಕ್ಕರೆ 3 ಘಟಕಗಳು, 1144 ಕೋಟಿ ರೂ. ಹೂಡಿಕೆ, 6112 ಉದ್ಯೋಗವಕಾಶ ಉಂಟಾಗುತ್ತವೆ. ಹೀಗೆಯೇ ವಿವಿಧ ಯೋಜನೆಗಳು ಗ್ರಾಮೀಣ ನೆಲೆಯಲ್ಲೂ

ಜಾರಿಯಾಗುತ್ತವೆ ಎಂಬುದಕ್ಕೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ 4 ಘಟಕ, 1632 ಕೋಟಿ ರೂ. ಹೂಡಿಕೆ, 25692 ಉದ್ಯೋಗವಕಾಶವಾಗಿರುವುದು ಸಾಕ್ಷಿಯಾಗಬಲ್ಲುದು.

**ಸರ್ಕಾರದ 'ಆಸರೆ' ಯೋಜನೆ :** ನೆರೆಹಾವಳಿಯಿಂದ ಬೆಳೆನಷ್ಟ, ಮನೆ ಕುಸಿತದ ಹಾನಿಗೊಳಗಾದ ಹಳ್ಳಿಗರಿಗೆ ರೂಪಿಸಿರುವ ಸ್ಥಳಾಂತರ ವಸತಿಯೋಜನೆ ಇದಾಗಿದೆ. ಈ ಯೋಜನೆಯಲ್ಲಿ ಉತ್ತರ ಕರ್ನಾಟಕದ ಹಳ್ಳಿಗಳನ್ನು ನೆರೆನಷ್ಟದಿಂದ ಪಾರು ಮಾಡಿ ಶಾಶ್ವತ ನೆಲೆಗಳನ್ನು ಬೇರೆಡೆ ನಿರ್ಮಾಣ ಮಾಡಲಾಗುತ್ತಿದೆ. ನೆರೆ ಸಂತ್ರಸ್ತರಿಗೆ ಒಟ್ಟು 63 ಸಾವಿರಕ್ಕಿಂತ ಹೆಚ್ಚು ಮನೆಗಳ ನಿರ್ಮಾಣ ಮಾಡುವಲ್ಲಿ ಸರ್ಕಾರ ಮತ್ತು ಖಾಸಗಿ ಸಹಭಾಗಿತ್ವದಲ್ಲಿ ಈ ಯೋಜನೆ ಅನುಷ್ಠಾನಗೊಂಡಿದೆ. ಅಂಬೇಡ್ಕರ್, ಇಂದಿರಾ ಆವಾಜ್ ಯೋಜನೆಯಡಿ ವಸತಿ ನಿರ್ಮಾಣ ಕಾರ್ಯವೂ 2010–11 ಸಾಲಿನಲ್ಲಿ ಸಾಗಿ 2.63 ಲಕ್ಷ ಮನೆಗಳ ನಿರ್ಮಾಣದ ಗುರಿ ಹೊಂದಿದೆ. ಗ್ರಾಮೀಣ ಪ್ರದೇಶದಲ್ಲಿ ಕುಡಿಯುವ ನೀರಿನ ವ್ಯವಸ್ಥೆಗೆ ರಾಜ್ಯ, ಕೇಂದ್ರ ಹಾಗೂ ವಿದೇಶಿ ನೆರವಿನಿಂದ ಹನ್ನೆಂಡು ಜಿಲ್ಲೆಗಳಲ್ಲಿ **'ಜಲನಿರ್ಮಲ್'** ಯೋಜನೆ ಇದೆ. ಗ್ರಾಮೀಣ ಪ್ರದೇಶದಲ್ಲಿ ತುರ್ತು ಆರೋಗ್ಯ ಸೇವೆಗಾಗಿ ಆರೋಗ್ಯ ಕವಚ ಯೋಜನೆಯೂ ಇದೆ. ಕಲಾಂಪುರ, ಯೋಜನೆಯಡಿ ಗ್ರಾಮೀಣ ಪ್ರದೇಶಗಳಿಗೆ ನಗರ ಸೌಲಭ್ಯ ಕಲ್ಪಿಸುವಲ್ಲಿ ಪ್ರಯತ್ನವಾಗಿದೆ. ಇದೆಲ್ಲ ಸರ್ಕಾರದ ಸರ್ವಅಂಗಗಳು ಸ್ವಯಿಚ್ಛಾಶಕ್ತಿಯಿಂದ, ರೈತರ ಸಹಕಾರದಿಂದ ನಡೆದಷ್ಟೂ ರೈತ ಸಾಂತ್ವನ ಹಸನಾಗುತ್ತದೆ, ಸಾರ್ಥಕವಾಗುತ್ತದೆ.

**ಒಕ್ಕಲು ಮಕ್ಕಳಿಗೆ ಕವಿಸ್ಪಂದನ :** ಮಹಾಕವಿ ಕುವೆಂಪು ಅವರು ಬರೆದ, 'ನೇಗಿಲ ಯೋಗಿ' ಸುಗ್ಗಿ ಹಾಡು (12.11.1927) 1930ರಲ್ಲಿ ಪ್ರಕಟವಾದ **ಕೊಳಲು** ಕವನಸಂಕಲನದಲ್ಲಿವೆ. 'ಸುಗ್ಗಿಹಾಡು' ವಿನಲ್ಲಿ : ರೈತರು ಮಣ್ಣಿನ ಮಕ್ಕಳು, ನೇಗಿಲಯೋಗಿಗಳು, ಅವರ ದುಡಿಮೆ ಅವರಿಗಷ್ಟೇ ಅಲ್ಲ ಜಗದ ಜನರಿಗೂ ತುತ್ತಿನ ನೆಮ್ಮದಿ ನೀಡುತ್ತದೆ. ಅದಾಗಿ ನಲಿಯುವ, ತಣಿಯುವ, ದಣಿಯುವ ಸುಗ್ಗಿಕುಣಿತಕ್ಕೆ ರೈತರಿಗೆ ಆಹ್ವಾನ ನೀಡಿದ್ದಾರೆ ಕುವೆಂಪು. 'ಬನ್ನಿರಿ, ಬನ್ನಿರಿ ರೈತರೆಲ್ಲರು। ಸುಗ್ಗಿ ಕುಣಿತವ ಕುಣಿಯುವಾ।' ಎಂಬ ಕವನದ ಸಾಲುಗಳೆ ಇದಕ್ಕೆ ಸಾಕ್ಷಿ. ಇದಕ್ಕೆ ಮುಂಚಿನ ಕವಿತೆ 'ನೇಗಿಲ ಯೋಗಿ'ಯಲ್ಲಿ **'ನೇಗಿಲ ಹಿಡಿದಾ ಹೊಲದೊಳು ಹಾಡುತ। ಉಳುವಾ ಯೋಗಿಯ ನೋಡಲ್ಲಿ। ಫಲವನು ಬಯಸದೆ ಸೇವೆಯೆ ಪೂಜೆಯು। ಕರ್ಮವೆ ಇಹಪರ ಸಾಧನವು। ಕಷ್ಟದೊಳನ್ನವ ದುಡಿವನೆತ್ಯಾಗಿ। ಸೃಷ್ಟಿ**

**ನಿಯಮದೊಳಗವನೇ ಭೋಗಿ!........ ನೇಗಿಲ ಮೇಲೆಯೆ ನಿಂತಿದೆ ಧರ್ಮ'**, ಎಂದಿರುವ ಸಾಲುಗಳು ರೈತರ ಎದೆಯ ಭಾವಗಳನ್ನು ಸಾಂಸ್ಕೃತಿಕ ಪರಂಪರೆಯ ಜಾಡನ್ನು (ತ್ಯಾಗ, ದುಡಿಮೆ, ಫಲ ನಿರಪೇಕ್ಷ), ಪರಿಶ್ರಮವನ್ನು ದಟ್ಟವಾಗಿ ಚಿತ್ರಿಸುತ್ತದೆ. ಇಂಥ ರೈತನಿಗೆ ದುಡಿಮೆಯಿಂದ ದಕ್ಕುವ ತುತ್ತನ್ನು, ಹಕ್ಕನ್ನು ಕಸಿಯುವ ಅಧಿಕಾರ ಯಾರಿಗೂ ಇಲ್ಲ. ಅದನ್ನು ನಿಸರ್ಗವೇ ದಯಪಾಲಿಸಿರುವ ಭೋಗವಾಗಿರುವಾಗ ದೊರೆಗಾಗಲಿ, ದಳ್ಳಾಳಿಗಾಗಲಿ, ಬಲ್ಲದನಿಗಾಗಲಿ ಕಸಿಯಲು ಹಕ್ಕಿಲ್ಲ ಎಂಬ ಅರ್ಥ ಬಿತ್ತರವಾಗಿದೆ. ಈ ನಿಟ್ಟಿನಲ್ಲಿ ಸರ್ಕಾರದ ಕಾರ್ಯಕ್ರಮಗಳಲ್ಲಿ ಈ ಕವಿತೆಯನ್ನು ಹಾಡಲು ಆದೇಶವಾಗಿರುವುದು ರೈತರಿಗೆ ಸಲ್ಲಿಸಿರುವ ಭಾವಋಣವಾಗಿದೆ. ಕರ್ನಾಟಕ ರಾಜ್ಯ ರೈತ ಸಂಘವು ಈ ಕವಿತೆಯನ್ನು 'ರೈತ ರಾಷ್ಟ್ರಗೀತೆ'ಯನ್ನಾಗಿ ಮಾಡಿಕೊಂಡಿರುವುದು ಕವಿಗೆ ರೈತಹೃದಯಗಳ ನಮನಗೌರವವೂ ಆಗಿದೆ; ನಿರಂತರ ಮಿಡಿತದ ಗೀತೆ ಆಗಿದೆ.

**ಶಿರಗುಪ್ಪಿ ರೈತರ ಕಲ್ಪತರು ಏತ ನೀರಾವರಿ ಯೋಜನೆ** : ಎಪ್ಪತ್ತರ ದಶಕದ ಮೊದಲ ವರ್ಷಗಳಲ್ಲಿ ಕೃಷ್ಣಾನದಿ ತೀರದ ಸಿರಗುಪ್ಪಿ ಗ್ರಾಮದ ರೈತರು ಬರಗಾಲ ಎದುರಿಸಬೇಕಾಯಿತು. ಆಗ ಗ್ರಾಮದವರು ಒಗ್ಗಟ್ಟಾಗಿ ಸ್ವಂತಹಣ ಹಾಕಿ, ದುಡಿಮೆಗೈದು ಸಹಕಾರಿ ಕಿರು ಏತ ನೀರಾವರಿ ಯೋಜನೆಯನ್ನು ರೂಪಿಸಿ, ಜಲಕೃಷಿ ಕ್ರಾಂತಿ ಮಾಡಿದರು. ಕೃಷಿ ಕಾಯಕವನ್ನು ಸಾರ್ಥಕಗೊಳಿಸಿದ ಸಾಮೂಹಿಕ ಶ್ರಮದ ಸಾಕ್ಷಿ ತೋರಿದರು.

ಇಲ್ಲಿ ನದಿ ನೀರನ್ನು ಎತ್ತಿ ಲಿಫ್ಟ್ ಹೌಸ್‌ಗಳ ಬಾವಿಗಳಿಗೆ ಪಂಪ್ ಮಾಡಲಾಗುತ್ತದೆ. ನದಿ ಮತ್ತು ರೈತರ ಹೊಲಗಳ ಮಧ್ಯಕ್ಕೆ ಸರಿಯಾಗಿ ಈ ಲಿಫ್‌ಹೌಸ್ ಬಾವಿಗಳಿವೆ. ಇಲ್ಲಿಗೆ ನೀರು ಸಂಗ್ರಹಿಸಿ, ರೈತರ ಹೊಲದ ಎತ್ತರ ಪ್ರದೇಶದಲ್ಲಿ ನಿರ್ಮಿಸಿದ ಕೃತಕ ಕೆರೆಗಳಿಗೆ ನೀರು ಪಂಪ್ ಮಾಡಲಾಗುತ್ತದೆ. ಇಂಥ ಕೆರೆಯಿಂದ ಮತ್ತೆ ಉಪಸಾಲು ಕೊಳವೆಗಳ ಮೂಲಕ ರೈತರ ಹೊಲಕ್ಕೆ ನಿಗದಿತ ಸಮಯದಲ್ಲಿ ನೀರು ವಿತರಣೆ ಆಗುತ್ತದೆ. ಈ ವ್ಯವಸ್ಥೆಯಲ್ಲಿ ನೀರಾವರಿ ಸಂಘವಿದ್ದು, ಪಂಫ್ ಆಪರೇಟರ್, ಕಾರ್ಯದರ್ಶಿ ಮತ್ತು ವಾಟರ್‌ಮನ್ (ನೀರು ಗಂಟಿ!) ಅವರು ತಪ್ಪದೆ ನಿತ್ಯ ಕಾರ್ಯಚಾಲನೆ ಮಾಡುತ್ತಾರೆ. ಯಾರ ಜಮೀನಿಗೆ ಯಾವತ್ತು ನೀರು ಬಿಡುವ ಸರದಿ ಇದೆ ಎಂಬುದನ್ನು ವಾಟರ್‌ಮನ್ ಮುಂಚಿತವಾಗಿ ರೈತರಿಗೆ ತಿಳಿಸುತ್ತಾನೆ. ಅಂದು ಬೆಳಿಗ್ಗೆ 9 ರಿಂದ 5 ಗಂಟೆಗಳವರೆಗೆ ನೀರು ಹರಿಸಲಾಗುತ್ತದೆ. ಯಾರಿಂದಲೇ ಹೆಚ್ಚು ನೀರಿನ ಬಳಕೆ ಅಥವಾ ನೀರಿನ

ದುರ್ಬಳಕೆಯಾದರೆ ದಂಡವಸೂಲಿಯು ಕಟ್ಟುನಿಟ್ಟಾಗಿ ನಡೆಯುತ್ತದೆ. ಈ ನೀರಾವರಿ ಯೋಜನೆಯ ನೀಲನಕ್ಷೆಯೂ ಇದೆ. ಲಿಫ್ಟ್‌ಹೌಸ್ (ನೀರಿನ ಏತಮನೆ!) ನಲ್ಲಿ ಸಂಘದ ಕಛೇರಿ ಇದ್ದು ಸದಸ್ಯರ ಸಭೆ ವ್ಯವಸ್ಥೆಯ ಆಗುಹೋಗುಗಳ ಪರಿಶೀಲನೆಗಾಗಿ ನಡೆಯುತ್ತದ. 1972ರ ಬರದಲ್ಲಿ ಕುಡಿಯಲೂ ನೀರು ಕುಸಿತವಾದಾಗ, ಜಾನುವಾರುಗಳನ್ನು ಕಟುಕರಿಗೆ ಮಾಡಿ ಗುಳೆ ಹೊರಡುವಂಥ ಪರಿಸ್ಥಿತಿಯನ್ನು ಎದುರಿಸಿ ಸಹಕಾರ ರೈತೋಪಿ ಜಲಯೋಜನೆ ಕೈಗೊಂಡು ಯಶಸ್ವಿಯಾದ ಬಗ್ಗೆ ಉದಾಹರಣೆಯಾಗಿ ಗಜಾನನ ಹೆಗಡೆ ಬೆಟ್ಟಗೆ ಅವರು ಮಾರ್ಚ್ 22 **ವಿಶ್ವಜಲ ದಿನಾಚರಣೆಯ** ಸ್ಮರಣೆಗಾಗಿ ರೈತಜನ ಜಲ ಸಹಕಾರ ದರ್ಶನದ ಚಿತ್ರ ನೀಡಿದ್ದಾರೆ. (21.3.10) ಇದು ರೈತರ ಸ್ವ–ಸಾಂತ್ವನ ಕ್ರಿಯೆಯ ಸೋದಾಹರಣೆಯೂ ಆಗಿದೆ. ಈ ಯೋಜನೆಗೆ 10 ಸಾವಿರ ರೂ ದೇಣಿಗೆ ಸಂಗ್ರಹ. ಮಹಾರಾಷ್ಟ್ರದ ಸಾಂಗ್ಲಿ ಬ್ಯಾಂಕ್‌ನ ಮೀರತ್ ಶಾಖೆ ನೀಡಿದ ಸಾಲದ ನೆರವು ಸೇರಿದೆ. 2.75 ಲಕ್ಷ ರೂ ವೆಚ್ಚದಲ್ಲಿ 1976ರಲ್ಲಿ ಮಹಾತೀರ ಏತ ನೀರಾವರಿ ಸಂಘ ಅಸ್ತಿತ್ವಗೊಳಿಸಿದ ಈ ಯೋಜನೆಯಿಂದ 16 ರೈತರ 82 ಎಕರೆ ಜಮೀನಿನಲ್ಲಿ ಕಬ್ಬು ಬೆಳೆದು ಯಶಸ್ಸು ದೊರಕಿತು. ಶೇತ್ಕರಿ ನೀರಾವರಿ ಸಂಘ, ವಿನಾಯಕ ನೀರಾವರಿ ಸಂಘ ಪದ್ಮಾವತಿ ಕೃಷಿ ಅಭಿವೃದ್ಧಿ ಸಂಘ ಕೂಡಿದಂತೆ ಇಂದು ಒಟ್ಟು 22 ಏತ ನೀರಾವರಿ ಸಂಘಗಳು 5600 ಎಕರೆ ಭೂಮಿಗೆ ನೀರು ಒದಗಿಸಿಕೊಂಡು, ಕಬ್ಬು, ಬಾಳೆ, ದ್ರಾಕ್ಷಿ ಇತ್ಯಾದಿ ವಾಣಿಜ್ಯ ಬೆಳೆಗಳು ಇಲ್ಲಿ ಹಾದಿ ಕಂಡಿವೆ. ನೀರು ಬೆಲೆ ನಿಗದಿ ಮಾಡಿ ಬೆಳೆ ಪ್ರದೇಶದ ಗುಣ ಇವಕ್ಕೆ ಅನುಗುಣವಾಗಿ ನೀರು ಬಿಟ್ಟು ಶುಲ್ಕವನ್ನು ಸಂಗ್ರಹಿಸಲಾಗುತ್ತದೆ. ಇವೆಲ್ಲ ವ್ಯವಸ್ಥೆ ನೋಂದಣಿಯುತ ಸ್ವಾಯತ್ತೆಯದಾಗಿದೆ. ಆದರೆ ಇಂದು ಅತಿ ರಾಸಾಯನಿಕ ಮತ್ತು ನೀರು ಬಳಕೆಯಿಂದ ಸವಳು ಜವಳು ಸಮಸ್ಯೆ ಉಂಟಾಗಿದೆ. ನೀರು ಸಂಗ್ರಹಕ್ಕೆ ಎತ್ತರದಲ್ಲಿ ನಿರ್ಮಿಸಿದ ಕೃತಕ ಕಾಲುವೆ ನೀರು ಒಸಿದು ಕೆಳಪ್ರದೇಶಕ್ಕೆ ಬಂದಿರುವುದು, ಹಿಪ್ಪರಗಿ ಬ್ಯಾರೇಜ್ ಹಿನ್ನೀರು ಕಾರಣ 700 ಎಕರೆ ಸವಳಾಗಿದೆ ಎಂಬುದು ಗಜಾನನ ಅವರ ವಿವರಣೆ. ಇಲ್ಲಿ ಸಂಘದ ಹೆಸರಿನಲ್ಲಿ ವಿದ್ಯುತ್ ಸಂಪರ್ಕ ಪಡೆದಿರುವಲ್ಲಿ ವೈಯಕ್ತಿಕ ರೈತರಿಗೆ ವಿದ್ಯುತ್ ಮೋಟಾರ್ ಶುಲ್ಕ ರಿಯಾಯಿತಿ ಇರುವಂತೆ, ಸರ್ಕಾರಿ ನೀರಾವರಿ ನೆರವು ಸಿಗುವುದಿಲ್ಲ. ಇಂಥ ಸಂದಿಗ್ಧಗಳನ್ನು ರೈತರ ನೀರಾವರಿ ಸಂಘವು ಪರಿಹರಿಸಿಕೊಳ್ಳಬೇಕಿದೆ. ಕೊಡಗಿನಲ್ಲಿಯೂ ಇಂಥ ಕಿರು ಏತ ನೀರಾವರಿ ಯೋಜನೆ ಸಂಘಗಳು 8–10 ಇದ್ದುವು. ಇಂದು ಅವು ಶುಲ್ಕವನ್ನು ಪರಸ್ಪರ ಕಟ್ಟದೆ ನಿಷ್ಕ್ರಿಯವಾಗಿವೆ. ಈ ದೃಷ್ಟಿಯಿಂದ ಕೊಡಗಿನ ಹಾಗೂ ಹಿಪ್ಪರಗಿಯ ರೈತರ ಸಾಂತ್ವನ ಪ್ರಯತ್ನ ಪ್ರೋತ್ಸಾಹಗೊಳ್ಳಬೇಕಿದೆ.

**ಭತ್ತದ ಭೂ ಕೃಷಿ ಬಿಟ್ಟು ತೋಟಗಾರಿಕೆಯತ್ತ ಒಲವು :** ಕೃಷಿ ಭೂಮಿ ಮತ್ತು ಕೃಷಿಕರ ಸಂಖ್ಯೆ ಕುಸಿದರು ತೋಟಗಾರಿಕೆ ಬೆಳೆಯುತ್ತ ರೈತರು ಮನಸ್ಸು ಮಾಡುತ್ತಿದ್ದಾರೆ. ರಾಜ್ಯದಲ್ಲಿರುವ ಶೇ. 14ರಷ್ಟು ತೋಟಗಾರಿಕೆಯಲ್ಲಿ ಶೇ. 10ರಷ್ಟು ಮಾವಿನ ಬೆಳೆಗೆ ಮೀಸಲಾಗಿದೆ. ಚಾಮರಾಜನಗರದ ಕಡೆ 1960ರಲ್ಲಿ 4.5ಹೆಕ್ಟೇರ್ ಪ್ರದೇಶದಲ್ಲಿ ತೋಟಗಾರಿಕೆ ಇದ್ದದ್ದು 2010ರ ಆರಂಭದವೇಳೆಗೆ 17.6ಲಕ್ಷ ಹೆಕ್ಟೇರ್‌ಗೆ ಅದು ಜಿಗಿದಿದೆ. ತೋಟಗಾರಿಕೆ ಬೆಳೆಗಳು 125ಲಕ್ಷ ಟನ್ ನಷ್ಟು ಉತ್ಪಾದನೆಗೊಂಡಿವೆ. ಇದಕ್ಕೆ ರಾಷ್ಟ್ರೀಯ ತೋಟಗಾರಿಕೆ ಮಿಷನ್‌ನಿಂದ ತುಂತುರು ನೀರಾವರಿ ಯೋಜನೆಯಿಂದ, ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಿಂದ, ಉದ್ಯೋಗ ಖಾತ್ರಿ ಯೋಜನೆಯಿಂದ ಒಟ್ಟು 500ಕೋಟಿ ರೂ. ಅಭಿವೃದ್ಧಿಗೆಂದು ಪ್ರೋತ್ಸಾಹ ಧನ ಒದಗುತ್ತಿರುವುದು ಕಾರಣವಾಗಿದೆ. ಅದರೆ ಮಧ್ಯಮ ಹಾಗೂ ಸಣ್ಣ ಹಿಡುವಳಿದಾರರಿಗೆ ನ್ಯಾಯವಾಗಿ ಒದಗಬೇಕಾದ ಈ ಸೌಲಭ್ಯ, ಹೆಚ್ಚಿನ ಭೂಮಿ ಉಳ್ಳವರ ಪಾಲಾಗಿದೆ ಎಂಬ ಬಗ್ಗೆ ಕಟ್ಟೆಗುರುರಾಜ್ ಹೇಳುತ್ತಾರೆ. (24.3.10) ಪ್ರಬಲರು ಪ್ರಭಾವಿಗಳ ಆಕ್ರಮಣದ ವಿವಿಧ ಮುಖಗಳು ಹೀಗೆ ನೂರಾರು.

**ವಿದ್ಯುತ್ ಸ್ವಾಯತ್ತತೆಯ ಅಸೊಳ್ಳಿಗ್ರಾಮ :** ಉತ್ತರ ಕನ್ನಡ ಜಿಲ್ಲೆ ಅಂಕೋಲಾ ತಾಲೂಕಿನ ಅಸೊಳ್ಳಿ ಗ್ರಾಮ ದಟ್ಟಕಾಡಿನ ಮಧ್ಯದಲ್ಲಿದೆ. ಇಲ್ಲಿರುವ ಆರುಮನೆಗಳು ಕರಿ ಒಕ್ಕಲಿಗರಿಗೆ ಕಿರುಜಲ ವಿದ್ಯುತ್ ಯೋಜನೆ ರೂಪಿಸಿದ ಕುಂಟಗಣಿ ಗಣೇಶ ಶೆಟ್ಟಿ ವಿದ್ಯುತ್ ಸ್ವಾವಲಂಬನೆಯನ್ನು ತಂದುಕೊಟ್ಟಿದ್ದಾರೆ. ಗ್ರಾಮದ ಮೇಲ್ಭಾಗದಲ್ಲಿ ಸದಾ ಹರಿಯುವ ಹಳ್ಳದ ನೀರನ್ನು ಅದು ಧುಮ್ಮಿಕ್ಕುವಲ್ಲಿ ಪೈಪ್ ಮೂಲಕ ಸಂಗ್ರಹಣಾ ತೊಟ್ಟಿಗೆ ಸಾಗಿಸಿ ಅಲ್ಲಿಂದ ಸುಮಾರು 100ಮೀ ಕೆಳಗಿನ ಪಂಪ್ ಹೌಸಿಗೆ ವರ್ಗಾಯಿಸಲಾಗುತ್ತದೆ. ಅಲ್ಲಿ ಅಳವಡಿಸಿದ ಜನರೇಟರ್‌ನಿಂದ ವಿದ್ಯುತ್ ಉತ್ಪಾದಿಸಿ, ಪ್ರತಿಮನೆಗೂ ವಿದ್ಯುತ್ ತಂತಿ ಎಳೆದು ವಿದ್ಯುತ್ ಒದಗಿಸಲಾಗಿದೆ. ಯೋಜನೆಯ ಪ್ರತಿ ಹಂತದಲ್ಲಿ ಸ್ಥಳೀಯರೇ ಕೆಲಸ ಮಾಡುವಲ್ಲಿ ಈ 4 ಲಕ್ಷರೂ. ಯೋಜನೆಗೆ ಇಂಡೋ ನಾರ್ವೇಜಿಯನ್ ವಿನ್‌ವಿಡೋನ್ಮೆಂಟಲ್ ಪ್ರೋಗ್ರಾಮ್ ಶೇ. 60ರಷ್ಟು ನಿಧಿನೆರವು ನೀಡಿದೆ. ಬೆಂಗಳೂರಿನ ಟೈಡ್ ಸಂಸ್ಥೆ ತಾಂತ್ರಿಕ ನೆರವು ನೀಡಿದೆ. ಸ್ಥಳೀಯರಿಂದಲು 1.50ಲಕ್ಷರೂ. ಸಂಗ್ರಹದ ದೇಣಿಗೆ ಆಗಿದೆ. ಗ್ರಾಮದ ಪ್ರತಿ ಮನೆಯಿಂದ ಈ ಯೋಜನಾ ಸಮಿತಿಯಲ್ಲಿ ಸದಸ್ಯರಿದ್ದಾರೆ. ಯೋಜನೆಯ ನಿರ್ವಹಣೆ ಮಾಡಿ, ಪ್ರತಿಮನೆಗೂ ಟಿ.ವಿ, ಮಿಕ್ಸರ್, ಗ್ರೈಂಡರ್, ಫ್ಯಾನ್ ಹಾಗೂ ಹಗಲು ರಾತ್ರಿ ವಿದ್ಯುತ್ ಬಳಕೆಗೆ ಅನುಕೂಲಿಸಲಾಗಿದೆ. ಹಗಲಿನ ವೇಳೆಯಲ್ಲಿ

ವಿದ್ಯುತ್ ಅನ್ನು ಬಳಸದೆ ವಿದ್ಯುತ್ ಉತ್ಪಾದನೆಗೆ ಬಳಸುವ ನೀರನ್ನು ಅಡಿಕೆ ತೋಟಕ್ಕೆ ನೇರವಾಗಿ ಹಾಯಿಸುತ್ತಾರೆ. ಹೀಗಾಗಿ ವಿದ್ಯುತ್ ದುರ್ಬಳಕೆ ಆಗಿಲ್ಲ. ಸಂಪೂರ್ಣವಾಗಿ, ಸ್ವಂತ ಜಲ ವಿದ್ಯುತ್ ಯೋಜನೆಯನ್ನು ಅವಲಂಬಿಸಿರುವ ಈ ಗ್ರಾಮದ ಜನತೆಯ ಸಾಧನೆಯ ಬಗ್ಗೆ ವಸಂತಕುಮಾರ್ ಕತೆಗಾಲ ಗಮನ ಸೆಳೆದಿದ್ದಾರೆ (16.4.10). ಇಂಥ ಪ್ರಯತ್ನಗಳು ಅನುಕೂಲ ನೈಸರ್ಗಿಕ ಸನ್ನಿವೇಶಗಳು ಇರುವೆಡೆ ಅದರ ಸ್ವಾವಲಂಬಿ ಬದುಕಿಗೆ ನೆರವಾಗುತ್ತವೆ. ಹಂಗಿನ ನೆರೆಯಿಂದ ನಿರುಮ್ಮಳ ಜೀವನಕ್ಕೆ ಜಿಗಿಯುವ ಮನಸ್ಸು ಬೇಕಷ್ಟೆ.

**ತೊರೆ ನೀರು ಬಳಸಿ ವಿದ್ಯುತ್ ಉತ್ಪಾದನೆ :** ಸಕಲೇಶಪುರ ತಾ. ಹಾನಬಾಳು ಹೋಬಳಿ ಅಗ್ನಿಗ್ರಾಮದ ಕಾಫಿ ಬೆಳೆಗಾರ ಯುವರಾಜ್ ಅವರಿಗೆ ತಮ್ಮ ತೋಟದ ಮಗ್ಗುಲಿಗಿರುವ ಮುಕ್ಕಣ್ಣು ಗುಡ್ಡದ ಸುಮಾರು ಐನೂರು ಅಡಿ ಎತ್ತರದಿಂದ ಬೀಳುವ ಕಿರು ಜಲಪಾತ ಹಾಗೂ ತೊರೆಗಳ ಮೇಲೆ ಕಣ್ಣು ಬಿತ್ತು. ಅವರು ಈ ವೇಗದ ನೀರಿನ ಹರಿವಿಗೆ ಒಡ್ಡುಗಳನ್ನು ನಿರ್ಮಿಸಿ, ಪೈಪ್‌ಗಳ ಮೂಲಕ ಟರ್ಬೈನ್‌ಗೆ ಹರಿಸಿ 3.6ಕಿಲೋ ವ್ಯಾಟ್ ಅನ್ನು ಸ್ವಂತ ತಯಾರಿಸಿಕೊಳ್ಳುತ್ತಿದ್ದಾರೆ. ಈ ಕಿರು ಜಲವಿದ್ಯುತ್ ಯೋಜನೆಗೆ ಯುವರಾಜ್‌ಗೆ ಒಂದು ಲಕ್ಷ 20ಸಾವಿರ ಖರ್ಚಾಗಿದ್ದು ಸರ್ಕಾರದಿಂದ ಸಬ್ಸಿಡಿಯು ದೊರಕಿದೆ. ಕಿರು ಜಲವಿದ್ಯುತ್ ಯೋಜನೆಯ ಹೆಸರಿನಲ್ಲಿ ಅರಣ್ಯನಾಶ ಮಾಡದೆ ನಿಸರ್ಗದ ಸಹಕಾರವಿದ್ದೆಡೆ ಜಲವಿದ್ಯುತ್ ಯೋಜನೆಯನ್ನು ಯಶಸ್ವಿಗೊಳಿಸಬಲ ಸಾಕ್ಷಿ ಇಲ್ಲಿ ದೊರೆಯುವ ಬಗ್ಗೆ ಎಚ್.ಟಿ. ಮೋಹನ್ ಕುಮಾರ್ ಗಮನ ಸೆಳೆಯುತ್ತಾರೆ. (20.4.2010)

**ಹನಿ ನೀರಾವರಿಯ ಸದ್ಬಳಕೆ :** ಕೆರೆಗಳನ್ನು ಗುಡ್ಡಗಳಲ್ಲಿ ರೂಪಿಸಿ, ಮಳೆನೀರನ್ನೂ ಇಂಗಿಸಿ ತೆರೆದಬಾವಿ ಮತ್ತು ಕೊಳವೆ ಭಾವಿಗಳಿಗೆ ಸರಪಳಿ ಹರಿಯುವ ವ್ಯವಸ್ಥೆ ಮೂಲಕ ಅಂತರ್ಜಲ ಮಟ್ಟ, ಕಾಕೋಳದಲ್ಲಿ ನೀರಿನ ಅಭಾವ ತವಿದವರು ಚನ್ನಬಸಪ್ಪ ಕಂಬಳಿ. ಇವರು ಮತ್ತು ಕರಬಸವನಗೌಡ ಸೇರಿ ತಮ್ಮ ಗ್ರಾಮಕ್ಕೆ ಸಿಗುವ ಮೂರುಗಂಟೆ ಕಾಲದ ವಿದ್ಯುತ್‌ನಲ್ಲಿಯೇ ಸುಮಾರು ಒಟ್ಟು 13 ಎಕರೆ ತೋಟಕ್ಕೆ ಹನಿನೀರಾವರಿ ಮೂಲಕ ನೀರು ಹಾಯಿಸಿ ತೋರಿದ್ದಾರೆ. ಇವರ ಕೃಷಿ ಬೆಳೆಗಳು ನಳನಳಿಸುತ್ತಿವೆ. ಇದಕ್ಕಾಗಿ ಇವರು ರೂಪಿಸಿದ ಕಾರ್ಯವಿದು: ಮಳೆನೀರನ್ನು ಕಡ್ಡಾಯವಾಗಿ ಇಂಗಿಸಬೇಕು; ಸಾವಯವ ಕೃಷಿಯನ್ನು ಅನುಸರಿಸಬೇಕು; ಬೆಳೆಗಳ ಸಸಿಗಳ ಬುಡದಲ್ಲಿ (ಮಲ್ಚಿಂಗ್) ಹೊದಿಕೆ ಮಾಡಬೇಕು; ಅದರಿಂದ ಹೆಚ್ಚು ನೀರಿನ ಒಳಕ್ಕೆ ಆಗುವುದಿಲ್ಲ; ಹನಿ ನೀರಾವರಿಯಲ್ಲಿ, ನೀರು ವ್ಯರ್ಥ್ಯವಾಗದೆ

ಗಿಡದ ಆಳದವರೆಗೆ ಇಳಿದು, ಹೊಲದ ತುಂಬ ನೀರಿನಾಸರೆ ಇರುತ್ತದೆ; ಪೈಪ್ ಲೈನ್ ಮೂಲಕ 20 ಎಕರೆಗೆ ನೀರು ಹಾಯಿಸಲು ತಗಲುವ ಸಮಯ ಮತ್ತು ವಿದ್ಯುತ್ ಅಗತ್ಯದ ಪ್ರಮಾಣದಿಂದ 4–5 ಎಕರೆ ತೋಟ-ಹೊಲಗಳಿಗೆ ನೀರುಣಿಸಬಹುದು. ಹನಿ ನೀರಾವರಿ ಪಂಪ್‌ಸೆಟ್‌ಗೆ ಆಟೋ ಸ್ಟಾರ್ಟರ್ ಅಳವಡಿಸಿದರೆ ವಿದ್ಯುತ್ ಬಂದಾಗ ತಾನೇ ಮೋಟಾರ್ ಚಾಲನೆಗೊಳ್ಳುತ್ತದೆ; ಹನಿ ನೀರಾವರಿ ಬಗ್ಗೆ ಜಾಗೃತಿ ರೈತರಲ್ಲಿ ಮೂಡಬೇಕು; ಕೃಷಿ ಪರಿಕರಗಳಿಗೆ ಸಬ್ಸಿಡಿಯನ್ನು ಸರ್ಕಾರ ನೀಡುವಂತೆ ಹನಿ ನೀರಾವರಿಗೂ ಶೇ. 100ರಷ್ಟು ಸಬ್ಸಿಡಿ ನೀಡಬೇಕು ಎಂಬ ಕಂಬಳಿ ಹಾಗೂ ಕರಬಸವನ ಗೌಡರ ಕಳಕಳಿಯನ್ನು ಗಮನಿಸಿ ಮಾಹಿತಿ ಪಡೆದು ಶಿವಾನಂದ ಗೊಂಬಿ ವರದಿ ಮಾಡಿದ್ದಾರೆ (17.4.10). ಇಂಥ ಪ್ರಯತ್ನಗಳು ರೈತರಿಗೆ ಮಾದರಿಯಾಗಿ ಸ್ವಸಾಂತ್ವನ ಶಕ್ತಿಯನ್ನು ಬೆಳೆಸಬಲ್ಲವು ಈ ದಿಸೆಯಲ್ಲಿ ಗ್ರಾಮದ ಇನ್ನು ಕೆಲವು ರೈತರು ಹನಿನೀರಾವರಿ ಅಳವಡಿಕೆಗೆ ಮುಂದಾಗಿರುವುದು ಪ್ರೇರಕಯಶಸ್ಸು ಎನ್ನಬೇಕು.

**ಆನೆಕಾವಲಿಗೆ ಅರಣ್ಯದಲ್ಲಿ ಸೌರತಂತಿಯ ಬೇಲಿ :** ಬಂಡೀಪುರ ಅಭಯಾರಣ್ಯದ ನಂಜನಗೂಡು, ಗುಂಡ್ಲುಪೇಟೆ ತಾ. ಕಾಡಂಚಿನ ಪ್ರಸಿದ್ಧ ಓಂಕಾರ ಅರಣ್ಯ ವಲಯದಲ್ಲಿ ಆನೆಗಳು ನೀರು ಆಹಾರ ಅರಸಿ ಬಂದು ರೈತರ ಜಮೀನನ್ನು ಹಾಳುಗೆಡಹುತ್ತಿದ್ಯುವು. ಅಂತಾಗಿ 'ವಿ' ಮಾದರಿಯ ಆನೆ ತಡೆ ಕಂದಕ ಹಾಗೂ ಅದರ ಬದಿಗೇ ಸೋಲಾರ್ ತಂತಿ ಬೇಲಿಯನ್ನು ಜೊತೆಗೆ ನಿರ್ಮಿಸಲಾಗುತ್ತಿದೆ. ಕಾರಣ ಪ್ರತ್ಯೇಕ ನಿರ್ಮಾಣವಿದ್ದಾಗ ಆನೆಗಳು ಒದ್ದು ಕಂದಕ ಮುಚ್ಚಿ, ಸೋಲಾರ್ ಬೇಲಿಯನ್ನು ಒಣಮರದಿಂದ ಬಡಿದು ಹಾಳುಮಾಡುತ್ತಿದ್ದವು. ಅಂತಾಗಿ ಅರಣ್ಯ ಇಲಾಖೆಯು ಓಂಕಾರ ಅರಣ್ಯ ವಲಯದ ಮಂಚಳ್ಳಿ, ಸಾವಕನಹಳ್ಳಿ, ಶೆಟ್ಟಿಹಳ್ಳಿ, ಸಿದ್ದಯ್ಯನಪುರಗಳಲ್ಲಿ ಪರಿಸರ ಅಭಿವೃದ್ಧಿ ಸಮಿತಿಗಳನ್ನು ರೂಪಿಸಿ ಈ ಕಂದಕ-ಸೋಲಾರ್ ತಂತಿ ಜೊತೆ ವ್ಯವಸ್ಥೆಯ ನಿರ್ವಹಣೆಯನ್ನು ಪ್ರಾಯೋಗಿಕವಾಗಿ ಆ ಸಮಿತಿಗಳಿಗೆ ನೀಡಲಾಗಿದೆ. ನಾಗರತ್ನಮ್ಮ ಕಾಲೋನಿಯಿಂದ ದೇಶೀಪುರದವರೆಗೆ ಸುಮಾರು 12ಕಿ.ಮೀವರೆಗೆ **ಕಂದಕ-ಸೋಲಾರ್ ಬೇಲಿ ಜೋಡಿಯನ್ನು** ನಿರ್ಮಿಸಿರುವ ಬಗ್ಗೆ ದೇವರಾಜ ಕಪ್ಪಸೋಗೆ ಮಾಹಿತಿ ನೀಡಿದ್ದಾರೆ (17.4.2010)

**ಸೋಲಾರ್ ಶಕ್ತಿ ಬಳಸಿ ವಿದ್ಯುತ್ ಉತ್ಪಾದನೆ :** ತುಮಕೂರು ಶಿರಾ, ಚಿಕ್ಕನಾಯಕನ ಹಳ್ಳಿ, ಕೊರಟಗೆರೆ ತಾಲೂಕು ಪ್ರಗತಿಪರ ರೈತರು ನಾಲ್ಕು ವರ್ಷಗಳಿಂದ ಸೋಲಾರ್ ವಿದ್ಯುತ್ ಉತ್ಪಾದಿಸಿ ರೈತರು ತಮ್ಮ ತೋಟಗಳಿಗೆ ಸಮೃದ್ಧವಾಗಿ

ನೀರು ಹರಿಸಿಕೊಳ್ಳುತ್ತಿದ್ದಾರೆ. ಅವರ ತೋಟ, ಗದ್ದೆಗಳು ಹಸನುಗೊಂಡಿವೆ. ಈ ತಾಲೂಕುಗಳ ರೈತರು ತಮ್ಮ ಕೊಳವೆ ಭಾವಿಗಳಿಗೆ ಅತ್ಯಾಧುನಿಕ ಸೋಲಾರ್ ಪಂಪ್‌ಸೆಟ್ ಅಳವಡಿಸಿಕೊಂಡು ಸಾಗುವಳಿಗೆ ಅನುಕೂಲಿಸಿಕೊಂಡಿದ್ದಾರೆ. ಇದರಿಂದ ಬೆಳಿಗ್ಗೆ 6ರಿಂದ ಸಂಜೆ 6ರ ವರೆಗೆ ನಿರಂತರ 12. ಗಂಟೆಗಳ ವಿದ್ಯುತ್ ಪಡೆದು ನೀರು ಹಾಯಿಸಿಕೊಳ್ಳುತ್ತಾರೆ. ತೆಂಗಿನತೋಟ ಅಡಿಕೆ ತೋಟಕ್ಕೆ ನೀರು ಒದಗಣೆ ಹಾಗೂ ತೋಟದ ಮನೆಗೆ ವಿದ್ಯುತ್ ದೀಪದ ಅನುಕೂಲ ಒದಗಿದೆ. ಕೊಳವೆ ಭಾವಿಯ ಸೋಲಾರ್ ಪಂಪ್‌ಸೆಟ್‌ಗಳಿಗೆ 4.94ಲಕ್ಷ ರೂ. ಖರ್ಚು ಬರುತ್ತದೆ. ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರಗಳು ಕೊಡುತ್ತಿದ್ದ ಪ್ರೋತ್ಸಾಹ ಸಹಾಯಧನ ಈಗ ಕಡಿತಗೊಳಿಸಿವೆ. ಬೆಸ್ಕಾಂ ವಿದ್ಯುತ್ ಅನ್ನು ಅವಲಂಬಿಸದೆ ಸ್ವಪ್ರಯತ್ನದಿಂದ ಸ್ವಸಾಂತ್ವನ ಬೇಸಾಯ ಮಾಡಿಕೊಳ್ಳುತ್ತಿರುವ ಈ ಸೋಲಾರ್ ಪಂಪ್‌ಸೆಟ್ ರೈತರಿಗೆ ಸಹಾಯಧನ ಕಡಿತದಿಂದ ಅನಾನುಕೂಲವಾಗಲಿರುವ ಬಗ್ಗೆ ಉಗಮ ಶ್ರೀನಿವಾಸ್‌ವರದಿ ನೀಡಿದ್ದಾರೆ (23.4.10)

**ರೈತರ ನೀರಿನ ಹಕ್ಕೊತ್ತಾಯದ ದಿನ ಆಚರಣೆ :** ಶ್ರೀ ನಂಜಾವಧೂತ ಸ್ವಾಮೀಜಿ ಶಿರಾ ತಾಲ್ಲೂಕಿನ ಪಟ್ಟನಾಯಕನಹಳ್ಳಿ ಸ್ಫಟಿಕಪುರಿ ಸಂಸ್ಥಾನದ ಸ್ವಾಮೀಜಿ ಆಗಿದ್ದಾರೆ. ಅವರೆ ತಮ್ಮ ಜನ್ಮದಿನವಾದ ಏಪ್ರಿಲ್ 21ತಾರೀಖನ್ನು 'ರೈತರ ನೀರಿನ ಹಕ್ಕೊತ್ತಾಯ ದಿನ' ವಾಗಿ ಆಚರಿಸಲು ಹಕ್ಕೊತ್ತಾಯ ಸಮಾವೇಶ ಏರ್ಪಡಿಸುತ್ತಾರೆ. ಈ 'ನೀರು ಸ್ವಾಮೀಜಿ' ಅವರ ರೈತ ಬೇಸಾಯ ಪರ ಕಾಳಜಿಯಿಂದಾಗಿ, ಅವರ ನೆರೆಯ ಕೃಷಿ ಭೂಮಿ ನೀರಾವರಿ ಜಮೀನುಗಳಾಗಿ ಏರ್ಪಟ್ಟಿವೆ. ಸರ್ಕಾರದ ಮುಖ್ಯಸ್ಥರನ್ನು ಸಮಾವೇಶಕ್ಕೆ ಕರೆದು ನೀರಿನ ಪೂರೈಕೆ ಬಗ್ಗೆ ಮನನ ಮಾಡಿಸುತ್ತಾರೆ. ಭದ್ರಾ ಮೇಲ್ದಂಡೆಯೋಜನೆ ಅನುಷ್ಠಾನಕ್ಕೆ ಚಿತ್ರದುರ್ಗ ಜಿಲ್ಲೆ ವಾಣಿವಿಲಾಸ ಸಾಗರಕ್ಕೆ ನೀರು ಹರಿಸುವಂತೆ ಮಾಡಿದ ರೈತರ ಹೋರಾಟಕ್ಕೆ ಒತ್ತಾಸೆಯಾಗಿ ನಿಂತವರು ಈ ಸ್ವಾಮಿ ಆಗಿದ್ದಾರೆ. ಶಿರಾ ತಾ. ಮದಲೂರು ಕೆರೆಗೆ ನೇತ್ರಾವತಿ ತುಂಬಿಸುವುದರ ಹಿಂದೆ, ಆಂಧ್ರಪ್ರದೇಶದ 'ಜಲಯಜ್ಞಂ' ಯೋಜನೆಯ ಹಿಂದಿನ ಸ್ಫೂರ್ತಿ ಶ್ರೀ ಸ್ವಾಮೀಜಿಯವರು ಎನ್ನಲಾಗಿದೆ. ಈ ವಿಷಯಗಳತ್ತ ಎಸ್. ಮಧುಸೂಧನ ಅವರು ಗಮನ ಸೆಳೆದಿದ್ದಾರೆ. (21.4.10). ಆಧ್ಯಾತ್ಮಿಕ ಗುರುಗಳೊಬ್ಬರ ರೈತರ ಪರ ಕಾಳಜಿ ಸಾಮಾಜಿಕ ನೆಮ್ಮದಿಗೆ ಕಾರಣವಾಗುವಂಥ ಕಾರ್ಯವಿದೆನಿಸುತ್ತದೆ.

**ಕಪ್ಪತ್ತಗುಡ್ಡದ ಜಲಸೂತ್ರಧಾರಿ :** ಗದಗ ತಾಲೂಕಿನ ಕದಾಂಪುರ ಗ್ರಾಮದ ದೋಣಿ ದಾರಿಯಲ್ಲಿ ಬರುವ ಕಪ್ಪತಗುಡ್ಡದ ನಂದಿವೇರಿ ಮಠದ ಸ್ವಾಮೀಜಿ ಶಿವಕುಮಾರ ಶ್ರೀಗಳು ಈ ಮಠದ ಪಕ್ಕದ ಹಳ್ಳ, ಕೊಳವೆ ಭಾವಿಗಳಲ್ಲಿ ನೀರಿಲ್ಲದಿದ್ದುದು ಗಮನಕ್ಕೆ ಬಂತು. ಆಗ ಮಳೆಗಾಲದಲ್ಲಿ ಸಾವಿರ ಅಡಿ ಎತ್ತರದ ಗುಡ್ಡದಿಂದ ರಭಸದಿಂದ ಹರಿದು ಪೋಲಾಗುತ್ತಿದ್ದ ನೀರನ್ನು ಇಂಗಿಸಲು ಸಂಗ್ರಹಿಸಲು ಅಡ್ಡವಾಗಿ ಇಂಗುಗುಂಡಿಗಳನ್ನು ತೆಗೆಸಿದರು; 13 ನಾಲಾ ಚೆಕ್‌ಡ್ಯಾಮ್‌ಗಳನ್ನು, ಒಂದು ಸಾವಿರ ಒಣಕಲ್ಲಿನ ಪರ್ಸಿಗಳನ್ನು ನಿರ್ಮಿಸಿದರು. ಹೀಗಾಗಿ ಗುಡ್ಡದಿಂದ ಓಡುತ್ತಿದ್ದ ನೀರು ಗುಡ್ಡದಲ್ಲಿಯೇ ಇಂಗಿ ಹಸಿರು ಕಂಗೊಳಿಸುವಂತಾಯಿತು. ಅಂತರ್ಜಲ ಮರು ಪೂರಣವು ಗುಡ್ಡದಲ್ಲಷ್ಟೇ ಅಲ್ಲದೆ ಸುತ್ತಮುತ್ತಲ ಗ್ರಾಮಗಳಲ್ಲಿಯೂ ಆಗಿ ಅಂತರ್ಜಲ ಮಟ್ಟ ಹೆಚ್ಚಿತು. ಅರಣ್ಯ ಇಲಾಖೆಯು 2 ಲಕ್ಷ ಸಸಿಗಳನ್ನು ನೆಟ್ಟಿತು. ಈ ಸುತ್ತಲಿನ ನೀರಿನ ಸಣ್ಣ ಝರಿಗಳು ವರ್ಷ ಪೂರ್ತ ಹರಿಯಲಾರಂಭಿಸಿವೆ. ಗುಡ್ಡದಲ್ಲಿ ಔಷಧೀಯ ಸಸ್ಯಗಳ ವನವನ್ನು ಸ್ಥಾಪಿಸಲಾಗಿದೆ. ಸಸ್ಯಗಳ ಬೀಜ ಸಂಗ್ರಹಣೆ ಮಾಡಿ. ಸಂಗ್ರಹಿತ ಬೀಜಗಳನ್ನು ಬಳಸಿ ಪ್ರತಿ ಮಳೆಗಾಲದಲ್ಲಿ ಸುತ್ತಲಿನ ಗ್ರಾಮಗಳ ಶಾಲಾ ವಿದ್ಯಾರ್ಥಿಗಳೊಡನೆ ಶ್ರೀಗಳು ಬೀಜ ಬಿತ್ತುವ ಕಾಯಕ ಮಾಡುತ್ತಾರೆ. 2003ರಿಂದ 2006ನೇ ಸಾಲಿನ ವರೆಗೆ ಜಲಾನಯನ ಇಲಾಖೆ, ಖಾಸಗಿ ಸಂಘಟನೆಗಳು, ಶ್ರೀಗಳೊಡನೆ ಸಹಕರಿಸಿ ಈ ಯೋಜನೆಗಳ ಅನುಷ್ಠಾನಗೊಂಡಿವೆ. ಅಂತಾಗಿ ಕೃಷಿ ಪಂಡಿತ ಪ್ರಶಸ್ತಿ, ಪರಿಸರ ಪ್ರಶಸ್ತಿಗಳು ಶ್ರೀಗಳಿಗೆ ಸಂದಿವೆ ಎಂದು ಶಿವಕುಮಾರ ಕುಷ್ಟಗಿ ಮಾಹಿತಿ ನೀಡಿದ್ದಾರೆ (24.4.10). ಒಂದು ಆಧ್ಯಾತ್ಮಿಕ; ಹಿತೈಷಿ ಮನಸ್ಸು ಆಡಳಿತಕ್ಕೆ ಸಾಮಾಜಿಕ ಸಾಮರಸ್ಯ ರೈತರ ಬೇಸಾಯಕ್ಕೆ, ರೈತರ ನೆಮ್ಮದಿಯ ಬದುಕಿಗೆ, ಪರಿಸರ ನಿರ್ವಹಣೆಗೆ ಹೇಗೆ ಫಲಕಾರಿ ಆಗಬಲ್ಲುದು ಎಂಬುದಕ್ಕೆ ಕಪ್ಪತ್ತ ಗುಡ್ಡದ ಶ್ರೀ ನಂದಿವೇರಿ ಮಠ ಹೀಗೆ ಸಾಕ್ಷಿಯಾಗಿ ಕಾಣಿಸಿಕೊಳ್ಳುತ್ತದೆ.

**ಸುವರ್ಣ ಕೃಷಿ ಹೊಂಡ ಯೋಜನೆ :** ಮಳೆ ಬಂದಾಗ ನೀರನ್ನು ರೈತರ ಹೊಲದಲ್ಲಿ ಹಿಡಿದಿಟ್ಟು, ಅಂತರ್ಜಲ ಹೆಚ್ಚಿಸುವುದು, ಬೇಕೆಂದಾಗ ಬೆಳೆಗಳಿಗೆ, ಜಾನುವಾರುಗಳಿಗೆ ನೀರುಣಿಸುವುದು ಜಲಾನಯನ ಅಭಿವೃದ್ಧಿ ಇಲಾಖೆಯ ಈ ಯೋಜನೆಯಲ್ಲಿದೆ. ಹುಣಸೆ, ಹಲಸು ಬೆಟ್ಟದನೆಲ್ಲಿ, ಲಿಂಬೆ, ಸೀಬೆ ಇತ್ಯಾದಿ ತೋಟಗಾರಿಕೆ ಕಸಿಗಿಡಗಳನ್ನು ನೆಟ್ಟು, ತೋಟಗಾರಿಕೆ ಉತ್ಪನ್ನಗಳನ್ನು ಪಡೆಯಬಹುದಾಗಿದೆ. ನೇರಳೆ ಟೀಕ್, ಸಿಲ್ವರ್ ಓಕ್ ಮುಂತಾದ ಅರಣ್ಯ ಸಸಿಗಳನ್ನು ನೆಟ್ಟು ಬೆಳಸಿ ನಂತರ ಮರಮಟ್ಟು ಮತ್ತು ಉರುವಲಿಗೆ ಅವನ್ನು ಪಡೆಯಬಹುದಾಗಿದೆ.

ಕೃಷಿ ಹೊಂಡದ ಸುತ್ತ ಬಿಡುವಿನಲ್ಲಿ ಸಿಗ್ನಲ್, ನೇಪಿಯರ್, ಗಿನಿ, ರೋಡ್ಸ್ ಇತ್ಯಾದಿ ವಿವಿಧ ಹುಲ್ಲಿನ ಮೀನುಸಾಗಾಣಿಕೆಗೂ ಬಳಸಿಕೊಳ್ಳಬಹುದಾಗಿದೆ. ಈ ಹೊಂಡವನ್ನು ಇನ್‌ಲೆಟ್-ಕಮ್-ಔಟಲೆಟ್ (ಒಳಾಗಮನ-ಹೊರಗಮನ) ಹಾಗೂ ಹೂಳು ಬೋನಿನೊಂದಿಗೆ ನಿರ್ಮಿಸಲಾಗುವುದು. ಇದಕ್ಕೆ ತಗಲುವ ಖರ್ಚಿನಲ್ಲಿ ಗರಿಷ್ಠ ಘಟಕದರ 9800ರೂಗಳ ನೆರವು ಸರ್ಕಾರದಿಂದ ಒದಗುತ್ತದೆ. ಹೆಚ್ಚಿನ ವೆಚ್ಚವು ಫಲಾನುಭವಿಗಳ ಹೊಣೆ ಆಗಿರುತ್ತದೆ. ಕರ್ನಾಟಕದ 27 ಜಿಲ್ಲೆಗಳ 176 ತಾಲೂಕುಗಳ 745 ಹೋಬಳಿಗಳ 5692ಗ್ರಾಮಪಂಚಾಯಿತಿಗಳು ಈ ಯೋಜನೆಯ ವ್ಯಾಪ್ತಿಗೆ ಬರುತ್ತವೆ. ಬೆಳೆ ಉತ್ಪಾದನೆಗೆ ಒತ್ತು ನೀಡಿ ರೈತರ ಆರ್ಥಿಕ ಸ್ಥಿತಿ ಸುಧಾರಿಸುವಲ್ಲಿ ಈ ಕಾರ್ಯಕ್ರಮವಿದೆ. ತಾಲೂಕಿನ ಒಣಭೂಮಿ, ಮಳೆ ಪ್ರಮಾಣಗಳನ್ನು ಗಮನಿಸಿ ನೆರವಿಗೆ ಅನುವಾಗಿದೆ. ಪರಿಶಿಷ್ಟ ಜಾತಿ, ಪಂಗಡದ ರೈತರು, ಅತಿ ಸಣ್ಣ ರೈತರು, ಸಣ್ಣ ರೈತರಿಂದ ಇದರ ಫಲಾನುಭವಿಗಳನ್ನು ಆಯ್ಕೆ ಮಾಡುವ ವ್ಯವಸ್ಥೆ ಇದೆ.

**ಬೀಜ ವೈವಿಧ್ಯ ರಕ್ಷಣೆ ಮತ್ತು ಬೀಜೋಪಚಾರ ಆಂದೋಲನ :** ನಮ್ಮಲ್ಲಿ ಭತ್ತದ ತಳಿಗಳ ವೈವಿಧ್ಯ ವಿಪುಲವಾಗಿತ್ತು. ಬಹುರಾಷ್ಟ್ರೀಯ ಕಂಪೆನಿಗಳು ಈ ತಳಿಗಳ ಮೇಲೆ ಕಣ್ಣು ಹಾಕಿ ಕೆಲ ಮಟ್ಟಿಗೆ ಪೇಟೆಂಟ್ ಪಡೆದುಕೊಂಡರೂ ಕೃಷಿ ವಿಶ್ವವಿದ್ಯಾಲಯ ಸಂಗ್ರಹಿಸಿದ ತಳಿಗಳ ಮೇಲೆ ಅವುಗಳ ಆಟ ನಡೆಯಲಿಲ್ಲ. ರಾಗಿ, ಜೋಳ, ನವಣೆ, ಹತ್ತಿ, ತರಕಾರಿ ಇತ್ಯಾದಿ ವಿವಿಧ ದೇಸಿ ತಳಿಗಳನ್ನು ನಮ್ಮ ರೈತರು ಸಂರಕ್ಷಿಸಿಕೊಂಡು ಬಂದರೂ, ಹೈಬ್ರಿಡ್ ಬೀಜಗಳಿಂದಾಗಿ, ಅವುಗಳಿಗೆ ಧಕ್ಕೆ ಬಂದಿದೆ. ಈ ಹಿನ್ನೆಲೆಯಲ್ಲಿ ಎಚ್ಚೆತ್ತುಕೊಂಡು, ಸರ್ಕಾರದ ಸಾವಯವ ಕೃಷಿ ಮೆಷಿನ್‌ನಿಂದ **ಜೀವನಿಧಿ ಬೀಜ ಬ್ಯಾಂಕ್** ಸ್ಥಾಪನೆ ನೆರವಾಗುತ್ತಿದೆ. ಜೊತೆಗೆ **ಸಹಜ ಸಮೃದ್ಧ, ಅನ್ನದಾನ ಮಿಲ್ಲೈನ್ ನೆಟ್‌ವರ್ಕ್ ಇಂಡಿಯಾ,** ಇತ್ಯಾದಿ ಸರ್ಕಾರೇತರ ಸಂಸ್ಥೆಗಳು ಬೆಳ್ತಂಗಡಿ, ಶಿವಳ್ಳಿ, ದಾವಣಗೆರೆ ಕಿರುಗಾವಲು ಮುಂತಾದ ಕಡೆಯ ರೈತ ಹಿತೈಷಿಗಳು ತಳಿ ರಕ್ಷಣೆ ಮಾಡುತ್ತಿರುವ ಬಗ್ಗೆ ನಾಗರಾಜ ಮತ್ತಿಗಾರ ತಿಳಿಸತ್ತಾರೆ. ಇದಲ್ಲದೆ 2010-2011ನೇ ಸಾಲಿನಲ್ಲಿ ರಾಜ್ಯದ 29.406 ಗ್ರಾಮಗಳಿಗೆ. ಮುಂದಿನ ಮುಂಗಾರು ಹಿಂಗಾರು ಹಂಗಾಮುಗಳ ಮುನ್ನಡೆ ಕೃಷಿ ಇಲಾಖೆಯ ಅಧಿಕಾರಿಗಳು ತೆರಳಿ ರೈತರಿಗೆ ಬೀಜ ಸಂರಕ್ಷಣೆ ನಿರ್ವಹಣೆಯ ಮುನ್ನೆಚ್ಚರಿಕೆಯ ಮಾಹಿತಿ ನೀಡುತ್ತಾರೆ. ಬಿತ್ತನೆ ಬೀಜಗಳಿಗೆ ಬಳಸಬೇಕಾದ ಕ್ರಿಮಿನಾಶಕಗಳ ಪ್ರಮಾಣ ಹಾಗೂ ಬಳಸುವ ಹಂತಗಳನ್ನು ವಿವರಿಸುತ್ತಾರೆ. ಇದು ಬೀಜೋಪಚಾರದ

ಆಂದೋಲನವೆನ್ನುವುದಕ್ಕೆ, ರೈತ ಮಹಿಳೆಯರು, ಸ್ತ್ರೀ ಶಕ್ತಿ ಸಂಘಗಳು, ರೈತ ಸಂಪರ್ಕ ಕೇಂದ್ರ, ಕರಪತ್ರಗಳು, ಕ್ಷೇತ್ರ ಪ್ರಾತ್ಯಕ್ಷಿಕೆ, ಛಾಯಾಚಿತ್ರಗಳ ಮೂಲಕ ರೈತರಿಗೆ ಬೀಜ ಸಂರಕ್ಷಣೆ ಕುರಿತು ಅರಿವು ಮೂಡಿಸಿ, ಅವರ ಕೊರಗು ನಿವಾರಿಸುವ ಕೇಂದ್ರ ಮತ್ತು ರಾಜ್ಯಸರ್ಕಾರ ಯೋಜನೆ ಇದಾಗಿದೆ. ಈ ಬೀಜೋಪಚಾರದ ಕ್ರಮಗಳು ಬಹಳ ಸರಳ ಮತ್ತು ಕಡಿಮೆ ಖರ್ಚಿನದು ಎಂಬುದು ಗಿರೀಶ್ ಮಾದೇನಹಳ್ಳಿ ಅವರ ಅನಿಸಿಕೆ ಆಗಿದೆ (26.4.10). ಏಪ್ರಿಲ್ 26, ಪ್ರತಿವರ್ಷ ಅಂತಾರಾಷ್ಟ್ರೀಯ ಬೀಜದಿನಾಚರಣೆಯನ್ನು ಆಚರಿಸುವ ಸಂದರ್ಭದಲ್ಲಿ ಈ ಬೀಜೋಪಚಾರ ಆಂದೋಲನ ಯೋಜನೆ ಒಂದು ಸ್ವಾಗತಾರ್ಹ ಸಾಂತ್ವನ ಪ್ರಯತ್ನ ವೆನಿಸುತ್ತದೆ. ಉಕ್ಕಡಗಾತ್ರಿ ಮತ್ತು ಉಜ್ಜನಿ ತೇರುಗಳ ಸಮಯದಲ್ಲಿ ನಮ್ಮ ರೈತರು ಭಕ್ತಿಯ ಆವರಣದಲ್ಲಿ ತೇರಿಗೆಸೆಯುವ ಬೀಜದಿಂದ ಬೀಜ ವಿನಿಮಯ ಹಾಗೂ ರೋಗನಿರೋಧಕ ಸಂರಂಕ್ಷಣಾ ದೃಷ್ಟಿಯು ಅಡಗಿರುವುದು, ಪ್ರಸಾದ ಬೀಜ ಪಡೆಯುವಲ್ಲಿ ಕಾಣಬರುವಂತಿದೆ. ಇಂದು ಸತ್ ಹಾಗೂ ಸತ್ವ ಪೂರ್ಣ ಸಾಂಪ್ರದಾಯಿಕ ರೈತ ಸಾಂತ್ವನ.

2002ರ ಜೈವಿಕ ವೈವಿಧ್ಯ ಕಾಯಿದೆ, ಸಸ್ಯ ಪ್ರಭೇದ ಮತ್ತು ರೈತರ ಹಕ್ಕುಗಳ ಕಾಯಿದೆ, ಬೀಜ ನಿಯಂತ್ರಣ ಕಾನೂನು, ಗುತ್ತಿಗೆ ಕೃಷಿ ಇತ್ಯಾದಿಗಳೆಲ್ಲವನ್ನು ತಿದ್ದಲೆಳಸಿರುವ ಜೈವಿಕ ತಂತ್ರಜ್ಞಾನ ನಿಯಂತ್ರಣದ ಹೆಸರಿನಲ್ಲಿ ಜಗತ್ತಿನ ಅತಿದೊಡ್ಡ ಜಿಎಂ ಬೆಳೆಯ ಉತ್ಪಾದಕ (ಬಿಟಿ ಹತ್ತಿ ಬಿಟಿ ಬದನೆ ಹಾವಳಿ ಗಮನಿಸಿ) ಅಮೆರಿಕೆಯ ಮಾರುಕಟ್ಟೆಯ ಆರ್ಭಟಕ್ಕೆ ಶರಣಾಗದೆ ಇರಲು ನಮ್ಮ ದೇಸಿ ಬೀಜ ಸಂರಕ್ಷಣೆ, ಬೀಜೋಪಚಾರ ಆಂದೋಲನ ನೆರವಾಗಬೇಕು.

***ಮಂಥನ :*** *ವಿವಾದಗಳು, ಸಮಸ್ಯೆಗಳು, ಜಲ, ನೆಲ, ಕಾಡು, ಬೆಲೆ, ಬೀಜ ಸಂಬಂಧಿಯಾಗಿ ರೈತರನ್ನು ಕಾಡುತ್ತಲೇ ಬಂದಿವೆ. ಕಾಡುತ್ತಲೂ ಇವೆ. ಈ ಸಮಸ್ಯೆಗಳ ವಿರುದ್ಧ ರೈತ ಏಕಾಂಗಿಯಾಗಿ, ಸಮೂಹವಾಗಿ ಹೋರಾಡುತ್ತ ಬಂದಿದ್ದಾನೆ. ಸಮಸ್ಯೆಗಳು ಹೀಗೆ ವಿವಿಧ ಮುಖಗಳಲ್ಲಿ ಕಾಣಿಸಿಕೊಂಡವೋ ಹಾಗೆಯೇ ರೈತರ ಹೋರಾಟಗಳೂ ಸಾಂದರ್ಭಿಕ ವೈವಿಧ್ಯತೆಯಿಂದ ಕೂಡಿ ಬಂದಿವೆ. ಪಾದಯಾತ್ರೆ, ರಸ್ತೆ ತಡೆ, ಉಪವಾಸ ಸತ್ಯಾಗ್ರಹ, ಜೈಲ್‌ಭರೋ ಘೇರಾವ್, ಉರುಳುಸೇವೆ, ಕುಟುಂಬ ಸಹಿತ ಸತ್ಯಾಗ್ರಹ ಬಿಡಾರ, ಇತ್ಯಾದಿ ಸಾಂಪ್ರದಾಯಿಕ ಪ್ರತಿಭಟನೆಗಳಲ್ಲದೆ, ಅಧಿಕಾರಿ ಕಛೇರಿ ಎದುರೇ, ಎಲ್ಲರೆದುರೇ, ವಿಷಪ್ರಾಶನ, ಆತ್ಮಹತ್ಯೆಯ ಮೂಲಕ ಪ್ರತಿಭಟನಾ ಪ್ರಾಣಾರ್ಪಣೆ ಮಾಡುತ್ತಿರುವುದು, ಅನ್ಯಾಯದೆದುರು ಆಕ್ರಂದನ ಆಕ್ರೋಶದ ಪ್ರತೀಕವೆನ್ನುವಂತಿದೆ. ಅಧಿಕಾರದ ಪ್ರಜ್ಞೆಗೆ*

ಸವಾಲಿನ ಬಲಿದಾನದ ಬಗೆ ಎನಿಸುತ್ತದೆ. ಇದಕ್ಕೆ ಆಡಳಿತ ಸ್ಪಂದಿಸಲೇ ಬೇಕಾಗಿ ಬಂದು ಪ್ಯಾಕೇಜ್ ಘೋಷಣೆಗಳಿಗೆ ಕಾರಣವಾಗಿದೆ. ಇಂಥ ಸನ್ನಿವೇಶಗಳಿಗೆ ಆಡಳಿತ, ಶಾಸನ ಸಭೆಗಳು ಕುರುಡಾಗಿವೆ ಎನ್ನುವಂತಿಲ್ಲ. ರೈತ ಸಾಂತ್ವನ ಪ್ರಕ್ರಿಯೆಗಳು ರೈತರ ಬೇಡಿಕೆಗಳಿಗೆ ಸ್ಪಂದನ, ಕೃಷಿಸಾಧನಾ ಪ್ರಶಸ್ತಿ, ಬೆಲೆ ನಿಯಂತ್ರಣ, ಖರೀದಿ ಕೇಂದ್ರ ಸಾವಯವ ಕೃಷಿ ಪದ್ಧತಿ, ಅರುಣೋದಯ, ಭೂ ಚೇತನ, ಯಶಸ್ವಿ, ಸಂಜೀವಿನಿ ಉದ್ಯೋಗ ಖಾತ್ರಿಯೋಜನೆ, ಸಾಮರಸ್ಯ ಗ್ರಾಮ ಯೋಜನೆ, ಸಕ್ಕರೆ ಗಡ್ಡೆ ಬೆಳೆಸುವಿಕೆ, ಇತ್ಯಾದಿಗಳ ಮೂಲಕ ತೋರಿಕೊಂಡಿವೆ. ಹೀಗೆಯೆ ಖಾಸಗಿ ಪ್ರಯತ್ನಗಳಾಗಿ ಕೃಷಿಋಷಿಪರಿವಾರ, ಅಮೃತಭೂಮಿಯ ಅಂತರಾಷ್ಟ್ರೀಯ ಬೀಜ ಜಾತ್ರೆ, ಕೃಷಿ ಜಯಂತಿ ಆಚರಣೆ, ರೈತ ತೀರ್ಪು, ಕೈತೋಟ ಬೀಜದ ಹಬ್ಬ, ಮಠೀಯ ಹಾಗೂ ಸಾಹಿತ್ಯಕ ಸಂಸ್ಥೆಗಳಿಂದ ರೈತ ವಿಚಾರ ಸಂಕಿರಣ ಇತ್ಯಾದಿಗಳು, ರೈತರ ಕುರಿತಾದ ಸಾಮಾಜಿಕ–ಸಾಂಸ್ಕೃತಿಕ ಸ್ಪಂದನಾ ವೈಖರಿಗಳ ಕುರುಹಾಗಿವೆ. ಇದಲ್ಲದೆ ಬಿತ್ತನೆ ಬೀಜ ವಿನಿಮಯ ಸಂಕೇತವಾಗಿ ತೇರಿಗೆ ಬೀಜ ಎಸೆದು ಬೀಜಪ್ರಸಾದ ಪಡೆಯುವುದು, ದೇವತ್ಯೆಲಾಭಿಷೇಕದ ದಿನ ತರಕಾರಿ ಬೀಜ ಸಮರ್ಪಿಸಿ ಬೀಜಪ್ರಸಾದ ಪಡೆದು ಬಿತ್ತುವುದು, ವಿಶೇಷತಃ ಶಿಂದೋಗಿಯ ರೈತರು ಕಾಲ್ನಡಿಗೆಯಲ್ಲಿ ಬಂದು ಉಜ್ಜೈನಿ ಮರುಳ ಸಿದ್ದೇಶ್ವರನಿಗೆಂದು ಗುರುಗಳಿಗೆ ಬಿತ್ತನೆ ಬೀಜವನ್ನು ಅರ್ಪಿಸುವರು. ಹಿರೇಹಳ್ಳದ ನೀರಿನಿಂದ ಮರುಳುಸಿದ್ದೇಶ್ವರನಿಗೆ ಅಭಿಷೇಕ ಮಾಡಿ ಮಠದಲ್ಲಿ ಗಣಪರ್ವ ಮಾಡುವರು. ಆಯಗಾರರು, ಭಕ್ತರು ಬೀಜವನ್ನು ಪೂಜಿಸಿ ಕಂಬಳಿಯಲ್ಲಿ ಕಟ್ಟಿ ಬಿತ್ತನೆ ಬೀಜವನ್ನು ಗುರುಗಳಿಂದ ಆಶೀರ್ವದಿಸಿ ಹಂಚುವ ಬಗ್ಗೆ ಕಡಲಬಾಳು ಗ್ರಾಮದ ಶ್ರೀ ಗುರುಸಿದ್ದಯ್ಯ ಹಿರೇಮಠ ಅವರು ತಿಳಿಸಿದ್ದಾರೆ. ಇದು ನಮ್ಮಲ್ಲಿಯ ಧರ್ಮೋ–ಸಾಂಸ್ಕೃತಿಕ ಚರ್ಯೆಯಲ್ಲಿ ಬೀಜ ವಿನಿಮಯದಂಥ ವೈಜ್ಞಾನಿಕ ಸಂಗತಿಯು ಅಂತರ್ಗತವಾಗಿರುವುದು ವಿಶಿಷ್ಟವೆನಿಸುತ್ತದೆ. ಹಾಗೂ ಇವೆಲ್ಲ ಶ್ರದ್ಧೆಯ ಪಾತಳಿಯಲ್ಲಿ ವೈಜ್ಞಾನಿಕ ಸ್ಪರ್ಶ ಪಡೆದಿರುವ ನೆಲೆಯಾಗಿದೆ. ಮಾನಸ ಸಾಂತ್ವನಕ್ಕೆ ಭಕ್ತಿಯ ದೇಣಿಗೆ ಆಗಿದೆ. ಸುದ್ದಿ ಮಾಧ್ಯಮಗಳೂ ರೈತರು ಹಾಗೂ ಕೃಷಿ ಸಂಬಂಧಿತ ಮಾಹಿತಿಗೆ ವಿಭಾಗೀಯ ಪುಟಗಳನ್ನು ವಾರದ ಮೀಸಲಾಗಿ ಇಟ್ಟಿರುವುದು, ಉಪಯುಕ್ತ ಲೇಖನಗಳ ಪ್ರಕಟಣೆ ಇವೆಲ್ಲ ರೈತ ವಲಯಕ್ಕೆ ಒದಗಿರುವ ಮಹತ್ವದ ಸಾಂತ್ವನಗಳು ಕುರುಹಾಗಿದೆ.

## ಅಧ್ಯಾಯ 23

# ರೈತ ಚಳವಳಿಯ ಒಟ್ಟಾರೆಯ ನೋಟ

ಭಾರತೀಯ ರೈತನ ಕೃಷಿಕ ಬದುಕು ಸಹಸ್ರಾರು ವರುಷಗಳ ದಟ್ಟ ಪರಂಪರೆಯನ್ನು ಹೊಂದಿದೆ. ಯಾವ ಜನಸಂಖ್ಯಾಸ್ಫೋಟ ಸಮಸ್ಯೆಯಾಗಲಿ ಕಾಡದೆ ಕೃಷಿಯ ವಿಧಾನಗಳ ಮೇಲೆ ವಿದೇಶಿ ಪ್ರಭಾವಗಳಿಲ್ಲದೆಯೆ, ಅವನ ಬದುಕು ನೈಸರ್ಗಿಕವಾಗಿ ನಡೆದುಬಂತು. ಅಲ್ಲದೆ ಅಶೋಕನ ಕಾಲದ ಮುನ್ನವೋ, ಅಥವಾ ಅವನ ಕಾಲಾನಂತರವೋ ಗ್ರೀಸ್ ರೋಮ್ ಪ್ರದೇಶಗಳಿಗೆ ಭಾರತದ ಪಶ್ಚಿಮ ಭಾಗದ ಬಂದರುಗಳಿಂದ, ದಂತ, ಪಿಂಗಾಣಿ ಎಲ್ಲ ಬಗೆಯ ಹತ್ತಿ ಒಟ್ಟೆಗಳು, ರೇಷ್ಮೆ ಹಾಗೂ ರೇಷ್ಮೆ ನೂಲು, ವಜ್ರ, ರತ್ನ, ಕಬ್ಬಿಣ ಸ್ಟೀಲ್, ಕರಿಮೆಣಸು, ಮತ್ತು ಮುಂದೆ (ಮಸ್ಲೀನ್) ಹಾಗೆಯೇ ಇತರೆ ವಸ್ತುಗಳ ನಿರಂತರವಾಗಿ ರಫ್ತಾಗುತ್ತಿದ್ದಂತೆ ಇಟಲಿಯಿಂದ ದ್ರಾಕ್ಷಾರಸ, ಓತ್ತಾಳೆ, ತಾಮ್ರ, ತಗಡು, ಬಿಳಿಗಾಜು, ಬೆಳ್ಳಿ ಮುಂತಾದವು ರಷ್ಯಾ ಪ್ರದೇಶದಿಂದ ಸಮುದ್ರಮಾರ್ಗಗಳಿಂದ ಭಾರತಕ್ಕೆ ಆಮದಾಗುತ್ತಿತ್ತು. ಇಂತೆಲ್ಲ ಇದ್ದ ವ್ಯವಸ್ಥೆಯಲ್ಲಿ ಯಾವುದೇ ಬಹುರಾಷ್ಟ್ರೀಯ ಆಕ್ರಮಣಶೀಲತ್ತೆಯ-ಭಯವಿಲ್ಲದೆ ಸಹಜ ರೈತ – ಕೃಷಿ, ವಾಣಿಜ್ಯ ವ್ಯವಹಾರಗಳು ನಡೆಯುತ್ತಿದ್ದುವು. ಅಲ್ಲದೆ ಅಶೋಕ–ಖಾರವೇಲರು ಕಾಲುವೆ ಕೃಷಿಗಳತ್ತ ಗಮನಹಾಯಿಸುವ ಸಹಸ್ರಾರು ವರುಷಗಳ ಮುನ್ನವೇ ಋಗ್ವೇದ ಕಾಲೀನ ಕೃಷಿ ಬದುಕು, ಕೃಷಿ ವ್ಯವಸ್ಥೆ ವ್ಯವಸ್ಥಾಪೂರ್ಣವಾಗಿದ್ದುದು ಕಾಣಬರುತ್ತದೆ. ಋಗ್ವೇದೀಯ ಸಮಾಜ ಕೃಷಿ ಹುಟ್ಟುವಳಿಯನ್ನು ತನ್ನ ಆರ್ಥಿಕ ವ್ಯವಹಾರದ ಪ್ರಧಾನ ಸಂಪನ್ಮೂಲವಾಗಿ ಹೊಂದಿತ್ತು: ನೀರಾವರಿ ವ್ಯವಸಾಯವೂ ರೂಢಿಯಲ್ಲಿತ್ತು. ಕಾಲುವೆಗಳ ಮೂಲಕ ಭೂಮಿಗೆ ನೀರು ಹಾಯಿಸುವ ವಿಧಾನವಿತ್ತು ಎಂದೆಲ್ಲ ಉಲ್ಲೇಖವೂ ಇದೆ. **ಯಥಾ ಹ್ರದಂ ಕುಲ್ಯಾ ಇವಾ ಶತ** (3–45–3) ಎಂದು ಋಗ್ವೇದದಲ್ಲಿದೆ. ಇದು ಅಂದಿನ ನೀರಾವರಿ ಕೃಷಿಯ ಸ್ಪಷ್ಟ ಕುರುಹಾಗಿದೆ. **ಕೃಷಿ ಮಿತಿ ಕೃಷಸ್ವ** ಎಂಬ ಮಾತಿನಲ್ಲಿ ಕೃಷಿಕರ್ಮದ ಪ್ರಾಮುಖ್ಯತೆಯನ್ನು ತಿಳಿಸಲಾಗಿದೆ. ಕೃಷಿಕಾರ್ಯ ಕುರಿತ ವಿವರವು ಮುಂದಿನ ಶ್ಲೋಕದಲ್ಲಿಯಂತೆ ವರ್ಣಿತವಾಗಿದೆ;

**ಯುನಕ್ತಾ ಸೀರಾ ವಿಯುಗಾತನುಧ್ವಂ**

**ಕೃತೇಯೋ ನೌ ರಪತೇ ಹ ಬೀಜಂ**

**ಗಿರಾಚ ಶ್ರುಷ್ಟಿಃ ಸಭರಾ ಅಸನ್ನೋ**

**ನೇದೀಯ ಇತ್ಸೃಣ್ಯಃ ಪಕ್ವಮೇಯಾತ್** [10–101–3]

–ನೇಗಿಲುಗಳನ್ನು ಹೂಡಿರಿ;ನೊಗಗಳನ್ನು ವಿಸ್ತಾರಗೊಳಿಸಿರಿ; ಹರಗಿದ ಮಡಿಸಾಲುಗಳಲ್ಲಿ ಕಾಳುಗಳ ಬಿತ್ತನೆ ಮಾಡಿರಿ; ನಾವು ಮಾಡಿದ ಸ್ತುತಿಗಳಿಂದ (ದೇವತಾಸ್ತುತಿ) ಉತ್ತಮ ಬೆಳೆ ಬರುತ್ತದೆ; ಕೊಯ್ಲು ಮಾಡುವವರು ಕುಡುಗೋಲುಗಳನ್ನು ತೆಗೆದುಕೊಂಡು ಮಾಗಿದ ಪೈರಿನ ಕಡೆ ಬರುವಂತಾಗಲಿ [ಶೇಷನವರತ್ನ: **ಋಗ್ವೇದ (ಒಂದು ಅಧ್ಯಯನ), 1977, ಪು. 40--41**].

ರುದ್ರನೇ ಕೃಷಿ ಕೃತ್ಯವನ್ನು ಮೊದಲು ಹಿಮಗಿರಿಯಲ್ಲಿ ಪ್ರಾರಂಭಿಸಿ ನೆಲ್ಲನ್ನು ಸಮೃದ್ಧವಾಗಿ ಬೆಳೆದು ಕೇದಾರ–ಶಾಲಿವನ ಎಂದು ಖ್ಯಾತಿಗೆ ಬರುವಂತೆ ಮಾಡಿದ ಸಂಕರ್ಷಣಮೂರ್ತಿ ಎನಿಸಿದ. ಯಜುರ್ವೇದೀಯ ಶ್ರೀ ರುದ್ರಸೂಕ್ತದಲ್ಲಿ, ಶ್ರೀ **ರುದ್ರನನ್ನು ವೃಷಭನ ಸಂಕರ್ಷಣಮೂರ್ತಿ ಸ್ವರೂಪ** ಎಂದು ಕೃಷಿ ಕಾರ್ಯನಿಮಿತ್ತವಾಗಿಯೇ ಅವನನ್ನು ಸ್ತುತಿಸಿದೆ, ಎಂದು ಡಾ//ಶ್ರೀ ಜಚನಿ ಅವರು ಪ್ರತಿಪಾದಿಸಿದ್ದಾರೆ (**ಮಾಮಿಡಿ ರುದ್ರಾಂಕ,** 1985. ಪು. 49). ಈ ಹಿನ್ನೆಲೆಯಲ್ಲಿ ವ್ಯವಸಾಯದ ಕ್ರಿಯಾಮೂಲವಾದ ಗೋಸಂಪತ್ತು **ಗೋತ್ರದ** ನೆಲೆಯಿಂದ ಅಪಹರಣವಾದಾಗ, ಅದನ್ನೆದುರಿಸಿ ಗೋವುಗಳನ್ನು ಬಿಡಿಸಿಕೊಂಡು ಬರುವ ಹೋರಾಟವೂ ರೈತ ಸಂಬಂಧೀ ಹೋರಾಟವಾಗಿಯೇ ಸೂಚನೆಗೊಳ್ಳುವಂತಿದೆ.

ಕೃಷಿ ವಿಸ್ತರಣೆ, ವೈಯಕ್ತಿಕ ಭೂಹಿಡುವಳಿಯ ಉಗಮ, ಉತ್ಪಾದನಾ ಘಟಕವಾಗಿ ಕುಟುಂಬದ ಭೂಮಿಯನ್ನು ನಿಯಂತ್ರಿಸುವ **ಗಾಹಪತಿ** ಎಂಬ ಪ್ರಬಲವರ್ಗ– ಇವೆಲ್ಲ ಕ್ರಿ.ಪೂ. 6ನೇ ಶತಮಾನದಲ್ಲಿ ಸಾಮಾಜಿಕ ಆರ್ಥಿಕ ವ್ಯವಸ್ಥೆಯ ಘಟಕಗಳಾಗಿದ್ದುದು ಬೌದ್ಧ ಸಾಹಿತ್ಯ ಕೃತಿಗಳಿಂದ ತಿಳಿದು ಬರುತ್ತದೆ. ಗಾಹಪತಿಗಳು, ಹೆಚ್ಚಾದ ಉತ್ಪನ್ನವನ್ನು ಮಾರಿ ಬಂದ ಹಣವನ್ನು ವ್ಯಾಪಾರದ ವಹಿವಾಟಿಗಿಡುತ್ತಿದ್ದರು. ರಾಜನ ಸಾರ್ವಭೌಮತ್ವಕ್ಕೆ ಸಾಮಾಜಿಕ ದೇಣಿಗೆಗಾರರಂತೆ ಇವರಿದ್ದರೆಂದು ಕಾಣುತ್ತದೆ. **ಗಣ–ಸಂಘಗಳ** ಹೊರಗಿನ ಕೃಷಿ ನಿರ್ವಹಣೆ ಮತ್ತು ಆರ್ಥಿಕ ಚಾಲನೆಯಲ್ಲಿ ಈ ಗಾಹಪತಿಗಳು ಪ್ರಧಾನ ಪಾತ್ರ ಹೊಂದಿದ್ದರು. ಇವರ ಒಡೆತನದಲ್ಲಿ ಬಹುದೊಡ್ಡ ಭೂಹಿಡುವಳಿಗಳಿದ್ದು ಗಣಸಂಘಗಳಿಂದ ಇವರ ಕೃಷಿ ವ್ಯವಸ್ಥೆ ಬೇರೆ ಇತ್ತು.

ಬ್ರಹ್ಮಾದಾಯ ಜಮೀನುಗಳು ಬ್ರಾಹ್ಮಣ ಹಿಡುವಳಿದಾರರ ಕೈಯಲ್ಲಿದ್ದು ಅವು ಸಾಮಾನ್ಯವಾಗಿ ಅತಿ ದೊಡ್ಡ ಭೂಹಿಡುವಳಿಗಳಾಗಿದ್ದುವು. ಕ್ಷತ್ರಿಯ ಕುಲಗಳ ವಶದಲ್ಲಿಯೂ ಭೂಮಿ ಹೀಗೆಯೇ ಇರುತ್ತಿತ್ತು. ಗಾಹಪತಿಯ ಮೂಲಕ ಭೂಮಿಯ

ಮೇಲೆ ಖಾಸಗಿ ಹಿಡಿತವಿತ್ತು. ಅದೇ **ಗಣ–ಸಂಘದಲ್ಲಿ** ಭೂಮಿಯ ನಿಯಂತ್ರಣ ಸಮುದಾಯದ್ದಾಗಿತ್ತು. ಕ್ಷತ್ರಿಯರು ಕುಲಗೌರವದ ಹೆಸರಿನಲ್ಲಿ ಕೃಷಿಗೆ ದೈಹಿಕ ಶ್ರಮವನ್ನು ಮೀಸಲು ಮಾಡಿರಲಿಲ್ಲ. **ದಾಸ, ಕಮ್ಮಾರ, ಪೊರಿಸ** ಎಂಬ ಜನರ ಪಾಲಿಗೆ ಅದು ಇತ್ತು. ಆಗಲೇ ತಿನ್ನಲು, ಹೊದೆಯಲು ಇಲ್ಲದ ದಟ್ಟದರಿದ್ರರಾಗಿದ್ದ **'ದಲಿದ್ದ'** ಜನರೂ ಈ ಮೇಲಿನ ವೈಭವೋಪೇತ ಜನರ ನಡುವೆ ಕಂಡು ಬಂದರು. ಗಣ–ಸಂಘಗಳು ಅವಸಾನಗೊಂಡು ಸಾಮ್ರಾಜ್ಯಗಳು ಪ್ರಬಲಗೊಂಡ ಸಂದರ್ಭವಾಗಿ ಆರ್ಥಿಕ ಶ್ರೇಣೀಕರಣಗಳು ಸಾಮಾಜಿಕ ಕ್ಷೇತ್ರದ ಮೇಲೆ ಪರಿಣಾಮ ಬೀರಿದ ಬಗ್ಗೆ ಬೌದ್ಧ ಕೃತಿಗಳು ಸೂಚಿಸಿವೆ. ಅಂದರೆ ಬೌದ್ಧಕಾಲೀನ ಸಮಾಜದಲ್ಲಿ ಬದಲಾವಣೆಯ ಪ್ರಕ್ರಿಯೆ ಚಾಲ್ತಿಗೊಂಡು ಕೌಟುಂಬಿಕ ಗೌರವಗಳನ್ನು ತ್ಯಜಿಸಿದ ಪರಿವ್ರಾಜಕ / ಶ್ರಮಣರು ಜಂಗಮರಾಗಿ ಚಲಿಸುತ್ತಿದ್ದರು; ತಾತ್ವಿಕ ಚರ್ಚೆಯಲ್ಲಿ ನಿರತರಾಗಿ ನಿರಂತರ ಚಳುವಳಿಯನ್ನು ಸಂಘಟಿಸಿದರು. ಸ್ಥಾಪಿತ ಮೇಲುಕುಲಪರಂಪರೆಗೆ, ಹಿಂಸೆಗೆ, ಊಳಿಗಮಾನ್ಯ ಯಜಮಾನಿಕೆಗೆ ವಿರೋಧವಾಗಿ ನಿಂತರು (**ಪ್ರಾಚೀನಭಾರತ**, 1999, ಪು.42–45). ಈ ಹಿನ್ನೆಲೆಯನ್ನು ಗಮನಿಸಿದರೆ ಆ ಕಾಲದ ಗಣಸಂಘದಲ್ಲಿ ರೈತಸಂಘಟನೆಯೂ ಒಂದು ಶಾಖೆಯಾಗಿದ್ದಂತೆ ಕಾಣುತ್ತದೆ. ತಾತ್ವಿಕ ಚಳುವಳಿಯು ಗಣ–ಸಂಘದ ಅಳಿವಿನ ನಂತರ ಹುಟ್ಟಿಕೊಂಡಾಗ, ಅದರ ಜೊತೆಗೆ ಸೇರಿ ಅದುಮಿಟ್ಟುಕೊಂಡಿದ್ದ ಸಿಟ್ಟು ಆವೇಶ, ಕ್ರೋಧಗಳನ್ನು ದೈಹಿಕ ಶ್ರಮದ ಕೃಷಿಕ ವರ್ಗದ ಜನತೆ, ವ್ಯಕ್ತಮಾಡಿದರೆಂದು ತೋರುತ್ತದೆ. ಅದನ್ನು ನೇರವಾಗಿ ರೈತ ಚಳುವಳಿ ಎಂದು ಹೆಸರಿಸಲಾಗದಿದ್ದರೂ, ಆ ಕಾಲಕ್ಕೆ ಪರೋಕ್ಷವಾಗಿ ಕೃಷಿಕ ವರ್ಗದ ಜನತೆ, ತಮ್ಮ ಪ್ರತಿಭಟನೆಯನ್ನು ಹಾಗೆ ವ್ಯಕ್ತ ಮಾಡಿದರೆಂದು ತೋರುತ್ತದೆ; ಹಾಗೂ ಕೃಷಿಕ ಚಳುವಳಿಯ ಬೆಂಬಲ ರೂಪವಾಗಿ ಶ್ರಮಣರ ಚಳುವಳಿಗೆ ಆ ವರ್ಗ ಜೊತೆಯಾದರೆಂದು ತೋರುತ್ತದೆ.

ಮೌರ್ಯ ಅಶೋಕನ ಕಾಲದಲ್ಲಿ ಒಂದೇ ಬಗೆಯ ಭೂ ಒಡೆತನವಿರಲಿಲ್ಲ. **ಗಣಸಂಘ** ಎಂಬ ಸಮುದಾಯವ್ಯವಸ್ಥೆಯ ಮೂಲಕ ಭೂ ಒಡೆತನ ಮುಂದುವರೆಯಿತು. **ಸಿತಭೂಮಿ** ಎಂಬ ವಿಭಾಗದಲ್ಲಿ ಕೃಷಿ ಮೇಲ್ವಿಚಾರಕನ ಪ್ರತ್ಯಕ್ಷ ನಿರ್ವಹಣೆಯಲ್ಲಿ ಕೃಷಿ ಕೂಲಿಗಳ ಮೂಲಕ ಸಾಗುವಳಿ ನಡೆಯುತ್ತಿತ್ತು. ಗುತ್ತಿಗೆ ವ್ಯವಸ್ಥೆ ಇತ್ತು. ಅವರು ಉತ್ಪನ್ನದ ಒಂದು ಭಾಗವನ್ನು ರಾಜನಿಗೆ ಸಲ್ಲಿಸುತ್ತಿದ್ದರು. ಗಂಗಾ ಬಯಲಿನಲ್ಲಿ **ಬಲಿ, ಭಾಗ, ಶುಲ್ಕ, ಕರ** ಇತ್ಯಾದಿ ಕೃಷಿ ತೆರಿಗೆಯ ರೂಪಗಳಿದ್ದುವು. ಮಣ್ಣಿನ ಫಲವತ್ತತೆನಗನುಗಣವಾಗಿ ವಿವಿಧ ಬಗೆಯ ತೆರಿಗೆಗಳು ಬಹುಶಃ ಚಾಲ್ತಿಯಲ್ಲಿದ್ದುವು.

ಶ್ರೀಹರ್ಷನ ಕಾಲಕ್ಕೂ ಮೊದಲು ಭೂದಾನಗಳ ಕಾರಣ ಭೂ ಒಡೆಯರ ಪಾಳೇಗಾರಿಕೆ ಹೆಚ್ಚತ್ತೆನ್ನಬೇಕು. ಇತ್ಸಿಂಗ್ ಹೇಳುವಂತೆ (7ನೇ ಶತಮಾನ) ಭಾರತದ ಚೈತ್ಯಾಲಯಗಳು ಭೂದಾನಗಳನ್ನು ಹೊಂದಿದ್ದು ಸೇವಕರಿಂದ ಸಾಗುವಳಿ ಮಾಡಿಸುತ್ತಿದ್ದುವು. ಎತ್ತುಗಳನ್ನು ಕೃಷಿಗೆ ಅವರೇ ಒದಗಿಸುತ್ತಿದ್ದರೆಂದರೆ ಉಳುಮೆದಾರರು ಗೇಣಿದಾರರಾಗಿದ್ದರೆನಿಸುತ್ತದೆ. ಭೂಮಾಲೀಕರಿಗೆ ಉತ್ಪನ್ನದ ಭಾಗ ನೀಡುತ್ತಿದ್ದರು. ಕೃಷಿಯನ್ನು ಸೇವಕರು (ಶಾಶ್ವತ ಮನೆಮಕ್ಕಳು), ಕೃಷಿ ಕೂಲಿಗಳು, ತಾತ್ಕಾಲಿಕ ಗೇಣಿದಾರರಿಂದ ಸಾಗುವಳಿ ನಡೆಸಲಾಗುತ್ತಿತ್ತು.

ಕನ್ನಡದ ಮೊಟ್ಟಮೊದಲ ಶಾಸನವಾದ ಕ್ರಿ.ಶ. 435–50ರ ಕದಂಬರ ಕಾಲದ ಹಾಸನ ಜಿಲ್ಲೆಯ ಹಲ್ಮಿಡಿ ಶಾಸನದಲ್ಲಿ ಗದ್ದೆಯ ಒಡ್ಡು, ಪತ್ತೊನ್ದಿ (ಜಮೀನು ಆದಾಯದ ಹತ್ತನೇ ಒಂದು ಭಾಗದಷ್ಟು ಕರ ಅಂದರೆ ದಸವಂದ ಸುಂಕ)ಯ ಪ್ರಸ್ತಾಪವಿದೆ. ಆ ಸುಂಕವನ್ನು ರಾಜನಿಗೆ ಕೊಡುವಂಥದ್ದಕ್ಕೆ ಮನ್ನಾ ಮಾಡಿದ ಬಗ್ಗೆ ಹೇಳಿದೆ. ಇದು ಕೃಷಿಕರ ಬದುಕಿನಲ್ಲಿ ಚಾಲ್ತಿಗಿದ್ದ ಸುಂಕ ಪದ್ಧತಿ ಹಾಗು ಸುಂಕ ಮನ್ನಾ ಸೌಲಭ್ಯದ ಚಿತ್ರವು 5ನೇ ಶತಮಾನದ ಶಾಸನೋಕ್ತ ವಿಷಯವಾಗಿ ಕಾಣುತ್ತದೆ; ಬಳ್ಳಿಗಾವೆಯ ಕ್ರಿ.ಶ.ಸು.690 ರ ಬಾದಾಮಿ ಚಾಲುಕ್ಯ ವಿನಯಾದಿತ್ಯನ ಸಾಮಂತ ನಾಗರಖಂಡದ ಸೇಂದ್ರಕ ಪೊಗಿಲ್ಲನ ಶಾಸನದಲ್ಲಿ (ಎ.ಕ. ಸಂ 7, ಶಿವಮೊಗ್ಗ ಜಿಲ್ಲೆ, ಶಿಕಾರಿಪುರ 154) ಶಾಪಾಶಯ ಹೇಳುವಲ್ಲಿ 'ಇದಾನ್ಕೊಳೆ ಈರೆಟ್ಟಿತೆಱುಳಂ ಒಕ್ಕಲ್ತನಂ 1 ಕಯ್ವನಾ ವಿತ್ತಿದಲ್ಲಿ ವೆಳೆಯಾದೆ ಕೆಡುಗೆ' ಎಂದಿದೆ. **ಅಱುಲುಗದ್ದೆ** ಎಂದರೆ ಕೆಸರುಗದ್ದೆ. ಈ ಗದ್ದೆ ಮಾಡುವವನು ದಾನ ಕೆಡಿಸಿದರೆ, ಅವನು ಬಿತ್ತುವ ಬೆಳೆ ಕೆಡುತ್ತದೆ ಎಂಬರ್ಥವಿದೆ. ಇದರಿಂದ 7ನೇ ಶತಮಾನದಲ್ಲಿ ಕೆಸರುಗದ್ದೆ ಬೇಸಾಯ ಮಾಡುತ್ತಿದ್ದ ಶಾಸನೋಕ್ತ ದಾಖಲೆ ಕಾಣುವಂತಾಗುತ್ತದೆ.

ಹರ್ಷನ ಕಾಲದಲ್ಲಿ (6–7ನೇ ಶತಮಾನ) ಸಾಗುವಳಿ ಭೂಮಿಯ ಬಹುಭಾಗ ಸ್ವತಂತ್ರ ರೈತರ ವಶಕ್ಕಿತ್ತು. ರಾಜ್ಯಕ್ಕೆ ತೆರಿಗೆಯ ಜೊತೆಗೆ, ವಿಭಾಗಾಧಿಕಾರಿ **ಉಪನಿರೀಕನಿಗೆ** ಕಾಣಿಕೆ, ರಾಜನಸೇನೆ ಮತ್ತು ಅಧಿಕಾರಿಗಳು ಹಳ್ಳಿಗೆ ಬಂದಾಗ ಕಾಣಿಕೆ ನೀಡಿ, ಬಲವಂತವಾಗಿ ಸೈನ್ಯಕ್ಕೆ ಸೇವೆ ಸಲ್ಲಿಸಬೇಕಿತ್ತು. ಇದನ್ನೇ **ಸರ್ವವಿಷ್ಟಿ** ಎನ್ನುತ್ತಿದ್ದರು. ಹೀಗಾಗಿ ಸ್ವತಂತ್ರ ರೈತರ ಬದುಕಿನ ದುಮ್ಮಾನಗಳು ಬೆಳೆದುವು. ಊಳಿಗಮಾನ್ಯ ಉತ್ಪಾದನಾ ಪದ್ಧತಿ ಬೆಳೆದು ಸಾಮಾಜಿಕ ಸ್ಥಿತ್ಯಂತರವಾಯಿತು. ಭೂವಿತರಣೆಯಿಂದ ಸೈನ್ಯಶಕ್ತಿ ಹೆಚ್ಚಲಾಗಿ ಶಕ್ತಿಶಾಲಿ ಸ್ತರಗಳು ಹುಟ್ಟಿದವು. 6ನೇ ಶತಮಾನದಲ್ಲಿ ಇವು ಧಾರ್ಮಿಕ ಸ್ತರಗಳೊಡನೆ ಕೂಡಿಕೊಂಡುಬಿಟ್ಟವು. ಹೀಗಾಗಿ ನೊಂದ ರೈತ ವರ್ಗ

ತನ್ನ ಒಳದುಮ್ಮಾನಗಳನ್ನು ವ್ಯಕ್ತಗೊಳಿಸುವ ಮಾಧ್ಯಮವಾದ ಪ್ರತಿಭಟನೆಗಳನ್ನು ಹೋರಾಟದ ಕಸುವನ್ನು ಪರಂಪರೆಯು ಸಾಂಸ್ಕೃತಿಕ ಒತ್ತಡದಲ್ಲಿ ಕಳೆದುಕೊಂಡುಬಿಟ್ಟಿತು.

ಹೆಣ್ಣು ಮೊತ್ತ ಮೊದಲಿಗೆ ಕೃಷಿಯ ಆವಿಷ್ಕಾರ ಮಾಡಿದ ಮೇಲೆ ಗಂಡು ಅದನ್ನು ತನ್ನ ಕೈವಶ ಮಾಡಿಕೊಳ್ಳುವ ಸಂದರ್ಭದಲ್ಲಿ ಆಗಿರಬಹುದಾದ ಮೌನ ಪ್ರತಿಭಟನೆಯು: ಸೂಕ್ಷ್ಮನೆಲೆಯಿಂದ, ಮನವಿ, ನಿಯೋಗ, ತೀವ್ರ ಪ್ರತಿಭಟನೆ, ಪ್ರದರ್ಶನ, ಚಳುವಳಿ, ಸಮಾವೇಶದ ವರೆಗಿನ ಆಧುನಿಕ ಚಳುವಳಿಯ ಬಗೆಯವರೆಗೆ, ರೈತನ ಬದುಕು, ಸಮಸ್ಯೆಗಳ ಪರಿಹಾರದ ಹಾದಿಯ ಸಹಗಾಮಿಯಾಗಿಯೇ ಬಂದಿದೆ.

ಐತಿಹಾಸಿಕವಾಗಿ ಕರ್ನಾಟಕದಲ್ಲಿ ಮೊದಲ ರೈತ ಪ್ರತಿಭಟನೆಯಾಗಿ ಕಂಡು ಬರುವುದು 8ನೇ ಶತಮಾನದ ಮಾವಳ್ಳಿ ಶಾಸನದಲ್ಲಿ ಉಕ್ತವಾಗಿರುವ ಸಂದರ್ಭವಾಗಿದೆ. ಅನಂತರ 12ನೆಯ ಶತಮಾನದ ಒಕ್ಕಲಿಗ ಮುದ್ದಣ್ಣನ ಕರ ನಿರಾಕರಣೆ ಹಾಗು ರೈತ ಸಂಘಟನೆ, ಕ್ರಿ.ಶ. 1220ರ ಹೊಯ್ಸಳ ವೀರನರಸಿಂಹನ ಕಾಲದ ರೈತರ ದೂರುದುಮ್ಮಾನ, ದೊರೆಯು ರೈತರ ಬಳಿಗೆ ಬಂದು ಕೊಟ್ಟ ಪರಿಹಾರ, ಇವೆಲ್ಲ ಪ್ರಾಚೀನ ಉದಾಹರಣೆಗಳಾಗಿ ಗಮನ ಸೆಳೆದರೂ, ಅವುಗಳ ಪೂರ್ಣ ಸ್ವರೂಪ ತಿಳಿದುಬರುವುದಿಲ್ಲ. **ಈಗ ಧ್ಯೇಯ, ಶ್ರಮ, ಪ್ರಾಮಾಣಿಕತೆ, ನಿಷ್ಠೆಯೊಡನೆ ನಿರಂತರ ಅನುಸರಣಯೆ; ಚಳುವಳಿಯ ರೂಪ ಎನ್ನುವುದಿದೆ.**

ಕರ್ನಾಟಕದ ರೈತಹೋರಾಟಗಳಿಗೆ ಹಿನ್ನೆಲೆಯಾಗಿ ಭಾರತೀಯ ರೈತ ಹೋರಾಟಗಳನ್ನು ಗಮನಿಸಿದಾಗ, ಪ್ರೇರಣಶಕ್ತಿಯಾಗಿ ಅವು ಒದಗಿದರೂ ನಮ್ಮಲ್ಲಿಯ ಕ್ರಮಬದ್ಧತೆ ಹೆಚ್ಚು ಗಮನ ಸೆಳೆಯುತ್ತದೆ. ಹೆಚ್ಚಾಗಿ ಅಧಿಕಾರಿ ವರ್ಗದ, ಆಡಳಿತದ, ಸರ್ಕಾರದ ಪ್ರಜ್ಞೆಯ ಸ್ತರಗಳನ್ನು ಕೆದಕಿರುವ ಬಗೆ ಎಲ್ಲಿ ಕಾಣುತ್ತದೆ. ವರ್ಗಪ್ರಜ್ಞೆ, ವರ್ಣ ಪ್ರಜ್ಞೆ, ಜಾತಿಪ್ರಜ್ಞೆಗಳು ಇಲ್ಲಿ ಅಲ್ಲಲ್ಲಿ ಕಾಣಿಸಿಕೊಂಡರೂ ಅದೇ ಮುಖ್ಯ ಆಸ್ತಿಭಾರವಾಗದಿದ್ದುದು ಕಾಣುತ್ತದೆ.

ಚಿಕ್ಕದೇವರಾಜ ಒಡೆಯರ ಕಾಲದ ರೈತ – ಜಂಗಮರ ಚಳುವಳಿ, ಜಾತಿಸೂಕ್ಷ್ಮ ಘರ್ಷಣೆಯನ್ನು ಸೂಚಿಸಿದರೂ ರೈತರ ಸಂಬಂಧದ ಬೇಡಿಕೆಯಲ್ಲಿ ಮಂತ್ರಿಯ ದುರ್ವರ್ತನೆಗೆ ಪ್ರಭುತ್ವವು ಕಣ್ಣು ಮುಚ್ಚಿದ ಬಗೆಯೆ ಆ ಚಳುವಳಿಗೆ ಕಾರಣವಾಗಿ ಕಾಣುತ್ತದೆ. ಟೀಪು ಕಾಲದ ಅನ್ಯಾಯದ ದಂಡವಿರುದ್ಧ ಸತ್ಯಾಗ್ರಹ

ಇದೆ ಬಗೆಯದಾಗಿ ವಿಫಲವಾಯಿತು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ರೈತ ಚಳುವಳಿಗೆ ಪ್ರಭುತ್ವದ ಅನುಕಂಪ ದೊರೆತಿದ್ದರೂ, ಅಂದಿನ ಅಧಿಕಾರಶಾಹಿ ತನ್ನ ಸ್ವಾರ್ಥ ಕುಚೇಷ್ಟೆಗಳ ಕಾರಣ ಅದನ್ನು ಬಿಗಡಾಯಿಸಲು ಅವಕಾಶ ಮಾಡಿ ಕೊಟ್ಟರೂ, ಕೊನೆಗೆ ರೈತರೇ ಸಫಲರಾದರು. ಈ ಸಮಯದ ನಗರ ರೈತರ ಬಂಡಾಯ ರೈತರದೇ ಆಗಿದ್ದರೂ, ಮೋಸದ ನಾಯಕತ್ವ ಅದನ್ನು ಹಾಳುಗೆಡವಿತು. ಕನ್ನಡ ಜಿಲ್ಲೆಯ ಜಂಗಲ್ ಸವಲತ್ತಿನ ಹೋರಾಟ, ವನದುಃಖಿ ವಿರೋಧಿ ಚಳುವಳಿ, ಹುಲಬನ್ನಿ ಕರನಿರಾಕರಣೆ, ಶಿರಸಿರೈತರ ಕರನಿರಾಕರಣೆ ಹಿರೆಕೆರೂರು ರೈತರ ಕರ ನಿರಾಕರಣೆ ಇವೆಲ್ಲ ರೈತರು ಎಚ್ಚೆತ್ತ–ಜಾಗೃತಗೊಂಡ ಚಳುವಳಿಗಳಾಗಿವೆ.

ಈ ಸಮಯದ ಮೈಸೂರು ಪ್ರಜಾಪ್ರತಿನಿಧಿ ಸಭೆಯ ರೈತರ ಸಮಸ್ಯೆಗಳ ಕುರಿತಾದ ಚರ್ಚೆಗಳು ಅಂದಿನ ಅಧಿಕಾರಸ್ಥರ ಪ್ರಭಾವದ ಮುದ್ರೆಯಲ್ಲಿ ನಡೆಯುತ್ತಿದ್ದುವೇನೋ ಎಂದು ಭಾಸವಾಗುತ್ತದೆ. ಇದಕ್ಕೆಲ್ಲ ಒಂದು ಪೂರ್ಣಪ್ರಮಾಣದ ಗಂಭೀರವಾದ, ಶಿಸ್ತಿನ ಚಳುವಳಿಯಾಗಿ, ದಿವಾನರಿಗೆ ಎದುರಾಗಿ ನಿಂತು ಪ್ರಜ್ಞೆಯನ್ನು ಕೆಣಕಿ ಅರಳಿಸುವ ಪ್ರಯತ್ನ ಮಾಡಿದ ಚಳುವಳಿ **ಇರ್ವಿನ್ ನಾಲಾ ಚಳುವಳಿ** ಆಗಿತ್ತು. ಈಸೂರು, ರಾಮದುರ್ಗದ ರೈತ ಚಳುವಳಿಗಳಂತು, ಉಗ್ರ ಚಳುವಳಿಗಳಾಗಿವೆ. ಇವೆಲ್ಲ ಸ್ವಾತಂತ್ರ್ಯ ಪೂರ್ವದ ಚಳುವಳಿಗಳಾಗಿ ಒಂದು ಸೀಮಿತ ಚೌಕಟ್ಟಿನಲ್ಲಿ ನಡೆದುಬಂದುವು.

ಇರ್ವಿನ್ ನಾಲಾ ಚಳುವಳಿಯ ನಂತರ ರೈತರ ದೂರು ದುಮ್ಮಾನಗಳು, ಸಾತಂತ್ರ್ಯ ಚಳುವಳಿಯಲ್ಲಿ ಅಥವಾ ಅದರ ಅಂಗವಾಗಿ ಐಕ್ಯಗೊಂಡು ಪ್ರತ್ಯೇಕ ಅಸ್ತಿತ್ವವನ್ನು ನಿರ್ಲಕ್ಷಿಸಿಕೊಂಡು **ರಾಮದುರ್ಗದ ರೈತ ಚಳುವಳಿ** ಬಿಟ್ಟರೆ ಉಳಿದಾವುವೂ ಪ್ರಮುಖವಾಗಿ ತೋರಿಕೊಳ್ಳಲಾಗಲಿಲ್ಲವೇನೋ ಎನ್ನಿಸುತ್ತದೆ. ಕ್ವಿಟ್ ಇಂಡಿಯಾ ಚಳುವಳಿಯಿಂದ 1947ರ ಸ್ವಾತಂತ್ರ್ಯ ಚಳುವಳಿಯ ಅರ್ಥಾತ್ ಬಿಡುಗಡೆಯ ಚಳುವಳಿಯವರೆಗೂ ರೈತರ ಕರನಿರಾಕರಣೆ, ಸತ್ಯಾಗ್ರಹವೆಲ್ಲ ಆ ಚಳುವಳಿಯಲ್ಲಿಯೇ ಮಿಂದು ಹೋದಂತಾಗಿವೆ. ಮುಂದೆ **ಕಾಗೋಡು ಚಳುವಳಿಯ** ಮೂಲಕ ಅದು ಕಾವುಗೊಂಡದ್ದು ಕಾಣಬರುತ್ತವೆ. 1944ರ ಲೆವಿ ನಿರಾಕರಣ ಚಳುವಳಿ, 1943ರ ಹಾಲಗಿ ಮರೋಳದ ಧಾರವಾಡ ಜಿಲ್ಲೆ ರೈತಾಪಿ ಹೆಣ್ಣು ಮಕ್ಕಳು ಹಾವೇರಿ ಕಚೇರಿ ಮೇಲೆ ಧ್ವಜಾರೋಹಣ ಮಾಡಿ ಬಂಧನಕ್ಕೀಡಾದ ಕತೆ, ಕಾರವಾರದ ಹಳ್ಳಿಗಳ ರೈತರ ಜೈಲ್‌ಭರೋ ಚಳುವಳಿ ಇವೆಲ್ಲ ಮೇಲಿನ ಮಾತುಗಳಿಗೆ ಬೆಂಬಲ ತೋರುವಂತೆ ಕಾಣುತ್ತವೆ.

ಸ್ವಾತಂತ್ರ್ಯೋತ್ತರ ಕಾಲದ ಚಳುವಳಿಗಳಾಗಿ ಶಿವಮೊಗ್ಗಾ ಜಿಲ್ಲೆಯ **ಕಾಗೋಡು ರೈತ ಸತ್ಯಾಗ್ರಹವು** ಒಂದು ಹೊಸ ತಿರುವನ್ನು ರೈತ ಚಳುವಳಿಗೆ ತಂದುಕೊಟ್ಟರೂ, ವಿಧಾನಸಭಾಧಿವೇಶನಗಳ ಮೇಲೆ ಪೂರ್ಣ ಪ್ರಭಾವ ಬೀರಿದರೂ, ತನ್ನ ಸೌಮ್ಯ ಪ್ರಜ್ಞೆಯನ್ನು ಅದು ಕಳೆದುಕೊಳ್ಳಲೇ ಇಲ್ಲ. ಅಲ್ಲಿ ಜಾತಿಪ್ರಜ್ಞೆ ಸುಳಿದರೂ ಅದೇ ಆಲಂಬನವಾಗದಿದ್ದುದು ಗಮನಾರ್ಹ. ಆ ಸತ್ಯಾಗ್ರಹದ ಸಂದರ್ಭಗಳು ಈವರೆಗೂ ಅನುರಣನಗೊಳ್ಳುತ್ತಿರುವುದು ಅದರ ಮಹತ್ವವನ್ನು ತೋರುತ್ತದೆ. ಭೂಸುಧಾರಣೆಯ ಕಾನೂನು ಚರ್ಚಿತಗೊಳ್ಳಲು ನಿರ್ಣಯಗೊಳ್ಳಲು, ಆ ಸತ್ಯಾಗ್ರಹದ ಹಿನ್ನೆಲೆ ಬಹುವಾಗಿ ಕೆಲಸ ಮಾಡಿರುವುದು ಕಾಣಬರುತ್ತದೆ. ವಿಧಾನಸಭಾ ಹಾಗು ವಿಧಾನಪರಿಷತ್ತಿನ ಚರ್ಚೆಗಳಂತು ಸಮಸ್ಯೆಯನ್ನು ಎಳೆಎಳೆಯಾಗಿ ಬಿಡಿಸಿ ಮನದಟ್ಟು ಮಾಡುತ್ತವೆ. ಈ ಕಾಗೋಡು ಚಳುವಳಿ ಕರ್ನಾಟಕ ಏಕೀಕರಣ ಪೂರ್ವ ಚಳುವಳಿಯೂ ಹೌದು.

ಕರ್ನಾಟಕ ಏಕೀಕರಣ ನಂತರದ ರೈತ ಚಳುವಳಿಗಳು ವ್ಯಾಪಕ ನೆಲೆಯನ್ನು ಹೊಂದಿದವಾಗಿವೆ. ಸಹಜವಾಗಿ ಸಂಘರ್ಷದ ತೀವ್ರತೆಯನ್ನು ಹೆಚ್ಚಿಸಿದುವು. ಈ ಅವಧಿಯ ಚಳುವಳಿಗಳಲ್ಲಿ ಮೊದಲ ಉಗ್ರ ಘಟನೆಗಳ ಚಳುವಳಿಯಾಗಿ **ಮಧುಗಿರಿ ತಾಲ್ಲೂಕಿನ ಗ್ರಾಮೀಣ ಕಬ್ಬು ಬೆಳೆಗಾರ ರೈತರ ಪ್ರತಿಭಟನೆ ಕಂಡರೂ,** ಪೋಲೀಸ್ ದಬ್ಬಾಳಿಕೆಯೆ ವಿಜೃಂಭಿಸಿ, ರೈತರ ಅಸಹಾಯಕತೆ ಎದ್ದು ಕಾಣುತ್ತದೆ. ಆದರೆ ಉಭಯ ಸದಸನದ ಸದಸ್ಯರ ಸ್ಥಳ ಪರಿಶೀಲನೆ (ಕ್ಷೇತ್ರಕಾರ್ಯ) ಸದನದ ಚರ್ಚೆಯಲ್ಲಿ ಬಹಳ ಗಂಭೀರವಾಗಿ ಬಂದು ನ್ಯಾಯಾಂಗ ತನಿಖೆ ನಡೆದು ಪರಿಹಾರ ನೀಡಿಕೆಗೆ ಕಾರಣವಾಯಿತು. ಇದು ಉಭಯ ಸದನಗಳ ಶಾಸಕವರೇಣ್ಯರ ಪ್ರಜ್ಞಾದೀಕ್ಷೆಗೆ ದೊರಕಿದ ಗಣ್ಯ ಗೌರವ ಹಾಗು ಲೇಸ ಬಯಸಿದ ಕಾಳಜಿಗೆ ದೊರಕಿದ ಜಯವೆನ್ನಬೇಕು. ಕೋಲಾರ ಜಿಲ್ಲಾ ಭೂ ಆಕ್ರಮಣ ಚಳುವಳಿ ಎಂದಿನ ರೂಢಿಗತ ಚಳುವಳಿ ಆಗಿತ್ತು.

**ವರುಣಾನಾಲಾ ಚಳುವಳಿ** ಒಂದು ಜಿಲ್ಲೆಯ ರೈತರ ಉಗ್ರ ಚಳುವಳಿ ಎನಿಸುವಂತೆ ಕಂಡರೂ ಇನ್ನೊಂದು ಭಾಗದ ರೈತರೂ ಮುಖಾಮುಖಿಯಾಗಿ ನಿಂತ ಹಳೆಮೈಸೂರು ಭಾಗದ ಗಮನಾರ್ಹ ಚಳುವಳಿ ಎನಿಸುತ್ತದೆ. ಆದರೆ ಪ್ರಭುತ್ವ ಹೇಗೋ ಇದರ ಸಮತೋಲನವನ್ನು ಅಂದು ಕಾಪಾಡಿದರೂ ವರುಣಾನಾಲಾ ಸಮಸ್ಯೆಗಳು ಪೂರ್ಣ ಪರಿಹಾರ ಕಂಡಿವೆ ಎನ್ನುವಂತಿಲ್ಲ ಎಂಬುದಕ್ಕೆ ಇಂದಿಗೂ ಆ ಕುರಿತು ಆಗಾಗ ಚರ್ಚೆಗಳು ಹಣಿಕು ಹಾಕುತ್ತಿರುವುದೇ ಸಾಕ್ಷಿ.

ಮಲಪ್ರಭಾ ರೈತರ ಹೋರಾಟವಂತು ವ್ಯಾಪಕ ಪರಿಣಾಮದ್ದಾಗಿ ಸರ್ಕಾರ ಬಾಗಲೇಬೇಕಾದಂಥ 19 ಬೇಡಿಕೆಗಳನ್ನು ಮಂಡಿಸಿತು; 85 ಕೋಟಿ ರೂ ಪರಿಹಾರ ಪಡೆದ ಹೋರಾಟವಾಗಿ ಗಂಡು ಹೋರಾಟವೆನಿಸಿತು. ಈ **ನಂತರವೆ ಸುದ್ದಿ ಮಾಧ್ಯಮಗಳು ರೈತ ಚಳುವಳಿಗಳ ಮಹತ್ವವನ್ನು ಮನಗಂಡು ಹೆಚ್ಚು ಪ್ರಸಾರ ಮಾಡತೊಡಗಿದುವು**. ಇದಲ್ಲದೆ ಅಲ್ಲಲ್ಲಿ ನಡೆದ ವಿವಿಧ ಸಣ್ಣ ಪ್ರಮಾಣದ ರೈತ ಚಳುವಳಿಗಳು ಹಾಗು ಗಂಗಾವತಿ ರೈತ ಚಳುವಳಿ ಹಾಗು ಅಲ್ಲಿ ನಡೆದ ಗೋಲಿಬಾರ್, ದಕ್ಷಿಣಕನ್ನಡದ ರೈತ ಚಳುವಳಿ, ನಿಪ್ಪಾಣಿ ತಂಬಾಕು ಬೆಳೆಗಾರರ ಚಳುವಳಿ, ರಾಜ್ಯ ರೈತಸಂಘಗಳ ವಿವಿಧ ಮಾದರಿಯ ರಸ್ತೆ – ರೈಲು ತಡೆ ಚಳುವಳಿ, ಧರಣಿ ಸತ್ಯಾಗ್ರಹ, ನಾಗಸಮುದ್ರ ರೈತ ಚಳುವಳಿ, ಗೆಜ್ಜಲಗೆರೆ ರೈತ ಸತ್ಯಾಗ್ರಹ, ಕೆ.ಎಂ.ದೊಡ್ಡಿ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆ ಎದುರಿನ ರೈತರ ಸತ್ಯಾಗ್ರಹ, ವಿಧಾನಸೌಧದಲ್ಲಿ ರೈತರ ಧರಣಿ ಮುಷ್ಕರ, ರೈತರ ಜಾತಾ, ಡಂಕೆಲ್ – ಗ್ಯಾಟ್ ಪ್ರಸ್ತಾಪದ ವಿರುದ್ಧ ರೈತ ಚಳುವಳಿ, ದಲಿತ ರೈತ ಚಳುವಳಿಯ ಬಗೆಗಳು, ಬಹುರಾಷ್ಟ್ರೀಯ ಕಂಪೆನಿಗಳ ವಿರುದ್ಧ ಚಳುವಳಿಗಳು, ಹಾಗು ಉಭಯ ಸದನದ ಈ ಕುರಿತೆಲ್ಲ ವಿಶಿಷ್ಟ ಚರ್ಚೆಗಳು, ಧರಣಿ, ಸಭಾತ್ಯಾಗ, ಇವೆಲ್ಲ ಚಳುವಳಿಯ ಕೇವಲ ಪ್ರದರ್ಶನವಾಗಿರದೆ ಹಕ್ಕೊತ್ತಾಯದ ಪ್ರಾಮಾಣಿಕ ಕಾಳಜಿಗಳಾಗಿ ಕಾಣಬರುತ್ತವೆ; ಚಳುವಳಿಯಾದರೋ ಒಂದು ನಿಷ್ಠೆಯ ನಿರಂತರ ಅನುಸರಣೆಯಲ್ಲವೆ!

ಈ ಹಿನ್ನೆಲೆಗಳಲ್ಲಿ ನಮ್ಮ ಭಾರತೀಯ ರೈತ ಚಳುವಳಿಯ ಸಾಗಿಬಂದ ಪರಂಪರೆಯ ಸ್ಥಿತಿಕಾರಣವನ್ನು ಮೂರು ಬಗೆಯಲ್ಲಿ ವರ್ಗೀಕರಿಸಬಹುದೆನಿಸುತ್ತದೆ; ವಿಜ್ಞಾನ–ಸಮಾಜೋ ಸಾಂಸ್ಕೃತಿಕ ನಿಲುವಿನಲ್ಲಿಯೂ ಅದನ್ನು ನಿದರ್ಶಿಸ ಬಹುದೆನಿಸುತ್ತದೆ. ಅದು ಹೀಗಿದೆ:

i. **ಸಾಂಪ್ರದಾಯಿಕ – ಪಾರಂಪರಿಕ _ ಶಾಂತಶೀಲ ಚಲನ ಚೈತನ್ಯ ಶಕ್ತಿ**

ii. ಪ್ರೇರಕನೆಲೆಯ ಜನಶಕ್ತಿ ಹಾಗು ಮಾನಸ ಸಹನ, ಧಾರಣ ವೇಗಚಾಲಿತ ಚೈತನ್ಯ ಶಕ್ತಿ; ಚೈತನ್ಯಸಂಗ್ರಹ ಶಕ್ತಿ (Potential energy); ಸಂಗ್ರಹಚೈತನ್ಯವಿತರಣಶಕ್ತಿ– ಚಲನಶೀಲ ಶಕ್ತಿ (Kinetic energy).

iii. **ಚೈತನ್ಯಶೀಲ ಸ್ಫೋಟಕ್ರಿಯೆ ಹಾಗು ಪ್ರತಿರೋಧಧಾರಣ ಚೈತನ್ಯ ಪ್ರಕ್ರಿಯೆ –ಇಲ್ಲಿ ನ್ಯೂಟನ್ನಿನ ಮೂರು ನಿಯಮಗಳ ಅನ್ವಯಿಕ ನೆಲೆಯಲ್ಲಿ ವಿಶ್ಲೇಷಿಸಿ ರೈತ ಚಳುವಳಿಯ ಆಯಾಮವನ್ನು ಗಮನಿಸಬಹುದೆನಿಸುತ್ತದೆ. ಕಾರಣ**

ರೈತ ಚಳುವಳಿಯ ಆಯಾಮವನ್ನು ಗಮನಿಸಬಹುದೆನಿಸುತ್ತದೆ. ಕಾರಣ ಮನುಷ್ಯನ ದೇಹವೂ ಮೃಣ್ಮಯ ಕಣಗಳ ಮೊತ್ತದ ಜೀವಂತ ಸ್ಪಂದನ ಪ್ರತೀಕ.

ನ್ಯೂಟನ್ನಿನ ಮೊದಲ ನಿಯಮದ ರೀತ್ಯಾ ಯಾವುದೇ ವಸ್ತುವೂ (ಅಂದರೆ mass- ಜಡವಸ್ತುವಿನಲ್ಲಿಯೂ ಕನಿಷ್ಠವೆಂದರೂ ನಿರ್ದಿಷ್ಟ ಲಘುವೇಗದ ಒಳಕಣಗಳ ಚಲನೆ ಇದ್ದು ಸ್ಥಾವರವಾಗಿಯೂ ಸ್ಥಗಿತವೆಂದೆನಿಸದ ಸ್ಥಿತಿ) ಹೊರಗಿನ ಬಲ ಅಥವಾ ಶಕ್ತಿಯ ಪ್ರೇರಣೋತ್ಸಾಯಗಳಿಲ್ಲದಿದ್ದರೆ ಅದು ತಾನಿರುವ ಅಚಲಿತ ಸ್ಥಿತಿ ಅಥವಾ ಸರಳರೇಖಾ ಸಮ್ಯೆಕ ಚಲನಸ್ಥಿತಿಯನ್ನೆ ಕಾಯ್ದುಕೊಳ್ಳುತ್ತದೆ. ಈ ದೃಷ್ಟಿಯಿಂದ ನಮ್ಮ ಕೃಷಿಯ ಪಾರಂಪರಿಕ ನೆಲೆಯು ಶಾಂತಶೀಲ ಚಲನ ಚೈತನ್ಯಶಕ್ತಿಯಾಗಿ ಮೊದಲ ಹಂತವಾಗಿ ನ್ಯೂಟನ್ನಿನ ನಿರ್ದೇಶಕ್ಕನುಗುಣವಾಗಿದೆ ಎಂದೆನಿಸುತ್ತದೆ.

**ಎರಡನೇ ನಿಯಮದಲ್ಲಿ** ಬಲ–ಶಕ್ತಿ–ಚೈತನ್ಯ ಯಾವ ದಿಸೆಯಲ್ಲಿ ಸಾಗುವುದೋ ಅದೇ ದಿಸೆಯಲ್ಲಿ ವಸ್ತು (ದ್ರವ್ಯ – mass)ವಿನ ಚಲನಶೀಲತೆಯ ಮೊತ್ತವೂ ಅನುಸರಿಸಿ ಆ ದಿಸೆಯಲ್ಲಿಯೇ ಸಾಗುತ್ತದೆ (7=mxa: ಬಲ =ದ್ರವ್ಯ X ವೇಗೋತ್ಕರ್ಷ). ಇದು ನಮ್ಮ ರೈತ ಚಳವಳಿಯ ಎರಡನೇ ಮಜಲಿನಲ್ಲಿ ಕಾಣಬರುತ್ತದೆ. ಆವನ ನೋವು. ಶೋಷಿತ ಬದುಕು, ಹೇರಿದ ಹಿಂಸೆ ಅತ್ಯಾಚಾರಗಳೆಲ್ಲ ಒಳಕಣಗಳಲ್ಲಿ ಸಹನೆಯ ಜಾಗವನ್ನೆಲ್ಲ ಆಕ್ರಮಿಸಿದ ಮೇಲೆ ಪ್ರೇರಕ ನೆಲೆಯಾಗಿ ನಾಯಕತ್ವವು ಹಾದಿ ತೋರಿದಾಗ, ಜನಶಕ್ತಿಯಾದ ರೈತರ ಒಳಚೈತನ್ಯ ಸಂಗ್ರಹವು ಸ್ಫೋಟಗೊಂಡು ವಿತರಣ ಚೈತನ್ಯ ಎದ್ದು ಕಂಡೀತು. ಅಂತೇ ಆಂಗ್ಲರೆದುರಿನ ರೈತ ಬಂಡಾಯಗಳು. ಮಹಮದ್ ತೊಘಲಕ್‌ನೆದುರಿನ ರೈತ ಬಂಡಾಯಗಳು, ನಕ್ಸಲ್ ಬಾರಿ, ಕಿಸಾನ್ ಸಭಾ ರಾಜ್ಯ ರೈತ ಸಂಘದ ವಿವಿಧ ಬಗೆಯ ಚಳುವಳಿಗಳು, ನರಗುಂದ ಚಳುವಳಿ ಇತ್ಯಾದಿಗಳು ಈ ವರ್ಗಕ್ಕೆ ಸೇರುತ್ತವೆ. ಅದೇ ಇರ್ವಿನ್ ನಾಲಾ ಚಳುವಳಿಯಾಗಲಿ, ಕಾಗೋಡು ಸತ್ಯಾಗ್ರಹವಾಗಲಿ ಇಂಥ ಬಂಡಾಯ ಪ್ರವೃತ್ತಿ ತೋರದಿದ್ದರೂ ಪರಿಣಾಮಕಾರಿಯಾಗಿ ಶಾಂತಶೀಲ ಚೈತನ್ಯಶಕ್ತಿ ತೋರಿ ಮುಂದಿನ ಚಳುವಳಿಗಳಿಗೆ ಗರ್ಭಸ್ಥ ಪ್ರತಿರೋಧದ ಮಹಾಸ್ಫೋಟದ ಬೀಜಗಳನ್ನಂತು ಬಿತ್ತಿದ್ದವು. ಎರಡನೇ ಮಜಲಿನದು ದ್ರವ್ಯದ (mass) ಲಘುವೇಗ ಕಣಗಳಿಗಿಂತ ಹೆಚ್ಚಿನ ವೇಗದ ದ್ರವದ (liquid) ಕಣಗಳ ವೇಗವಾಗಿ ಅವು ವಿವಿಧ ದಿಕ್ಕುಗಳಲ್ಲಿ ಹರಿಯುವಂಥ ಶಕ್ತಿ ಪಡೆದಿರುತ್ತವೆ. ರಾಮದುರ್ಗದ ರೈತ ಚಳವಳಿ: ರೈತ ಹಾಗು ಸ್ವಾತಂತ್ರ್ಯ ಚಳುವಳಿಯ ಸಂಯುಕ್ತತೆ

ಪಡೆದದ್ದು ಎರಡನೇ ನಿಯಮಕ್ಕನುಸರಿಸಿಯೆ ಎನ್ನಬೇಕು. ಮಾನವ ಸಹನೆಗೂ ಮಿತಿ ಇರುವುದಿಲ್ಲವೆ? ಆದರೆ ಅದು ಸಮಯ ಕಾಯುತ್ತದೆ. ಅದೇ ಚೈತನ್ಯ ಸಂಗ್ರಹಶಕ್ತಿಯಾಗಿ ಅಂದರೆ ಪೋಟೆನ್ಷಿಯಲ್ ಎನರ್ಜಿಯಾಗಿ ಪ್ರೇರಕ ನಾಯಕತ್ವ ದೊರಕಿ ಮುಂದಾದಾಗ, ಧಾರಣ ವೇಗ ಗುಣಿತಗೊಳ್ಳುತ್ತ ಚೈತನ್ಯ ವಿತರಣ ಶಕ್ತಿಯ ಮೊತ್ತವನ್ನು ನಾಯಕತ್ವಕ್ಕೆ ನೀಡುತ್ತ ಸಹಗಾಮಿಯಾಗಿ ಸಾಗುತ್ತದೆ. ತನ್ನ ಪಾಡಿಗೆ ತಾನು ಕುಳಿತು ಬಿಡುವುದಿಲ್ಲ. ಇದನ್ನೇ ರೈತರ ಸಭೆ, ಮೆರವಣಿಗೆ, ಕಾಲ್ನಡಿಗೆಯ ಪ್ರಚಾರ ಪರಿಕರಗಳ ಮೂಲಕ ರೈತ ಚಳುವಳಿಗಳು ಸಾಗಿದ ರೂಪದಲ್ಲಿ ಕಾಣಬಹುದು.

**ಮೂರನೆ ನಿಯಮವೆಂದರೆ** ಪ್ರತಿಯೊಂದು ಕ್ರಿಯೆಗೂ (ಚೈತನ್ಯಶಕ್ತಿ) ಅದಕ್ಕೆ ಸಮನಾದ ಹಾಗೂ ವಿರುದ್ಧ ಪ್ರತಿಕ್ರಿಯೆ (ಸಮಬಲ ಪ್ರತಿರೋಧ ಚೈತನ್ಯ ಶಕ್ತಿ) ಇರುತ್ತದೆ; ಅರ್ಥಾತ್ ಕ್ರಿಯೆ ಮತ್ತು ಪ್ರತಿಕ್ರಿಯೆ ಪರಸ್ಪರ ಸಮ ಮತ್ತು ವಿರುದ್ಧ ಎಂದು ಸರಳವಾಗಿ ಸೂತ್ರೀಕರಿಸಿ ಹೇಳುವುದುಂಟು. ಆದರೆ ಸಾಮಾಜಿಕ ನೆಲೆಯಲ್ಲಿ ಇದಕ್ಕೆ ಮತ್ತಷ್ಟು ವ್ಯಾಪಕ ಅರ್ಥವನ್ನು ನೀಡಬಹುದಾಗಿದೆ.

ನರಗುಂದ-ಮಲಪ್ರಭಾ ಹೋರಾಟ, ಕಬ್ಬು ಬೆಳೆಗಾರರ ರಸ್ತೆ ರೋಕೋ ಚಳುವಳಿ, ಡಂಕೆಲ್ ಪ್ರಸ್ತಾವನೆಯ ವಿರೋಧ ಚಳುವಳಿ, ಬಹುರಾಷ್ಟ್ರೀಯ ಕಂಪನಿಗಳ ಹಾಗು ಪೇಟೆಂಟ್ ಹಕ್ಕುಗಳ ಚಳುವಳಿ, ಬೆಲೆಕುಸಿತ, ಮುಕ್ತ ಆಮದುಗಳ ಭರಾಟೆ ಇತ್ಯಾದಿಗಳು ನೋವಿನ ನೆಲೆಯ ಕ್ರಿಯೆಯಿಂದ, ಬದುಕು ದುರ್ಭರವೆನಿಸಿದಾಗ, ಮಾನವಾಗಿ ಬಾಳುವ ಸಂದರ್ಭವಂಚಿತವಾದಾಗ, ಅಧಿಕಾರಿಗಳ ಭ್ರಷ್ಟಚಾರ, ಕಿರುಕುಳ, ಮಧ್ಯವರ್ತಿಗಳ ಮೋಸಗಾರಿಕೆ – ಸ್ವಾರ್ಥಲಾಲಸೆ ಹಾಗು ರಾಜಕೀಯ ಸ್ಪರ್ಶಗಳೂ ತೀವ್ರ ಘಾಸಿಗೊಳಿಸಿದಾಗ, ರೈತರ ಪ್ರತಿರೋಧ ಚೈತನ್ಯವು ಪ್ರಕ್ರಿಯಾತ್ಮಕವಾಗಿ ಸ್ಫೋಟಗೊಂಡ ಸಮಸಮ ಪ್ರತಿಕ್ರಿಯೆಯಾಗಿದೆ. ಅಷ್ಟೇ ಏಕೆ ಮಾನವ ಮಾನಸಕ್ರಿಯೆಯೆ ಮೂರನೇ ಮಜಲನ್ನು ಮೀರಿ ತೋರಬಲ್ಲ ವಿಶೇಷ ಹಂತದ್ದೆನಿಸುತ್ತದೆ.

ಈ ಸಂದರ್ಭದಲ್ಲಿ ವಿಜ್ಞಾನ ಪ್ರಯೋಗಗಳಲ್ಲಿ ಹಾಗು ನಿಯಮಾನ್ವೇಷಣೆಗಳಲ್ಲಿ ಎಲೆಕ್ಟ್ರಾನಿಕ್ ಚಿಂತನೆಗಳಲ್ಲಿ ಆಸಕ್ತನಾದ ಕು॥ಐ.ಅಭಿಷೇಕ ಎಂಬ ಬಾಲಕ ನ್ಯೂಟನ್ನಿನ ಮೂರನೇ ನಿಯಮದ ಸಂಬಂಧ ಹಾಕಿದ ಪ್ರಶ್ನೆ ಗಮನಾರ್ಹವಾಗಿದೆ. ಗೋಡೆಗೆ ಬಡಿದ ಚಂಡು ಅಷ್ಟೇ ಪ್ರತಿಕ್ರಿಯಾ ಬಲದಿಂದ ಹಿಂದಿರುಗುತ್ತದೆ; ಜೆಟ್ ವಿಮಾನ ಹಿಂಬದಿಯಲ್ಲಿ ತಾನು ತೂರುವ ಅನಿಲವೇಗದಷ್ಟೆ, ವಾತಾವರಣದ ಗಾಳಿ ಪ್ರತಿಕ್ರಿಯಿಸಿ ವಿಮಾನ ಮುನ್ಸಾಗಲು ನೆರವಾಗುತ್ತದೆ; ನೆಲಕ್ಕೆ ಬಡಿದ ಚಂಡು ಅಷ್ಟೇ ವೇಗದಿಂದ

ಪುಟವೆದ್ದು ಬರುತ್ತದೆ ಎಲ್ಲ ಸರಿ. ಆದರೆ ಗಾಳಿಯಲ್ಲಿ ನಾವೆಸೆದ ಕಾಗದ ಅಥವಾ ವಸ್ತುವಾಗಲಿ ಹಾಗೆಯೇ ಗುರುತ್ವಾಕರ್ಷಣಾ ಹಾಗು ಸಮಪ್ರತಿರೋಧದ (Friction/resistence) ಕಿಂಚಿತ್ ಪ್ರತಿಕ್ರಿಯೆಯನ್ನಾದರೂ ತೋರಿ ಮುಂದೆ ಬೀಳುವುದರ ಬದಲು ಹಿಂದಿರುಗಿ ಬಂದು ಪ್ರತಿಕ್ರಿಯಿಸಬೇಕಲ್ಲವೆ? ಗಾಳಿಯೂ matter ತಾನೆ! ಎಸೆದ ವಸ್ತುವಿನ ದ್ರವ್ಯರಾಶಿ, ಗುರುತ್ವಾಕರ್ಷಣವನ್ನು ಹಾಗು, ಪ್ರತಿಕ್ರಿಯಿಸುವ ದ್ರವ್ಯರಾಶಿಯನ್ನು ಅವಲಂಬಿಸಿದೆ ಎಂದರೆ ಅದು ಎಸೆದ ಚಂಡು ಅಥವ ಬಡಿದ ಚಂಡಿಗೂ ಅನ್ವಯವಾಗಬೇಕಲ್ಲವೆ? ಅಥವಾ ಮೂರನೇ ನಿಯಮಕ್ಕೆ ಮಿತಿಯ ಸಂದರ್ಭವನ್ನು ಹೇಳಬೇಕಲ್ಲವೆ? ಎಂಬ ಪ್ರಶ್ನೆ ಮಾಲಿಕೆ ಅದಾಗಿತ್ತು.

ಈ ಹಂತವನ್ನು ನಮ್ಮ ರೈತ ಚಳುವಳಿಗಳ ಸಂದರ್ಭಕ್ಕೆ ಅನ್ವಯಗೊಳಿಸಿಕೊಂಡರೆ ನಮ್ಮ ರೈತರು, ರೈತ ಸಂಘಟನೆ, ರೈತ ಚಳುವಳಿಗಳ ಸೈದ್ಧಾಂತಿಕ ಹೋರಾಟದ ಪ್ರತಿಕ್ರಿಯೆಗಳಿಗೆ ಆಡಳಿತದ ಪ್ರಾಥಮಿಕ ಅಥವಾ ಪರಿಹಾರಾತ್ಮಕ ಕ್ರಿಯೆಗಳು ಸಮ ಹಾಗು ಸಮರ್ಥ ಸಂವಾದಿ ಸ್ಪಂದನ ಎನಿಸುತ್ತವೆಯೇ? ಸಮರ್ಥ ಸಾಂತ್ವನೋಪಾಯವಾಗಿವೆಯೆ? ಎಂಬ ಪ್ರಶ್ನೆಗಳುದಿಸುತ್ತವೆ. ಉಭಯ ಸದನಗಳಲ್ಲಿಯ ಚರ್ಚೆಗಳು, ಪರಿಹಾರವನ್ನು ಸಮಸಮ ಪ್ರತಿಕ್ರಿಯೆಯಾಗಿ ನೀಡಿರುವುದೂ ಉಂಟು; ನೀಡಿಲ್ಲದಿರುವುದೂ ಉಂಟು. ರಾಜಕೀಯ ಸ್ಪರ್ಶವಿಲ್ಲದ ಪರಿಹಾರಗಳು ಸಹಜವಾಗಿ ಸಮಸಮ ಸಂವಾದ–ಸ್ಪಂದನಗಳ ಪರಿಣಾಮವೆನಿಸುತ್ತವೆ. ಅದೇ ಮಧುಗಿರಿ ರೈತಚಳುವಳಿ–ಸತ್ಯಾಗ್ರಹ, ಹಾಗೂ ಬೆಳೆಧಾರಣೆ ಕುಸಿತ, ರಫ್ತು ಸಬ್ಸಿಡಿ, ಪೇಟೆಂಟ್ (TRIPS) ಇತ್ಯಾದಿ ಸಂದರ್ಭಗಳಲ್ಲಿ ಮೂರನೇ ನಿಯಮಕ್ಕೆ ಬಹುಶಃ ಮಿತಿ ಅಂಟಿರುವುದು ಭಾಸವಾದಂತೆ, ಇಲ್ಲಿ ಅದು ಅನ್ವಯವಾಗಿರುವಂತೆ ತೋರುತ್ತದೆ, ಸಂರಕ್ಷಿತತೆ; ಎಂದರೆ ಆಕರ್ಷಣ ಕೇಂದ್ರದತ್ತ ಸಾಗಿಬರುವ ಸೆಂಟ್ರಿಪೀಟಲ್ ಶಕ್ತಿಯಂತೆ. ಭ್ರಷ್ಟ ಮೌಲ್ಯಗಳಿಗೆ ಅಂತೆಯೆ ಅರಕ್ಷಣೆಗೊಳ್ಳುವ ವಿಕರ್ಷಣೆ ಬೆಳೆದಾಗ ರೈತರ ಶಾಸಕರ ಸರ್ಕಾರದ ನಡುವಣ ಬಾಂಧವ್ಯ ಸುರಕ್ಷತೆಯಲ್ಲಿರುತ್ತದೆ. ಹೀಗಾಗಿ ರೈತ ಚಳುವಳಿ – ಸತ್ಯಾಗ್ರಹ ಪ್ರಕ್ರಿಯೆ, ಜಾಗತೀಕರಣ, ಆಡಳಿತ ಹಾಗು ಸದನದ ಆಡಳಿತೇತರ ಶಾಸಕರ ವರ್ತನಾ ಪ್ರಕ್ರಿಯೆಯನ್ನು ಸಮಾಜೋ – ಮಾನಸ ವಿಜ್ಞಾನದ ನೆಲೆಯಲ್ಲಿಯೂ ಪರಿಶೀಲಿಸಬಹುದು.

ಈ ಪ್ರಕ್ರಿಯೆಯಲ್ಲಿ ಸಾಂಸ್ಕೃತಿಕ ಒತ್ತಡ ಆಥವಾ ಪರಂಪರೆಯಿಂದ ಸಾಗಿಸಿಕೊಂಡು ಬಂದ ಕೃಷಿ ಅನುಭವದ ರಕ್ತಗತ ಪ್ರಭಾವ ಇರುತ್ತದೆ; ಅಂದರೆ

Cultural pressure ಇರುತ್ತದೆ. ಜೊತೆಗೆ ಬದಲಾವಣೆಗೊಳ್ಳುವ ಕೃಷಿ ವಿಧಾನಗಳ ಹೊಸತನದ ವ್ಯಾಪಕ ಭಾವ ಇರುತ್ತದೆ. ಅದನ್ನೇ ಹೊಸ ಅನುಭವಗಳ (ಪ್ರಯೋಗಗಳ) ಗಾತ್ರ ಎನ್ನಬಹುದು. ಅಂದರೆ Volume of new experiences or ideas ಆಗಿರುತ್ತದೆ. ಇವೆರಡರ ಗುಣಕವನ್ನು ಪರಿಮಾಣ ಕೊಟ್ಟು ಲೆಖ್ಖಾಚಾರ ಹಾಕಿದರೆ 'ಕೃಷಿ' ಯನ್ನು ಕಾಲೀನ ಸ್ಥಿರಾಂಕವೆಂದು ಭಾವಿಸಿ ಕಾಲವರ್ಧಮಾನದಲ್ಲಿ ಏರಿಳಿತ ಅಥವಾ ಸಮತೆ, ಸಾಧನಾ ಪ್ರಗತಿಯನ್ನು ಅಳೆಯಬಹುದು. ಇದನ್ನು ಗಣಿತ ಹಾಗು ಭೌತಶಾಸ್ತ್ರದ ಒಂದು ಮಿತಿಯ ಅನ್ವಯವಾಗಿ ಬಳಸಿದರೆ **ಬಾಯ್ಲನ** ನಿಯಮವಾದ:

i. **Pressure X Volume= K.T**

ಒತ್ತಡ X ಗಾತ್ರ = (ಸ್ಥಿರಾಂಕ) ಉಷ್ಣತೆ

ii. $(P+a/v^2)(v-b) = RT$ ಎಂಬಲ್ಲಿ ಕಣಗಳ ಚಲನೆಯ ಆದರ್ಶ ಅನಿಲ (Ideal gas) ಕುರಿತಂತೆ (ವಾಂಡರ್ ವಾಲ್ಸ್ ಸಮೀಕರಣದ) ಅನ್ವಯವಿದೆ.

ಒಂದನೇ ಸಮೀಕರಣದ ರೀತ್ಯಾ ಒತ್ತಡ ಹೆಚ್ಚಿದರೆ, ವಸ್ತುವಿನ ಗಾತ್ರ ಕಡಿಮೆ ಆಗುತ್ತದೆ. ಹಾಗೆಯೆ ಗಾತ್ರ ಹೆಚ್ಚಿದರೆ ಒತ್ತಡ ಕಡಿಮೆ ಎಂದರ್ಥವಿದೆ. ಇದಕ್ಕೂ ಮುಂದೆ ಇನ್ನೊಂದರಲ್ಲಿ ವಾಂಡರ್‌ವಾಲ್ಸ್ ಸಮೀಕರಣವನ್ನು ಅನುಲಕ್ಷಿಸಿ $[(p+a/v^2)(v-b)=RT]$ ಎಂಬ ಸೂತ್ರ ಅನಿಲ ಕಣಗಳ ಚಲನೆಯಲ್ಲಿದೆ. ಅಂದರೆ ನಮ್ಮ ಸಾಂಸ್ಕೃತಿಕ ಒತ್ತಡ ಎಷ್ಟೇ ಇದ್ದರೂ ಹೊಸ ಭಾವನೆಗಳ ಬೀಜ ಅದರ ಗರ್ಭದಲ್ಲಿದ್ದು ಮೊತ್ತವಾಗಿರುತ್ತದೆ. ಹೊಸ ಭಾವನೆಗಳೂ ಕೂಡ ಹಳೆಯ ಭಾವನೆಗಳ ಕಿರು ಅಂಶ ಹೊಂದಿದ್ದು ಅದನ್ನೂ ಜೀರ್ಣಿಸಿಕೊಂಡಾಗ ಪ್ರಗತಿಯ ಬದುಕು ಜಾಗ್ರತ ಕಾಲಾವಧಿಯಲ್ಲಿ ಒದಗುತ್ತದೆ ಎಂಬುದೇ ಇಲ್ಲಿನ ಅನ್ವಯಿಕ ತತ್ವ.

Cultural pressure X Volume of change of new ideas = (const.) Periodic outcome

$$C.Pr \times V.C.n = K.P_0$$

ಸಾಂಸ್ಕೃತಿಕ ಕೃಷಿ ಅನುಭವಗಳ ಒತ್ತಡ x ಹೊಸ ಕಲ್ಪನಾನುಭವಗಳ ಗಾತ್ರ = ಸ್ಥಿರಾಂಶ X ಕಾಲವರ್ಧನ ಪರಿಣಾಮ

(ಸಾಂ.ಅ.ಒ) X (ಹೊ.ಕ.ಗಾ) = (ಸಿ) ಕಾ.ವ.ಪ

ಅಂದರೆ ಪರಂಪರಾಗತ ಕೃಷಿ ವಿಧಾನಗಳ ಮೇಲೆ ನಂಬಿಕೆ ಅಥವಾ ವ್ಯಾಮೋಹ ಇರುತ್ತದೆ. ಅದು ತಪ್ಪಿದರೆ ಅಥವಾ ಕಡಿಮೆಯಾದರೆ ಹೊಸ ಕೃಷಿ ವಿಧಾನಗಳಿಗೆ ಬದಲಾವಣೆಗೊಳ್ಳಲೂಬಹುದು. ಕೆಲವೇಳೆ ತಪ್ಪಿಸಲಾಗದ ಅಗೋಚರ ಕಾರಣಗಳಾದ ಬರಗಾಲ, ಪ್ರಾಕೃತಿಕ ಹಾನಿ ಇತ್ಯಾದಿಗಳು ಉಂಟಾದರೂ ಕಾಲ ಸಾಗಿದಂತೆ ಬದಲಾವಣೆ ಕಾರಣ ಪ್ರಗತಿಕಾರಕ ಕೃಷಿಗಾರಿಕೆಗೆ ಅವಕಾಶವಾಗುತ್ತದೆ, ಎಂದರ್ಥ. ಹಳೆಯ ಭಾವನೆಗಳ ವ್ಯಾಮೋಹ, ಹೊಸತಿಗೆ ವಿಲೋಮ ಕ್ರಿಯೆಯಾಗಿ ಸಾಗುತ್ತದೆ; ಹಾಗೆಯೆ ಹೊಸತು, ಹಳೆಯ ವಿಧಾನಗಳೊಡನೆ ವರ್ತಿಸುತ್ತದೆ. ಇವೆರಡರ ಸಮನ್ವಯವನ್ನು ಕಾಲಾಂತರದಲ್ಲಿ ಸಾಧಿಸಿದರೆ, ಚಳುವಳಿಗೆ ಒಂದು ಸಿದ್ಧಿ ಲಭ್ಯವಾಗುತ್ತದೆ. ಇವಕ್ಕೆ ಪರಿಮಾಣ ಸೂಚಕಗಳನ್ನು ಕೊಟ್ಟು ಪರೀಕ್ಷಿಸಬಹುದು.

ಸಾಂ.ಅ.ಒ X ಹೊ.ಕ. ಗಾ. = (ಸಿ) ಕಾ.ವ.ಪ

i. 1 x 1 =1 : ಅನುಭವಗಳ ಒತ್ತಡ ಮತ್ತು ಹೊಸ ಭಾವನಾನುಭವಗಳು ಸಮಪ್ರಮಾಣದಲ್ಲಿದ್ದು ಕಾಲಾವಧಿ ವ್ಯತ್ಯಾಸವೂ ಇಲ್ಲದೆ ಹೊಂದಾಣಿಕೆ ಆಗಿ ಬಿಡುವಂಥದ್ದು. ಇಲ್ಲಿ ಚಳುವಳಿಗೆ ಒದಗುವ ಪರಿಣಾಮ ಸೀಮಿತ ಅಥವಾ ಅತ್ಯಲ್ಪ ಫಲ.

ii. 2 x 1 = 2: ಇಲ್ಲಿ ಸಾಂಪ್ರದಾಯಿಕ ಒತ್ತಡ ಹೆಚ್ಚಾಗಿ ಹೊಸ ಪ್ರಯೋಗಗಳಿಗೆ, ಸ್ವಾಗತ – ಸ್ವೀಕರಣ ಇದ್ದರೂ, ಅಂತಾಗಿ ಹೆಚ್ಚು ಕಾಲ ಚಳುವಳಿ ನಡೆದರೂ ಪರಿಣಾಮವಾಗಿ ನಿರ್ದಿಷ್ಟ ಅಲ್ಪಫಲ ದೊರೆತರೂ ಅದು ಅಷ್ಟಕ್ಕೇ ತೃಪ್ತಿಗೊಳ್ಳುವುದಾಗಿಬಿಡುತ್ತದೆ.

iii. 1 x 3= 3: ಇಲ್ಲಿ ಸಾಂಪ್ರದಾಯಿಕ ನೆಲೆಯ ಒತ್ತಡ ಮೀರಿ, ಬೆಲೆ ಕುಸಿತ, ಆಕೃತ್ಯ, ಮೋಸ ಇತ್ಯಾದಿಗಳ ವಿರುದ್ಧ ಹೋರಾಡುವ ಹೊಸ ಹುರುಪು, ಜಾಗತೀಕರಣಗಳಿಗೆ ತೆರೆದುಕೊಳ್ಳುವಲ್ಲಿ ಚಳುವಳಿಯ ಕಾಲ ಹಾಗು ಕಾವು ದೀರ್ಘವಾಗಿ, ಫಲದ ಪ್ರಮಾಣವೂ ಹೆಚ್ಚು ಒದಗಬಹುದು. ಇಲ್ಲಿ ಪುರೋಗಾಮಿತ್ವದ ಸುಳುಹು ಇದೆ. ಇಲ್ಲಿ ಹೊಸ ಜಾಗೃತಿ – ಅನುಭವಗಳು ಚಾಲನೆಗೊಳ್ಳುತ್ತದೆ.

ಈ ಅನ್ವಯ ಕ್ರಮದಲ್ಲಿ (i) ಒಂದನೆಯದಕ್ಕೆ ಇರ್ವಿನ್ ನಾಲಾ ಚಳುವಳಿಯು ಉದಾ ಆಗಬಹುದು; (ii) ಎರಡನೆಯದಕ್ಕೆ ಕಾಗೋಡು ಸತ್ಯಾಗ್ರಹವನ್ನು ಉದಾ. ಆಗಿ ತೆಗೆದುಕೊಳ್ಳಬಹುದು. (iii) ಮೂರನೆಯದಕ್ಕೆ ಏಕೀಕರಣೋತ್ತರದ ಎಲ್ಲ ರೈತ ಚಳುವಳಿಗಳನ್ನು ಇಂದಿನವರೆಗೂ ಕೂಡಿಕೊಂಡು ಗಮನಿಸಬಹುದು. ಇವುಗಳ

ಜೊತೆಗೆ ಮಾನವ ಸಹಜ ಸ್ವಭಾವಗಳಾದ ಆವೇಶ, ಭ್ರಮೆ, ಆತಂಕ, ಆಸೆ ನಿರಾಸೆಗಳನ್ನು, ತಮ್ಮದೇ ಆದ ಹಾಗು ವಿವರಣೆಗೆ ನಿಲುಕದ ಕೆಲವು ಕಾರಣಗಳನ್ನು ನಿರ್ಲಕ್ಷಿಸುವಂತಿಲ್ಲ.

ಯಾವುದೇ ಚಳುವಳಿಯು ಎಷ್ಟೇ ಬಲವಾಗಿರಲಿ, ನಾಯಕರ ಆಶಾಗೋಪುರದ ಭಾಷಣಗಳಾಗಲಿ, ತಾತ್ಕಾಲಿಕವೆಂದರೂ ಸದ್ಯಕ್ಕೆ ತೃಪ್ತಿ ಎನಿಸಿದ ಪ್ರಯೋಜನಗಳನ್ನು ಒದಗಿಸಿದರೂ ಅದಕ್ಕೆ ಮಿತಿಗಳನ್ನು ಆತಂಕಗಳನ್ನು ರೈತರ ಆತ್ಮಹತ್ಯೆ, ಸ್ವಾಭಿಮಾನ ಕುಸಿತ, ಜೀವನ ಸ್ಥೈರ್ಯರಾಹಿತ್ಯಕ್ಕೆ ಸಾಮಾಜಿಕ ಮೌಲ್ಯಗಳ ಪತನವೂ ಒಡ್ಡುತ್ತವೆ ಎಂಬುದನ್ನು ಮರೆಯುವಂತಿಲ್ಲ. ಬದುಕಿನ ನಿರ್ವಹಣೆಗೆ ಸಾಮಾಜಿಕ ಸಹನೆ, ವಾತ್ಸಲ್ಯ, ಅಣಕರಹಿತ ಸ್ನೇಹ ದೊರೆತಾಗ, ಸಹಕಾರ ಸ್ಪಂದಿಸಿದಾಗ ಇಂಥ ಘಟನೆಗಳು ಸ್ಥಗಿತಗೊಳ್ಳಬಹುದು. ಮಾನಸಿಕ ಸಮತೋಲನ ಕಳೆದುಕೊಂಡ ವ್ಯಕ್ತಿಯೊಬ್ಬ, ಜೀವನದಲ್ಲಿ ಜುಗುಪ್ಸೆಗೊಂಡ ವ್ಯಕ್ತಿಯೊಬ್ಬ ಆತ್ಮಹತ್ಯೆ ಮಾಡಿಕೊಳ್ಳುವ ವಿಷಯವಂತು ರೈತನದಕ್ಕಿಂತ ಬೇರೆ; ರೈತನದರಲ್ಲಿ ತಾತ್ವಿಕ ಅಂತಿಮವಿದೆ.

ರೈತರ ಆತ್ಮಹತ್ಯೆಗಳ ಹಿಂದೆ ಕೌಟುಂಬಿಕ, ಸಾಮಾಜಿಕ, ಸಾಂಸ್ಕೃತಿಕ, ಆಡಳಿತಾತ್ಮಕ, ಮಾನಸಿಕ, ಪ್ರಾಕೃತಿಕ ಕಾರಣಗಳಲ್ಲದೆ, ಬದುಕಿನ ಮೌಲ್ಯಗಳ ಕುಸಿತಗಳ ಕಾರಣಗಳೂ ಇವೆ. ಇದನ್ನು ಕಟಿಬದ್ಧ ಸೂತ್ರವೆಂದು ಫಾರ್ಮುಲಾ ರೂಪಿಸಿ ಹೇಳುವುದು ಕಷ್ಟವಾದರೂ ಸಾಂಪ್ರದಾಯಿಕ ಹಾಗು ವರ್ತಮಾನೀಯ ಕಾರಣಗಳ ಸಂಯುಕ್ತತೆಯಲ್ಲಿ ಸದ್ಯದ ತೀರ್ಮಾನಕ್ಕೆ ಬರಬಹುದು, ಪರಿಹಾರ ಕಂಡುಕೊಳ್ಳಬಹುದು.

ಒಂದು ಕಾಲಕ್ಕೆ ಆತ್ಮಹತ್ಯೆ ಮಾನಸಿಕ ವಿಕೃತಿ ಎಂದುಕೊಂಡರೂ, ಅದು ಜುಗುಪ್ಸಿತ ವ್ಯಕ್ತಿಗೆ, ರೋಗ ನಿರಂತರ ಬಾಧಿತ ವ್ಯಕ್ತಿಗೆ ಮರಣದ ಹಕ್ಕು, ಎಂದು ಪ್ರತಿವಾದಿಸಿದುದೂ ಉಂಟು. ಬದಲು ಕಾಳಗದಲ್ಲಿ ವೈರಿಯನ್ನೆದುರಿಸಿ ಮಡಿದಾಗ ವೀರಮರಣ, ದೇವರ ಹರಕೆ, ಒಡೆಯನ ಪ್ರಾಣರಕ್ಷಣೆ, ನೆಂಟರ, ಸ್ತ್ರೀಯರ ರಕ್ಷಣೆ, ಪುಣ್ಯಪ್ರಾಪ್ತಿಗಾಗಿ ಪವಿತ್ರ ನದಿ ಪ್ರವೇಶ, ಊರಿನ ಕೆರೆ ತುಂಬಲೆಂದು ಕೆರೆಗೆ ಹಾರವಾಗಿ ಹೋದ ಸಂದರ್ಭಗಳನ್ನು ಆತ್ಮಬಲಿದಾನವೆಂದು ಸಾಹಿತ್ಯ, ಶಾಸನಗಳಲ್ಲಿ ಬಣ್ಣಿಸಿರುವುದುಂಟು. ಇಲ್ಲೆಲ್ಲ ಒಂದು ನಿರ್ದಿಷ್ಟ ಗುರಿ ಕಾಣುತ್ತದೆ. ವ್ಯಕ್ತಿಯೊಬ್ಬರು ಜನಾಂಗಕ್ಕೆ ಹಾನಿ ಮಾಡಿದರೆಂದರೆ ಆವೇಶ ಆಕ್ರೋಶಪೂರಿತ

ನಂಬಿಕೆಯಿಂದಲೋ, ಧರ್ಮಾಂಧತೆಯ ವೈಪರೀತ್ಯಕಾರಣವಾಗಿಯೋ ಸೇಡಿನಲ್ಲಿ ಮೈತುಂಬ ಸ್ಫೋಟಕ ತುಂಬಿಕೊಂಡು ಸ್ಫೋಟಿಸಿಕೊಳ್ಳುವವರನ್ನು 'ಆತ್ಮಹತ್ಯಾದಳ' ವೆಂದಿರುವುದುಂಟು. ಆದರೆ ರೈತರದು ಕೇವಲ ಆತ್ಮಹತ್ಯೆಯೇ, ಆತ್ಮಬಲಿದಾನವೇ? ಎಂಬ ಪ್ರಶ್ನೆ ಸದ್ಯ ದಿನನಿತ್ಯದ ಪತ್ರಿಕಾ ಸುದ್ದಿಗಳಿಂದ ಕಾಡುತ್ತದೆ.

ಇಂದಿನ ನಮ್ಮ ರೈತರದು ಆತ್ಮಹತ್ಯೆ ಹಾಗು ಆತ್ಮಬಲಿದಾನದ ಸಂಯುಕ್ತರೂಪವೆನಿಸುತ್ತದೆ. ಮೂಲಭೂತವಾಗಿ ಕುಟುಂಬದ ನಿರ್ವಹಣೆ, ಮಾನವಾಗಿ ಬದುಕಲಿಚ್ಛಿಸುವ ಬಾಳು ನಮ್ಮ ರೈತರಿಗೆ ಸಾಂಸ್ಕೃತಿಕವಾಗಿ ಬಂದ ಉಡುಗೊರೆ. ತನಗಿರುವ ಭೂ ಹಿಡುವಳಿಯಲ್ಲಿ ಬೆಳೆತೆಗೆದು, ಮಾರಿ, ಸಂಸಾರ ತೂಗಿಸುವಲ್ಲಿ ಕುಟುಂಬದ ಸರ್ವರ ಸಹಕಾರ, ಉತ್ತೇಜನ, ಹೊಣೆಗಾರಿಕೆಯನ್ನು ದುಡಿವ ರೈತ ನಿರೀಕ್ಷಿಸುತ್ತಾನೆ. ಮಕ್ಕಳ ಮದುವೆಗಾಗಿಯೋ, ಭೂಮಿಯಲ್ಲಿ ಹೆಚ್ಚು ಫಸಲು, ಹಣ ತರುವ ಬೆಳೆ ಬೆಳೆವ ಸಲುವಾಗಿಯೋ ಸಾಲ ಪಡೆದು, ಹಣ ಹಾಗು ದುಡಿಮೆಯನ್ನು ಒತ್ತೆ ಇಡುತ್ತಾನೆ. ಪ್ರಾಕೃತಿಕವೋ, ಸಾಮಾಜಿಕವೋ, ಬೆಲೆ ಕುಸಿತ, ಆಡಳಿತಾಧಿಕಾರಿಗಳ ಕ್ರೌರ್ಯವೋ – ಏನೋ ಕಾರಣದಿಂದ ಬೆಳೆಯೂ ಕೈಗೆ ಬರದೆ ಬಂದುದಕ್ಕೂ ಧಾರಣೆ ಸಿಗದೆ, ಬದುಕು ಬರಗೆಟ್ಟಾಗ ನಿರಾಶೆ ತಬ್ಬುತ್ತದೆ. ದುಡಿದರೂ ಸೋಲುಂಡ ಜೀವಕ್ಕೆ, ಜೀವನಕ್ಕೆ ಸಾಂತ್ವನವು ತೀರ ಕೊರತೆಯಾದಾಗ ನೆರವು ದೊರಕದಾಗ ಮಾನಸಿಕ ಬಳಲಿಕೆ, ಮಾನಸಿಕ ಅಘಾತದಿಂದ ಜೀವನದ ಸಂಕಷ್ಟವನ್ನು ಎದುರಿಸುವ ಪರ್ಯಾಯ ಮಾರ್ಗ ತೋರದೆ ಆತ್ಮಹತ್ಯೆ ಮಾಡಿಕೊಂಡಿರುವುದು ಕಾಣುತ್ತದೆ. ಕುಟುಂಬದವರೂ, ಅವನು ಮಾಡಿದ ಸಾಲಕ್ಕೆ ಬೆಳೆ ಧಾರಣೆ ಕುಸಿದು ಕಂಗೆಟ್ಟಿದ್ದಾಗ, ಬೆಂಬಲ, ಸಹಾನುಭೂತಿಯ ಮಾತನಾಡದೆ ಛೇಡಿಸಿದಾಗ ಆತ್ಮಹತ್ಯೆಯೊಂದೆ ಜುಗುಪ್ಸೆಯಲ್ಲಿ ಹಾಸಿದ ನಡೆಮುಡಿ ಎನ್ನಿಸಿಬಿಡುತ್ತದೆ. ಹಾಸನ ಜಿಲ್ಲೆಯ ರೈತನೊಬ್ಬನು ಆತ್ಮಹತ್ಯೆ ಮಾಡಿಕೊಂಡ ಬಗ್ಗೆ ಕೇಳಿಬಂದ ಮಾತು ಇದು. ಇದಲ್ಲದೆ ನೆರೆಯವರ ವೈಭೋಗ ನೋಡಿ ಸರಕು ಸಂಸ್ಕೃತಿಯ ಆಮಿಷಕ್ಕೆ ಸಹಜವಾಗಿ ಒಳಗಾದ ಕುಟುಂಬಸ್ಥರನ್ನು ಮೆಚ್ಚಿಸಲು ಬೆಳೆಗೆ ಬೆಲೆ ಬಂದೀತೆಂದು ಮಾಡಿದ ಸಾಲ ಲಕ್ಷಾಂತರವಾಗಿ ತೀರಿಸಲಾಗದೆ ಪ್ರಾಣಕಳೆದುಕೊಂಡ ರೈತರಿದ್ದಾರೆ. ಇಲ್ಲಿ ಮಾನವ ಸಹಜ ದೌರ್ಬಲ್ಯವೂ ಸೇರಿರಬಹುದು. ಅದನ್ನು ನಿರ್ದಿಷ್ಟ-ನಿಖರವಾಗಿ ಹೇಳುವುದು ಕಷ್ಟ.

ಅನೇಕ ರೀತಿಯ ಸಾಲ ಪಡೆದು ಬೆಳೆ ಬೆಳೆದರೂ ಸರಿಯಾದ ಬೆಲೆ ಸಿಗದೆ ಸಾಲ ತೀರಿಸಲಾಗದೆ, ಜಪ್ತಿ ಅವಮಾನ ಸಹಿಸಲಾಗದೆ ಮಾರುಕಟ್ಟೆಯ ಯಾರ್ಡ್‌ನಲ್ಲಿ

ವಿಷಸೇವಿಸಿ ನಿರಾಶೆಯಿಂದ ಜೀವ ಕಳೆದುಕೊಂಡವರಿದ್ದಾರೆ. ಅಂಥವರಿಗೆ ಸಾಲ ವಜಾ ಮಾಡಿದರೆ, ಸಾಮಾಜಿಕ ಅನುಕಂಪವು ಕ್ರಿಯಾತ್ಮಕವಾಗಿ ದೊರೆತರೆ ಜೀವ ಉಳಿಸಿಕೊಂಡಾರು, 15-20 ಎಕರೆ ಜಮೀನಿದ್ದರೂ ಬರಗಾಲ ಬಂದಾಗ ಬದುಕಿನ ನಿರ್ವಹಣೆಗಾಗಿ ಕಲ್ಲು ಹೊಡೆದೋ, ಗಾರೆಕೆಲಸಕ್ಕೋ ಹೋಗುವಲ್ಲಿ ಬದುಕಿ ಬಾಳಿದ ಜೀವಿಗಳಿಗೆ ತಮ್ಮ ಬಡತನ ಹೇಳಿಕೊಳ್ಳಲು ನಾಚಿಕೆಯಾಗಿ ವಲಸೆ ಹೋದೆಡೆಯೂ ಬದುಕಿಗೆ ಕುತ್ತು ಬಂದರೆ ಜೀವಕಳೆದುಕೊಳ್ಳುವುದೂ ಉಂಟು. ಗೇಣಿಯಾಗಿ ಬಂದ ಜಮೀನಿಗೆ ಕಟ್ಟಬೇಕಾದ ಕಂತಿನ ಹಣವನ್ನು ಕಟ್ಟಲು ಸಾಧ್ಯವಾಗದೆ ಜಮೀನು ಹರಾಜಿಗೆ ಬಂದರೆ ಅವಮಾನ ತಾಳಲಾರದೆ ಪ್ರಾಣವನ್ನು ಸಾವಿಗೆ ಒತ್ತೆ ಮಾಡಿದವರಿದ್ದಾರೆ. ಅದಾಗಿ ಸರಿಯಾದ ನೀರಾವರಿ ಸವಲತ್ತು, ಬೆಳೆದ ಬೆಳೆಗೆ ಸೂಕ್ತ ಬೆಲೆ ಸಿಕ್ಕಿದರೆ ಸಾಲಗಳ ವಜಾವನ್ನು ರೈತ ಕೇಳಲಾರ. ಬದುಕಿನ ಬಗ್ಗೆ ಸ್ಥೈರ್ಯ ಬೆಳೆಸಿಕೊಳ್ಳಬಲ್ಲ ಎನಿಸುತ್ತದೆ.

ಇಲ್ಲಿ ಶ್ರೇಯಭೋಗವು ಪ್ರೇಯಭೋಗಕ್ಕಿಂತ ಇಂದಿನ ಜಾಯಮಾನಕ್ಕೆ ಆದರ್ಶವಾಗಬೇಕಿದೆ. ಪ್ರೇಯಭೋಗವೆಂದರೆ ತಾನು ತನ್ನವರಷ್ಟಕ್ಕೆ ಬದುಕುವ, ಸರಕು ಭೋಗಾವಲಂಬಿತ ಹಾಗು ಅದೂರದರ್ಶಿತ್ವದ, ತತ್ಕಾಲೀನ ಪ್ರಯೋಜನವನ್ನು ಮಾತ್ರ ಮೀಸಲಾಗಿರಿಸಿಕೊಳ್ಳುವಂಥದು. ವ್ಯಷ್ಟಿ ಸೌಕರ್ಯದತ್ತವೇ ಗಮನವಿರಿಸಿ ಲಾಭಕಾತುರರಾಗುವುದು. ಇಲ್ಲಿ ನೆಮ್ಮದಿಯಂತೆ ತೋರುವ ಸದ್ಯದ ಬಾಳಿಗೆ ಮುಂದಿನ ಆತಂಕಗಳು ಗೋಚರವಾಗುವುದು ಕಷ್ಟ. ಅದೇ ಶ್ರೇಯಭೋಗವೆಂದರೆ ಸಹಬಾಳ್ವೆ ಹಾಗೂ ಸಮಷ್ಟಿ ಹಿತವನ್ನು ಅಂತರಂಗದ ಶೀಲವನ್ನಾಗಿ ಬೆಳೆಸಿಕೊಂಡು ಬಾಳಿ ನೆಮ್ಮದಿ ಅನುಭವಿಸುವುದಾಗಿದೆ. ಇಲ್ಲಿ ಪುರುಷ ಪ್ರಯತ್ನದ ಶೀಲವಂತಿಕೆ ಸಮಷ್ಟಿ ಶೀಲವಂತಿಕೆಯೊಡನೆ ಒಂದಾಗಿರುತ್ತದೆ. ತನಗೂ ಹಿತ; ಪರರಿಗೂ ಹಿತ, ತನಗೂ ಶ್ರೇಯ, ಪರರಿಗೂ ಶ್ರೇಯ ಎಂಬುದು ಈ ಭೋಗದ ಲಕ್ಷಣ. ರೈತರ ಬದುಕಿಗೆ ಬೇಕಾದ್ದು ಇಂಥ ಶ್ರೇಯಭೋಗ. ವರ್ತಮಾನದ ಅಗತ್ಯಗಳ ಹಿತಮಿತವಂತಿಕೆ, ಜಾಗತೀಕರಣದ ಸುವಿವೇಚಿತ ಸಂಪರ್ಕ, ನೆರೆಹೊರೆಯ ವ್ಯಾಪಾರ ವ್ಯವಹಾರ ವಹಿವಾಟುಗಳಲ್ಲಿ ನಿಷ್ಪಕ್ಷಪಾತ ಲಾಭ ಸೌಲಭ್ಯ ಪಡೆಯುವುದು, ಕಲಬೆರಕೆ, ತೂಕದ ಮೋಸ, ಅಪ್ರಮಾಣಿಕ ವರಸೆಗಳಿಂದ ದೂರವಿರುವುದು, ಶ್ರೇಯಭೋಗದಲ್ಲಿ ಕಾಣಬಹುದಾದಂಥ ಆರೈಕೆ. ನಮ್ಮ ರೈತರಿಗೆ ಇಂಥ ಶ್ರೇಯಭೋಗದ ಪರಿಸರವನ್ನು ಒತ್ತಾಸೆಗೊಳಿಸಬೇಕಾದ ಹೊಣೆ ಸಮಾಜದ್ದು, ಸರ್ಕಾರದ್ದು, ಜಗತ್ತಿನ ಜನತೆಯದು. ಅವರಿಗೆ ಅದೊಂದು ರೀತಿಯ ಶ್ರೇಯಯೋಗವು ಹೌದು. ಇದು ಕೇವಲ ಒಮ್ಮುಖ

ಕ್ರಿಯೆ ಅಲ್ಲ. ಪರಸ್ಪರ ಸಂಯೋಗ ಮುಖ. ಉಭಯ ವಿನಿಮಯ ಕ್ರಿಯೆ. ಇಲ್ಲಿನ ಪಾತ್ರಧಾರಿಗಳು: ರೈತರು, ಸಮಾಜ, ಸರ್ಕಾರ, ಪ್ರಜಾಪ್ರತಿನಿಧಿಗಳು, ಮಾರುಕಟ್ಟೆ ಹಾಗು ಜಗತ್ತು; ಮುಖ್ಯವಾಗಿ ಮಾನವ ಮನಸ್ಸು ಮತ್ತು ಮಾನವೀಯ ಸಂಸ್ಕೃತಿ.

ಇನ್ನು ಸಾಲಿಗರ ಅಮಾನವೀಯ ಹಿಂಸೆ ಅತೀಕಿರುಕುಳ ಹಾಗು ಸಾಲಗಾರರಿಂದ ಅವಮಾನ, ಸಾಲದ ಬಾಕಿಗೆ ಮನೆಜಪ್ತಿ, ಇವೆಲ್ಲ ಮಾನವ ಬಾಳುವೆಗೆ ಇಟ್ಟ ಶೂಲವಾಗುತ್ತವೆ. ಕೃಷಿಯ ಸುಧಾರಿತ ಪ್ರಯೋಗಗಳ ಬಗ್ಗೆ ಜ್ಞಾನ, ಶ್ರೀಮಂತ ರೈತರಿಗೆ ದೊರಕಿದಂತೆ, ರೈತನ ನಿಜ ಸಂಕಷ್ಟಗಳನ್ನು ಮಂಡಿಸಲು ಅದೃಷ್ಟವಂತ ಮುಂದಾಳುವಿಗೆ ದೊರಕುವ ಅವಕಾಶ, ಸಾಮಾನ್ಯ ರೈತನಿಗೆ ದೊರಕದಿರುವುದು; ಮುಕ್ತ ಆಮದು ನೀತಿಯಿಂದಾಗಿ, ಬಡವನಿರಲಿ, ಮಧ್ಯಮ ರೈತರೂ ಬೆಲೆ ಮತ್ತು ಬೆಳೆಯ ಗುಣಮಟ್ಟದೊಡನೆ ಸ್ಪರ್ಧಿಸಲು ಸಾಧ್ಯವಾಗದಂಥ ಸನ್ನಿವೇಶವಿರುವುದು; ಬೆಲೆ ನೀತಿ, ನಿಯಂತ್ರಿತ ಮಾರುಕಟ್ಟೆಗಳಲ್ಲಿ ತೂಕದ ಮೋಸ, ಭ್ರಷ್ಟಾಚಾರ ಇವೆಲ್ಲ ರೈತನ ಮಾನಸಿಕ ಹುರುಪನ್ನು ಸ್ಥಗಿತಗೊಳಿಸುತ್ತಿವೆ. ಇದು ಆತ್ಮಹತ್ಯೆಗೆ ದಾರಿ ಮಾಡಿದೆ. ಸಾಮಾನ್ಯವಾಗಿ ಶ್ರೀಮಂತ ರೈತರು ಹೆಚ್ಚಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ ಎಂಬುದು ಕೆಲವು ಕೃಷಿ ಅರ್ಥಶಾಸ್ತ್ರಜ್ಞರ ಅಭಿಪ್ರಾಯವಾಗಿದೆ. ಕಾರಣ ಲಕ್ಷಾಂತರ ಸಾಲ ಮಾಡಿಕೊಂಡು ಆರ್ಥಿಕ ಬೆಳೆಯನ್ನೆ ಪೂರ್ಣ ಬೆಳೆದು, ಬೆಲೆ ಏರಿಕೆ ನಿರೀಕ್ಷಿಸಿದವರಿಗೆ ಬೆಲೆ ಕುಸಿದಾಗ ಬದುಕಿಗೆ ಹಾನಿ ಮಾಡಿಕೊಳ್ಳುವ ಬಗೆ ಅದು. ಕೆಲವಡೆ ಇಡೀ ಅಂಥ ಕೃಷಿಕುಟುಂಬವೆ ಆತ್ಮಹತ್ಯೆಗೀಡಾಗಿದೆ. ಆದರೆ ಎರಡು ಎಕರೆ ತರಿ, ಅರ್ಧ ಎಕರೆ ಖುಷ್ಕಿ ಇದ್ದ ಅತಿಸಣ್ಣ ರೈತನೂ, ಬೆಳೆಬರದೆ, ಬೆಳೆಗೆ ಬೆಲೆ ಸಿಗದೆ ಆತ್ಮಹತ್ಯೆ ಮಾಡಿಕೊಂಡಿರುವ ಉದಾಹರಣೆಗಳೂ ಇವೆಯಲ್ಲ! ಅದಕ್ಕೇನ್ನೋಣ? ಬಹುಶಃ ಇದು ಆತ್ಮಬಲಿದಾನವೆನ್ನಿಸಬಹುದು ಹಾಗು ಇದು ಸಾಮಾಜಿಕ ಹಾಗು ಆಡಳಿತಾತ್ಮಕ ನಿರ್ಲಕ್ಷ್ಯಗಳಿಗೆ ರೈತ ತೋರಿದ ಪ್ರತಿಭಟನಾತ್ಮಕ ಬಲಿದಾನ ಪ್ರಜ್ಞೆಯಾಗಿ ಕಾಣುತ್ತದೆ. ಇದು ತನ್ನ ಸಾವು ಅವರನ್ನು ಕಾಡಿ ಅವರು ತಿದ್ದಿಕೊಳ್ಳಲಿ ಎಂದಿರಬೇಕು. ಅನುಕಂಪಿತ ಸಹಾಯಧನ ಮೃತ ರೈತನ ಸಂತ್ರಸ್ತ ಬಂಧುಗಳಿಗೆ ಸಕಾಲಕ್ಕೆ ವಿಳಂಬವಿಲ್ಲದೆ ದೊರಕುವಂತಾದರೆ ಅವರಿಗೆ ಎಷ್ಟೋ ಅನುಕೂಲವಾದೀತು. ಹೀಗೆ ಆತ್ಮಹತ್ಯೆಯ ಸಂದರ್ಭಕ್ಕೆ ಅವಕಾಶವಾಗದಂತೆ ಸಂಕಷ್ಟಕ್ಕೆ ಈಡಾಗಿರುವವರನ್ನು ಗುರುತಿಸಿ ಮೊದಲೇ ಪರಿಹಾರ ಸಬ್ಸಿಡಿ ಬೆಂಬಲ ನೀಡಿದರೆ ವಿಶ್ವಾಸ ಮೂಡಿಸಿದರೆ ಆತ್ಮಹತ್ಯೆ–ಆತ್ಮ ಬಲಿದಾನ ನಿಂತಾವು.

ಇನ್ನು ಅಮೇರಿಕೆಯಂಥ ದೇಶದಲ್ಲಿ ಮಾರುಕಟ್ಟೆಯ ಬೇಡಿಕೆಗನುಗುಣವಾಗಿ ವಸ್ತುವಿನ ಉತ್ಪಾದನೆಯನ್ನು ಸರಿದೂಗಿಸುವ ವ್ಯವಸ್ಥೆ ಇದೆ. ಬೆಳೆಯುವ ವಸ್ತುವೊಂದು ಅಗತ್ಯವಿಲ್ಲವೆಂದರೆ ರೈತರು ಅದನ್ನು ಬೆಳೆಯದಿರಲು ಹೇಳಿ ಅನುಗುಣ ಮೊತ್ತವನ್ನು ನೇರವಾಗಿ ನೀಡುವ ಕಾರಣ ಅವರ ಆದಾಯಕ್ಕೆ ಕೊರತೆಯಾಗುವುದಿಲ್ಲ. ಮಾರುಕಟ್ಟೆಯ ಹಿಡಿತವು ಯುರೋಪಿಯನ್ ರಾಷ್ಟ್ರಗಳಿಗಿದ್ದು ಅಲ್ಲಿನ ರೈತರಿಗೆ ಬಹಳ ಹೆಚ್ಚಿನ ಪ್ರಮಾಣದ ಸಬ್ಸಿಡಿ ದೊರೆತು ಕೃಷಿ ಉತ್ಪನ್ನಗಳ ಬೆಲೆಯನ್ನು ಕಡಿಮೆ ಮಾಡಿ ನಮ್ಮ ದೇಶದ ರೈತರ ಬೆಳೆಗಳ ಬೆಲೆಯ ಮೇಲೆ ಸ್ಪರ್ಧೆಯ ಸವಾರಿ ಮಾಡಿಸಿವೆ. ನಮ್ಮ ರೈತರಿಗೆ ಅತ್ಯಂತ ಕನಿಷ್ಠ ಸಬ್ಸಿಡಿ ದೊರೆಯುತ್ತಿದ್ದು ಅವರು ಈ ಸ್ಪರ್ಧೆಯಲ್ಲಿ ಹೇಗೆ ತೊಡಗಬಲ್ಲರು? ಡಬ್ಲ್ಯೂಟಿಓ ಮೂಲಕ ಅತ್ಯಂತ ಕನಿಷ್ಠ ಸಬ್ಸಿಡಿಯನ್ನು ನಮ್ಮಲ್ಲಿ ತೆಗೆದುಹಾಕಬೇಕೆಂದು ಒತ್ತಾಯ ಹಾಕುತ್ತಿರುವುದೇ ಆ ರಾಷ್ಟ್ರಗಳ ಸ್ವಾರ್ಥಹಿತಾಸಕ್ತಿಯೂ ಒಂದು ಕಾರಣವಿರಬಹುದು. ಆದರೆ ಜಾಗತೀಕರಣ ಜಗತ್ತಿನಲ್ಲಿ ನಾವು ಉಳಿಯಬೇಕೆಂದರೆ ಗುಣಾತ್ಮಕ ಸ್ಪರ್ಧೆ ನೀಡಲೇಬೇಕು. ಭಯೋತ್ಪಾದಕ ಸ್ಪರ್ಧಾ ಪ್ರೇರಕರಿದ್ದರೆ ಅದರ ಫಲವನ್ನು ಅವರು ಪಡೆಯಲೇಬೇಕಾಗುತ್ತದೆ. ನಮ್ಮ ನಡೆ ಅದಲ್ಲ. ಅಸ್ತಿತ್ವದ ಅರ್ಹತೆಯ ಮಾತು ಪರಸ್ಪರ ಸಮಬಲ, ಸಮಸನ್ನಿವೇಶವಿದ್ದಾಗ ಸಾಧು.

ಹೆಬ್ಬಾಳ ಕೃಷಿ ವಿಶ್ವವಿದ್ಯಾಲಯದ ಕೃಷಿ ಅರ್ಥಶಾಸ್ತ್ರ - ವಿಭಾಗ ಮುಖ್ಯಸ್ಥರಾಗಿದ್ದ ಡಾ॥ ಎಂ.ಜಿ.ಚಂದ್ರಕಾಂತ ಅವರು ಯುರೋಪಿಯನ್ ರಾಷ್ಟ್ರಗಳಂತೆ ಸದ್ಯ ಅಗತ್ಯವಿಲ್ಲದ ಬೆಳೆಯನ್ನು ಬೆಳೆಯದಂತೆ ಮಾಡಿ ಅದಕ್ಕನುಗುಣವಾದ ಹಣವನ್ನು ಎಲ್ಲ ರೈತರಿಗೂ ಒದಗಿಸುವಷ್ಟು ಸಿರಿವಂತಿಕೆ ನಮಗಿಲ್ಲ. ನಮ್ಮ ಭಾರತೀಯ ರೈತ ಎಲ್ಲ ಪ್ರಾಕೃತಿಕ ಸಾಮಾಜಿಕ, ಅಡ್ಡಿ ಆತಂಕಗಳ ನಡುವೆಯೂ ಸವಲತ್ತುಗಳ ಕೊರತೆಗಳ ನಡುವೆಯೂ ಬಹು ಪ್ರತಿಭಾವಂತ ಸಮರ್ಥ ಕೃಷಿಗಾರ. ಪಾಶ್ಚಿಮಾತ್ಯದೇಶಗಳಲ್ಲಿರುವಂಥ ಕೃಷಿ ಸೌಲಭ್ಯಗಳಿಲ್ಲದೆಯೂ ಬಂಪರ್ ಕ್ರಾಪ್ ಬೆಳೆದೂ ತೋರಿರುವಾತ. ಅಂದರೆ, ನಮ್ಮ ರೈತ ವರ್ಗದಲ್ಲಿ ಎಂಥ ಸನ್ನಿವೇಶದಲ್ಲಿಯೂ ಎದ್ದು ನಿಲ್ಲಬಲ್ಲ ಸಾಧಿಸಬಲ್ಲ ಸಮರ್ಥವರ್ಗವೂ (efficient sector)ಇದೆ; ಹಾಗೆಯೇ ಅಸಮರ್ಥವೆಂದುಕೊಂಡರೂ ಅರಿವ ಅವಕಾಶ ಒದಗಿದಂತೆ ಸುಧಾರಿತಗೊಳ್ಳಬಲ್ಲ ವರ್ಗವೂ ಇದೆ, ಎನ್ನುತ್ತಾರೆ. ಪೇಟೆಂಟ್ ಹಕ್ಕಿನ ದೃಷ್ಟಿಯಿಂದ ಹೇಳುವುದಾದರೆ ನಮ್ಮ ದೇಶದ 'ರಾಗಿ'ಯ ರುಚಿ ಹಾಗು ವಿಟಮಿನ್ 'ಸಿ' ಪುಷ್ಠಿ ಬೇರೆ ದೇಶದವುಗಳಲ್ಲಿ ತೋರಿಬರುವುದಿಲ್ಲವಾದ ಕಾರಣ ನಮ್ಮವರು ಮಾರುಕಟ್ಟೆಯಲ್ಲಿ

ಬೇರೆ ದೇಶದ ರಾಗಿಯನ್ನು ಅಗ್ಗದ ದರದಲ್ಲಿ ಒದಗಿದರೂ ಕೊಳ್ಳುವುದಿಲ್ಲ. ಅಂತಾಗಿ ಭಯವಿಲ್ಲ. ಆದರೆ expert zone ರೂಪುಗೊಂಡು ಎಕ್ಸಪರ್ಟ್ ಕ್ವಾಲಿಟಿಯನ್ನು ನಮ್ಮ ರೈತರು ನಿರ್ವಹಿಸುವ ರೀತಿಯಲ್ಲಿ ಮಾರುಕಟ್ಟೆಯ ಅಂತರ್ ವಿನ್ಯಾಸ ಹಾಗೂ ಮೂಲ ಸೌಲಭ್ಯಗಳು (infrastructure) ಅಥವಾ ಅನುಬಂಧೀ ಸೌಕರ್ಯಗಳು ನಮ್ಮ ದೇಶದಲ್ಲಿ ರೂಪುಗೊಳ್ಳಬೇಕು. ಆಗ ವಿದೇಶಿಯರ ಸ್ವಾಮ್ಯ ಚಲಾವಣೆಗೆ ಎದುರು ನಮ್ಮ ಗುಣಾತ್ಮಕ ಸ್ಪರ್ಧೆ ಉಂಟಾಗುತ್ತದೆ. ನಮ್ಮ ರೈತರು ಆಗ ಇಲ್ಲಿನ ಸಾಂಸ್ಕೃತಿಕ ಅನುಭವಗಳ ಹೊಡೆತಗಳನ್ನು ಹೊಸತುಗಳನ್ನು ನೀಡಬಲ್ಲರು. ಕೇವಲ ಆರ್ಥಿಕ ಬೆಳೆಗಳನ್ನು ಬೆಳೆಯುತ್ತ ಕೂರದೆ ಸರದಿಯಲ್ಲಿ ಜೀವನೋಪಯೋಗಿ ವಿವಿಧ ಪರ್ಯಾಯ ಬೆಳೆಗಳನ್ನು ಬೆಳೆಯುವಂತೆ ರೈತ ಮಾನಸಪ್ರಜ್ಞೆಯನ್ನು ಅರಳಿಸಬೇಕು, ಎಂದೂ ಡಾ॥ ಚಂದ್ರಕಾಂತ್ ಅಭಿಪ್ರಾಯ ಪಡುತ್ತಾರೆ. ಹಿಂದೆ ಈಸ್ಟ್ ಇಂಡಿಯಾ ಕಂಪೆನಿಯು ಭಾರತದ ಹತ್ತಿ ಬೆಳೆ ಹಾಗೂ ತಯಾರಿಕೆಗಳ ಉತ್ತಮ ಸಾಮರ್ಥ್ಯವನ್ನು ನಗಣ್ಯಗೊಳಿಸಿತಷ್ಟೆ. ಅನಂತರ ತನ್ನಲ್ಲಿಯ ಇಂಗ್ಲೆಂಡ್‌ನ ಹತ್ತಿ ಉತ್ಪನ್ನಗಳ ಗುಣಮಟ್ಟ ಹೇಳಿಕೊಳ್ಳುವಂಥಲ್ಲದಿದ್ದರೂ ಭಾರತದ ಮೇಲೆ ಭಾರತೀಯರ ಮೇಲೆ ಹೇರಿ ಇಲ್ಲಿನ ಕೈಕಸುಬುಗಳ ಆರ್ಥಿಕ ಸಾಮರ್ಥ್ಯವನ್ನು ತನ್ನ ಸ್ವಾರ್ಥಕ್ಕಾಗಿ ಬಲಿತೆಗೆದುಕೊಂಡಿತ್ತು. ಇಂಥ ಪರಿಸ್ಥಿತಿ ಇಂದಿನ ಜಾಗತೀಕರಣ ತ್ರಯಗಳಿಂದ ಉಂಟಾಗದೆ ವಿನಿಮಯ ಸ್ಪರ್ಧೆಗೆ ಅವಕಾಶವಾಗಬೇಕು. ಕೊಡು–ಕೊಳ್ಳು ಎನ್ನುವ ಪರಿಸರ ನಿರ್ಮಾಣವಾಗಬೇಕು.

ಇಂತೆಲ್ಲ ಸಾಂಸ್ಕೃತಿಕ ಇತಿಹಾಸವಾಗಿ ಹರಿದು ಬಂದ ರೈತ ಬದುಕು ಇಂದಿಗೂ ಸಾಂಪ್ರದಾಯಿಕ ಪದ್ಧತಿಗಳ ದಟ್ಟ ಆವರಣದಲ್ಲಿದ್ದರೂ, ಬದಲಾವಣೆಗಳು, ಸಂಘರ್ಷಗಳು ಆ ಬದುಕಿನ ಜಾಯಮಾನದಲ್ಲಿ ಕೂಡಿಯೇ ಬಂದುವು. ಇದು ಶಾಸನ, ಸಾಹಿತ್ಯ, ಇತಿಹಾಸದ ಕೃತಿಗಳಲ್ಲಿ, ಆಡಳಿತ ಸಂಬಂಧೀಕೃತಿಗಳಲ್ಲಿ ಆಯಾ ವರ್ತಮಾನದ ಜಾಯಮಾನಕ್ಕನುಗುಣವಾಗಿ ಪ್ರಕಟಗೊಂಡಿವೆ.

ಕ್ರಿ.ಶ. 1765ರ **ಕಾಡಸಿದ್ದೇಶ್ವರ** ಎಂಬ ವಚನಕಾರ ತನ್ನ ವಚನವೊಂದರಲ್ಲಿ; 'ಹೊನ್ನ ತೆತ್ತಲ್ಲದೆ ಹೊಲಮಾಡಬಾರದು! ಬಿಟ್ಟಿ ಬೇಗಾರವಿಲ್ಲದೆ ಊರೊಳಗಿರಬಾರದು ಸರಕಾರಕ್ಕೆ ರುಜು ಇಲ್ಲದೆ ರೈತನಾಗಬಾರದು! ಅದೆಂತೆಂದೊಡೆ; ಇಷ್ಟುಳ್ಳಾತನೆ **ಪಾಟ್ಯಾರೈತ!** ಇಲ್ಲದಾತ ದುಬ್ಬುಳಕ ಎಂದನಯ್ಯಾ ನಿಮ್ಮ ಶರಣ! ಕಾಡನೊಳಗಾದ ಶಂಕರಪ್ರಿಯ ಚನ್ನಕದಂಬಲಿಂಗ! ನಿರ್ಮಾಯ ಪ್ರಭುವೆ' ಎಂದಿದ್ದಾನೆ.

ರೈತನ ಕುರಿತೇ ವಿಶ್ಲೇಷಿಸಿರುವ ಈ ವಚನದಲ್ಲಿ, ಸ್ವತಂತ್ರ ಹೊಲ ಹೊಂದಿ ಸರ್ಕಾರ ಹಾಗು ಅದರಲ್ಲಿ ಬಿಟ್ಟಿ ಬೇಸಾಯ ಮಾಡಿ ಪ್ರತಿ ಸಹಾಯವಿರುವ ಮುಯ್ಯಾಳು ಪದ್ಧತಿಹೊಂದಿರುವವ, ಖಾತೆ ಹೊಂದಿರುವ ಉಳುಮೆ ಮಾಡುವ ಭೂ ಹೊಲದೊಡೆಯ ರಾಜಾರೈತ; ಹಾಗಿಲ್ಲದವ ಸಾಮಾನ್ಯ (ನಾಡಾಡಿ) ರೈತ ಎಂಬ ಅರ್ಥ ಇಲ್ಲಿದೆ. *ಇದೊಂದು ರೀತಿ ಆಧುನಿಕ ರೈತನ ಚಿಂತನದ ವ್ಯಾಖ್ಯಾನ ಹಾಗು ವಿವೇಚನಾತ್ಮಕ ರೈತ ಬಾಳುವೆಯ ಬಗೆ ಎನಿಸುತ್ತದೆ; 18ನೆ ಶತಮಾನದ ರೈತ ಮನೋಭಿಲಾಶೆಯ ಸ್ಪಂದನೆ ಎನಿಸುತ್ತದೆ.

17–18 ನೇ ಶತಮಾನದ ರೈತ ಹೋರಾಟಗಳಲ್ಲಿ ವಿದೇಶಿ, ಸ್ವದೇಶಿ ಆಡಳಿತದ ಎದುರು ಅಸಹಾಯಕ ರೈತರ ಹೋರಾಟದ ವಿವಿಧ ಮುಖಗಳು ಕಾಣಬರುತ್ತವೆ. ಆದರೆ ಅಲ್ಲಿ ದಬ್ಬಾಳಿಕೆ, ದರ್ಪ, ಶೋಷಣೆ, ಸ್ವಾರ್ಥಭೋಗಜೀವಿಗಳೆದುರು ಆ ಹೋರಾಟಗಳು ಬಂಡಾಯದ ಹೆಸರಿನಲ್ಲಿ ರೂಪುಗೊಂಡಿದ್ದು ಕಾಣಬರುತ್ತದೆ. ಪಕ್ಷ ಸಿದ್ಧಾಂತಗಳು, ಸಾಮಾನ್ಯ ರೈತರಲ್ಲಿ ಹೋರಾಟ ಕಸುವುಗಳನ್ನು ಆಳವಾಗಿ ಬೆಳೆಸಿದ್ದುವು ಎನ್ನುವುದಕ್ಕಿಂತ ಮೊದಮೊದಲು ಸಾಮೂಹಿಕ ವಿರೋಧ ವರ್ತನೆಗಳೇ ಆ ಹೋರಾಟದ ತಳಹದಿಯಲ್ಲಿದ್ದುವೆನಿಸುತ್ತದೆ. 20 ನೇ ಶತಮಾನದಲ್ಲಿ ಚಳುವಳಿಯ ಸ್ಪಷ್ಟ ಚಹರೆಗಳು, ರೈತಹೋರಾಟಗಳಲ್ಲಿ ಬಹುಶಃ ಓದಿನಜ್ಞಾನ, ಸಭೆ, ವಿಚಾರ ಸಂಕಿರಣ ಸಮ್ಮೇಳನ ಸಂಘಟನೆಗಳು ಒದಗಿಸಿದ ಅರಿವುಗಳಿಂದಾಗಿ, ನಿಖರವಾಗಿ ಕಾಣಿಸಿಕೊಳ್ಳುತ್ತವೆ. 20 ನೇ ಶತಮಾನದ ಅಂತ್ಯದ ವೇಳೆಗೆ ಅರ್ಥಾತ್ ಹೊಸ ಸಹಸ್ರಮಾನದ ಆರಂಭ ಕಾಲದಲ್ಲಿ ನಮ್ಮ ರೈತರ ಬದುಕು, ಜಾಗತೀಕರಣ, ಉದಾರೀಕರಣದ ಉಸುಬಿಗೆ ಸಿಕ್ಕಿ ಬಹಳ ಸ್ಥಿತ್ಯಂತರಕ್ಕೆ ಈಡಾಯಿತು. ಬೆಳೆಹಾನಿ, ಸಾಲದ ಭಾರ, ವಿದೇಶಿ ಉತ್ಪನ್ನಗಳ ಸುಲಭ ಬೆಲೆ, ಮುಕ್ತ ಆಮದು ನೀತಿ, ಡಬ್ಲ್ಯೂಟಿ.ಓ.ನ ಹಿಡಿತಕ್ಕೆ ಸಿಕ್ಕಿ ಭಾರತವು ಅಗತ್ಯ ರಫ್ತುಸಬ್ಸಿಡಿಯಿಂದ ವಂಚಿತಗೊಂಡ ಕಾರಣ ಒದಗಿದ ಸಂಕಷ್ಟ, ಪ್ರಾಕೃತಿಕ ವಿಕೋಪಗಳ ಜೊತೆಗೆ ಅಧಿಕಾರಿಗಳ ನಿರ್ಲಕ್ಷ್ಯದಿಂದಾಗಿ ಕೃಷಿಕ್ಷೇತ್ರದ ಬೆಳವಣಿಗೆಯ ದರ ಕುಂಠಿತಗೊಂಡಿದ್ದು, ಬೆಲೆ ಕುಸಿತಗಳು, ಇತ್ಯಾದಿಗಳು ನಮ್ಮ ರೈತರ ಆತ್ಮಹತ್ಯೆ, ಬೀದಿಗೆ ಆಲೂಗಡ್ಡೆ, ಟ್ಯೊಮೊಟೋ ಸುರಿದು, ತೆಂಗಿನರಾಶಿ ಸುಟ್ಟು, ನೀರಾ–ಹೊಂಬಾಳೆ ಚಳುವಳಿ, ಇತ್ಯಾದಿಗಳು ರಾಸ್ತಾ ರೋಕೋ ಚಳುವಳಿಯ ಆಯಾಮಗಳನ್ನು ವಿಸ್ತರಿಸಿ ನಡೆದ ರೈತ ಪ್ರತಿಭಟನೆಯ ಪ್ರಕಾರವಾಗಿವೆ.

---

* ಡಾ.ಎಸ್.ವಿದ್ಯಾಶಂಕರ್, (ಸಂ), **ಸ್ವಪ್ನಲೋಕ**. ಸಂ.2. ಸಂ.1 ಮಾರ್ಚ್ 2003.

ಇನ್ನು ಪೂರಕ ಅಧ್ಯಾಯಗಳಲ್ಲಿ ರೈತ ಚಳುವಳಿಯ ಹಿನ್ನೋಟ ಮುನ್ನೋಟಗಳು ರೈತ ಚಳುವಳಿಯ ಹಾಡುಗಳು; ಭೂಸುಧಾರಣೆಗಳ ತಿದ್ದುಪಡಿ ವಿಧೇಯಕ; ಕೃಷಿಪಾಸ್ ಪುಸ್ತಕ; ಸಕ್ಕರೆ ಕಾರ್ಖಾನೆಗಳಿಂದ ರೈತರಿಗೆ ಬರಬೇಕಾದ ಬಾಕಿ ಬಗ್ಗೆ, ರೈತರುಗಳ ಮೇಲೆ ವಿವಿಧ ಕಾರಣಗಳಿಂದ ಆದ ಗೋಲಿಬಾರ್ ಕುರಿತ ವಿಧಾನಸಭಾ ಚರ್ಚೆಗಳು; ಬಾಗೂರು ನವಿಲೆ ಪ್ರದೇಶದ ರೈತರ ಸಮಸ್ಯೆಗಳ ಕುರಿತು ಉಭಯ ಸದನಗಳ ಮತ್ತಷ್ಟು ಚರ್ಚೆಗಳು; ತೊಗರಿ, ಟೊಮೊಟೊ, ಆಲೂಗಡ್ಡೆ, ಮೆಣಸಿನಕಾಯಿ, ಭತ್ತ, ಮೆಕ್ಕೆಜೋಳ, ತೆಂಗು, ಎಣ್ಣೆಕಾಳು, ಅಡಿಕೆ, ಕಾಫಿ, ತಂಬಾಕು, ರೇಷ್ಮೆ ಇತ್ಯಾದಿ ಬೆಳೆ ಧಾರಣೆ ಕುಸಿತ ಕುರಿತು ಉಭಯ ಸದನಗಳ ಚರ್ಚೆ ಹಾಗೂ ಪತ್ರಿಕಾ ವರದಿಗಳು; ರೈತರ ಆತ್ಮಹತ್ಯೆ ಕುರಿತಂತೆ ಉಭಯ ಸದನಗಳ ಚರ್ಚೆ, ಜಂಟಿ ಸದನ ಸಮಿತಿ ವರದಿ, ವಿಚಾರ ಗೋಷ್ಠಿಯ ವಿವರಗಳು, ಡಾ. ವೀರೇಶ್ ಸಮಿತಿ ವರದಿ, ರೈತರ ಆತ್ಮಹತ್ಯೆಗಳ ಸಂದರ್ಭದಲ್ಲಿ ಪರಿಹಾರ, ಸಂದರ್ಶನಗಳು, ಮನೋವೈಜ್ಞಾನಿಕ ವಿವೇಚನೆ ಇತ್ಯಾದಿಗಳ ಮೂಲಕ ರೈತರ ಆತ್ಮಹತ್ಯೆಯ ವಿವಿಧ ಆಯಾಮಗಳ ಸುದೀರ್ಘ ಮಂಡನೆ; ವಿಶ್ವವ್ಯಾಪಾರ ಸಂಘಟನೆಯ ಕುರಿತ ಪರ ಮತ್ತು ವಿರೋಧ ಪ್ರತಿಕ್ರಿಯೆಗಳು ಹಾಗೂ ವಿಶ್ಲೇಷಣೆ; ನೀರಾ ಚಳುವಳಿಯ ವಿವರಗಳು: ಕಾವೇರಿ ಚಳುವಳಿಯ ಹಿನ್ನೋಟ ಮುನ್ನೋಟಗಳು; ಕಾವೇರಿ ಐತೀರ್ಪು ಪ್ರಕಟನೆಯ ನಂತರ ನಡೆದ ರೈತರ ಹಾಗೂ ರೈತರ ದನಿಯಾಗಿ ನಗರದ ನಾಗರೀಕರ ಎಲ್ಲ ವಲಯಗಳು ರಾಜ್ಯಾದ್ಯಂತ ನಡೆಸಿದ ವೈವಿಧ್ಯಮಯ ಚಳುವಳಿಯ ಪ್ರಕಾರಗಳು; ರೈತರೊಡನೆ ಆತ್ಮಹತ್ಯೆ ಸಂಬಂಧ ಸರ್ಕಾರವು ಬೆಂಗಳೂರಿನಲ್ಲಿ ನಡೆಸಿದ ಪ್ರತ್ಯಕ್ಷ ಸಂವಾದ; ವಿಶೇಷ ಆರ್ಥಿಕವಲಯದ ಸಾಧಕ ಬಾಧಕಗಳು ಹಾಗೂ ರೈತ ಚಳುವಳಿ ಹಾಗೂ ಸಾಂತ್ವನ ಪ್ರಕ್ರಿಯೆ ಇತ್ಯಾದಿಗಳನ್ನು ವಿಶದೀಕರಿಸಿ ನೀಡಲಾಗಿದೆ. ಮುಖ್ಯವಾಗಿ ಚಳುವಳಿಯ ಯಾವುದೇ ಆಯಾಮವು ರೈತಹಿತವನ್ನು ಬಯಸುವ ಮಾಧ್ಯಮವಾಗಿದೆ. ಅದೊಂದು ಚಲನಶೀಲ ಪ್ರಕ್ರಿಯೆ. ಅದರದು ಸತತ ಸವಾಲುಗಳಿಗೆ ನಿರಂತರ ಹೋರಾಟದ ಜಂಗಮ ರೂಪ. ಆ ಪ್ರಕ್ರಿಯೆಗೆ ಒದಗುವ ಸಾಂತ್ವನವೆಂದರೆ ಇಂದಿನ ಸಂಕೀರ್ಣ ಜಾಗತಿಕ ಸಮಸ್ಯೆಗಳಿಗೆ ನಮ್ಮ ರೈತರು ಸ್ವಾವಲಂಬಿಯಾಗಿ ಎದುರಿಸುವ ಹಾಗೂ ಪರಿಹಾರ ಕಂಡುಕೊಳ್ಳುವ ವಿಧಾನವೇ ಆಗಿದೆ. ಇಂದು **ತುತ್ತು, ಸೂರಿನಡಿ ಬದುಕು,** ಅಷ್ಟಕ್ಕೆ ಸೀಮಿತವಾಗದ ರೈತರ ಬಾಳ್ವೆ ದೇಶೀಕರಣದ ಉಳಿವಿನಲ್ಲಿ ಕೃಷಿ ಸಂಸ್ಕೃತಿಯ ದಿಟ್ಟತನವನ್ನು ತೋರುವ ವ್ಯಕ್ತಿತ್ವದ ಮುಖವಾಗಿದೆ ಎಂಬುದನ್ನರಿಯಬೇಕು. ಜಾಗತಿಕ ಜಗತ್ತಿಗೆ ನಮ್ಮ ರೈತರು ತೋರಬೇಕಾದ ಪುರುಷೋತ್ತಮತೆ; ರೈತ ಮಹಿಳೆಯರು ತೋರಬೇಕಾದ

ಸ್ತ್ರೀಯೋತ್ತಮತೆ ಅವರ ಮುಂದಿರುವ ಸಂಕೀರ್ಣ ಜಾಗತಿಕ ಸವಾಲು. ಅವರು ಈ ನಿಟ್ಟಿನಲ್ಲಿ ಸೋಲುವುದಿಲ್ಲವೆಂಬುದು ಈ ದೇಶದ ಬೇಸಾಯ ಸಂಸ್ಕೃತಿಯ ದಿಟ್ಟತನವೆ, ಸಾಮರ್ಥ್ಯವೆ ಸಾಕ್ಷಿ.

ನಮ್ಮಲ್ಲಿಯ ರೈತ ಚಳುವಳಿಗಳು ನಮ್ಮ ಗ್ರಾಮೀಣ ಪ್ರದೇಶದಲ್ಲಿ ಕೆಲಸಾಟ್ಟಿಗೆ (ಉಪ ನಗರಗಳು) ನಗರೀಕರಣ ಪ್ರಕ್ರಿಯೆಯನ್ನೂ ಹುಟ್ಟುಹಾಕಿವೆ. ಮಾರುಕಟ್ಟೆಯ ಉಪಕೇಂದ್ರಗಳು, ಕೃಷಿ ಉತ್ಪನ್ನಗಳ ಸಾಗಾಣಿಕೆಯ ಯಂತ್ರಚಾಲಿತ ವಾಹನ ಸೌಕರ್ಯ, ಆರಕ್ಷಕಠಾಣೆ, ವ್ಯವಸಾಯೋತ್ಪನ್ನ ಸಹಕಾರ ಸಂಘ, ಬ್ಯಾಂಕ್, ರೈತಸಭೆ-ವಿಚಾರಸಂಕಿರಣಗಳ ಏರ್ಪಾಟು, ಗಣಿಗಾರಿಕೆಗೆ ವಿರೋಧ, ಪರಿಸರ ಜಾಗೃತಿ, ಗೃಹವಾಸ್ತು ವೈವಿಧ್ಯ, ವಿದ್ಯಾಕೇಂದ್ರಗಳು, ನಬಾರ್ಡ್‌ಯೋಜನೆಯ ಸೌಲಭ್ಯ, ಇತ್ಯಾದಿಗಳ ಮೂಲಕ ಇದು ಕಾಣಬರುತ್ತದೆ. ಈ ನಗರೀಕರಣ ಪ್ರಕ್ರಿಯೆಯಲ್ಲಿ ಆರ್ಥಿಕ ಸಬಲತೆಯನ್ನು ಕಂಡುಕೊಂಡರೂ ಗ್ರಾಮೀಣ ಸಂಸ್ಕೃತಿಯ ಪ್ರಾಮಾಣಿಕ ಜಾಂಯುವಮಾನವೂ ಕಾಣಬರುತ್ತದೆ. ಹಳ್ಳಿಗರ ಭಾವನೆಗಳನ್ನು ದುರುಪಯೋಗಪಡಿಸುಕೊಂಡಾಗ ಅದಕ್ಕೆ ಪ್ರತಿಭಟಿಸಿದ್ದೂ ಇದೆ. ಆಡಳಿತದ್ದೋ ಅಧಿಕಾರಗಳದ್ದೋ, ರಾಜಕೀಯ ಪಕ್ಷದ್ದೋ ಕಾರಣದಿಂದ ಅನ್ಯಾಯ ಅಪಚಾರವಾದಾಗ, ಸಹನೆಯ ಕಟ್ಟೆ ಒಡೆದು ಪ್ರತಿಭಟಿಸಿದರೂ, ಸಮಸ್ಯೆ ಬಗೆಹರಿದಾಗ ಸಾಂಸ್ಕೃತಿಕ ಸಂಯಮವನ್ನು ರೈತರು ತೋರಿದ್ದಾರೆ. ಅವರ ಶಾಸಕ ಪ್ರತಿನಿಧಿಗಳೂ ಈ ಬಗ್ಗೆ ಎಚ್ಚರದಿಂದ ಸ್ಪಂದಿಸಿದ್ದಾರೆ. ಅಪವಾದಗಳಿರಬಹುದು. ಆದರೆ ಅವೇ ಮುಖ್ಯ ಅಲ್ಲ.

1991 ರಲ್ಲಿಯೆ ಬಹುರಾಷ್ಟ್ರೀಯ ಕಂಪೆನಿಗಳಿಗೆ ಮಣಿದು ಹೊಸ ಆರ್ಥಿಕ ನೀತಿಯನ್ನು ಜಾರಿಗೆ ತಂದು ವಿದೇಶಿ ಆಮದು ಉತ್ಪನ್ನಗಳಿಗೆ ಮುಕ್ತ ಅವಕಾಶವಾದ ಕಾರಣವೇ ತಮ್ಮ ರೈತರ ಶೋಚನೀಯ ಅಳಲಿಗೆ ನಾಂದಿ ಬಿತ್ತು ಎಂಬ ಅಭಿಪ್ರಾಯವಿದೆ. ಸರಾಸರಿ ಉತ್ಪನ್ನದ ಖರ್ಚು ಅಮೆರಿಕಾ, ಕೆನಡಾ, ಆಸ್ಟ್ರೇಲಿಯಾ, ನ್ಯೂಜಿಲೆಂಡ್, ಬಲ್ಗೇರಿಯ, ಚೀನಾ ವಿಯೆಟ್ನಾಂ ಇಂಡೋನೇಷ್ಯಾ ಮುಂತಾದ ದೇಶಗಳಲ್ಲಿ ತುಂಬ ಕಡಿಮೆ ಇದ್ದು ಆ ದೇಶಗಳ ಉತ್ಪಾದನೆ ನಮ್ಮ ಮಾರುಕಟ್ಟೆ ಬಂದಾಗ ನಮ್ಮ ರೈತರ ಸ್ಥಿತಿ ಕಂಗಾಲುಗೊಳ್ಳುತ್ತದೆ. ದರ ಸುಲಭ, ಗುಣಮಟ್ಟ ಹೆಚ್ಚು. ಹೀಗಿರುವಲ್ಲಿ ಉತ್ಪಾದನಾ ಖರ್ಚಿಗಿಂತಲೂ ಕಡಿಮೆ ಬೆಲೆಗೆ ನಮ್ಮ ರೈತರು ತಮ್ಮ ಸರಕುಗಳನ್ನು ಮಾರುವ ಅಸಹಾಯಕತೆ ಒದಗಿ ಅವರ ಬದುಕು ಹಾದಿಗಾಣದಾಗುತ್ತದೆ, ಎಂಬ ವಿಶ್ಲೇಷಣೆಯೂ ನಡೆದಿದೆ (ವಿಜಯಕರ್ನಾಟಕ,

ಕೃಷಿ ವಾಣಿಜ್ಯ ಮರವಣಿ). ಈ ಹಿನ್ನೆಲೆಯನ್ನು ಗಮನಿಸಿದರೆ ಸದಸ್ಯ ರೈತರ ಹೋರಾಟ, ಆತ್ಮ ಬಲಿದಾನ, ಬೀದಿಯಲ್ಲಿ ಎಸೆದ ಬೆಳೆದ ಸರಕುಗಳ ಚೆಲ್ಲಾಟವನ್ನು ಸಾರ್ವಜನಿಕ ಪ್ರಜ್ಞಾಸವಾಲಿನಂತೆಯೆ ಕಾಣುತ್ತದೆ. ಆಡಳಿತದ ಪ್ರಜ್ಞಾಸ್ತರಗಳನ್ನು ಸಾರ್ವಜನಿಕರೂ ಕೆದಕಲಿ ಎಂಬ ಮನೋಧರ್ಮವೂ ಇಲ್ಲಿ ಕಾಣುತ್ತದೆ.

ನಮ್ಮ ನಾಡಿನ ರೈತ ಸಮುದಾಯ ಒಂದು ಸಂಕ್ರಮಣಾವಸ್ಥೆಯಲ್ಲಿದೆ. ಒಂದು ಕಡೆ ಜಾಗತೀಕರಣ, ಉದಾರೀಕರಣ, ಖಾಸಗೀಕರಣ ನಡುವೆ ಸಿಕ್ಕಿ ಆ ಬಗ್ಗೆ ಖಚಿತ ಪರಿಣಾಮ ಜ್ಞಾನ ಒದಗಿರುವುದು; ಇನ್ನೊಂದು ಕಡೆ ತನ್ನ ಅಸ್ತಿತ್ವವನ್ನು ಗಟ್ಟಿಗೊಳಿಸಿಕೊಂಡು ಸ್ವದೇಶಿ ಪ್ರಯತ್ನವನ್ನು ಜಾಗತೀಕರಣದ ಸವಾಲಿನೊಡನೆ ಸಮಸಮವಾಗಿ ಸ್ಪರ್ಧಿಸಿ ಸಂವಾದ ಮಾಡುವುದು; ಇಂಥ ವಿನಿಮಯ ನೆಲೆಯಲ್ಲಿ ಸಂದಿಗ್ಧಗಳನ್ನು ತೊಡೆದುಕೊಳ್ಳುವ ಶಕ್ತಿಗಳಿಸಿದಾಗ, ಆತ್ಮಹತ್ಯೆಗಳ, ನಿರಾಸೆಗಳ, ಸಂದರ್ಭಗಳು, ಅಳಿಯುವಂತಾಗುತ್ತವೆ. ಇದಲ್ಲದೆ ಸಾಮಾನ್ಯವಾಗಿ, ರೈತಾಪಿ ಹೋರಾಟವಾಗಲಿ, ಪ್ರತಿಭಟನೆಯಾಗಲಿ ಆತ್ಮ ಬಲಿದಾನದಂಥ ಪ್ರಜ್ಞಾಪ್ರತಿಭಟನೆಯ ಉದಾಹರಣೆಯಾಗಲಿ, ಸ್ಥಳೀಯ ಹಾಗು ಪ್ರಾದೇಶಿಕ ಮಟ್ಟದಲ್ಲಿ ನಡೆದು ರಾಜ್ಯದ ಜನತೆಯ ಗಮನಕ್ಕೆ ಬಾರದೆ ಹೋಗಬಹುದು. **ಅಂಥ ಸಂದರ್ಭಗಳ ಪ್ರತ್ಯಕ್ಷ ಸಾಕ್ಷಿಗಳಾಗಿಯೋ, ಕ್ಷೇತ್ರಕಾರ್ಯಮಾಡಿ ಘಟನಾವಳಿಗಳ ಮುಖವಾಣಿಯಾಗಿಯೋ ನಿಲ್ಲುವವರು ಚರ್ಚೆ ಪರಿಹಾರಗಳಿಗೆ ಕಾರಣರಾಗುವವರು ಉತ್ತರದಾಯಿತ್ವ ಪಡೆಯುವವರು ಪಂಚಾಯಿತಿ ಮಟ್ಟದ ಗ್ರಾಮ ಮುಖಂಡರಿಂದ ಹಿಡಿದು ನಮ್ಮ ಮಾನ್ಯ ಶಾಸಕರ ವರ್ಗದ ಸದಸ್ಯರೇ ಆಗಿರುತ್ತಾರೆ.** ಅವರ ಕಾಳಜಿ, ತುಡಿತ, ನೊಂದ ಜೀವಿಯ ನೋವಿಗೆ ಒದಗುವ ಸಾಂತ್ವನವಾಗಬೇಕು; ಆಗುತ್ತಿದೆ. ಈಚೆಗೆ ಇದಲ್ಲದೆ ಕೆಲವು ಮಠಮಾನ್ಯಗಳು (ರಂಭಾಪುರಿ; ಸಿದ್ಧಗಂಗಾ ತರಳಬಾಳು;ಹಾಲಕೆರೆ; ಸುತ್ತೂರು ಸಂಸ್ಥಾನ ಮಠಗಳು ಇತ್ಯಾದಿ) ರೈತರ ಸಮಸ್ಯೆಗಳ ಪರಿಹಾರಾರ್ಥ ಶಿಬಿರ, ವಿಚಾರಗೋಷ್ಠಿ ತಜ್ಞರಿಂದ ಮಾರ್ಗದರ್ಶನ ಮಾಡಿಸುತ್ತಿರುವುದೂ ಸ್ವಾಗತಾರ್ಹವಾಗಿದೆ. ಇಂಥ ಹೋರಾಟಗಳ, ಸಮಸ್ಯೆಗಳ, ಶಾಸಕ ಪ್ರಯತ್ನಗಳ, ಪರಿಹಾರಗಳ ಕುರಿತು, ತಾಲ್ಲೂಕು-ಜಿಲ್ಲಾ ಹಾಗು ರಾಜ್ಯಮಟ್ಟದ ಸಾಹಿತ್ಯ ಹಾಗು ಸಾಹಿತ್ಯೇತರ ಸಮ್ಮೇಳನಗಳು ತರುವ ಸ್ಮರಣ ಸಂಚಿಕೆಗಳಲ್ಲಿ, ಗ್ಯಾಸೆಟಿಯರ್‌ಗಳಲ್ಲಿ ಶಾಲಾ ಪಠ್ಯಗಳಲ್ಲಿ ದಾಖಲಾಗಬೇಕು. ಇದರಲ್ಲಿ ಮಣ್ಣಿನ ವಾಸನೆ ಹೆಚ್ಚು ಪುಷ್ಟವಾಗಿರಲು ಹೋರಾಟದ ಸಮಸ್ಯೆಗಳ ಮೂಲಚಿತ್ರ ದೊರಕುತ್ತದೆ; ಆ ಬದುಕಿನ ನೆಲೆ ತಿಳಿಯುತ್ತದೆ.

ವಿಧಾನಸಭೆ-ಪರಿಷತ್ತುಗಳ ನಡವಳಿಕೆಗಳನ್ನು ಗಮನಿಸಿದರೆ ರೈತ ಹೋರಾಟದ ರೀತಿಗಳೆಲ್ಲ ಅಲ್ಲಿ ಮಾರ್ದನಿಗೊಂಡಿರುವುದೂ, ಪರಿಹಾರಗಳತ್ತ ಧಾವಿಸಿರುವುದೂ ಕಾಣಬರುತ್ತದೆ. ಆದರೆ ರೈತರ ವರ್ತನೆಗಳನ್ನು ಗಮನಿಸಿದರೆ ಆಡಳಿತವು ಆ ಪ್ರಯತ್ನಗಳಲ್ಲಿ ಹೆಚ್ಚು ಹೆಚ್ಚು ತೊಡಗಿಕೊಂಡು ನಡೆಯಬೇಕೆಂಬ ಸೂಚನೆ ದೊರೆಯುತ್ತದೆ. ಮಾಡಬೇಕಾದ ಸ್ವದೇಶಿ ಚಿಂತನೆಯ ಚಾಲನೆಗಳತ್ತ, ಬೊಟ್ಟು ಮಾಡಿ ತೋರಿಸುತ್ತವೆ. ಜಾಗತೀಕರಣದ ಸವಾಲುಗಳನ್ನು ಎದುರಿಲು ರೈತರನ್ನು ಸಿದ್ಧಗೊಳಿಸುವ ಪ್ರಯತ್ನವನ್ನು ಸ್ವದೇಶಿ ನೆಲೆಗಟ್ಟಿನಲ್ಲಿ ಮಾಡುವ ಅಗತ್ಯ ಕಾಣುತ್ತದೆ. ಬೆಳೆಯ ಗುಣಮಟ್ಟ, ಉತ್ಪನ್ನ ಖರ್ಚುಗಳನ್ನು ಸಮತೋಲನಿಸುವಲ್ಲಿ ಮಾರುಕಟ್ಟೆಯಲ್ಲಿ ಸರಕುಗಳ ಸತ್ವವನ್ನು ಯಶಸ್ವಿಯಾಗಿ ಪ್ರದರ್ಶಿಸಿ, ಪ್ರಚಾರಗೊಳಿಸಬೇಕು. ಸ್ವಾವಲಂಬನೆಯ ಸವಾಲಿಡುವ ಶಕ್ತಿ ನಮ್ಮ ರೈತರಿಗೆ ಒದಗಲು ಆಡಳಿತವೂ ಪರಿಣಾಮಕಾರಿಯಾಗಿ ಜೊತೆಯಾಗಿ ನಿಂತರೆ ನಮ್ಮಲ್ಲಿನ ಸಂಪನ್ಮೂಲಗಳನ್ನು ವೈಜ್ಞಾನಿಕ ವಿಧಾನದಲ್ಲಿ ಬಳಸುವ ಬಗೆಯನ್ನು ತೋರಿಸಿ ಸ್ವಪ್ರತಿಭೆಯನ್ನು ಉತ್ತೇಜಿಸಿದರೆ ನಮ್ಮ ರೈತರು ಜಾಗತೀಕರಣದ-ಉದಾರೀಕರಣದ ನಡುವೆಯೂ ಸ್ವದೇಶಿ ಸಾಮರ್ಥ್ಯವನ್ನು ಮೆರೆಯಲವಕಾಶವಾದೀತು. ವಿದೇಶಿ ವಿಕೃತ ವಂಶಾವಾಹಿಗಳೆದುರು, ಸಫಲ ಸ್ವದೇಶಿ ತಳಿಗಳನ್ನು ಆವಿಷ್ಕರಿಸಿ ತೋರುವುದಾದರೆ, ಇದು ನಮ್ಮತನಕ್ಕೆ ಒಂದು ದಿಟ್ಟ ಆಹ್ವಾನ. ಅಲ್ಲದೆ ಜಾಗತೀಕರಣಕ್ಕೂ ಮೊಗದಿರುವವರೆ, ಸ್ವಾಭಿಮಾನದ ಚೌಕಟ್ಟನ್ನು ಬಿಡದೆ, ಉತ್ಪನ್ನಗಳ ಗುಣಮಟ್ಟವನ್ನು ಕಾಯ್ದುಕೊಳ್ಳಬಲ್ಲೆವು ಎಂಬ ಕ್ರಿಯಾಶಕ್ತಿಯನ್ನು ನಮ್ಮ ರೈತರು ತೋರಬಲ್ಲರು. ಇದಕ್ಕೆ ಸರ್ಕಾರದ ಸೂಕ್ತ ಪ್ರಯತ್ನ ನಡೆಯುವಲ್ಲಿ ಸಮುದಾಯದ ಒತ್ತಾಸೆ ಎರಕಗೊಳ್ಳಬೇಕು. ರೈತರ ಗ್ರಾಹಕರ ಹಿತ ಬಾಂಧವ್ಯ ಬೆಳೆಯಬೇಕು.

ಈಚಿನ ಬೆಳವಣಿಗೆಗಳನ್ನು ಗಮನಿಸಿದರೆ ಜಲವಿವಾದಗಳು ನ್ಯಾಯಾಧೀಕರಣವಿರಲಿ, ಸರ್ಕಾರವಿರಲಿ, ತೀರ್ಮಾನಗಳು ಅಂತಿಮವೆನ್ನಿಸದೆ ಮತ್ತೆ ಕೆದಕಲು ಅವಕಾಶ ನೀಡಿದಂತಿವೆ. ಸಮಸ್ಯೆಗಳಡಿಯಲ್ಲಿ. ರೈತರಿಗೆ ಮಧ್ಯವರ್ತಿಗಳ ಮೇಲಿನ ಅವಲಂಬನೆ ಪೂರ್ಣವಾಗಿ, ತಪ್ಪಿಲ್ಲದಿರುವುದು, ಅನಿವಾರ್ಯ ಕಿರುಕುಳಕ್ಕೆ ಒಳಗಾಗುವುದು, ಬೇಳೆಕಾಳುಗಳ ಬೆಲೆ ತೊಂದರೆಗಳು, ನೆರೆ ಹಾವಳಿ, ಸಾಲಮನ್ನಾ ಯೋಜನೆ ಸಕಾಲ ಫಲಿತವಾಗದಿರುವುದು, ಬಿಟಿ ಬದನೆಯ ಪರಿಣಾಮಗಳು, ಇತಿಮಿತಿಗಳು, ಜೈವಿಕ ಭಯೋತ್ಪಾದನೆ (Bio-terrorism), ಬೆಳೆಹಾನಿ ಬಿತ್ತನೆ ಬೀಜ ಸಬ್ಸಿಡಿಗೆ ಕೊಕ್ಕೆಗಳು, ರೈತರ ಜಮೀನು ರಫ್ತಿಗೆ ಅವಕಾಶ, ಕಾಡುಪ್ರಾಣಿಗಳ

ಹಾವಳಿ, ಗಾಳಿ ಮಾಲಿನ್ಯ, ತಂಬಾಕು ಬೆಳೆ ಬೆಲೆ ತಾರತಮ್ಯ ರಾಸಾಯನಿಕ ಮಿಶ್ರಿತ ಕಳಪೆ ರೇಷ್ಮೆಯಿಂದ ರೇಷ್ಮೆ ಕಾರ್ಮಿಕರ ಆರೋಗ್ಯಕ್ಕೆ ಅಪಾಯ, ಜಮೀನು ಒತ್ತುವರಿ, ಭೂ ಸ್ವಾಧೀನ ಪ್ರಕ್ರಿಯೆ ಇತ್ಯಾದಿಗಳು ಕಾಣಬಂದು ರೈತರ ಬದುಕಿನಲ್ಲಿ ಆತಂಕಗಳನ್ನು ಹುಟ್ಟಿಸಿದೆ. ತತ್ಫಲವಾಗಿ ಹೋರಾಟಗಳು ವಿವಿಧ ಆಯಾಮಗಳಲ್ಲಿ ಪ್ರದರ್ಶಿತವಾಗುತ್ತಿವೆ. ಕಬ್ಬು ಬೆಳೆಗಾರರ ಹೋರಾಟದಲ್ಲಿ, ಸಕಾಲದಲ್ಲಿ ಕಬ್ಬು ಅರೆಯುವಿಕೆಗೆ, ಕೊಟ್ಟ ಕಬ್ಬಿಗೆ ಹಣ ಪಾವತಿಗೆ ಹಕ್ಕೊತ್ತಾಯವಿದೆ. ಭದ್ರಾ ನಾಲೆಯ ಕೊನೆಯ ಭಾಗದ ರೈತರಿಗೆ ನೀರು ಸಿಗುತ್ತಿಲ್ಲ; ಜಕ್ಕೂರು ಜಮೀನನ್ನು ಲೇಔಟ್ ನಿರ್ಮಾಣಕ್ಕಾಗಿ ಹರಾಜು ಹಾಕುವುದು, ಬಳ್ಳಾರಿ ವಿಮಾನ ನಿಲ್ದಾಣ ನಿರ್ಮಾಣಕ್ಕೆ ಭೂಸ್ವಾಧೀನ, ಬಿತ್ತನೆ ಬೀಜದ ಅಕ್ರಮ ಸಾಗಾಣಿಕೆ, ರಸಗೊಬ್ಬರದ ಅಭಾವ, ವಿದ್ಯುತ್ ಪೂರೈಕೆಯಲ್ಲಿ ಕಡಿತ, ಅಕ್ರಮ ಗಣಿಗಾರಿಕೆ, ನೆರೆ ಸಂತ್ರಸ್ತರಿಗೆ ಪರಿಹಾರ ಸಾಲದಿರುವುದು ಅಥವಾ ನೀಡಿಲ್ಲದಿರುವುದು. ರಸ್ತೆ ನಿರ್ಮಾಣಕ್ಕಾಗಿ ಅಕ್ರಮ ಭೂಸ್ವಾಧೀನ, ಕಬ್ಬಿನ ಬೆಲೆ ನಿಗದಿ ವಿಳಂಬ, ಐಟಿಆರ್ ಯೋಜನೆಗೆ ಅಧಿಕ ಜಮೀನು ವಶದ ತಂತ್ರ, ನಾಲಾ ಕಳಪೆ ಕಾಮಗಾರಿ, ಟೊಮೆಟೊ ಬೆಳೆಗಾರರಿಗೆ ಬೆಲೆ ವ್ಯತ್ಯಾಸದ ಹಣ ಬಾಕಿ, ರೈತರ ಮೇಲೆ ಲಾಠಿ ಪ್ರಹಾರ ಆತ್ಮಹತ್ಯಾ ಪ್ರಕರಣಗಳಿಗೆ ಕೊನೆಯಾಗದಿರುವುದು ಇತ್ಯಾದಿ ಸಂಕಷ್ಟಗಳ ವಿರುದ್ಧ ರೈತರ ಪ್ರತಿಭಟನೆ, ರಸ್ತೆ ತಡೆ, ಪಾದಯಾತ್ರೆ ಉಪವಾಸ ಸತ್ಯಾಗ್ರಹ, ಸ್ವಾಭಿಮಾನ ಪಾದಯಾತ್ರೆ, ವಿಧಾನಸೌಧಕ್ಕೆ ಮುತ್ತಿಗೆ, ವಿಷ ಪ್ರಾಶನ, ಆತ್ಮಹತ್ಯೆ ಇತ್ಯಾದಿಗಳ ಮೂಲಕ ಚಳವಳಿಯ ಆಯಾಮಗಳು ಕಾಣ ಬರುತ್ತವೆ. ಅವೆಲ್ಲ ನೋವಿನ ಸ್ಫೋಟಗಳ ಆಧುನಿಕ ರೂಪಗಳನ್ನು ತೋರುವಂತಿವೆ. ಜೊತೆಗೆ ಜೀತಮುಕ್ತರ ಪರಿಹಾರಕ್ಕೆ ಬೇಡಿಕೆ ಇಟ್ಟು ಹಗಲು ರಾತ್ರಿ ಕಛೇರಿಗೆ ಧರಣಿ ಸಾವಿರಾರು ರೈತರೊಡನೆ ಶಿವಮೊಗ್ಗ ಪಾದಯಾತ್ರೆ; ಗ್ರಾಮರಾಜ್ಯ ಉಳಿಸಿ, ರೈತರನ್ನು ರಕ್ಷಿಸಿ ಘೋಷಣೆಯ ರೈತಪಾದಯಾತ್ರೆ, ವಿಧಾನಸೌಧ ಮುತ್ತಿಗೆ (1974), ರೈತ ಸಮಸ್ಯೆಗಳನ್ನು ಪರಿಹರಿಸಿ ಎಂದು ಬಸವನ ಬಾಗೇವಾಡಿ, ಬಸವಕಲ್ಯಾಣದಿಂದ–ಬೆಂಗಳೂರು ರೈತ ಜಾಥಾ (1988), ತಲಕಾವೇರಿಯಿಂದ ಕೃಷ್ಣರಾಜಸಾಗರದವರೆಗೆ ರೈತರ ಜಾಥಾ (1998), ಬಗರ್‌ಹುಕುಂ ಸಾಗುವಳಿದಾರರ ಒಕ್ಕಲೆಬ್ಬಿಸುವುದರ ವಿರುದ್ಧ ಶಿಕಾರಿಪುರದಿಂದ ಶಿವಮೊಗ್ಗಗೆ ಪಾದಯಾತ್ರೆ ಇತ್ಯಾದಿ ರೈತಾಪಿ ವರ್ಗದ ಪರ ಹೋರಾಟಗಳನ್ನು ಇವೆಲ್ಲ ನೆನಪಿಗೆ ತರುತ್ತವೆ. ಇಂಥ ಹೋರಾಟಗಳ ವೈವಿಧ್ಯಮಯ ಆಯಾಮಗಳಲ್ಲಿ ಹೋರಾಟದ ಅಂತರ್ದನಿಯಲ್ಲಿ ರೈತಹಿತದ ಮಿಡಿತವೇ ಕೇಳಿಸುತ್ತದೆ.

ಈ ಹೋರಾಟಗಳಿಗೆ ಸಾಂತ್ವನ ಒದಗಿಸುವಂಥ ಪ್ರಕ್ರಿಯೆಗಳೂ ನಡೆದಿವೆ. ಆಡಳಿತವು ರೈತಪರ ನಿಲುಗಳಿಗೆ ಆದ್ಯತೆ ಕೊಟ್ಟು ರೈತ ಹಿತಾಸಕ್ತಿ ಕಾಪಾಡಬೇಕೆಂದು ಒತ್ತಾಯಿಸಲು ರೈತಸಂಘದ ಬಣಗಳ ವಿಲೀನ; ಕೃಷಿ ಪಂಡಿತ ಪ್ರಶಸ್ತಿ ವಿತರಣೆ, ಚೆಕ್ ಡ್ಯಾಂ ನಿರ್ಮಾಣಕ್ಕೆ ಸರ್ಕಾರೇತರ ಸಂಸ್ಥೆಗಳ ನೆರವು, ಬೆಂಬಲ ಬೆಲೆ ಖರೀದಿ ಕೇಂದ್ರ ತೆರೆಯುವಿಕೆ, 'ಕೃಷಿ ಋಷಿ ಪರಿವಾರದಿಂದ ಬೆಳೆಗಾರರ ರಕ್ಷಣೆ, ಸಾವಯವ ಕೃಷಿ ಪದ್ಧತಿ ಅಳವಡಿಕೆ ಕೃಷಿ ವಿಶ್ವವಿದ್ಯಾಲಯದಿಂದ ಕೃಷಿ ಮೇಳ ವ್ಯವಸ್ಥೆ, ರೈತರಿಂದ ರೈತರಿಗಾಗಿ ಕೃಷಿ ಚರ್ಚೆ ಹೊಸತಳಿಗಳ ಪ್ರಾತ್ಯಕ್ಷಿಕೆ ಮಾಹಿತಿ ನೀಡಿಕೆ. ಧಾರ್ಮಿಕ ಸಂಸ್ಥೆಗಳಿಂದ ಕೃಷಿಶಾಸ್ತ್ರ, ಇತಿಹಾಸ ಸಂಸ್ಥೆಗಳಿಂದ ಸಾಹಿತ್ಯ ಸಂಸ್ಥೆಗಳಿಂದ ಸಮ್ಮೇಳನಗಳಲ್ಲಿ ಕೃಷಿ ಸಾಹಿತ್ಯ, ರೈತ ಸಮಸ್ಯೆಗಳ ಗೋಷ್ಠಿ, ವಿಚಾರ ಸಂಕಿರಣಗಳ ವ್ಯವಸ್ಥೆ, ಕೃಷಿ ಜಯಂತಿ ಆಚರಣೆ, ಸೌರಶಕ್ತಿಯ ಬಳಕೆ ಮಾಡಿ. ಸೌರ ವಿದ್ಯುತ್ ಒದಗಣೆ ಯೋಜನೆ, ಕೃಷಿ ಮಾರುಕಟ್ಟೆಗೆ ನಬಾರ್ಡ್ ನಿಧಿ ನೆರವು; ಹವಾಮಾನ ಆಧರಿತ ಕೃಷಿ ವಿಮೆ ಯೋಜನೆ, 'ಅಮೃತ ಭೂಮಿಯ ಅಂತಾರಾಷ್ಟ್ರೀಯ ಬೀಜ ಜಾತ್ರೆ; ಬರ ಪರಿಸ್ಥಿತಿಯಲ್ಲಿ ರೈತ ರಕ್ಷಣೆ. ಪಂಪ್‌ಸೆಟ್‌ಗಳಿಗೆ ಸಮರ್ಪಕ ವಿದ್ಯುತ್ ಸರಬರಾಜು, ರೈತರ ಅಹವಾಲುಗಳಿಗೆ ಮುಖ್ಯಮಂತ್ರಿಗಳ ಸ್ಪಂದನ, ಹಾಗೂ ರೈತರಿಂದ ನಿರೀಕ್ಷಿಸುವ ಪ್ರಯೋಜನ; ಕಾಫಿ ಸಮಸ್ಯೆಗಳಿಗೆ ಸ್ವಸಾಂತ್ವನ ಪ್ರಯತ್ನಗಳು, ರೈತರಿಗೆ ಕೃಷಿ ತಂತ್ರಜ್ಞಾನ ಮಾಹಿತಿ ನೀಡುವ ಕಿಯೋಸ್ಕ್ ಯಂತ್ರ ವ್ಯವಸ್ಥೆ, ಕೃಷಿ ಸಂಶೋಧನೆಯ ಫಲಿತಗಳ ರೈತರಿಗೆ ತಲುಪಬೇಕು ಎಂಬ ಆಶ್ರಯ ಪ್ರಕಟನೆಯಲ್ಲಿ 'ರೈತ ತೀರ್ಪು' ವಿನ ಗಟ್ಟಿತನವಿರುವುದು, ಜಮೀನು ಖರೀದಿಗೆ ರೈತರಿಗೆ ಕೊಡುವ ರಿಯಾಯಿತಿ, ರೈತರ ಖಾಸಗಿ ಸಾಲದ ಸಂಕಷ್ಟ ನಿವಾರಣೆ, ರೈತರ ಸಾಲಮನ್ನಾವನ್ನು ಮಾಡಲು ವಿಧಾನ ಮಂಡಲದಲ್ಲಿ ಒತ್ತಾಯ, ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ ಹಾಗೂ ನಕ್ಸಲ್ ಬಾಧಿತ ಪ್ರದೇಶಗಳಲ್ಲೂ ಪರಿಣಾಮಕಾರಿ ಅನುಷ್ಠಾನ ಸಾವಯವ ಕೃಷಿಗೆ ಬ್ಯಾಂಕ್ ಸಹಕಾರ, ಭೂ ಚೇತನ ಕಾರ್ಯಕ್ರಮ ಮತ್ತು ಸಮಗ್ರ ಕೃಷಿ ಪದ್ಧತಿ. ಕೈತೋಟ ಬೀಜದ ಹಬ್ಬ ಸಾಮರಸ್ಯ ಗ್ರಾಮ ಯೋಜನೆ, ಕೃಷಿ ಉತ್ಪಾನಾ ವೆಚ್ಚದ ದರ, ಕಬ್ಬಿನ ಪರ್ಯಾಯ ಬೆಳೆ 'ಸಕ್ಕರೆಗಡ್ಡೆ' ಬೆಳೆಯುವುದು. ರೈತರ ವಿರುದ್ಧದ ದಾವೆಗಳು ವಾಪಸಾತಿ ಆಸರೆ ಯೋಜನೆ, ಒಕ್ಕಲು ಮಕ್ಕಳಿಗೆ ಮಹಾಕವಿ ಸ್ಪಂದನ-ಹೀಗೆ ಸಾಂತ್ವನ ಪ್ರಕ್ರಿಯೆಯ ಘಟಕಗಳು ಕಾಣಬರುತ್ತವೆ.

ಕೃಷಿ ಕ್ಷೇತ್ರಾಸಕ್ತರ ಲೇಖನಗಳು, ವರದಿಗಳು ಪ್ರತಿಕ್ರಿಯೆಗಳು ರೈತ ಚಳವಳಿಯ ದೃಷ್ಟಿಯಿಂದ ರೈತರ ಬವಣೆ, ಸಂಕಷ್ಟಗಳ ಚಿತ್ರಕೊಟ್ಟು, ತಮ್ಮ ಅಭಿಪ್ರಾಯ

ಅನಿಸಿಕೆಯನ್ನು ಸಮುಚಿತವಾಗಿ ಮುಂದಿಟ್ಟಿವೆ. ಸಾಹಿತ್ಯಕ–ಸಂಶೋಧನ ಲೇಖನಗಳೂ ಪರಿಹಾರ ಸೂಚಿಯಾಗಿ ಕಾಣಿಸಿಕೊಳ್ಳುತ್ತವೆ. 2009ರಲ್ಲಿ ಪ್ರಕಟವಾದಂಥ ಡಾ. ಮಲ್ಲಿಕಾರ್ಜುನ ಕೂಡ್ಲಿಗೆರೆ ಅವರ 'ಭೂ ಹೋರಾಟದ ಕಥನ', ಈ ದಿಸೆಯಲ್ಲಿ ಒಂದು ಗಮನಾರ್ಹ ಕೃತಿಯಾಗಿರುವುದನ್ನು ಗಮನಿಸಬೇಕು; ಈ ಕೃತಿಯು, ವಿವಿಧ ರೀತಿಯ ಅನ್ಯಾಯದ ಭೂಸ್ವಾಧೀನ ಪ್ರಕ್ರಿಯೆಗಳ ವಿರುದ್ಧ ರೈತ ಹೋರಾಟದ ಹಿನ್ನೆಲೆಗಳನ್ನು ಹೇಳಿ ಸಾಹಿತ್ಯ ಘಟಕಗಳಾದ ಪ್ರಬಂಧ, ಕಥೆ, ಕಾವ್ಯ ಲೇಖನಗಳಲ್ಲಿ ರೈತರ ಹೋರಾಟ ಹಾಗೂ ಪರಿಣಾಮಗಳನ್ನು ಸಮರ್ಥವಾಗಿ ಸೋದಾಹರಣೆಗಳಿಂದ ವಿವೇಚಿಸಿರುವ ವಿಶಿಷ್ಟ ಕೃತಿ ಎನಿಸುತ್ತದೆ.

ಸರ್ಕಾರದ ರೈತ ಸಾಂತ್ವನ ಕ್ರಮಗಳು ಅದರ ನೈತಿಕ ಹೊಣೆಯಾಗಿದೆ; ಆ ಬಗೆಗಿನ ಕಾಳಜಿಗನುಗುಣವಾಗಿ ವಿವಿಧ ಯೋಜನೆಗಳ ಮೂಲಕ ರೈತ ಸೌಲಭ್ಯ ಶೀಲವಾಗಿರುತ್ತವೆ. ಖಾಸಗಿ ಪ್ರಯತ್ನಗಳಾಗಿ ಮಠ, ಸಾಹಿತ್ಯ ಸಂಸ್ಥೆ, ಸಾಮಾಜಿಕ ಸಂಸ್ಥೆಗಳು ಹಮ್ಮಿಕೊಳ್ಳುವ ರೈತೋತ್ಸವಗಳು, ಕೃಷಿ ಹಬ್ಬಗಳು, ಬೀಜ ಜಾತ್ರೆಗಳು ಸಮಾಜೋ–ಸಾಂಸ್ಕೃತಿಕ ಸ್ಪಂದನಾ ವೈಭವದಿಂದ ಕೂಡಿವೆ ಎನ್ನಬೇಕು. ವಿಶೇಷತಃ ಉಕ್ಕಡಗಾತ್ರಿಯ ತೇರಿಗೆ ಹಣ್ಣುದವನದಂತೆ ಬೀಜ ಎಸೆದು ಬಿತ್ತನೆ ಬೀಜ ಪ್ರಸಾದ ಹೆಕ್ಕುವುದು, ಉಜ್ಜನಿ ಮರುಳು ಸಿದ್ದೇಶ್ವರಮ ತೈಲಾಭಿಷೇಕದ ದಿನ ತರಕಾರಿ ಬೀಜ ಸಮರ್ಪಿಸಿ ಬೀಜ ಪ್ರಸಾದ ಪಡೆದು ಬಿತ್ತುವುದು. ಸಂಪದ್ಭರಿತ ಬೆಳೆ ಪಡೆವುದು. ಬಿತ್ತನೆ ಬೀಜಗಳ ವಿನಿಮಯದ ದ್ಯೋತಕವಾಗಿ ಕಾಣುತ್ತದೆ. ಸಂಪ್ರದಾಯದಲ್ಲೂ ಶ್ರದ್ಧೆಯ ನೆಲೆಯೊಂದು ವೈಜ್ಞಾನಿಕ ತಳಕಿನೊಡನೆ ಕೂಡಿರುವುದು ನಿರ್ಲಕ್ಷಿಸುವಂಥದ್ದಲ್ಲ. ಭಕ್ತಿಯ ಭೂಮಿಯಲ್ಲಿ ಮಾನಸ ಸಾಂತ್ವನದ ಬೀಜ ಮೊಳಕೆಯೊಡೆದು ಸಸಿಯಾಗಿ ಜಗದೊಡನೆ ಸ್ಪಂದಿಸುವಂತೆ ಇದು ಕಾಣುತ್ತದೆ.

ಈಗಾಗಲೇ ಹೇಳಿದಂತೆ ಪತ್ರಿಕೆಗಳಲ್ಲಿ, ಪ್ರಸಾರ ಮಾಧ್ಯಮಗಳಲ್ಲಿ ರೈತರು ಹಾಗೂ ಕೃಷಿ ಸಂಬಂಧಿಸಿತ ಮಾಹಿತಿಗೆ ವಿಭಾಗೀಯ ಪುಟಗಳನ್ನು ವಾರದ ಮೀಸಲಾಗಿ ಇಟ್ಟಿರುವುದು, ದೈನಂದಿನ ಕೃಷಿ ಮಾಹಿತಿಗಳನ್ನು ನೀಡುತ್ತಿರುವುದು, ಉಪಯುಕ್ತ ಕೃಷಿ ಲೇಖನಗಳನ್ನು ಪ್ರಕಟಿಸುತ್ತಿರುವುದು ರೈತ ವಲಯಕ್ಕೆ ದೊರೆತಿರುವ ಮಹತ್ವದ ಕುರುಹೆನಿಸುತ್ತದೆ. ಕೃಷಿವಲಯಾಸಕ್ತ ಬರಹಗಾರರ ಲೇಖನಗಳು ಪ್ರಬುದ್ಧ, ಪಕ್ವ ಮಾಹಿತಿಯಿಂದ ಕೂಡಿರುವುದು ಕಾಣಬರತ್ತದೆ. ಬರಹಗಳು ಸಾಕಷ್ಟು ಸರಳವಾಗಿ ಸಂವಹನ ಶೀಲವೂ ಆಗಿವೆ. ಕೃಷಿ ಪ್ರಜ್ಞೆಯ ಲೇಖನಗಳಾಗಿವೆ.

ಇನ್ನು ರೈತರು ಮತ್ತು ಕೃಷಿ ವಿಜ್ಞಾನಿಗಳ ಸಾಮರಸ್ಯದ ಬಗೆಗೆ ಒಂದು ಮಾತು. ರೈತ ಕೃಷಿಕಾರ್ಯದ ನಿರಂತರ ಸಂಶೋಧಕನೆ. ಕ್ಷೇತ್ರ ಕಾರ್ಯ ನಿತ್ಯ ಮಾಡುವ ಸಿದ್ಧಿ ಪುರುಷ ಅವನು. ಅರಿವುಳ್ಳ ರೈತನನ್ನಿ, ಪ್ರಗತಿಪರ ರೈತನೆನ್ನಿ, ಹೊಸ ಜ್ಞಾನಕ್ಕೆ ಹೊಸ ಅನುಭವಗಳಿಗೆ, ಪ್ರಯೋಗಕ್ಕೆ ಅವನು ತೆರೆದುಕೊಳ್ಳಬಲ್ಲ. ಕೃಷಿ ವಿಜ್ಞಾನಿಯೂ ವಿಶ್ವವಿದ್ಯಾಲಯದ ಆವರಣದಲ್ಲಿ ಅಥವಾ ನಿಗದಿತ ಮೊಸಲು ಜಾಗದಲ್ಲಿ ಬಿತ್ತಿದ ಬೆಳೆಯನ್ನನುಸರಿಸಿ ಪಡೆದ ಜ್ಞಾನ, ಮಾಡಿದ ಸಂಶೋಧನೆ ಇರಬಹುದು. ಇದು ವ್ಯಕ್ತಿ ಕೇವಲವಾದರೆ ಪ್ರವೃತ್ತಿ ಇಲ್ಲದಿದ್ದರೆ ನಿವೃತ್ತಿಯ ನಂತರ ನಿರಂತರ ಸಂಶೋಧನೆಗಾರ ಎನ್ನುವುದು ಕಷ್ಟ. ರೈತ ಬದುಕಿರುವವರಿವಿಗೆ ನಿರಂತರ ಕ್ಷೇತ್ರಾನುಭವಿ, ಕ್ಷೇತ್ರ ಸಂಶೋಧಕ. ಹೀಗಾಗಿ ಉಭಯ ವರ್ಗದವರು ಸಹಯೋಗವಾದಾಗ, ಅನುಭವ ವಿನಿಮಯ, ತಿಳುವಳಿಕೆಯ ವಿನಿಮಯ ಸಾಧ್ಯ. ಅಂತಾಗಿ ಇಲ್ಲಿ ತರಬೇತಿ ಕೃಷಿ ವಿಜ್ಞಾನಿಗಳಿಂದ ಉದಯೋನ್ಮುಖ ರೈತರಿಗೆ ಸಂಗತವಾದೀತು. ಆದರೂ ಕೃಷಿ ಪರಂಪರೆಯ ಸಂಸ್ಕಾರ ರೈತ ಕುಟುಂಬಗಳಲ್ಲಿರುತ್ತದೆ. ಈ ದಿಸೆಯಲ್ಲಿ ಕೃಷಿ ವಿಜ್ಞಾನಿಗಳ ಪಾತ್ರ ನಗಣ್ಯವೆನ್ನುವಂತಿಲ್ಲ; ನಗಣ್ಯವೆನಿಸಬೇಕಿಲ್ಲ. ಸಮಾನ ಪಾತಳಿಯಲ್ಲಿ ಈರ್ವರನ್ನೂ ಸಹಯೋಗಗೊಳಿಸಿದರೆ, ಅನುಭವ-ಸಂಶೋಧನಾ ಸಾಮರಸ್ಯ ಒದಗುತ್ತದೆ. ಎಲ್ಲ ರೈತರೂ ಸಂಶೋಧನೆ ಮಾಡಿರುವುದಿಲ್ಲ. ಅಂಥ ಸನ್ನಿವೇಶದಲ್ಲಿ ಶಿಬಿರ ನಿರ್ವಹಣೆ ಮಾಡಿ ವಿಚಾರ ವಿನಿಮಯಕ್ಕೆ ಅವಕಾಶವಾಗಬೇಕು. ಎಲ್ಲ ಕೃಷಿ ವಿಜ್ಞಾನಿಗಳು ರೈತ ಕುಟುಂಬದಿಂದ ಬಂದವರಲ್ಲ. ಹೀಗಾಗಿ ಅರ್ಜಿತ ಸಂಸ್ಕಾರ ಅವರದು. ಊರ್ಜಿತವಿದ್ದ ಸಂಸ್ಕಾರವಾಗಿರದು. ಇಂಥ ಸಂದರ್ಭದಲ್ಲಿ ಉಭಯ ವರ್ಗವೂ ಸಾಮರಸ್ಯ ಸಾಧಿಸಬೇಕು.

ಒಟ್ಟಾರೆ ನಾಡಿನ ರೈತನ ಬದುಕು ಹಸನಾಗಲಿ. ನಮ್ಮ ನೆಲದ ಹಸಿರುಕ್ರಾಂತಿಯು ಬೆಳಕು, ಉತ್ಪನ್ನಗಳ ಕಾಂತಿ ಹೊತ್ತು ಹೊರಟು ಜಾಗತೀಕರಣದೆದುರು ಮೇಲಾಳ್ತನ ಮೆರೆಯಲಿ ಎಂಬುದು ಸಮಗ್ರ ರೈತ ಚಳುವಳಿಯ ವ್ಯಷ್ಟಿ ಹಾಗೂ ಸಮಷ್ಟಿ ಪ್ರಜ್ಞೆಯಾಗಿ ಕಾಣಬರುತ್ತದೆ. ಎಲ್ಲಕ್ಕೂ ಸರ್ಕಾರದತ್ತವೇ ನೋಡುತ್ತ, ಎಲ್ಲ ಪ್ರಯತ್ನಗಳೂ ಅದರಿಂದಲೇ ನಡೆಯಲಿ ಎಂದರೆ ಸೂಕ್ತವೆನಿಸದು. ನಮ್ಮ ಸಾಂಸ್ಕೃತಿಕ ಜಾಯಮಾನದಲ್ಲಿದ್ದರೂ, ಎಲ್ಲವೂ ವಿಧಿಚಿತ್ತ ಎಂದು ಆಳುವ ದೊರೆಗೋ, ಪೂಜಿಸುವ ದೈವಕ್ಕೋ ಅರ್ಪಿಸಿ ಪ್ರಯತ್ನ ಮಾಡದೆ ನಿಶ್ಚಿಂತರಾಗಿಬಿಡುವುದೂ ಸಲ್ಲ; ಕರ್ಮ ಸಿದ್ಧಾಂತಕ್ಕೇ ಅರ್ಪಿಸಿಕೊಳ್ಳುವುದೂ ಸರಿಯಲ್ಲ. ರೈತನಿಗೆ ತನ್ನ ಅನಾಥಪ್ರಜ್ಞೆಗೂ ಉತ್ತರ ಕಂಡುಕೊಳ್ಳುವ ಶಕ್ತಿಗಾಗಿ ವ್ಯಷ್ಟಿ ಹಾಗೂ

ಸಮಷ್ಟಿ ತರಬೇತಿಯನ್ನು ಸಿದ್ಧಾಂತವನ್ನು ನೀಡಬೇಕು. ಆತ್ಮವಿಶ್ವಾಸ ಬೆಳಸಬೇಕು. ವರ್ತಮಾನದ ಬದುಕಿನ ಸವಾಲುಗಳಿಗೆ ಸ್ವಶಕ್ತಿಯು ಚಾಲನೆ ಇಟ್ಟು ಎದುರಿಸುವಂತಾಗಬೇಕು. ಸನಾಥವಂತಿಕೆಯು ಸ್ಥೈರ್ಯವನ್ನು ಬೆಳೆಸಿಕೊಳ್ಳುವಂತಾಗಬೇಕು. ಇಂಥ ಹಿನ್ನಲೆಯಲ್ಲಿ ರೈತನೂ ವ್ಯಷ್ಟಿಯಾಗಿ, ಸಮಷ್ಟಿಯೊಡನೆ ಸ್ಪಂದಿಸಬೇಕು. ಪಕ್ಷ ರಾಜಕೀಯ ಮೀರಿ ಆಡಳಿತವೂ ರೈತರ ಸಮಷ್ಟಿ ಪ್ರತಿಭೆಯನ್ನು ತೆಕ್ಕೆಗಾಗಿಸಿಕೊಳ್ಳಬೇಕು. ಶ್ರೇಯಭೋಗದ ನೆಲೆ ತೋರಬೇಕು. ಇದರಲ್ಲಿ ರೈತರ ಹಾಗೂ ಗ್ರಾಹಕರ ಹಿತವೂ ಅಡಕವಾಗುತ್ತದೆ. ಇಲ್ಲಿ ಸಮುದಾಯದ ಮತ್ತು ಸರ್ಕಾರದ ಸ್ಪಂದನ ವರ್ತಮಾನದ ಹಾಗೂ ಭವಿಷ್ಯತ್ತಿನ ಅಗತ್ಯವೆನಿಸುತ್ತದೆ. ಆ ಬಗ್ಗೆ ಕವಿ ಹೃದಯದ ನುಡಿಗಳಾಗಿ ನನ್ನ ಕವನ ಹಾಗೂ ವಚನದ ಸಾಲುಗಳುಕ್ಕಿ ಮುಂದೆ ನಿಲ್ಲುತ್ತವೆ ಹೀಗೆ:

**ರೈತನೆಂದ:**

*ಕುಯಿಲ್ಹೊತ್ತು ಮದ್ದಿನ ಮುಸ್ಸಂಜೆ*
*ನನ್ನ ಬದುಕಿನ ದುಡಿಮೆಗೆ ನಿತ್ಯತವರು*
*ರಾಗಿಯ ಮುದ್ದೆ ಅಣ್ಣೆಯ ಸೊಪ್ಪಂಬೆ*
*ನನ್ನ ನೆಲದಲಿ ಉಣಿಸಿನ ನಿತ್ಯದುಸಿರು*

**ನಾವು:**

*ಭೂ ತಾಯಿ ತನ್ನ ಮಡಿಲ ಮನೆಯೊಳಗಿಟ್ಟ ದೀಪ*
*ಹರಡಿದೆ ಇಳೆತುಂಬ ಬೆಳಕು*
*ಮಾತಾಯಿ ಒಡಲಲ್ಲಿ ರೈತ ಬಿತ್ತಿದ ಬೆಳೆ ಬೀಜ*
*ಹರಡಿದೆ ಇಳೆಗೆ ತುತ್ತಿನ ಸುಸಿಲು*
*ರೈತ ಮಾಡಿದ ನಿತ್ಯ ಮಣಿಹಕ್ಕೆ*
*ಯಾವೆಲ್ಲ ರಾಷ್ಟ್ರ ಕಂಪೆನಿಗಳ ಬೀಜ ಸಿಂಗಾರ ಶೋಧಗಳ*
*ಬಿಂಕಕ್ಕೆ ತೆರುವ ತೆರಿಗೆಯ ಬೊಕ್ಕೆ ಬಡಿಯದಿರಲಿ*
*ಅವನ ಸತ್ವದ ಹಂಗಿಲ್ಲದ ನಿರುಮಳದ ಬಾಳುವೆಗೆ ನಮ್ಮ ತೆಕ್ಕೆ ಇರಲಿ*
*ನಾವಿಡಬೇಕಾದ ಉಡುಗೊರೆ ಅದೇ ಕಾಣಾ*
*ಅಚಲದೇವ ನಾಗೊಡೆಯ.*

**ರೈತರಿಗೆ ಹಾರೈಕೆ:**

*ಹೊಲದ ಒಡಲಿಗೆ ಬಿದ್ದ ಮೋಡಗಳ*
*ಕಟ್ಟೆಬಾಗಿಲ ಹನಿನೀರು*
*ಉತ್ತ ಮಣ್ಣಿನ ದಾಹವಾರಿಸದೆ*
*ಬಟ್ಟೆ ನೇಗಿಲು ಬರಿಗೀರು*
*ರೈತ ಬೆಳೆದ ಬೆಳೆಗೆ ತಂದಿತ್ತು ಕುತ್ತು;*
*ಆಸೆಗಳು ಕಮರಿ ತುತ್ತಿಗೆ ಬರ ಬಂದಿತ್ತು.*

*ಬೆಂಬಲ ಬೆಲೆ ವಿಳಂಬಕ್ಕೆ ಬೆಲೆ ಕುಸಿತ*
*ಪ್ರಾಣದುಸಿರಿಂಗೆ ಸ್ಥೈರ್ಯ ಸ್ಥಗಿತ*
*ಬೆಳೆ ಹಾನಿ ಸಾಲದ ಶೂಲಕ್ಕೆ ಬಾಳು ಭಂಗಿತ*
*ಮಡದಿ ಮಕ್ಕಳ ಬಿಟ್ಟು ಆತ್ಮಹತ್ಯ*

*ಮಾಡದಿರಲಿ ರೈತನ ಮೇಲೆ ಲಗ್ಗೆ*
*ಜೀವನಾತಂಕಗಳ ಕಾರುಬಾರು*
*ತರದಿರಲಿ ಅವನ ಬಾಳ ಬುಗ್ಗೆಗೆ*
*ವಾರ್ಧಿಕ್ಯ ವರ್ತಮಾನ ಕೊರೆ ನೀರು*

*ಕಾಯ್ದೊರಕ, ನುಸಿ, ನೀರಾ, ಗುಟ್ಕ*
*ಕಾವೇರಿ-ಕೃಷ್ಣೆ-ಭೀಮೆಯರ ಸಮಸ್ಯೆ*
*ಹಸಿರುಮನೆ ಡಬ್ಲ್ಯುಟಿಓ ಸಂಸ್ಥೆ ಹೊಕ್ಕ*
*ಇಂಗಾಲದಾಕ್ರಮಣದಮಾವಾಸ್ಯೆ*

*ಸಮಸ್ಯೆಗಳಿಗೆದುರಿರಲಿ ಪರಿಹಾರ ಶೋಧಗಳ ಸಾಲು*
*ಮಣ್ಣಮಕ್ಕಳಿಗಿರಲಿ ಹಾರೈಕೆಗಳ ಸ್ವಾತಿ ಮುತ್ತಿನಬಾಳು*

**ಒಕ್ಕಲು ಮಕ್ಕಳಿಗೆ**

ನೆಲದ ಮೇಲಿನ ಹಸಿರು
ದುಡಿಮೆಗೆ ನೀವೆ ಉಸಿರು
ಬೆಳೆದ ಸಾಲಿನ ಪೈರು
ನಮ್ಮ ತುತ್ತಿಗೆ ದೇವರು

ಕಾವೇರಿ ಕಪಿಲೆಯಲಿ ಮಿಂದಿರಿ
ಕೃಷ್ಣೆ ಭೀಮೆಯರಲಿ ನೆನೆದಿರಿ
ತುಂಗಭದ್ರೆ ನೇತ್ರೆಯರೊಳಾಡಿದಿರಿ
ಕಬ್ಬು ತೆಂಗು ಭತ್ತ ರಾಗಿ ಜೋಳ ತಂದಿರಿ

ಸಿಹಿ ಕಬ್ಬನು ಬೆಳೆದೇ ಬೆಳೆದಿರಿ
ಕಾರ್ಖಾನೆ ಯಂತ್ರಕ್ಕೆ ತುಂಬಿ ಕೊಟ್ಟಿರಿ
ಉತ್ಪನ್ನಗಳಾದುವು ಕಾರ್ಖಾನೆಗೆ ತಿಜೋರಿ
ಕಬ್ಬಿನ ಕಾಸಿಗೆ ಕಾಯುತ್ತಲೇ ಬಂದಿರಿ

ತೆಂಗು ನುಸಿ ಕಳೆಯೆ ನೀರಾ ಇಳಿಸಿದಿರಿ
ಮಾರಿದರು ಸಿಗಲಿಲ್ಲ ನೋಟು ನಿಗರಿ
ತೊಗರಿ ಕೊಬ್ಬರಿಗೆ ಬರಲಿಲ್ಲ ಬೆಲೆ ಏರಿ
ಚಿಂತೆಯೊಳು ಮಾರುಕಟ್ಟೆಯಲಿ ಮಂಕಾದಿರಿ

ಬೆಲೆ ಕುಸಿತಕ್ಕೆ ಆಯ್ತು ಆತ್ಮಹತ್ಯೆ
ಬೆಳೆಗಿಷ್ಟು ಬೆಂಬಲ ಬೆಲೆ ತುಟ್ಟಿಭತ್ಯೆ
ತತ್ಕಾಲಕೆ 'ಲಕ್ಷ'ದ ಭರವಸೆಯ ಪರಿಹಾರ
ಸಾಲದದು ನಿಮ್ಮ ಅಳಲಿಗೆ ಹನಿ ಉಪಚಾರ

ಬೇಸಾಯದ ಸತತ ಶೋಧಕರು ನೀವು
ಕ್ಷೇತ್ರ ಕಾಯಕವ ದಣಿದರೂ ಬಿಡಲಿಲ್ಲ ನೀವು
ಸಾವಯವ ಸಾಧನೆಯ ಸಿದ್ಧರು ನೀವು
ಬೆಳೆ ಕಂದಿದರು ಕೃಷಿಯ ಕಂದಿಸಲಿಲ್ಲ ನೀವು

ನೀವು ಹಾಡುತ್ತಿರುವ ತುತ್ತುಗಳ ಹಾಡು
ಜಗ ಸವಿದು ಮರೆಯುತ್ತಿದೆ ನಿಮ್ಮ ಪಾಡು!
ದುಡಿದು ಕಟ್ಟುವ ನೆಲದ ಹಸಿರು ಗೂಡು
ಜಗವು ಬಾಚುತ್ತಿದೆ ನಿಮ್ಮ ಫಲಿತದ ಬೀಡು

ನಿಮ್ಮ ಹರಸುವೆವೆಂದು ಯೋಜನೆಗಳು
ಸಾಗಿದುವು ಸಾಲು ಸಾಲು ಸಾಲು
ಕಾರ್ಯ ಕಾಳಜಿಗೆ ಮುಂದಾಳುಗಳು
ಇಚ್ಛೆ ಶಕ್ತಿ ಇಲ್ಲದೆ ನಿಂತ ಬಾಳು
ಬರ, ನೆರೆ, ನೆಲಸೂರೆ ಆಗಿ ಬರಿ
ಬರಡುಗಳ ರಾಶಿ ನಡುವೆ ನಿಂತಿರಿ
ಚಾತಕ ಪಕ್ಷಿ ತೆರದಿ ಕಾದು ನಿಂತಿರಿ
ಬಾನ ನೀರನುಡಿಯೆ ಬರಿದು ಎಂದಿರಿ
ಮುತ್ತಾಗುವುದೆಲ್ಲಿ ಸ್ವಾತಿ ಹನಿ ಹೇಳಿರಿ!
ನೆಲದ ಒಳನೀರು ಕೊಳವೆಗೂ ಸಿಗದಿರೆ
ಉಕ್ಕಲೆಲ್ಲಿದೆ ಉದ್ಭವದ ತೀರ್ಥಸಿರಿ!

ಒಕ್ಕಲು ಮಗಳೆ ಜಗಕೆ
ಮೊದಲು ತುತ್ತು ಕೊಟ್ಟಾಕೆ
ಜಗವು ಪಡೆದ ಆ ಮುದಕೆ
ತೀರಿಸಿಲ್ಲ ಋಣವೆ ಇನ್ನೂ ಆಕೆಗೆ

ಡಾ. ಎಂ.ಜಿ. ನಾಗರಾಜ್

# ಕರ್ನಾಟಕ ರೈತ ಚಳುವಳಿಗಳು–ಸತ್ಯಾಗ್ರಹಗಳು

## ಸರ್ವಸಂಪುಟ ಅಧ್ಯಾಯ ವಿಷಯ ಸೂಚಿ ಮತ್ತು ಚಳುವಳಿ ಸೂಚಿ

### ಸಂಪುಟ ೧ : ಪ್ರಾಚೀನ ಮತ್ತು ಕರ್ನಾಟಕ ಏಕೀಕರಣ ಪೂರ್ವ ರೈತ ಚಳುವಳಿಗಳು

### ಅಧ್ಯಾಯ ೧ : ಚಾರಿತ್ರಿಕ–ಸಾಂಸ್ಕೃತಿಕ ಹಿನ್ನೋಟ

**ಅಧ್ಯಾಯ ೨ : ಸ್ವಾತಂತ್ರ್ಯಪೂರ್ವಕಾಲದ ರಾಜ್ಯ ರೈತ ಚಳುವಳಿಗಳು-ಸತ್ಯಾಗ್ರಹಗಳು**

**ಅಧ್ಯಾಯ ೨ : ಅನುಬಂಧ ೧**



**ಅಧ್ಯಾಯ ೨ : ಅನುಬಂಧ ೨**

**ಅಧ್ಯಾಯ ೩ : ಸ್ವಾತಂತ್ರ್ಯೋತ್ತರ ಕಾಲದ ರಾಜ್ಯ ರೈತ ಚಳುವಳಿಗಳು**

## ಸಂಪುಟ: ೨

## ಏಕೀಕರಣೋತ್ತರ–ಸಹಸ್ರಮಾನಪೂರ್ವ ರೈತ ಚಳುವಳಿಗಳು

### ಅಧ್ಯಾಯ ೪ : ಕರ್ನಾಟಕ ಏಕೀಕರಣೋತ್ತರ ರೈತ ಚಳುವಳಿಗಳು

## ಅಧ್ಯಾಯ ೫ : ಸಹಸ್ರಮಾನ ಸಂದರ್ಭದ ರೈತ ಚಳುವಳಿಗಳು ಮತ್ತು ಅನ್ವಯಿಕ ವಿಷಯಗಳು

### ಹನಿ ಹನಿ ಚಳುವಳಿಗಳು:

## ಸಂಪುಟ: ೩

## ಸಹಸ್ರಮಾನಪೂರಕ ವಿವಿಧ ರೈತ ಚಳುವಳಿಗಳು

### ಅಧ್ಯಾಯ ೬ : ಸಹಸ್ರಮಾನಪೂರಕ ವಿವಿಧ ರೈತ ಚಳುವಳಿಯ ಸಂಬಂಧ ವಿಷಯಗಳು

**ಅಧ್ಯಾಯ ೮ : ಬೆಳೆಧಾರಣೆ ಕುಸಿತಗಳು (೧೯೯೭–೨೦೦೧)**

## ಅಧ್ಯಾಯ ೯ : ರೈತರ ಆತ್ಮಹತ್ಯೆ ಹಾಗು ಅನ್ವಯಿಕ ವಿಷಯಗಳು

## ಸಂಪುಟ: ೪

## ರೈತ ಚಳವಳಿಯ ಆಧುನಿಕ ಮಜಲುಗಳು ಮತ್ತು ರೈತರ ಸಮಸ್ಯೆಗಳು

### ಅಧ್ಯಾಯ ೧೦ : ವಿಶ್ವವ್ಯಾಪಾರ ಸಂಘಟನೆ : ಪೂರಕ ವಿಷಯಗಳು



### ಅಧ್ಯಾಯ ೧೧ : ಕುಲಾಂತರಿ ಬೆಳೆಗಳು (ಬಿಟಿ ತಳಿಗಳು)

## ಅಧ್ಯಾಯ ೧೨ : ನೀರಾ ಚಳವಳಿ



## ಅಧ್ಯಾಯ ೧೩ : ಸಹಸ್ರಮಾನ ದಶಕದ ರೈತರ ಸಮಸ್ಯೆಗಳು ಮತ್ತು ಚಳವಳಿಗಳು (೨೦೦೦–೨೦೦೭): ಸದನದ ನಡವಳಿಕೆಗಳು

**ಅಧ್ಯಾಯ ೧೪ : ರೈತರ ಜಲ ಹಾಗೂ ಆರ್ಥಿಕ ಸಮಸ್ಯೆಗಳು**

## ಅಧ್ಯಾಯ ೧೫ : ಬೆಳೆ ಹಾನಿ ಸಮಸ್ಯೆಗಳು



## ಅಧ್ಯಾಯ ೧೬: ಬೆಳೆಯ ಬೆಲೆ ಕುಸಿತದ ಸಮಸ್ಯೆಗಳು

**ಸಂಪುಟ – ೫**

**ಕಾವೇರಿ: ಜಲವಿವಾದ–ಐತೀರ್ಪು–ಚಳವಳಿಗಳು**

**ಭಾಗ I; ಅಧ್ಯಾಯ ೧೭: ಕಾವೇರಿ: ಜಲವಿವಾದ ಮತ್ತು ಚಳವಳಿಗಳು**

# ಕರ್ನಾಟಕ ರೈತ ಚಳವಳಿ–ಸತ್ಯಾಗ್ರಹಗಳು

## ಸಂಪುಟ–೬

## ರೈತ ಪ್ರತಿಭಟನೆಯ ಆಧುನಿಕ ಮಾದರಿಗಳು; ಸಾಂತ್ವನ ಪ್ರಕ್ರಿಯೆಗಳು

## (ಪೂರಕ) ಅಧ್ಯಾಯ ೧೯: ರೈತ ಪ್ರತಿಭಟನೆಯ ಆಧುನಿಕ ಮಾದರಿಗಳು

**ಅಧ್ಯಾಯ : ೨೧ ರೈತ ಚಳವಳಿ ಸಾಂತ್ವನ ಪ್ರಕ್ರಿಯೆಗಳು**

## ಪರಾಮರ್ಶನ ಗ್ರಂಥಸೂಚಿ

### I– ಕೃತಿಗಳು:


1. ಈಶ್ವರಪ್ಪ ಎಂ.ಜಿ., (1995), **ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
2. **ಎಪಿಗ್ರಾಫಿಯ ಕರ್ನಾಟಕ** ಸಂ.1 (ಹೊಸತು)., (1972), ಕೊಡಗು ಜಿಲ್ಲೆ, ಮೈಸೂರು ವಿಶ್ವವಿದ್ಯಾಲಯ
3. **ಎಪಿಗ್ರಾಫಿಯ ಕರ್ನಾಟಕ** ಸಂ.9 (ರೈಸ್ ಆವೃತ್ತಿ), ಬೆಂಗಳೂರು ಜಿಲ್ಲೆ., (1905) ಬೆಂಗಳೂರು.
4. **ಕನ್ನಡ ಶಾಸನ ಸಂಪದ.,** (1987) (ಸಂ) ಹಿರೇಮಠ ಆರ್.ಸಿ., ಕಲಬುರ್ಗಿ ಎಂ.ಎಂ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
5. ಕೃಷ್ಣರಾಜ ಒಡೆಯರು., (1916), **ಮೈಸೂರು ಸಂಸ್ಥಾನದ ಪ್ರಭುಗಳು ಶ್ರೀಮನ್ಮಹಾರಾಜರವರ ವಂಶಾವಳಿ** (ಭಾಗ 1), ಮೈಸೂರು.
6. ಕೃಷ್ಣಯ್ಯ ಡಿ.ಎನ್., (1974), **ಕೊಡಗಿನ ಇತಿಹಾಸ,** ಮೈಸೂರು ವಿಶ್ವವಿದ್ಯಾಲಯ, ಮೈಸೂರು.
7. ಡಾ. ಶ್ರೀ ಜಚನಿ., (1981), **ಚಿಗುರಿಟ್ಟ ಚಿಂತನ,** ಶ್ರೀ ಶೈಲ ಜಗದ್ಗುರು ನಿಡುಮಾಮಿಡಿ ನಿವಾಸ, ಹ.ಬ. ಸಮಾಜರಸ್ತೆ, ಬೆಂಗಳೂರು.
8. ಡಾ. ಶ್ರೀ ಜಚನಿ., (1992), **ಶ್ರೀ ರುದ್ರಸೂಳ್ನುಡಿಗಳು,** ಶ್ರೀ ಜಚನಿ ಅಧ್ಯಯನ ಪೀಠ ಮತ್ತು ಸಂಶೋಧನ ಸಂಸ್ಥೆ, ಹ.ಬ. ಸಮಾಜರಸ್ತೆ, ಬೆಂಗಳೂರು.
9. ಡಾ. ತಂಬಂಡ ವಿಜಯ ಪೂಣಚ್ಚ., (1999), **ರೈತ ಚಳುವಳಿಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ.
10. ತಿರುಮಲೆ ತಾತಾಚಾರ್ಯಶರ್ಮ., (1957), **ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ,** ರಾಜ್ಯ ಸರ್ಕಾರ, ಬೆಂಗಳೂರು.
11. ನಾಗೇಶ್ ಎಚ್.ವಿ. ಪುನೀತ್ ಎ.ಇ. (1984), **ಭಾರತದಲ್ಲಿ ರೈತ ಹೋರಾಟಗಳು,** ಧಾರವಾಡ

12. ನಾಗರಾಜ್ ಎಂ.ಜಿ., (1997), **ಬಿಡುಗಡೆಯ ಮಡಿಲಲ್ಲಿ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

12.ಅ. ವರದರಾಜನ್, ಮು., (1980), **ತಮಿಳು ಸಾಹಿತ್ಯ ಚರಿತ್ರೆ** (ಅನು: ಎಲ್. ಗುಂಡಪ್ಪ) ಸಾಹಿತ್ಯ ಅಕಾಡೆಮಿ, ನವದೆಹಲಿ.

13. ನಾಡಕರ್ಣಿ ಎಂ.ವಿ., (1986), **ಕರ್ನಾಟಕದ ರೈತ ಹೋರಾಟಗಳು,** ಬೆಂಗಳೂರು.

14. **ಪ್ರಾಚೀನ ಭಾರತ.,** (1999), ನ್ಯೂದಿಲ್ಲಿ.

15. ಭಗವತ್ ಶರಣ ಉಪಾಧ್ಯಾಯ., (1977), **ಭಾರತೀಯ ಸಮಾಜದ ಐತಿಹಾಸಿಕ ವಿಶ್ಲೇಷಣೆ** (ಕನ್ನಡಕ್ಕೆ, ಪ್ರಧಾನ್ ಗುರುದತ್ತ), ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು.

16. ಲಿಂಗಣ್ಣಯ್ಯ ಓ.ಎನ್., (1940), **ಮುಮ್ಮಡಿ ಕೃಷ್ಣರಾಜೇಂದ್ರ ಒಡೆಯರು,** ಮೈಸೂರು

17. ಲಿಂಗಯ್ಯ .ಡಿ., (1975), **ಶಿವಪುರ ಧ್ವಜಸತ್ಯಾಗ್ರಹ,** ದಿನಕರ ಪ್ರಕಾಶನ, ಬೆಂಗಳೂರು

18. ಲಿಂಗನಗೌಡ ಪಾಟೀಲ., (1987), **ರಾಮದುರ್ಗ ಸಂಸ್ಥಾನ ವಿಮೋಚನಾ ಹೋರಾಟ,** ಡಂಬಳ ಗದಗ

19. ವೀರಣ್ಣಗೌಡ ಎಚ್.ಕೆ., (1974), **ಬದುಕು ಮೆಲುಕು,** ಮೈಸೂರು

20. ರಂಗನಾಥ ದಿವಾಕರ., (1955), **ಕರನಿರಾಕರಣೆಯ ವೀರಕಥೆ**

21. ರಾಮಸ್ವಾಮಿ ಎಸ್. ಆರ್., (1994), **ಆರ್ಥಿಕತೆಯ ಎರಡು ಧ್ರುವ,** ಬೆಂಗಳೂರು

22. ರಾಜಶೇಖರ್ ಜಿ., (1980), **ಕಾಗೋಡು ಸತ್ಯಾಗ್ರಹ,** ಅಕ್ಷರ ಪ್ರಕಾಶನ, ಸಾಗರ

23. ಶಾಮರಾವ್. ಎಂ., (1919), **ಮೈಸೂರು ಸಂಸ್ಥಾನದ ಚರಿತ್ರಸಾರ,** ಬೆಂಗಳೂರು.

24. ಶಾಮರಾವ್ ಎಂ., (1899), **ಮೈಸೂರು ಸಂಸ್ಥಾನದ ಚರಿತ್ರೆ** ಭಾಗ III ಮತ್ತು IV

25. ಶ್ರೀಮನ್ಮಹಾರಾಜರವರ ವಂಶಾವಳಿ ದ್ವಿತೀಯ ಸಂಪುಟ

26. **ಶಾಸನ ಸಂಗ್ರಹ.,** (1977), (ಸಂ). ಎ .ಎಂ. ಅಣ್ಣಿಗೇರಿ, ಆರ್. ಶೇಷಶಾಸ್ತ್ರಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

27. ಡಾ. ಶೇಷಾದ್ರಿ ಎಂ., (1955), **ಹರಪ್ಪಾ ಸಂಸ್ಕೃತಿ,** ಮೈಸೂರು.

28. ಶೇಷನವರತ್ನ., (1977), **ಋಗ್ವೇದ,** ಮೈಸೂರು

28ಅ. ಶೇಷನಾರಾಯಣ., (2003), **ಕಾವೇರಿ ಒಂದು ಚಿಮ್ಮು: ಒಂದು ಹೊರಳು** ಕಾವ್ಯಾಲಯ, ಮೈಸೂರು

28ಆ. **ಕನ್ನಡ–ಕನ್ನಡಿಗ–ಕರ್ನಾಟಕ.,** 1990, (ಸಂ) ಶೇಷ್‌ಗಿರಿರಾವ್, ಎಲ್.ಎಸ್., ಚನ್ನಬಸಪ್ಪ, ಗೊ.ರು. ಚಂದ್ರಶೇಕರ್, ರಾ.ನಂ., ಕನ್ನಡ ಶಕ್ತಿ ಕೇಂದ್ರ, ಬೆಂಗಳೂರು

28ಇ. **ಕನ್ನಡ ಇಂಗ್ಲಿಷ್ ಡಿಕ್ಷನರಿ.,** 2001 (ಸಂ) ರೆವರೆಂಡ್ ಕಿಟ್ಟೆಲ್ (10th AES print)

28ಈ. **ಕನ್ನಡ ಸಾಹಿತ್ಯ ಚರಿತ್ರೆ** (4ನೆಯ ಸಂಪುಟ)., 1977, (ಪ್ರ.ಸಂ) ಡಾ.ಹಾ.ಮಾ. ನಾಯಕ, ಮೈಸೂರು ವಿಶ್ವವಿದ್ಯಾಲಯ,

28 **ಕೇಶಿರಾಜ ವಿರಚಿತ ಶಬ್ದಮಣಿದರ್ಪಣಂ,** 1975, (ಸಂ) ತ.ಸು. ಶಾಮರಾವ್, ಎಚ್. ನಂಜೇಗೌಡ, ಮೈಸೂರು

29. **ಸಮಗ್ರ ವಚನ ಸಂಪುಟ: ಸಂಕೀರ್ಣ ವಚನ ಸಂಪುಟ 1.,** (1993), (ಸಂ) ಡಾ. ಎಂ.ಎಂ. ಕಲಬುರ್ಗಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

29ಅ. **ಸಿದ್ಧರಾಮ ವಚನ ಸಂಪುಟ 4**(ದ್ವಿತೀಯ ಮುದ್ರಣ)., 2001, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

30. **ಉತ್ತರ ಕನ್ನಡ ಜಿಲ್ಲಾ ಗ್ಯಾಸೆಟಿಯರ್.,** (1985), (ಸಂ) ಡಾ. ಸೂರ್ಯನಾಥ ಕಾಮತ್, ಬೆಂಗಳೂರು

31. **ಬಾಂಬೆ ಗ್ಯಾಸೆಟಿಯರ್ ಪಾರ್ಟ್II .,** (1993), (ಸಂ) ಜೇಮ್ಸ್ ಕ್ಯಾಂಬೆಲ್

32. ಪ್ರೊ. ನಂಜುಂಡಸ್ವಾಮಿ ಎಂ.ಡಿ., (1982), **ರೈತ ಹೋರಾಟ ಏಕೆ?** ಕರ್ನಾಟಕ ರಾಜ್ಯ ರೈತ ಸಂಘ, ಶಿವಮೊಗ್ಗ

33. ಪ್ರೊ. ಸದಾನಂದ ಜಿ.ಎಸ್., (2000), **ಡಿ. ದೇವರಾಜ್ ಅರಸು,** ಕರ್ನಾಟಕ ಸರ್ಕಾರ ವಿಧಾನಸಭಾ ಸಚಿವಾಲಯ, ಬೆಂಗಳೂರು.

34. **ಕರ್ನಾಟಕ ರೈತ ಹೋರಾಟದ ಆಶೋತ್ತರಗಳು.,** ಕರ್ನಾಟಕ ರಾಜ್ಯ ರೈತ ಸಂಘ ದ್ವಿತೀಯ ಮುದ್ರಣ, ಮಂಡ್ಯ

35. **ಹಸಿರು ಸೇನೆ.,** ಕರ್ನಾಟಕ ರಾಜ್ಯ ರೈತ ಸಂಘ

36. **ರೈತ ಚಳುವಳಿ.,** (2000), ಕರ್ನಾಟಕ ರಾಜ್ಯ ರೈತ ಸಂಘ, ಬೆಳಗಾವಿ ಜಿಲ್ಲೆ.

## II. ಶಾಸನಸಭಾ ನಡವಳಿಕೆಗಳು

1. ಎಂ.ಆರ್.ಎ. ಪ್ರೊಸೀಡಿಂಗ್ಸ್., ಜೂನ್ 1931

2. ಎಂ.ಆರ್.ಎ. ಪ್ರೊಸೀಡಿಂಗ್ಸ್., ಅಕ್ಟೋಬರ್ 1931

3. ಎಂ.ಆರ್.ಎ. ಪ್ರೊಸೀಡಿಂಗ್ಸ್., ಜೂನ್ 1932

4. ಲೆಜಿಸ್ಲೇಟಿವ್ ಕೌನ್ಸಿಲ್ ಪ್ರೊಸೀಡಿಂಗ್ಸ್, ಸಂಪುಟ 18 (1–8) 26.6.1934

5. ಲೆಜಿಸ್ಲೇಟಿವ್ ಕೌನ್ಸಿಲ್ ಪ್ರೊಸೀಡಿಂಗ್ಸ್, ಸಂಪುಟ 19(1–4) ಡಿಸೆಂಬರ್ 1934 ರಿಂದ ಜನವರಿ 1935

6. ವಿಧಾನಸಭಾ ನಡವಳಿಕೆಗಳು, ಮೇ ಜೂನ್ ಅಧಿವೇಶನ, 1951 ಮತ್ತು 16.3.1951

6. ವಿಧಾನಸಭಾ ನಡವಳಿಕೆಗಳು, ಸಂಪುಟ 5, ಅಕ್ಟೋಬರ್ ನವೆಂಬರ್ ಅಧೀವೇಶನ, 1951

7. ವಿಧಾನಸಭಾ ನಡವಳಿಕೆಗಳು, ಸಂಪುಟ 7, ಜೂನ್ ಅಧಿವೇಶನ, 1952

8. ವಿಧಾನಸಭಾ ನಡವಳಿಕೆಗಳು, ಸಂಪುಟ 9, ಮಾರ್ಚ್ ಏಪ್ರಿಲ್, ಜುಲೈ ಅಧಿವೇಶನ, 1953

9. ವಿಧಾನಸಭಾ ನಡವಳಿಕೆಗಳು, ಸಂಪುಟ 8, ಅಕ್ಟೋಬರ್ ಅಧಿವೇಶನ, 1952

10. ವಿಧಾನಸಭಾ ನಡವಳಿಕೆಗಳು, ಸಂಪುಟ 10, ಜನವರಿ ಅಧಿವೇಶನ, 1954

11. ವಿಧಾನಸಭಾ ನಡವಳಿಕೆಗಳು, ಸಂಪುಟ 10, ಭಾಗ 3, ಮಾರ್ಚಿ ಅಧಿವೇಶನ, 1954

12. ವಿಧಾನಸಭಾ ನಡವಳಿಕೆಗಳು, ಸಂಪುಟ 11, ಅಕ್ಟೋಬರ್ ಅಧಿವೇಶನ, 1954

13. ವಿಧಾನಸಭಾ ನಡವಳಿಕೆಗಳು, ಸಂಪುಟ 12, ಭಾಗ 1 ಮಾರ್ಚಿ ಅಧಿವೇಶನ, 1955

14. ವಿಧಾನಸಭಾ ನಡವಳಿಕೆಗಳು, ಸಂಪುಟ 13, 1955

15. ವಿಧಾನಸಭಾ ನಡವಳಿಕೆಗಳು, ಸಂಪುಟ 9, ಮಾರ್ಚಿ ಏಪ್ರಿಲ್ ಅಧಿವೇಶನ, 1965

16. ವಿಧಾನಸಭಾ ನಡವಳಿಕೆಗಳು, ಸಂಪುಟ 15, ಡಿಸೆಂಬರ್ ಅಧಿವೇಶನ, 1965

17. ವಿಧಾನಸಭಾ ನಡವಳಿಕೆಗಳು, ಸಂಪುಟ 7, ಡಿಸೆಂಬರ್ 1967

18. ವಿಧಾನ ಪರಿಷತ್ತಿನ ನಡವಳಿಕೆಗಳು ಸಂಪುಟ 34, ಡಿಸೆಂಬರ್ ಅಧಿವೇಶನ 1867

19. ವಿಧಾನಸಭಾ ನಡವಳಿಕೆಗಳು, ಸಂಪುಟ 6, 3.8.1967

20. ವಿಧಾನಸಭಾ ನಡವಳಿಕೆಗಳು, ಸಂಪುಟ 22, 7.9.1973; 12.9.1973

21. ವಿಧಾನಸಭಾ ನಡವಳಿಕೆಗಳು, ಸಂಪುಟ 29, 14.5.1974

22. ವಿಧಾನಸಭಾ ನಡವಳಿಕೆಗಳು, ಸಂಪುಟ 46, 13.4.1976; 14.5.1976, 11.5.1976

23. ವಿಧಾನಸಭಾ ನಡವಳಿಕೆಗಳು, ಸಂಪುಟ 53, 26.4.1977

24. ವಿಧಾನಸಭಾ ನಡವಳಿಕೆಗಳು, ಸಂಪುಟ 54, 11.6.1977
25. ವಿಧಾನಸಭಾ ನಡವಳಿಕೆಗಳು, ಸಂಪುಟ 55, 24.6.1977
26. ವಿಧಾನಸಭಾ ನಡವಳಿಕೆಗಳು, ಸಂಪುಟ 56, (29.6.1977– 6.7.1977)
27. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 140, 18.6.1977
28. ವಿಧಾನಸಭಾ ನಡವಳಿಕೆಗಳು, ಸಂಪುಟ 57, 18.7.1977; 19.7.1977
29. ವಿಧಾನಸಭಾ ನಡವಳಿಕೆಗಳು, ಸಂಪುಟ 8, 8.8.1978
30. ವಿಧಾನಸಭಾ ನಡವಳಿಕೆಗಳು, ಸಂಪುಟ 9, 21.8.1978
31. ವಿಧಾನಸಭಾ ನಡವಳಿಕೆಗಳು, ಸಂಪುಟ 12, 2.2.1979
32. ವಿಧಾನಸಭಾ ನಡವಳಿಕೆಗಳು, ಸಂಪುಟ 13, 21.3.1979; 23.3.1979
33. ವಿಧಾನಪರಿಷತ್ ನಡವಳಿಕೆಗಳು, ಸಂಪುಟ 106, 1.4.1979; 17.4.1979
34. ವಿಧಾನಸಭಾ ನಡವಳಿಕೆಗಳು, ಸಂಪುಟ 15, 18.4.1979; 2.5.1979
35. ವಿಧಾನಸಭಾ ನಡವಳಿಕೆಗಳು, ಸಂಪುಟ 16, 5.5.1979;10.5.1979; 12.5.1979
36. ವಿಧಾನಸಭಾ ನಡವಳಿಕೆಗಳು, ಸಂಪುಟ 17, 14.5.1979
37. ವಿಧಾನಸಭಾ ನಡವಳಿಕೆಗಳು, ಸಂಪುಟ 18, 22.5.1979
38. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 112, 3.3.1980
39. ವಿಧಾನಸಭಾ ನಡವಳಿಕೆಗಳು, ಸಂಪುಟ 25, 11.6.1980

39ಅ. ವಿಧಾನಸಭಾ ನಡವಳಿಕೆಗಳು, ಸಂಪುಟ 28, 14.7.1980

40. ವಿಧಾನಸಭಾ ನಡವಳಿಕೆಗಳು, ಸಂಪುಟ 30, 22.7.1980; 28.7.1980;
41. ವಿಧಾನಪರಿಷತ್‌ನ ನಡವಳಿಕೆಗಳು, ಸಂಪುಟ 121, 28.7.1980 ರಿಂದ 29.7.1980
42. ವಿಧಾನಸಭಾ ನಡವಳಿಕೆಗಳು, ಸಂಪುಟ 31, 30.7.1980; 31.7.1980
43. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 122, 30.1.1981; 5.2.1981

44. ವಿಧಾನಸಭಾ ನಡವಳಿಕೆಗಳು, ಸಂಪುಟ 32, 31.1.1981

45. ವಿಧಾನಸಭಾ ನಡವಳಿಕೆಗಳು, ಸಂಪುಟ 33, 5.2.1981

46. ವಿಧಾನಸಭಾ ನಡವಳಿಕೆಗಳು, ಸಂಪುಟ 35, 19.3.1981

47. ವಿಧಾನಸಭಾ ನಡವಳಿಕೆಗಳು, ಸಂಪುಟ 36, 26.3.1981

48. ವಿಧಾನಸಭಾ ನಡವಳಿಕೆಗಳು, ಸಂಪುಟ 37, 30.3.1981

49. ವಿಧಾನಸಭಾ ನಡವಳಿಕೆಗಳು, ಸಂಪುಟ 48, 9.6.1982; 10.6.1982

50. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 126, 14.6.1982

51. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 137, 23.6.1982

52. ವಿಧಾನಸಭಾ ನಡವಳಿಕೆಗಳು, ಸಂಪುಟ 8, 24.11.1982

53. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 142, 26.11.1982

54. ವಿಧಾನಸಭಾ ನಡವಳಿಕೆಗಳು, ಸಂಪುಟ 4–ಬಿ3, 25.3.1983

55. ವಿಧಾನಸಭಾ ನಡವಳಿಕೆಗಳು, ಸಂಪುಟ , 4–B (3–4), 25.3.1983

56. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 146, 11.8.1983

57. ವಿಧಾನಸಭಾ ನಡವಳಿಕೆಗಳು, ಸಂಪುಟ 6, 12.8.1983

58. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 136, 18.8.1983

59. ವಿಧಾನಸಭಾ ನಡವಳಿಕೆಗಳು, ಸಂಪುಟ 9, 8.9.1983

60. ವಿಧಾನಸಭಾ ನಡವಳಿಕೆಗಳು, ಸಂಪುಟ 11–ಎ, 19.1.1984

61. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 153, 30.1,1984

62. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 156, 7.3.1984

63. ವಿಧಾನಸಭಾ ನಡವಳಿಕೆಗಳು, ಸಂಪುಟ 1, 21.12.1989

64. ವಿಧಾನಸಭಾ ನಡವಳಿಕೆಗಳು, ಸಂಪುಟ 2, 22.1.1990

65. ವಿಧಾನಸಭಾ ನಡವಳಿಕೆಗಳು, ಸಂಪುಟ 5, 8.6.1990

66. ವಿಧಾನಸಭಾ ನಡವಳಿಕೆಗಳು, ಸಂಪುಟ 11, 17.7.1990

67. ವಿಧಾನಸಭಾ ನಡವಳಿಕೆಗಳು, ಸಂಪುಟ 2, 8.3.1991

68. ವಿಧಾನಸಭಾ ನಡವಳಿಕೆಗಳು, ಸಂಪುಟ 2, 14.3.1991

69. ವಿಧಾನಸಭಾ ನಡವಳಿಕೆಗಳು, ಸಂಪುಟ 6, 4.9.1991

70. ವಿಧಾನಸಭಾ ನಡವಳಿಕೆಗಳು, ಸಂಪುಟ 4, 1.3.1993

71. ವಿಧಾನಸಭಾ ನಡವಳಿಕೆಗಳು, ಸಂಪುಟ 1, 3.1.1994

72. ವಿಧಾನಸಭಾ ನಡವಳಿಕೆಗಳು, ಸಂಪುಟ 3, ಏಪ್ರಿಲ್ 1995

73. ವಿಧಾನಸಭಾ ನಡವಳಿಕೆಗಳು, ಸಂಪುಟ 1, 23.2.1997

74. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 268, 24.3.1997

75. ವಿಧಾನಸಭಾ ನಡವಳಿಕೆಗಳು, ಸಂಪುಟ 6, 5.8.1997

76. ವಿಧಾನಸಭಾ ನಡವಳಿಕೆಗಳು, ಸಂಪುಟ 10, 4.9.1997
**(ಪೂರಕ ಅಧ್ಯಾಯಗಳು 6–15)**

77. ವಿಧಾನಸಭಾ ನಡವಳಿಕೆಗಳು, ಸಂಪುಟ 2, 24.2.1997

78. ವಿಧಾನಸಭಾ ನಡವಳಿಕೆಗಳು, ಸಂಪುಟ 3, 25.5.1997

79. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 269, 29.7.1997

80. ವಿಧಾನಸಭಾ ನಡವಳಿಕೆಗಳು, ಸಂಪುಟ 6, 4.8.1997

81. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 273, 3.9.1997

82. ವಿಧಾನಸಭಾ ನಡವಳಿಕೆಗಳು, ಸಂಪುಟ 10, 4.9.1997; 9.9.1997

83. ವಿಧಾನಸಭಾ ನಡವಳಿಕೆಗಳು, ಸಂಪುಟ 1, 10.3.1998; 11.3.1998

84. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 277, 24.3.1998; 25.3.1998; 27.3.1998;

85. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 278, 20.4.1998

86. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 281, 30.10.1998; 2.11.1998; 3.11.1998;

87. ವಿಧಾನಸಭಾ ನಡವಳಿಕೆಗಳು, ಸಂಪುಟ 9, 9.11.1998;

88. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 282, 5.11.1998; 10.11.1998; 11.11.1998

89. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 283, 11.3.1999

90. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 284, 22.3.1999

91. ವಿಧಾನಸಭಾ ನಡವಳಿಕೆಗಳು, ಸಂಪುಟ 4, 3.4.1999

92. ವಿಧಾನಸಭಾ ನಡವಳಿಕೆಗಳು, ಸಂಪುಟ 5, 28.6.1999; 30.6.1999

93. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 287, 23.6.1999; 25.6.1999

94. ವಿಧಾನಸಭಾ ನಡವಳಿಕೆಗಳು, ಸಂಪುಟ 5, ಭಾಗ 2, 1.7.1999

95. ವಿಧಾನಸಭಾ ನಡವಳಿಕೆಗಳು, ಸಂಪುಟ 7, 30.10.2000

96. ವಿಧಾನಸಭಾ ನಡವಳಿಕೆಗಳು, ಸಂಪುಟ 7, 7.11.2000

97. ವಿಧಾನಸಭಾ ನಡವಳಿಕೆಗಳು 11ನೇ ವಿಧಾನಸಭೆ 3ನೇ ಅಧಿವೇಶನ; ಸಂಕ್ಷಿಪ್ತ ವರದಿ(28.2.2001; 1.3.2001; 2.3.2001; 7.3.2001; 8.3.2001)

98. ವಿಧಾನಸಭಾ ನಡವಳಿಕೆಗಳು, ಅದೇ ಸಂಕ್ಷಿಪ್ತ ವರದಿ 9.3.2001

99. ವಿಧಾನಸಭಾ ನಡವಳಿಕೆಗಳು, 11ನೇ ವಿಧಾನಸಭೆ 3ನೇ ಅಧಿವೇಶನ ಸಂಕ್ಷಿಪ್ತ ವರದಿ (29.3.2001; 30.3.2001)

100. ವಿಧಾನಸಭಾ ನಡವಳಿಕೆಗಳು, 11ನೇ ವಿಧಾನಸಭೆ 3ನೇ ಅಧಿವೇಶನ ಸಂಕ್ಷಿಪ್ತ ವರದಿ (26.7.2001; 1.8.2001; 3.8.2001; 4.8.2001)

*

**III.** ವರದಿಗಳು

1. ಮೈಸೂರು ರಾಜ್ಯದ ಭೂ ಸುಧಾರಣೆಯ 1958ನೇ ಇಸವಿ ವಿಧೇಯಕ ಸಂಯುಕ್ತ ಪರಿಶೀಲನಾ ಸಮಿತಿ ವರದಿ, ಬೆಂಗಳೂರು, 1961
2. ಭಾರತ ಮತ್ತು ಗ್ಯಾಟ್ ಒಪ್ಪಂದ ಡಂಕೆಲ್ ಪ್ರಸ್ತಾವನೆ; ಕ್ಷ ಕಿರಣ, ಕರ್ನಾಟಕ ಸರ್ಕಾರ, 1994
3. ಕರ್ನಾಟಕ ರಾಜ್ಯದಾದ್ಯಂತ ಬೆಳೆಗಳು ನಾಶವಾಗಿ ರೈತರು ಆತ್ಮಹತ್ಯೆ ಮಾಡಿಕೊಂಡಿರುವ ಬಗ್ಗೆ ಪರಿಶೀಲಿಸಿ ವರದಿ ಸಲ್ಲಿಸಲು ರಚಿಸಲಾಗಿದ್ದ ಶ್ರೀ ಜಿ.ಬಿ. ಶಿವಕುಮಾರ್ ಅಧ್ಯಕ್ಷತೆಯ ಜಂಟಿ ಸದನ ಸಮಿತಿಯ ಅಂತಿಮ ವರದಿ (9.3.1999), ಕರ್ನಾಟಕ ವಿಧಾನಸಭಾ ಸಚಿವಾಲಯ ಬೆಂಗಳೂರು 1

*

**IV.** ಲೇಖನಗಳು

ನಾಗರಾಜ್, ಎಂ.ಜಿ., 'ಭೂ ಇತಿಹಾಸದ ಬೆಳಕಿನಲ್ಲಿ ಕೊಡಗಿನ ಕಾವೇರಿ ಮತ್ತು ಗಂಗೆ', **ಇತಿಹಾಸ ದರ್ಶನ,** ಕರ್ನಾಟಕ ಇತಿಹಾಸ ಅಕಾಡೆಮಿ, ಸಂ. 10/1995

1. ಸೆಬಾಸ್ಟೀನ್ ಜೋಸೆಫ್; ಎಂ. '1830–31 ರಲ್ಲಿ ನಗರ ಡಿವಿಷನ್ನಿನಲ್ಲಿ ನಡೆದ ರೈತರ ದಂಗೆ; ಒಂದು ವಿವೇಚನೆ', **ಸಾಧನೆ,** ಬೆಂಗಳೂರು ವಿಶ್ವವಿದ್ಯಾಲಯ, ಸಂಚಿಕೆ 2, ಏಪ್ರಿಲ್ –ಜೂನ್ 1980.
2. ಡಾ. ಸೂರ್ಯನಾಥ ಕಾಮತ್, 'ಉತ್ತರ ಕನ್ನಡ ಜಿಲ್ಲೆಯ ರೈತರನ್ನು ಕೆರಳಿಸಿದ ಬ್ರಿಟಿಷ್ ನೀತಿಗಳು', **ಇತಿಹಾಸ ದರ್ಶನ,** ಕರ್ನಾಟಕ ಇತಿಹಾಸ ಅಕಾಡೆಮಿ ಸಂಪುಟ 2/1987
3. ಡಾ. ರಾಮಕೃಷ್ಣನ್, 'ಮೈಸೂರು ರಾಜ್ಯದ ಕೆರೆಗಳ ವ್ಯವಸ್ಥೆ ಬಗ್ಗೆ ವಸಾಹತು ಶಾಹಿ ನಿಲುವು'; **ಇತಿಹಾಸ ದರ್ಶನ,** ಸಂಪುಟ 7/ 1992
4. ಕುಲಕರ್ಣಿ ಡಿ.ಕೆ., 'ಶಿವಮೊಗ್ಗ ಜಿಲ್ಲೆಯಲ್ಲಿ ರೈತ ಸಂಘಟನೆ ಮತ್ತು ಚಳುವಳಿಗಳು' **ಇತಿಹಾಸ ದರ್ಶನ,** ಸಂಪುಟ 5/1990

5. ಯದುಶೈಲಾ ಸಂಪತ್. ಕೆ., 'ರೈತ ಚಳುವಳಿ', **ಪುಣ್ಯಕೋಟಿ,** 4ನೇ ಮಂಡ್ಯ ಜಿಲ್ಲಾ ಕನ್ನಡ ಸಹಿತ್ಯ ಸಮ್ಮೇಳನ ಸ್ಮರಣ ಸಂಪುಟ, 1995

5ಅ. ಕೋಣಂದೂರು ವೆಂಕಪ್ಪಗೌಡ, 'ಕಾಗೋಡು ಹೋರಾಟ ಮತ್ತು ಲೋಹಿಯಾ' **ಕನ್ನಡಪ್ರಭ,** 10.4.2000

5ಆ. ರೇಣುಕಾಪ್ರಸಾದ್ ಹಾಡ್ಯ., 'ಕ್ರಾಂತಿ ಪಳೆಯಳಿಕೆಯ ಗ್ರಾಮದಲ್ಲಿಗ ಹೋರಾಟ ಒಂದು ನೆನಪು', **ಕನ್ನಡಪ್ರಭ,** 10.4.2000

6. ಅನಿಲ್ ಹೆಚ್.ಟಿ., 'ಅಂತರಾಷ್ಟ್ರೀಯ ಕಾಫಿ ಉತ್ಸವ ಅಂತಿಮವಾಗಿ ಕೊಟ್ಟ ಸಂದೇಶವೇನು?', **'ಶಕ್ತಿ' ಪತ್ರಿಕೆ** (23.2.2002) ಮಡಿಕೇರಿ, ಕೊಡಗು ಜಿಲ್ಲೆ.

7. ಮಂಜುನಾಥ್ ಎಚ್.ಎಸ್., 'ಕೃಷಿ ಮೂಲ ಸೌಕರ್ಯವೇ ಇಲ್ಲ', **ಕನ್ನಡ ಪ್ರಭ** (ವಾಣಿಜ್ಯ ಪುರವಣಿ, 29.10.2001)

8. ಚೌರೀರ ಎಂ. ಪೆಮ್ಮಯ್ಯ., ಕಾಫಿ ಬೆಳೆಗಾರರ ಉಳಿವಿಗೆ ಸರ್ಕಾರ ಜನಪ್ರತಿನಿಧಿಗಳ ಸ್ಪಂದನದ ಅಗತ್ಯ', **'ಶಕ್ತಿ'** ಪತ್ರಿಕೆ, ಮಡಿಕೇರಿ (4.2.2002)

9. ರಾಘವೇಂದ್ರ ಅಗ್ನಿಹೋತ್ರಿ., ಅಡಿಕೆಗೆ ಹೋದ ಮಾನ 'ಮಾಸ್' ನಿಂದ–ಮರಳೀತೇ?, **ಕನ್ನಡಪ್ರಭ** (ವಾಣಿಜ್ಯ ಪುರವಣಿ, 20.10.2001)

10. ಪ್ರಕಾಶ್.ಕೆ., 'ರೈತರ ಕೊರಳಿಗೆ ನೇಣು ಬಿಗಿಯುತ್ತಿರುವ ಬರ ಉದಾರೀಕರಣ', **ವಿಜಯಕರ್ನಾಟಕ** (ಸಾಪ್ತಾಹಿಕ ವಿಜಯ), (12.8.2001)

11. ಪ್ರೊ . ಕೃಷ್ಣಮೂರ್ತಿ ಕಲ್ಯಾಣಪುರ.ಕೆ., 'ಕುಲಾಂತರಿ ತಳಿ ಬಿ.ಟಿ. ಹತ್ತಿ', **ತರಂಗ,** (13.12.2001), ಪು.46

11.ಅ. ರಾಜೇಗೌಡ,ಹ.ಕ., 'ಮಂಡ್ಯ ಜಿಲ್ಲೆಯ ನದಿ ಸಂಸ್ಕೃತಿ', **ಸಿರಿಯೊಡಲು,** 1994, (ಪ್ರಸಂ.) ಡಾ. ದೇಜಗೌ, (ಸಂ.) ರಾಜೇಗೌಡ ಹ.ಕ., (63ನೇ ಅಖಿಲಭಾರತ ಕನ್ನಡ ಸಾಹಿತ್ಯ ಸಂಸ್ಮರಣಾ ಗ್ರಂಥ), ಮಂಡ್ಯ

11ಆ. ಮಹದೇವ್ ಪ್ರಕಾಶ್., 'ಕಾವೇರಿಯ ಕಥೆ ವ್ಯಥೆ', **ಕನ್ನಡ ನುಡಿ,** (ಪಾಕ್ಷಿಕ) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಅಕ್ಟೋಬರ್ 2002, ಸಂ 67, ಸಂ. 9–10

| | |
|---|---|
| 12. ಡಾ. ರವಿಶಂಕರ.ಪಿ., 'ಬಿ.ಟಿ. ಹತ್ತಿ ಎಷ್ಟು ಸೂಕ್ತ',<br>ಮುರಳಿಕೃಷ್ಣ ಬೆಳಾಲು., 'ಬಿ.ಟಿ. ಹತ್ತಿ ರೋಗ ರಹಿತವೆ?'<br>ಮೃತ್ಯುಂಜಯ ಎನ್., 'ಬಿ.ಟಿ. ಹತ್ತಿ ಕೃಷಿಗೆ ಅನುಮತಿ ಸಾಧಕ ಬಾಧಕ' | ವಿಜಯ ಕರ್ನಾಟಕ (ಕೃಷಿ ವಿಜಯ) (5.6.2002) |

13. ಶಿವಕುಮಾರ್ ಕೆ. ದಬ್ಬೆಗಟ್ಟ., 'ಬಿ.ಟಿ. ಹತ್ತಿ ಸಹವಾಸ ನಮಗೇಕೆ ಬೇಡ? **ಕನ್ನಡಪ್ರಭ,** 20.5.2002

14. ದೇವಿಂದರ್ ಶರ್ಮ., 'ಬಿ.ಟಿ. ಹತ್ತಿ ಇಳುವರಿ ಹೆಚ್ಚಿಸುತ್ತದಾ?' **ಕರ್ಮವೀರ,** (23.6.2002)

14. ಡಾ. ಪ್ರಕಾಶ್ ಟಿ.ಎನ್., ಬಿ.ಟಿ. ಹತ್ತಿ ತಳಿ ಚೇನಾದ ಕಹಿ ಅನುಭವ ನಮಗೆ ಪಾಠ ಕಲಿಸೀತೆ?', **ಪ್ರಜಾವಾಣಿ,** (ಕೃಷಿ ರಂಗ, 26.6.2001)

* * *

V. **ಪತ್ರಿಕೆಗಳು:** ವಿಶ್ವಕರ್ನಾಟಕ (1929–30), ಕನ್ನಡಪ್ರಭ, ಪ್ರಜಾವಾಣಿ, ಸಂಯುಕ್ತ ಕರ್ನಾಟಕ, ವಿಜಯ ಕರ್ನಾಟಕ, ತರಂಗ, ಕರ್ಮವೀರ, ಸುಧಾ; 'ಶಕ್ತಿ' ದಿನಪತ್ರಿಕೆ, ಮಡಿಕೇರಿ; 'ಬ್ರಹ್ಮಗಿರಿ' ವಾರಪತ್ರಿಕೆ ಮಡಿಕೇರಿ, (ಕೊಡಗು ಜಿಲ್ಲೆ), ಧರ್ಮಪ್ರಭ (ಮಾಸಿಕ. 1.5.2000),
Deccan Herald ; THE HINDU; Times of India; Indian Express.

VI. **ಸಂದರ್ಶನಗಳು:** ರೈತರು, ರೈತ ಮುಖಂಡರು, ಶಾಸಕರು, ಕೃಷಿ ವಿಶ್ವವಿದ್ಯಾಲಯದ ಕೃಷಿ ತಜ್ಞರು, ಮುಂತಾದವರೊಡನೆ ಸಂದರ್ಶನ ಮತ್ತು ಕ್ಷೇತ್ರಕಾರ್ಯ, ಹಾಗೂ ವಿಚಾರ ಸಂಕಿರಣ.

* * *

**VII. ಮತ್ತಷ್ಟು ಪರಾಮರ್ಶನ ಗ್ರಂಥಗಳು:**

1. ಸ್ಕಾಂದ ಪುರಾಣಾಂತರ್ಗತ ಶ್ರೀ ಕಾವೇರಿ ಮಹಾತ್ಮ್ಯೆ' (ಎದುರ್ಕುಳ ಕೆ. ಶಂಕರ ನಾರಾಯಣಭಟ್., **ಶ್ರೀ ಕಾವೇರಿ ವೈಭವ,** 1986 ಕೊಡಗು) ದ್ವಿತೀಯ ಅಧ್ಯಾಯದ ಶ್ಲೋಕಗಳು.

2. ಎಂ.ಜಿ. ನಾಗರಾಜ್., 1993, ಕೆಂಬಟ್ಟಿ ಹೊಲೆಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

3. **ಎಪಿಗ್ರಾಫಿಯ ಕರ್ನಾಟಕ ಸಂಪುಟ** 6 (ಹೊಸತು), 1977, ಮಂಡ್ಯ ಜಿಲ್ಲೆ, ಮೈಸೂರು ವಿಶ್ವವಿದ್ಯಾಲಯ

## VIII. English Books

1. BaleKundry, S.S. (1991), *Injustice to Karnataka in regard to Cauvery Waters,* Sahitigala Kalavidara Balaga, Bangalore.

2. Basheer Hussain, M., (1972), *The Cauvery Water dispute,* Mysore-4

3. Kurt W. Back., (1977), *Social psychology,* USA, p.394

4. Kuppuswamy G.R., (1975), *Economic conditions in Karnataka.* Dharwad.

5. Lowie R.H., (1934), *An Introduction to cultural Anthropology.*

6. Leonard P. Ullammann, Leonard Krasner., (1968), A *psychological Approach to Abnormal behaviour,* Newyork, pp.415-425

7. Mohamed Moieuddin., 2000, *Sunset at Srirangapatna,* Sangam Books, Hyderabad.

8. Mammen K., (1942), *Kerala Culture.*

9. Nagarajan, K., (1975), *Cauvery rom Source to Sea,* New Delhi.

10. Randhawa M.S., (1982), *History of Agriculture in India* (9th-18th century), New Delhi.

11. Ramesh Chand., (2002), *Trade Liberalisation,* WTO and Indian Agriculture, Mittal publication, New Delhi.

12. Shukla L.R., (1941), *Educational psychology,* Banaras Hindu University.

13. Sridhara Menon.A., (1979), *Social and Cultural History of India-Kerala,* New-Delhi, pp.58-59

### IX. Articles, Reports and Magzines

1. Report of the Joint committee on Karnataka (Sandur) Inam abolition bill, 1976

2. Report of the High power committee constituted to exercise the question relating to taking up of the varuna canal Annextures 1977

3. Report of the Kempegowda commission of Enquiry (Naragund, and Naragund incidents; 21.8.80 to 15.4.81) and respective G.O. of 12.10.1981

4. Mohamed Asif commission for Nagasamudra police firing on 25.5.1982 - Inquiry report 8.9.1983

5. M. Sadananda Swamy commission of enquiry relating to Bagur-Navale tunnel of Hemavathi project 12.7.1989

6. USDA Agricultural Economic Report No, 197- The Road A head agricultural policy reforms in the WTO summary Report 2000, p-ix

7. USDA-A safety Net for Farm House-holds, Agricultural Economic report No. 788 october 2000, p-I

8. A Report by the cell on WTO AND RELATED ISSUES IN AGRICULTURE AND FOOD, Chairman of the cell; Dr. Premanath, Govt. of Karnataka, Bangalore, Jan.2001

9. Lead papers-seminar on farmers' Distress (22.9.2001) sponser by Institute of Agricultural Technologists. Bangalore and expert committee for study of farmers' suicide in karnataka

10. Prakash.T.N. and Etal., Falling prices of Arecanurt in karnataka; Department of Agricultural Economics, UAS, GKVK, Bangalore-560 065

11. Indira Khurana., 'Cotton conundrum', Down to Earth (ED) Anil Agarwal, New Delhi, December 15, 2001, pp-29-21

12. Agricultural Economics Research Review, AERA (India) IARI, New Delhi, 2002

13. D.D. Hardec, D.D., Douglas, V. Sumerford, John J. Adamczyk and larry c. Adams., protecting farmers' Investment in Bt cotton' USDA-ARS, February-2001

14. BEHIND ALL THE FLUFF-Clearing the Air on BT cotton, *Economic survey,* 2001, Literary Institute, Delhi.

15. 'Why Bt cotton shoud be Banned`: write ups by The Hindu Editorial; Director Baba Amte centre for people's Empowerment; and secretary, samaj pragati Sahayog-Madyapradesh, september 6, 2001

16. *Cauvery Water Dispute-people's struggle for rightful* share, Vol.I., 2002, Water Source Department, Govt. of Karnataka.

17. *Cauvery Water Dispute-people's struggle for rightful share,* Vol.II, 2003, Govt. of Karnataka.

**ಪೂರಕ ಪರಾಮರ್ಶನ ಶಾಸನ ಸಭಾ ನಡವಳಿಕೆಗಳು**

1. ವಿಧಾನ ಸಭಾ ನಡವಳಿಕೆಗಳು, ಸಂಪುಟ 1, ಭಾಗ I, (1.3.2001, 2.3.2001)

2. ವಿಧಾನ ಸಭಾ ನಡವಳಿಕೆಗಳು, ಸಂಪುಟ 4 (1–3), ಭಾಗ I, (28.3.2001)

2ಅ. ವಿಧಾನ ಸಭಾ ನಡವಳಿಕೆಗಳು, ಸಂಪುಟ 1, ಭಾಗ II, (21.3.2000); ಸಂಪುಟ, ಭಾಗ I (24.3.2000)

3. ವಿಧಾನ ಸಭಾ ನಡವಳಿಕೆಗಳು, ಸಂಪುಟ 3, (1–2), ಭಾಗ I, (14.3.2001)

3ಅ. ವಿಧಾನ ಸಭಾ ನಡವಳಿಕೆಗಳು, 11ನೇ ಅಧಿವೇಶನ, ಸಂಪುಟ 4, ಭಾಗ I, (31.3.2001, 29.3.2001)

4. ವಿಧಾನ ಸಭಾ ನಡವಳಿಕೆಗಳು, ಸಂಪುಟ 1 (4–5), ಭಾಗ II, (24.1.2002)

5. ವಿಧಾನ ಸಭಾ ನಡವಳಿಕೆಗಳು (ರಾಜ್ಯಪಾಲರ ಭಾಷಣ), ಸಂಪುಟ 1, (1–2) 21.1.2000 ರ 4ನೇ ಅಧಿವೇಶನ,

6. ವಿಧಾನ ಸಭಾ ನಡವಳಿಕೆಗಳು, ಸಂಪುಟ 2, (1–4) ಭಾಗ I, (19.3.2002)

7. ವಿಧಾನ ಸಭಾ ನಡವಳಿಕೆಗಳು, ಸಂಪುಟ 2 (5), ಭಾಗ 2 (20.3.2002)

8. ವಿಧಾನ ಸಭಾ ನಡವಳಿಕೆಗಳು, ಸಂಪುಟ 4 (1–5), (9.7.2002)

9. ವಿಧಾನ ಸಭಾ ನಡವಳಿಕೆಗಳು, ಸಂಪುಟ 4 (1–5), (10.7.2002;11.7.2002)

10. ವಿಧಾನ ಸಭಾ ನಡವಳಿಕೆಗಳು, ಸಂಪುಟ 5 (1–5), (15.7.2003)

11. ವಿಧಾನ ಪರಿಷತ್ತಿನ ನಡವಳಿಕೆಗಳು, ಸಂಪುಟ 305 (1–3), ಭಾಗ I, (23.7.2001)

12. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 311 (1–5), (9.7.2002)

13. ವಿಧಾನ ಸಭಾ ನಡವಳಿಕೆಗಳು., ಸಂಪುಟ 29 (1–8), (21.3.2000)

14. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 297 (1–5), (12.4.2000)

15. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 8, ಭಾಗ 2, (4.8.2001)

16. ವಿಧಾನ ಸಭಾ ನಡವಳಿಕೆಗಳು., ಸಂಪುಟ 6, ಭಾಗ II, (26.7.2001)

17. ವಿಧಾನ ಸಭಾ ನಡವಳಿಕೆಗಳು., ಸಂಪುಟ 8 (1–2), ಭಾಗ I, (3.8.2001)

18. ವಿಧಾನ ಸಭಾ ನಡವಳಿಕೆಗಳು., ಸಂಪುಟ 8, ಭಾಗ 1; ಭಾಗ 2, (2.8.2001, 4.8.2001);

19. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 293 (1–5) (12.4.2000)

20. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 295 (4–6), ಭಾಗ 2 (3.5.2000)

21. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 296 (1–5), (30.10.2000)

22. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 297 (1–3), ಭಾಗ I, (8.11.2000)

23. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 297 (4–5), ಭಾಗ II, (13.11.2000)

24. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 308 (1–4), (22.1.2002)

25. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 5 (1–2), ಭಾಗ I, (15.7.2002)

26. ವಿಧಾನ ಸಭಾ ನಡವಳಿಕೆಗಳು., ಸಂಪುಟ 7 (1–5), (31.7.2002)

27. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 5 (1–2), (11.7.2003)

28. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 373 (1–2), (24.7.2003)

29. ವಿಧಾನ ಸಭಾ ಅಧಿವೇಶನದ ನಡವಳಿಕೆಗಳು., ಸಂಪುಟ 5 (1–4), (28.6.2004)

30. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 297 (1–3), ಭಾಗ I, (7.11.2000)

31. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 298 (1–5), (17.11.2000)

32. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 300 (1–5), (1.3.2001) ಮತ್ತು (2.3.2001)

33. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 301 (1–5), ಭಾಗ I, (7.3.2001; 8.3.2001; 9.3.2001);

34. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 301 (3–5), ಭಾಗ I, (12.3.2001)

35. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 306 (3–5), ಭಾಗ II, (1.8.2001, 2.8.01)

36. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 2 (1–3), ಭಾಗ I, (9.3.2001), 7.3.2001; 8.3.2001)

37. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 4 (1–3), ಭಾಗ I, (28.3.2001) (29.3.2001)

38. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 6 (1–5), ಭಾಗ I & II, (29.3.2001), (25.7.2002)

39. ವಿಧಾನ ಸಭಾ ನಡವಳಿಕೆಗಳು., ಸಂಪುಟ 4 (1–3), ಭಾಗ I, (25.3.2003, 26.3.2003)

40. ವಿಧಾನ ಸಭಾ ನಡವಳಿಕೆಗಳು., ಸಂಪುಟ 4, ಭಾಗ II, (29.3.2003)
41. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 5 (1–5), (11.7.2003)
42. ವಿಧಾನ ಸಭಾ ನಡವಳಿಕೆಗಳು., ಸಂಪುಟ 6 (1–2), ಭಾಗ I, (16.7.2003)
43. ವಿಧಾನ ಸಭಾ ನಡವಳಿಕೆಗಳು., ಸಂಪುಟ 5 (1–4), (28.6.2004)
44. ವಿಧಾನ ಸಭಾ ನಡವಳಿಕೆಗಳು., ಸಂಪುಟ 7 (1–2), ಭಾಗ I, (26.7.2004, 27.7.2004)
45. ವಿಧಾನ ಸಭಾ ನಡವಳಿಕೆಗಳು., ಸಂಪುಟ 4 (1–5), (12.7.2002)
46. ವಿಧಾನ ಸಭಾ ನಡವಳಿಕೆಗಳು., ಸಂಪುಟ 5 (1–2), ಭಾಗ I, (16.7.2002)
47. ವಿಧಾನ ಸಭಾ ನಡವಳಿಕೆಗಳು., ಸಂಪುಟ 5 (3–5), ಭಾಗ II, (17.7.2002; 18.7.2002; 26.7.2002)
48. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 306 (1–2), ಭಾಗ I, (31.7.2001); ಭಾಗ II, (1.8.2001)
49. ವಿಧಾನ ಸಭೆಯ ನಡವಳಿಕೆಗಳು., (24.7.2002)
50. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 318 (1–2), ಭಾಗ I, (10.3.2003)
51. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 321 (1–3), ಭಾಗ I, (11.7.2003)
52. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 7 (1–5), (28.7.2003)
53. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 5 (1–4), (28.6.2004)
54. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 5 (1–2), ಭಾಗ I, (16.7.2002)
55. ವಿಧಾನ ಸಭಾ ನಡವಳಿಕೆಗಳು., ಸಂಪುಟ 4 (1–5), (14.6.2004)
56. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 1 (1–5), (8.1.2004)

57. ವಿಧಾನ ಸಭಾ ನಡವಳಿಕೆಗಳು., ಸಂಪುಟ 8, ಭಾಗ I, (2.8.2004)

58. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 303 (1–5), (28.3.2001)

59. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 1, ಭಾಗ II, (21.3.2000)

60. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 2, ಭಾಗ I, (24.3.2000)

61. ವಿಧಾನ ಸಭಾ ನಡವಳಿಕೆಗಳು., ಸಂಪುಟ 3 (1–2), ಭಾಗ I, (14.3.2001)

62. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 303 (1–5), (29.3.2001)

63. ವಿಧಾನ ಸಭಾ ನಡವಳಿಕೆಗಳು., ಸಂಪುಟ 6 (3–5), ಭಾಗ II, (25.7.2002)

64. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 321 (4–5), ಭಾಗ II, (15.7.2003)

65. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 328 (1–6), (9.2.2004)

66. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 8, ಭಾಗ I, (2.8.2004)

67. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 309 (4–5), (26.3.2002)

68. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 315 (1–4), (8.8.2002)

69. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 8 (2–3), ಭಾಗ II, (31.7.2003, 1.8.2003)

70. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 294 (5–6), ಭಾಗ II, (20.4.2000)

71. ವಿಧಾನ ಸಭಾ ನಡವಳಿಕೆಗಳು., ಸಂಪುಟ 6 (1–2) ಭಾಗ I, (23.7.2001)

72. ವಿಧಾನ ಸಭಾ ನಡವಳಿಕೆಗಳು., ಸಂಪುಟ 6, ಭಾಗ II, (26.7.2001)

73. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 308, (28.1.2002)

74. ವಿಧಾನ ಸಭಾ ನಡವಳಿಕೆಗಳು., ಸಂಪುಟ 6 (1–2), ಭಾಗ I, (16.7.2003)

75. ವಿಧಾನ ಸಭಾ ನಡವಳಿಕೆಗಳು., ಸಂಪುಟ 2, ಭಾಗ 4, (16.1.2004)

76. ವಿಧಾನ ಸಭಾ ನಡವಳಿಕೆಗಳು., ಸಂಪುಟ 3, (1–5), (9.2.2004; 11.2.2004; 12.2.2004)

77. 12ನೇ ವಿಧಾನ ಸಭೆ 2ನೆಯ ಅಧಿವೇಶನದ ಕಾರ್ಯಕಲಾಪಗಳ ಸಂಕ್ಷಿಪ್ತ ವರದಿ (20.1.2005 ರಿಂದ 5.2.2005)

78. ವಿಧಾನ ಸಭಾಧಿವೇಶನದ ಸಂಕ್ಷಿಪ್ತ ವರದಿಗಳು (16.3.05; 23.3.05; 30.6.05; 4.7.05; 13.7.2005)

79. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 4 (1–3), (25.3.2003)

**ಲೇಖನಗಳು**

1. ಸ್ವರ್ಣಭಟ್ ಅವರ ಲೇಖನ., **ಕನ್ನಡ ಪ್ರಭ,** 6.11.2006

2. ಶುಭಾ ಕಾಡಬಾಳ ಅವರ ಲೇಖನ

3. ಹಾಲ್ದೊಡ್ಡೇರಿ ಸುಧೀಂದ್ರ ಲೇಖನ., **ಕನ್ನಡ ಪ್ರಭ,** 4.12.2006

4. ಎಚ್.ಕೆ. ನಟರಾಜ್., 'ವೆನಿಲ್ಲಾ ಈಗ ಏನಿಲ್ಲಾ', (ಕೃಷಿ ವಿಜಯ, **ವಿಜಯ ಕರ್ನಾಟಕ**

5. ರೇವತಿ., 'ಹಸಿರು ಮನೆ: ಅತಿವೃಷ್ಟಿ ಹೆಚ್ಚುತ್ತಿದೆಯೆ? **ಕನ್ನಡ ಪ್ರಭ** (13.12.2006)

6. 'ರೈತರ ಆತ್ಮಹತ್ಯೆ ತಪ್ಪಿಸುವುದು ಹೇಗೆ? ನಿಮ್ಮ ಅನಿಸಿಕೆ., **ಪ್ರಜಾವಾಣಿ** (30.7.2006)

7. ರೈತರ ಆತ್ಮಹತ್ಯೆ ನಿಲ್ಲಬಹುದು? **ವಿಜಯ ಕರ್ನಾಟಕ** 9.8.2006

8. **ಸುಧಾ** (ವಾರ ಪತ್ರಿಕೆ)., 8.2.2007

9. ಎಂ. ಶ್ಯಾಮಲದೇವಿ., 'ಜಲವಿವಾದಗಳು', **ಅಭಿವೃದ್ಧಿಪಥ,** (ಸಂ) ಪ್ರೊ॥ ಹಿ.ಚಿ. ಬೋರಲಿಂಗಯ್ಯ, ಕನ್ನಡ ವಿಶ್ವವಿದ್ಯಾಲಯ; ಹಂಪಿ, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, 2007

10. ಕನ್ನಡ ಪ್ರಭ, ಪ್ರಜಾವಾಣಿ, ಸಂಯುಕ್ತ ಕರ್ನಾಟಕ, ವಿಜಯ ಕರ್ನಾಟಕ, ಉದಯವಾಣಿ, ಮಡಿಕೇರಿಯ 'ಶಕ್ತಿ' ಪತ್ರಿಕೆ, ಬ್ರಹ್ಮಗಿರಿ (ವಾರ ಪತ್ರಿಕೆ), ಕರ್ಮವೀರ, ತರಂಗ, ಡೆಕ್ಕನ್ ಹೆರಾಲ್ಡ್, ದಿ ಹಿಂದೂ, ಇಂಡಿಯನ್ ಎಕ್ಸ್‌ಪ್ರೆಸ್, ಇತ್ಯಾದಿ ಪತ್ರಿಕೆಗಳ ಮಾಹಿತಿಗಳು

**ಹೊತ್ತಗೆಗಳು**

1. **ಕರ್ನಾಟಕ ಕೃಷಿ ನೀತಿ 2006,** ಕೃಷಿ ಮತ್ತು ತೋಟಗಾರಿಕೆ ಇಲಾಖೆ, ಬೆಂಗಳೂರು, ನವೆಂಬರ್ 2006
2. **ಪ್ರೊ॥ ಎಂ.ಡಿ.ಎನ್., 2006,** (ಸಂ) ವೀರಭದ್ರಪ್ಪ ಬಿಸ್ಲಳ್ಳಿ, ಮೈಸೂರು
3. **ರಾಮದುರ್ಗದ ಕ್ರಾಂತಿಕಾರಿ ಮಹಾದೇವಪ್ಪ ಪಟ್ಟಣ.,** 1989, (ಪ್ರ) ನಾಗರಿಕ ವೇದಿಕೆ, ರಾಮದುರ್ಗ.
4. ಎಂ.ಜಿ. ನಾಗರಾಜ್., 2004, **ಕೊಡಗಿನ ಹಾಲೇರಿ ರಾಜವಂಶವು,** ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯ, ಹೊಸಪೇಟೆ

**English articles; Journals and Books**

1. William p.cunningham., *Environmental Science* (4th Edn), USA.
2. CSS Vol. Issue No.4., *The Sources of Green Gases and* Their Shares', Octo-Dec.2006.
3. *Down to Earth,* Vol.15, No.17, January 31, 2007, New Delhi
4. RAVLEEN KAUR., pink ballworm resistant to Bt: Monsanto; *Down to Earth,* (fort nightly), Centre for science and Environment, New Delhi, Vol.18, No.22, April 1-15, 2010

